# ಶಿವಾನುಭವ.

## ದ್ವೈಮಾಸಿಕವು.




ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.





ವಿಜಾಪುರ

ಸಂಪುಟ ೮ ಸಂಚಿಕೆ ೧

ಮೇ

೧೯೩೩

ವಾ. ವರ್ಗಣಿ ೪-೪-೦ ] [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ






ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೮] ಮೇ. ೧೯೩೩ [ಸಂಚಿಕೆ ೧

## ೧೧ನೆಯ ವೀರಶೈವ ಮಹಾಸಭೆಯ ಅಧ್ಯಕ್ಷರಾದ

ರಾ॥ ಸಾ॥ ಫ. ಗು. ಹಳಕಟ್ಟಿ ವಿಜಾಪುರ ಇವರ

## ಭಾಷಣವು.

**ಮಹಾಸ್ವಾಮಿಗಳೇ, ಪ್ರತಿನಿಧಿಗಳೇ, ಬಂಧುಭಗಿನಿಯರೇ,**

ಶ್ರೀಮದ್ವೀರಶೈವ ಮಹಾಸಭೆಯ ೧೧ನೆಯ ಅಧಿನಿವೇಶನದ ಅಧ್ಯಕ್ಷಸ್ಥಾನವನ್ನು ತಾವು ನನಗೆ ಕೊಟ್ಟಿದ್ದಕ್ಕೆ ನಾನು ತಮಗೆ ಬಹಳ ಆಭಾರಿಯಾಗಿದ್ದೇನೆ. ಇದು ಈಗಿನ ಕಾಲಕ್ಕೆ ಅತ್ಯಂತ ಮಹತ್ವದ ಮತ್ತು ಜವಾಬುದಾರಿಯ ಕಾರ್ಯವಾಗಿದೆ. ಮತ್ತು ಸಮಾಜದ ಪರಿಸ್ಥಿತಿಯು ಅನೇಕ ಕಾರಣಗಳ ಮೂಲಕ ಬಹಳ ಬಿಕ್ಕಟ್ಟಿನದಾಗಿದೆ. ಇಂಥ ಸಮಯದಲ್ಲಿ ನನ್ನಕಿಂತಲೂ ಅನುಭವಿಕರೂ ಜ್ಞಾನವೃದ್ಧರೂ ಆದ ಮಹನೀಯರಿಗೆ ಈ ಸ್ಥಾನವನ್ನು ಕೊಡತಕ್ಕದ್ದಾಗಿತ್ತು. ಆದರೂ ಈ ಕಾಲದಲ್ಲಿ ತಮ್ಮ ಯಾವತ್ತರ ಸಲಹೆ ಮತ್ತು ಸಹಾನುಭೂತಿಯನ್ನು ಹೊಂದಿದವನಾಗಿ ಸಭಾಕಾರ್ಯಗಳು ಸರಾಗವಾಗಿ ನಡೆಯುವವೆಂದು ಹಾರೈಸಿದ್ದೇನೆ.

### ದುಃಖಪ್ರದರ್ಶನ.

ವೀರಶೈವ ಸಮಾಜಕ್ಕೆ ತಮ್ಮ ತನುಮನಧನಗಳನ್ನು ಅರ್ಪಿಸಿ ಅನೇಕ ರೀತಿಯಿಂದ ಸಹಾಯಕರಾದ ಮಹಾನುಭಾವರು ಈ ವರ್ಷ ಲಿಂಗೈಕ್ಯರಾಗಿದ್ದು ಅವರ ಹೆಸರುಗಳನ್ನು ಸ್ಮರಣೆಗೆ ತಂದು ದುಃಖಪ್ರದರ್ಶನ ಮಾಡುವದು ನನ್ನ ಕರ್ತವ್ಯವಾಗಿದೆ. ಇವರಲ್ಲಿ ವೀರಶೈವ ಮಹಾಸಭೆಯನ್ನು ಮೊದಲು ಸ್ಥಾಪಿಸಿ ತಮ್ಮ ಆಯುಷ್ಯವನ್ನೆಲ್ಲ ವೀರಶೈವ ಸಮಾಜದ ಹಿತಕ್ಕೆ ಸಮರ್ಪಿಸಿದ ಶ್ರೀ ಹಾನಗಲ್ಲ ಕುಮಾರಸ್ವಾ

ಮಿಗಳವರು ಲಿಂಗೈಕ್ಯರಾದದ್ದಕ್ಕೆ ಯಾರಿಗೆ ದುಃಖವಾಗಲಿಕ್ಕಿಲ್ಲ? ಇವರು ಸಮಾಜದ ಹೆಚ್ಚಳಕ್ಕಾಗಿ ಧರ್ಮಾಭಿವೃದ್ಧಿಗಾಗಿ ಅವಿಶ್ರಾಂತ ಶ್ರಮಪಟ್ಟರು. ಅವರು ಶ್ರೀ ಶಿವಯೋಗಮಂದಿರವನ್ನು ಸ್ಥಾಪಿಸಿ ವೀರಶೈವ ಸಮಾಜದ ಅಭಿವೃದ್ಧಿಗೆ ತಳಹದಿಯನ್ನು ಹಾಕಿರುವರು. ಈ ಮಹಾತ್ಮರು ನಮ್ಮ ಕೈ ಬಿಟ್ಟು ಹೋದದ್ದರಿಂದ ನಾವು ಅತ್ಯಂತ ದುಃಖಿಸುತ್ತೇವೆ. ಅದೇ ಮೇರೆಗೆ ವೀರಶೈವ ಸಮಾಜದಲ್ಲಿ ವಿದ್ಯಾಭಿವೃದ್ಧಿಯ ಸಲುವಾಗಿ ನಿಷ್ಕಾಮ ಬುದ್ಧಿಯಿಂದ ಆಮರಣ ಅವಿಶ್ರಾಂತ ಶ್ರಮಪಟ್ಟ ರಾ. ಬ. ರುದ್ರಗೌಡ ಅರಟಾಳ ಇವರು ಲಿಂಗೈಕ್ಯರಾಗಿ ಹೋದದ್ದರಿಂದ ಇಡೀ ವೀರಶೈವ ಸಮಾಜವು ದುಃಖಿಸುತ್ತದೆ. ಇವರು ಸರಕಾರೀ ಉದ್ಯೋಗದಲ್ಲಿದ್ದಾಗ್ಗೆ ಅನೇಕ ಜನಹಿತ ಕಾರ್ಯಗಳನ್ನು ಮಾಡಿದರು. ಇವರು ಧಾರವಾಡ ವೀರಶೈವ ವಿದ್ಯಾಭಿವೃದ್ಧಿ ಫಂಡು, ಕರ್ನಾಟಕ ಕಾಲೇಜು ಫಂಡು ಗಳನ್ನು ಶೇಖರಿಸಿ ಹೆಸರುವಾಸಿಗಳಾದರು. ಇವರು ಲಿಂಗೈಕ್ಯರಾದದ್ದರಿಂದ ಪ್ರತಿಯೊಬ್ಬ ವೀರಶೈವನಿಗೆ ಅತ್ಯಂತ ದುಃಖವಾಗದೆ ಇರದು. ಅದರಂತೆಯೇ ಈ ವರ್ಷ ವಾಙ್ಮಯಕಾರ್ಯತತ್ಪರರಾದ ಶಿ. ಮ. ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ ಇವರ ಶಿವೈಕ್ಯರಾದದ್ದಕ್ಕೆ ನಾವು ಅತ್ಯಂತ ದುಃಖಿಸುತ್ತೇವೆ. ವಾಙ್ಮಯ ಕಾರ್ಯದಲ್ಲಿ ನಿರತರಾದವರ ಹೆಸರು ಎಂದೂ ನಾಶವಾಗಲಾರದು. ಇವರು ಕರ್ನಾಟಕ ಗ್ರಂಥಕರ್ತರಲ್ಲಿ ಉಚ್ಚಸ್ಥಾನವನ್ನು ಹೊಂದಿರುವರು. ಇವರ ಅಕಾಲ ಮರಣಕ್ಕೋಸ್ಕರ ನಾವು ಅತ್ಯಂತ ದುಃಖಿಸುತ್ತೇವೆ. ಶ್ರೀ ಪರಮಾತ್ಮನು ಮೇಲ್ಕಂಡ ಮಹನೀಯರೆಲ್ಲರ ಆತ್ಮಕ್ಕೆ ಶಾಂತಿಯನ್ನೀಯಲೆಂದು ನಾನು ಪುನಃಪೂರ್ವಕವಾಗಿ ಬೇಡಿಕೊಳ್ಳುತ್ತೇನೆ.

## ಮಹಾಸಭೆಯ ಪ್ರಯೋಜನಗಳು ಮತ್ತು ಅದರ ಭಾವೀ ಕಾರ್ಯಪದ್ಧತಿ.

ಮಹನೀಯರೇ, ಮಹಾಸಭೆಯು ಸ್ಥಾಪಿತವಾಗಿ ಇಂದಿಗೆ ೨೮ ವರ್ಷಗಳಾದವು. ಈ ಅವಧಿಯಲ್ಲಿ ಹನ್ನೊಂದು ಅಧಿನಿವೇಶನಗಳು ಜರಗಿದವು. ಈ ಮಹಾಸಭೆಯ ಮೂಲಕ ವೀರಶೈವ ಸಮಾಜದಲ್ಲಿ ಅನೇಕ ಮಹತ್ವದ ಕಾರ್ಯಗಳಾದವೆಂಬುದು ನಿರ್ವಿವಾದವು. ಅವುಗಳನ್ನೆಲ್ಲ ನಾನು ಇಲ್ಲಿ ವಿವರಿಸುತ್ತ ತಮ್ಮ ಮಹತ್ವದ ವೇಳೆಯನ್ನು ಕಳೆಯಲಾರೆನು. ಆದರೆ ಸಂಕ್ಷಿಪ್ತವಾಗಿ ಹೇಳುವದೆಂದರೆ, ಇದರ ಪ್ರೇರಣೆಯು

ಮೂಲಕ ಆಯಾ ಪ್ರಾಂತಗಳಲ್ಲಿ ಅನೇಕ ವಿದ್ಯಾವರ್ಧಕ ಸಂಸ್ಥೆಗಳೂ ವಸತಿಗೃಹಗಳೂ, ಹೈಸ್ಕೂಲುಗಳೂ, ಧಾರ್ಮಿಕ ಪಾಠಶಾಲೆಗಳೂ ಉತ್ಪನ್ನವಾದವು. ಈ ಸಂಸ್ಥೆಗಳ ದ್ವಾರಾ ಅನೇಕ ವಿದ್ಯಾವಂತರು ಅನೇಕ ಬಗೆಯ ಸಮಾಜಕಾರ್ಯಗಳನ್ನು ಮಾಡುತ್ತಲಿರುವರು. ಇದರಿಂದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಗಳ ಬಗ್ಗೆ ಅನೇಕ ಆಂದೋಲನೆಗಳು ಹುಟ್ಟಲಿಕ್ಕೆ ಕಾರಣವಾಗಿರುತ್ತದೆ. ಆದರೆ ಇನ್ನು ಮೇಲೆ ಈ ಎಲ್ಲ ಚಟುವಟಿಕೆಗಳನ್ನು ಕೇಂದ್ರೀಕರಿಸಿ ವ್ಯವಸ್ಥಿತವಾಗಿ ಮುಂದೆ ನಡಿಸುವ ಬಗ್ಗೆ ತಕ್ಕ ಏರ್ಪಾಡುಗಳು ಆಗುವದು ಅವಶ್ಯವದೆ. ಈ ದೃಷ್ಟಿಯಿಂದಲೇ ನಾವು ವೀರಶೈವ ಮಹಾಸಭೆಯ ಮುಂದಿನ ಕಾರ್ಯಗಳನ್ನು ನಡಿಸತಕ್ಕದ್ದಾಗಿದೆ. ಇತ್ತ ಕಡೆಗೆ ತಾವು ಹೆಚ್ಚಿಗೆ ಲಕ್ಷಕೊಡುವಿರೆಂದು ಭಾವಿಸಿದ್ದೇನೆ.

## ಪಕ್ಷಭೇದಗಳು.

ಪ್ರತಿನಿಧಿಗಳೇ, ವೀರಶೈವ ಸಮಾಜದಲ್ಲಿ ಈಗ ಅನೇಕ ಬಗೆಯ ಪಕ್ಷಭೇದಗಳಾಗಿರುವವೆಂದು ಭಾವಿಸಿ ಸಮಾಜದ ಮುಂದಿನ ಪ್ರಗತಿಯ ಬಗ್ಗೆ ನಿರಾಶೆಯ ಉದ್ಗಾರಗಳನ್ನು ಅನೇಕರು ತೆಗೆಯುವದುಂಟು. ಆದರೆ ಈ ಭೇದಗಳು ಸಮಾಜದ ಉತ್ಕ್ರಾಂತಿಯ ಚಿನ್ಹಗಳೆಂದು ನಾನು ಎಣಿಸುತ್ತೇನೆ. ನಮ್ಮ ಸಮಾಜದಲ್ಲಿ ಈ ಕಾಲಕ್ಕೆ ಅಂಧಶ್ರದ್ಧೆಯು ಹೊರಟುಹೋಗಿ ವ್ಯಕ್ತಿಸ್ವಾತಂತ್ರ್ಯವು ಬೆಳೆಯಹತ್ತಿರುತ್ತದೆ. ಹೆಚ್ಚಿನ ಆಕಾಂಕ್ಷೆಗಳು ಒಡಮೂಡಹತ್ತಿವೆ. ಇದಕ್ಕೆ ನಾವು ಭೀತಿಪಡುವ ಕಾರಣವಿಲ್ಲ. ಈ ಹೊಸ ಪರಿಸ್ಥಿತಿಗನುಸರಿಸಿ ನಮ್ಮ ಕಾರ್ಯಪದ್ಧತಿಯಲ್ಲಿ ಮಾತ್ರ ತಕ್ಕ ಬದಲಾವಣೆಗಳನ್ನು ಮಾಡಬೇಕಾಗಿದೆ. ಹೀಗೆ ಮಾಡಿದಲ್ಲಿ ಸಮಾಜದ ಏಳ್ಗೆಯು ಮುಂದೆ ಭರದಿಂದ ಸಾಗದೆ ಇರದು.

## ನಿಶ್ಚಿತ ಕಾರ್ಯಕ್ರಮದ ಬಗ್ಗೆ ಅವಶ್ಯಕತೆ.

ಈ ಕಾಲಕ್ಕೆ ನಾವು ಕೈಕೊಳ್ಳಬಹುದಾದ ಕಾರ್ಯಗಳು ಅನೇಕವಿವೆ. ನಮ್ಮಲ್ಲಿ ಸಾಮಾಜಿಕ, ವಿದ್ಯಾವಿಷಯಕ, ವಾಙ್ಮಯಾತ್ಮಕ ರಾಜಕೀಯ, ಆರ್ಥಿಕ, ಧಾರ್ಮಿಕ ಹೀಗೆ ಅನೇಕ ಬಿಕ್ಕಟ್ಟಿನ ಪ್ರಶ್ನೆಗಳು ಮುಂದೆ ಬಂದಿವೆ. ಇವೆಲ್ಲವುಗಳ ಬಗ್ಗೆ ಸಮಾಜವು ತಕ್ಕ ಹಾದಿಯನ್ನು ಕಂಡುಹಿಡಿದು ಈಗ ಪ್ರಯತ್ನಿಸಬೇಕಾಗಿದೆ. ಈ ವಿಷಯಗಳಲ್ಲಿ ನಿಶ್ಚಿತ

ಕಾರ್ಯಕ್ರಮವನ್ನು ಗೊತ್ತುಪಡಿಸಬೇಕಾಗಿದೆ. ಮೇಲ್ಕಂಡ ವಿಷಯಗಳ ಉಪಯುಕ್ತತೆಯ ಬಗ್ಗೆ ಅಥವಾ ಆವಶ್ಯಕತೆಯ ಬಗ್ಗೆ ನಾನು ವಿಸ್ತಾರವಾಗಿ ನಿರೂಪಿಸುತ್ತ ತಮ್ಮ ಮಹತ್ವದ ವೇಳೆಯನ್ನು ಕಳೆಯಲಾರೆನು. ಆದರೆ ಸೂಚನಾತ್ಮಕವಾಗಿ ತಮ್ಮ ಮುಂದೆ ಕೆಲವು ವಿಷಯಗಳನ್ನು ಇಡಲು ಪ್ರಯತ್ನಿಸುತ್ತೇನೆ. ಅವುಗಳನ್ನು ತಾವು ವಿಚಾರ ಮಾಡಿ ತಕ್ಕ ನಿರ್ಧಾರಗಳನ್ನು ಮಾಡುವಿರೆಂದು ಕೋರುತ್ತೇನೆ.

## ೧. ಶಿಕ್ಷಣ.

ನಾನು ಮೊದಲು ಶಿಕ್ಷಣ ವಿಷಯವನ್ನು ತೆಗೆದುಕೊಳ್ಳುತ್ತೇನೆ.

### ಈಗಿನ ಶಿಕ್ಷಣಪದ್ಧತಿಯು ದೋಷಯುಕ್ತವಾದುದು.

ಬಹುಜನ ಸಮಾಜವೆನಿಸಿಕೊಂಡ ವೀರಶೈವ ಸಮಾಜದಲ್ಲಿ ಶಿಕ್ಷಣ ವಿಷಯವು ಎಷ್ಟು ಮಹತ್ವದ್ದಿದೆ ಎಂಬದನ್ನು ನಾನು ವಿವರಿಸುವ ಅವಶ್ಯವಿಲ್ಲ. ಇದರ ಮೇಲೆಯೇ ಸಮಾಜದ ಮತ್ತು ರಾಷ್ಟ್ರದ ಭಾವೀ ಸುಸ್ಥಿತಿಯು ಅವಲಂಬಿಸಿರುತ್ತದೆ. ಆದರೆ ಈಗ ಸಮಾಜಕ್ಕೆ ದೊರೆಯುವ ಶಿಕ್ಷಣವು ದೋಷಪೂರ್ಣವಾದುದೆಂದು ನನ್ನ ತಿಳುವಳಿಕೆ ಇದೆ. ಈ ಸ್ಥಿತಿಯು ದೂರಾಗದ ಹೊರ್ತು ಸಮಾಜವು ಮುಂದುವರಿಯಲಾರದು.

### ಶಿಕ್ಷಣವು ಸಂಸ್ಕೃತಿಗೆ ಪೋಷಕವೂ ವ್ಯವಹಾರ್ಯವೂ ಇರಬೇಕು.

ಶಿಕ್ಷಣಪದ್ಧತಿಯು ದೇಶದ ಸಂಸ್ಕೃತಿಗೆ ಪರಿಪೋಷಕವಾಗಿರತಕ್ಕದ್ದು. ಆದರೆ ಈ ಪ್ರಕಾರ ನಮಗೆ ಈಗ ದೊರಕುವ ಶಿಕ್ಷಣದ ವ್ಯವಸ್ಥೆಯು ಇರುವದಿಲ್ಲ. ಅದು ಈಗ ಸಂಪೂರ್ಣ ಪಾಶ್ಚಿಮಾತ್ಯ ಪದ್ಧತಿಯ ಅನುಕರಣವಾಗಿದೆ. ಹಿಂದೂ ವಾಙ್ಮಯ ಅದರ ಉಜ್ವಲ ಇತಿಹಾಸ ಅದರ ನಾಗರಿಕತೆ ಇವುಗಳ ಯೋಗ್ಯ ಜ್ಞಾನವು ಆಗುವಂತೆ ಅದರ ವ್ಯವಸ್ಥೆಯು ಇರುವದಿಲ್ಲ. ಈಗ ನಾವು ಅನೇಕ ವಿಷಯಗಳನ್ನು ಕಲಿಯುತ್ತಿರಬಹುದು. ಆದರೆ ನಮ್ಮದರ ಜ್ಞಾನವು ನಮಗೆ ಉಂಟಾಗಿರುವದಿಲ್ಲ. ಹಾಗೆಯೇ ನಮ್ಮ ಶಿಕ್ಷಣಪದ್ಧತಿಯು ವ್ಯವಹಾರ್ಯವೂ ಇಲ್ಲ. ಇದರಿಂದ ನಮ್ಮಲ್ಲಿ ಅನುದ್ಯೋಗವು ಹೆಚ್ಚುತ್ತಲಿದೆ. ಈ ಕುಂದುಗಳನ್ನು ನಾವು ಹೋಗಲಾಡಿಸತಕ್ಕದ್ದು.

## ಶಿಕ್ಷಣಸುಧಾರಣಾಕಾರ್ಯಗಳು ನಮ್ಮ ಕೈಯ್ಯಲ್ಲಿ ಇವೆ.

ಈ ದುಃಸ್ಥಿತಿಯನ್ನು ದೂರಮಾಡುವದು ಅಶಕ್ಯವಾದುದಲ್ಲ. ಈ ಕಾಲಕ್ಕೆ ವಿಶ್ವವಿದ್ಯಾಲಯಗಳು ಪ್ರಾತಿನಿಧ್ಯ ವಿಷಯದಲ್ಲಿ ಹೆಚ್ಚಿಗೆ ವ್ಯಾಪಕವಾಗಿವೆ. ಅವು ಇಂಥ ಕಾರ್ಯಕ್ಕೆ ಏಕೆ ತೊಡಗಬಾರದು? ಮಾಧ್ಯಮಿಕ ಶಾಲೆಗಳೂ, ಪ್ರಾಥಮಿಕ ಶಾಲೆಗಳೂ ಜನರಿಂದ ನಡಿಸಲ್ಪಟ್ಟ ಸಂಸ್ಥೆಗಳಾಗಿವೆ. ಅವುಗಳಲ್ಲಿ ಸೇರಿದವರು ಅವುಗಳ ಯೋಗ್ಯತೆಯನ್ನು ಹೆಚ್ಚಿಸಲು ಏಕೆ ಪ್ರಯತ್ನಿಸಬಾರದು? ಸುಧಾರಣಾ ಕಾಯದೆಯಲ್ಲಿ ಶಿಕ್ಷಣ ವಿಷಯವು ಆಡಳಿತೆಯಲ್ಲಿ ಕಾದಿಟ್ಟ ವಿಷಯವಲ್ಲ. ಆದರೆ ಅದು ಜನರಿಗೆ ಒಪ್ಪಿಸಿಕೊಟ್ಟ ವಿಷಯವಾಗಿದೆ. ಆದ್ದರಿಂದ ಮೇಲ್ಕಂಡ ರೀತಿಯಿಂದ ಅದರ ಸುಧಾರಣೆಗಾಗಿ ನಮ್ಮ ಶಿಕ್ಷಣಮಂತ್ರಿಗಳೂ ಕೌನ್ಸಿಲು ಮೆಂಬರರೂ ಏಕೆ ಪ್ರವೃತ್ತರಾಗಬಾರದು?

## [ಅ] ಪ್ರಾಥಮಿಕ ಶಿಕ್ಷಣ.

ಮುಂಬಯಿ ಇಲಾಖೆಯಲ್ಲಿ ಪ್ರಾಥಮಿಕ ಶಿಕ್ಷಣವು ಮುನಿಸಿಪಾಲಿಟಿ ಮತ್ತು ಲೋಕಲಬೋರ್ಡುಗಳಿಗೆ ಒಪ್ಪಿಸಲ್ಪಟ್ಟಿದೆ. ಮುಂಬಯಿ ಕರ್ನಾಟಕದಲ್ಲಿ ವೀರಶೈವರೇ ಬಹುಸಂಖ್ಯಾಕರಾಗಿರುತ್ತಾರೆ. ಆದ್ದರಿಂದ ಈ ಬೋರ್ಡುಗಳಲ್ಲಿ ಅವರ ಸಂಖ್ಯೆಯೇ ಸ್ವಾಭಾವಿಕವಾಗಿ ಹೆಚ್ಚಿಗಿದ್ದು ಅವರು ಅವುಗಳ ಮುಖಾಂತರವಾಗಿ ವಿದ್ಯಾಪ್ರಸಾರದ ಮಹತ್ವದ ಕಾರ್ಯಗಳನ್ನು ಜರಗಿಸಬಹುದಾಗಿದೆ. ಆದ್ದರಿಂದ ನಾನು ಕೆಳಗೆ ಕಾಣಿಸಿದ ಸೂಚನೆಗಳನ್ನು ಮಾಡಲಪೇಕ್ಷಿಸುತ್ತೇನೆ.

## ಶಿಕ್ಷಣದ ಯೋಗ್ಯತೆಯನ್ನು ಬೆಳಿಸುವ ಅವಶ್ಯಕತೆ.

ಪ್ರಾಥಮಿಕ ಶಿಕ್ಷಣಕ್ಕೋಸ್ಕರ ಬೋರ್ಡುಗಳು ಈಗ ಬಹಳ ಹಣವನ್ನು ವೆಚ್ಚಮಾಡುತ್ತಲಿವೆ. ಆದರೆ ಅವುಗಳ ಕಾರ್ಯಗಳು ಮಾತ್ರ ಸಮಾಧಾನಕರವಾಗಿ ನಡೆದಿರುವದಿಲ್ಲ. ಅವು ಒಂದುವೇಳೆ ಈ ಕಾರ್ಯವನ್ನು ಸರಿಯಾಗಿ ಜರಗಿಸಿದ್ದಾದರೆ ಸಮಾಜದ ನಿಜವಾದ ಅಭಿವೃದ್ಧಿಗೆ ಸ್ಥಿರತರವಾದ ತಳಹದಿಯನ್ನು ಹಾಕಿದಂತೆ ಆಗುತ್ತದೆ. ಈಗ ಅವು ಶಿಕ್ಷಣದ ಸುಸ್ಥಿತಿ, ಅದರ ಯೋಗ್ಯತೆ, ಅದರ ಉಪಯುಕ್ತತೆ, ಅದರ ಕಾರ್ಯಪದ್ಧತಿಯಲ್ಲಿ ಸುಧಾರಣೆ ಇವೇ ಮೊದಲಾದ ವಿಷಯಗಳ ಕಡೆಗೆ ಸಂಪೂ

ರ್ಣವಾಗಿ ಲಕ್ಷಹಾಕತಕ್ಕದ್ದು. ಬರೇ ವಿದ್ಯಾರ್ಥಿಗಳ ಸಂಖ್ಯೆಯನ್ನು ಬೆಳಿಸುವದರ ಕಡೆಗೆ ಲಕ್ಷಕೊಟ್ಟರೆ ಕಾರ್ಯವಾಯಿತೆಂದು ತಿಳಿಯಬಾರದು. ಇದು ಕಠಿಣ ಕೆಲಸವಲ್ಲ. ಶಾಲೆಗಳ ಸಂಖ್ಯೆಯನ್ನು ಬೆಳಿಸಿದರೆ ವಿದ್ಯಾರ್ಥಿಗಳ ಸಂಖ್ಯೆಯು ತಾನೇ ಬೆಳೆಯುವದು. ಆದರೆ ಶಿಕ್ಷಣದ ಯೋಗ್ಯತೆಯನ್ನು ಹೆಚ್ಚಿಸುವದು ಅತ್ಯಂತ ಮಹತ್ವವಾದದ್ದು. ಚಿಕ್ಕ ಮಕ್ಕಳಲ್ಲಿ ಶಿಕ್ಷಣದ ಅಂಕುರವು ಸರಿಯಾಗಿ ನಾಟಬೇಕು. ಅಂದರೆ ಮಾತ್ರ ಅದು ಮುಂದೆ ಭರದಿಂದ ಬೆಳೆದು ಅದರ ಪರಿಣಾಮವು ದೇಶಕ್ಕೆ ಹಿತಕರವಾಗುವದು. ಇಲ್ಲದಿದ್ದರೆ ಹಣದ ದುರ್ವ್ಯಯವೇ ಸರಿ. ಸರಕಾರದವರು ಹೆಚ್ಚಿಗೆ ಹಣ ಕೊಡುವದಿಲ್ಲೆಂಬುದೇನೋ ನಿಜವು. ಆದರೆ ಬೋರ್ಡುಗಳು ತಮಗೆ ದೊರೆದ ಹಣವನ್ನು ಯೋಗ್ಯ ರೀತಿಯಿಂದ ಖರ್ಚು ಮಾಡಿ ತಮ್ಮ ಕೈಯ್ಯಲ್ಲಿರುವ ವಿದ್ಯಾರ್ಥಿಗಳಿಗೆ ಯೋಗ್ಯಶಿಕ್ಷಣವು ದೊರೆಯುವಂತೆ ಮಾಡುವ ಧೋರಣವನ್ನು ಅವು ಸ್ವೀಕರಿಸಬೇಕೆಂದು ನಾನು ಸೂಚಿಸುತ್ತೇನೆ.

## ಯೋಗ್ಯ ಪಠ್ಯಪುಸ್ತಕಗಳ ಅವಶ್ಯಕತೆ.

ಪ್ರಾಥಮಿಕ ಶಿಕ್ಷಣವು ಸರಿಯಾಗಿ ನಡೆಯಬೇಕಾದರೆ ಯೋಗ್ಯ ಪಠ್ಯಪುಸ್ತಕಗಳಿರುವದು ಅವಶ್ಯವು. ಸಂಸ್ಕೃತಿಯನ್ನು ಪೋಷಿಸಲಿಕ್ಕೆ ಇವೇ ನಮಗೆ ಮುಖ್ಯ ಸಾಧನಗಳು. ಈ ಕಾರ್ಯಕ್ಕೆ ನಾನು ಬಹಳ ಮಹತ್ವ ಕೊಡುತ್ತೇನೆ. ಬಾಲಕರ ಕೈಯ್ಯಲ್ಲಿ ಯೋಗ್ಯ ಪುಸ್ತಕಗಳಿರದಿದ್ದರೆ ಶಿಕ್ಷಣದ ಉದ್ದೇಶವೇ ತಪ್ಪಿಹೋಗುವದು. ಮುಂಬಯಿ ಇಲಾಖೆಯಲ್ಲಿಯ ಬೋರ್ಡುಗಳು ಈ ಕಾರ್ಯವನ್ನು ಕೈಕೊಳ್ಳಲು ಅಧಿಕಾರವುಳ್ಳವಾಗಿವೆ. ಆದರೆ ಅವು ಈ ಬಗ್ಗೆ ತಟಸ್ಥವಾಗಿವೆ. ಒಮ್ಮೆ ಇವುಗಳ ಬೋರ್ಡುಗಳ ಪ್ರತಿನಿಧಿಗಳನ್ನು ಬರಮಾಡಿಕೊಂಡು ಪ್ರಯತ್ನಪಟ್ಟದ್ದಾಯಿತು. ಪ್ರತಿನಿಧಿಗಳು ಒಂದು ಯೋಜನೆಯನ್ನೂ ಮಾಡಿದ್ದಾಯಿತು. ಆದರೆ ಆಯಾ ಬೋರ್ಡುಗಳು ಈ ಕಾರ್ಯವನ್ನು ಮುಂದೆ ನಡಿಸದೆ ಇದ್ದುದು ಶೋಚನೀಯವಾಗಿದೆ.

## ದೊಡ್ಡವರ ಶಿಕ್ಷಣ.

ಬಹುಜನ ಸಮಾಜದಲ್ಲಿ ತೀವ್ರ ತಿಳುವಳಿಕೆಯು ಉತ್ಪನ್ನವಾಗಲಿಕ್ಕೆ ಒತ್ತಾಯದ ಶಿಕ್ಷಣವು ಆವಶ್ಯವಾಗಿರುವದೆಂಬುದೇನೋ ನಿಜವು. ಆದರೆ ಈಗಿನ ಅವನತಿಯ ಕಾಲದಲ್ಲಿ ಸರಕಾರದಿಂದ ಹೀಗೆ ಸಹಾ

ಯವಾದೀತೆಂದು ನಮಗೆ ತೋರುವದಿಲ್ಲ. ಆದರೂ ಜನರಲ್ಲಿ ತಿಳುವಳಿಕೆಯನ್ನು ಹರವಲಿಕ್ಕೆ ಅನೇಕ ಸಾಧನಗಳಿರುತ್ತವೆ. ಅತ್ತ ಕಡೆಗೆ ಅವರು ತಮ್ಮ ಲಕ್ಷವನ್ನು ಒಯ್ಯಬೇಕು. ಉದಾಹರಣಾರ್ಥವಾಗಿ ದೇಶದಲ್ಲೆಲ್ಲ ವಾಚನಾಲಯಗಳನ್ನೂ ದೊಡ್ಡವರ ಶಿಕ್ಷಣಾಲಯಗಳನ್ನೂ ಸ್ಥಾಪಿಸುವ ಕ್ರಮವನ್ನು ಕೈಕೊಳ್ಳಬೇಕು. ಜನತೆಯಲ್ಲಿ ಜ್ಞಾನಪ್ರಸಾರ ಮಾಡಲು ಇವು ಅತ್ಯುತ್ತಮ ಸಾಧನಗಳಾಗಿವೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ವಿಶೇಷವಾಗಿ ಮಧ್ಯ ಯುರೋಪಖಂಡದಲ್ಲಿ ಇಂಥ ಸಂಸ್ಥೆಗಳು ಬಲವಾದ ಸಾಮಾಜಿಕ ಕಾರ್ಯಗಳನ್ನು ಮಾಡುತ್ತಲಿವೆ. ಇವು ವಿಶೇಷವಾಗಿ ಹಿಂದುಳಿದ ವರ್ಗಗಳಿಗೆ ಉಪಯುಕ್ತವಾಗಿರುತ್ತವೆ. ದೊಡ್ಡವರ ಶಿಕ್ಷಣಾಲಯಗಳಿಗೆ ಔದ್ಯೋಗಿಕ ಸ್ವರೂಪನ್ನು ನಾವು ಕೊಟ್ಟಿದ್ದಾದರೆ ಅವು ಹೆಚ್ಚಿಗೆ ಉಪಯುಕ್ತವಾಗುವವು.

## ಪರಭಾಷೆಗಳ ವರ್ಚಸ್ಸು.

ಮುಂಬಯಿ ಇಲಾಖೆಯನ್ನು ಬಿಟ್ಟು ಉಳಿದ ಬೇರೆ ಕೆಲವು ಆಧಿಪತ್ಯಗಳನ್ನು ನೋಡಿದರೆ ಅವುಗಳಲ್ಲಿ ಶಿಕ್ಷಣ ಪ್ರಸಾರಕ್ಕೆ ಕೆಲವು ತಡೆಗಳುಂಟಾಗಿರುವದು ತೋರಿಬರುತ್ತದೆ. ಇವುಗಳು ಪರಭಾಷೆಗಳ ವರ್ಚಸ್ಸಿನ ಮೂಲಕವಾಗಿ ಇರುತ್ತವೆ. ನೈಜಾಮ ಇಲಾಖೆಯಲ್ಲಿ ಮಾತೃಭಾಷೆಯಲ್ಲಿ ಶಿಕ್ಷಣವು ದೊರೆಯುವದಿಲ್ಲ. ಅಲ್ಲಿ ಉರ್ದು ಭಾಷೆಯು ಉಳಿದ ಭಾಷೆಗಳನ್ನು ಸಂಪೂರ್ಣ ಮೂಲೆಗೊತ್ತಿದೆ. ಮುಂಬಯಿ ಇಲಾಖೆಯ ದೇಶೀಸಂಸ್ಥಾನಗಳಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡವು ಕಲಿಸಲ್ಪಡದೆ ಮರಾಠಿಯು ಕಲಿಸಲ್ಪಡುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಅನೇಕ ಕಡೆಗೆ ಶಾಲೆಗಳಲ್ಲಿ ಆಂಧ್ರ ಭಾಷೆಯು ಇನ್ನೂ ನಡಿಯುತ್ತದೆ. ನೀಲಗಿರಿ ಮುಂತಾದ ದಕ್ಷಿಣ ದೇಶದ ಜಿಲ್ಲೆಗಳಲ್ಲಿ ತಮಿಳು ಭಾಷೆಯು ನಡೆಯುತ್ತದೆ. ಇದರಿಂದ ಅಲ್ಲಿಯ ಜನತೆಯ ವಿದ್ಯಾಭಿವೃದ್ಧಿಗೆ ದೊಡ್ಡ ಬಾಧೆಯು ತಗಲಿರುತ್ತದೆ. ಈ ಸ್ಥಿತಿಯನ್ನು ತೀವ್ರ ನಿವಾರಣೆ ಮಾಡುವದು ನಮ್ಮ ಕರ್ತವ್ಯವಾಗಿದೆ.

## ಬೋರ್ಡಗಳ ಕರ್ತವ್ಯ ಪರಾಙ್ಮುಖತೆ.

ಸಭ್ಯಗೃಹಸ್ಥರೇ, ಶಿಕ್ಷಣಸುಧಾರಣೆಯ ವಿಷಯವು ಬಹು ವಿಸ್ತೃತವಾದದ್ದದೆ. ಅವುಗಳನ್ನು ನಾವು ಮಾಡಿದ್ದಾದರೆ ದೇಶದ ಪ್ರಗತಿಯು

ಬಹು ಭರದಿಂದ ಸಾಗದೆ ಇರದು. ಈ ಸುಧಾರಣಾಕಾರ್ಯಗಳನ್ನೆಲ್ಲ ಈ ಪ್ರಷತ್ತಿನ ಸಮಯದಲ್ಲಿ ನಾನು ವಿವರಿಸುವದು ಅಪ್ರಸ್ತುತವು. ಆದರೆ ಇಂಥ ಮಹತ್ವದ ವಿಷಯದ ಬಗ್ಗೆ ಬೋರ್ಡುಗಳು ಅತ್ಯಂತ ಅಜಾಗ್ರತೆ ಪಡುತ್ತಿರುವರಿಂದ ಯೋಗ್ಯ ಶಿಕ್ಷಣ ಪ್ರಸಾರಕ್ಕೆ ಬಹಳ ಹಾನಿಯಾಗುತ್ತಲಿದೆ ಎಂದು ನಾನು ಹೇಳದೆ ಇರಲಾರೆನು ಬೋರ್ಡುಗಳಲ್ಲಿ ಅನೇಕ ಬಗೆಯ ಪಕ್ಷಪಾತಗಳು ನಡೆಯುತ್ತಲಿವೆ. ಮೆಂಬರರೂ ಬೋರ್ಡ ಅಧಿಕಾರಿಗಳೂ ಮಾಸ್ತರರ ನೇಮಣೂಕಿಗಳಿಗೆ ಮಾತ್ರ ಹೆಚ್ಚಾಗಿ ಲಕ್ಷಕೊಡುತ್ತಾರೆ ಹೊರತು ಶಿಕ್ಷಣದ ನಿಜವಾದ ಕಾರ್ಯಗಳಿಗೆ ಲಕ್ಷಕೊಡುವದಿಲ್ಲ. ವರ್ಗಾವರ್ಗಿಗಳು ಅನಾವಶ್ಯಕವಾಗಿ ಮೇಲಿಂದ ಮೇಲೆ ಆಗುವದುಂಟು. ಶಿಕ್ಷಣಸುಧಾರಣಾ ವಿಷಯಗಳು ಬೋರ್ಡಿನ ಸಭೆಗಳಲ್ಲಿ ಆಗಿಂದಾಗ್ಗೆ ಚರ್ಚಿಸಲ್ಪಡುವದಿಲ್ಲ. ಇದರಿಂದ ಶಿಕ್ಷಕರು ತಮ್ಮ ನಿಜವಾದ ಶೈಕ್ಷಣಿಕ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳುವದನ್ನು ಬಿಟ್ಟುಕೊಟ್ಟಿರುವರು. ಈ ಮೂಲಕ ಯೋಗ್ಯ ಶಿಕ್ಷಣ ಹೊಂದಿದ ವಿದ್ಯಾರ್ಥಿಗಳು ಪ್ರಾಥಮಿಕ ಶಾಲೆಗಳಿಂದ ಹೊರಡದಂತೆ ಆಗಿದೆ ಇದರ ದುಷ್ಪರಿಣಾಮವು ಮಾಧ್ಯಮಿಕ ಶಿಕ್ಷಣದ ಮೇಲೆಯೂ ಆಗಹತ್ತಿದೆ. ಈಚೆಗೆ ಚುನಾವಣಿಗಳಲ್ಲಿ ಅತ್ಯಂತ ಈಷ್ಯಾರ್ಸೂಯೆಗಳು ಉಂಟಾಗುವದರಿಂದ ಇವುಗಳ ಪ್ರತಿಬಿಂಬವು ಬೋರ್ಡುಗಳ ಕಾರ್ಯಗಳಲ್ಲಿಯೂ ತೋರಹತ್ತಿದೆ. ಇದು ಸಮಾಜಕ್ಕೆ ಮತ್ತು ದೇಶಕ್ಕೆ ಘಾತಕವಲ್ಲವೇ? ಇದು ಬಹುಜನ ಸಮಾಜದ ಪ್ರಗತಿಗೆ ಹಾನಿಕಾರಕವಲ್ಲವೇ ? ಈ ಸ್ಥಿತಿಯನ್ನು ಸುಧಾರಿಸಲಿಕ್ಕೆ ಪ್ರತಿಯೊಬ್ಬ ವೀರಶೈವನು ಮುಂದಾಗಬೇಕೆಂದು ನಾನು ಆಶಿಸುತ್ತೇನೆ.

## (ಬ) ಮಾಧ್ಯಮಿಕ ಶಿಕ್ಷಣ.

ಇನ್ನು ಮೇಲೆ ನಾನು ಮಾಧ್ಯಮಿಕ ಶಿಕ್ಷಣವನ್ನು ಕುರಿತು ಕೆಲವು ಸೂಚನೆಗಳನ್ನು ಮಾಡುತ್ತೇನೆ. ವೀರಶೈವ ಸಮಾಜದವರು ಇಂಥ ಅನೇಕ ಶಾಲೆಗಳನ್ನು ಈಚೆಗೆ ಸ್ಥಾಪಿಸಿರುವರು. ಮತ್ತು ಈ ಬಗ್ಗೆ ಅವರು ಬಹಳ ಹಣವನ್ನು ವೆಚ್ಚಮಾಡುತ್ತಲಿದ್ದಾರೆ- ಆದರೆ ಇವು ಸರಿಯಾದ ರೀತಿಯಿಂದ ನಡೆಯದೆ ಹೋದಲ್ಲಿ ಸಮಾಜದ ಹಣವು ವ್ಯರ್ಥ ಹಾಳಾಗುವದಲ್ಲದೆ ಯೋಗ್ಯ ಶಿಕ್ಷಣ ಪಡೆದವರು ಉತ್ಪನ್ನವಾಗಲಾರರು.

## ಮಾಧ್ಯಮಿಕ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸುವ ಅವಶ್ಯಕತೆ.

ಕರ್ನಾಟಕದಲ್ಲಿ ಮಾಧ್ಯಮಿಕ ಶಿಕ್ಷಣಶಾಲೆಗಳ ಸಂಖ್ಯೆಯು ಇನ್ನೂ ಬಹಳ ಕಡಿಮೆ ಇದೆ. ಪ್ರತಿಯೊಂದು ತಾಲೂಕಿನಲ್ಲಿ ಕನಿಷ್ಟ ಒಂದಾದರೂ ಪೂರ್ಣ ಹೈಸ್ಕೂಲು ಏರ್ಪಾಡಾಗುವಂತೆ ಮಾಡತಕ್ಕದ್ದು. ಈ ಕಾರ್ಯವನ್ನು ಅನುದ್ಯೋಗದಲ್ಲಿರುವ ಪದವೀಧರರು ಕೈಕೊಳ್ಳತಕ್ಕದ್ದು. ಇತರ ಸಮಾಜಗಳಲ್ಲಿಯಂತೆಯೇ ವೀರಶೈವರಲ್ಲಿಯೂ ಅನುದ್ಯೋಗಿಗಳಾದ ಪದವೀಧರರು ಇತ್ತಿತ್ತ ಹೆಚ್ಚುತ್ತಲಿದ್ದಾರೆ. ಅವರು ಇನ್ನು ಮೇಲೆ ದೊಡ್ಡ ಪಟ್ಟಣಗಳನ್ನು ಬಿಟ್ಟುಕೊಟ್ಟು ಗ್ರಾಮಗಳಲ್ಲಿ ವಾಸಿಸಿ ವಿದ್ಯಾಪ್ರಸಾರ ಮಾಡುವ ಕಾಲವು ಒದಗಿರುತ್ತದೆ. ಕೇವಲ ನೌಕರಿಗಳನ್ನು ಹುಡುಕುತ್ತ ಹೋಗುವದಕ್ಕಿಂತ ಶಿಕ್ಷಣಪ್ರಸಾರದಂಥ ಮಹತ್ವದ ರಾಷ್ಟ್ರಕಾರ್ಯ ಮಾಡುವುದರಿಂದ ಸಮಾಜಕ್ಕೆ ನಿಜವಾದ ಹಿತವಾಗದೆ ಇರದು.

## ಶಿಕ್ಷಣದ ಯೋಗ್ಯತೆಯನ್ನು ಬೆಳೆಸುವದು.

ಹೈಸ್ಕೂಲಿನ ಶಿಕ್ಷಣದ ಯೋಗ್ಯತೆಯು ಅತ್ಯಂತ ಕಡಿಮೇ ತರದಾಗಿವೆಂದು ಎಲ್ಲ ಕಡೆಗೂ ಆಕ್ಷೇಪಗಳಿರುತ್ತವೆ. ಇದು ನಿಜವಿರುತ್ತದೆಂತಲೂ ನನ್ನ ತಿಳುವಳಿಕೆ ಅದೆ. ಶಿಕ್ಷಕರು ತಮ್ಮ ಜವಾಬುದಾರಿ ಮತ್ತು ಕರ್ತವ್ಯಗಳನ್ನು ಸಾಕಷ್ಟು ಲಕ್ಷಕೊಡದಿರುವದೇ ಇದಕ್ಕೆ ಮುಖ್ಯ ಕಾರಣವಾಗಿದೆ. ಇದಕ್ಕೆ ಇನ್ನೂ ಅನೇಕ ಕಾರಣಗಳಿರಬಹುದು. ಅವುಗಳಲ್ಲಿ ಕೆಲವು ಬಾಹ್ಯಕಾರಣಗಳೂ ಅಲ್ಲದೆ ವ್ಯವಸ್ಥಾಪಕರ ಅಂತರಂಗಿಕ ಕಾರಣಗಳೂ ಇರಬಹುದು. ಅವುಗಳನ್ನು ನಾನು ಇಲ್ಲಿ ನಿರ್ದೇಶಿಸುವದು ಯೋಗ್ಯವಾದುದಲ್ಲ. ವೀರಶೈವ ಸಮಾಜದವರು ಕೆಲವು ವರ್ಷಗಳ ಹಿಂದೆ ಇಂಗ್ಲಿಷ ಶಾಲೆಗಳನ್ನು ಅನೇಕ ಕಡೆಗೆ ಸ್ಥಾಪಿಸಿದ್ದು ತೋರಿಬರುತ್ತದೆ. ಆದರೆ ಅವೆಲ್ಲವುಗಳೂ ಈಗ ಬಹುತರ ಮುರುಕಳಿಗೆ ಬಂದಿವೆ. ಈ ಸ್ಥಿತಿಯನ್ನು ವೀರಶೈವ ಸಮಾಜದವರೂ ಸಂಸ್ಥೆಗಳ ಚಾಲಕರೂ ಸರಿಪಡಿಸುವದು ಅವಶ್ಯವಾಗಿರುತ್ತದೆ.

## ಖರ್ಚು ಕಡಿಮೆಮಾಡುವ ಅವಶ್ಯಕತೆ.

ಮಾಧ್ಯಮಿಕ ಶಿಕ್ಷಣವು ಈಚೆಗೆ ಹೆಚ್ಚಿಗೆ ಖರ್ಚಿನದಾಗುತ್ತ ನಡೆದಿರುತ್ತದೆ. ಇದರಿಂದ ಅದರ ಪ್ರಸಾರಕ್ಕೆ ಬಹಳ ತೊಂದರೆಯಾಗಹತ್ತಿದೆ.

ಹೀಗೆ ಆಗದಂತೆ ಸರಕಾರದವರೂ ಜನತೆಯೂ ಎಚ್ಚರ ಪಡುವದು ಅವಶ್ಯವು. ಪ್ರಾಥಮಿಕ ಶಿಕ್ಷಣ ಮತ್ತು ಮಾಧ್ಯಮಿಕ ಶಿಕ್ಷಣ ಇವುಗಳನ್ನು ಪೂರೈಸ ಲಿಕ್ಕೆ ಈಗ ಹನ್ನೆರಡು ವರ್ಷಗಳು ಹಿಡಿಯುತ್ತವೆ. ಆದರೆ ಇವೆರಡು ಶಿಕ್ಷಣಗಳಲ್ಲಿ ತಕ್ಕ ಯೋಜನೆ ಮಾಡಿದಲ್ಲಿ ಈ ಅವಧಿಯಲ್ಲಿ ೨-೩ ವರ್ಷ ನಾವು ಕಡಿಮೆ ಮಾಡಬಹುದು. ಇದರಿಂದ ಪಾಲಕರಿಗೆ ಶಿಕ್ಷಣದ ಖರ್ಚು ಉಳಿಯುವದು. ಅಭ್ಯಾಸ ಕ್ರಮದಲ್ಲಿಯ ಅನಾವಶ್ಯಕ ಗಡು ಚಾದ ವಿಷಯ ಗಳನ್ನು ತೆಗೆದುಹಾಕಿ ಈಗಿನ ಕಾಲಕ್ಕನುಸರಿಸಿ ದೇಶ ಭಾಷೆ ಯಲ್ಲಿಯೇ ಶಿಕ್ಷಣವು ನಡೆದದ್ದಾದರೆ ಸ್ವಲ್ಪ ವರ್ಷಗಳಲ್ಲಿ ಉತ್ತಮ ರೀತಿ ಯಿಂದ ಅಭ್ಯಾಸವಾಗಬಹುದು. ಸರಕಾರದವರು ಶಾಲೆಯ ಫೀಯನ್ನು ತಗ್ಗಿಸಬೇಕು. ಆದರೆ ಸರಕಾರದವರು ಇದನ್ನು ಯಾವಾಗಲೂ ಹೆಚ್ಚಿ ಸುವದರಲ್ಲಿಯೇ ಇರುವರು. ಹೀಗೆ ಮಾಡುವದನ್ನು ಬಿಟ್ಟು ಶಿಕ್ಷಣವು ಹಗು ರಾಗಿ ದೊರಕುವಂತೆ ಅವರು ಮಾಡಬೇಕು. ಹಾಗೆಯೇ ಕಟ್ಟಡಗಳಿ ಗೋಸ್ಕರ ಹೆಚ್ಚಿಗೆ ಖರ್ಚು ಮಾಡಬಾರದು. ಈ ಪ್ರಕಾರ ನಡೆ ದದ್ದಾದರೆ ಮಾಧ್ಯಮಿಕ ಶಿಕ್ಷಣದ ಖರ್ಚು ಕಡಿಮೆಯಾಗಿ ಅದು ಹೆಚ್ಚಿಗೆ ಪ್ರಸಾರವಾಗಲಿಕ್ಕೆ ಅನುಕೂಲವಾಗುವದು.

## ಶಿಕ್ಷಣಫಂಡುಗಳ ವಿನಿಯೋಗ.

ಈಗಿನ ಕಾಲಕ್ಕೆ ಶಿಕ್ಷಣಫಂಡುಗಳ ವಿನಿಯೋಗವನ್ನು ಈಗಿನ ಪರಿಸ್ಥಿ ತಿಗೆ ಅನುಸರಿಸಿ ಮಾಡುವದು ಅವಶ್ಯವಿದೆ. ೨೦—೩೦ ವರ್ಷಗಳ ಹಿಂದಿನ ಪರಿಸ್ಥಿತಿ ಮತ್ತು ಈಗಿನ ಪರಿಸ್ಥಿತಿ ಇವುಗಳಲ್ಲಿ ಮಹದಂತರ ಉಂಟಾಗಿದೆ. ಮೊದಲು ಉತ್ತೇಜನಾರ್ಥವಾಗಿ ಬಡ ವಿದ್ಯಾರ್ಥಿಗಳಿಗೆ ಸ್ಕಾಲರ ಸಿಪ್ಪುಗಳನ್ನು ಬೇಕಾದಷ್ಟು ಕೊಡುವದರಲ್ಲಿ ಬರುತ್ತಿತ್ತು. ಆದರೆ ಈಗ ಜನತೆಯಲ್ಲಿ ಶಿಕ್ಷಣಾಭಿರುಚಿಯು ಹೆಚ್ಚುತ್ತ ನಡೆದಿದೆ. ಆದ್ದರಿಂದ ಈ ಸ್ಥಿತಿ ಯಲ್ಲಿ ಉತ್ತಮೋತ್ತಮ ಶಿಕ್ಷಣಾಲಯಗಳೂ ಸುಧಾರಿಸಿದ ಪದ್ಧತಿಯ ಶಿಕ್ಷಣದ ಸೌಕರ್ಯಗಳೂ ಶಿಕ್ಷಕರಿಗೆ ಸೌಲಭ್ಯಗಳೂ ಹೆಚ್ಚಾಗಿ ಉಂಟಾಗು ವಂತೆ ಮಾಡಬೇಕು. ಇದರಿಂದ ಶಿಕ್ಷಣಾಲಯಗಳ ಸಂಖ್ಯೆ ಹೆಚ್ಚಾಗಿ ಬಡ ವರಿಗೆ ಸಹಾಯವಾಗುವದಲ್ಲದೆ ಮಧ್ಯಮವರ್ಗದ ಜನರು ಹೆಚ್ಚಾಗಿ ಕಲಿಯಲಿಕ್ಕೆ ಆಸ್ಪದವಾಗುವದು. ರಾಷ್ಟ್ರಕಾರ್ಯದಲ್ಲಿ ಮಧ್ಯಮವರ್ಗ ದವರ ಮಹತ್ವವು ಹೆಚ್ಚಿಗಿದೆ. ಅವರು ಈ ಕಾಲದಲ್ಲಿ ಅತ್ಯಂತ

ಅವನತಸ್ಥಿತಿಯಲ್ಲಿ ಇರುವರು. ಇದು ದೇಶಕ್ಕೆ ಹಿತಕರವಲ್ಲ. ಅವರ ಹಿತವನ್ನು ಸಮಾಜದವರು ನೋಡುವದು ಅವಶ್ಯವದೆ.

## ವಸತಿಗೃಹಗಳು.

ವೀರಶೈವ ಸಮಾಜದವರು ಅನೇಕ ಕಡೆಗೆ ಬಹಳ ಹಣ ವೆಚ್ಚ ಮಾಡಿ ಸುಂದರವಾದ ವಸತಿಗೃಹಗಳನ್ನು ಕಟ್ಟಿಸಿರುವರು. ಮತ್ತು ಕಟ್ಟಿಸುತ್ತಲೂ ಇರುವರು. ಇದು ಸ್ತುತ್ಯ ಕಾರ್ಯವಾಗಿದೆ. ಯೋಗ್ಯ ವಸತಿಗೃಹವಿಲ್ಲದೆ ಹೋದರೆ ಶಿಕ್ಷಣದ ಉದ್ದೇಶಗಳು ಎಂದರೆ ಸಂಸ್ಕೃತಿಯ ಪ್ರಸಾರ ಮತ್ತು ವ್ಯವಹಾರಜ್ಞಾನ ವಿದ್ಯಾರ್ಥಿಗಳಲ್ಲಿ ಬರಲಾರವು. ವಸತಿಗ್ರಹಗಳ ಉದ್ದೇಶವು ಕೇವಲ ವಿದ್ಯಾರ್ಥಿಗಳ ಊಟದ ವ್ಯವಸ್ಥೆ ಮತ್ತು ವಾಸದ ಸೌಕರ್ಯಗಳನ್ನು ಮಾಡುವದು ಇರುವದಿಲ್ಲ. ಆದರೆ ಅವುಗಳಲ್ಲಿ ಇರುವಂಥವರಲ್ಲಿ ತಕ್ಕ ಸಾಮಾಜಿಕ ಮತ್ತು ವ್ಯವಹಾರಿಕ ಗುಣಗಳನ್ನು ಉಂಟುಮಾಡುವದು ಇರುತ್ತದೆ. ಈ ಉದ್ದೇಶದಿಂದಲೇ ಅವುಗಳನ್ನು ನಡಿಸತಕ್ಕದ್ದು.

## ಶಿಕ್ಷಣವು ವ್ಯವಹಾರ್ಯವಾಗಿರಬೇಕು.

ಈಗಿನ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣಕ್ರಮದಲ್ಲಿ ಅತ್ಯಂತ ಮಹತ್ವದ ದೋಷವೆಂದರೆ ಅದು ವ್ಯವಹಾರ್ಯವಾಗಿರುವದಿಲ್ಲ. ಇದರಿಂದ ನಮ್ಮ ವಿದ್ಯಾರ್ಥಿಗಳು ಯಾವ ತರದ ಉದ್ಯೋಗವನ್ನು ಮಾಡಲಿಕ್ಕೆ ಅಸಮರ್ಥರಾಗಿರುವರು. ಈ ದೋಷವು ಅತ್ಯಂತ ಮಹತ್ವದ್ದೆಂದು ನಾನು ಎಣಿಸುತ್ತೇನೆ. ಇದನ್ನು ದೂರಮಾಡಲಿಕ್ಕೆ ಸಮಾಜದವರು ಶೀಘ್ರ ಉಪಾಯಗಳನ್ನು ಕೈಕೊಳ್ಳತಕ್ಕದ್ದು. ಅನೇಕರು ನಾವು ಪದವೀಧರರನ್ನು ಮಾಡಿದರೆ ನಮ್ಮ ಕರ್ತವ್ಯವಾಯಿತು, ಅವರು ತಮ್ಮ ಹಾದಿಯನ್ನು ತಾವೇ ನೋಡಿಕೊಳ್ಳುವರೆಂದು ಭಾವಿಸುವದುಂಟು. ಇದು ತಪ್ಪು ತಿಳುವಳಿಕೆಯು. ಈ ಕಾಲಕ್ಕೆ ಪ್ರತಿಯೊಂದು ರಾಷ್ಟ್ರದವರು ಔದ್ಯೋಗಿಕ ಒಲವಿನ ಶಿಕ್ಷಣ ಮತ್ತು ಔದ್ಯೋಗಿಕ ಶಿಕ್ಷಣವನ್ನು ಶಿಕ್ಷಣಕ್ರಮದ ಆರಂಭದಲ್ಲಿಯೇ ಅದಕ್ಕೆ ಜೋಡಿಸುವದುಂಟು. ಈ ದೃಷ್ಟಿಯಿಂದ ನಮ್ಮ ಅಭ್ಯಾಸ ಕ್ರಮದಲ್ಲಿ ತಕ್ಕ ಬದಲಾವಣೆಗಳಾಗತಕ್ಕದ್ದು.

## [ಕ] ಉಚ್ಚ ಶಿಕ್ಷಣ.

ನಮ್ಮ ಕರ್ನಾಟಕ ಪ್ರಾಂತದಲ್ಲಿ ಸಾಕಷ್ಟು ಕಾಲೇಜಗಳಿರುವುದಿಲ್ಲ. ಈಚೆಗೆ ಕೆ. ಎಲ್. ಈ. ಸೊಸಾಯಿಟಿಯುವರು ಬೆಳಗಾವಿಯಲ್ಲಿ ಒಂದು ಹೊಸ ಕಾಲೇಜವನ್ನು ಸ್ಥಾಪಿಸಿದ್ದು ಪ್ರಶಂಸನೀಯವಾಗಿದೆ. ಇದನ್ನು ನಾವು ಎಲ್ಲ ರೀತಿಯಿಂದಲೂ ಪೋಷಿಸಲಿಕ್ಕೆಬೇಕು. ಇದರಂತೆ ಬೇರೆ ಜಿಲ್ಹಾ ಸ್ಥಳಗಳಲ್ಲಿಯೂ ಹೆಚ್ಚಾಗಿ ಕಾಲೇಜುಗಳಾಗುವದು ಅತ್ಯವಶ್ಯವು. ನಾವು ವಾಙ್ಮಯಾತ್ಮಕ ಕಾಲೇಜುಗಳನ್ನು ಸ್ಥಾಪಿಸುವಲ್ಲದೆ ಔದ್ಯೋಗಿಕ ಶಾಲೆಗಳನ್ನೂ ಕಾಲೇಜುಗಳನ್ನೂ ಸ್ಥಾಪಿಸುವದು ಅತ್ಯಾವಶ್ಯಕವಾಗಿದೆ. ಇನ್ನು ಮೇಲೆ ಇವುಗಳ ಮಹತ್ವವು ಮತ್ತು ಅವಶ್ಯಕತೆಯು ಹೆಚ್ಚುತ್ತ ಹೋಗುವದು. ಸರಕಾರದವರೂ ಜನತೆಯೂ ಇತ್ತಕಡೆಗೆ ಲಕ್ಷಕೊಡಬೇಕು.

## [ಡ] ವಿಶ್ವವಿದ್ಯಾಲಯ.

ಈಪ್ರಕಾರ ಕಾಲೇಜುಗಳು ಹೆಚ್ಚಾದಲ್ಲಿ ಕರ್ನಾಟಕ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪರಿಸ್ಥಿತಿಯು ತಾನೇ ಉತ್ಪನ್ನವಾಗುವದು. ಈ ದೃಷ್ಟಿಯಿಂದ ಕರ್ನಾಟಕವು ಇತರ ಪ್ರಾಂತಗಳಿಗಿಂತಲೂ ಬಹಳ ಹಿಂದೆ ಉಳಿದಿರುತ್ತದೆ. ಆಂಧ್ರರು ತಮ್ಮ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ಅನೇಕ ವರ್ಷಗಳಾದವು. ತಮಿಳರು ತಮಗೋಸ್ಕರ ಅನ್ನಾಮಲೈ ಎಂಬಲ್ಲಿ ತಮ್ಮ ಸ್ವತಂತ್ರ ವಿಶ್ವವಿದ್ಯಾಲಯವನ್ನು ಸ್ಥಾಪಿಸಿಕೊಂಡರು. ನಮ್ಮ ಇಲಾಖೆಯಲ್ಲಿ ಮಹಾರಾಷ್ಟ್ರ ಪ್ರಾಂತದವರು ತಮ್ಮ ಸಲುವಾಗಿ ಒಂದು ವಿಶ್ವವಿದ್ಯಾಲಯವನ್ನು ನಿರ್ಮಾಣಮಾಡುವವರಲ್ಲಿದ್ದಾರೆ. ವಿಶ್ವವಿದ್ಯಾಲಯಗಳ ಉದ್ದೇಶವು ತಮ್ಮ ಪ್ರಾಂತದ ಸಂಸ್ಕೃತಿಯನ್ನು ಹೆಚ್ಚಿಸುವದೇ ಇರುತ್ತದೆ. ಹೀಗೆ ಕರ್ನಾಟಕ ವಿಶ್ವವಿದ್ಯಾಲಯವಾಗದೆ ಹೋದರೆ ಕರ್ನಾಟಕದ ಸಂಸ್ಕೃತಿಯು ಮತ್ತು ಬೆಳವಣಿಗೆಯು ಆಗುವ ಬಗೆ ಹೇಗೆ? ಆದರೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಸರಿಯಾದ ತಳಹದಿಯ ಮೇಲೆ ಕೂಡ್ರಿಸಿದರೆ, ಕಾಲೇಜುಗಳು ತಾವಾಗಿಯೇ ಹೆಚ್ಚಾಗುವವು. ಮತ್ತು ವಿಶ್ವವಿದ್ಯಾಲಯವೂ ಉಂಟಾಗುವ ಸ್ಥಿತಿಯು ಬರುವದು.

## ವಿದ್ಯಾರ್ಥಿಗಳಿಗೆ ಸಲಹೆ.

ನಮ್ಮಲ್ಲಿಯ ಶಿಕ್ಷಣ ಸಂಸ್ಥೆಯವರು ಶಿಕ್ಷಣಾಲಯಗಳನ್ನು ನಡಿಸುವದಲ್ಲದೆ ಈಗಿನ ಪರಿಸ್ಥಿತಿಗೆ ಅನುಸರಿಸಿ ಪಾಲಕರು ತಮ್ಮ ಮಕ್ಕಳಿಗೆ

ಯಾವ ತರದ ಶಿಕ್ಷಣ ಕೊಡಬೇಕು ಎಂಬದರ ಬಗ್ಗೆ ಸಲಹೆಗಾರರಾಗಿಯೂ ಕಾರ್ಯ ಮಾಡಬೇಕಾಗಿರುತ್ತದೆ. ಹಿಂದುಳಿದ ಸಮಾಜಗಳಲ್ಲಿ ಇದು ಅವಶ್ಯವು. ಇದಲ್ಲದೆ ವಿದ್ಯಾರ್ಥಿಗಳು ಶಿಕ್ಷಣವನ್ನು ಪೂರೈಸಿದ ಬಳಿಕ ಸಹ ಅವರ ಹಿತವನ್ನು ಅವರು ನೋಡುತ್ತಿರಬೇಕು. ಇದರಿಂದ ಶಿಕ್ಷಣ ಸಂಸ್ಥೆಗಳ ಚಾಲಕರಿಗೆ ತಮ್ಮ ಸಂಸ್ಥೆಗಳನ್ನು ಹ್ಯಾಗೆ ನಡಿಸಬೇಕು, ಅವುಗಳಲ್ಲಿ ಯಾವ ಬದಲಾವಣೆ ಮಾಡಬೇಕು ಎಂಬದು ತಿಳಿಯಲಿಕ್ಕೆ ಅನುಕೂಲವಾಗುವದು. ಈ ಪ್ರಕಾರ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯ ಬೋರ್ಡುಗಳೂ ಸಂಸ್ಥೆಗಳೂ ಕಾರ್ಯ ಮಾಡುತ್ತಲಿರುವವು.

## ಶಿಕ್ಷಣದ ಪ್ರಸಾರ.

ಕರ್ನಾಟಕವು ಈಗ ತುಂಡು ತುಂಡಾಗಿ ಹೋಗಿದ್ದರಿಂದ ಅದರಗೂಡ ವೀರಶೈವ ಸಮಾಜವೂ ಬೇರೆ ಬೇರೆ ಪ್ರಾಂತವಿಭಾಗಗಳಲ್ಲಿ ತುಂಡು ತುಂಡಾಗಿ ಹೋಗಿರುತ್ತದೆ. ಹೀಗೆ ತೊಂದರೆಯು ಇದ್ದದರಿಂದ ನಾವು ಅಕುಂಚಿತ ಕ್ಷೇತ್ರದಲ್ಲಿ ಹೆಚ್ಚು ನಿಬಿಡವಾಗಿ ಶಿಕ್ಷಣ ಕಾರ್ಯಗಳನ್ನು ನಡಿಸಿ ಈ ಕುಂದನ್ನು ಪರಿಹರಿಸಿಕೊಳ್ಳಬೇಕಾಗಿದೆ. ಎಂದರೆ ವಿದ್ಯಾ ಸಂಸ್ಥೆಗಳ ಸಂಖ್ಯೆಯನ್ನು ಹೆಚ್ಚಾಗಿ ಬೆಳಿಸುವದು, ಜನರಲ್ಲಿ ಹೆಚ್ಚಾಗಿ ವಿದ್ಯಾ ಪ್ರಸಾರ ಮಾಡುವದು, ಪರಸ್ಪರ ಸಂಘಟನೆ ಇವುಗಳಿಂದ ಸಂಕುಚಿತ ಕ್ಷೇತ್ರದ ಅನಾನುಕೂಲತೆಗಳನ್ನು ಪರಿಹರಿಸಿಕೊಳ್ಳಬೇಕಾಗಿದೆ. ಇದಲ್ಲದೆ ಈಗಿನ ಕಾಲದಲ್ಲಿ ಬರೇ ಸಂಖ್ಯೆಗೆ ಮಹತ್ವವಿಲ್ಲ. ಯೋಗ್ಯತೆಗೆ ಮಹತ್ವವಿದೆ. ಈ ದೃಷ್ಟಿಯನ್ನಿಟ್ಟುಕೊಂಡು ನಾವು ಶಿಕ್ಷಣ ಪ್ರಸಾರದಲ್ಲಿ ತೊಡಗಬೇಕು.

ಈ ಪ್ರಕಾರ ನಾನು ಶಿಕ್ಷಣ ವಿಷಯವಾಗಿ ನನಗೆ ಕಂಡುಬಂದ ಕೆಲ ಸಂಗತಿಗಳನ್ನು ತಮ್ಮ ವಿಚಾರಕ್ಕೋಸ್ಕರ ಇಟ್ಟಿದ್ದೇನೆ. ಇನ್ನು ಮೇಲೆ ನಾನು ಸಮಾಜದ ಆರ್ಥಿಕ ಮತ್ತು ಔದ್ಯೋಗಿಕ ಸುಧಾರಣೆಗಳನ್ನು ಕುರಿತು ಕೆಲವು ಸೂಚನೆಗಳನ್ನು ನಾನು ತಮ್ಮ ಮುಂದೆ ಇಡುತ್ತೇನೆ.

## ೨. ಔದ್ಯೋಗಿಕ ಮತ್ತು ಆರ್ಥಿಕಸುಧಾರಣೆ.

ಈಗ ಪ್ರತಿಯೊಂದು ರಾಷ್ಟ್ರಕ್ಕೆ ಸಾಂಪತ್ತಿಕ ಮತ್ತು ಔದ್ಯೋಗಿಕ ಅವನತಿಯು ಉತ್ಪನ್ನವಾಗಿರುತ್ತದೆ. ಈ ಸ್ಥಿತಿಯನ್ನು ದೂರಮಾಡಿಕೊಳ್ಳುವದರಲ್ಲಿಯೇ ಅವು ತೊಡಗಿರುತ್ತವೆ. ಇದರಂತೆಯೇ ನಮ್ಮ ಹಿಂದುಸ್ತಾನವು ಅ

ತ್ಯಂತ ಕಠಿಣ ಪರಿಸ್ಥಿತಿಗೆ ಬಂದಿರುತ್ತದೆ ಆದರಲ್ಲಿ ಕರ್ನಾಟಕವೂ ವೀರಶೈವ ಸಮಾಜವೂ ಅತ್ಯಂತ ಕನಿಕರ ಸ್ಥಿತಿಯನ್ನು ಹೊಂದಿರುತ್ತವೆ. ಯಾವ ನಮ್ಮ ದೇಶವು ಮೊದಲು ವ್ಯಾಪಾರೋದ್ಯೋಗಗಳಿಂದಲೂ ಕಲಾಕೌಶಲ್ಯ ಗಳಿಂದಲೂ ಕೂಡಿಕೊಂಡು ಶ್ರೀಮಂತಿಕೆಯಿಂದ ಮೆರೆಯುತ್ತಿತ್ತೋ ಆ ದೇಶವು ಈಗ ಅತ್ಯಂತ ದರಿದ್ರ ಸ್ಥಿತಿಯನ್ನು ಹೊಂದಿದೆ. ಆದರ ವ್ಯಾಪಾರೀ ಪಟ್ಟಣಗಳು ಮುರಿದು ಹೋಗಿವೆ. ಕೈಗಾರಿಕೆಗಳು ನಿಂತುಹೋಗಿವೆ. ಬಂದರಗಳು ನಾಶವಾಗಿವೆ. ಇಂಥ ಸ್ಥಿತಿಯಲ್ಲಿ ನಾವು ತಟಸ್ಥರಾಗಿ ಉಳಿದರೆ ಇದರ ಭಯಂಕರ ಪರಿಣಾಮಗಳನ್ನು ಅನೇಕ ತಲಾಂತರ ಗಳ ವರೆಗೆ ನಾವು ಉಣ್ಣಬೇಕಾಗುವದು. ಈ ವಿಷಯವಾಗಿ ತಾವು ಹೆಚ್ಚಾಗಿ ಈ ಮಹಾಸಭೆಯಲ್ಲಿ ಮನಸ್ಸು ಹಾಕುವಿರೆಂದು ಕೋರುತ್ತೇನೆ.

## ಔದ್ಯೋಗಿಕ ನಿರೀಕ್ಷಣೆ

ಈ ಕಾಲಕ್ಕೆ ನಮ್ಮ ಪ್ರಾಂತದ ಔದ್ಯೋಗಿಕ ನಿರೀಕ್ಷಣೆಯನ್ನು ಮಾಡುವದು ಅವಶ್ಯವೆಂದು ನನಗೆ ತೋರುತ್ತದೆ. ನಮ್ಮಲ್ಲಿ ನೇಕಾರಿಕೆ, ಬಣ್ಣಗಾರಿಕೆ, ನಕ್ಷಿಯ ಕೆಲಸ, ತಾಮ್ರದ ಕೆಲಸ, ರೇಶ್ಮೆಯ ಕೆಲಸ ಹೀಗೆ ಅನೇಕ ಉದ್ಯೋಗಗಳನ್ನು ಮಾಡುವವರು ಇನ್ನೂ ಬಹುಜನರಿದ್ದಾರೆ. ಇದರಂತೆಯೇ ಇನ್ನೂ ಅನೇಕ ಸಣ್ಣಪುಟ್ಟ ಉದ್ಯೋಗಗಳು ಪ್ರತಿಯೊಂದು ಜಿಲ್ಹೆಯಲ್ಲಿವೆ. ಅವುಗಳ ನಿಜಸ್ಥಿತಿಯನ್ನು ನಾವು ಪರೀಕ್ಷಿಸಿ ಅವುಗಳನ್ನು ಊರ್ಜಿತಸ್ಥಿತಿಗೆ ತರುವ ಯೋಜನೆಗಳನ್ನು ನಾವು ಕೈಕೊಳ್ಳತಕ್ಕದ್ದು.

## ಗೃಹಕೈಗಾರಿಕೆಗಳು.

ಮೇಲ್ಕಂಡ ಉದ್ಯೋಗಗಳಲ್ಲದೆ ಸಾಂಪ್ರತಕಾಲದಲ್ಲಿ ಉತ್ಪನ್ನವಾಗುತ್ತಿರುವ ಅನೇಕ ಆವಶ್ಯಕ ಜೀನಸುಗಳ ಮೂಲಕ ಅಸಂಖ್ಯ ಸಣ್ಣ ದೊಡ್ಡ ಉದ್ಯೋಗಗಳನ್ನು ಆರಂಭಿಸಬಹುದು. ಇಂಥ ಉದ್ಯೋಗಗಳನ್ನು ನಿರ್ಮಿಸುವದು ಶಕ್ಯವೆಂಬುದು ಅಲ್ಲಲ್ಲಿ ಈಗ ಏರ್ಪಾಡಾಗುತ್ತಿರುವ ಸ್ವದೇಶಿ ವಸ್ತುಪ್ರದರ್ಶನಗಳನ್ನು ನೋಡಿದರೆ ತಿಳಿದುಬರುವದು. ಇವುಗಳ ಜ್ಞಾನವನ್ನು ನಮ್ಮವರು ಮಾಡಿಕೊಂಡು ಅನೇಕ ಕೈಗಾರಿಕೆಗಳನ್ನು ನಮ್ಮ ಪ್ರಾಂತದಲ್ಲಿ ಉಂಟುಮಾಡಬಹುದಾಗಿದೆ.

## ಕಾರ್ಯಾಲಯಗಳು.

ನಮ್ಮಲ್ಲಿಯ ಶ್ರೀಮಂತರು ಸಮ್ಮಿಲಿತರಾಗಿ ಇಲ್ಲವೇ ಸ್ವಪ್ರಯತ್ನದಿಂದ ಬಟ್ಟೆ, ಎಣ್ಣೆ, ಕಾಗದ, ಸಕ್ಕರೆ, ಕಬ್ಬಿಣ ಸಾಮಾನುಗಳು ಇಂಥವುಗಳ ಬಗ್ಗೆ ದೊಡ್ಡ ದೊಡ್ಡ ಕಾರಖಾನೆಗಳನ್ನು ಪ್ರಾರಂಭಮಾಡಬಹುದು. ಇವುಗಳಿಗೆ ಬೇಕಾಗುವ ಹತ್ತಿ ಎಣ್ಣೆಯ ಕಾಳು ಬಿದರು, ಕಬ್ಬು ಕಬ್ಬಿಣ ಮುಂತಾದವುಗಳು ನಮ್ಮಲ್ಲಿ ವಿಪುಲವಾಗಿ ಸಿಗುತ್ತವೆ. ಈ ತರದ ಕಾರ್ಯಾಲಗಳು ಶಕ್ಯವೆಂಬದು ಆಯಾ ಪ್ರಾಂತಗಳಲ್ಲಿ ಇವು ಉದ್ಭವಿಸುತ್ತಿರುವದರ ಮೇಲಿಂದ ಕಂಡುಬರುವದು. ಆದರೆ ಇತ್ತ ಕಡೆಗೆ ಕರ್ನಾಟಕಸ್ತರು ಲಕ್ಷಹಾಕಿಲ್ಲ. ಇನ್ನುಮೇಲೆ ಈ ಬಗೆಯ ಕಾರ್ಯಾಲಯಗಳನ್ನು ಅವರು ಹೆಚ್ಚಿಸಬೇಕು.

## ಕಣಿಗಳು.

ಕರ್ನಾಟಕ ಪ್ರಾಂತದಲ್ಲಿ ಸ್ಲೇಟು, ಕಬ್ಬಿಣ, ಮ್ಯಾಂಗನೀಜ, ಬಂಗಾರ, ವಜ್ರ ಮುಂತಾದ ದ್ರವ್ಯಗಳು ಅಲ್ಲಲ್ಲಿ ಕಂಡು ಬರುತ್ತವೆ. ತಜ್ಞರಿಂದ ಭೂಗತ ಸ್ಥಿತಿಯನ್ನು ನಿರೀಕ್ಷಿಸಿದರೆ ಇನ್ನೂ ಅನೇಕ ಖನಿಜಗಳು ಸಿಗಬಹುದು. ಇವುಗಳ ಮೂಲಕ ಅನೇಕ ಕಣಿಗಳು ನಮ್ಮಲ್ಲಿ ಉತ್ಪನ್ನವಾಗಿ ಮಹತ್ವದ ಉದ್ಯೋಗಗಳು ಹೆಚ್ಚಾಗಬಹುದು.

## ವಿದ್ಯುತ್ತು.

ಕಾರಖಾನೆಗಳು ಲಾಭಕರವಾಗಿ ನಡೆಯಬೇಕಾದರೆ ಉಗೆ, ವಿದ್ಯುಲ್ಲತೆ ಪೆಟ್ರೋಲ ಇಂಥವುಗಳ ಪುರವಠೆಯುಬಹಳ ಅವಶ್ಯವಿದೆ. ಇಂಗ್ಲಂಡದಲ್ಲಿಯ ಕಲ್ಲಿದ್ದಲೇ ಅದರ ಕಾರಖಾನೆಗಳ ಊರ್ಜಿತಸ್ಥಿತಿಗೆ ಕಾರಣವಾಗಿದೆಂದು ಹೇಳಬಹುದು. ನಮ್ಮ ದೇಶದಲ್ಲಿ ಉತ್ತರಕ್ಕೆ ಕೊಲ್ಹಾಪುರ ಮತ್ತು ದಕ್ಷಿಣಕ್ಕೆ ನೀಲಗಿರಿಯ ವರೆಗೆ ದಟ್ಟಾದ ಅರಣ್ಯಭೂಮಿಯು ಇದೆ. ಇಲ್ಲಿಯ ಉರವಲವು ಕಾರಖಾನೆಗಳಿಗೆ ಸಹಾಯವಾಗಿದೆ. ಇದಲ್ಲದೆ ಇದರ ಎತ್ತರ ಪ್ರದೇಶಗಳಲ್ಲಿ ನೂರಿನ್ನೂರು ಇಂಚು ಮಳೆ ಬೀಳುತ್ತಿರುವದದರಿಂದ ಇವುಗಳ ಮೂಲಕ ಸಣ್ಣ ದೊಡ್ಡ ಜಲಪಾತಗಳನ್ನುನಿರ್ಮಿಸಿ ಅವುಗಳ ಮೂಲಕ ಹಗುರಾದ ದರದಿಂದ ವಿದ್ಯುಲ್ಲತೆಯ ಶಕ್ತಿಯನ್ನು ಏರ್ಪಡಿಸಿಕೊ

ಳ್ಳಬಹುದು. ಕರ್ನಾಟಕಕ್ಕೆ ಇರುವ ಈ ಅನುಕೂಲತೆಯು ಬೇರೆ ಯಾವ ಪ್ರಾಂತಗಳಲ್ಲಿಯೂ ಇದ್ದದ್ದು ಕಂಡುಬರಲಾರದು.

## ಕರ್ನಾಟಕವನ್ನು ಔದ್ಯೋಗಿಕ ಸೀಮೆಯನ್ನಾಗಿ ಮಾಡುವದು.

ಸಭ್ಯಗೃಹಸ್ಥರೇ ಒಟ್ಟಿಗೆ ನಾವು ಕರ್ನಾಟಕ ಪ್ರಾಂತವನ್ನು ಒಂದು ಔದ್ಯೋಗಿಕ ಸೀಮೆಯನ್ನಾಗಿ ಮಾಡಲು ಶಕ್ಯವಿರುತ್ತದೆಂದು ತೋರಿಸಲು ಮಾತ್ರ ನಾನು ಮೇಲಿನ ಉದಾಹರಣೆಗಳನ್ನು ಸ್ವಲ್ಪ ವಿಸ್ತಾರವಾಗಿ ಕೊಟ್ಟಿರುತ್ತೇನೆ. ನಾನು ಇಂಥ ವಿಷಯುಗಳಲ್ಲಿ ತಜ್ಞನಲ್ಲ. ಕರ್ನಾಟಕಸ್ತರು ತಜ್ಞ ಜನರಿಂದ ಇವುಗಳ ನಿರೀಕ್ಷಣೆಯುನ್ನು ಮಾಡಿಸಬೇಕು. ಒಂದು ವೇಳೆ ನಮ್ಮ ಜನರು ದೀರ್ಘಪ್ರಯತ್ನಿಗಳೂ ಚಟುವಟಿಕೆಯುವರೂ ಆದರೆ ಗುಜರಾಥದಲ್ಲಿ ಹ್ಯಾಗೆ ನೂರಾರು ದೊಡ್ಡ ದೊಡ್ಡ ಕಾರಖಾನೆಗಳು ಉತ್ಪನ್ನವಾಗಿರುವವೋ ಹಾಗೆಯೇ ನಮ್ಮ ದೇಶದ ಸ್ಥಿತಿಯೂ ಆಗಬಹುದಾಗಿದೆ.

## ಬಂಡವಲದ ಸಹಾಯ.

ಪ್ರತಿಯೊಂದು ಉದ್ಯೋಗಕ್ಕೆ ಮತ್ತು ವ್ಯವಹಾರಕ್ಕೆ ಬಂಡವಲದ ಅವಶ್ಯಕತೆಯು ಬಹಳ ಇರುತ್ತದೆ. ಕರ್ನಾಟಕ ಸೀಮೆಯಲ್ಲಿ ಬೆಲೆಯುಳ್ಳ ಜಿನಸುಗಳು ಬೇಕಾದಷ್ಟು ಬೆಳೆಯುವದರಿಂದ ಇಲ್ಲಿಯ ಉತ್ಪನ್ನವಾದರೂ ಕಡಿಮೆ ಇಲ್ಲ. ಆದರೆ ಇದರ ಉಪಯೋಗವನ್ನು ಮಾತ್ರ ನಾವು ಮಾಡಿಕೊಂಡಿಲ್ಲ. ಅಂದರೆ ನಮ್ಮಲ್ಲಿ ಬ್ಯಾಂಕಿಂಗ ಪದ್ಧತಿಯನ್ನು ಸ್ಥಾಪಿಸಿ ಅವುಗಳಿಂದ ನಾವು ಸಹಾಯ ಮಾಡಿಕೊಂಡಿಲ್ಲ. ಈ ಬ್ಯಾಂಕುಗಳ ಸ್ಥಾಪನೆಗೆ ಬೇಕಾಗುವ ವ್ಯಾಪಾರೀ ಪತ್ತನ್ನು ನಾವು ಹೆಚ್ಚಿಸಿಕೊಂಡಿಲ್ಲ. ಇದರಿಂದ ಧನಿಕರಾದ ಪರಪ್ರಾಂತೀಯರ ಬಲೆಯಲ್ಲಿ ಇಲ್ಲಿಯವರು ಸಿಕ್ಕಿದ್ದಾರೆ. ಇದರಿಂದ ಕರ್ನಾಟಕ ಸತ್ವಹರಣವು ಬಹಳ ದಿವಸಗಳಿಂದಲೂ ನಡೆಯುತ್ತ ಬಂದಿದೆ. ಇದರಿಂದ ಅದು ಹೆಚ್ಚು ಹೆಚ್ಚು ದರಿದ್ರ ದೇಶವಾಗುತ್ತ ನಡೆದದೆ. ಈ ಸ್ಥಿತಿಯನ್ನು ದೂರಮಾಡಲಿಕ್ಕೆ ಬ್ಯಾಂಕುಗಳನ್ನು ಸ್ಥಾಪಿಸಬೇಕು. ಮತ್ತು ಅದೇ ಪ್ರಕಾರ ಅನೇಕ ಬಗೆಯ ಇನಶೂರನ್ಸ ಸಂಘಗಳನ್ನೂ ಸ್ಥಾಪಿಸಬೇಕು. ಇವುಗಳಿಂದ ವ್ಯಾಪಾರಸ್ತರಿಗೆ ಬಹಳ ಸಹಾಯವಾಗದೆ ಇರದು.

## ಸಹಕಾರೀ ಸಂಘಗಳು.

ಸಹಕಾರೀ ಸಂಘಗಳು ಸಣ್ಣದೊಡ್ಡ ಉದ್ಯೋಗದವರಿಗೆ ಬಂಡವಲು ಪೂರೈಸಲಿಕ್ಕೆ ಬಹಳ ಅನುಕೂಲವುಳ್ಳವು. ಆದರೆ ನಮ್ಮ ದೇಶದ ಉದ್ಯೋಗಗಳಿಗೆ ಸಹಾಯವಾಗುವ ಪರಿಸ್ಥಿತಿಯು ಇವುಗಳಿಗೆ ಇನ್ನೂ ಬಂದಿಲ್ಲ. ಇವುಗಳಿಂದ ಈ ವರೆಗೆ ಧನೋತ್ಪಾದಕ ಕಾರ್ಯಗಳು ಆಗಿರುವದಿಲ್ಲ. ಮತ್ತು ಉದ್ಯೋಗಗಳಿಗೆ ಪೋಷಕವಾಗಿಲ್ಲ. ಇವು ಸಾಹುಕಾರರು ನಡಿಸುವ ವ್ಯವಹಾರವನ್ನು ತಾವು ಮಾಡಿ ಒಕ್ಕಲಿಗರಿಗೆ ಬರೆ ಬಡ್ಡೀದರವನ್ನು ಕಡಿಮೆ ಮಾಡುವ ಕಾರ್ಯದಲ್ಲಿ ಕೆಲಮಟ್ಟಿಗೆ ಸಹಾಯವಾಗಿರಬಹುದು. ಆದರೆ ಇಷ್ಟರಿಂದಲೇ ಸಾಂಪತ್ತಿಕ ಸ್ಥಿತಿಯು ಅಭಿವೃದ್ಧಿಯಾಗಲಾರದು. ಇವುಗಳ ಕಾರ್ಯಕ್ಷೇತ್ರವನ್ನು ಹೆಚ್ಚಿಗೆ ವಿಸ್ತೃತಪಡಿಸಬೇಕು.

## ಸುಶಿಕ್ಷಿತರು ಉದ್ಯೋಗಗಳನ್ನು ಕೈಕೊಳ್ಳುವದು.

ನಮ್ಮ ಜನರು ವ್ಯವಹಾರ ಉದ್ಯೋಗಳಲ್ಲಿ ಸಹ ಸರಕಾರದ ಸಹಾಯವನ್ನು ಅಪೇಕ್ಷಿಸುತ್ತಿರುವರು. ಸರಕಾರದವರು ಇವುಗಳ ಬಗ್ಗೆ ಅನುಕೂಲತೆಗಳನ್ನು ಮಾಡಿಕೊಡುವದು ಅವರ ಕರ್ತವ್ಯವಿರುತ್ತದೆ. ಆದರೆ ಅವರು ಹೊಸ ಕಾರಖಾನೆಗಳನ್ನು ಸಿದ್ಧಪಡಿಸಿ ಲಾಭಕರವಾಗಿ ಅವುಗಳನ್ನು ಮಾಡಿ ನಮ್ಮ ಕೈಗೆ ಆಯತವಾಗಿ ಅವನ್ನು ಒಪ್ಪಿಸಬೇಕೆಂದು ಯಾರಾದರೂ ಅಪೇಕ್ಷಿಸುತ್ತಿದ್ದರೆ ಇದು ಎಲ್ಲಿಯೂ ಶಕ್ಯವಾಗಿಲ್ಲ. ಇನ್ನು ಮೇಲೆ ಸುಶಿಕ್ಷಿತರು ನೌಕರಿಯ ಹಂಬಲವನ್ನು ಬಿಟ್ಟುಕೊಟ್ಟು ಉದ್ಯೋಗಗಳಲ್ಲಿ ತೊಡಗಬೇಕು. ಅದರಂತೆಯೇ ನಮ್ಮ ವ್ಯಾಪಾರಿಗಳೂ ದೇಶದ ಹೊಸ ಪರಿಸ್ಥಿತಿಗೆ ಅನುಸರಿಸಿ ತಮ್ಮ ಪದ್ಧತಿಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕು. ಈ ಪ್ರಕಾರ ವ್ಯಾಪಾರಸ್ಥರೂ ಸುಶಿಕ್ಷಿತರೂ ಪರಸ್ಪರ ಸಹಾಯದಿಂದ ಇಂಥ ಕಾರ್ಯಗಳನ್ನು ಆರಂಭಿಸುವ ಕಾಲವು ಬಂದಿದೆ.

## ಕರ್ನಾಟಕ ವ್ಯಾಪಾರೀಸಂಘ

ಕರ್ನಾಟಕದಲ್ಲಿ ಕರ್ನಾಟಕ ವ್ಯಾಪಾರೀಸಂಘವು ಇದೆ. ಇದರ ಉದ್ದೇಶವು ಕರ್ನಾಟಕ ವ್ಯಾಪಾರಿಗಳಲ್ಲಿ ಮತ್ತು ಉದ್ಯೋಗಸ್ಥರಲ್ಲಿ ಸುಸಂಘಟಿತತ್ವವನ್ನುಂಟುಮಾಡಿ ನಮ್ಮ ದೇಶದ ಆರ್ಥಿಕ ಸುಧಾರಣೆ

ಯನ್ನು ಮಾಡುವದು ಇರುತ್ತದೆ. ಆದರ ಉತ್ಸಾಹೀ ಸೆಕ್ರೆಟರಿಗಳು ಎಷ್ಟು ಶ್ರಮಪಟ್ಟರೂ ನಮ್ಮ ಸಮಾಜದವರು ಹೆಚ್ಚಿನ ಕಾರ್ಯಕ್ಕೆ ಮನಸ್ಸು ಹಾಕದ್ದರಿಂದ ಈ ಸಂಘದ ದ್ವಾರಾ ತಮ್ಮ ಹಿತವನ್ನು ಮಾಡಿ ಕೊಳ್ಳಲಾರದೆ ಇರುವರು. ಅವರು ಇನ್ನುಮೇಲೆ ಮಾರವಾಡಿ, ಯುರೋಪಿಯನ್ನ, ಗುಜರಾಥಿ ವ್ಯಾಪಾರೀಸಂಘಗಳು ನಡಿಸಿರುವ ಕಾರ್ಯಗಳ ಅನುಕರಣ ಮಾಡಿ ಮುಂದುವರಿಯಬೇಕೆಂದು ನನ್ನ ಸೂಚನೆ ಇದೆ.

## ಔದ್ಯೋಗಿಕ ಕಾಯದೆ

ಉದ್ಯೋಗ ವಿಷಯವು ಈಗಿನ ಆಡಳಿತೆಯಲ್ಲಿ ಕಾದಿಟ್ಟ ವಿಷಯ ವಲ್ಲ. ಅದು ಜನತೆಯ ಪ್ರತಿನಿಧಿಗಳಿಗೆ ಒಪ್ಪಿಸಿದ ವಿಷಯವಾಗಿರುತ್ತದೆ. ಅದ್ದರಿಂದ ನಮ್ಮ ಪ್ರತಿನಿಧಿಗಳು ಕೌನ್ಸಿಲಿನಲ್ಲಿ ದೇಶದ ಪರಿಸ್ಥಿತಿಗೆ ಅನುಸರಿಸಿ ತಕ್ಕ ಕಾಯದೆಗಳನ್ನು ಮುಂದೆ ತಂದು ಉದ್ಯೋಗಗಳಿಗೆ ಸಹಾಯ ಸೌಕರ್ಯಗಳನ್ನು ಉಂಟುಮಾಡಬಹುದಾಗಿದೆ. ಈ ತರದ ಯೋಜನೆಗಳು ಮದ್ರಾಸ, ಬಂಗಾಲ ಮುಂತಾದ ಇಲಾಖೆಗಳಲ್ಲಿ ಆಗಿವೆ. ಈ ಪ್ರಕಾರ ನಮ್ಮ ಇಲಾಖೆಯಲ್ಲಿಯೂ ತಕ್ಕ ಕಾಯದೆಯನ್ನು ಮಾಡುವದು ಅವಶ್ಯವದೆ. ಇನ್ನು ಮೇಲೆ ಕಾಯದೆಕೌನ್ಸಿಲುಗಳಲ್ಲಿ ಕಾಯದೇ ತಜ್ಞರಿರುವದಕ್ಕಿಂತಲೂ ವ್ಯಾಪಾರೀ ತಜ್ಞರಿರುವದು ಹೆಚ್ಚಿಗೆ ಉಪಯುಕ್ತವಾಗಿದೆ. ಕಾಯದೆಪಂಡಿತರಿಗೆ ವ್ಯಾಪಾರೋದ್ಯೋಗಗಳ ಹೊಲಬು ಏನೂ ತಿಳಿಯಲಾರದು. ಈಗ ಪ್ರತಿಯೊಂದು ದೇಶದಲ್ಲಿ ವ್ಯಾಪಾರೀ ತಜ್ಞರ ಮಹತ್ವವು ರಾಜಕಾರಣದಲ್ಲಿ ಹೆಚ್ಚುತ್ತ ನಡೆದಿದೆ.

## ಮುಂಬಯಿ ಔದ್ಯೋಗಿಕ ಖಾತೆ

ಔದ್ಯೋಗಿಕ ಪ್ರಶ್ನಗಳ ಬಗ್ಗೆ ತಕ್ಕ ಸಲಹೆಗಳನ್ನು ಕೊಡಲು ಔದ್ಯೋಗಿಕ ಖಾತೆ ಇರುವದು ಅವಶ್ಯವು. ಆದರೆ ಮುಂಬಯಿ ಇಲಾಖೆಯಲ್ಲಿ ಇದನ್ನು ತೆಗೆದು ಹಾಕಬೇಕೆಂದು ಥಾಮಸ ಕಮಿಟಿಯವರು ಸೂಚಿಸಿದ್ದರು. ಆದರೆ ಆ ಪ್ರಕಾರ ಸರಕಾರದವರು ಮಾಡಬಾರದೆಂದು ನಿರ್ಣಯಿಸಿದ್ದು ಸ್ತುತ್ಯವಾಗಿದೆ. ಆದರೆ ಈ ಖಾತೆಯಲ್ಲಿ ಇನ್ನೂ ಸಾಕಷ್ಟು ಜನ ತಜ್ಞರನ್ನು ನಿಯಮಿಸಿ ಇದರ ಕಾರ್ಯಕ್ಷೇತ್ರವನ್ನೂ ಇದರ ಉಪಯುಕ್ತತೆಯನ್ನೂ ಹೆಚ್ಚಾಗಿ ಬೆಳಿಸುವದು ಅವಶ್ಯವದೆ.

## ಔದ್ಯೋಗಿಕ ಸ್ಕಾಲರಶಿಪ್ಪುಗಳು

ಸರಕಾರದವರು ಔದ್ಯೋಗಿಕ ವಿಷಯುಗಳಲ್ಲಿ ತಜ್ಞತೆಯನ್ನು ಹೊಂದಲಿಕ್ಕೆ ಆದಷ್ಟು ಹೆಚ್ಚಿಗೆ ವಿದ್ಯಾರ್ಥಿಗಳನ್ನು ಪರದೇಶಕ್ಕೆ ಕಳಿಸು ವದು ಅವಶ್ಯವದೆ. ಈ ಒಗ್ಗೆ ಅವರು ಸಾಕಷ್ಟು ಲಕ್ಷವನ್ನು ಪೂರೈಸಿಲ್ಲ ನಮ್ಮಲ್ಲಿ ಇವುಗಳನ್ನು ಕಲಿಸತಕ್ಕ ಯೋಗ್ಯ ಶಾಲೆಗಳಿರುವದಿಲ್ಲ. ಕರ್ನಾ ಟಕದಲ್ಲಿ ಮಿ. ಕೊಕಟನೂರರವರಂಥ ಒಬ್ಬಿಬ್ಬರು ಇದ್ದ ಮೂಲಕ ದೇಶ ದಲ್ಲಿ ಹ್ಯಾಗೆ ದ್ರವ್ಯೋತ್ಪಾದಕ ಕಾರ್ಯಗಳು ನಡೆಯುತ್ತವೆಂಬದನ್ನು ವಿಚಾರ ಮಾಡಬೇಕು. ಟೆಕ್ಸಟಾಯಿಲ್, ಡಾಯಿಂಗ, ಎಲೆಕ್ಟ್ರಿಕಲ್ ಎಂಜಿನೀಯರಿಂಗ, ಕೆಮಿಸ್ಟ್ರಿ, ಮಾಯನಿಂಗ, ಇವೇ ಮೊದಲಾದವುಗಳು ನಮ್ಮ ಕರ್ನಾಟಕಕ್ಕೆ ಬಹಳ ಮಹತ್ವವಾದವುಗಳು. ಇವುಗಳ ತಜ್ಞರ ಸಂಖ್ಯೆಯು ನಮ್ಮಲ್ಲಿ ಹೆಚ್ಚಾಗಬೇಕು.

## ಕೆರೆ ಕಾಲಿವೆಗಳು

ಕರ್ನಾಟಕವು ಸಾಂಪತ್ತಿಕ ಸ್ಥಿತಿಯಲ್ಲಿ ಸುಧಾರಿಸಬೇಕಾದರೆ ಅವರ ಒಕ್ಕಲತನವು ಸುಧಾರಿಸುವದು ಅವಶ್ಯವು. ಸರಕಾರದವರು ಈ ವಿಷಯವಾಗಿ ಒಂದು ಖಾತೆಯನ್ನು ಏರ್ಪಡಿಸಿ ವಿಶೇಷ ಹಣ ಖರ್ಚು ಮಾಡುತ್ತಿದ್ದಾರೆ. ಇದಕ್ಕೆ ಅರ್ಧ ಶತಮಾನ ಕಾಲವಾದರೂ ಕೂಡ ನಮ್ಮ ಒಕ್ಕಲಿಗರ ಸ್ಥಿತಿಯು ಏನೂ ಸುಧಾರಿಸಿಲ್ಲ. ಅವರು ದಾರಿದ್ರ್ಯದಿಂದ ಸ್ವಲ್ಪವೂ ಮುಕ್ತರಾಗಿಲ್ಲ. ನಮ್ಮ ಪ್ರಾಂತದ ಒಕ್ಕಲಿಗರ ಸ್ಥಿತಿಯನ್ನು ಸುಧಾರಿಸಬೇಕಾದರೆ ನಮ್ಮ ಪ್ರಾಂತದಲ್ಲಿ ಕೆರೆ ಕಾಲುವೆಗಳನ್ನು ಕಟ್ಟಿಸು ವದು, ಬಂಡಿಂಗ ಈ ಬಗೆಯಾಗಿ ನೀರಿನ ಅನೇಕ ಸೌಕರ್ಯಗಳನ್ನುಂ ಟುಮಾಡುವದು ಅವಶ್ಯವದೆ. ಈ ಸಾಧನೆಗಳನ್ನು ಕಲ್ಪಿಸದ ಹೊರ್ತು ಒಕ್ಕಲಿಗರ ಈಗಿನ ದೈನ್ಯಾವಸ್ಥೆಯು ಎಂದೂ ಹೋಗಲಾರದು.

## ಒಕ್ಕಲುತನ ಸಂಶೋಧನ.

ಒಕ್ಕಲುತನವನ್ನು ಯೋಗ್ಯ ತಜ್ಞರ ಮೂಲಕ ಸಂಶೋಧಿಸಲ್ಪ ಡದ ವಿನಹ ಅದು ಸಮರ್ಪಕವಾಗಿ ನಡೆಯಲಾರದು. ಇದು ಅವಶ್ಯ ವೆಂದು ಈಚೆಗೆ ತೋರಿಬಂದದ್ದರಿಂದ ಸರಕಾರದವರು ಈಗ ಮನಸ್ಸು ಹಾಕಹತ್ತಿರುವರು. ಆದರೆ ಇವುಗಳ ಪರಿಣಾಮಗಳು ಜನರ ದೃಷ್ಟಿಗೆ

ಬೀಳಬೇಕಾದರೆ ಎಷ್ಟು ಕಾಲಾವಧಿಯಾಗುವದೋ ದೇವರೇ ಬಲ್ಲ. ಒಟ್ಟಿಗೆ ಸರಕಾರದವರ ಅಜಾಗ್ರತೆಯ ಮೂಲಕ ಒಕ್ಕಲಿಗರಿಗೆ ಆಗಬೇಕಾದಷ್ಟು ಸುಧಾರಣೆಯ ಕಾರ್ಯಗಳು ಆಗಿಲ್ಲ. ಅದರೆ ಈಗಿನ ಪರಿಸ್ಥಿತಿಯಲ್ಲಿ ನನಗೆ ತೋರುವದೇನಂದರೆ ನಮ್ಮ ಒಕ್ಕಲಿಗರನ್ನು ಮನೆ ಕೈಗಾರಿಕೆಗಳಿಗೆ ತೊಡಗಿಸಿ ಒಕ್ಕಲುತನದ ಮೇಲೆ ಬಿದ್ದ ಭಾರವನ್ನು ಕಡಿಮೆ ಮಾಡುವದರಿಂದ ಅವರ ಸಾಂಪತ್ತಿಕ ಸ್ಥಿತಿಯು ಕೆಲಮಟ್ಟಿಗಾದರೂ ಸುಧಾರಿಸಬಹುದು. ಈ ಕಡೆಗೆ ಅವರ ಲಕ್ಷವನ್ನು ನಾವು ಹೊರಳಿಸಬೇಕು.

## ಔದ್ಯೋಗಿಕ ಒಲವಿನ ಶಿಕ್ಷಣ.

ಈಗ ನಮ್ಮ ಪ್ರಾಥಮಿಕ ಶಾಲೆಗಳಲ್ಲಿ ಒಕ್ಕಲುತನ ಒಲವಿನ ಶಿಕ್ಷಣವನ್ನು ಕೊಡುವದುಂಟು. ಅದರಂತೆಯೇ ಔದ್ಯೋಗಿಕ ಒಲವಿನ ಶಿಕ್ಷಣವನ್ನು ಇವುಗಳಲ್ಲಿ ಪ್ರಾರಂಭಿಸುವದು ಬಹಳ ಮಹತ್ವದ್ದೆಂದು ನನಗೆ ತೋರುತ್ತದೆ. ವಿಜಾಪುರ ಮುನಿಸಿಪಲ್ಲ ಶಾಲೆಗಳಲ್ಲಿ ಸ್ವಲ್ಪ ಇಂಗ್ಲಿಷ ಶಿಕ್ಷಣದೊಡನೆ ಈ ಔದ್ಯೋಗಿಕ ಒಲವಿನ ಶಿಕ್ಷಣವನ್ನು ಪ್ರಾರಂಭಿಸಿದ್ದು ಅದು ಉಪಯೋಗವುಳ್ಳದೆಂದು ನನ್ನ ಅನುಭವಕ್ಕೆ ಬಂದಿದೆ. ಇಂಥ ಒಲವಿನ ಶಿಕ್ಷಣವು ಚಿಕ್ಕಂದಿನಲ್ಲಿಯೇ ಇತರ ಅಭ್ಯಾಸದೊಡನೆ ನಡೆಯಬೇಕು. ಶಿಕ್ಷಣಕ್ರಮದಿಂದ ಭಿನ್ನವಾಗಿರಬಾರದು. ಯಾಕಂದರೆ ದೊಡ್ಡವರಾದ ಮೇಲೆ ಔದ್ಯೋಗಿಕ ಶಿಕ್ಷಣವು ಚನ್ನಾಗಿ ಹತ್ತುವದಿಲ್ಲ.

## ಔದ್ಯೋಗಿಕ ಶಾಲೆಗಳು

ಉಚ್ಚ ಪ್ರಾಥಮಿಕ ಶಾಲೆಗಳಿಗೆ ಮತ್ತು ಹಾಯಸ್ಕೂಲುಗಳಿಗೆ ಹೊಂದಿ ಔದ್ಯೋಗಿಕ ಶಾಲೆಗಳು ಇರತಕ್ಕದ್ದು. ಹಣದ ದೃಷ್ಟಿಯಿಂದ ಇವುಗಳಿಂದ ಸ್ವಲ್ಪ ಹಾನಿಯಾದರೂ ಚಿಂತೆಯಿಲ್ಲ, ಇವುಗಳು ಅವಶ್ಯವಾಗಿ ಬೇಕು. ಬೋರ್ಡುಗಳೂ ನಮ್ಮ ಶಿಕ್ಷಣಸಂಸ್ಥೆಗಳೂ ಈ ಬಗ್ಗೆ ವಿಶೇಷ ಲಕ್ಷ್ಯ ಕೊಡತಕ್ಕದ್ದು ಮತ್ತು ಯೋಗ್ಯ ಅಭ್ಯಾಸಕ್ರಮಗಳನ್ನು ಏರ್ಪಡಿಸತಕ್ಕದ್ದು ಧನಿಕರು ಇಂಥವುಗಳಿಗೋಸ್ಕರ ಸಹಾಯ ಮಾಡಬೇಕು. ಇವುಗಳಲ್ಲಿ ಡ್ರಾಯಿಂಗ ಸಾಯನ್ಸ ಕೈಗಾರಿಕೆ ಇವುಗಳನ್ನು ಸೇರಿಸಲೇಬೇಕು.

## ಉಚ್ಚತರದ ಔದ್ಯೋಗಿಕ ಶಾಲೆಗಳು

ಪ್ರತಿಯೊಂದು ದೊಡ್ಡ ಪಟ್ಟಣದಲ್ಲಿ ಇವು ಅವಶ್ಯವಾಗಿ ಇರಲೇ ಬೇಕು. ಸಣ್ಣ ಸಣ್ಣ ಕೈಗಾರಿಕೆಗಳು ಅನೇಕವಿದ್ದು ಅವುಗಳನ್ನು ಇಲ್ಲಿ ಕಲಿಸತಕ್ಕದ್ದು ಆದರೆ ಇವುಗಳಲ್ಲಿ ಶಿಕ್ಷಣವು ಅತ್ಯುತ್ತಮ ತರ ದಿಂದ ನಡೆಯುವ ವ್ಯವಸ್ಥೆ ಇರಬೇಕು. ಮುಂಬಯಿ ಕರ್ನಾಟಕದಲ್ಲಿ ಎಂಟುಹತ್ತು ಲೋಕಲ ಅಥಾರಟಿಗಳಿದ್ದು ಅವೆಲ್ಲವೂ ಒಕ್ಕಟ್ಟಿನಿಂದ ಇಂಥ ಔದ್ಯೋಗಿಕ ಶಾಲೆಗಳನ್ನು ಅಲ್ಲಲ್ಲಿ ಏರ್ಪಡಿಸಬಹುದು.

## ಸರ್. ವಿಶ್ವೇಶ್ವರಯ್ಯನವರ ಔದ್ಯೋಗಿಕ ವರದಿ

ಮುಂಬಯಿ ಸರಕಾರದವರು ಔದ್ಯೋಗಿಕ ಶಿಕ್ಷಣವನ್ನು ಹ್ಯಾಗೆ ಪ್ರಾರಂಭಿಸಬೇಕೆಂಬದನ್ನು ಗೊತ್ತುಪಡಿಸಲು ಕೆಲವು ವರ್ಷಗಳ ಹಿಂದೆ ಸರ ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಕಮೀಟಿ ಯನ್ನು ನೇಮಿಸಿದ್ದರು. ಅವರ ವರದಿಯಲ್ಲಿ ನಾನು ಮೇಲೆ ಉಲ್ಲೇ ಖಿಸಿದ ಪ್ರಕಾರ ಒಂದು ವಿಸ್ತೃತವಾದ ಯೋಜನೆಯನ್ನು ಸೂಚಿಸಿರು ವರು ಆದರೆ ಸರಕಾರದವರು ಅದನ್ನು ಪ್ರಯೋಗದಲ್ಲಿ ತರಲು ಏನೂ ಪ್ರಯ ತ್ನಿಸಿಲ್ಲ. ನಮ್ಮ ಕೌನ್ಸಿಲು ಮೆಂಬರರು ಸರಕಾರವನ್ನು ಈ ವಿಷಯದ ಬಗ್ಗೆ ಎಚ್ಚರಿಸಬೇಕೆಂದು ನನ್ನ ಸೂಚನೆ.

## ಔದ್ಯೋಗಿಕ ವಿದ್ಯಾರ್ಥಿ ವೇತನಗಳು

ನಮ್ಮಲ್ಲಿ ಶಿರಸಂಗಿಫಂಡು ಅಲ್ಲದೆ ಆಯಾ ಜಿಲ್ಹೆಗಳಲ್ಲಿ ಅನೇಕ ವಿದ್ಯಾವರ್ಧಕಫಂಡುಗಳು ಅವೆ. ಅವುಗಳು ಇನ್ನುಮೇಲೆ ತಮ್ಮ ಹಣವನ್ನು ಬರೆ ವಾಙ್ಮಯ ಶಿಕ್ಷಣಕ್ಕೋಸ್ಕರ ವಿನಿಯೋಗಿಸದೆ ಔದ್ಯೋಗಿಕ ಶಿಕ್ಷಣದ ಸಲುವಾಗಿ ಬಹು ದೊಡ್ಡ ಭಾಗವನ್ನು ವಿನಿಯೋಗಿಸಹತ್ತಬೇಕು.

ಸಭ್ಯಗೃಹಸ್ಥರೇ ಈ ವರೆಗೆ ನಾನು ಮುನಸಿಪಾಲಿಟಿಗಳು, ಲೋಕಲ ಬೋರ್ಡುಗಳು ಶಿಕ್ಷಣ ಸಂಸ್ಥೆಗಳು ಔದ್ಯೋಗಿಕ ಶಿಕ್ಷಣದ ಸಲುವಾಗಿ ಮಾಡಬಹುದಾದ ಕಾರ್ಯಗಳನ್ನು ಸ್ವಲ್ಪ ವಿಸ್ತೃತವಾಗಿ ಉಲ್ಲೇಖಿಸಿ ದೆನು. ಈ ಯಾವತ್ತು ಸಂಸ್ಥೆಗಳು ಈ ಕಾಲಕ್ಕೆ ಅತ್ಯವಶ್ಯವಾಗಿರುವ ಔದ್ಯೋಗಿಕ ಶಿಕ್ಷಣವನ್ನು ಪ್ರಾರಂಭಿಸುವದು ಶಕ್ಯವೆಂದು ತೋರಿಸುವದಷ್ಟೇ

ನನ್ನ ಉದ್ದೇಶವದೆ. ಸರಕಾರದ ಸಹಾಯುವನ್ನು ಆವರು ನಿರೀಕ್ಷಿಸುವ ಅವಶ್ಯವಿಲ್ಲ. ಇನ್ನುಮೇಲೆ ಸರಕಾರದವರು ಮಾಡಬೇಕಾದ ಕೆಲ ಆವಶ್ಯಕ ಸಂಗತಿಗಳನ್ನು ಸೂಚಿಸಿ, ನಾನು ಈ ವಿಷಯುವನ್ನು ಮುಗಿಸುತ್ತೇನೆ.

## ಯೋಗ್ಯ ಬಂದರದ ಅವಶ್ಯಕತೆ

ಒಂದು ಪ್ರಾಂತದ ಸಾಂಪತ್ತಿಕ ಅಭಿವೃದ್ಧಿಯಾಗಬೇಕಾದರೆ ಯೋಗ್ಯ ಬಂದರದ ಅವಶ್ಯಕತೆಯು ಬಹಳ ಇರುತ್ತದೆ. ಕರ್ನಾಟಕಕ್ಕೋಸ್ಕರ ಗೋವೆ ಬಂದರವು ಏರ್ಪಡಿಸಲ್ಪಟ್ಟಿದೆ ಎಂದು ಸರಕಾರದವರು ಹೇಳುವದುಂಟು. ಆದರೆ ಇದು ಪರಕೀಯರ ರಾಜ್ಯದಲ್ಲಿ ಇರುವದರಿಂದ ವ್ಯಾಪಾರದ ಅಭಿವೃದ್ಧಿಗೆ ಬಹಳ ತೊಂದರೆಗಳಿರುತ್ತವೆ. ಕರ್ನಾಟಕಕ್ಕೋಸ್ಕರ ಕಾರವಾರ ಮತ್ತು ಭಟಕಳ ಬಂದರಗಳು ಬಹು ಉಪಯೋಗವುಳ್ಳವು ಇವೆ. ಇವು ಪುರಾತನ ಕಾಲದಿಂದಲೂ ದಕ್ಷಿಣ ಹಿಂದುಸ್ತಾನಕ್ಕೆ ಮಹತ್ವದ ಬಂದರ ಸ್ಥಾನಗಳಿರುತ್ತವೆ. ಇವುಗಳನ್ನು ಸರಕಾರದವರು ಸುಧಾರಿಸತಕ್ಕದ್ದು.

## ಯೋಗ್ಯ ರೇಲ್ವೆಮಾರ್ಗಗಳು

ಕರ್ನಾಟಕದಲ್ಲಿ ಬೇರೆ ಬೇರೆ ಭಾಗಗಳನ್ನು ಪರಸ್ಪರ ಸಂಬಂಧಪಡಿಸುವಂತೆ ಯೋಗ್ಯ ರೇಲ್ವೆಗಳು ಇಲ್ಲ. ಕೊಡಗು, ಮಂಗಳೂರು ನಿಜಾಮುಇಲಾಖೆ ಇವುಗಳಿಗೂ ಕರ್ನಾಟಕದ ಬಂದರ ಮತ್ತು ಆದರ ಕೇಂದ್ರಸ್ಥಾನಗಳಿಗೂ ಏನೂ ಸಂಬಂಧವಿಲ್ಲದಂತೆ ಆಗಿದೆ. ಈ ಅಡಚಣಿಯನ್ನು ದೂರಮಾಡತಕ್ಕದ್ದು. ಅದರಂತೆ ಮಂಗಳೂರಿನಿಂದ ಗೋವೆಯುವರೆಗೂ ಸಮುದ್ರತೀರದ ಗುಂಟ ಒಂದು ರೇಲ್ವೆಯ ಅವಶ್ಯಕತೆಯು ಬಹಳವಿದೆ. ಯೋಗ್ಯ ರೇಲ್ವೆಗಳು ಇರದಿದ್ದರೆ ವ್ಯಾಪಾರವು ಅಭಿವೃದ್ಧಿಸ್ಥಿತಿಗೆ ಬರಲಾರದು.

## ಸರಕಾರದ ಧೋರಣಗಳು

ದೇಶದ ಸಾಂಪತ್ತಿಕ ಅಭಿವೃದ್ಧಿಯ ಕಾರ್ಯಗಳಲ್ಲಿ ಸರಕಾರದವರು ಕೈಕೊಳ್ಳುವ ಧೋರಣ ಮತ್ತು ಕಲ್ಪಿಸುವ ನಾನಾತರದ ನಿರ್ಬಂಧನೆಗಳು ಬಹಳ ಅಂಶದಿಂದ ಪ್ರತಿರೋಧ ಮಾಡುತ್ತಲಿವೆ. ಉದಾ:—ರೇಲ್ವೆ

ದರಗಳಲ್ಲಿ ಪಕ್ಷಪಾತಗಳೂ ಆಯಾತ ಮತ್ತು ನಿರ್ಗತ ಮಾಲಿನ ಮೇಲಿನ ದರಗಳೂ ನಾಣ್ಯದ ಬೆಲೆಯಲ್ಲಿ ಹೆಚ್ಚುಕಡಿಮೆ ಮಾಡುವ ಯೋಜನೆಗಳು, ಪರದೇಶ ವ್ಯಾಪಾರದಲ್ಲಿ ಸಂರಕ್ಷಕ ನಿರ್ಬಂಧಗಳೂ ಸ್ಥಾನಿಕ ಉದ್ಯೋಗಗಳಿಗೆ ಸಂರಕ್ಷಣೆಯನ್ನು ಕೊಡದೆ ಇರುವದೂ ಇವೇ ಮೊದಲಾದವುಗಳು ಅನೇಕವಾಗಿವೆ. ಇವುಗಳಿಂದ ಹಿಂದುಸ್ತಾನದ ವ್ಯಾಪಾರಕ್ಕೆ ಅನೇಕ ಆತಂಕಗಳು ಉಂಟಾಗಿರುತ್ತವೆ. ಇವುಗಳನ್ನು ನಾನು ಇಲ್ಲಿ ಹೆಚ್ಚಿಗೆ ವಿವರಿಸುವಷ್ಟು ವೇಳೆ ಇಲ್ಲ. ಆದರೆ ನಾನು ಈ ವರೆಗೆ ಜನರು ಮಾಡತಕ್ಕ ಕರ್ತವ್ಯಗಳಿಗೆ ವಿಶೇಷ ಪ್ರಾಮುಖ್ಯತೆಯನ್ನು ಕೊಟ್ಟು ಅವುಗಳನ್ನೇ ಮುಂದೆ ಇಟ್ಟಿದ್ದೇವೆ. ಹೀಗೆ ನಾವು ಮಾಡ ತಕ್ಕದ್ದನ್ನು ಮಾಡಿ ಇದರಲ್ಲಿ ನಮಗೆ ಬಂದ ಆತಂಕಗಳನ್ನು ನಿವಾ ರಣೆ ಮಾಡಲಿಕ್ಕೆ ಆವಶ್ಯಕ ಉಪಾಯಗಳನ್ನು ನಾವು ಯೋಜಿಸಲೇಬೇ ಕೆಂದು ನನ್ನ ಅಭಿಪ್ರಾಯವು.

## ೩. ಕರ್ನಾಟಕ ಏಕೀಕರಣ.

ನಾನು ಈ ವರೆಗೆ ವಿವರಿಸಿದ ವಿಷಯಗಳಲ್ಲಿ ಅನೇಕವುಗಳು ಸರ ಕಾರಕ್ಕೆ ಸಂಬಂಧಪಟ್ಟವುಗಳಿದ್ದು ಅವುಗಳ ಮೇಲಿಂದ ಕರ್ನಾಟಕಸ್ಥರ ಹಿತವು ಎಷ್ಟು ದುರ್ಲಕ್ಷಿಸಲ್ಪಡುತ್ತ ಬಂದಿದೆಂಬದು ಗೊತ್ತಾಗದೆ ಇರದು. ಸರಕಾರದವರು ಕರ್ನಾಟಕಸ್ಥರ ಸಾಂಪತ್ತಿಕ, ಶೈಕ್ಷಣಿಕ ಮೊದಲಾದ ವಿಷಯಗಳ ಸಲುವಾಗಿ ಯಾವ ಸೌಕರ್ಯಗಳನ್ನು ಒದಗಿಸಿಕೊಟ್ಟಿಲ್ಲ. ಈ ಸ್ಥಿತಿಯು ಮದ್ರಾಸ ಮುಂಬಯಿ ಇಲಾಖೆಗಳು ಕೊಡಗುಪ್ರಾಂತ ಈ ಯಾವತ್ತು ಪ್ರಾಂತಗಳಲ್ಲಿ ಇದ್ದದ್ದು ಕಂಡುಬರುತ್ತದೆ. ಆದ್ದರಿಂದ ಕರ್ನಾ ಟಕವನ್ನು ಒಂದು ಸ್ವತಂತ್ರ ಪ್ರಾಂತಿಕ ವಿಭಾಗವನ್ನಾಗಿ ಮಾಡದ ವಿನಃ ಅದರ ಅಭ್ಯುದಯವು ಆಗಲಾರದೆಂದು ಪ್ರತಿಯೊಬ್ಬ ಕರ್ನಾಟಕಸ್ತನಿಗೆ ಮನವರಿಕೆಯಾಗಿದೆ. ಒಟ್ಟಿಗೆ ಕರ್ನಾಟಕ ಏಕೀಕರಣ ವಿಷಯವು ಅವ ನಿಗೆ ಒಂದು ಜೀವಾಳದ ಪ್ರಶ್ನೆಯಾಗಿದೆ.

ಇನ್ನು ಮುಂದೆ ಹೊಸ ರಾಜ್ಯವ್ಯವಸ್ಥೆಯಲ್ಲಿ ಪ್ರಾಂತಿಕ ಪೂರ್ಣ ಸ್ವಾಯತ್ತತೆಯು ಕೊಡಲ್ಪಡುವದೆಂದು ಸರಕಾರದಿಂದ ಅಭಿವಚನವು ಕೊಡಲ್ಪಟ್ಟಿದೆ. ಈ ಪಕ್ಷದಲ್ಲಿ ಅಲ್ಪಸಂಖ್ಯಾಕರಾದ ಕರ್ನಾಟಕಸ್ಥರು ಈ ಎಲ್ಲ ಇಲಾಖೆಗಳಲ್ಲಿ ಹಿಂದೆ ದಬ್ಬಲ್ಪಡುವರೆಂದು ಅವರಿಗೆ ಸಂಪೂರ್ಣ

ಭೀತಿಯುತ್ಪನ್ನವಾಗಿದೆ. ಅವರ ಪ್ರಾಂತದ ಹಿತಗಳು ಬಹು ಸಂಖ್ಯಾಕರಾದ ಉಳಿದವರಿಂದ ಏನೂ ನೋಡಲ್ಪಡಲಾರವೆಂದು ಅವರಿಗೆ ತೋರಹತ್ತಿವೆ. ಈ ಸ್ಥಿತಿಯಲ್ಲಿ ಕರ್ನಾಟಕ ಏಕೀಕರಣ ಪ್ರಶ್ನವು ಮತ್ತಿಷ್ಟ ಪ್ರಬಲವಾಗಿ ಅವರ ಮುಂದೆ ಬಂದುನಿಂತಿದೆ. ಹಿಂದುಸ್ತಾನದಲ್ಲಿ ಭಾಷಾನುಗುಣ ಪ್ರಾಂತರಚನೆಗೋಸ್ಕರ ಮೊದಲು ಚರ್ಚೆಯನ್ನು ಎತ್ತಿದವರು ಕರ್ನಾಟಕಸ್ಥರು. ಈ ಬಗ್ಗೆ ಅವರು ಎಂದಿನಿಂದಲೂ ತಮ್ಮ ಬೇಡಿಕೆಗಳನ್ನು ಮುಂದುವರಿಸುತ್ತ ಬಂದಿದ್ದಾರೆ. ಈ ವಿಷಯವು ಆಯಾ ಕೌನ್ಸಿಲುಗಳಲ್ಲಿ ಚರ್ಚಿಸಲ್ಪಟ್ಟಿದ್ದಾಗಿದೆ. ಆಗ ಅವರ ಅಧಿಕೃತ ಜವಾಬುದಾರೀ ಪ್ರತಿನಿಧಿಗಳು ಈ ಅವರ ಬೇಡಿಕೆಗೆ ಪೂರ್ಣ ಬೆಂಬಲ ಕೊಟ್ಟಿರುವರು. ಹೀಗಿದ್ದರೂ ಸರಕಾರದವರು ಜನರಲ್ಲಿ ಈ ಬಗ್ಗೆ ಚಳವಳಿ ಏನೂ ಇಲ್ಲೆಂದು ಅಭಿಪ್ರಾಯಪಟ್ಟಿದ್ದು ಅವರು ಹೀಗೆ ಬುದ್ಧ್ಯಾ ಅಂಥ ವೃತ್ತಿಯನ್ನು ಸ್ವೀಕರಿಸುವರೆಂದು ತಿಳಿಯಲು ಆಸ್ಪದವಾಗಿದೆ. ಸಾಯಮನ್ನ ಕಮಿಶನ್, ವರ್ತುಳಪರಿಷತ್ತು ಇವುಗಳ ಮುಂದೆ ಕರ್ನಾಟಕಸ್ತರು ಏಕಮುಖವಾಗಿ ತನ್ನ ಬೇಡಿಕೆಯನ್ನು ಮುಂದೆ ಇಟ್ಟರು. ಹೀಗಿದ್ದರೂ ಯಾವ ಸಿಂಧ, ಓಡಿಸಾ ಪ್ರಾಂತಗಳು ತಮ್ಮ ಚಳವಳಿಯನ್ನು ಈಚೆಗೆ ಮಾತ್ರ ನಡಿಸಿದ್ದರೂ ಕೂಡ ಅವುಗಳಿಗೆ ಸ್ವತಂತ್ರ ಪ್ರಾಂತವು ದೊರೆಯಬೇಕು. ಆದರೆ ಕರ್ನಾಟಕಕ್ಕೆ ದೊರೆಯಬಾರದು. ಎಂಬುದು ಪ್ರತಿಯೊಬ್ಬ ಕರ್ನಾಟಕಸ್ಥನ ಮನಸ್ಸಿಗೆ ಅತ್ಯಂತ ನೋವನ್ನುಂಟುಮಾಡಿರುತ್ತದೆ. ಸಿಂಧ ಪ್ರಾಂತಕ್ಕಿಂತಲೂ ಕರ್ನಾಟಕಕ್ಕೆ ಹೆಚ್ಚಿನ ಹಕ್ಕುಗಳು ಮತ್ತು ಹೆಚ್ಚಿಗೆ ಅನುಕೂಲ ಪರಿಸ್ಥಿತಿಯು ಇವೆ. ಹೀಗಿದ್ದರೂ ಕರ್ನಾಟಕಕ್ಕೆ ಸ್ವತಂತ್ರಪ್ರಾಂತ ದೊರೆಯದೆ ಇದ್ದದ್ದು ಅತ್ಯಂತ ಅನ್ಯಾಯವಾಗಿರುತ್ತದೆ.

ಸಭ್ಯಗ್ರಹಸ್ಥರೇ ಈ ಕಾಲಕ್ಕೆ ಪ್ರತಿಯೊಬ್ಬ ಕನ್ನಡಿಗನು ಎಚ್ಚತ್ತು ಈ ಕಾರ್ಯದ ಬಗ್ಗೆ ಮತ್ತಿಷ್ಟು ಬಲವಾದ ರೀತಿಯಿಂದ ಚಳವಳಿಯನ್ನು ಮಾಡುವ ಪ್ರಸಂಗವು ಒದಗಿರುತ್ತದೆ. ಕರ್ನಾಟಕಸ್ಥರಿಗೆ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕಾದರೆ ಅವರಿಗೆ ತಮ್ಮ ಶಿಕ್ಷಣದ ಅಭಿವೃದ್ಧಿಯನ್ನು ಮಾಡಿಕೊಳ್ಳಬೇಕಾದರೆ, ತಮ್ಮ ನಾಡು ಕೆರೆ ಕಾಲುವೆಗಳಿಂದ ತುಂಬಿಕೊಂಡು ಸಮೃದ್ಧ ಸ್ಥಿತಿಯನ್ನು ಹೊಂದಬೇಕಾದರೆ ಕರ್ನಾಟಕದ ವ್ಯಾಪಾರವು ಹೆಚ್ಚಿ ಅದರ ಬಂದರಗಳು ಬೆಳೆಯಬೇಕಾದರೆ ಅವರ ಪ್ರಾಂತದ ಸ್ವಾಯತ್ತತೆಯು ಅವರಿಗೆ ದೊರೆಯದ ವಿನಹಾ ಅವರ

ಉದ್ದೇಶಗಳು ಎಂದಿಗೂ ಸಫಲವಾಗಲಾರವು. ಈ ವಿಷಯವಾಗಿ ಕರ್ನಾಟಕದಲ್ಲಿ ಐಕಮತ್ಯವಿದೆ. ಕರ್ನಾಟಕಸ್ತನು ಬೇಕಾದ ಜಾತಿಯವನಿರಲಿ ಬೇಕಾದ ಪಕ್ಷದವನಿರಲಿ ಅವನು ಕರ್ನಾಟಕ ಏಕೀಕರಣವನ್ನು ಪ್ರಬಲವಾಗಿ ಬಯಸುತ್ತಾನೆ. ಹೀಗಿದ್ದರೂ ಸರಕಾರದವರು ಇದನ್ನು ದುರ್ಲಕ್ಷಿಸುತ್ತಿರುವದನ್ನು ಪ್ರತಿಯೊಬ್ಬ ಕರ್ನಾಟಕಸ್ಥನು ನಿಷೇಧಿಸದೆ ಇರನು.

## ಚಳವಳಿಯ ಅವಶ್ಯಕತೆ.

ಇನ್ನು ಮುಂದೆ ಕರ್ನಾಟಕಸ್ಥರು ಒಂದು ಕ್ಷಣವನ್ನೂ ಬಿಡದೆ ಎಡೆಬಿಡದೆ ಈ ಚಳವಳಿಯನ್ನು ನಡಿಸುವ ಪ್ರಸಂಗವು ಒದಗಿದೆ. ಇದಕ್ಕೋಸ್ಕರ ಅವರು ಸಿದ್ಧರಾಗಬೇಕು. ಇಡೀ ಹಿಂದುಸ್ತಾನವು ಮತ್ತು ಇಂಗ್ಲಂಡವು ಕರ್ನಾಟಕದ ಈ ಬೇಡಿಕೆಯನ್ನು ತಿಳಿಯಬೇಕಾಗಿದೆ. ಇದಕ್ಕೋಸ್ಕರ ಮತ್ತು ಕರ್ನಾಟಕದ ಹಿತರಕ್ಷಣೆಗೋಸ್ಕರ ಇಂಗ್ಲಿಷ ಭಾಷೆಯಲ್ಲಿ ಒಂದು ಸ್ವತಂತ್ರ ಪತ್ರಿಕೆಯನ್ನು ಹೊರಡಿಸುವದು ಅವಶ್ಯವೆಂದು ನನಗೆ ತೋರುತ್ತದೆ. ಇದರ ಸಿದ್ಧತೆಯನ್ನು ಕರ್ನಾಟಕಸ್ತರು ಬೇಗನೆ ಮಾಡಬೇಕು.

## ಪಾರ್ಲಮೆಂಟರಿ ಜಾಯಿಂಟ ಕಮಿಟಿಯ ಮುಂದೆ ಸಾಕ್ಷಿ.

ಈಗ ಇಂಗ್ಲಂಡಿನಲ್ಲಿ ಪಾರ್ಲಮೆಂಟಿನ ಜಾಯಿಂಟ ಸಿಲೆಕ್ಟ ಕಮಿಟಿಯು ನಡೆದಿರುತ್ತದೆ. ಕರ್ನಾಟಕಸ್ತರು ತಮ್ಮ ಬೇಡಿಕೆಯನ್ನು ಇವರ ಮುಂದೆ ಇಡಬೇಕು.

## ಸುಧಾರಣಾ ಕಾಯದೆಯಲ್ಲಿ ತಕ್ಕ ಯೋಜನೆ.

ಹೊಸ ಸುಧಾರಣಾ ಕಾಯದೆಯಲ್ಲಿ ಭಾಷಾನುಗುಣ ಪ್ರಾಂತ ರಚನೆಗೆ ಮುಂದೆ ಇಂಬುದೊರೆಯುವಂತೆ ಅದರ ಯೋಜನೆ ಇರತಕ್ಕದ್ದು. ಅಂದರೆ ಹೊಸ ಪ್ರಾಂತಗಳನ್ನು ಸ್ಥಾಪಲಿಕ್ಕೆ ಬರುವಂತೆ ಅದರಲ್ಲಿ ತಕ್ಕ ನಿಯಮಗಳು ಇರತಕ್ಕದ್ದು. ಹೀಗಾಗುವಂತೆ ಪ್ರಯತ್ನಿಸಬೇಕು.

## ಮುಂದಿನ ಚಳವಳಿಗೋಸ್ಕರ ಸಿದ್ಧತೆ

ಸುಧಾರಣೆಯ ಹೊಸ ಯೋಜನೆಯು ಪ್ರಕಟವಾದ ಕೂಡಲೆ ಅದರಲ್ಲಿ ನಿರ್ದೇಶಮಾಡಿದ ಪ್ರಕಾರ ಕರ್ನಾಟಕಸ್ಥರು ತಮ್ಮ ಪ್ರಾಂತನಿರ್ಮಾಣವ

ಸಲುವಾಗಿ ತೀವ್ರತರವಾದ ಚಳವಳಿಯನ್ನು ಆರಂಭ ಮಾಡುವದಕ್ಕೋಸ್ಕರ ಸನ್ನದ್ಧರಾಗತಕ್ಕದ್ದು.

## ಉಪಚಳವಳಿಗಳು

ಈ ಪ್ರಕಾರ ಚಳವಳಿ ಮಾಡುವ ಪ್ರಸಂಗದಲ್ಲಿ ಇದಕ್ಕೆ ಸಹಾಯಕವಾಗುವಂಥ ಕೆಲವು ಉಪಚಳವಳಿಗಳು ಇದ್ದು ಅವುಗಳಲ್ಲಿಯೂ ನಾವು ಈಗಿನಿಂದಲೇ ತೊಡಗಬೇಕು. ಉದಾಹರಣಾರ್ಥವಾಗಿ (ಅ) ಕರ್ನಾಟಕದ ಯಾವ ಪ್ರದೇಶದಲ್ಲಿ ಸರಕಾರೀ ದಪ್ತರಗಳಲ್ಲಿ ಅಥವಾ ಶಾಲೆಗಳಲ್ಲಿ ಕನ್ನಡಭಾಷೆಗೆ ಸ್ಥಾನವಿಲ್ಲವೋ ಅಲ್ಲಿ ಆ ತರದ ಅನುಕೂಲತೆಗಳನ್ನು ದೊರಕಿಸುವ ಸಲುವಾಗಿ ನಾವು ಪ್ರಯತ್ನಿಸಹತ್ತಬೇಕು. (ಬ) ಕರ್ನಾಟಕ ಪ್ರಾಂತಗಳು ಪರಸ್ಪರ ಹೆಚ್ಚಿಗೆ ಸಂಬಂಧಪಡುವಂತೆ ತಕ್ಕ ರೇಲ್ವೆಮಾರ್ಗಗಳನ್ನು ಕಲ್ಪಿಸಲು ಪ್ರಯತ್ನಮಾಡಹತ್ತಬೇಕು. (ಕ) ಬೇರೆ ಭಾಷೆಗಳನ್ನಾಡುವ ಜಿಲ್ಹೆಗಳಲ್ಲಿ ಕನ್ನಡ ಹಳ್ಳಿಗಳು ಸೇರಿದ್ದರೆ ಅವುಗಳನ್ನು ಆ ಭಾಗಗಳಿಂದ ವಿಂಗಡಿಸಿ ಸಮೀಪದ ಕನ್ನಡ ಜಿಲ್ಹೆಗಳಿಗೆ ಕೂಡಿಸಬೇಕು. ಈ ಬಗೆಯ ಪ್ರಯತ್ನಗಳಿಗೆ ನಾವು ಈಗಲೇ ತೊಡಗಬೇಕು. ಇತ್ಯಾದಿ.

## ಕರ್ನಾಟಕ ಏಕೀಕರಣ ಸಂಘದ ಪುನರ್ಘಟನೆ.

ನಮ್ಮ ಪ್ರಾಂತದಲ್ಲಿರುವ ಎಲ್ಲ ಪಕ್ಷಗಳ ಪ್ರತಿನಿಧಿಗಳುಳ್ಳ ಒಂದು ಮಧ್ಯವರ್ತಿ ಯೋಗ್ಯ ಏಕೀಕರಣ ಸಂಘವನ್ನು ಪುನಃ ಸ್ಥಾಪಿಸಿ ಮೇಲ್ಕಂಡ ಎಲ್ಲ ಕಾರ್ಯಗಳನ್ನು ಹೆಚ್ಚಿಗೆ ಬಲವಾಗಿ ಸಾಗಿಸಬೇಕು. ಮತ್ತು ಈ ಮುಖ್ಯ ಸಂಘಕ್ಕೆ ಜೋಡಿಸಿ ಎಲ್ಲ ಕಡೆಗೆ ಉಪಸಂಘಗಳನ್ನು ಸ್ಥಾಪಿಸಬೇಕು.

ಈಪ್ರಕಾರ ನನಗೆ ತೋರಿದ ಕೆಲವು ಸೂಚನೆಗಳನ್ನು ತಮ್ಮ ಮುಂದೆ ಇಟ್ಟದ್ದೇನೆ.

## ೪. ವೀರಶೈವ ವಾಙ್ಮಯ.

## ಗ್ರಂಥಾಲಯಗಳ ಸ್ಥಾಪನೆ

ವೀರಶೈವ ವಾಙ್ಮಯವು ಬಹು ವಿಸ್ತಾರವಾದದ್ದದೆ. ಅದು ಇನ್ನೂ ಸಂಶೋಧಿಸಲ್ಪಟ್ಟಿಲ್ಲ ಆದರ ಅಸಂಖ್ಯಾತ ಹಸ್ತಲಿಖಿತ ಗ್ರಂಥಗಳು

ಇಡೀ ದೇಶದಲ್ಲಿ ಇನ್ನೂ ಸಿಗುತ್ತಿದ್ದು ಅವುಗಳನ್ನು ಒತ್ತಟ್ಟಿಗೆ ಶೇಖರಿಸುವ ಕಾರ್ಯವನ್ನು ನಾವು ಆರಂಭಿಸಿಲ್ಲ. ಇದನ್ನು ನಾವು ಕೈಕೊಳ್ಳತಕ್ಕದ್ದು. ಇಲ್ಲದಿದ್ದರೆ ನಮ್ಮ ಮಹತ್ವದ ವಾಙ್ಮಯವು ತೀವ್ರ ನಾಶವಾಗಿ ಹೋಗುವ ಸಂಭವವದೆ. ಅದೇ ಪ್ರಕಾರ ಎಲ್ಲ ಕಡೆಗೂ ಸಿಗುವ ಶಿಲಾಲೇಖಗಳ ಪ್ರಿಂಟುಗಳನ್ನು ಮಾಡಿಸಿ ಸಂಗ್ರಹಿಸಬೇಕು. ಇಂಥ ಗ್ರಂಥಾಲಯಗಳು ವಾಙ್ಮಯ ಶೋಧಕರಿಗೆ ಬಹಳ ಸಹಾಯವಾಗುವವು.

## ಗ್ರಂಥಪ್ರಕಾಶನ.

ಈ ಪ್ರಕಾರ ಸಂಗ್ರಹ ಕಾರ್ಯವನ್ನಲ್ಲದೆ ಈ ಗ್ರಂಥಗಳನ್ನು ಆದಷ್ಟು ತೀವ್ರವಾಗಿ ಪ್ರಸಿದ್ಧಿಸುವ ಕಾರ್ಯವನ್ನೂ ನಾವು ಕೈಕೊಳ್ಳಬೇಕು. ಇದರಂತೆಯೇ ಅವುಗಳ ಭಾವವು ಜನರಿಗೆ ತಿಳಿಯುವಂತೆ ಆಧುನಿಕ ಭಾಷೆಯಲ್ಲಿ ಸುಲಭ ಗ್ರಂಥಗಳನ್ನೂ ರಚಿಸಹತ್ತಬೇಕು.

## ಗ್ರಂಥ ಪ್ರಕಾಶನಕ್ಕೆ ಸಹಾಯ.

ಈ ತರದ ಕಾರ್ಯಮಾಡುವಂಥವರಿಗೆ ಸಮಾಜದವರು ಉತ್ತೇಜನಕೊಟ್ಟು ವಿಶೇಷ ಸಹಾಯ ಮಾಡುತ್ತಿರಬೇಕು.

## ಸರಕಾರ ಮತ್ತು ವಿಶ್ವವಿದ್ಯಾಲಯಗಳ ಕರ್ತವ್ಯ

ನಮ್ಮ ದೇಶದಲ್ಲಿ ಪುರಾತನ ವಸ್ತು ಸಂಶೋಧನ ಖಾತೆಯು ಇರುತ್ತದೆ. ಸರಕಾರದವರು ಈ ಖಾತೆಯ ಮೂಲಕ ಮೇಲ್ಕಂಡ ಕಾರ್ಯಗಳನ್ನು ನಡಿಸಿದ್ದಾದರೆ ಇವು ಸರಿಯಾಗಿ ಒಂದೇಸವನೆ ನಡೆಯಲಿಕ್ಕೆ ಅನುಕೂಲವಾಗುತ್ತದೆ.. ಹಾಗೆಯೇ ವಿಶ್ವವಿದ್ಯಾಲಯಗಳೂ ಈ ಕಾರ್ಯವನ್ನು ಕೈಕೊಳ್ಳಬೇಕು.

ಈ ಪ್ರಕಾರ ನಮ್ಮ ವಾಙ್ಮಯವನ್ನು ಹೊರಪಡಿಸಿದರೆ ವೀರಶೈವ ಮತದ ನಿಜತತ್ವಗಳು ಹೊರಬೀಳಹತ್ತುವವು.

## ೫. ಗ್ರಾಮ ಸೇವೆಯ ಕಾರ್ಯಗಳು.

ನಾವು ಮಾಡತಕ್ಕ ಕಾರ್ಯಗಳಲ್ಲಿ "ಸಮಾಜ ಸೇವೆ"ಗೆ ಮಹತ್ತರ ಸ್ಥಾನವನ್ನು ಕೊಡುವದು ಅವಶ್ಯವದೆ. ಈ ತರದ ಕಾರ್ಯಗಳು ಅನೇಕ

ವಿದ್ದು ಅವುಗಳಲ್ಲಿ ಹಳ್ಳಿಗಳ ಸುಧಾರಣೆಯೇ ಮುಖ್ಯವಾದುದು. ನಮ್ಮ ರಾಷ್ಟ್ರದ ಮತ್ತು ನಮ್ಮ ವೀರಶೈವ ಸಮಾಜದ ನಿಜವಾದ ಏಳ್ಗೆಯು ಇದರ ಮೇಲೆಯೇ ಅವಲಂಬಿಸಿರುತ್ತದೆ. ಆದರೆ ಈ ಕಾರ್ಯವನ್ನು ಮಾಡು ವವರು ಮಾತ್ರ ಬಹಳ ವಿರಳ. ಯಾಕಂದರೆ ಇದಕ್ಕೆ ಬಹಳ ಶ್ರಮ ಹತ್ತು ತ್ತದೆ. ಎಡೆಬಿಡದೆ ಪ್ರಯತ್ನ ಮಾಡಬೇಕಾಗುತ್ತದೆ. ಮತ್ತು ಮಾಡಿದ ಶ್ರಮಕ್ಕೆ ಫಲವು ಕೂಡಲೇ ಸಿಗುವದಿಲ್ಲ. ದೀನರೊಡನೆ ಅಜ್ಞಾನಿಗಳೊ ಡನೆ ಬೆರೆದು ಅವರೇ ತಾನಾಗಿ ದುಡಿಯುಬೇಕಾಗುತ್ತದೆ. ಅಂದ ಬಳಿಕ ಇಂಥ ಕಾರ್ಯಗಳಿಗೆ ಜನರು ಹ್ಯಾಗೆ ಒಪ್ಪಬೇಕು?

ಆದರೆ ನಮ್ಮ ನಾಡಿನ ದೃಢತೆಯನ್ನು ನೆಲೆಗೊಳಿಸಬೇಕಾದರೆ ಇಂಥ ಗ್ರಾಮಸೇವಾ ಕಾರ್ಯಗಳನ್ನು ನಾವು ಮೊದಲು ಪ್ರಾರಂಭಿಸಲೇಬೇಕು ನಮ್ಮ ದೇಶದ ಸಾಂಪತ್ತಿಕ ಅಭಿವೃದ್ಧಿಯು ಗ್ರಾಮಗಳ ಸಾಂಪತ್ತಿಕ ಅಭಿವೃಧ್ಧಿಯ ಮೇಲೆ ಅವಲಂಬಿಸಿರುತ್ತದೆ. ಈಗ ದೊಡ್ಡ ದೊಡ್ಡ ಪಟ್ಟಣಗಳು ಎಲ್ಲ ಕಡೆಗೂ ಹೆಚ್ಚೆಚ್ಚು ಪ್ರಬಲವಾಗುತ್ತ ನಡೆದದ್ದು ತೋರಬಹುದು. ಅವು ಆಧುನಿಕ ಕಾಲದ ವಿಲಾಸದ ಸೌಕರ್ಯಗಳಿಂದ ಶೋಭಾಯಮಾನವಾಗಿ ಕಂಗೊಳಿಸುತ್ತಿರಬಹುದು. ಆದರೆ ಎಲ್ಲಿಯ ವರೆಗೆ ನಮ್ಮ ಗ್ರಾಮಗಳಲ್ಲಿ ದಾರಿದ್ರ್ಯವು ಮತ್ತು ದುರವಸ್ಥೆಯು ಮನೆಮಾಡಿಕೊಂಡಿರುತ್ತವೋ ಅಲ್ಲಿಯ ವರೆಗೆ ಈ ಪಟ್ಟಣಗಳ ಹೊಳಪು ಯಾವ ಕ್ಷಣಕ್ಕೆ ಹಾರಿಹೋಗುವದೆಂಬ ದನ್ನು ಹೇಳಲಿಕ್ಕೆ ಬರಲಾರದು.

ಸಭ್ಯಗೃಹಸ್ಥರೇ, ಉತ್ತಮಕಾಯದೆ ಅಥವಾ ಉತ್ತಮ ರಾಜ್ಯ ಯೋಜನೆ ಇವುಗಳ ಮೇಲೆ ದೇಶದ ಅಭ್ಯುದಯವು ನೆಲಸಿಲ್ಲ. ಇಂಥ ಯೋಜನೆಗಳು ಅತ್ಯುತ್ತಮವಾಗಿರಬಹುದು. ಆದರೆ ಇಷ್ಟರ ಮೇಲಿಂದ ಬಹುಜನ ಸಮಾಜವು ಸುಖಿಯಾಗಿದೆ ಎಂದು ಹೇಳಲಿಕ್ಕೆ ಬರಲಾರದು. ಉದಾಹರಣಾರ್ಥವಾಗಿ ನಮ್ಮ ದೇಶವನ್ನೇ ತೆಗೆದುಕೊಳ್ಳಿರಿ. ಹಿಂದುಸ್ಥಾನದ ಮೇಲೆ ಪರಚಕ್ರಗಳ ಭಯಂಕರ ದಾಳಿಗಳು ಆಗಿಂದಾಗ್ಗೆ ಹಾಯ್ದು ಹೋದವು. ಇಲ್ಲಿ ಸ್ಥಿರತರವಾದ ರಾಜ್ಯಗಳು ಬಹಳ ದಿವಸ ಬಾಳದೆ ನಾಶವಾಗಿ ಹೋಗುತ್ತಿದ್ದವು. ಆದರೆ ನಮ್ಮ ಗ್ರಾಮಗಳಲ್ಲಿಯ ಗ್ರಾಮ ವ್ಯವಸ್ಥೆಯು ಚನ್ನಾಗಿ ಇಪ್ಪದರಿಂದ ನಮ್ಮ ದೇಶದಲ್ಲಿ ಸುಸ್ಥಿತಿಯು ಇತ್ತು. ಆದರ ಸಂಸ್ಕೃತಿಯು ಅಚ್ಚಳಿಯದೆ ಉಳಿಯಿತು. ಆದರೆ ಬ್ರಿಟಿಶರ ಶಾಂತವಾದ ಆಳಿಕೆಯಲ್ಲಿ ಆಧುನಿಕ ಸುಧಾರಣೆಯ ಹೊಳಪು ದೇಶದ

ಲ್ಲೆಲ್ಲ ಪಸರಿಸಿದ್ದರೂ ನಮ್ಮ ಗ್ರಾಮಗಳ ಸ್ಥಿತಿಯು ಸುಧಾರಿಸಿರುತ್ತ ದೆಂದು ಹೇಳಲಿಕ್ಕೆ ಬರಲಾರದು. ಬ್ರಿಟಿಶರ ಕಟ್ಟಳೆ ಕಾನೂನುಗಳ ಮೂ ಲಕ ಅವುಗಳ ವ್ಯವಸ್ಥೆಯು ಕೆಟ್ಟಿರುತ್ತದೆ. ದಾರಿದ್ರ್ಯವು ಮನೆಮಾಡಿ ಕೊಂಡಿರುತ್ತದೆ. ಜನರ ಆಯುಷ್ಯಕ್ರಮವು ಅತ್ಯಂತ ಹೀನತರದ್ದಾಗಿರು ತ್ತದೆ. ಇನ್ನೂ ಜನರು ಅತ್ಯಂತ ಅಜ್ಞಾನಾವಸ್ಥೆಯಲ್ಲಿರುವರು. ಧರ್ಮ ಮೂಢತೆಯು ಇನ್ನೂ ಪ್ರಬಲವಾಗಿ ವಾಸಿಸಿರುತ್ತದೆ. ಈ ಸ್ಥಿತಿಯ ಮೂಲಕ ಒಳಜಗಳಗಳು ಹೆಚ್ಚುತ್ತಲಿವೆ. ಆದ್ದರಿಂದ ದೇಶದ ಯಾವ ಮಹತ್ವದ ಕಾರ್ಯವೂ ಸುಸಂಘಟಿತವಾಗಿ ನಾಡಿನಲ್ಲಿ ನಡೆಯದಂತೆ ಆಗಿದೆ. ಇಷ್ಟೇ ಅಲ್ಲ, ಉತ್ತಮ ಜನರು ಹಳ್ಳಿಗಳಲ್ಲಿ ವಾಸಿಸುವದು ಸಹ ಕಷ್ಟವಿರುತ್ತದೆಂಬ ಅಭಿಪ್ರಾಯಪಡುತ್ತಲಿದ್ದಾರೆ. ಸುಶಿಕ್ಷಿತರೂ, ಶ್ರೀಮಂ ತರೂ, ಹಳ್ಳಿಗಳನ್ನು ಬಿಟ್ಟುಕೊಟ್ಟು ಪಟ್ಟಣವಾಸಿಗಳಾಗಹತ್ತಿರುವರು. ಇದಕ್ಕಿಂತಲೂ ದೇಶಕ್ಕೆ ಬರಬಹುದಾದ ಹೆಚ್ಚಿನ ದುರವಸ್ಥೆಯು ಯಾವ ದಿರುವದು? ಯಾವ ನಮ್ಮ ಗ್ರಾಮಗಳಲ್ಲಿ ಮೊದಲು ಉತ್ತಮ ಕವಿ ಗಳೂ, ಕಲಾಕೋವಿದರೂ, ಧರ್ಮಸುಧಾರಕರೂ, ಸಾಧುಸತ್ಪುರುಷರೂ, ಹುಟ್ಟಿ ಹಿಂದುಸ್ಥಾನದ ಕೀರ್ತಿಯನ್ನು ಬೆಳಗಿದರೋ ಅಂಥ ಗ್ರಾಮಗ ಳಲ್ಲಿ ಈ ಬಗೆಯ ಸ್ಥಿತಿಯಾಗುವದು ಎಷ್ಟು ಶೋಚನೀಯವು? ಇದನ್ನು ನೀವೇ ವಿಚಾರಿಸಿರಿ. ವೀರಶೈವರ ಜನಸಂಖ್ಯೆಯು ಗ್ರಾಮಗಳಲ್ಲಿಯೇ ಹೆಚ್ಚಾಗಿರುತ್ತದೆ. ಅವರು ಗ್ರಾಮವಾಸಿಗಳು. ಆದ್ದರಿಂದ ಹಳ್ಳಿಗಳ ಸುಧಾ ರಣೆಯನ್ನು ಕೈಕೊಳ್ಳುವ ಮಹತ್ವದ ಭಾರವು ಅವರ ಮೇಲೆಯೇ ಇರುತ್ತದೆ.

ಗ್ರಾಮಸುಧಾರಣಾ ಕಾರ್ಯಗಳನ್ನು ಈಚೆಗೆ ಅನೇಕರು ಕೈಕೊ ಳ್ಳಹತ್ತಿರುವದು ಸುಚಿನ್ಹವು. ನಮ್ಮ ಇಲಾಖೆಯಲ್ಲಿ ಹೋದ ಮೂರು ವರ್ಷಗಳಿಂದ ಈ ಬಗ್ಗೆ ಮಹತ್ವದ ಪರಿಷತ್ತುಗಳು ಕೂಡುತ್ತ ಬಂದಿವೆ ಮತ್ತು ಮುಂಬಯಿ ಪುಣೆ ಪಟ್ಟಣಗಳಲ್ಲಿ ಕೆಲವು ಮಹತ್ವದ ಸಮಾಜಸೇವಾ ಸಂಘಗಳೂ ಇರುತ್ತವೆ. ಅವುಗಳ ಅನುಕರಣವನ್ನು ನಾವು ಮಾಡ ಬೇಕು. ಗ್ರಾಮಗಳಲ್ಲಿ ನಾವು ಮಾಡಬಹುದಾದ ಕೆಲವು ಅವಶ್ಯಕ ಕಾರ್ಯಗಳನ್ನು ಅತಿ ಸಂಕ್ಷಿಪ್ತ ರೀತಿಯಿಂದ ಇಲ್ಲಿ ವಿವರಿಸುತ್ತೇನೆ.

## ಗ್ರಾಮಸುಧಾರಣಾ ಕಾರ್ಯಗಳು

(೧) ಪ್ರತಿಯೊಂದು ಗ್ರಾಮದಲ್ಲಿ ಉತ್ತಮರೀತಿಯಿಂದ ನಡೆದ ಶಾಲೆಯು ಇರತಕ್ಕದ್ದು. ಈ ಬಗ್ಗೆ ಯೋಗ್ಯ ಏರ್ಪಾಡು ಆಗತಕ್ಕದ್ದು

ಇದರಿಂದ ಶಿಕ್ಷಣಬೋರ್ಡುಗಳಿಗೂ ಬಹಳ ಸಹಾಯವಾಗುವದು (೨) ಆದ ರಂತೆಯೇ ಉತ್ತಮ ರೀತಿಯಿಂದ ನಡೆದ ಸಹಕಾರೀ ಸಂಘವು ಇರತ ಕ್ಕದ್ದು. ಇದರಿಂದ ಹಳ್ಳಿಯ ನೈತಿಕ ಮತ್ತು ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಬಹುದು. (೩) ಉತ್ತಮ ರೀತಿಯಿಂದ ನಡೆದ ವಾಚನಮಂ ದಿರವೂ ಪುಸ್ತಕಾಲಯವೂ ಇರತಕ್ಕದ್ದು. ಯಾಕಂದರೆ ಸಾಂಪ್ರತಕಾ ಲದಲ್ಲಿ ದೇಶದಲ್ಲಿ ನಡೆದಿರುವ ಆಂದೋಲನಗಳನ್ನು ಒಕ್ಕಲಿಗರು ತಿಳಿ ಯುವದು ಅವಶ್ಯವು. (೪) ಶಾರೀರಿಕಶಿಕ್ಷಣ ಆಟನೋಟಗಳ ವ್ಯವಸ್ಥೆ ಇರಬೇಕು. ಚಿಕ್ಕ ವಿದ್ಯಾರ್ಥಿಗಳಲ್ಲಿ ಮತ್ತು ದೊಡ್ಡವರಲ್ಲಿ ಸ್ಕೌಟ ಶಿಕ್ಷಣ ಮತ್ತು ಅನೇಕ ಬಗೆಯ ಪಂದ್ಯಾಟಗಳು ವ್ಯವಸ್ಥೆಯಿಂದ ನಡೆಯಬೇಕು. ಇಂಥವುಗಳ ಬಗ್ಗೆ ಒಕ್ಕಲಿಗರ ಪ್ರೀತಿಯು ಹೆಚ್ಚು ಇರುತ್ತದೆ. (೫) ಮುಂ ಬಯಿ ಇಲಾಖೆಯಲ್ಲಿ ಪಂಚಾಯತಿಯ ಹೊಸ ಕಾಯದೆಯು ಪಾಸಾ ಗಿದ್ದು ಅದನ್ನು ಸರಿಯಾಗಿ ಪ್ರಚಾರದಲ್ಲಿ ತರತಕ್ಕದ್ದು. (೬) ಧಾರ್ಮಿಕ ಶಿಕ್ಷಣದ ವ್ಯವಸ್ಥೆ ಇರತಕ್ಕದ್ದು. ವಿಶೇಷವಾಗಿ ವಚನಗ್ರಂಥಗಳನ್ನು ಓದುವ ಏರ್ಪಾಡು ಇರಬೇಕು. ಮಠದ ಅಯ್ಯನವರು ಈ ಕಾರ್ಯ ವನ್ನು ಮಾಡಿದರೆ ಬಹಳ ಉತ್ತಮವಾದದ್ದು. (೭) ಹಳ್ಳಿಗರಲ್ಲಿ ಆರೋ ಗ್ಯರಕ್ಷಣೆಯ ಜ್ಞಾನವನ್ನು ಹೆಚ್ಚಿಸತಕ್ಕದ್ದು ಮತ್ತು ಔಷಧೋಪಚಾರದ ವ್ಯವಸ್ಥೆ ಇರತಕ್ಕದ್ದು. ಇಂಥ ಕಾರ್ಯಕ್ರಮವನ್ನು ಹಳ್ಳಿಗಳಲ್ಲಿ ನಾವು ಆದಷ್ಟು ತೀವ್ರ ಪ್ರಚಾರದಲ್ಲಿ ತರುವದು ಅತ್ಯಂತ ಅವಶ್ಯವಾಗಿರುತ್ತದೆ.

## ಸ್ವಯಂಸೇವಕರು.

ಮೇಲ್ಕಂಡ ಕಾರ್ಯಗಳನ್ನು ಮಾಡಲಿಕ್ಕೆ ಪ್ರತಿಯೊಂದು ಗ್ರಾಮ ದಲ್ಲಿ ಸ್ವಯಂಸೇವಕರ ಸಂಘವು ಇರತಕ್ಕದ್ದು. ಇದು ಎಲ್ಲ ಗ್ರಾಮಗ ಳಲ್ಲಿ ಶಕ್ಯವಿರದಿದ್ದರೆ ಕೆಲವು ಗ್ರಾಮಗಳನ್ನು ಒಟ್ಟುಗೂಡಿಸಿ ಇಂಥ ಸಂಘಟನೆಯನ್ನು ಮಾಡಬೇಕು. ಆದರೆ ನಾನು ಮೇಲೆ ವಿವರಿಸಿದ ಕಾರ್ಯಗಳು ಹೆಚ್ಚಿನ ತರದವಿದ್ದು, ಅವುಗಳ ಬಗ್ಗೆ ಜ್ಞಾನವನ್ನು ಈ ಸ್ವಯಂಸೇವಕರು ಮೊದಲು ಮಾಡಿಕೊಳ್ಳಬೇಕು. ಹೀಗೆ ಶಿಕ್ಷಣ ಕೊಡ ತಕ್ಕ ವರ್ಗಗಳನ್ನು ನಾವು ಅಲ್ಲಲ್ಲಿ ಸ್ಥಾಪಿಸಬೇಕು. ಮತ್ತು ಬೇರೆ ಪ್ರಾಂತಗ ಳಲ್ಲಿ ಉತ್ತಮ ರೀತಿಯಿಂದ ನಡೆದ ಸಮಾಜ ಸೇವಾಸಂಘಗಳಿಗೆ ಅವ ರನ್ನು ಕಳಿಸಿ ಅಲ್ಲಿ ಪ್ರತ್ಯಕ್ಷ ನಡೆದ ಕಾರ್ಯಗಳ ಜ್ಞಾನವನ್ನು ಮಾಡಿ

ಕೊಳ್ಳಬೇಕು. ಈ ಬಗೆಯಾಗಿ ಸ್ವಯಂಸೇವಕರನ್ನು ಸಿದ್ಧಪಡಿಸತಕ್ಕದ್ದು. ವೀರಶೈವ ಸಮಾಜದಲ್ಲಿ ಮೊದಲು ಅನೇಕ ತರುಣಸಂಘಗಳು ಇದ್ದವು ಆದರೆ ಅವುಗಳ ಚಾಲಕರಿಗೆ ಹ್ಯಾಗೆ ಕಾರ್ಯಮಾಡಬೇಕೆಂಬದರ ಜ್ಞಾನವು ಮತ್ತು ಅನುಭವವು ಇರದ್ದರಿಂದ ಅವು ಅಲ್ಲಿಯೇ ಮುಗ್ಗಿ ಹೋದವು. ವೀರಶೈವ ಸಮಾಜದವರು ಅವುಗಳಲ್ಲಿ ತಕ್ಕ ಪುನರ್ಘಟನೆ ಮಾಡಿ ಸುವ್ಯವಸ್ಥಿತವಾಗಿ ಅವು ಗ್ರಾಮಸೇವಾ ಕಾರ್ಯಗಳನ್ನು ಕೈಕೊಳ್ಳುವಂತೆ ಮಾಡತಕ್ಕದ್ದು.

## ಜಮೀನುದಾರರು ಮತ್ತು ಸುಶಿಕ್ಷಿತರು ಗ್ರಾಮವಾಸಿಗಳಾಗುವ ಅವಶ್ಯಕತೆಯು

ಈಚೆಗೆ ಬಹು ಜನ ದೊಡ್ಡ ಜಮೀನದಾರರೂ ಶ್ರೀಮಂತರೂ ಹಳ್ಳಿಗಳನ್ನು ಬಿಟ್ಟುಕೊಟ್ಟು ಪಟ್ಟಣವಾಸಿಗಳಾಗಹತ್ತಿರುವರು. ಹೀಗೆ ಮಾಡುವದು ದೇಶಕ್ಕೂ ಹಳ್ಳಿಗಳಿಗೂ ಬಹಳ ಅಹಿತಕರವಾಗಿದೆ. ಇವರು ಪಟ್ಟಣಗಳಲ್ಲಿ ಬರುವದರಿಂದ ಅವರ ಹಣದ ಉಪಯೋಗವು ಹಳ್ಳಿಗಳಿಗೆ ಆಗದೆ, ಅದೆಲ್ಲ ಪರದೇಶಕ್ಕೆ ಹೋಗಿ ಬಿಡುತ್ತದೆ. ಅದರಿಂದ ಹಳ್ಳಿಯವರಿಗೆ ಏನೂ ಉಪಯೋಗವಾಗುವದಿಲ್ಲ. ಇವರು ಹೀಗೆ ಮಾಡದೆ, ಹಳ್ಳಿಗಳಲ್ಲಿಯೇ ಇದ್ದು ಉತ್ತಮ ರೀತಿಯಿಂದ ಒಕ್ಕಲತನವನ್ನು ಸ್ವತಃ ಸಾಗಿಸಿದರೆ ಅವರಿಗೂ ತಮ್ಮ ಹಳ್ಳಿಗೂ ಹಿತವಾಗುವದು.

ಸುಶಿಕ್ಷಿತರಾದವರು ಸಹ ಹಳ್ಳಿಗಳಲ್ಲಿ ಇರುವದನ್ನು ಬಿಟ್ಟುಕೊಟ್ಟು ಪಟ್ಟಣಗಳಲ್ಲಿ ಇರಹತ್ತಿರುವರು. ಇದರಿಂದ ಅವರ ಜ್ಞಾನದ ಲಾಭವು ಹಳ್ಳಿಯವರಿಗೆ ಏನೂ ಆಗದಂತೆ ಆಗಿದೆ. ಹಾಗೆಯೇ ಕೈಗಾರಿಕೆಯವರೂ ಕಾರಖಾನೆಯವರೂ ಹಳ್ಳಿಗಳಲ್ಲಿಯೇ ಇದ್ದು ತಮ್ಮ ಉದ್ಯೋಗಗಳನ್ನು ಸಾಗಿಸಬೇಕು. ಇದರಿಂದ ಅವರ ಉದ್ಯೋಗಕ್ಕೆ ಖರ್ಚು ಕಡಿಮೆ ಹತ್ತುವದಲ್ಲದೆ ತಮ್ಮ ಸಮಾಜದ ಜನರನ್ನೂ ಕೆಲಸಕ್ಕೆ ಹಚ್ಚಿದಂತೆ ಆಗುವದು.

ಸಭ್ಯಗ್ರಹಸ್ಥರೆ, ಈ ವಿಷಯವು ಅತ್ಯಂತ ಮಹತ್ವವಾದ್ದರಿಂದ ಇದನ್ನು ನಾನು ಬೇರೆ ವಿಷಯಗಳಿಗಿಂತ ಸಲ್ಪ ಹೆಚ್ಚಿಗೆ ವಿವರವಾಗಿ ವಿವರಿಸಿದ್ದೇನೆ. ಹಿಂದುಸ್ತಾನ ದೇಶವು ಸ್ವರಾಜ್ಯಕ್ಕೆ ಅರ್ಹವಾಗುವಂತೆ ನಾವು ಪ್ರಯತ್ನಿಸಬೇಕಾಗಿದೆ. ಇದು ಹಳ್ಳಿಗಳನ್ನು ಸುಧಾರಿಸುವದರಿಂದಲೇ ಶಕ್ಯವು ಆದ್ದರಿಂದ ಈ ಕಾರ್ಯವನ್ನು ನಮ್ಮ ಸಮಾಜದವರು ಆದಷ್ಟು ಶೀವ್ರವಾಗಿ ಪ್ರಾರಂಭಿಸಬೇಕೆಂದು ನನ್ನ ಸೂಚನೆ ಇದೆ.

# ೬. ಸ್ತ್ರೀ ಸುಧಾರಣೆ

ಸಮಾಜ ಸುಧಾರಣೆಯು ಸ್ತ್ರೀಯರ ಸುಧಾರಣೆಯ ಮೇಲೆ ಅವಲಂಬಿಸಿರುತ್ತದೆ. ಆದ್ದರಿಂದ ಸ್ತ್ರೀಶಿಕ್ಷಣವನ್ನು ಬಲವಾಗಿ ಮುಂದುವರಿಸುವದು ಬಹಳ ಆವಶ್ಯವದೆ.

## ಬಾಲಿಕೆಯರ ಒತ್ತಾಯದ ಶಿಕ್ಷಣ.

ಈ ಕಾಲಕ್ಕೆ ಮುಂಬಯಿ ಇಲಾಖೆಯಲ್ಲಿ ಆಯಾಬೋರ್ಡುಗಳು ಒತ್ತಾಯದ ಶಿಕ್ಷಣ ಯೋಜನೆಯನ್ನು ಕಳಿಸಿರುತ್ತವೆ. ಆದರೆ ಆ ಯೋಜನೆಗಳಲ್ಲಿ ಬಹುತರವಾಗಿ ಹುಡುಗರಿಗೆ ಒತ್ತಾಯವಾಗಿಯೂ ಹುಡಿಗೆಯರಿಗೆ ಐಚ್ಛಿಕವಾಗಿಯೂ ಇಡಬೇಕೆಂಬ ಸೂಚನೆಗಳಿರುತ್ತವೆ. ಆದರೆ ಬಾಲಕರ ಶಿಕ್ಷಣಕ್ಕಿಂತಲೂ ಬಾಲಕಿಯರ ಶಿಕ್ಷಣವನ್ನು ಒತ್ತಾಯವಾಗಿ ಮಾಡುವದು ಹೆಚ್ಚಿಗೆ ಆವಶ್ಯವೆಂದು ನನಗೆ ತೋರುತ್ತದೆ

## ಬಾಲವಿವಾಹ

ವಿಶೇಷವಾಗಿ ಉತ್ತರಕರ್ನಾಟಕದಲ್ಲಿ ಬಾಲವಿವಾಹ ಪದ್ಧತಿ ಇರುವದರಿಂದ ಬಾಲಕಿಯವರ ಶಿಕ್ಷಣ ಪ್ರಗತಿಯು ಕೂಡಲೇ ನಿಂತುಹೋಗುತ್ತದೆ. ಬಾಲವಿವಾಹ ಪದ್ಧತಿಯನ್ನು ನಾವು ಸಂಪೂರ್ಣ ನಿಲ್ಲಿಸಬೇಕು. ಬಾಲವಿವಾಹ ಮಾಡುವವರಿಗೆ ಶಾರ್ಡಾ ಆಕ್ಟಿನ ಪ್ರಯೋಗವನ್ನು ಮಾಡತಕ್ಕದ್ದು.

## ಉಪಪಂಗಡಗಳಲ್ಲಿ ಪರಸ್ಪರ ಲಗ್ನ

ಸಮಾಜದ ಈಗಿನ ಪರಿಸ್ಥಿತಿಯಲ್ಲಿ ಹೆಣ್ಣುಮಕ್ಕಳಿಗೆ ಯೋಗ್ಯವರಗಳು ಶಿಗುವದಿಲ್ಲಾದ್ದರಿಂದ ಅವರ ಪ್ರಗತಿಯು ಕುಂಠಿತವಾಗುತ್ತದೆ ಇದರಿಂದ ಬಹಳ ತೊಂದರೆಗಳುಂಟಾಗಹತ್ತಿವೆ. ಆದ್ದರಿಂದ ಉಪಪಂಗಡಗಳಲ್ಲಿ ಪರಸ್ಪರ ಲಗ್ನಾದಿ ವ್ಯವಹಾರಗಳನ್ನು ಪ್ರಾರಂಭಿಸುವದು ಅವಶ್ಯವು ಇದು ವೀರಶೈವಧರ್ಮಕ್ಕೆ ವಿರೋಧವಾದುದಲ್ಲ.

## ಔದ್ಯೋಗಿಕ ಶಿಕ್ಷಣ

ಸ್ತ್ರೀಯರಿಗೆ ಔದ್ಯೋಗಿಕ ಶಿಕ್ಷಣವನ್ನು ಕೊಡುವದು ಬಹಳ ಅವಶ್ಯವು. ಇದು ಮಧ್ಯಮ ವರ್ಗದಲ್ಲಿಯ ಸ್ತ್ರೀಯರಿಗಂತೂ ಅತ್ಯವಶ್ಯವು. ಈಗ ಅವರಿಗೆ ಸ್ವತಂತ್ರ ಉಪಜೀವನದ ಸಾಧನಗಳು ಇರದ್ದರಿಂದ ಅನೇಕ ಕಷ್ಟಗಳನ್ನು ಪಡಬೇಕಾಗುತ್ತದೆ. ಇದಲ್ಲದೆ ಈ ವ್ಯವಸ್ಥೆಯಿಂದ

ಹಿಂದುಸ್ತಾನ ದೇಶದ ಅರ್ಧಜನಾಂಗವು ಈಗ ವ್ಯರ್ಥಕಾಲಕಳೆಯು ವದು ನಿಂತು ದೇಶದ ಸಾಂಪತ್ತಿಕ ಅಭಿವೃದ್ಧಿಗೆ ಸಹಾಯ ಮಾಡಿದಂತೆ ಆಗುವದು.

## ದೊಡ್ಡ ಸ್ತ್ರೀಯರ ಶಿಕ್ಷಣ

ಹೆಣ್ಣುಮಕ್ಕಳು ದೊಡ್ಡವರಾದ ಬಳಿಕ ಅವರಿಗೆ ತಕ್ಕ ಶಿಕ್ಷಣಕೊಡುವ ಸಂಸ್ಥೆಗಳಿರುವದು ಅತ್ಯವಶ್ಯವು. ಅಲ್ಲಿ ಗ್ರಹವ್ಯವಸ್ಥೆ ನರ್ಸಿಂಗ ಓದುಬರಹ ಔದ್ಯೋಗಿಕ ಶಿಕ್ಷಣ, ಸಮಾಜ ಸೇವೆಯ ಕಾರ್ಯಪದ್ಧತಿ ಇಂಥ ವಿಷಯುಗಳನ್ನು ಕಲಿಸಬೇಕು ಪುಣೆಯಲ್ಲಿರುವ ಸೇವಾಸದನದ ಮಾದರಿಯನ್ನು ಅನುಸರಿಸತಕ್ಕದ್ದು.

ಈ ಪ್ರಕಾರ ಸ್ತ್ರೀಸುಧಾರಣೆಯ ಬಗ್ಗೆ ಯತ್ನಿಸಬೇಕೆಂದು ನನ್ನ ಸೂಚನೆಗಳಿವೆ.

## ೭. ಧಾರ್ಮಿಕ ಸುಧಾರಣೆ

ನಮ್ಮಲ್ಲಿ ಧಾರ್ಮಿಕ ಶಿಕ್ಷಣ ಕೊಡುವಂಥ ಅನೇಕ ಪಾಠಶಾಲೆಗಳಿವೆ. ಅವುಗಳ ಸಲುವಾಗಿ ನಮ್ಮ ಜನರು ಬಹಳ ಹಣ ವೆಚ್ಚ ಮಾಡುತ್ತಾರೆ ಆದರೆ ಅವುಗಳಲ್ಲಿಯ ಶಿಕ್ಷಣಕ್ರಮವು ವೀರಶೈವ ಸಂಸ್ಕೃತಿಗೆ ಪೋಷಕವಾಗಿರುವದಿಲ್ಲ. ಅವೆಲ್ಲವುಗಳು ಕಲಕತ್ತಾ ಬನಾರಸ ಇಲ್ಲಿಯ ಪರೀಕ್ಷಾಸಂಘಗಳಿಗೆ ಜೋಡಿಸಲ್ಪಟ್ಟದ್ದರಿಂದ ಅಭ್ಯಾಸಕ್ರಮವು ಅವುಗಳಿಗನುಸರಿಸಿ ನಡೆಯುತ್ತದೆ. ಇದರಿಂದ ನಮ್ಮ ವೀರಶೈವ ಸಂಸ್ಕೃತಿಯ ಜ್ಞಾನವು ಇಲ್ಲಿ ಸರಿಯಾಗಿ ಆಗಲಾರದು. ಪಾಠಶಾಲೆಗಳ ಚಾಲಕರು ಕೂಡಿಕೊಂಡು ತಮ್ಮದೊಂದು ಸ್ವತಂತ್ರ ವಿದ್ಯಾಪೀಠವನ್ನು ಸ್ಥಾಪಿಸಿ ವೀರಶೈವ ಸಮಾಜಕ್ಕೆ ಯೋಗ್ಯವಾದ ಒಂದು ಅಭ್ಯಾಸಕ್ರಮವನ್ನು ಗೊತ್ತುಪಡಿಸಿ ಪರೀಕ್ಷೆಗಳನ್ನು ತೆಗೆದುಕೊಂಡು ಪದವಿಗಳನ್ನು ಕೊಡತಕ್ಕದ್ದು. ಇದರಿಂದ ಈ ಪಾಠಶಾಲೆಗಳಿಂದ ಹೆಚ್ಚಿಗೆ ಉಪಯೋಗವಾಗಬಹುದೆಂದು ನನಗೆ ತೋರುತ್ತದೆ.

## ಮಠಗಳ ಬಗ್ಗೆ ಆಧಾರಗ್ರಂಥ ರಚನೆ

ನಮ್ಮಲ್ಲಿ ಅಸಂಖ್ಯ ಮಠಗಳು ಎಲ್ಲ ಕಡೆಗೂ ಇರುತ್ತವೆ. ಆದರೆ ಅವುಗಳ ಸಂಬಂಧದ ವ್ಯಾಜ್ಯಗಳು ಕೋರ್ಟುಗಳಲ್ಲಿ ಮೇಲಿಂದ ಮೇಲೆ

ದರಿಂದ ವೀರಶೈವ ಧರ್ಮದ ಮಹತ್ವವು ಹಿಂದುಸ್ತಾನದಲ್ಲಿ ಹೊರಪ ಡದೆ ಇರಲಾರದು. ಇವುಗಳ ವಿಸ್ತಾರವಾದ ನಿರೂಪಣೆಯು ಆಗಮ ಗ್ರಂಥಗಳು, ವಚನಗ್ರಂಥಗಳು ಅಲ್ಲದೆ ತಮಿಳು ತೆಲಗು ಧರ್ಮಗ್ರಂಥ ಗಳಲ್ಲಿ ಕಂಡುಬರುತ್ತದೆ. ಈ ಶಿವಾನುಭವದ ತತ್ವಗಳನ್ನು ನಾವು ಸಂಶೋ ಧಿಸಿ ಹೊರಪಡಿಸಿದಲ್ಲಿ ಸಮಾಜದ ಸಲುವಾಗಿ ನಿಜವಾದ ಮಹತ್ಕಾರ್ಯ ಮಾಡಿದಂತಾಗುವದು.

## ೮ ವೀರಶೈವರೂ ರಾಜಕೀಯ ಚಳವಳಿಗಳೂ

ಈಗಿನ ಕಾಲದಲ್ಲಿ ಮಹಾಸಭೆಗೆ ರಾಜಕೀಯ ವಿಷಯಗಳು ಎಷ್ಟರ ಮಟ್ಟಿಗೆ ಸಂಬಂಧಪಡುತ್ತಿವೆ ಎಂಬದನ್ನು ನಾನು ವಿಶದಪಡಿಸುವದು ಅವಶ್ಯ ತೋರುತ್ತದೆ. ಕೆಲವರು ಮಹಾಸಭೆಯಲ್ಲಿ ರಾಜಕೀಯ ಚಳ ವಳಿಯ ವಿಷಯಗಳನ್ನು ಸೇರ್ಪಡಿಸಿ ಚರ್ಚೆಗಳನ್ನು ಮಾಡಬೇಕೆಂದು ಸೂಚಿ ಸುತ್ತಿರುವರು. ಆದರೆ ಬೇರೆ ಕೆಲವರು ಸರಕಾರಕ್ಕೆ ಸಂಬಂಧಪಟ್ಟಿರುವ ಎಂಥ ವಿಷಯಗಳನ್ನಾದರೂ ಕೂಡ ಚರ್ಚಿಸಬಾರದೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಈ ಎರಡೂ ಪಕ್ಷದವರ ಅಭಿಪ್ರಾಯಗಳಲ್ಲಿ ತಪ್ಪು ಇರುತ್ತವೆಂದು ನನಗೆ ತೋರುತ್ತದೆ.

### ಮಹಾಸಭೆಯ ಪೂರ್ವದ ಸ್ಥಿತಿ.

ಒಂದು ಕಾಲದಲ್ಲಿ ರಾಜಕೀಯ ಎಲ್ಲ ಪ್ರಶ್ನೆಗಳು ಸಾರ್ವಭೌಮ ಸರಕಾರದವರ ಪೂರ್ಣ ಆಧೀನತೆಯಲ್ಲಿದ್ದು ಅವರ ಅಭಿಪ್ರಾಯಗಳೇ ಸರ್ವ ಮಾನ್ಯವೆಂದು ತಿಳಿದು ಅವುಗಳನ್ನು ಪ್ರಚಾರದಲ್ಲಿ ತರಬೇಕಾಗು ತ್ತಿತ್ತು. ಇದರಿಂದ ಹಿಂದೀ ಜನತೆಗೆ ರಾಜಕೀಯ ವಿಷಯ ಸಂಬಂ ಧವೇನೂ ಇರಲಿಲ್ಲ. ಇಂಥ ಕಾಲದಲ್ಲಿ ಮಹಾಸಭೆಯು ಉದ್ಭವಿಸಿತು ಆದ್ದರಿಂದ ಆಗಿನ ವಿಷಯಗಳಲ್ಲಿ ಯಾವ ರಾಜಕೀಯ ಪ್ರಶ್ನೆಯೂ ಸೇರ್ಪಡೆಯಾಗುತ್ತಿರಲಿಲ್ಲ.

### ಮಹಾಸಭೆಯ ಸದ್ಯದ ಸ್ಥಿತಿ.

ಆದರೆ ಈಗ ಸರಕಾರದವರು ಹಿಂದುಸ್ಥಾನದಲ್ಲಿ ಜವಾಬುದಾರೀ ರಾಜ್ಯಪದ್ಧತಿಯನ್ನು ಪ್ರಚಾರದಲ್ಲಿ ತರಲು ಒಪ್ಪಿಕೊಂಡಿರುತ್ತಾರೆ. ಇದ ರಿಂದ ಗ್ರಾಮಪಂಚಾಯತಿಗಳನ್ನು ಹಿಡಿದು ಕಾಯದೇಕೌನ್ಸಿಲು ಅಸೆಂ

ಬ್ಲಿಯ ವರೆಗೆ ಇರುವ ಪ್ರಾತಿನಿಧಿಕ ಸಂಸ್ಥೆಗಳು ಅನೇಕ ಬಗೆಯ ಅಧಿಕಾರಗಳನ್ನು ಹೆಚ್ಚುಕಡಿಮೆ ಪ್ರಮಾಣದಿಂದ ಪಡೆಯುತ್ತಿವೆ. ಇದರಿಂದ ಹೊಸ ಪರಿಸ್ಥಿತಿಯು ಉತ್ಪನ್ನವಾಗಿದೆ. ಮಹಾಸಭೆಯ ಆರಂಭಕಾಲದಲ್ಲಿ ನಾವು ಕೇವಲ ಜನರ ಜಾಗ್ರತೆಯ ಮೇಲೆ ಅವಲಂಬಿಸಿ ಎಲ್ಲ ಕಾರ್ಯಗಳನ್ನು ಮಾಡಬೇಕಾಗಿತ್ತು. ಆದರೆ ಈಗ ನಮಗೆ ರಾಜಕೀಯ ಸ್ವರೂಪದ ಹೊಸದೊಂದು ಸಾಧನವು ದೊರೆತಿದ್ದದರಿಂದ ಅದನ್ನು ನಮ್ಮ ಸಮಾಜಹಿತಕ್ಕೋಸ್ಕರ ನಾವು ಹ್ಯಾಗೆ ಉಪಯೋಗಮಾಡಿಕೊಳ್ಳಬೇಕೆಂಬದನ್ನು ನಾವು ವಿವೇಚಿಸಲೇಬೇಕು. ಉದಾಹರಣಾರ್ಥವಾಗಿ ನಾನು ಈ ವರೆಗೆ ವಿವರಿಸಿದ ವಿಷಯಗಳಲ್ಲಿ ಅನೇಕವುಗಳು ರಾಜಕೀಯ ಅಂದರೆ ಸರಕಾರಕ್ಕೆ ಸಂಬಂಧಪಟ್ಟವುಗಳೇ ಇರುತ್ತವೆ. ಆದ್ದರಿಂದ ಸರಕಾರಕ್ಕೆ ಸಂಬಂಧಿಸಿದ ಒಂದು ಮಾತನ್ನಾದರೂ ಕೂಡ ಈ ಮಹಾಸಭೆಯಲ್ಲಿ ಎತ್ತಬಾರದೆಂದೆನ್ನುವದು ಸರಿಯಾಗಲಾರದು. ಅವಶ್ಯವಿದ್ದಲ್ಲಿ ನಾವು ಸರಕಾರದವರ ಧೋರಣವನ್ನು ನಿಷೇಧಿಸಲಿಕ್ಕೆಬೇಕು.

## ಕೇವಲ ರಾಜಕೀಯ ವಿಷಯಗಳು.

ಆದರೆ ಇಂಥ ವಿಷಯಗಳಿಗೂ ಸ್ವರಾಜ್ಯ ಸಾಧನೆಯ ವಿಷಯಗಳಿಗೂ ಮಹದಂತರವಿದೆಂಬದನ್ನು ನಾವು ಮರೆಯಕೂಡದು. ಈ ತರದ ವಿಷಯಗಳು ಮಹಾಸಭೆಯ ಈಗಿನ ರಚನೆಯ ಪ್ರಕಾರ ಸಂಬಂಧಪಟ್ಟವಲ್ಲ. ಸ್ವರಾಜ್ಯಸಾಧನೆಯು ಮಹಾಸಭೆಯ ಮುಖ್ಯ ಉದ್ದೇಶವಲ್ಲ. ಆದ್ದರಿಂದ ಹಿಂದುಸ್ಥಾನಕ್ಕೆ ಯಾವ ತರದ ಸ್ವರಾಜ್ಯವು ಬೇಕು, ಇದರ ರಚನೆ ಹ್ಯಾಗೆ ಇರಬೇಕು, ವ್ಹಾಯಸರಾಯ ಗವ್ಹರ್ನರರಿಗೆ ಯಾವ ಬಗೆಯ ಅಧಿಕಾರಗಳಿರಬೇಕು, ಇವೇ ಮೊದಲಾದ ರಾಜ್ಯಘಟನೆಯ ವಿಷಯಗಳನ್ನು ಚರ್ಚಿಸತಕ್ಕ ಸ್ಥಾನವು ಮಹಾಸಭೆಯಲ್ಲ. ಅಥವಾ ಯಾರಾದರೂ ಈ ಸಭೆಯಲ್ಲಿ ಆರ್ಡಿನನ್ಸಗಳು ಇರತಕ್ಕದ್ದೋ ಅಥವಾ ಇರಬಾರದೋ, ಸ್ವರಾಜ್ಯಸಾಧನೆಗೋಸ್ಕರ ಸರಕಾರದವರೊಡನೆ ಸಹಕಾರ ಮಾಡಬೇಕೋ ಅಥವಾ ಅಸಹಕಾರ ಮಾಡಬೇಕೋ, ಇಂಥ ವಿಷಯಗಳನ್ನು ಇಲ್ಲಿ ಚರ್ಚಿಸಲಿಕ್ಕೆ ಬರಲಾರದೆಂದು ನನಗೆ ತೋರುತ್ತದೆ.

## ೯. ಇತರ ವಿಷಯಗಳು.

ನಾನು ಇನ್ನು ಮೇಲೆ ಇತರ ಕೆಲವು ಮಹತ್ವದ ವಿಷಯಗಳನ್ನು ತಮ್ಮ ದೃಷ್ಟಿಗೆ ತರಲು ಇಚ್ಛಿಸುತ್ತೇನೆ.

## ಸರಕಾರೀ ಉದ್ಯೋಗಗಳು.

ಜವಾಬುದಾರಿ ರಾಜ್ಯಘಟನೆಯಲ್ಲಿ ಸರಕಾರೀ ಉದ್ಯೋಗಗಳ ಮಹತ್ವವು ಬರಬರುತ್ತ ಕಡಿಮೆಯಾಗುತ್ತ ಹೋಗುವದು ಸಹಜವದೆ. ಆದರೂ ಸರಕಾರೀ ಅಧಿಕಾರಿಗಳ ಕಡೆಯಿಂದ ಆಗಬಹುದಾದ ಉಪಯುಕ್ತ ಕಾರ್ಯಗಳು ಅನೇಕವಿರುತ್ತವೆಂಬದನ್ನು ನಾವು ಮರೆಯಕೂಡದು. ಆದ್ದರಿಂದ ಈ ವಿಷಯವನ್ನು ನಾವು ದುರ್ಲಕ್ಷಿಸಲಿಕ್ಕೆ ಬರಲಾರದು.

## ಹಿಂದೀಕರಣ.

ಈ ಕಾಲದಲ್ಲಿ ರಾಜ್ಯದ ಆಡಳಿತೆಯಲ್ಲಿ ಹಿಂದೀಕರಣದ ಪ್ರಶ್ನೆಯು ಬಹಳ ಮಹತ್ವದ್ದಿರುತ್ತದೆ. ಈ ವಿಷಯವಾಗಿ ಕರ್ನಾಟಕಸ್ಥರ ಮತ್ತು ಕರ್ನಾಟಕದ ಮುಖ್ಯ ಜನಾಂಗವಾದ ವೀರಶೈವರ ಹಕ್ಕುಗಳನ್ನು ಸರಕಾರದವರು ಲಕ್ಷಿಸುವದು ಅವಶ್ಯವದೆ. ಸರಕಾರದವರು ಕೆಳಗಿನ ನೌಕರಿಗಳಲ್ಲಿ ಇಂತಿಷ್ಟು ಪ್ರಮಾಣದಿಂದ ಬ್ರಾಹ್ಮಣೇತರರ ಸಂಖ್ಯೆಯು ಇರಬೇಕೆಂದು ಈ ಮೊದಲಿಗೆ ಗೊತ್ತುಪಡಿಸಿರುವರು. ಆದರೆ ಇದರಂತೆ ಉಚ್ಚ ತರಗತಿಯ ಅಧಿಕಾರಗಳನ್ನು ಈಗಿನ ಹಿಂದೀಕರಣದ ಕಾಲದಲ್ಲಿ ವೀರಶೈವರಿಗೆ ಸರಿಯಾದ ಪ್ರಮಾಣದಿಂದ ಸರಕಾರದವರು ಹೆಚ್ಚಾಗಿ ಕೊಡತಕ್ಕದ್ದೆಂದು ನಾನು ಆಗ್ರಹಪೂರ್ವಕವಾಗಿ ಸೂಚಿಸುತ್ತೇನೆ.

## ಅಭಿನಂದನ.

ಈಚೆಗೆ ಮೈಸೂರು ಮುಂಬಯಿ ಸರಕಾರದವರು ಕೆಲವು ಉನ್ನತ ಸ್ಥಾನಗಳನ್ನು ವೀರಶೈವರಿಗೆ ಕೊಟ್ಟದ್ದಕ್ಕೆ ನಾನು ಅವರನ್ನು ಬಹಳವಾಗಿ ಅಭಿನಂದಿಸುತ್ತೇನೆ. ಮುಂಬಯಿ ಸರಕಾರದವರು ಮಂತ್ರಿಪದಕ್ಕೆ ನಾಮದಾರ ದಿವಾನ ಬಹಾದ್ದೂರ ಎಸ್. ಟಿ. ಕಂಬಳಿಯವರನ್ನೂ, ಡಿಸ್ಟ್ರಿಕ್ಟ ಜಜ್ಜ ಸ್ಥಳಕ್ಕೆ ಮಿ. ಸಿ. ಸಿ. ಹುಲಕೋಟಿಯವರನ್ನೂ, ಮೈಸೂರ ಸರಕಾರದವರು ಹೈಕೋರ್ಟು ಜಜ್ಜಸ್ಥಾನಕ್ಕೆ ಮಿ. ಪಿ. ಮಹಾದೇವಯ್ಯನವರನ್ನೂ ನೇಮಿಸಿದ್ದಕ್ಕೆ ನಾನು ಅವರನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ. ಈ ಯಾವತ್ತು ಮಹನೀಯರು ಈ ವರೆಗೆ ಅನೇಕ ಮಹತ್ವದ ಸಮಾಜಹಿತ ಕಾರ್ಯಗಳನ್ನು ಮಾಡುತ್ತ ಬಂದಿ

ರುವರು. ಮತ್ತು ಈಗಲೂ ಮಾಡುತ್ತಲಿರುವರು. ನಾಮದಾರ ದಿವಾನ ಬಹಾದ್ದೂರ ಕಂಬಳಿಯವರು ಮಂತ್ರಿಪದ ಸ್ಥಾನಾಪನ್ನರಾದ ಬಳಿಕ ಅವರಿಂದ ಕರ್ನಾಟಕದಲ್ಲಿಯ ಶಿಕ್ಷಣಸಂಸ್ಥೆಗಳಿಗೆ ಬಹಳ ಸಹಾಯವಾಗುತ್ತ ಬಂದಿದೆ. ಶಿರಸಂಗೀ ಕಾಲೇಜಿನ ಬಗ್ಗೆ ವಿಶೇಷ ಪರಿಶ್ರಮಪಟ್ಟಿರುವರು. ವಿದ್ಯಾಖಾತೆ, ಒಕ್ಕಲುತನಖಾತೆ ಮತ್ತು ಔದ್ಯೋಗಿಕಖಾತೆ ಇವುಗಳಲ್ಲಿ ಈಗಿನ ಅವನತಿಯ ಕಾಲದಲ್ಲಿಸಹ ಹೆಚ್ಚಿಗೆ ಧನಸಹಾಯ ಮತ್ತು ಶಿಕ್ಷಣವೇತನಗಳು ಸರಕಾರದಿಂದ ದೊರೆದಿರುವವು. ಔದ್ಯೋಗಿಕ ಕಾಲೇಜಗಳು ಸ್ಥಿರಪಡಿಸಲ್ಪಟ್ಟವು. ಬ್ರಾಹ್ಮಣೇತರ ಅಧಿಕಾರಿಗಳು ಉಚ್ಚ ಸ್ಥಾನಗಳಲ್ಲಿ ಸೇರ್ಪಡೆ ಮಾಡಲ್ಪಟ್ಟಿರುವರು. ಅವರ ಈ ಕಾರ್ಯಗಳು ಇನ್ನೂ ಹೆಚ್ಚಾಗಿ ಬಲಪಡಲೆಂದು ನಾನು ಆಶಿಸುತ್ತೇನೆ. ಮಿ. ಸಿ. ಸಿ. ಹುಲಕೋಟೆಯವರಾದರೂ ಅತ್ಯಂತ ಕಠಿಣ ಪರಿಸ್ಥಿತಿಯಲ್ಲಿ ಸಹ ಜಾಣತನದಿಂದಲೂ ನಿಷ್ಪಕ್ಷಪಾತದಿಂದಲೂ ವರ್ತಿಸುತ್ತ ಬಂದಿರುವರು. ಹಿಂದುಳಿದ ವರ್ಗಗಳಿಗೆ ಬಹಳ ಸಹಾಯ ಮಾಡುತ್ತಿರುವರು. ಇದು ನಮಗೆ ಸಂತೋಷಪ್ರದವಾಗಿದೆ. ಮಿ. ಪಿ. ಮಹಾದೇವಯ್ಯನವರು ಲಾ ಮೆಂಬರರಿದ್ದಾಗ್ಗೆ ಅನೇಕ ಪ್ರಜಾಹಿತದ ಕಾಯದೆಗಳನ್ನು ಪ್ರಚಾರದಲ್ಲಿ ತರಲು ಸಹಾಯಕರಾದರು. ಈ ಮಹಾನುಭಾವರೆಲ್ಲರೂ ಸರಕಾರೀ ಉದ್ಯೋಗದಲ್ಲಿ ಈಗ ಇರುವದರಿಂದ ಇವರ ಗುಣವರ್ಣನೆಯನ್ನು ಹೆಚ್ಚಿಗೆ ಮಾಡುವದು ಔಚಿತ್ಯಕ್ಕೆ ಸರಿಯಾಗದಿದ್ದರೂ ನಾನು ಹೀಗೆ ಉಲ್ಲೇಖಿಸುವದರ ಉದ್ದೇಶವು ವೀರಶೈವ ಸಮಾಜದಲ್ಲಿ ಅನೇಕ ಯೋಗ್ಯತೆಯ ಜನರು ಇದ್ದು ಅವರಿಗೆ ಮುಂದೆಬರಲು ಅವಕಾಶಕೊಟ್ಟಲ್ಲಿ ದೇಶಹಿತ ಕಾರ್ಯಗಳಾಗುವವೆಂದು ಹೇಳುವದಷ್ಟೇ ಇರುತ್ತದೆ. ನಮ್ಮ ಮುಂದೆ ಹಿಂದೀಕರಣ ಪ್ರಶ್ನೆಯು ತೀವ್ರವಾಗಿ ಬರತಕ್ಕದ್ದದೆ. ಆ ಕಾಲಕ್ಕೆ ಕರ್ನಾಟಕಕ್ಕೆ ಯೋಗ್ಯ ಸ್ಥಾನವು ದೊರೆಯುವದೆಂದು ಆಶಿಸಿದ್ದೇನೆ.

## ಸೈನ್ಯಖಾತೆಯಲ್ಲಿ ಸೇರ್ಪಡೆ.

ಸರಕಾರದವರು ವೀರಶೈವರನ್ನು ಸೈನ್ಯಖಾತೆಯಲ್ಲಿ ತೆಗೆದುಕೊಳ್ಳದೆ ಇರುವದು ಶೋಚನೀಯವಾಗಿದೆ. ಸರಕಾರದವರು ಹಿಂದೂ ಜನಾಂಗದಲ್ಲಿ ಯುದ್ಧಕ್ಕೆ ಸಮರ್ಥರು ಮತ್ತು ಅಸಮರ್ಥರು ಎಂದು ಕೃತ್ರಿಮ ಭೇದವನ್ನು ಕಲ್ಪಿಸಿ ಆಚರಿಸುತ್ತಿರುವರು. ಇದು ಅನ್ಯಾಯದ್ದಾಗಿದೆ.

ಈತರದ ಭೇದವನ್ನು ಅವರು ತೆಗೆದುಹಾಕಿ ವೀರಶೈವರನ್ನು ಸೈನ್ಯದಲ್ಲಿ ತೆಗೆದುಕೊಂಡು ಅವರ ಸ್ವತಂತ್ರ ರೆಜಿಮೆಂಟಗಳನ್ನು ಮಾಡಬೇಕೆಂದು ನನ್ನ ಸೂಚನೆ ಇದೆ. ಅದೇಪ್ರಕಾರ ನೌಕಾ ಮತ್ತು ವೈಮಾನಿಕ ಶಿಕ್ಷಣ ಕೊಡತಕ್ಕ ಶಾಲೆಗಳಲ್ಲಿ ವೀರಶೈವರನ್ನು ಯೋಗ್ಯ ಪ್ರಮಾಣದಿಂದ ತೆಗೆದುಕೊಳ್ಳತಕ್ಕದ್ದು.

## ವೀರಶೈವರಲ್ಲಿಯ ಹಿಂದುಳಿದ ಸಮಾಜಗಳು

ವೀರಶೈವ ಸಮಾಜಕ್ಕೆ ಹೊಂದಿದ ಅನೇಕ ಸಮಾಜಗಳು ಕರ್ನಾಟಕದ ಹೊರಗೆ ಅಂದರೆ ಮಲಬಾರ ಕೊಂಕಣ ಮಧ್ಯಪ್ರಾಂತ ತಮಿಳುಪ್ರಾಂತ ತೆಲಗುಸೀಮೆ ಈ ಮೊದಲಾದ ಕಡೆಗೆ ಇರುತ್ತವೆ. ಆದರೆ ಈ ಸಮಾಜದವರಿಗೆ ವೀರಶೈವ ಧರ್ಮದ ಪರಿಚಯವು ಏನೂ ಇಲ್ಲದ ರಿಂದಲೂ ಅವರು ಅಲ್ಲಿ ಅಲ್ಪಸಂಖ್ಯಾಕರಾದ್ದರಿಂದಲೂ ಅವರು ಅತ್ಯಂತ ಅವನತಸ್ಥಿತಿಯಲ್ಲಿರುವರು. ಇಂಥ ಸಮಾಜಗಳ ಹಿತವನ್ನು ವೀರಶೈವ ಸಮಾಜದವರು ರಕ್ಷಿಸುವದು ಅತ್ಯವಶ್ಯವದೆ. ಅದೇ ಪ್ರಕಾರ ಕರ್ನಾಟಕದಲ್ಲಿಯೂ ಮಡಿವಳರು, ನಾವಲಿಗರು ಈ ಬಗೆಯಾಗಿ ಹಿಂದುಳಿದ ಸಮಾಜಗಳಿವೆ. ಇವುಗಳನ್ನು ನಾವು ಉದ್ಧರಿಸುವದು ನಮ್ಮ ಕರ್ತವ್ಯವಾಗಿದೆ.

## ವೀರಶೈವರ ಐತಿಹಾಸಿಕ ಮತ್ತು ಧಾರ್ಮಿಕ ಸ್ಥಳಗಳ ರಕ್ಷಣೆ.

ವೀರಶೈವ ಸಮಾಜದಲ್ಲಿ ಬಹುಕಾಲದಿಂದಲೂ ಅನೇಕ ಧರ್ಮಸುಧಾರಕರೂ ರಾಜಕೀಯ ಪುರುಷರೂ ಗ್ರಂಥಕರ್ತರೂ ಆಗಿಹೋಗಿದ್ದು ಅವರ ಸಮಾಧಿಗಳೂ ಕುರುಹುಗಳೂ ಅನೇಕ ಕಡೆಗೆ ಇವೆ ಹಾಗೆಯೇ ಅವರ ಅನೇಕ ಪುಣ್ಯಕ್ಷೇತ್ರಗಳೂ ಅವೆ. ಇವುಗಳನ್ನು ನಾವು ಸರಿಯಾದ ರೀತಿಯಿಂದ ಕಾದಿಡುವದು ನಮ್ಮ ಕರ್ತವ್ಯವಾಗಿದೆ. ಉದಾ:— ಸ್ವಾದಿಯಲ್ಲಿ ಪ್ರಸಿದ್ಧ ರಾಜರಾದ ಸದಾಶಿವರಾಯ ಮತ್ತು ಬಸವರಾಜ ಇವರ ಸಮಾಧಿಗಳು ಇವೆ ಇವು ಅವ್ಯವಸ್ಥೆಯಲ್ಲಿ ಅವೆ. ಕೆಳದಿ ಇಕ್ಕೇರಿಯ ಭಾಗಗಳಲ್ಲಿ ಅನೇಕ ಮಹತ್ವದ ರಾಜಕೀಯ ಪುರುಷರ ಸಮಾಧಿಗಳೂ ದೇವಾಲಯಗಳೂ ಇದೇಸ್ಥಿತಿಯಲ್ಲಿ ಇವೆ. ಇವುಗಳನ್ನು ಸರಿಯಾದ ಸ್ಥಿತಿಯಲ್ಲಿ ಇಡುವದು 'ನಮ್ಮ ಕರ್ತವ್ಯವು. ಹಾಗೆಯೇ ಉಳಿವಿ

ಮತ್ತು ಶ್ರೀಶೈಲ ಪರ್ವತಗಳು ಶಿವಶರಣರ ಮಹತ್ವದ ಸ್ಥಾನಗಳಿವೆ. ಇವು ಸಹ ಬಿದ್ದುಹೋಗುವ ಸ್ಥಿತಿಯಲ್ಲಿ ಇವೆ. ಹಾಗೆಯೇ ಕಲ್ಯಾಣದಲ್ಲಿ ಬಸವೇಶ್ವರನ ಪರಶುಗಟ್ಟೆಯ ಮೇಲೆ ಇನ್ನೂ ಕಟಕರು ಮಾಂಸವನ್ನು ಮಾರುತ್ತಾರೆಂದು ನಾನು ಕೇಳುತ್ತೇನೆ. ಆ ಮಹಾತ್ಮನಿಗೆ ಸಂಬಂಧಿಸಿದ ಈ ಪುಣ್ಯಸ್ಥಾನವು ಈ ಸ್ಥಿತಿಯಲ್ಲಿರುವದು ಪ್ರತಿಯೊಬ್ಬ ವೀರಶೈವನಿಗೆ ಅನುತಾಪವನ್ನುಂಟುಮಾಡದೆ ಇರದು. ಇಂಥ ಮಹತ್ವದ ಸ್ಥಳಗಳನ್ನು ವೀರಶೈವ ಸಮಾಜದವರು ಯೋಗ್ಯ ರೀತಿಯಿಂದ ಕಾದಿಡುವದು ಅವರ ಕರ್ತವ್ಯವಾಗಿದೆ. ಈ ಬಗ್ಗೆ ಅವರು ಆಯಾ ಸರಕಾರಗಳ ಕೂಡ ಪತ್ರವ್ಯವಹಾರ ನಡಿಸಿ ಅಲ್ಲಿ ನಡೆದಿರುವ ದುರವಸ್ಥೆಗಳನ್ನು ದೂರಮಾಡಿಕೊಳ್ಳಬೇಕು.

## ೧೦. ಸಂಘಟನೆ

ವೀರಶೈವ ಮಹಾಸಭೆಯು ಕೂಡಿ ಬಹಳ ದಿವಸಗಳಾದವು. ಅದರ ಮೊದಲಿನ ನಿಯಮಗಳು ಈಗಿನ ಪರಿಸ್ಥಿತಿಯಲ್ಲಿ ವ್ಯವಹಾರ್ಯವಾಗಿಲ್ಲ. ಆದ್ದರಿಂದ ಈಗ ಈ ಬಗ್ಗೆ ಯೋಗ್ಯ ನಿಯಮಗಳನ್ನು ಮಾಡಿ ಅವುಗಳನ್ನು ಪ್ರಚಾರದಲ್ಲಿ ತರುವಿರೆಂದು ನಂಬಿದ್ದೇವೆ. ಆದರೆ ಈ ಬಗ್ಗೆ ನನಗೆ ತೋರಿದ ಕೆಲವು ಸಂಗತಿಗಳನ್ನು ತಮಗೆ ವಿದಿತಪಡಿಸುತ್ತೇನೆ.

### ಯೋಗ್ಯ ಕಾರ್ಯಕ್ರಮ.

ಯೋಗ್ಯ ಸಂಘಟನೆಯ ಕೂಡ ಯೋಗ್ಯ ಕಾರ್ಯಕ್ರಮವೂ ಇರುವದು ಅವಶ್ಯವು. ಇಡೀ ವರ್ಷ ಯಾವ ಯಾವ ಕೆಲಸಗಳನ್ನು ಮಾಡಬೇಕೆಂಬದರ ಸ್ಪಷ್ಟ ಕಲ್ಪನೆಯು ಇರತಕ್ಕದ್ದು. ಇಲ್ಲದಿದ್ದರೆ ನಾಮಧಾರೀ ಕಮಿಟಿಗಳಾಗುವವು ಮಹಾಸಭೆಯಲ್ಲಿ ಆಗುವ ಠರಾವುಗಳು ಕೇವಲ ಮಾರ್ಗದರ್ಶಕವಾಗಿ ಮಾತ್ರ ಇರುತ್ತವೆ. ಆದ್ದರಿಂದ ಸ್ಥಾನಿಕ ಪರಿಸ್ಥಿತಿಯ ಪ್ರಕಾರ ಸಭಾಸದರು ತಮಗೆ ಯೋಗ್ಯ ಕಂಡ ಕಾರ್ಯಗಳನ್ನು ಗೊತ್ತುಪಡಿಸಿಕೊಂಡು ಆ ಪ್ರಕಾರ ಅವುಗಳನ್ನು ಪ್ರಚಾರದಲ್ಲಿ ತರುವದು ಅವಶ್ಯವು. ಈ ಕಾರ್ಯವು ಇಡೀ ವರ್ಷ ಸಾಗತಕ್ಕದ್ದು.

### ಫಂಡಿನ ಅವಶ್ಯಕತೆ.

ಈ ಕಾರ್ಯದಲ್ಲಿ ಕೆಲಸ ಮಾಡಬಹುದಾದ ಜನರನ್ನು ಗೊತ್ತುಪಡಿಸಿ ಅವರಲ್ಲಿ ಯೋಗ್ಯ ಸಂಘಟನೆ ಮಾಡಿ ಆಯಾ ಕೆಲಸಗಳನ್ನು

ಪ್ರಾರಂಭಿಸತಕ್ಕದ್ದು. ಇವರ ಸಹಾಯಕ್ಕೋಸ್ಕರ ಮಹಾಸಭೆಯು ಒಂದು ಫಂಡನ್ನು ನಿರ್ಮಿಸಬೇಕಾಗುವದು. ಈ ಫಂಡನ್ನು ಕೇವಲ ಮಹಾ ಸಭೆಯನ್ನು ಕೂಡಿಸಲಿಕ್ಕೆ ಇಷ್ಟೇ ಅಲ್ಲ, ಅಲ್ಲಿ ಆದ ನಿರ್ಧಾರಗಳನ್ನು ಇಡೀ ದೇಶದಲ್ಲಿ ಮುಂದುವರಿಸಲಿಕ್ಕೂ ಅದನ್ನು ಉಪಯೋಗಿಸಬೇಕು. ಆದರೆ ಹೀಗೆ ಅದರ ಸಹಾಯವು ಬೇಕಾದಲ್ಲಿ, ಎಲ್ಲರೂ ಮಹಾಸಭೆಯ ಫಂಡಿನ ಮೇಲೆಯೇ ಹಾಕುವಂತೆ ಮಾಡದೆ ಸ್ಥಾನಿಕ ಫಂಡುಗಳನ್ನು ಏರ್ಪಡಿಸಿ ಅವುಗಳಿಗೆ ದೇಣಿಗೆ ರೂಪದಿಂದ ಈ ಹಣವನ್ನು ಪಡೆಯ ಬಹುದು.

## ಶ್ರಮವಿಭಾಗ.

ನಮ್ಮಲ್ಲಿ ಬಹು ವಿಧತ್ವವು ಪ್ರಾಪ್ತವಾಗಿದೆ. ಒಬ್ಬರಿಗೆ ರಾಜಕೀಯ ವಿಷಯಗಳು ಸೇರುತ್ತವೆ. ಇಂಥವರು ಧಾರ್ಮಿಕ ಮತ್ತು ಸಾಮಾ ಜಿಕ ವಿಷಯಗಳಲ್ಲಿ ಏನೂ ಅರ್ಥವಿಲ್ಲ, ಸ್ವರಾಜ್ಯ ಒಂದು ದೊರಕಿದರೆ ಸಾಕು ಎಂದು ಅನ್ನುವದುಂಟು. ಬೇರೆ ಕೆಲವರು ಲೋಕಲಬೋರ್ಡು ಮುನಿಸಿಪಾಲಿಟಿಗಳಲ್ಲಿ ವಿಶೇಷ ಮನಸ್ಸುಹಾಕುತ್ತಾರೆ. ಇವರಿಗೆ ಇವು ಗಳ ಹೊರ್ತು ಬೇರೆ ಯಾವ ವಿಷಯವೂ ಮಹತ್ವ ಕಾಣುವದಿಲ್ಲ. ಬೇರೆ ಕೆಲವರಿಗೆ ಮಠಗಳ ವ್ಯವಸ್ಥೆ, ಪಾಠಶಾಲೆ, ವಿರಕ್ತ ಗುರುವರ್ಗ ದವರ ಜಗಳ ಇವೇ ಮಹತ್ವದವೆನಿಸುತ್ತವೆ. ಇವು ಸರಿಪಡದಿದ್ದರೆ ಸಮಾಜವೇ ಮುಳುಗಿಹೋಗುವದೆಂದು ಇವರಿಗೆ ತೋರುತ್ತದೆ. ಇನ್ನು ಬೇರೆ ಕೆಲವರು ವಾಙ್ಮಯದ ಹೊರ್ತು ವೀರಶೈವರ ಸಂಸ್ಕೃತಿಯೇ ಉಳಿ ಯಲಾರದು ದೇಶದ ನಾಗರಿಕತೆಗೆ ಅದೇ ಕಾರಣವೆಂದು ಭಾವಿಸಿ ಉಳಿದ ವಿಷಯಗಳನ್ನು ಉಪೇಕ್ಷಿಸುತ್ತಾರೆ. ಉದ್ಯೋಗ ವ್ಯವಹಾರದಲ್ಲಿ ದ್ದವರು ಸಾಂಪತ್ತಿಕ ಸುಧಾರಣೆಯನ್ನು ಉಪೇಕ್ಷೆ ಮಾಡಿದರೆ ಸಮಾಜವೇ ಹಾಳಾಗುತ್ತದೆಂದು ತಿಳಿದು ಇತರ ಮಹತ್ವದ ವಿಷಯಗಳನ್ನು ತಿರಸ್ಕ ರಿಸುತ್ತಾರೆ. ಇವರೆಲ್ಲರ ಹೇಳಿಕೆಯಲ್ಲಿ ನಿಜವೂ ಇದೆ, ತಪ್ಪೂ ಇದೆ. ಹೀಗೆ ಹೇಳುವವರನ್ನು ಢಾಲಿನ ಒಂದೇ ಮಗ್ಗುಲನ್ನು ನೋಡಿ ಕಾದಾಡಲು ಸನ್ನದ್ಧರಾದ ಸ್ವಾರರಿಗೆ ಹೋಲಿಸಬಹುದು. ಇವರು ತಮ್ಮದೊಂದೇ ವಿಷಯವನ್ನು ಕಾಣುತ್ತಾರೇ ಹೊರ್ತು ಬೇರೊಂದನ್ನು ಕಾಣಲಾರರು. ಆದರೆ ಸಮಾಜದ ಎಲ್ಲ ಅವಯವಗಳು ಬಲಪಡಬೇಕು. ಅಂದರೆ ಮಾತ್ರ ಅದು ಬಹು ದಿವಸ ಬಾಳುತ್ತದೆ. ಕಾರ್ಯ ನಿರ್ವಾಹ

ವಿಷಯದಲ್ಲಿ ಯಾರಿಗೆ ಯಾವ ವಿಷಯವು ರುಚಿಸುತ್ತದೋ ಅತ್ತ ಕಡೆಗೆ ಅವರು ಅವಶ್ಯವಾಗಿ ಪ್ರಯತ್ನಿಸಹತ್ತಬೇಕು. ಇದರಿಂದ ಎಲ್ಲರಿಗೂ ಮುಂದು ವರಿಯಲಿಕ್ಕೆ ಮಾರ್ಗಗಳು ದೊರೆದು ಈಗ ಕಂಡುಬರುವ ಈರ್ಷ್ಯಾಸೂ ಯೆಗಳೂ ಕಡಿಮೆಯಾಗಬಹುದು.

## ಇತರ ಸಮಾಜಗಳೊಡನೆ ಸಹಕಾರ

ಇನ್ನು ಮೇಲೆ ಆಯಾ ಸಮಾಜಗಳು ಪರಸ್ಪರ ದ್ವೇಷಮಾಡುವ ದಿವಸಗಳು ಹೋದವು. ಜವಾಬುದಾರೀ ಅಧಿಕಾರಗಳು ನಮಗೆ ಬರ ಹತ್ತಿದಂದಿನಿಂದಂತೂ ಈ ಪರಸ್ಪರ ಸಂಬಂಧವು ಹೆಚ್ಚುತ್ತಲಿದೆ. ಆದ್ದರಿಂದ ಎಲ್ಲರೂ ವಿಶಾಲ ಮತ್ತು ಉದಾರ ಭಾವವನ್ನು ತಾಳಿ ಕೆಲಸಮಾ ಡುವದು ಅವಶ್ಯವು. ಲಿಂಗಾಯತ, ಬ್ರಾಹ್ಮಣ, ರೆಡ್ಡಿ, ಮುಸಲ್ಮಾನ, ಜೈನ, ದೇವಾಂಗ, ಕುರುಬ, ಹೊಲೆಯ, ಒಕ್ಕಲಿಗ ಈ ಎಲ್ಲರೂ ಕರ್ನಾ ಟಕದ ಮಕ್ಕಳೆಂದು ತಿಳಿದು ಪರಸ್ಪರ ಬಂಧುಭಾವವುಳ್ಳವರಾಗಿ ವರ್ತಿ ಸುವ ಪ್ರಸಂಗವು ಬಂದಿದೆ. ನಾವು ಕರ್ನಾಟಕತ್ವದ ಭಾವನೆಯಿಂದಲೇ ಕೆಲಸಮಾಡಬೇಕಾಗಿದೆ. ವೀರಶೈವರ ಸಂಘಟನೆ ಮತ್ತು ಕಾರ್ಯಪದ್ಧ ತಿಯು ಈ ಭಾವದಿಂದಲೇ ಪೂರಿತನಾಗಿ ಸಾಗಲೆಂದು ನಾನು ಆಶಿ ಸುತ್ತೇನೆ.

ಪ್ರತಿನಿಧಿಗಳೇ, ನನಗೆ ಕಂಡುಬಂದ ಸೂಚನೆಗಳನ್ನು ನಾನು ತಮ್ಮ ಮುಂದೆ ಇಟ್ಟಿದ್ದೇನೆ. ಈಗಿನ ಕಾಲದಲ್ಲಿ ನಮ್ಮ ಮುಂದೆ ಅನೇಕ ಬಿಕ್ಕಟ್ಟಿನ ಪ್ರಶ್ನೆಗಳು ಇವೆ. ಆದ್ದರಿಂದ ನಾನು ಸೂಚಿಸಿದವುಗಳಲ್ಲಿ ಯಾವವು ನಿಮಗೆ ಯೋಗ್ಯ ಮತ್ತು ವ್ಯವಹಾರ್ಯವೆಂದು ತೋರುತ್ತವೋ ಅವು ಗಳನ್ನಷ್ಟೇ ಸ್ವೀಕರಿಸಿರಿ. ಉಳಿದವುಗಳನ್ನು ಬಿಟ್ಟುಬಿಡಿರಿ. ನಾನು ಅನೇಕ ವಿಷಯಗಳನ್ನು ಸೂಚಿಸಿರಬಹುದು. ಆದರೂ ಅವುಗಳಲ್ಲಿ ಕೆಲವುಗ ಳನ್ನು ಮಾತ್ರ ಆರಿಸಿ ಕಾರ್ಯಮಾಡಬೇಕೆಂದು ನನ್ನ ವಿನಂತಿ ಇದೆ. ನನ್ನ ಭಾಷಣವು ಬಹಳ ಉದ್ದವಾಯಿತು. ಕ್ಷಮಿಸಬೇಕು. ಈ ವರೆಗೆ ತಾವು ಅದನ್ನು ಶಾಂತಚಿತ್ತರಾಗಿ ಕೇಳಿದ್ದಕ್ಕೆ ನಾನು ತಮಗೆ ಬಹಳ ಆಭಾರಿಯಾಗಿದ್ದೇನೆ.

---

# ಧಾರ್ಮಿಕ ಶಿಕ್ಷಣ.

(ಲೇಖಕ— ಓರ್ವ ಶಿಕ್ಷಕ.)



ನಮ್ಮ ದೇಶದಲ್ಲಿ ಶಾಲೆಕಾಲೇಜುಗಳಿಗೂ ಧರ್ಮಕ್ಕೂ ಬದ್ಧ ವೈರ ವಿದ್ದಂತೆ ಕಾಣುತ್ತದೆ. ಶಿಕ್ಷಣಸಂಸ್ಥೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡಬೇಕೆಂದರೆ ಅನೇಕರು ಸಿಟ್ಟುಬೆಂಕಿಯಾಗುತ್ತಾರೆ. ಅದೇಕೋ ತಿಳಿಯದು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸ್ಕೂಲುಕಾಲೇಜುಗಳು ಚರ್ಚಗಳ ನೆರೆಯಲ್ಲಿದ್ದು ಅಲ್ಲಿ ಪಾದ್ರಿಗಳಿಂದ ಕ್ರಮಬದ್ಧವಾದ ಧಾರ್ಮಿಕ ಶಿಕ್ಷಣವು ಕೊಡಲ್ಪಡುತ್ತದೆ. ಧರ್ಮದ ತವರುಮನೆ ಎನಿಸಿದ ಭರತಖಂಡದಲ್ಲಿ ಜಾಜ್ವಲ್ಯವಾದ ಆಧ್ಯಾತ್ಮಿಕ ಭಾವನೆಯನ್ನೂ ಸ್ಫೂರ್ತಿಯನ್ನೂ ಹುಟ್ಟಿಸುವ ವಿದ್ಯಾಸಂಸ್ಥೆಗಳಿಲ್ಲದಿರುವದು ಲಾಂಛನಾಸ್ಪದವಲ್ಲವೇ? ಭೌತಿಕಸುಖದಲ್ಲಿಯೇ ಲೋಲುಪ್ತರಾದ ಪಾಶ್ಚಾತ್ಯ ರಾಷ್ಟ್ರಗಳ ಸ್ಕೂಲು ಕಾಲೇಜುಗಳಲ್ಲಿ ಧಾರ್ಮಿಕ ವಾತಾವರಣವು ಸುಳಿದಾಡುತ್ತಿರುವದು ವಿಚಿತ್ರವಲ್ಲವೇ? ನಮ್ಮ ಶಿಕ್ಷಣಸಂಸ್ಥೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡುವದು ಅಸಾಧ್ಯವೇ? ಹಾಗಿದ್ದರೆ ಎಂತಹ ಧಾರ್ಮಿಕ ಶಿಕ್ಷಣವು ಅಸಾಧ್ಯ? ಸಾಧ್ಯಮಾಡಿಕೊಳ್ಳಬೇಕಾದರೆ ಧಾರ್ಮಿಕ ಶಿಕ್ಷಣದ ಸ್ವರೂಪವನ್ನು ಹೇಗೆ ವ್ಯತ್ಯಾಸಗೊಳಿಸಬೇಕು? ಈ ವಿಷಯಗಳ ಬಗ್ಗೆ ಸ್ವಲ್ಪ ಆಲೋಚಿಸುವಾ.

ನಮ್ಮ ಪವಿತ್ರ ದೇಶದಲ್ಲಿ ಆಧ್ಯಾತ್ಮಿಕ ಭಾವನೆಯು ಅಳಿದು ಭೌತಿಕ ಭಾವನೆಯು ಉಳಿಯಲಿಕ್ಕೆ ಕಾರಣವೇನು? 'ರಾಜಾ ಕಾಲಸ್ಯ ಕಾರಣಂ' ಎಂಬದೊಂದೇ ಉತ್ತರವು- ಮೊಟ್ಟಮೊದಲು ನಮ್ಮ ದೇಶದಲ್ಲಿ ವಿದ್ಯಾಗುರುಗಳೆಂದರೆ ದೇವರ ಸಮಾನರೆಂದು ವಿದ್ಯಾರ್ಥಿಗಳು ಭಾವಿಸಿ ಅವರಲ್ಲಿ ಭಕ್ತಿ, ಆಜ್ಞಾಧಾರಕತ್ವ, ಪೂಜ್ಯತೆಗಳಿಂದ ನಡೆದುಕೊಳ್ಳುತ್ತಿದ್ದರು. ಆದರೆ ಬ್ರಿಟಿಶ್ ಆಡಳಿತೆಯು ಈಗಿನ ಕಾಲದಲ್ಲಿ ಅಂಥ ಭಾವನೆಯೆಲ್ಲಿದೆ? ಶಿಕ್ಷಣಸಂಸ್ಥೆಗಳೆಲ್ಲ ವ್ಯಾಪಾರೀಮಂದಿರಗಳಾದುದರಿಂದ ಗುರುಗಳಲ್ಲಿದ್ದ ಪೂಜ್ಯ ಭಾವನೆಯು ನಷ್ಟವಾಗಿದೆ. ಗುರುಗಳಾದರೋ ಆಧ್ಯಾತ್ಮಿಕ ಬಲಶಾಲಿಗಳಾಗಿರದೆ ಸ್ವಾರ್ಥತ್ಯಾಗ, ಸ್ವದೇಶಪ್ರೇಮ, ನಿರಾಶೆಗಳಿಂದ ಕೆಲಸ ಮಾಡಲಿಕ್ಕೆ ಮುಂದುವರಿಯದೆ ಕೇವಲ ಹೊಟ್ಟೆಹೊರಕೊಳ್ಳುವ ಕೂಲಿಕಾರರಂತೆ ಕೆಲಸ ಮಾಡುತ್ತಿರುವದರಿಂದ ಜನರಲ್ಲಿ

ಆವರ ಸ್ಥಿತಿಯು ಕೀಳ್ತರದ್ದಾಗಿ ಕಾಣುತ್ತದೆ. ಎಲ್ಲಿಯು ವರೆಗೆ ಗುರುಶಿಷ್ಯರಲ್ಲಿ ವ್ಯಾಪಾರೀಪ್ರೇಮವು ನೆಲಿಸಿರುವದೋ ಅಲ್ಲಿಯು ವರೆಗೂ ಧಾರ್ಮಿಕ, ಶಿಕ್ಷಣವು ಹೇಗೆ ತಾನೆ ಸಾಧ್ಯವಾಗುವದು ?

ಇಂಗ್ಲಿಷರು ಮೊದಲು ನಮ್ಮ ದೇಶದಲ್ಲಿ ಶಿಕ್ಷಣ ಪ್ರಾರಂಭವಾಡಬೇಕಾದರೆ ಧರ್ಮವೃಕ್ಷಕ್ಕೆ ಕುಠಾರವನ್ನು ನೀಡಿ ಭೌತಿಕ ವೃಕ್ಷವನ್ನು ಬೆಳೆಯಿಸಿದರು. ಚಾರ್ಲಸಗ್ರಾಂಟ, ಮೆಕಾಲೇ, ಎಲ್ಫಿನಸ್ಟನ ಪ್ರಭೃತಿಗಳು ಹಿಂದುಸ್ಥಾನದಲ್ಲಿ ಅಂಗ್ಲ ವಿದ್ಯಾಪ್ರಸಾರಮಾಡಿದಂದಿನಿಂದ ನಮ್ಮ ದೇಶದ ಸುಶಿಕ್ಷಿತ ವರ್ಗದಲ್ಲಿ ಆಧ್ಯಾತ್ಮಿಕ ಭಾವನೆಯು ಅಡಗಿ ವಿವೇಚನಾತ್ಮಕವಾದ ಶಾಸ್ತ್ರೀಯ ಬುದ್ಧಿಯು ಮನೆಮಾಡಿಕೊಂಡಿತು. ಅದೇ ಮುಂದೆ ಎಲ್ಲ ಕಡೆಗೂ ವ್ಯಾಪಿಸಿತು. ಧರ್ಮದ ಮೂಢ ಭಾವನೆಯು ಹೋಗಿ ಸಾರಾಸಾರ ವಿಚಾರಮಾಡುವ ಶಕ್ತಿಯುಂಟಾದದ್ದೇನೋ ನಮ್ಮ ಸುದೈವವೇ ಸರಿ. ಆದರೆ ನಮ್ಮ ದೇಶದ ಅತ್ಯಂತ ಜೀವಾಳದಂತಿದ್ದ ಆಧ್ಯಾತ್ಮಿಕ ಭಾವನೆಯು ಸದ್ದಡಗಿ ಹೋದದ್ದು ಬಹು ವಿಷಾದದ ಸಂಗತಿಯು.

ಈಗಿನ ವಾತಾವರಣದಲ್ಲಿ ಸಾರ್ವಜನಿಕ ಶಿಕ್ಷಣಸಂಸ್ಥೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡುವದು ಅಸಂಭವವೆಂದು ಅನೇಕ ಪೌರ್ವಾತ್ಯ ಪಾಶ್ಚಾತ್ಯರ ಅಭಿಪ್ರಾಯಗಳು ಕೆಳಗೆ ಕಾಣಿಸಿದಂತೆ ಕಂಡುಬರುತ್ತವೆ:— ಭರತಖಂಡದಲ್ಲಿ ನೂರೆಂಟು ಜಾತಿಧರ್ಮಗಳಿರುವದರಿಂದ ಯಾವ ಧರ್ಮದ ಶಿಕ್ಷಣವನ್ನು ಕೊಡಬೇಕೆಂಬದು ಕಠಿಣ. ಯಾವದಾದರೊಂದು ಧರ್ಮದ ಶಿಕ್ಷಣವನ್ನು ಪ್ರಾರಂಭಿಸಿದರೆ ಜಾತಿ ಜಾತಿಗಳಲ್ಲಿ ಮತ್ಸರಹುಟ್ಟಿ ದೇಶದಲ್ಲಿ ಅಶಾಂತತೆ ದಂಗೆಗಳೇಳುವ ಸಂಭವವುಂಟು. ಒಂದೇ ಧರ್ಮವುಳ್ಳ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಧಾರ್ಮಿಕ ಶಿಕ್ಷಣವು ಸಾಧ್ಯವಾದಂತೆ ಬಹು ಧರ್ಮವುಳ್ಳ ಭರತಖಂಡಕ್ಕೆ ಅದು ಸಾಧ್ಯವಾಗಲಾರದು. ಹಿಂದು, ಮುಸಲ್ಮಾನ, ಪಾರ್ಸಿ, ಬೌದ್ಧ, ಕ್ರಿಸ್ತಿ ಮುಂತಾದ ಧರ್ಮಗಳಲ್ಲಿ ಯಾವ ಧರ್ಮಗ್ರಂಥಗಳ ತತ್ವಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಬೇಕು ? ಎಲ್ಲ ಧರ್ಮಗಳನ್ನು ತಿಳಿಸುವದು ಸಾಧ್ಯವೇ ಹೇಗೆ? ಧಾರ್ಮಿಕ ಶಿಕ್ಷಣ ಕೊಡಲಿಕ್ಕೆ ಯಾವ ಯಾವ ಜಾತಿಯ ಶಿಕ್ಷಕರನ್ನು ನೇಮಿಸಬೇಕು ? ಸರಕಾರವು ಯಾವ ಧರ್ಮದವರಿಗೆ ಪಕ್ಷಪಾತವನ್ನು ತೋರಿಸಬೇಕು ? ರಾಣಿಯವರ ಜಾಹೀರನಾಮೆಯ ವಿರುದ್ಧ ಯಾವ ಧರ್ಮದಲ್ಲಿ ಕೈಹಾ

ಕಬೇಕು ? ಇವೆಲ್ಲ ತೊಂದರೆಯ ಪ್ರಶ್ನೆಗಳಲ್ಲವೇ ? ಆದುದರಿಂದ ಶಿಕ್ಷಣ ಸಂಸ್ಥೆಗಳಲ್ಲಿ ಧಾರ್ಮಿಕ ಶಿಕ್ಷಣ ಕೊಡುವದು ಸಾಧ್ಯವೇ ಇಲ್ಲ.

ಹಿಂದುಸ್ಥಾನವು ಪುರಾತನ ಸಾಂಪ್ರದಾಯಗಳನ್ನು ಪ್ರೇಮದಿಂದ ಅನುಸರಿಸುವಂಥ ದೇಶವು. ಅಮೇರಿಕದಂತೆ ಹೊಸ ಹೊಸ ಸುಧಾರಣೆ ಶೋಧಗಳಿಗೆ ಕೈಹಾಕುವ ರಾಷ್ಟ್ರವಲ್ಲ. ಎಲ್ಲ ಧರ್ಮಗಳ ತತ್ವಗಳನ್ನು ಶೇಖರಿಸಿ ಒಂದೇ ವಿಶಿಷ್ಟ ಧರ್ಮವನ್ನು ಮಾಡಿ ಅದನ್ನೇ ಎಲ್ಲ ಧರ್ಮದವರೂ ಅನುಸರಿಸಬೇಕೆಂದರೆ ಬಹುಜನರು ಒಪ್ಪರು. ಶಾಲೆಗಳಲ್ಲಿ ಇಂಥ ಧಾರ್ಮಿಕ ಶಿಕ್ಷಣವು ಪ್ರಾರಂಭವಾದರೆ ತಾಯಿ ತಂದೆಗಳು ತಮ್ಮ ಮಕ್ಕಳುಗಳನ್ನು ಶಾಲೆಗೆ ಕಳಿಸಿಕೊಡುವದಿಲ್ಲ. ಇಂಥ ಧಾರ್ಮಿಕ ಸಂಸ್ಥೆಗಳಿಗೆ ಸಾರ್ವಜನಿಕ ಹಣವು ಸಲ್ಲುವದಿಲ್ಲ.

ಹಿಂದೂ ಧರ್ಮದಲ್ಲಿ ಅಜ್ಞಾನ, ಮೂಢಭಾವನೆ, ಅಂಧಶ್ರದ್ಧೆ, ಮೂರ್ತಿಪೂಜೆ, ಅಸ್ಪೃಶ್ಯತೆ ಮುಂತಾದ ನಿಂದ್ಯವಾದ ಸಾಂಪ್ರದಾಯಗಳು ಅಂಟಿಕೊಂಡಿರುವದರಿಂದ ಇವು ನಿರ್ಮೂಲವಾಗಬೇಕಾದರೆ ಶಿಕ್ಷಣ ಸಂಸ್ಥೆಗಳಲ್ಲಿ ಭೌತಿಕ ಮತ್ತು ಶಾಸ್ತ್ರಿಯ ವಿಷಯುಗಳನ್ನೇ ಹೇಳಿಕೊಡಬೇಕಲ್ಲದೆ ಮತ್ತೂ ಧಾರ್ಮಿಕ ತತ್ವಗಳನ್ನು ಹೇಳಿ ವಿದ್ಯಾರ್ಥಿಗಳನ್ನು ಮತ್ತಿಷ್ಟು ಮೂಢಮತಿಗಳನ್ನು ಮಾಡಬಾರದು. ಕಾರಣ ಹಿಂದುಸ್ಥಾನಕ್ಕೆ ಭೌತಿಕ ಶಿಕ್ಷಣವೇ ಬೇಕಲ್ಲದೆ ಧಾರ್ಮಿಕ ಶಿಕ್ಷಣವಲ್ಲ.

ಇದಲ್ಲದೆ ಧಾರ್ಮಿಕ ಭಾವನೆಯು ಕಲಿಸಿದರೆ ಬರುವಂತಹದಲ್ಲ. ಪುಸ್ತಕಗಳಿಂದ ಹುಟ್ಟುವಂತಹದಲ್ಲ. ಅದು ತನ್ನಿಂದ ತಾನೇ ಅಂತರಂಗದಿಂದ ಹೊರಸೂಸಿ ಹರಿಯುವಂತಹದು. ಆಂದಮೇಲೆ ಅಂಥ ಭಾವನೆಯು ಪ್ರಾದುರ್ಭವಿಸಲಿಕ್ಕೆ ಧಾರ್ಮಿಕ ಶಿಕ್ಷಣವನ್ನು ಕೊಡುವದು ಬೇಕಾಗಿಲ್ಲ. ಆ ಭಾವನೆಯುಲ್ಲಿ ಇರುವದೋ ಅಲ್ಲಿ ಅದು ಯೋಗ್ಯ ಸಮಯ ದೊರೆತಾಗ ತನ್ನಷ್ಟಕ್ಕೆ ತಾನೇ ಹೊರಬೀಳುತ್ತದೆ.

ಶಿಕ್ಷಣದಿಂದಲ್ಲದೆ ಆಚರಣೆಯಿಂದಾದರೂ ಧಾರ್ಮಿಕ ಶಿಕ್ಷಣವನ್ನು ಕೊಡಲಿಕ್ಕೆ ಬರುತ್ತದೆಂದು ಸಾಧಿಸಿದರೆ ಸದ್ಗುಣ ಸದಾಚಾರದಿಂದ ಅನ್ಯರಿಗೆ ಉದಾಹರಣೆ ಹಾಕಿಕೊಡುವಂಥ ಆದರ್ಶಪ್ರಾಯರಾದ ಶಿಕ್ಷಕರು ದೊರೆಯುವದು ದುರ್ಲಭ. ಕ್ರೈಸ್ತ, ಬಸವೇಶ್ವರ, ಸ್ವಾಮಿ ವಿವೇಕಾನಂದ ಮಹಾತ್ಮಾಗಾಂಧಿಯುವರಂಥ ಶಿಕ್ಷಕರಿದ್ದರೆ ಇಂಥ ಧಾರ್ಮಿಕ ಶಿಕ್ಷ

ಣವು ಸಾಧ್ಯ. ಅಂಥವರು ಸಾವಿರಕ್ಕೊಬ್ಬರೋ, ಲಕ್ಷಕ್ಕೊಬ್ಬರೋ! ಅಂದಮೇಲೆ ಧಾರ್ಮಿಕಶಿಕ್ಷಣವು ಶಿಕ್ಷಣಸಂಸ್ಥೆಗಳಲ್ಲಿ ಹೇಗೆ ತಾನೆ ಸಾಧ್ಯವಾಗುವದು?

ಸಾರ್ವಜನಿಕ ಶಿಕ್ಷಣಸಂಸ್ಥೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡುವದು ಅಶಕ್ಯವೆಂದರೆ ಆಯಾಯ ಸಮಾಜದವರು ಮಿಶನರಿ ಸಂಸ್ಥೆಗಳಂತೆ ತಮ್ಮ ಧರ್ಮವನ್ನು ಪ್ರತ್ಯೇಕವಾಗಿ ತಮ್ಮ ಹುಡುಗರಿಗೇಕೆ ಹೇಳಿ ಕೊಡಬಾರದು? ಈ ಮಾತು ತೋರಿಕೆಗೆ ಸಮಂಜಸವಾಗಿ ಕಂಡರೂ ವಿಶ್ವವ್ಯಾಪಕ ದೃಷ್ಟಿಯುಳ್ಳ ಈಗಿನ ವಾತಾವರಣದಲ್ಲಿ ಇಂಥ ಸಂಕುಚಿತ ಭಾವನೆಯ ಧಾರ್ಮಿಕ ಸಂಸ್ಥೆಗಳು ಅಭಿವೃದ್ಧಿಹೊಂದಲಾರವು. ಹಾಗಾದರೆ ನಾವು ಯಾವ ತರಹದ ಧಾರ್ಮಿಕ ಶಿಕ್ಷಣವನ್ನು ಕೊಡಬೇಕು?

ಲೋಕದಲ್ಲಿ ಎಲ್ಲರಿಗೂ ಪರಮಾತ್ಮನೊಬ್ಬನೇ ಇದ್ದಂತೆ ಧರ್ಮವು ಎಲ್ಲರಿಗೂ ಒಂದೇ ಅದೆ. 'ದೇವನೊಬ್ಬ ನಾಮ ಹಲವು' ಎಂದು ಬಸವೇಶನು ಹೇಳಿದಂತೆ ಒಬ್ಬನೇ ದೇವರನ್ನು ಅನೇಕರು ಅನೇಕ ಹೆಸರಿನಿಂದ ಕರೆದಿದ್ದಾರೆ. ಒಂದು ಜನಾಂಗದಲ್ಲಿ ಒಬ್ಬನಂತೆ ಇನ್ನೊಬ್ಬನ ಮುಖವಿರುವದಿಲ್ಲ. ಆದಾಗ್ಯೂ ಎಲ್ಲರನ್ನು ಮನುಷ್ಯರೆಂದು ಒಂದೇ ಹೆಸರಿನಿಂದ ಕರೆಯುವದಿಲ್ಲವೇ? ಆದುದರಿಂದ ಏಕತ್ವದಲ್ಲಿ ಅನೇಕತ್ವವೂ ಅನೇಕತ್ವದಲ್ಲಿ ಏಕತ್ವವೂ ಉಂಟೆಂದು ಸಿದ್ಧವಾಗುತ್ತದೆ. ಹಾಗಿರುವದು ಸೃಷ್ಟಿಯ ನೇಮವು. ಏಕಾನೇಕತ್ವಗಳಲ್ಲಿಯೇ ಸೌಂದರ್ಯವಿರುತ್ತದೆ. ಅದರಂತೆಯೇ ಹಿಂದು, ಮುಸಲ್ಮಾನ, ಕ್ರಿಸ್ತಿ, ಫಾರ್ಸಿ ಮುಂತಾದ ಭಿನ್ನ ಧರ್ಮಗಳಿದ್ದರೂ ಅವುಗಳೆಲ್ಲ ವಿಶ್ವಧರ್ಮ ಅಥವಾ ಮಾನವಧರ್ಮವೆಂಬದೊಂದೇ ಧರ್ಮದಲ್ಲಿ ಅಡಕವಾಗಿರುತ್ತವೆ. ಈ ತರಹದ ವಿಶ್ವವ್ಯಾಪಕ ಭಾವನೆಯನ್ನು ವಿದ್ಯಾರ್ಥಿಗಳ ಮನಸ್ಸಿನಲ್ಲಿ ತುಂಬಿ ಅವರು ಎಲ್ಲ ಧರ್ಮಗಳನ್ನು ಸಹಾನುಭೂತಿಯಿಂದ ಕಾಣುವಂತೆ ಮಾಡಬೇಕು. ನಾ ಹೆಚ್ಚು ನೀ ಕಡಿಮೆ ಯೆಂದರೆ ದೋಷವುಂಟು. ಎಲ್ಲರೂ ಒಂದೇ ಎಂದರೆ ದೋಷವೇ ಇಲ್ಲ.

ಧರ್ಮವೆಂಬುದು ಪೂಜೆ ಪುನಸ್ಕಾರಗಳಲಿಲ್ಲ. ಗುಡಿ ಗುಂಡಾರಗಳಲ್ಲಿಲ್ಲ. ಮಠ ಮಸೀದೆಗಳಲ್ಲಿಲ್ಲ. ವೇದಾಗಮ ಬಾಯಿಬಲ್ ಕುರಾನಗಳಲ್ಲಿಲ್ಲ. ಮನು, ಗೌತಮ, ಕ್ರಿಸ್ತ ಮುಹಮ್ಮದಾದಿಗಳು ಹಾಕಿಕೊಟ್ಟ

ಕಬೇಕು ? ಇವೆಲ್ಲ ತೊಂದರೆಯ ಪ್ರಶ್ನೆಗಳಲ್ಲವೇ ? ಆದುದರಿಂದ ಶಿಕ್ಷಣ ಸಂಸ್ಥೆಗಳಲ್ಲಿ ಧಾರ್ಮಿಕ ಶಿಕ್ಷಣ ಕೊಡುವದು ಸಾಧ್ಯವೇ ಇಲ್ಲ.

ಹಿಂದುಸ್ಥಾನವು ಪುರಾತನ ಸಾಂಪ್ರದಾಯಗಳನ್ನು ಪ್ರೇಮದಿಂದ ಅನುಸರಿಸುವಂಥ ದೇಶವು. ಅಮೇರಿಕವಂತೆ ಹೊಸ ಹೊಸ ಸುಧಾರಣೆ ಶೋಧಗಳಿಗೆ ಕೈಹಾಕುವ ರಾಷ್ಟ್ರವಲ್ಲ. ಎಲ್ಲ ಧರ್ಮಗಳ ತತ್ವಗಳನ್ನು ಶೇಖರಿಸಿ ಒಂದೇ ವಿಶಿಷ್ಟ ಧರ್ಮವನ್ನು ಮಾಡಿ ಅದನ್ನೇ ಎಲ್ಲ ಧರ್ಮದವರೂ ಅನುಸರಿಸಬೇಕೆಂದರೆ ಬಹುಜನರು ಒಪ್ಪರು. ಶಾಲೆಗಳಲ್ಲಿ ಇಂಥ ಧಾರ್ಮಿಕ ಶಿಕ್ಷಣವು ಪ್ರಾರಂಭವಾದರೆ ತಾಯಿ ತಂದೆಗಳು ತಮ್ಮ ಮಕ್ಕಳುಗಳನ್ನು ಶಾಲೆಗೆ ಕಳಿಸಿಕೊಡುವದಿಲ್ಲ. ಇಂಥ ಧಾರ್ಮಿಕ ಸಂಸ್ಥೆಗಳಿಗೆ ಸಾರ್ವಜನಿಕ ಹಣವು ಸಲ್ಲುವದಿಲ್ಲ.

ಹಿಂದೂ ಧರ್ಮದಲ್ಲಿ ಅಜ್ಞಾನ, ಮೂಢಭಾವನೆ, ಅಂಧಶ್ರದ್ಧೆ, ಮೂರ್ತಿಪೂಜೆ, ಅಸ್ಪೃಶ್ಯತೆ ಮುಂತಾದ ನಿಂದ್ಯವಾದ ಸಾಂಪ್ರದಾಯಗಳು ಅಂಟಿಕೊಂಡಿರುವದರಿಂದ ಇವು ನಿರ್ಮೂಲವಾಗಬೇಕಾದರೆ ಶಿಕ್ಷಣ ಸಂಸ್ಥೆಗಳಲ್ಲಿ ಭೌತಿಕ ಮತ್ತು ಶಾಸ್ತ್ರಿಯ ವಿಷಯಗಳನ್ನೇ ಹೇಳಿಕೊಡಬೇಕಲ್ಲದೆ ಮತ್ತೂ ಧಾರ್ಮಿಕ ತತ್ವಗಳನ್ನು ಹೇಳಿ ವಿದ್ಯಾರ್ಥಿಗಳನ್ನು ಮತ್ತಿಷ್ಟು ಮೂಢಮತಿಗಳನ್ನು ಮಾಡಬಾರದು. ಕಾರಣ ಹಿಂದುಸ್ಥಾನಕ್ಕೆ ಭೌತಿಕ ಶಿಕ್ಷಣವೇ ಬೇಕಲ್ಲದೆ ಧಾರ್ಮಿಕ ಶಿಕ್ಷಣವಲ್ಲ.

ಇದಲ್ಲದೆ ಧಾರ್ಮಿಕ ಭಾವನೆಯು ಕಲಿಸಿದರೆ ಬರುವಂತಹದಲ್ಲ. ಪುಸ್ತಕಗಳಿಂದ ಹುಟ್ಟುವಂತಹದಲ್ಲ. ಅದು ತನ್ನಿಂದ ತಾನೇ ಅಂತರಂಗದಿಂದ ಹೊರಸೂಸಿ ಹರಿಯುವಂತಹದು. ಅಂದಮೇಲೆ ಅಂಥ ಭಾವನೆಯು ಪ್ರಾದುರ್ಭವಿಸಲಿಕ್ಕೆ ಧಾರ್ಮಿಕ ಶಿಕ್ಷಣವನ್ನು ಕೊಡುವದು ಬೇಕಾಗಿಲ್ಲ. ಆ ಭಾವನೆಯಲ್ಲಿ ಇರುವದೋ ಅಲ್ಲಿ ಅದು ಯೋಗ್ಯ ಸಮಯ ದೊರೆತಾಗ ತನ್ನಷ್ಟಕ್ಕೆ ತಾನೇ ಹೊರಬೀಳುತ್ತದೆ.

ಶಿಕ್ಷಣದಿಂದಲ್ಲದೆ ಆಚರಣೆಯಿಂದಾದರೂ ಧಾರ್ಮಿಕ ಶಿಕ್ಷಣವನ್ನು ಕೊಡಲಿಕ್ಕೆ ಬರುತ್ತದೆಂದು ಸಾಧಿಸಿದರೆ ಸದ್ಗುಣ ಸದಾಚಾರದಿಂದ ಅನ್ಯರಿಗೆ ಉದಾಹರಣೆ ಹಾಕಿಕೊಡುವಂಥ ಆದರ್ಶಪ್ರಾಯರಾದ ಶಿಕ್ಷಕರು ದೊರೆಯುವದು ದುರ್ಲಭ. ಕ್ರೈಸ್ತ, ಬಸವೇಶ್ವರ, ಸ್ವಾಮಿ ವಿವೇಕಾನಂದ ಮಹಾತ್ಮಾಗಾಂಧಿಯವರಂಥ ಶಿಕ್ಷಕರಿದ್ದರೆ ಇಂಥ ಧಾರ್ಮಿಕ ಶಿಕ್ಷ

ಣವು ಸಾಧ್ಯ. ಅಂಥವರು ಸಾವಿರಕ್ಕೊಬ್ಬರೋ, ಲಕ್ಷಕ್ಕೊಬ್ಬರೋ! ಅಂದಮೇಲೆ ಧಾರ್ಮಿಕಶಿಕ್ಷಣವು ಶಿಕ್ಷಣಸಂಸ್ಥೆಗಳಲ್ಲಿ ಹೇಗೆ ತಾನೆ ಸಾಧ್ಯವಾಗುವದು ?

ಸಾರ್ವಜನಿಕ ಶಿಕ್ಷಣಸಂಸ್ಥೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ಕೊಡುವದು ಅಶಕ್ಯವೆಂದರೆ ಆಯಾಯ ಸಮಾಜದವರು ಮಿಶನರಿ ಸಂಸ್ಥೆಗಳಂತೆ ತಮ್ಮ ಧರ್ಮವನ್ನು ಪ್ರತ್ಯೇಕವಾಗಿ ತಮ್ಮ ಹುಡುಗರಿಗೇಕೆ ಹೇಳಿಕೊಡಬಾರದು ? ಈ ಮಾತು ತೋರಿಕೆಗೆ ಸಮಂಜಸವಾಗಿ ಕಂಡರೂ ವಿಶ್ವವ್ಯಾಪಕ ದೃಷ್ಟಿಯುಳ್ಳ ಈಗಿನ ವಾತಾವರಣದಲ್ಲಿ ಇಂಥ ಸಂಕುಚಿತ ಭಾವನೆಯ ಧಾರ್ಮಿಕ ಸಂಸ್ಥೆಗಳು ಅಭಿವೃದ್ಧಿ ಹೊಂದಲಾರವು. ಹಾಗಾದರೆ ನಾವು ಯಾವ ತರಹದ ಧಾರ್ಮಿಕ ಶಿಕ್ಷಣವನ್ನು ಕೊಡಬೇಕು ?

ಲೋಕದಲ್ಲಿ ಎಲ್ಲರಿಗೂ ಪರಮಾತ್ಮನೊಬ್ಬನೇ ಇದ್ದಂತೆ ಧರ್ಮವು ಎಲ್ಲರಿಗೂ ಒಂದೇ ಅದೆ. 'ದೇವನೊಬ್ಬ ನಾಮ ಹಲವು' ಎಂದು ಬಸವೇಶನು ಹೇಳಿದಂತೆ ಒಬ್ಬನೇ ದೇವರನ್ನು ಅನೇಕರು ಅನೇಕ ಹೆಸರಿನಿಂದ ಕರೆದಿದ್ದಾರೆ. ಒಂದು ಜನಾಂಗದಲ್ಲಿ ಒಬ್ಬನಂತೆ ಇನ್ನೊಬ್ಬನ ಮುಖವಿರುವದಿಲ್ಲ. ಆದಾಗ್ಯೂ ಎಲ್ಲರನ್ನು ಮನುಷ್ಯರೆಂದು ಒಂದೇ ಹೆಸರಿನಿಂದ ಕರೆಯುವದಿಲ್ಲವೇ ? ಆದುದರಿಂದ ಏಕತ್ವದಲ್ಲಿ ಅನೇಕತ್ವವೂ ಅನೇಕತ್ವದಲ್ಲಿ ಏಕತ್ವವೂ ಉಂಟೆಂದು ಸಿದ್ಧವಾಗುತ್ತದೆ. ಹಾಗಿರುವದು ಸೃಷ್ಟಿಯ ನೇಮವು. ಏಕಾನೇಕತ್ವಗಳಲ್ಲಿಯೇ ಸೌಂದರ್ಯವಿರುತ್ತದೆ. ಅದರಂತೆಯೇ ಹಿಂದು, ಮುಸಲ್ಮಾನ, ಕ್ರಿಸ್ತಿ, ಫಾರ್ಸಿ ಮುಂತಾದ ಭಿನ್ನ ಧರ್ಮಗಳಿದ್ದರೂ ಅವುಗಳೆಲ್ಲ ವಿಶ್ವಧರ್ಮ ಅಥವಾ ಮಾನವಧರ್ಮವೆಂಬದೊಂದೇ ಧರ್ಮದಲ್ಲಿ ಅಡಕವಾಗಿರುತ್ತವೆ. ಈ ತರಹದ ವಿಶ್ವವ್ಯಾಪಕ ಭಾವನೆಯನ್ನು ವಿದ್ಯಾರ್ಥಿಗಳ ಮನಸ್ಸಿನಲ್ಲಿ ತುಂಬಿ ಅವರು ಎಲ್ಲ ಧರ್ಮಗಳನ್ನು ಸಹಾನುಭೂತಿಯಿಂದ ಕಾಣುವಂತೆ ಮಾಡಬೇಕು. ನಾ ಹೆಚ್ಚು ನೀ ಕಡಿಮೆ ಯೆಂದರೆ ದೋಷವುಂಟು. ಎಲ್ಲರೂ ಒಂದೇ ಎಂದರೆ ದೋಷವೇ ಇಲ್ಲ.

ಧರ್ಮವೆಂಬುದು ಪೂಜೆ ಪುನಸ್ಕಾರಗಳಲಿಲ್ಲ. ಗುಡಿ ಗುಂಡಾರಗಳಲ್ಲಿಲ್ಲ. ಮಠ ಮಸೀದೆಗಳಲ್ಲಿಲ್ಲ. ವೇದಾಗಮ ಬಾಯಿಬಲ್ ಕುರಾನಗಳಲ್ಲಿಲ್ಲ. ಮನು, ಗೌತಮ, ಕ್ರಿಸ್ತ ಮಹಮ್ಮದಾದಿಗಳು ಹಾಕಿಕೊಟ್ಟ

ಮಾರ್ಗವಲ್ಲಿಲ್ಲ. ಜಗತ್ತಿನಲ್ಲಿ ಎಷ್ಟು ಜನರಿರುವರೋ ಅಷ್ಟೇ ಧರ್ಮ ಗಳಿರುತ್ತವೆ. ಧರ್ಮವು ವ್ಯಕ್ತಿಗತವಾಗಿರುವದಲ್ಲದೆ ಸಮೂಹಗತವಾ ದುದಲ್ಲ. ಆದಾಗ್ಯೂ ಪ್ರತಿಯೊಬ್ಬನು ತನ್ನ ಮನಬಂದಂತೆ ನಡೆಯು ಹತ್ತಿದರೆ ಸಮಾಜದಲ್ಲಿ ಕೋಲಾಹಲವಾದೀತೆಂದು ವ್ಯಕ್ತಿಗತ ಧರ್ಮವು ಸಮಾಜದ ಸ್ವರೂಪವನ್ನು ಹೊಂದಿ ಸಮಾಜದ ಕಟ್ಟಳೆಗಳಿಗೆ ಅಧೀ ನವಾಗಿದೆ.

ಸಮಾಜದಲ್ಲಿ ಎಲ್ಲ ಜಾತಿಪಂಥಗಳ ಜನರಿರುವರು. ಅವರವರ ಸಂಗಡ ಪ್ರೇಮ ಐಕ್ಯತೆಗಳಿಂದ ಕೂಡಿ ವ್ಯವಹರಿಸುವದೇ ಧರ್ಮವು. ಒಬ್ಬರನ್ನೊಬ್ಬರು ನಿಂದಿಸಿ ತಮ್ಮ ಮೂಗು ಮೇಲು ಮಾಡಿಕೊಂಡು ಮೆರೆಯುವದಕ್ಕಿಂತಲೂ ಎಲ್ಲರೂ ಕೂಡಿ ನಡೆಯುವದರಲ್ಲಿಯೇ ಹೆಚ್ಚು ಲಾಭವೂ ಕ್ಷೇಮವೂ ಉಂಟು. ಧರ್ಮವು ಸಮಾಜದ ಹಿತಚಿಂತನ ಗಳಿಗಾಗಿ ಇರುತ್ತದಲ್ಲದೆ ಸಮಾಜದ ಕೋಲಾಹಲಕ್ಕಲ್ಲ.

ವ್ಯಾಪಕ ದೃಷ್ಟಿಯಿಂದ ವಿಚಾರಿಸಲು ಸತ್ಯವೇ ಧರ್ಮ, ಸೌಂದ ರ್ಯವೇ ಧರ್ಮ. ಸದ್ವರ್ತನೆಯೇ ಧರ್ಮ. ಈ ಮೂರು ಗುಣಗಳು ಯಾವ ಜಾತಿ ವರ್ಣಗಳಲ್ಲಿದ್ದರೇನು? ಯಾವ ದೇಶದಲ್ಲಿದ್ದರೇನು? ಸತ್ಯನಿಷ್ಠನಾದ ಮಹಾವ್ಯಕ್ತಿಯೊಬ್ಬನು ಯಾವ ದೇಶದಲ್ಲಿ ಹುಟ್ಟಿದರು ಇಡೀ ಜಗತ್ತಿಗೇನೇ ಆತನು ಪೂಜ್ಯನಲ್ಲವೇ? ಸೌಂದರ್ಯಮಯವಾದ ಚಿತ್ರ, ಇಂಪಾದ ಗಾಯನ, ಮಧುರವಾದ ಕಾವ್ಯಗಳು ಎಲ್ಲಿದ್ದರೇನು? ಮನಸ್ಸಿಗೆ ಆನಂದವನ್ನೀಯುವದಿಲ್ಲವೇ? ಸದಾಚಾರ ಸದ್ಗುಣ ಶಾಲಿ ಗಳಾದ ಮಹಿಮರು ಎಲ್ಲಿ ಹುಟ್ಟಿದರೇನು? ಅವರು ಪೂಜ್ಯರೇ ಅಲ್ಲವೇ? ಈ ಪ್ರಕಾರ ಸತ್ಯಸೌಂದರ್ಯ ಸದ್ವರ್ತಗಳಲ್ಲಿಯೇ ನಿಜವಾದ ಧಾರ್ಮಿಕ ಶಿಕ್ಷಣದ ತಿರುಳಿರುತ್ತದೆ. ಇವುಗಳಲ್ಲಿಯೇ ಪರಮಾತ್ಮನ ಅಸ್ತಿತ್ವವಿರು ತ್ತದೆ. ಇಂಥ ಭಾವನೆಯನ್ನು ಬಾಲಕರಲ್ಲಿ ಚಲಿಸುವದೇ ಧಾರ್ಮಿಕ ಶಿಕ್ಷಣದ ಮುಖ್ಯೋದ್ದೇಶವಾಗಿದೆ.

ನಮ್ಮ ಶಿಕ್ಷಣಸಂಸ್ಥೆಗಳಲ್ಲಿ ಸತ್ಯ ಸೌಂದರ್ಯ ಸದ್ವರ್ತನೆಗಳನ್ನೊ ಳಕೊಂಡ ಪ್ರಾಥಮಿಕ ಶಿಕ್ಷಣವು ಬೇಕು. ಯಾವದೇ ದೇಶಗಳಲ್ಲಿ ಅಥವಾ ಧರ್ಮದಲ್ಲಿ ಹುಟ್ಟಿದ ಮಹಾವಿಭೂತಿಗಳನ್ನು ನಮ್ಮ ವಿದ್ಯಾರ್ಥಿಗಳು ಪ್ರೇಮದಿಂದ ಅನುಕರಣ ಮಾಡುವಂತೆ ಉಪದೇಶಿಸಬೇಕು. ಅವರ ಚರಿ ತ್ರಗಳನ್ನು ಓದಹಚ್ಚಬೇಕು. ಸೌಂದರ್ಯವನ್ನು ಬೀರುವ ಗಾಯನ,

ಚಿತ್ರಕಲೆ, ನಾಟಕ, ಪಂದ್ಯಾಟ ಮುಂತಾದ ಪ್ರಯೋಗಗಳನ್ನು ಹುಡು ಗರಿಂದ ಮಾಡಿಸಿ ಅವರಲ್ಲಿ ಉಜ್ವಲವಾದ ಭಾವನೆಯನ್ನು ಪ್ರದೀಪ್ತಿಗೊಳಿಸಬೇಕು. ಇದೇ ಧಾರ್ಮಿಕ ಶಿಕ್ಷಣವು.

ಶಾಲೆಯೆಂಬುದು ಸಣ್ಣದೊಂದು ಸಮಾಜವು. ಈ ಸಮಾಜದಲ್ಲಿ ವಿದ್ಯಾರ್ಥಿಗಳು ಬಂಧುಗಳಂತೆ ಪರಸ್ಪರ ಪ್ರೇಮದಿಂದಲೂ ಐಕ್ಯದಿಂದಲೂ ನಡೆದುಕೊಳ್ಳುವಂತೆ ಸಂಧಿಯನ್ನೊದಗಿಸಿಕೊಡಬೇಕು ಶಾಲಾಗ್ರಹಪ ಮತ್ತು ಕ್ರೀಡಾಂಗಣದ ನಿಯಮಗಳೂ ಪದ್ಧತಿಗಳೂ ವಿದ್ಯಾರ್ಥಿಯ ಸ್ವಭಾವದ ಬೆಳವಣಿಗೆಗೆ ಬಹಳೇ ಸಹಾಯ ಮಾಡುತ್ತವೆ. ಶಾಲಾಸ ಮಾಜದಲ್ಲಿ ಒಬ್ಬರನ್ನೊಬ್ಬರು ನೋಡಿ ತಮ್ಮ ತಪ್ಪುಗಳನ್ನು ತಿದ್ದಿಕೊಂಡು ಹೆಚ್ಚಳವನ್ನು ಪಡೆಯಲಿಕ್ಕೆ ಪ್ರಯತ್ನಿಸುತ್ತಾರೆ. ಶಾಲೆಯಲ್ಲಿ ಹೇಗೆ ನಡೆ ದುಕೊಂಡರೆ ಉಳಿದವರು ಹೌದೆಂಬಾರು, ತನ್ನನ್ನು ಹೊಗಳುವರು? ಇವೇ ವಿಚಾರಗಳಿಂದ ವಿದ್ಯಾರ್ಥಿಯು ತನ್ನ ಗುಣಸ್ವಭಾವದನ್ನು ಸರಿಪ ಡಿಸಿಕೊಂಡು ಸಮಾಜಕ್ಕೆ ತಕ್ಕಂತೆ ನಡೆದುಕೊಂಡು ಹೋಗುತ್ತಾನೆ. ಈ ತರಹದ ಆಚರಣೆಯಲ್ಲಿಯೂ ಧಾರ್ಮಿಕ ಶಿಕ್ಷಣದ ರಹಸ್ಯವಿರುತ್ತದೆ.

ನಾವು ವಿದ್ಯಾರ್ಥಿಗಳಿಗೆ 'ಸತ್ಯ ಮಾತಾಡು, ಕಳ್ಳತನ ಮಾಡಬೇಡ, ಸುಳ್ಳು ಹೇಳಬೇಡ ಬ್ರಹ್ಮಚರ್ಯದಿಂದ ನಡೆ' ಇತ್ಯಾದಿ ಗೊಳ್ಳು ಉಪ ದೇಶ ಮಾಡುವದರಿಂದೇನೂ ಪ್ರಯೋಜನವಿಲ್ಲ. ಹೇಳಿದ ಮಾತೂ ಕಟ್ಟಿದ ಬುತ್ತಿಯೂ ಬಹು ದಿವಸಗಳ ವರೆಗೆ ನಡೆಯಲಾರವು. ಆದರೆ ನೇಮದ ಬಲಾತ್ಕಾರದಿಂದಲೂ ಸಂಘದ ವಾತಾವರಣದಿಂದಲೂ ಇವೆಲ್ಲ ಸದ್ಗುಣ ಗಳು ತಮ್ಮಿಂದ ತಾವೇ ವಿದ್ಯಾರ್ಥಿಯಲ್ಲಿ ನೆಲೆಸುವವು. ಕಾರಣ ಶಿಕ್ಷಕರು ಕೇವಲ ಅಭ್ಯಾಸದ ಕಡೆಗಷ್ಟೇ ಲಕ್ಷಕೊಡದೆ ವಿದ್ಯಾರ್ಥಿಗಳಲ್ಲಿ ಧಾರ್ಮಿಕ ಮತ್ತು ನೈತಿಕ ಭಾವನೆಯನ್ನು ಬೆಳೆಯಿಸುವ ಸ್ಕಾವುಟ್ ಆಟ, ಗ್ರಾಮ್ಯದರಿಂಗ ಮ್ಯಾಚಿಸ್ ಮುಂತಾದ ಉಪಯುಕ್ತ ಕಾರ್ಯಗಳನ್ನು ಒದಗಿಸಿಕೊಟ್ಟು ಅವರಲ್ಲಿ ಧೈರ್ಯ ಸ್ಥೈರ್ಯ ಸತ್ಯಪ್ರೇಮ, ಬಂಧುಪ್ರೀತಿ ಮುಂತಾದ ಗುಣಗಳು ತಾವಾಗಿಯೇ ಆಳವಡುವಂತೆ ಮಾಡಿಕೊಡಬೇಕು. ಇದೇ ಧಾರ್ಮಿಕ ಶಿಕ್ಷಣ. ಇದನ್ನೇ ಸುಸಂಘಟಿತ ರೀತಿಯಲ್ಲಿ ಶಾಲೆಗಳೊಳಗೆ ಪ್ರಸಾರಗೊಳಿಸಬೇಕು.

---

# ಹಿಂದೂಧರ್ಮ.

(ಹಿಂದಿನಿಂದ ಮುಂದೆ ಸಾಗಿದ್ದು.)

ಲೇಖಕ:— ವೇ. ಮೂ. ವೈ. ನಾಗೇಶಶಾಸ್ತ್ರಿಗಳು ಬಳ್ಳಾರಿ.

ಹಿಂದುಗಳ ಸನಾತನ ಧರ್ಮವು ಯಾವುದು:— ಹಿಂದುಗಳ ಸನಾತನ ಧರ್ಮದಲ್ಲಿ ಎರಡು ಭಾಗಗಳಿರುವವು. ಒಂದು ತತ್ವಜ್ಞಾನವು ಇನ್ನೊಂದು ಆ ತತ್ವಜ್ಞಾನದ ಸಾಕ್ಷಾತ್ಕಾರಕ್ಕೆ ಸಾಧನವಾದ ಆಚಾರವು. ತತ್ವಸ್ವರೂಪವು ಯಾವಾಗಲೂ ನಿಶ್ಚಿತವೂ ಅಬಾಧಿತವೂ ಇರುವುದು. ಆಚಾರವು ಮಾತ್ರ ದೇಶ, ಕಾಲ, ವ್ಯಕ್ತಿ ಮುಂತಾದವುಗಳು ಬದಲಾದಂತೆ ತಾನೂ ಬದಲಾಗುತ್ತ ಹೋಗುವುದು. ಇಂತಹ ಆಚಾರಗಳ ಸಮಷ್ಟಿಯನ್ನೇ ಧರ್ಮನೆಂದು ಕರೆಯುವರು. ಈ ಧರ್ಮವು ಯಾವಾಗಲೂ ತತ್ವಜ್ಞಾನದಿಂದ ಕೂಡಿಯೇ ಇರುವುದು. ನಮ್ಮ ಪ್ರಾಚೀನ ಹಿಂದುಗಳು ನಿತ್ಯವೂ, ಸತ್ಯವೂ ಅಬಾಧಿತವೂ ಆದ ತತ್ವಸ್ವರೂಪವನ್ನು ಕಂಡುಹಿಡಿದಂತೆ ಆ ತತ್ವಸಾಕ್ಷಾತ್ಕಾರಕ್ಕೆ ಸಾಧನವಾದ ಒಂದು ಸತ್ಯಮಾರ್ಗವನ್ನೂ ಕಂಡುಹಿಡಿದಿರುವರು. ಆ ಮಾರ್ಗವಾವುದು? ಹಿಂದೂಧರ್ಮದಲ್ಲಿ ವೈಶಿಷ್ಟ್ಯವನ್ನು ಪಡೆದಿರುವ ವೀರಶೈವ ಷಟ್‌ಸ್ಥಲಸಿದ್ಧಾಂತದಲ್ಲಿ ಆ ಮಾರ್ಗವು ಉಕ್ತವಾಗಿವೆ. ಅದನ್ನು ಭಕ್ತಿಮಾರ್ಗವೆಂದು ಕರೆಯುವರು. ಅಲ್ಲಿ ಭಕ್ತಿಗೆ ಈಶ್ವರಪ್ರೇಮವೆಂದು ಅರ್ಥವಿಲ್ಲ. ನಿವೃತ್ತ್ಯುನ್ಮುಖಿಯಾದ (ವಿಕಾಸವನ್ನುಹೊಂದುವ) ಜೀವಾತ್ಮಗತ ಶಕ್ತಿಯೇ ಭಕ್ತಿಯೆಂದು ಅರ್ಥವಿರುವುದು. ಜ್ಞಾನಕ್ರಿಯಾದಿಗಳೆಲ್ಲವೂ ಈ ಭಕ್ತಿಯ ಅಂಗಗಳೇ. ಬೀಜದಲ್ಲಿ ಗಿಡವಾಗುವ ಶಕ್ತಿಯುಡಗಿರುವಂತೆ ಜೀವನಲ್ಲಿ ದೇವರಾಗುವ (ಸ್ವತಂತ್ರನಾಗುವ) ಶಕ್ತಿಯುಡಗಿರುವುದು, ಎಂಬ ತತ್ವವನ್ನು ಮನಗಂಡು ಆ ದೇವಶಕ್ತಿಯನ್ನು ಸಾಕ್ಷಾತ್ಕಾರಮಾಡಿಕೊಳ್ಳುವ ಜೀವಾತ್ಮ ಶಕ್ತಿಯೇ ಭಕ್ತಿಯು. ಈ ಭಕ್ತಿಯ ಮಾರ್ಗವೇ ಸನಾತನ ಮಾರ್ಗವು. ಇದೇ ಸನಾತನ (ನಿತ್ಯ) ಧರ್ಮವೆಂಬುದರ ತಾತ್ಪರ್ಯವು. ಈ ಮಾರ್ಗವು ಪ್ರತಿಯೊಂದು ಹಿಂದೂ ಮತದ ಜ್ಞಾನಕ್ರಿಯಾ ಮಾರ್ಗಗಳಲ್ಲಿ ಮಣಿಮಾಲೆಯಲ್ಲಿ ದಾರವು ಒಳಹೊಕ್ಕಿರುವಂತೆ ಒಳಹೊಕ್ಕಿರುವದು. ಈ ಮಾರ್ಗವು ವೇದಗಳ ಆದಿಭಾಗಗಳಾದ ಸಂಹಿತೆಗಳಲ್ಲಿಯೂ ಒಡವೂಡಿ ವೇದಾಂತಗಳೆನಿಸಿಕೊಂಡ ಉಪನಿಷತ್ತುಗಳಲ್ಲಿ ಪೂರ್ಣವ

ಷ್ಠೆಯನ್ನು ಹೊಂದಿರುವುದು. ಉಪನಿಷತ್ಸಾರ ಗ್ರಾಹಿಯೆಂದು ಹೇಳಿಸಿಕೊಳ್ಳುವ ಭಗವದ್ಗೀತೆಯು "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂಬ ವಾಕ್ಯವು ಈ ಸನಾತನ ಮಾರ್ಗದಲ್ಲಿಯೇ ಪರ್ಯವಸಾನವನ್ನು ಹೊಂದಿರುವುದು. ಗೀತೆಯು ಬೋಧಿಸುವ ಸನಾತನ ಧರ್ಮದ ಗುಟ್ಟು 'ಸರ್ವಧರ್ಮಾನ್ ಎಂಬ ವಾಕ್ಯದಲ್ಲಿಯೇ ಇರುವುದು.

ಪ್ರತಿಯೊಂದು ಹಿಂದೂ ಧರ್ಮ ಗ್ರಂಥದಲ್ಲಿ ಸನಾತನ ಧರ್ಮವೂ ಕಾಲಧರ್ಮ ಅಥವಾ ಯುಗಧರ್ಮವೂ ಸಮ್ಮಿಳಿತವಾಗಿಯೇ ಇರುವವು. ದೇಶಕಾಲಾನುಗುಣವಾಗಿ ಉಂಟಾಗತಕ್ಕ ಕಾಲಧರ್ಮಗಳು ಆ ಸತ್ಯವಾದ ತತ್ವಜ್ಞಾನದಿಂದ ವಿರಾಜಿಸುವ ಸನಾತನ ಮಾರ್ಗದಲ್ಲಿಯೇ ಒಂದುಗೂಡತಕ್ಕವುಗಳಾಗಿರುವವು. ಗೀತೆಯಲ್ಲಿರುವ ಚಾತುರ್ವರ್ಣ್ಯವು, ಕ್ಷಾತ್ರಧರ್ಮವು, ಯಜ್ಞಕಲ್ಪನೆಯು, ಅವತಾರಕಲ್ಪನೆಯು, ಅರ್ಜುನನ ಯುದ್ಧ ಇತ್ಯಾದಿಗಳು ಕಾಲಧರ್ಮಕ್ಕೆ ಸಂಬಂಧಪಟ್ಟಿರುವವು. ಇನ್ನು ಪರಮಾತ್ಮನಿರುವನು. ಆತನಿಗೆ ಸ್ವಾತ್ಮಾರ್ಪಣವನ್ನು ಮಾಡು. (ನೀನೂ ಪರಮಾತ್ಮರೂಪನಾಗು) ಎಂಬ ಗೀತೆಯ ಮಥಿತಾರ್ಥ ಬೋಧೆಯೇ ಸನಾತನ ಧರ್ಮವನ್ನು ಸೂಚಿಸುತ್ತಿರುವುದು.

ಮೇಲಣ ವಿವರಣದಿಂದ ಸನಾತನ ಧರ್ಮದ ತಿರುಳೇನೆಂಬುದೂ ಕಾಲಾನಗುಣವಾಗಿ ಬದಲಾಗುವ ಧರ್ಮವಾವುದೆಂಬದೂ ಕೆಲಮಟ್ಟಿಗೆ ತಿಳಿದಂತಾಯಿತು. ಇನ್ನು ಹಿಂದುಗಳಲ್ಲಿರುವ ಧರ್ಮಪ್ರಮಾಣವಾದ, ಈಶ್ವರವಾದ, ಜಾತಿವಾದ, ಇವುಗಳ ವಿಮರ್ಶವನ್ನು ಮಾಡಿದರೆ ಹಿಂದೂ ಧರ್ಮದ ಮತ್ತು ಅಸ್ಪೃಶ್ಯತೆಯ ಪೂರ್ಣಪರಿಚಯವಾಗುವದೆಂದು ನಂಬಿ, ಮುಂದಿನ ಲೇಖನಗಳಲ್ಲಿ ಮೇಲಿನ ಮೂರುವಾದಗಳ ವಿಮರ್ಶೆ ಮಾಡಲ್ಪಡುವುದು.

ಧರ್ಮ ಪ್ರಮಾಣವಾದ ಸನಾತನ ಧರ್ಮವಾವುದು ದೇಶಕಾಲಕ್ಕನುಸರಿಸಿದ ಧರ್ಮವಾವುದು ಇವೇ ಮೊದಲಾದ ವಿಷಯಗಳು ಈ ವರೆಗೆ ಕೆಲಮಟ್ಟಿಗೆ ವಿವರಿಸಿಸಲ್ಪಟ್ಟಿವೆ. ಈಗ ಧರ್ಮದ ಮೂಲ ಅಥವಾ ಪ್ರಮಾಣದ ವಿಷಯದಲ್ಲಿ ಹಿಂದುಗಳ ಧರ್ಮಗ್ರಂಥಗಳಲ್ಲಿರುವ ವಾದವೇನೆಂಬುದು ವಿವರಿಸಲ್ಪಡುವದು. ಪೂರ್ವಮೀಮಾಂ

ಸಾಕಾರರು ಧರ್ಮನಿರ್ಣಯಕ್ಕೆ ಶಬ್ದಪ್ರಮಾಣವನ್ನು ಮಾತ್ರ ಅಂಗೀಕ ರಿಸುವರು. ನೈಯಾಯಿಕರು ಧರ್ಮವು ಅನುಮಾನ ಪ್ರಮಾಣದಿಂದಲೂ ಗಮ್ಯವಾಗುವದೆಂದು ಹೇಳುವರು. “ಪ್ರತ್ಯಕ್ಷಂ ಚಾನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಂ । ತ್ರಯಂ ಸುವಿದಿತಂ ಕಾರ್ಯಂ ಧರ್ಮಶುದ್ಧಿಮ ಭೀಪ್ಸತಾ [ಅ. ೧೨-೧೦೫] ಎಂಬ ಮನುವಿನ ವಾಕ್ಯವು ಧರ್ಮದ ತತ್ವವನ್ನಿಚ್ಛಿಸುವಾತನು ಪ್ರತ್ಯಕ್ಷ, ಅನುಮಾನ, ಶಬ್ದವೆಂಬ ಪ್ರಮಾಣ ತ್ರಯವನ್ನೂ ಅಂಗೀಕರಿಸತಕ್ಕದ್ದೆಂದು ನಿರೂಪಿಸುವದು. ಪ್ರತ್ಯಕ್ಷಾನು ಮಾನ ಪ್ರಮಾಣಗಳಲ್ಲಿ ವಾದವು ವಿಶೇಷವಾಗಿಲ್ಲ. ಶಬ್ದ ಪ್ರಮಾಣದಲ್ಲಿ ಯೇ ವಿಶೇಷ ವಾದವಿರುವದು. ಧರ್ಮಶಾಸ್ತ್ರಕಾರರು ಶಬ್ದಪ್ರಮಾಣ ವನ್ನು ಶ್ರುತಿ ಅಥವಾ ಆಗಮಪ್ರಮಾಣವೆಂತಲೂ ಸ್ಮೃತಿಪ್ರಮಾಣವೆಂ ತಲೂ ಎರಡು ಭಾಗ ಮಾಡುವರು. ಸ್ವಯಂಭುವು ಇಲ್ಲವೆ ಈಶ್ವರನ ಕರ್ತೃಕವು ಆದುದೇ ಶ್ರುತಿ ಅಥವಾ ಆಗಮವೆಂದೂ ಆ ಶ್ರುತ್ಯಾಗಮ ಗಳ ತತ್ವಾರ್ಥಸ್ಮರಣದಿಂದ ನಿರ್ಮಲ ಹೃದಯರಾದ ಜ್ಞಾನಿಗಳು ರಚಿ ಸಿದ ಗ್ರಂಥಗಳೇ ಸ್ಮೃತಿಗಳೆಂದೂ ಧರ್ಮಜ್ಞರ ಅಭಿಪ್ರಾಯವಿರುವದು. ಸ್ಮೃತಿಗಳೆಂದರೆ ಸ್ಮೃತಿಗಳೆಂಬ ಹೆಸರಿನ ಗ್ರಂಥಗಳಷ್ಟೇ ಅಲ್ಲ, ಹಿಂದು ಗಳ ಧಾರ್ಮಿಕ ತತ್ವವನ್ನು ಬೋಧಿಸುವ ಗ್ರಂಥಗಳೆಲ್ಲವೂ ಸ್ಮೃತಿಗ ಳೆಂಬದಾಗಿ ಶಾಸ್ತ್ರೀಯ ಗ್ರಂಥಗಳಲ್ಲಿ ವ್ಯವಹಾರವಿರುವದು. ಸಿದ್ಧಾಂತ ಮುಕ್ತಾವಲಿಯೆಂಬ ನ್ಯಾಯಗ್ರಂಥದಲ್ಲಿ 'ಜ್ಞಾನಾಗ್ನಿಃಸರ್ವಕರ್ಮಾಣಿ' ಎಂಬ ಗೀತೋಕ್ತಿಯು ಸ್ಮೃತಿಪ್ರಮಾಣವೆಂದು ಉಕ್ತವಾಗಿರುವುದು. ಅಂದರೆ— ವೇದಾಗಮಗಳ ಅರ್ಥವನ್ನು ವಿಶದೀಕರಿಸುವ ಧಾರ್ಮಿಕ ಗ್ರಂಥಗಳು ಯಾವ ಹೆಸರಿನಿಂದಲೇ ಇರಲಿ ಅವುಗಳನ್ನು ಸ್ಮೃತಿಗಳೆಂದೇ ಹೇಳುವ ರೂಢಿಯಿದ್ದಂತೆ ಕಂಡುಬರುವದು.

ವೇದಾಗಮಸ್ಮೃತಿಗಳು ಧರ್ಮವಿಷಯದಲ್ಲಿ ಪ್ರಮಾಣವೆಂಬುದನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪುವರು. ಆದರೆ, ಈಗ ಪ್ರಚಲಿತವಿರುವ ವೇದಾಗಮಸ್ಮೃತಿಗಳು ನಿರ್ದುಷ್ಟವಾಗಿರುವವೇ ಸ್ವಾರ್ಥಸಾಧಕರ ಪ್ರಕ್ಷಿ ಪ್ತಾದಿ ದೋಷದಿಂದ ದೂಷಿತವಾಗಿರುವವೇ ಎಂಬ ವಿಷಯದಲ್ಲಿ ಮಾತ್ರ ವಿಶೇಷ ವಾದವಿರುವುದು.

ವಾದದ ಸ್ವರೂಪಃ— ವೇದವೆಂದರೆ ಯಾವುದು ? ಅದರ ವ್ಯವಸ್ಥೆ ಯನ್ನು ಹೇಗೆ ಮಾಡಬೇಕು ? ಈ ವಿಷಯದಲ್ಲಿ ಪೂರ್ವದಿಂದಲೂ ಭಿನ್ನಾ

ಭಿಪ್ರಾಯವಿದ್ದಂತೆ ಕಂಡುಬರುವುದು. ಒಂದು ಕಾಲದಲ್ಲಿ ಯಾಜ್ಞವಲ್ಕ್ಯನು ವೇದಋಷಿಯೆಂದು ಪರಿಗಣಿಸಲ್ಪಡದೆ, ಆವನಿಂದ ಪ್ರವರ್ತಿತವಾದುವೆಂದು ಐತಿಹ್ಯವುಳ್ಳ ಶುಕ್ಲ ಯಜುರ್ವೇದ, ಶತಪಥಬ್ರಾಹ್ಮಣ, ತದಂತರ್ಗತವಾದ ಬೃಹದಾರಣ್ಯಕೋಪನಿಷತ್ತು ಇವೆಲ್ಲವೂ ವೇದವಲ್ಲವೆಂದು ಭಾವಿಸಲ್ಪಟ್ಟುದಾಗಿ ಕೆಲವು ಪಂಡಿತರ ಅಭಿಪ್ರಾಯವಿರುವುದು. ಅಥರ್ವವೇದವನ್ನು ಕೆಲವರು ವೇದವೆಂದೇ ಭಾವಿಸುವುದಿಲ್ಲ. ಬಹುಕಾಲದ ವರೆಗೂ ವೇದವು 'ತ್ರಯೀ' ಎಂದು ಹೇಳಿಸಿಕೊಳ್ಳುತ್ತಿದ್ದಿತೆಂದು ಪ್ರಬಲವಾದವಿರುವುದು. ಋಗ್ವೇದವೊಂದೇ ಮೊದಲಿಗಿದ್ದಿತೆಂದು ,ವೇದಚರಿತ್ರೆಯು ಹೇಳಿದರೆ, 'ಯಜುಃ ಸರ್ವತ್ರಗೀಯತೇ ಏಕ ಆಸೀತ್ ಯಜುರ್ವೇದಸ್ತಂ ಚತುರ್ಧಾ ವ್ಯಕಲ್ಪಯನ್" ಎಂಬ ವಾಕ್ಯದಿಂದ ಯಜುರ್ವೇದವೊಂದೇ ಮೊದಲಿಗಿದ್ದಿತೆಂದು ಪುರಾಣವು ಹೇಳುವುದು. ಇಷ್ಟೇ ಅಲ್ಲ, "ಏಕಏವ ಪುರಾವೇದಃ ಪ್ರಣವಃ ಸರ್ವವಾಙ್ಮಯಃ" ಪುರಾತನ ಕಾಲದಲ್ಲಿ ಪ್ರಣವನಾಮಕವಾದ ಒಂದೇ ವೇದವಿದ್ದಿತೆಂದು ಭಾಗವತವು ಹೇಳುತ್ತಿರುವುದು. ವೇದದಲ್ಲಿ ಸಂಹಿತಾ ಬ್ರಾಹ್ಮಣ ಉಪನಿಷತ್ ಆರಣ್ಯಕ ಇತ್ಯಾದಿ ಭಾಗಗಳ ಸಮಾವೇಶವಿರುವುದು. ಕೆಲವರು ಬ್ರಾಹ್ಮಣಾದಿ ಭಾಗಗಳನ್ನು ವೇದಭಾಗವೆಂದು ಗಣಿಸುವುದಿಲ್ಲ. ವೇದಸಂಹಿತೆಯಲ್ಲಿ ಸಹಾ ಎಷ್ಟೋ ಪ್ರಕ್ಷಿಪ್ತಗಳು ಸೇರಿರುವವು. ಅನೇಕ ಋಕ್ಕುಗಳಿಗೆ ದ್ರಾವಿಡರಿಗೂ ಆಂಧ್ರರಿಗೂ ಪಾಠಭೇದವುಂಟು. ವೇದದಲ್ಲಿ ಒಂದೊಂದು ಶಾಖೆಯವರಿಗೂ ಬೇರೆ ಬೇರೆ ಪಾಠವಿದ್ದಂತೆ ಐತಿಹ್ಯವುಂಟು. ಕೆಲವರು ವೇದಕ್ಕೆ ಹೆಚ್ಚು ಪ್ರಾಮಾಣ್ಯವನ್ನಂಗೀಕರಿಸಿದರೆ, ಮತ್ತೆ ಕೆಲವರು ಆಗಮಗಳಿಗೆ ಹೆಚ್ಚು ಪ್ರಮಾಣತೆಯನ್ನೊಪ್ಪುವರು. ಸದ್ಯದಲ್ಲಿ ದಕ್ಷಿಣದೇಶದ ಶೈವ ಸಿದ್ಧಾಂತದವರು ತಮಿಳಿನ ತೇವಾರಂ ಪ್ರಬಂಧಗಳಿಗೆ ಮೂಲವಾಗಿದ್ದ ಈಗ ಖಿಲವಾಗಿರುವ ನಾನ್ಮರೈಯೆಂಬ ಶಾಸ್ತ್ರವೇ ನಿಜವಾಗಿ ಭಗವನ್ಮುಖೋದಿತವಾದ ಜ್ಞಾನವೆಂದೂ ಸಂಸ್ಕೃತದ ವೇದವು ಇದರಿಂದ ಕದಿಯಲ್ಪಟ್ಟುದೆಂದೂ ಚರ್ಚಿಸುತ್ತಿರುವರು. ಹಿಂದಣಕಾಲದಲ್ಲಿಯೂ ಕೌತ್ಸನೇ ಮೊದಲಾದ ಋಷಿಗಳು ವೇದವನ್ನು ಧಿಃಕರಿಸಿದ್ದರೆಂದು ಯಾಸ್ಕನು ತಿಳಿಸುವನು. ಮತ್ಸ್ಯ ವಾಯು ಪುರಾಣಗಳಲ್ಲಿ 'ಏಕೋವೇದಶ್ಚತುಷ್ಪಾದಃಸಂಹೃತ್ಯ ತು ಪುನಃ ಪುನಃ ಇತ್ಯಾದಿ ಶ್ಲೋಕಗಳಲ್ಲಿ ನಾಲ್ಕು ಪಾದಗಳಿಂದ ಕೂಡಿದ ಒಂದೇ ವೇದವು ಆಯುರ್ಮಾನವು ಚಿಕ್ಕದಾದಂತೆ ದ್ವಾಪರದಲ್ಲಿ ಪುನಃ ಪುನಃ ಸಂಕ್ಷೇಪವಾಗಿ ಮಾಡಲ್ಪಟ್ಟು ವಿಭಾಗಿಸಲ್ಪ

ಟ್ಟಿತೆಂತಲೂ ಮತ್ತು ದ್ವಾಪಾರಾದಿ ಯುಗಗಳಲ್ಲಿ ಏಕವಾದ ವೇದವು ನಾಲ್ಕಾಗಿ ವಿಭಾಗಿಸಲ್ಪಟ್ಟಿತೆಂತಲೂ ಅಭಿಪ್ರಾಯಭೇದದಿಂದ ಋಷಿಪ ತ್ರರು ಅದನ್ನೇ ಮತ್ತೂ ವಿಭಾಗಿಸಿದರೆಂತಲೂ ಉಕ್ತವಾಗಿರುವದು. ಇಷ್ಟೇ ಅಲ್ಲ. ಬರಬರುತ್ತ (ಬರಿಯ ಪಾಂಡಿತ್ಯವುಳ್ಳವರಾದ) ಶ್ರುತರ್ಷಿಗಳು ಋಗ್ಯಜುಸ್ಸಾಮಗಳಿಗೆ ಹೊಸದಾಗಿ ಮಂತ್ರಬ್ರಾಹ್ಮಣಗಳನ್ನು ಸೇರಿಸು ತ್ತಲೂ ಸ್ವರಕ್ರಮಗಳನ್ನು ಬದಲಿಸುತ್ತಲೂ ವಿವಿಧವಾಗಿ ಸಂಗ್ರಹಿಸುತ್ತ ಕೆಲವನ್ನು ಒಪ್ಪುತ್ತಾ ಕೆಲವನ್ನು ತಿರಸ್ಕರಿಸುತ್ತಾ ಭಿನ್ನಾಭಿಪ್ರಾಯದಿಂದಿ ರುವರು. ಅನೇಕರು ಹೊಸದಾಗಿ ಮಂತ್ರಬ್ರಾಹ್ಮಣ ಕಲ್ಪಸೂತ್ರಗಳನ್ನು ಕಲ್ಪಿಸುವರು. ಇತರರು ಬೇರೆ ಮಂತ್ರಾದಿಗಳನ್ನಿಟ್ಟುಕೊಂಡು ಇವುಗ ಳನ್ನು ವಿರೋಧಿಸುವರು. ಹೀಗೆ ದ್ವಾಪರಯುಗದಲ್ಲಿ ಪ್ರತಿಶಾಖೆಯವರು ಭಿನ್ನಾರ್ಥವುಳ್ಳ ಅನೇಕ ಶ್ರುತಿಗಳನ್ನು ಕಲ್ಪಿಸಿ ಬೇರೆ ಬೇರೆ ದರ್ಶನಗ ಳುಳ್ಳವರಾಗಿರುವರು ಎಂದು ಮೊದಲಾಗಿ ಪ್ರತಿಪಾದಿಸಲ್ಪಟ್ಟಿರುವುದೆಂದು ಎ. ಮಹಾದೇವಶಾಸ್ತ್ರಿ ಮೊದಲಾದ ಧರ್ಮತತ್ವಶೋಧಕರ ಅಭಿಪ್ರಾಯ ವಿರುವುದು. ಈ ರೀತಿಯಾಗಿ ವೇದಮೂಲ, ವೇದಪಾಠ, ವೇದವ್ಯಾಪ್ತಿ, ವೇದಪ್ರಾಮಾಣ್ಯ ಇವೆಲ್ಲವನ್ನೂ ಕುರಿತು ಅನೇಕ ಭಿನ್ನಾಭಿಪ್ರಾಯಗಳಿ ರುವವು. ಉಪನಿಷತ್ತುಗಳ ಸಂಖ್ಯೆಯೂ ಬೆಳೆಯುತ್ತಲೇ ಇರುವುದು. ಅವು ಸುಮಾರು ೨೦೦ರ ಸಂಖ್ಯೆಯನ್ನು ಮುಟ್ಟಿವೆ. ಮುಸಲ್ಮಾನರ ಕಾಲ ದಲ್ಲಿ ಅಲ್ಲೋಪನಿಷತ್ತೂ ಹುಟ್ಟಿರುವುದು.

ಕಳೆದ ಶತಮಾನದಲ್ಲಿ ದೇವೇಂದ್ರನಾಥ ಠಾಕೂರರು ಬ್ರಾಹ್ಮೋ ಪನಿಷತ್ತು ಎಂಬುದನ್ನು ರಚಿಸಿದರು. ಪ್ರತಿಯೊಂದು ಮತದವರು ತಮ್ಮ ದೇವತೆ ಮಂತ್ರ ಮೊದಲಾದವುಗಳ ಪ್ರಶಸ್ತಿಗಾಗಿ ಬೇರೆ ಬೇರೆ ಉಪ ನಿಷತ್ತುಗಳನ್ನು ಕಲ್ಪಿಸಿಕೊಂಡಿರುವರು. ಇದರಂತೆ ಶೈವರ ಮತ್ತು ವೈಷ್ಣವರ ಆಗಮಗಳ ಸಂಖ್ಯೆಯೂ ಬೆಳೆದುಹೋಗಿದೆ. ಪಾಂಚರಾತ್ರಾ ಗಮವೊಂದರಲ್ಲಿ ೧೦೮ ಸಂಹಿತೆಗಳಿರುವವೆಂದು ಹೇಳುತ್ತಿರುವರು. ಇದೂ ಅಲ್ಲದೆ 'ಅನಂತಾ ವೈ ವೇದಾಃ' ಎಂದು ಹೇಳುತ್ತ ವೇದಗಳ ಎಷ್ಟೋ ಭಾಗಗಳು ನಷ್ಟವಾಗಿರುವವು. ಆ ನಷ್ಟಭಾಗಗಳ ಉಪಬೃಂಹಣಗಳೇ ಪುರಾಣಗಳೆಂದು ಹೇಳುವ ಸಂಪ್ರದಾಯವೂ ಪ್ರಬಲವಾಗಿರುವದು. ಪಂಚಮವೇದವೆಂದು ಹೇಳಿಸಿಕೊಳ್ಳುವ ಭಾರತವು ಗಣಪತಿಯು ಬರೆ ದಾಗ ೮೮೦೦ ಶ್ಲೋಕಗಳುಳ್ಳ ಸಣ್ಣ ಗ್ರಂಥವಾಗಿದ್ದಿತು. ಈಗ ಸುಮಾರು

ಒಂದೂವರೆ ಲಕ್ಷ ಶ್ಲೋಕಗಳನ್ನೊಳಕೊಂಡು ಹಲವು ಪಾಠಭೇದಗಳಿಂದ ಮಹಾಭಾರತವೆಂಬ ಹೆಸರಿನಿಂದ ಮೆರೆಯುತ್ತಿರುವುದು. ಇನ್ನು ಇತರ ಪುರಾಣಗಳೂ ಸ್ಮೃತಿಗಳೂ ಲೆಕ್ಕಕ್ಕೆ ೧೮. ಸರಿಯಾಗಿ ನೋಡಿದರೆ ನೂರಾರು ದೊರೆಯುತ್ತವೆ. ಇವುಗಳ ಮೇಲೆ ಹುಟ್ಟಿರುವ ವ್ಯಾಖ್ಯಾನ ಗ್ರಂಥಗಳಿಗಂತೂ ಕೊನೆಯಿಲ್ಲ. ಸುಮಾರು ೬೮ ಪುರಾಣಗಳ ಹೆಸರುಗಳು, ಸಂಗ್ರಹ ಗ್ರಂಥಗಳಲ್ಲಿ ದೊರೆಯುವವು. ೧೩೧ ಸ್ಮೃತಿಗಳಿವೆ. ಧರ್ಮಶಾಸ್ತ್ರ ಗ್ರಂಥಗಳು ಅನಂತವಾಗಿವೆ. ಇವುಗಳ ಹೆಸರನ್ನೂ ಸಂಖ್ಯೆಯನ್ನೂ ಅನೇಕ ಗ್ರಂಥಗಳಲ್ಲಿ ಭಿನ್ನಭಿನ್ನವಾಗಿ ನೋಡಲು ಸಾಧ್ಯವಿರುವುದು. ಮತಗ್ರಂಥಗಳೂ ಅನೇಕವಾಗಿರುವವು. ಒಂದು ಮತದವರು ಮತ್ತೊಂದು ಮತವನ್ನು ಖಂಡಿಸಲು ಬರೆದ ಗ್ರಂಥಗಳೂ ಶೈವರು ವೈಷ್ಣವರನ್ನೂ ವೈಷ್ಣವರು ಶೈವರನ್ನೂ ದೂಷಿಸುವ ಗ್ರಂಥಗಳೂ ಮಿತಿಮೀರಿರುವರು. ಇವೆಲ್ಲವೂ ಹಿಂದುಗಳ ಧರ್ಮಗ್ರಂಥಗಳಲ್ಲವೆ? ಹಿಂದುಗಳ ಈ ಧಾರ್ಮಿಕ ಭಾಂಡಾರವೆಲ್ಲವನ್ನೂ ಶ್ರುತಿ ಇಲ್ಲವೇ ಆಗಮ, ಮತ್ತು ಸ್ಮೃತಿ ಎಂದು ಧರ್ಮಶಾಸ್ತ್ರಕಾರರು ಎರಡೇ ಭಾಗವನ್ನು ಮಾಡಿರುವರು. ಯಾವುದು ಧರ್ಮವು ಎಂಬ ಪ್ರಶ್ನೆಗೆ ಶಬ್ದಪ್ರಮಾಣವಾದಿಗಳು ಈ ಧಾರ್ಮಿಕ ಗ್ರಂಥಭಂಡಾರಕ್ಕೇ ಶರಣುಹೋಗಬೇಕಾಗಿದೆ. ಕಾಲದೇಶಕ್ಕನುಸರಿಸಿ ಈ ಗ್ರಂಥಭಂಡಾರವು ಬೆಳೆದೂ ಬೆಳೆಯುತ್ತಲೂ ಇರುವುದಾದರೂ ಸಹಜವೆಂದೇ ತೋರುವುದು. ಹೀಗೆ ವಿಸ್ತಾರವಾಗುತ್ತಿರುವ ಗ್ರಂಥರಾಶಿಯಲ್ಲಿ ಧರ್ಮತತ್ವವನ್ನು ಶೋಧಿಸುವವರಿಗೆ ಸಂಶಯು ಬರುವುದಾದರೂ ಸಹಜವೇ. ಆಗ ಏನು ಮಾಡಬೇಕು? ಈ ಪ್ರಶ್ನೆಗೆ ಧರ್ಮಶಾಸ್ತ್ರಕಾರರು ಕೆಳಗೆ ತೋರಿಸಿದಂತೆ ಉತ್ತರಗಳನ್ನು ಹೇಳಿರುವರು.

ಗೌತಮ, ಬೋಧಾಯನ, ವಸಿಷ್ಠ, ಆಪಸ್ತಂಬನೇ ಮೊದಲಾದವರ ಧರ್ಮಸೂತ್ರಗಳಲ್ಲಿ ಶ್ರುತಿಸ್ಮೃತಿಗಳಂತೆ ಶಿಷ್ಟಾಚಾರವೂ ಧರ್ಮದಲ್ಲಿ ಪ್ರಮಾಣವೆಂದು ಉಕ್ತವಾಗಿದೆ. ಹಲವುಹಲ ಶ್ರುತಿಗೂ ಸ್ಮೃತಿಗೂ ವಿರೋಧಬರುವುದರಿಂದ ಶಿಷ್ಟಾಚಾರವನ್ನೇ ಪ್ರಮಾಣವಾಗಿ ತೆಗೆದುಕೊಳ್ಳುವ ಪದ್ಧತಿಯೂ ಮೊದಲಿನಿಂದಲೂ ಬಂದಿರುವುದು. 'ಮತ್ತು ಆರ್ಯಾಃ ಕ್ರಿಯಮಾಣಂ ಪ್ರಶಂಸಂತಿ ಸ ಧರ್ಮೋ ಯದ್ಗರ್ಹತೇ ಸೋಧರ್ಮಃ ಯಾವದನ್ನು ಶಿಷ್ಟರು ಮೆಚ್ಚುವರೇ ಅದು ಧರ್ಮವು; ಅವರಿಂದ ಯಾವುದು ನಿಂದಿಸಲ್ಪಡುವುದೋ ಅದು ಅಧರ್ಮವು ಎಂಬ ಆಪಸ್ತಂಬನ ವಚನವು

ಶಿಷ್ಟರ ಆಚರಣೆಗೇ ಹೆಚ್ಚು ಮಹತ್ವವನ್ನು ಕೊಟ್ಟಿರುವದು. "ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮಮಪ್ಯಾಚರೇನ್ನತು, (ಸ್ವರ್ಗಸುಖ) ಪ್ರಾಪ್ತಿಗೆ ಕಾರಣವಲ್ಲದ ಲೋಕದಿಂದ ನಿಂದಿಸಲ್ಪಟ್ಟ (ಶಿಷ್ಟರು ಮೆಚ್ಚಿದ) ಧರ್ಮವನ್ನಾದರೂ ಆಚರಿಸಬಾರದು ಎಂಬ ಯಾಜ್ಞವಲ್ಕ್ಯನ ವಾಕ್ಯವು ಶಿಷ್ಟರು ಒಪ್ಪದ ಧರ್ಮವನ್ನು ತಳ್ಳಿಬಿಟ್ಟಿರುವುದು.

'ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯಚ ಪ್ರಿಯಮಾತ್ಮನಃ' ಎಂಬ ಮನುವಿನ ವಾಕ್ಯವು ವೇದ, ಸ್ಮೃತಿ, ಶಿಷ್ಟಾಚಾರಗಳ ಜೊತೆಗೆ ಆತ್ಮಸಂತೋಷವನ್ನೂ ಧರ್ಮದಲ್ಲಿ ಪ್ರಮಾಣವನ್ನಾಗಿ ಅಂಗೀಕರಿಸಿರುವದು. ಮನುಸ್ಮೃತಿಯು ಮತ್ತೊಂದು ಕಡೆಯಲ್ಲಿ— ವಿದ್ವದ್ಭಿಃ ಸೇವಿತಃ ಸದ್ಭಿರ್ನಿತ್ಯ ಮದ್ವೇಷರಾಗಿಭಿಃ । ಹೃದಯೇನಾಭ್ಯನುಜ್ಞಾತೋಯೋ ಧರ್ಮಃ" ರಾಗದ್ವೇಷರಹಿತರಾದ ಸತ್ಪುರುಷರಾದ ವಿದ್ವಾಂಸರಿಂದ ಸದಾ ಆಚರಿಸಲ್ಪಡುವದಾಗಿಯೂ ಮನಸ್ಸಾಕ್ಷಿಗೆ ಒಪ್ಪುವದಾಗಿಯೂ ಇರುವುದೇ ಧರ್ಮವೆಂದು ಹೇಳಿರುವದು. ಶಿಷ್ಟದಂತೆ ಆಚರಿಸುವುದು ನಮ್ಮ ಕರ್ತವ್ಯವಾಗಿದ್ದರೂ ಆ ಆಚರಣೆಯು ಮನಸ್ಸಾಕ್ಷಿಗೆ ಒಪ್ಪಿಗೆಯಾಗಿದ್ದು ಆತ್ಮಸಂತೋಷಪ್ರದವಾಗಿರಬೇಕು. ಮನಸ್ಸಿಗೆ ಒಪ್ಪಿಗೆಯಿಲ್ಲದ ಆಚರಣೆಯಲ್ಲಿ ಶ್ರದ್ಧೆಯುಂಟಾಗದು. ಆದ್ದರಿಂದ ಮನಃಸ್ಸಾಕ್ಷಿಯೂ ಧರ್ಮಪ್ರಮಾಣದ ಅಂಗವೆಂದು ಹೇಳುವುದು. ಸಮುಚಿತವಾಗಿರುವುದ ಶ್ರುತಿ, ಸ್ಮೃತಿ. ಶಿಷ್ಟಾಚಾರ ಮನಸ್ಸಾಕ್ಷಿಗಳೆಂಬ ಪ್ರಮಾಣಗಳಿಂದ ಧರ್ಮನಿರ್ಣಯ ಮಾಡುವ ಅಧಿಕಾರವು ಯಾರಿಗಿರುವುದೆಂಬುದನ್ನು ಹೇಳುವ ಸಂದರ್ಭದಲ್ಲಿ ಶ್ರುತಿ, ಸ್ಮೃತಿ, ಶಿಷ್ಟಾಚಾರಗಳನ್ನು ತಿಳಿದಂಥ ಹತ್ತು ಜನರಿಂದ ಇಲ್ಲವೆ ಮೂವರಿಂದ ಕೂಡಿದ ಪರಿಷತ್ತಿಗೆ ಧರ್ಮನಿರ್ಣಯಾಧಿಕಾರವಿರುವುದೆಂದು ಮನುವಾಕ್ಯವಿರುವುದು. (ಅ. ೧೨-೧೧೦-೧೧೧-೧೧೨) ಈ ಪರಿಷತ್ತಿನ ಧರ್ಮಜ್ಞರಾದರೂ ಕೇವಲ ಶಾಸ್ತ್ರವನ್ನೇ ಅನುಸರಿಸದೆ ಧರ್ಮನಿರ್ಣಯದಲ್ಲಿ ಯುಕ್ತಿಯನ್ನೂ ಉಪಯೋಗಿಸಬೇಕೆಂದು ಮನುಸ್ಮೃತಿಗೆ ವ್ಯಾಖ್ಯಾನವನ್ನು ಮಾಡಿರುವ ಕುಲ್ಲೂಕಭಟ್ಟನು " ಕೇವಲಂ ಶಾಸ್ತ್ರಮಾಶ್ರಿತ್ಯ ನ ಕರ್ತವ್ಯೋ ವಿನಿರ್ಣಯಃ ಯುಕ್ತಿಹೀನ ವಿಚಾರೇತು ಧರ್ಮಹಾನಿಃ ಪ್ರಜಾಯತೇ" ಎಂಬ ಶ್ಲೋಕದಿಂದ ಸೂಚಿಸಿರುವನು. ಈ ವಿಷಯದಲ್ಲಿ ಯಾಜ್ಞವಲ್ಕ್ಯ ಸ್ಮೃತಿಯು ಚತ್ವಾರೋ ವೇದಧರ್ಮಜ್ಞಾಃ ಪರ್ಷತ್ತ್ರೈವಿದ್ಯಮೇವವಾ ಸಾಬ್ರೂತೇಯಂ ಸ ಧರ್ಮಃ ಸ್ಯಾದೇಕೋ

ನಾಧ್ಯಾತ್ಮವಿತ್ತಮಃ ॥ ಎಂದರೆ, ನಾಲ್ಕು ವೇದಗಳ ಇಲ್ಲವೆ ಮೂರು ವೇದಗಳ ತಿಳಿದ ನಾಲ್ವರಾಗಲಿ ಅಥವಾ ಆತ್ಮಜ್ಞಾನಿಯೊಬ್ಬನೇ ಆಗಲಿ ಯಾವುದನ್ನು ಧರ್ಮವೆಂದು ಹೇಳುತ್ತಾನೋ ಅದು ಧರ್ಮವು ಎಂಬ ವಾಕ್ಯವು ಸಯುಕ್ತಿಕವಾಗಿರುವುದು. ವೇದಾರ್ಥವನ್ನು ತಿಳಿದ ನಾಲ್ವರಿಗಿಂತಲೂ ಒಬ್ಬ ಆತ್ಮಜ್ಞಾನಿಯೇ ಮೇಲೆನಿಸುವನು. ಶಬ್ದಾರ್ಥಗಳಲ್ಲಿ ಮಾತ್ರ ವ್ಯವಹಾರವುಳ್ಳ ವೇದಜ್ಞರಲ್ಲಿ ಕೆಲವು ಮಟ್ಟಿಗೆ ಧರ್ಮಸಂಸ್ಕಾರವೂ ಇರಬಹುದು. ಧರ್ಮಸಂಸ್ಕಾರವನ್ನು ಪಡೆಯುವುದೇ ಮನುಷ್ಯನ ಧ್ಯೇಯವಲ್ಲ. ಧರ್ಮರೂಪನಾದ ಆತ್ಮನ ಸಾಕ್ಷಾತ್ಕಾರಮಾಡಿಕೊಳ್ಳುವುದೇ ಮುಖ್ಯವು. ಸಾಮಾನ್ಯರಾದ ವೇದಜ್ಞರಲ್ಲಿ ಈ ಯೋಗ್ಯತೆಯು ಇರಲಾರದು. ಆದ್ದರಿಂದ ಧರ್ಮನಿರ್ಣಯದಲ್ಲಿ ಆತ್ಮದರ್ಶನಶೂನ್ಯರಾದ ವೇದಜ್ಞರು ನಾಲ್ವರಾದರೂ ಇಲ್ಲವೇ ಹತ್ತುಜನರಾದರೂ ಬೇಕಾಗಬಹುದು.

ಆತ್ಮಜ್ಞಾನಿಯ ವಿಷಯವು ಹಾಗಲ್ಲ. ಧರ್ಮದ ಸಾಕ್ಷಾತ್ಕಾರವೇ ಅವನ ಹೃದಯದಲ್ಲಿದೆ. ಆತ್ಮಜ್ಞಾನಿಯು ವೇದಾಗವ ಗಳನ್ನು ಹಿಂಬಾಲಿಸಬೇಕಾಗಿಲ್ಲ. ಅವನನ್ನೇ ವೇದಾಗಮಗಳು ಹಿಂಬಾಲಿಸುವವು. ಅವನ ಮಾತಿನಲ್ಲಿ ಒಂದು ಪಕ್ಷಕ್ಕೆ ವೈದಿಕಶಬ್ದಗಳ ಕೊರತೆಯು ಕಂಡುಬಂದರೂ ವೇದಾರ್ಥದ ಕೊರತೆಯಿರುವುದಿಲ್ಲ. ಆದ್ದರಿಂದ ಆತ್ಮಜ್ಞಾನಿಯೊಬ್ಬನೇ ಧರ್ಮನಿರ್ಣಯಕ್ಕೆ ಸಾಕೆಂಬುದು ಸಯುಕ್ತಿಕವಾಗಿರುವುದು. ಈ ವಿವೇಚನೆಯಿಂದ ಜ್ಞಾಪಕದಲ್ಲಿಡತಕ್ಕ ಮಾತುಗಳೆಂದರೆಃ— ಹಿಂದೂ ಧರ್ಮವು ನಿರಂಕುಶಾಧಿಕಾರವುಳ್ಳದಲ್ಲ. ಸಮಾಜಹಿತೈಷಿಗಳಾದ ಸತ್ಪುರುಷರ ಸಮಿತಿಗೆ ಧರ್ಮನಿರ್ಣಯಾಧಿಕಾರವಿರುವುದು. ಆ ಧರ್ಮವು ವೇದಾಗಮಸ್ಮೃತಿಗಳಲ್ಲಿ ಹೇಗೆ ಉಕ್ತವಾಗಿರುವುದೋ ಅದೇ ರೂಪದಿಂದಲೇ ಇರದೆ, ಶಿಷ್ಟರ ಸದಾಚಾರರೂಪವಾಗಿಯೂ ಪರಿಣಮಿಸಿರಬಹುದು. ವೇದಾದಿ ವಾಕ್ಯಗಳನ್ನು ಪ್ರಮಾಣವೆಂದು ತಿಳಿಯುವಂತೆ ಆಯಾ ಕಾಲದಲ್ಲಿರುವ ಸಾಮಾಜಿಕ ಸತ್ಪುರುಷರ ಮಾತುಗಳನ್ನೂ ಧರ್ಮಾಚರಣೆಗೆ ಪ್ರಮಾಣವೆಂದು ತಿಳಿಯಬೇಕು. ಮತ್ತು ಆಯಾ ಕಾಲದಲ್ಲಿರುವ ಆತ್ಮಜ್ಞಾನಿಗಳ ಮಾತುಗಳೇ ಆಯಾ ಕಾಲದಲ್ಲಿರುವ ಸಮಾಜದ ಧರ್ಮಾಚರಣೆಗೆ ಮುಖ್ಯ ಪ್ರಮಾಣವೆಂಬುದೇ ಹಿಂದುಗಳ ಕೊನೆಯ ಸಿದ್ಧಾಂತ. ಏಕೆಂದರೆ ವೇದಾಗಮಗಳೆಂದರೆ ಒಂದಾನೊಂದು ಕಾಲದಲ್ಲಿ ಸ್ವಾತ್ಮನಲ್ಲಿ ಪರಮಾತ್ಮನನ್ನು ಕಂಡ ಜ್ಞಾನಿಗಳ ಮುಖದಿಂದ ಹೊರಬಿದ್ದ ದಿವ್ಯವಾಣಿಗಳೇ.

ಈಶ್ವರವಾದ— "ಧರ್ಮತತ್ವ, ಧರ್ಮವ್ಯಾಪ್ತಿ, ಧರ್ಮ ಪ್ರಮಾಣ, ಧರ್ಮನಿರ್ಣಯಾಧಿಕಾರ, ಮೊದಲಾದವುಗಳು ಹೇಗೋ ಇರಲಿ, ನಾವು ಯಾವುದಕ್ಕೆ ಧರ್ಮವೆಂದು ಹೇಳುತ್ತಿರುವೆವೋ ಅದು ಮಾತ್ರ ಈಶ್ವರನಿಂದ ಉಕ್ತವಾಗಿರುವುದು. ಅದನ್ನು ವ್ಯತ್ಯಾಸಮಾಡಲು ಮನುಷ್ಯನಿಗೆ ಅಧಿಕಾರವಿಲ್ಲವು. ನೀವು ಧರ್ಮದ ವಿಷಯದಲ್ಲಿ ಎಷ್ಟು ಯುಕ್ತಿಪ್ರಯುಕ್ತಿಗಳನ್ನು ತೋರಿಸಿದರೂ ನಮ್ಮ ಅಭಿಪ್ರಾಯವು ಬದಲಾ ಗಲಾರದು, ಈ ರೀತಿಯಾದ ಮಾತುಗಳನ್ನಾಡುವ ಕಪಿಮುಷ್ಟಿಯವರು ನಮ್ಮ ಹಿಂದುಗಳಲ್ಲಿ ಅನೇಕರಿರುವರು. ಆದುದರಿಂದ ಇವರು ಹೇಳುವ ಈಶ್ವರನು ಯಾರು? ಹಿಂದುಗಳಲ್ಲಿ ಈಶ್ವರವಾದವು ಯಾವ ರೀತಿಯಾ ಗಿರುವುದು ಎಂಬುದನ್ನು ವಿಚಾರಿಸುವುದು ಅಪ್ರಕೃತವಲ್ಲವಷ್ಟೆ. ಹಿಂದು ಗಳ ತತ್ವಜ್ಞಾನದ ಇತಿಹಾಸವನ್ನು ತೆರೆದುನೋಡಿದರೆ, ಕೆಳಗೆ ಸಂಗ್ರ ಹಿಸಿರುವ ವಿಷಯವು ಒಡೆದು ತೋರುವುದು. ಜಗತ್ತು, ಜಡ ಚೇತನ ಅಥವಾ ಪ್ರಕೃತಿ ಪುರುಷ ಎಂಬ ಎರಡು ತತ್ವಗಳಿಂದ ತುಂಬಿರುವುದು. ಪೃಥುವ್ಯಾದಿವಸ್ತುಗಳೆಲ್ಲವೂ ಜಡವು. ಈ ಜಡದಲ್ಲಿಯೂ ಅನೇಕ ನಿಸ ರ್ಗಶಕ್ತಿಗಳಿರುವವು. ಭೌತಿಕ ಶಾಸ್ತ್ರದಿಂದ ಈಗ ಕಂಡುಹಿಡಿದಿರುವ ವಾಯು, ಅಗ್ನಿ, ಆಕಾಶಾದಿ ತತ್ವಗಳ ಅದ್ಭುತ ಶಕ್ತಿಗಳೆಲ್ಲವೂ ಜಡಶ ಕ್ತಿಗಳೇ. ಈ ಜಡಕ್ಕೆ ಅತಿರಿಕ್ತವಾದ ಚೇತನ ವಸ್ತುವೊಂದಿರುವುದು. ಅದು ಅನಂತ ಶಕ್ತಿಯುಳ್ಳದ್ದು. ಚೇತನದ ಆ ಅನಂತ ಶಕ್ತಿಗಳ ಸಮ ಷ್ಟಿಯೇ ಆತ್ಮಶಕ್ತಿಯೆಂದು ಕರೆಯಲ್ಪಡುವುದು (ಈ ಆತ್ಮಶಕ್ತಿಗೆ ವೀರ ಶೈವರು ಭಕ್ತಿಯೆಂದು ಹೆಸರಿಟ್ಟಿರುವರು) ಜಡದಲ್ಲಿ ಅಡಗಿರುವ ಅನೇಕ ನಿಸರ್ಗ ಶಕ್ತಿಗಳನ್ನು ಕಂಡು ಅವುಗಳಿಂದ ದುಡಿಸಿಕೊಳ್ಳುವುದಾದರೂ ಈ ಆತ್ಮಶಕ್ತಿಯೇ. ಆತ್ಮಶಕ್ತಿಯು ಸಾಮಾನ್ಯವಾಗಿ ಜ್ಞಾನಶಕ್ತಿ ಕ್ರಿಯಾ ಶಕ್ತಿಯೆಂದು ದ್ವಿವಿಧವಾಗಿರುವದರಿಂದ ನಾವು ನಡೆಸಿರುವ ಧಾರ್ಮಿಕ, ಸಾಮಾಜಿಕಾದಿ ವ್ಯವಹಾರವೆಂದರೆ ಈ ಆತ್ಮನ ಜ್ಞಾನಕ್ರಿಯಾಶಕ್ತಿಗಳ ವಿಕಾಸದ ಪ್ರಯೋಗಶಾಲೆಯೇ.

ಜೀವಾತ್ಮ— ಅನಂತ ಶಕ್ತಿಯುಳ್ಳ ಚೇತನ ವಸ್ತುವು ಜಡವಸ್ತು ವಿನ (ಶರೀರಾದಿಗಳ) ನಿಕಟ ಸಂಬಂಧವನ್ನು ಪಡೆದರೆ ಜೀವಾತ್ಮನೆಂಬ ಹೆಸರನ್ನು ಪಡೆಯುವುದು. ಅಂದರೆ ಜಡ ಸಂಪರ್ಕದಿಂದ ಆತ್ಮನ ಜ್ಞಾನ ಕ್ರಿಯಾಶಕ್ತಿಗಳ ಸಂಕೋಚವಾಗುವದು. ಚೇತನದ ಈ ಸಂಕೋಚ ಸ್ಥಿತಿಗೆ ಜೀವಾತ್ಮನೆಂದು ಕರೆಯುವರು.

ಪರಮಾತ್ಮ ಅಥವಾ ಈಶ್ವರ— ಜಡಕ್ಕೆ ದೂರವಾಗಿ ಜಡವಸ್ತುಗಳ ನಿಸರ್ಗಶಕ್ತಿಗಳನ್ನು ತನ್ನಧೀನ ಮಾಡಿಕೊಂಡು ಜ್ಞಾನಕ್ರಿಯಾಶಕ್ತಿಗಳ ವಿಕಾಸದ ಪೂರ್ಣತೆಯಿಂದ ವಿರಾಜಿಸುವ ಚೇತನವೇ ಪರಮಾತ್ಮ ಅಥವಾ ಈಶ್ವರನು.

ಹಿಂದೂತತ್ವಜ್ಞರಿಗೆ ಆತ್ಮತತ್ವಶೋಧನೆಯೇ ಮುಖ್ಯವಾಗಿರುವುದು. ಈಶ್ವರ ತತ್ವಶೋಧನೆಯು ಅವರಿಗೆ ಗೌಣವಾಗಿರುವದೆಂದರೆ ತಪ್ಪಾಗಲಾರದು. ಹಿಂದೂ ಮತವು ಬಂಧ (ದುಃಖ) ಬಂಧಕಾರಣ ಮೋಕ್ಷ (ಸುಖ—ಸ್ವತಂತ್ರತೆ) ಮೋಕ್ಷೋಪಾಯ ಎಂಬ ಚತುರ್ವ್ಯೂಹಾತ್ಮವಾಗಿರುವದು. ಆತ್ಮಶಕ್ತಿಯ ಸಂಕೋಚಭಾವವೇ ಬಂಧ (ಜೀವತ್ವ) ಅದರ ವಿಕಾಸಭಾವವೇ ಮೋಕ್ಷ [ಈಶ್ವರತ್ವ] ಎಂದರೆ ಆತ್ಮನು ಜಡಕ್ಕಧೀನನಾದರೆ ಸಂಕೋಚಸ್ಥಿತಿಯನ್ನು ಹೊಂದಿ ಬಂಧನಕ್ಕೊಳಗಾಗುವನು. ಜಡವನ್ನು ತನ್ನಧೀನ ಮಾಡಿಕೊಂಡರೆ ವಿಕಾಸವನ್ನು ಹೊಂದಿ ಮುಕ್ತನಾಗುವನು- ಆತ್ಮನ ಜ್ಞಾನಕ್ರಿಯಾಶಕ್ತಿಗಳ ದುರುಪಯೋಗವೇ (ಜಡಾನುವರ್ತನವೇ) ಅಧರ್ಮವು. ಇದೇ ಬಂಧಕಾರಣವು. ಆತ್ಮನ ಜ್ಞಾನಕ್ರಿಯಾಶಕ್ತಿಗಳ ಸದುಪಯೋಗವೇ (ಜಡಕ್ಕೆ ದೂರಾದ ಆತ್ಮಾನುವರ್ತನವೇ] ಧರ್ಮವು. ಇದೇ ಮೋಕ್ಷೋಪಾಯವು. ಹಿಂದುಗಳ ಮತಸಿದ್ಧಾಂತದ ಸಾರವೇ ಇದು.

ಈಶ್ವರ ತತ್ವ ವಿಮರ್ಶೆಃ — ಆತ್ಮನ ಸಂಕೋಚಭಾವವೇ ಜೀವಭಾವವು. ವಿಕಾಶಭಾವವೇ ಈಶ್ವರಭಾವವೆಂದರೆ ಜೀವಾತ್ಮರಿಗತಿರಿಕ್ತನಾಗಿ ನಿತ್ಯನಾಗಿರುವ ಒಬ್ಬ ಈಶ್ವರನು ಇರುವನೇ ಇಲ್ಲವೆ ಎಂಬ ವಿಷಯದಲ್ಲಿ ಹಿಂದೂ ತತ್ವಜ್ಞಾನಿಗಳಲ್ಲಿ ದ್ವಿಪಕ್ಷವಿರುವುದು. ಜೀವಾತ್ಮನು ವಿಕಾಸಮಾರ್ಗದಿಂದ ಪೂರ್ಣನಾಗುವದೇ ಪರಮಾತ್ಮರೂಪವು. ಈ ಪರಮಾತ್ಮನಿಗಿಂತ ಭಿನ್ನನಾಗಿ ನಿತ್ಯನಾದೊಬ್ಬ ಪರಮಾತ್ಮನಿಲ್ಲವೆಂಬುದೇ ಸಾಂಖ್ಯಾದಿ ತತ್ವಜ್ಞಾನಿಗಳ ಪಕ್ಷವು. 'ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷವಿಶೇಷೋ ಈಶ್ವರಃ ತತ್ರ ನಿರತಿಶಯಂ ಸರ್ವಜ್ಞಬೀಜಂ ಎಂಬ ಸೂತ್ರಗಳಿಂದ ಎಂದೂ ಜೀವಭಾವವನ್ನು ಹೊಂದದೆ ಅನಾದಿಮುಕ್ತನೂ ಸರ್ವಜ್ಞನೂ ಎಂದು ಕರೆಯಿಸಿಕೊಳ್ಳುವ ಈಶ್ವರನು ಜೀವಾತ್ಮಾತಿರಿಕ್ತನಾಗಿ ನಿತ್ಯನಾಗಿರುವನೆಂದು ವಾದಿಸುವುದೇ ಯೋಗಾದಿ ತತ್ವಜ್ಞಾನಿಗಳ ಮತ್ತೊಂದು ಪಕ್ಷವು. ಈ ಈಶ್ವರವಾದಿಗಳಲ್ಲಿ ಕೆಲವರು ಸಾಂಖ್ಯಾದಿ ತತ್ವ

ಜ್ಞಾನಿಗಳೂ ಕೂಡ ನಿತ್ಯನಾದ ಈಶ್ವರನನ್ನು ಒಪ್ಪಿಕೊಂಡಂತೆ ಅವರ ತತ್ವ ವಿಚಾರದಲ್ಲಿ ಕಂಡುಬರುವದೆಂದು ವಾದಿಸುವರು. ಈ ಎರಡೂ ಪಕ್ಷಗಳನ್ನು ಒಂದುಗೂಡಿಸುವ ಮತ್ತೊಂದು ಪಕ್ಷವೂ ಇರುವುದು. ಆತ್ಮತತ್ವವೆಂಬುದು ಒಂದೇ. ಅದು ನಿತ್ಯವಾದುದಿರುವುದು. ಮತ್ತು ವ್ಯಾಪಕವಿರುವುದು. ಇಂತಹ ವ್ಯಾಪಕ ಸ್ಥಿತಿಯನ್ನು ಹೊಂದುವುದು ಜೀವಾತ್ಮನ ನೈಸರ್ಗಿಕ ಧರ್ಮವಾಗಿರುವುದು. ಈಶ್ವರ, ಶಿವ, ವಿಷ್ಣು ಮೊದಲಾದ ಸಗುಣ ರೂಪಗಳು. 'ಯಾದೃಶೀಭಾವನಾ ಪುಂಸಾಂ ಸಿದ್ಧಿರ್ಭವತಿ ತಾದೃಶೀ' ಎಂಬ ವಾಕ್ಯಕ್ಕನುಸರಿಸಿ, ಉಪಾಸನೆಗಾಗಿ ಕಲ್ಪಿತವಾದ ಮೂರ್ತಿಗಳೇ. ಯೋಗಾದಿ ತತ್ವಜ್ಞಾನಿಗಳಾದರೂ ಉಪಾಸನಾರ್ಥವಾಗಿಯೇ ನಿತ್ಯನಾದ ಈಶ್ವರನನ್ನು ಅಂಗೀಕರಿಸಿರುವರು. ಉಪಾಸಕರಿಗೆ ಈ ಕಲ್ಪಿತ ಮೂರ್ತಿಗಳ ಸಾಕ್ಷಾತ್ಕಾರವಾಗಿ ಆ ಮೂರ್ತಿಗಳಿಂದ ಉಪಾಸಕರು ತಮ್ಮಿಷ್ಟ ಸಿದ್ಧಿಯನ್ನು ಪಡೆಯುವುದಾದರೂ ಸತ್ಯವು. ಆದರೆ ಇದೆಲ್ಲ ಉಪಾಸಕರ ಆತ್ಮಶಕ್ತಿಯಿಂದಲೇ ಆಗುವುದು. ಆತ್ಮನಲ್ಲಿ ಅಂತಹ ಅದ್ಭುತಶಕ್ತಿಯಿರುವುದು. 'ಉದ್ಧರೇದಾತ್ಮನಾತ್ಮಾನಂ' ಎಂಬ ಗೀತೋಕ್ತಿಯ ಅಭಿಪ್ರಾಯವಾದರೂ ಇದೇ. ಈ ರೀತಿಯಾದ ವಿಚಾರವನ್ನೊಳಕೊಂಡಿರುವುದೇ ಮತ್ತೊಂದು ಪಕ್ಷವು.

ಹಿಂದೂ ತತ್ವಜ್ಞಾನಿಗಳು, ಪರಮಾತ್ಮ ತತ್ವನಿರ್ಣಯದಲ್ಲಿ ಭಿನ್ನಾಭಿಪ್ರಾಯವುಳ್ಳವರಾಗಿದ್ದರೂ ಜಡಾತಿರಿಕ್ತವಾದ ಆತ್ಮತತ್ವವೊಂದಿರುವುದೆಂಬುದರಲ್ಲಿ ಏಕಾಭಿಪ್ರಾಯವುಳ್ಳವರಾಗಿರುವರು. ಇಷ್ಟೇ ಅಲ್ಲ; ಆತ್ಮವು ಅನಂತವೂ ಅದ್ಭುತವೂ ಆದ ಶಕ್ತಿಯನ್ನೊಳಕೊಂಡಿರುವುದು. ಈ ಆತ್ಮಶಕ್ತಿಯ ವಿಕಾಸ ಮಾರ್ಗಗಳೇ ಮತಗಳು. ಈ ವಿಕಾಸಮಾರ್ಗಗಳನ್ನು ಕಂಡುಹಿಡಿದು ಆ ಮಾರ್ಗಗಳ ದ್ವಾರಾ ಸುಖಸ್ವಾತಂತ್ರ್ಯವನ್ನು ಹೊಂದುವ ಶಕ್ತಿಯಾದರೂ ಆತ್ಮನಲ್ಲಿಯೇ ಇರುವುದು. ಇದೇ ಜ್ಞಾನಶಕ್ತಿಯು. ಈ ಜ್ಞಾನಶಕ್ತಿಯ ವ್ಯಕ್ತರೂಪವೇ ವೇದಾಗಮಗಳಲ್ಲಿರುವ ಧರ್ಮವು. ಈ ಧರ್ಮದಿಂದ ನಾವು ಪಡೆಯಬೇಕಾದುದಾವದರೂ ಜ್ಞಾನಶಕ್ತಿಯ ಅಭಿವೃದ್ಧಿಯನ್ನೇ ಸರ್ವಜ್ಞತೆಯೇ ಜ್ಞಾನಾಭಿವೃದ್ಧಿಯ ಅಂತ್ಯವು. ಅದೇ ಮೋಕ್ಷವು ಅದೇ ಪರಮಾತ್ಮರೂಪವು. ಎಂಬುದೇ ಹಿಂದುಗಳ ತತ್ವವಿಚಾರ ವಿಕಾಸದ ಇತಿಹಾಸದಲ್ಲಿ ಹೊರಡುವ ಸಾರವು.

ನಾವು ನೆನಸಿನಲ್ಲಿಡುವ ಮಾತುಗಳು:— ಆತ್ಮನ ಅಂತಃಶಕ್ತಿಗಳ ವಿಕಾಸವೇ ನಿಜವಾದ ಧರ್ಮಮಾರ್ಗವು. ಇಂತಹ ಮಾರ್ಗವನ್ನು

ಕಂಡುಕೊಳ್ಳುವುದಕ್ಕೂ, ಕಾಲಾನುಗುಣವಾಗಿ ಅದನ್ನು ಸವರ್ಣವಾಡಿ ಕೊಳ್ಳಲಿಕ್ಕೂ ಪ್ರತಿಯೊಬ್ಬ ಜೀವಿಗೂ ಅಧಿಕಾರವಿರುವುದು. ಇದು ಆತ್ಮನ ನೈಸರ್ಗಿಕವಾದ ಹಕ್ಕು. ಸದ್ಯದಲ್ಲಿ ಸಂಘಜೀವಿಯಾಗಿರುವ ಜೀವಾತ್ಮ ನಿಗಿರುವ ಧರ್ಮಮಾರ್ಗವೆಂದರೆ ಸ್ವಾರ್ಥತ್ಯಾಗ ಮತ್ತು ಸಂಯಮನ ಸಂಘಜೀವಿಯು ಹಲವು ವಿಷಯಗಳಿಗೆ ಹರಿದಾಡುವ ತನ್ನ ಮನಸ್ಸನ್ನು ಸಂಯಮನಮಾಡಿ ಸಂಘದಲ್ಲಿ ತನ್ನ ಭಾಗದ ಕರ್ತವ್ಯವನ್ನು ಸ್ವಾರ್ಥ ತ್ಯಾಗ ಬುದ್ಧಿಯಿಂದ ಮಾಡಬೇಕು. ತ್ಯಾಗದಿಂದ ಲೋಭವು ನಾಶ ವಾಗುವುದು. ಆತ್ಮಶಕ್ತಿಯ ವಿಕಾಸವಾಗುವುದು. ಆಗ ಆತ್ಮಾನಂದವು ಪ್ರಾಪ್ತಿಯಾಗುವುದು. ಇದೇ ಜೀವಿಯ ಸ್ವತಂತ್ರತೆ ಅಥವಾ ಮುಕ್ತಿ. ಈಶ್ವರಪ್ರಾಪ್ತಿ.

---

# ವೀರಶೈವರು ಅರಣ್ಯವಾಸಿಗಳಲ್ಲ, ನಾಗರಿಕರು.

(ಲೇಖಕ— ಒರ್ವ ನಾಗರಿಕ.)

ಅದ್ವೈತಾದಿ ಮತವಾದಿಗಳು ಈ ಸಂಸಾರವು ಮಿಥ್ಯವಾದುದೆಂದೂ ದುಃಖದಾಯಕವೆಂದೂ ತಿಳಿದು ಅದನ್ನು ತ್ಯಾಗಮಾಡಿ ಅರಣ್ಯವನ್ನು ಸೇರಿ ಬ್ರಹ್ಮಚಿಂತನೆಯಿಂದ ಮೋಕ್ಷವನ್ನು ಸಾಧಿಸಬೇಕೆಂದು ಹೇಳುತ್ತಿ ರುವರಷ್ಟೇ. ಆದರೆ ವೀರಶೈವರಿಗೆ ಜಗತ್ತೂ ಪ್ರಪಂಚವೂ ಮಿಥ್ಯವಾ ದವುಗಳಲ್ಲ. ಸತ್ಯವಾದವುಗಳೇ ಆಗಿವೆ. ಪ್ರಪಂಚದಲ್ಲಿ ಬಂದೊದಗುವ ದುಃಖವಿಘ್ನಾದಿಗಳನ್ನೆಲ್ಲ ಅವರು ಆನಂದದಿಂದಲೇ ಸಹಿಸುವರು. ದುಃಖ ವನ್ನು ಕೂಡ ಸುಖವೆಂದೇ ಭಾವಿಸಿ ಸಂತೋಷದಿಂದ ಕಾಲಹರಣ ಮಾಡುವರು. ವೀರಶೈವರು ವನದಲ್ಲಿ ಮನೆ ಮಾಡಿ ಕಂದಮೂಲಗ ಳನ್ನು ತಿಂದು ಸಿಂಹ, ಹುಲಿ, ಕರಡಿ, ಚಿಗರೆ ಮುಂತಾದ ವನ್ಯ ಪಶು ಗಳೊಡನೆ ಬಾಳ್ವೆ ಮಾಡುವಂಥ ಯತಿಗಳಲ್ಲ. ಆದರೆ ಜನತೆಯ ಮಧ್ಯ ವಲ್ಲಿಯೇ ಇದ್ದುಕೊಂಡು ಸದಾಚಾರ ಸದ್ವರ್ತನೆಗಳಿಂದ ಆತ್ಮೋದ್ಧಾ ರ ಮಾಡಿಕೊಳ್ಳುವದಲ್ಲದೆ ಲೋಕಸಂಗ್ರಹ ಕಾರ್ಯಗಳಿಂದ ಪತಿತೋ ದ್ಧಾರ ಮಾಡುವ ಪುಣ್ಯಮೂರ್ತಿಗಳು.

ಮನುಷ್ಯನು ಸ್ವಭಾವತಃ ಸಮಾಜಪ್ರಾಣಿಯು. ಅಡವಿಯಲ್ಲಿರುವದು ಪಶುಸ್ವಭಾವವು. ಮನುಷ್ಯರೇ ಬೇಡಾದವನು ಮಾತ್ರ ಅವರ ಸಂಗವ ತೊರೆದು ಪಶುಗಳ ಗೆಳೆತನ ಮಾಡಿ ರಾಬಿನ್‌ಸನ್ ಕ್ರೂಸೋನಂತೆ ಪಶುವೃತ್ತಿಯಿಂದಲೇ ಜೀವಿಸಬಹುದು. ಏನೋ ಒಂದು ವಿಲಕ್ಷಣ ಸ್ವಭಾವದವರಾಗಲಿ ಅಥವಾ ದಿವ್ಯಜ್ಞಾನಿಗಳೇ ಆಗಲಿ ಮನುಷ್ಯರ ಸಂಸರ್ಗವನ್ನು ತೊರೆದು ಅಡವಿಯನ್ನು ಸೇರಬಹುದು. ಅಂಥವರು ಒಂದುವೇಳೆ ಪರಮಾತ್ಮನಿಗೆ ಬೇಕಾಗಿದ್ದರೂ ಸಮಾಜಕ್ಕೆ ಹೊರತಾಗಿರುವರು. ಅಂಥವರು ವ್ಯವಹಾರಜ್ಞಾನ ಶೂನ್ಯರಿರುವದರಿಂದ ಅವರಿಂದ ಯಾವ ಸಮಾಜಹಿತದ ಕೆಲಸಗಳೂ ನಡೆಯಲಾರವು. ವೀರಶೈವರು ಇಂಥ ವ್ಯವಹಾರಜ್ಞಾನಶೂನ್ಯರಾಗಲಿ ವಿಲಕ್ಷಣ ಸ್ವಭಾವದ ತಲೆತಿರುಕರಾಗಲಿ ಅಲ್ಲ. ಇವರು ವ್ಯವಹಾರಚತುರರು. ಲೋಕದ ಹರಿವು ಹಂಚಿಕೆಗಳನ್ನೆಲ್ಲ ಬಲ್ಲವರು. ಲೋಕದೊಳಗಿದ್ದರೂ ಲೋಕದ ದುಷ್ಟ ವ್ಯಸನಾದಿಗಳಿಂದ ನಿರ್ಲಿಪ್ತರು. ವಿಷಯಲೋಲುಪ್ತರನ್ನು ಸನ್ಮಾರ್ಗಕ್ಕೆ ಹಚ್ಚುವಂಥವರು. ದುರ್ಗುಣಿ ದುರಾಚಾರಿಗಳನ್ನು ಸುದ್ಗುಣಿ ಸದಾಚಾರಿಗಳನ್ನು ಮಾಡುವಂಥವರು.

ಲೋಕಸೇವಾ ಕಾರ್ಯದಲ್ಲಿಯೇ ತತ್ಪರವಾದ ವೀರಶೈವರ ಮಠಗಳು ಋಷಿಗಳ ಪರ್ಣಕುಟೀರಗಳಂತೆ ಊರ ಬಿಟ್ಟು ದೂರ ಕಾನನದಲ್ಲೇನೂ ಇರುವದಿಲ್ಲ. ಅವು ಊರ ನೆರೆಯಲ್ಲಿಯೇ ಇದ್ದು ಜನತಾಸೇವೆಯನ್ನು ಮಾಡುತ್ತಿರುವರು. ಋಷಿಗಳಿಗೆ ಅರಣ್ಯವೇ ದೇವರ ನಿವಾಸವಾಗಿದ್ದರೆ ವೀರಶೈವರಿಗೆ ಊರಿದ್ದಲ್ಲಿಯೇ ಕೈಲಾಸವಿರುತ್ತದೆ. ಇವರಿಗೆ ನಿರ್ಜನಸ್ಥಾನಕ್ಕಿಂತಲೂ ಜನಸ್ಥಾನಗಳೇ ಧರ್ಮಕಾರ್ಯದ ಪವಿತ್ರ ಕ್ಷೇತ್ರಗಳು. ಗುರುಕುಲ, ಶಾಂತಿನಿಕೇತನ ಆಶ್ರಮಾದಿಗಳಂತೆ ಮಠಗಳು ಊರಹೊರಗಿನ ಸಂಸ್ಥೆಗಳಲ್ಲ. ನಾಗರಿಕ ಸಂಸ್ಥೆಗಳು.

ಆರ್ಯಧರ್ಮದಂತೆ ಬ್ರಹ್ಮಚರ್ಯಾಶ್ರಮದಲ್ಲಿ ವಿದ್ಯೆ ಗಳಿಸಿ ಗೃಹಸ್ಥಾಶ್ರಮದಲ್ಲಿ ವಿಷಯ ವ್ಯಾಸಂಗಿಗಳಾಗಿ ವಾನಪ್ರಸ್ಥಾಶ್ರಮದಲ್ಲಿ ಊರಹೊರಗಿನ ಉಪವನದಲ್ಲಿ ಕಾಲಹರಣ ಮಾಡಿ ಸನ್ಯಾಸಾಶ್ರಮದಲ್ಲಿ ಸಂಸಾರವನ್ನೇ ತ್ಯಾಗಮಾಡಿ ಅರಣ್ಯವನ್ನು ಸೇರಬೇಕೆಂದು ವೀರಶೈವ ಧರ್ಮವು ಹೇಳುವದಿಲ್ಲ. ವೀರಶೈವರು ಪ್ರತಿನಿತ್ಯದಲ್ಲಿಯೂ ವಿದ್ಯಾವ್ಯಾಸಂಗಿಗಳು. ಗೃಹಸ್ಥಾಶ್ರಮದ ಬ್ರಹ್ಮಚಾರಿಗಳು. ಸಂಸಾರದಲ್ಲಿದ್ದರೂ ಅದರ ಭೋಗಮಾಡುವದಕ್ಕಿಂತಲೂ ತ್ಯಾಗದಲ್ಲಿಯೇ ನಿರಂತರ ಸಂತೋಷಬಡುವಂಥವರು.

ವೀರಶೈವರು ಸಂಸಾರದಲ್ಲಿ ಬರುವ ಎಡೆತಡೆಗಳಿಗೂ ವಿಷಯ ವ್ಯಾಮೋಹಾದಿಗಳಿಗೂ ಅಂಜಿ ಅರಣ್ಯವನ್ನು ಸೇರುವ ಪುಕ್ಕರಲ್ಲ. ಹೊನ್ನು ಹೆಣ್ಣು ಮಣ್ಣುಗಳ ಮಧ್ಯದಲ್ಲಿದ್ದರೂ ಅವುಗಳಿಗೆ ಮೋಹಗೊಳ್ಳದೆ ಆತ್ಮಬಲದಿಂದ ಅವುಗಳನ್ನು ಜಯಿಸಿ ಮೆರೆಯುವ ಆತ್ಮವೀರರು. ಪ್ರಪಂಚ ವನ್ನು ಬಿಟ್ಟೋಡುವ ಕರ್ಮಸನ್ಯಾಸಿಗಳಲ್ಲ. ಲೋಕಸೇವೆಯನ್ನು ಮಾಡುವ ಕರ್ಮಯೋಗಿಗಳು. ಭಗವದ್ಗೀತೆಯಲ್ಲಿ "ಸನ್ಯಾಸಃ ಕರ್ಮಯೋಗಶ್ಚ ನಿಶ್ರೇಯಸಕರಾವುಭೌ॥ತಯೋಸ್ತು ಕರ್ಮಸನ್ಯಾಸಾತ್ ಕರ್ಮಯೋಗೋ ವಿಶಿಷ್ಯತೆ" ಅಂದರೆ ಸಂಸಾರ ಪರಿತ್ಯಾಗಮಾಡುವದೂ ಸಂಸಾರದಲ್ಲಿಯೇ ಇದ್ದು ಲೋಕಸೇವಾಮಾಡುವದೂ ಇವೆರಡೂ ಮೋಕ್ಷ ಮಾರ್ಗಗಳೇ. ಆದರೆ ಸಂಸಾರ ಪರಿತ್ಯಾಗಕ್ಕಿಂತ ಲೋಕಸೇವಾ ಕಾರ್ಯವೇ ಶ್ರೇಷ್ಠ ವಾದುದೆಂದು ಶ್ರೀಕೃಷ್ಣನು ಹೇಳಿದ ನುಡಿಯು ವೀರಶೈವ ತತ್ವವನ್ನೇ ಪುಷ್ಟೀಕರಿಸುತ್ತದೆ.

ಮನುಷ್ಯನು ಸಮಾಜಪ್ರಾಣಿಯೆಂದ ಬಳಿಕ ಆತನಿಗೆ ವ್ಯಕ್ತಿಸ್ವಾ ತಂತ್ರ್ಯವೇ ಇಲ್ಲವೆಂತಲ್ಲ. ಆತನು ಸಮಾಜದಲ್ಲಿದ್ದುಕೊಂಡು ಸ್ವತಂತ್ರ ವಾಗಿ ಬೇಕಾದಷ್ಟು ಲೋಕಸಂಗ್ರಹ ಕಾರ್ಯವನ್ನು ಮಾಡಲಿಕ್ಕೆ ಬರು ತ್ತದೆ. ಏಕಾಕಿಯಾಗಿರುವದಕ್ಕಿಂತಲೂ ತನ್ನ ಸಮಾಜದವರೊಂದಿಗೆ ಕೂಡಿಕೊಂಡಿರುವದು ಮನುಷ್ಯನ ಸ್ವಭಾವವು ಸಮಾಜವನ್ನು ಬಿಟ್ಟರೆ ಮನುಷ್ಯತ್ವವೇ ಇಲ್ಲ. ಆದುದರಿಂದ ಮನುಷ್ಯನ ಸರ್ವಾಂಗಸುಂದರ ವಾದ ಬೆಳವಣಿಗೆಯಾಗಬೇಕಾದರೆ ಆತನು ಸಮಾಜದಲ್ಲಿರಲೇಬೇಕು. ಸಮಾಜವನ್ನು ಬಿಟ್ಟು ಅರಣ್ಯಕ್ಕೆಂದಿಗೂ ಹೋಗಬಾರದು. ಆತ್ಮವಿಕಾ ಸವು ಅಡವಿಯಲ್ಲಾಗುತ್ತದೆ. ಊರಲ್ಲಾಗುವದಿಲ್ಲೆನ್ನುವದು ಹುಚ್ಚುತನವು ಯಾರೂ ಇಲ್ಲದ ಕಾಡಡವಿಯಲ್ಲಿ ಬೆಳೆದು ಗಮಗಮಿಸುವ ಸುವಾಸಿಕ ಕುಸುಮದ ಪರಿಮಳವನ್ನು ಯಾರು ಘ್ರಾಣಿಸಿ ಆನಂದಪಡೆಯಬೇಕು? ಅದರ ವಾಸನೆಯ ಲಾಭವು ಲೋಕಕ್ಕೆ ದೊರೆಯದಿದ್ದರೆ ಅದು ನಿರ ರ್ಥಕವೇ ಅಲ್ಲವೇ? ಅದರಂತೆ ಒಬ್ಬ ದಿವ್ಯಜ್ಞಾನಿಯು ಅರಣ್ಯಕ್ಕೆ ಹೋಗಿ ತನ್ನ ಆತ್ಮಬಲದಿಂದ ದಿವ್ಯಜ್ಞಾನವನ್ನು ಪಡೆದನೆಂದು ತಿಳಿದರೂ ಆತನ ಜ್ಞಾನದ ಉಪಯೋಗವು ಲೋಕದ ಜನರಿಗಾಗದಿದ್ದರೆ ಅದರಿಂದೇನು ಪ್ರಯೋಜನ? ಕೆಲವು ಮಹತ್ವದ ಪ್ರಶ್ನೆಗಳನ್ನಾಗಲಿ ಗಡುಚಾದ ವಿಷ ಯಗಳನ್ನಾಗಲಿ ಏಕಾಗ್ರಚಿತ್ತದಿಂದ ವಿಚಾರಿಸಲಿಕ್ಕೆ ಏಕಾಂತವಾಸವೇನೋ

ಬೇಕು. ಆದರೆ ಆ ವಿಷಯುಗಳ ಸಾಕ್ಷಾತ್ಕಾರವಾದ ಬಳಿಕ ಅವುಗಳ ಉಪಯೋಗವನ್ನು ಸಮಾಜಕ್ಕುಂಟುಮಾಡಲಿಕ್ಕೆ ಆತನು ಪುನಃ ಸಮಾಜದಲ್ಲಿಯೇ ಪ್ರವೇಶಿಸಬೇಕಾಗುವದು; ಅಡವಿಯಲ್ಲಿಯೇ ಮಡಿದುಹೋಗಬಾರದು. ಬುದ್ಧನು ೪೦ ವರ್ಷ ಅರಣ್ಯದಲ್ಲಿದ್ದರೂ ಕೊನೆಗೆ ತನಗೆ ದೊರೆತ ದಿವ್ಯಜ್ಞಾನದ ಲಾಭವನ್ನು ಜನತೆಗೆ ಒದಗಿಸಿಕೊಟ್ಟನು. ಅದರಂತೆ ಕ್ರಿಸ್ತ, ಮಹಮ್ಮದ ಮೊದಲಾದ ಮಹಾಪುರುಷರು ಏಕಾಂತವಾಸದಲ್ಲಿ ಕೆಲವು ವರ್ಷವಿದ್ದರೂ ತಮ್ಮ ತಮ್ಮ ತತ್ವಗಳ ಬೆಳಕನ್ನು ಸಮಾಜದಲ್ಲಿ ಹರಡಿದರು. ಆದುದರಿಂದ ಸಮಾಜದಲ್ಲಿ ಜನ್ಮತಾಳಿದ ಪ್ರತಿಯೊಬ್ಬ ವ್ಯಕ್ತಿಯು ತನ್ನ ಕೈಲಾದಮಟ್ಟಿಗೆ ಸಮಾಜಹಿತದ ಸ್ವಲ್ಪ ಸೇವೆಯನ್ನಾದರೂ ಮಾಡುವದು ವಿಹಿತವು.

ಶ್ರೀಬಸವಾದಿ ಪ್ರಮಥರ ಕಾಲದಲ್ಲಿ ಕಲ್ಯಾಣ ಪಟ್ಟಣದೊಳಗೆ ವೀರಶೈವ ಸಮಾಜವು ಒಳ್ಳೆ ನಾಗರಿಕತೆಯ ಪರಮಾವಧಿಯ ಸ್ಥಾನಕ್ಕೇರಿತ್ತು. ಅವರ ನಾಗರಿಕತೆಯು ಜಗತ್ತಿಗೇ ಆದರ್ಶಪ್ರಾಯವಾಗಿದೆ. ಸದಾತನ, ಸದ್ವರ್ತನ, ಐಕ್ಯ, ಪ್ರೇಮ, ವ್ಯಕ್ತಿಸ್ವಾತಂತ್ರ್ಯ ಮುಂತಾದ ಉದಾತ್ತ ತತ್ವಗಳ ತಳಹದಿಯ ಮೇಲೆ ಆ ಮಹಿಮರು ಸಮಾಜದ ರಚನೆಯನ್ನು ಕಟ್ಟಿದ್ದಾರೆ. ಒಬ್ಬ ಶಿವಶರಣನು ಕಲ್ಯಾಣಪಟ್ಟಣ ಉದಾತ್ತ ನಾಗರಿಕತೆಯ ಬಗ್ಗೆ ಹೇಳಿರುವದೇನಂದರೆ-- "ಕಲ್ಯಾಣ ಪಟ್ಟಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವ ಹಾಕಿ ಶಿವಶರಣರೆಂಬ ಬತ್ತಿಗಳಿಗೆ ಬಸವೇಶನೆಂಬ ಜ್ಯೋತಿಯ ಮುಟ್ಟಿಸಲು ಜಾಜ್ವಲ್ಯಮಯವಾಗಿ ತೋರ್ಪುದಯ್ಯಾ ಪ್ರಕಾಶ. ಆ ಪ್ರಕಾಶದಲ್ಲಿ ಬೆಳಗುತ್ತಿರ್ದರಯ್ಯ ಅಸಂಖ್ಯಾತ ಪ್ರಮಥರು. ಇಂತಪ್ಪ ಕಲ್ಯಾಣವು ಕೈಲಾಸವೆಂಬುದು ಹುಸಿಯೇ? ವಾರಣಾಸಿಯೆಂಬುದು ಹುಸಿಯೇ. ಶರಣರಿರ್ದ ಠಾಣವೇ ಪುಣ್ಯಕ್ಷೇತ್ರವಯ್ಯ ಸಂಗನಬಸವಣ್ಣ."

ಶಿವಶರಣರು ನಗರವನ್ನು ಕ್ಷೇತ್ರವನ್ನಾಗಿ ಮಾಡಿಬಿಟ್ಟರು. ಇವರೇ ಅಲ್ಲವೇ ನಿಜವಾದ ನಾಗರಿಕರು? ಭಕ್ತಿಯ ಕಣಿಯು ದಿವ್ಯ ವಿಭೂತಿಯು ಆದ ಬಸವರಾಜನು ಕಲ್ಯಾಣಪಟ್ಟಣದಲ್ಲಿದ್ದುದರಿಂದ ಆತನ ಮಹಿಮೆಯನ್ನು ಕೇಳಿ ದೂರ ದೂರ ದೇಶಗಳಿಂದ ಅಸಂಖ್ಯಾತ ಜನಗಳು ಕೂಡಿ ಒಂದು ಸಮಾಜವೇ ನೇರ್ಪಟ್ಟಿದ್ದಿತು. ಹನ್ನೆರಡು ಗಾವುದ ವಿಸ್ತೀರ್ಣವಾದ ಕಲ್ಯಾಣಪಟ್ಟಣದಲ್ಲಿ ೧ ಲಕ್ಷ ೯೬ ಸಾವಿರ ವೀರಶೈವರ

ಸಂಖ್ಯೆಯಿದ್ದಿತು. ಇವರೆಲ್ಲರಿಗೆ ಪ್ರತಿನಿತ್ಯದಲ್ಲಿಯೂ ಶಿವಾನುಭವ ಮಂಟಪದಲ್ಲಿ ಬಸವಾದಿ ಪ್ರಮಥರು ಅನುಭವಾಮೃತ ಪಾನವನ್ನು ಮಾಡಿಸುತ್ತಿದ್ದರು. ಸುಗ್ರಾಸ ಭೋಜನವನ್ನಲ್ಲ. ಶಿವಾನುಭವ ಮಂಟಪವು ಉದಾತ್ತವಾದ ಆಧ್ಯಾತ್ಮಿಕ ಶಿಕ್ಷಣವನ್ನು ಕೊಡುವ ವಿದ್ಯಾಮಂದಿರವಾಗಿದ್ದಿತು. ಈಮೇರೆಗೆ ಸ್ವಾನುಭವದ ವಿಚಾರಕ್ರಾಂತಿಯೇ ಸಮಾಜರಚನೆಯ ಮುಖ್ಯ ತಳಹದಿಯಾಗಿದ್ದಿತು.

ಕಲ್ಯಾಣಪಟ್ಟಣದಲ್ಲಿ ವೀರಶೈವ ಸಮಾಜವು ಒಂದು ಮನೆಯಂತಿದ್ದಿತು. ಅದರಲ್ಲಿ ಎಲ್ಲರೂ ಪ್ರೇಮದಿಂದಲೂ ಐಕ್ಯದಿಂದಲೂ ಬಂಧುಗಳಂತೆ ನಡೆದುಕೊಳ್ಳುತ್ತಿದ್ದರು. ಗುಣದಿಂದ ಕುಲವನೆಣಿಸುತ್ತಿದ್ದರಲ್ಲದೆ ಜಾತಿಯಿಂದೆಣಿಸುತ್ತಿದ್ದಿಲ್ಲ. ಕಸಬು ಕಾಯಕಗಳಲ್ಲಿ ಹೆಚ್ಚುಕಡಿಮೆಗಳನ್ನು ಮನ್ನಿಸುತ್ತಿದ್ದಿಲ್ಲ. ಒಬ್ಬರ ದೋಷವನ್ನೊಬ್ಬರು ತಿದ್ದುತ್ತ ಒಬ್ಬರನ್ನೊಬ್ಬರು ಎತ್ತಿಹಿಡಿಯುತ್ತ ಪರಸ್ಪರ ದ್ವೇಷಾಸೂಯೆಗಳಿಲ್ಲದೆ ಏಕತ್ರವಾಗಿ ಸಮಾಜ ಸೇವಾಕಾರ್ಯದಲ್ಲಿ ತೊಡಗಿದ್ದರು. ತಮ್ಮ ಹೊಟ್ಟೆಗಾಗಿ ಅನ್ಯರನ್ನು ಬಿಕ್ಕೆ ಬೇಡದೆ ಅನ್ಯರ ಮೇಲೆ ಭಾರಹಾಕದೆ ಬೇರೆ ಬೇರೆ ಕಾಯಕಗಳನ್ನು ಸಾಗಿಸಿದ್ದರು. ತನುವ ನೋಯಿಸಿ ಮನವಬಳಲಿಸಿ ತಾವು ದುಡಿದು ತಂದು ದ್ರವ್ಯದಲ್ಲಿಯೇ ಗುರುಲಿಂಗಜಂಗಮದ ದಾಸೋಹ ಮಾಡಿ ಮಿಕ್ಕ ಪ್ರಸಾದವನ್ನು ಸೇವಿಸುತ್ತಿದ್ದರು. ಇಂದಿನದು ನಾಳಿಗೆ ಬೇಕೆಂದು ಎಂದೂ ಕೂಡಿಡುತ್ತಿರಲಿಲ್ಲ. "ಇಂದಿಗೆಂತು ನಾಳಿಗೆಂತು ಚಿಂತಿಸಲೇಕೆ? ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ" ಎಂದು ಒಬ್ಬ ಶಿವಶರಣನು ಹೇಳಿದ್ದಾನೆ. ಶಿವಶರಣರು ರುಚಿಗಾಗಿ ಪ್ರಸಾದವನ್ನು ಸೇವಿಸುತ್ತಿರಲಿಲ್ಲ. ದುರಾಶೆಗಾಗಿ ದುಡ್ಡು ಕೂಡಿಸುತ್ತಿದ್ದಿಲ್ಲ. ನಿತ್ಯ ಶುದ್ಧಕಾಯಕವೇ ಅವರಿಗೆ ಕೈಲಾಸ. ಗುರುಲಿಂಗಜಂಗಮ ದಾಸೋಹವೇ ಅವರಿಗೆ ಪರಮ ಮೋಕ್ಷ. ಭಿನ್ನಭಿನ್ನ ಕಾಯಕಗಳನ್ನು ಮಾಡುವವರೆಲ್ಲರೂ ಒಂದೇ ಎಂಬ ಭಾವದಿಂದ ಪರಸ್ಪರ ವಿನೀತರಾಗಿ ನಡೆಯುತ್ತಿದ್ದರಲ್ಲದೆ ದರ್ಪದಿಂದ ನಡೆಯುತ್ತಿದ್ದಿಲ್ಲ. ಇಂಥ ದಿವ್ಯ ಸಮಾಜವು ಜಗತ್ತಿಗೆ ಯಾವಾಗಲೂ ಆದರ್ಶಪ್ರಾಯವಾಗಿಲ್ಲವೇ? ಈಗಿನ ಕ್ರಾಂತಿಕಾರರ ಸಮಾಜ ಪಕ್ಷಕ್ಕಿಂತಲೂ ಶಾಂತಿಕಾರಕವಾದ ಶರಣ ಸಾಮ್ರಾಜ್ಯವು ಲೇಸಲ್ಲವೇ?

ಈಗಿನ ಕಾಲವು ಮೇಲಾಟದ ಕಾಲವು. ಒಬ್ಬನ ಗಂಟಲಕ್ಕೆ ಇನ್ನೊಬ್ಬನು ಹಾರಲಿಕ್ಕೆ ಯತ್ನಿಸುತ್ತಿದ್ದಾನೆ. ಬಲವಂತನು ಬದುಕುವನು, ಬಲಹೀನನು ಸಾಯುವನು. ಧನವಂತರು ಕೂಲಿಕಾರರ ಗೋಣು

ಮುರಿಯುತ್ತಿದ್ದಾರೆ. ಸಬಲ ರಾಷ್ಟ್ರಗಳು ದುರ್ಬಲ ರಾಷ್ಟ್ರಗಳ ಮೇಲೆ ಅತಿಕ್ರಮಣ ಮಾಡಹತ್ತಿವೆ. ಬಹುಜನರ ಬಹು ಸುಖವಾಗಬೇಕೆಂದು ಒಂದು ಕಡೆಗೆ ಕ್ರಾಂತಿಕಾರಕ ಸಮಾಜ ಪಕ್ಷದವರು ಚಟುವಟಿಕೆಯುನ್ನೆಬ್ಬಿಸಿದ್ದಾರೆ. ಇನ್ನೊಂದು ಕಡೆಗೆ ಅಂತರರಾಷ್ಟ್ರೀಯ ಸಂಘದವರು ಶಾಂತತೆಯುನ್ನುಂಟುಮಾಡಲಿಕ್ಕೆ ಪ್ರಯತ್ನ ನಡಿಸಿದ್ದಾರೆ. ನಾಗರಿಕರೆಂದೆನಿಸುವ ಸಮಾಜಗಳಲ್ಲಿ ಸ್ವಾರ್ಥ, ಮೇಲಾಟ, ದುರಾಶೆ, ಅತ್ಯಾಚಾರ, ಮುಂತಾದ ದುರ್ಗುಣಗಳು ತುಂಬಿಕೊಂಡಿವೆ.

ಸ್ಪರ್ಧೆಯು ಈ ದಿನಗಳಲ್ಲಿ ವೀರಶೈವರಲ್ಲಿಯೂ ಐಕ್ಯತೆಯಿಲ್ಲ. ಜನರು ಅಧಿಕಾರ, ಗೌರವ, ದರ್ಪ, ದುರಾಶೆಗಳಿಗೇ ಮುಂದುವರಿಯುವರಲ್ಲದೆ ಬಸವಾದಿ ಪ್ರಮಥರಂತೆ ಲೋಕಸೇವೆ, ಸ್ವಾರ್ಥತ್ಯಾಗ, ಸಾದಾತನ, ಸರಳವೃತ್ತಿ, ಪ್ರೇಮ, ಐಕ್ಯತೆ ಮುಂತಾದ ಸದ್ವಿಷಯಗಳ ಕಡೆಗೆ ಗಮನಿಸುವದಿಲ್ಲ. ಆದುದರಿಂದ ನಮ್ಮ ಸಮಾಜವು ವೀರಶೈವ ಸಮಾಜವಾಗಿರದೆ ಸ್ವಾರ್ಥಸಾಧಕರ ಸಮಾಜವಾಗಿದೆ. ಮ್ಯುನಸಿಪಾಲ್ಟಿ ಲೋಕಲಬೋರ್ಡು ಸ್ಕೂಲಬೋರ್ಡು ಮುಂತಾದವುಗಳ ಬಗ್ಗೆ ಆಮಿಷಕ್ಕೆ ಕಡಿದಾಡುವ ಶುನಕಗಳಂತೆ ನಮ್ಮ ಸುಶಿಕ್ಷಿತರು ಮಾಡಹತ್ತಿದ್ದಾರೆ. ಹಾಳು ಮನೆಯಿಂದ ಹಿಡಿದು ಹಿರೇಮಠದ ವರೆಗೂ ಸ್ವಾರ್ಥವೇ ತುಂಬಿಕೊಂಡಿದೆ. ಇಂಥ ಸಮಾಜವು ನಾಗರಿಕ ಸಮಾಜವೇ?

ಕಾಲಗತಿಯು ವಿಚಿತ್ರವಾದರೂ ಮನುಷ್ಯನು ಪ್ರಯತ್ನದಿಂದ ಹಿಂದಿನ ಆದರ್ಶಪ್ರಾಯವಾದ ನಾಗರಿಕತೆಯುನ್ನು ಪುನಃ ಪ್ರಸ್ಥಾಪಿಸುವದು ಅಶಕ್ಯವೇನೂ ಅಲ್ಲ. ವೀರಶೈವರು ಪರಸ್ಪರ ದೂಷಿಸುವದನ್ನು ಬಿಟ್ಟು ಪ್ರೀತಿಸಹತ್ತಬೇಕು. ಹೆಮ್ಮೆಯುನ್ನು ತೋರಿಸುವ ಬದಲು ವಿನಯವನ್ನು ತೋರಿಸಬೇಕು. ಒಬ್ಬರಿಗೊಬ್ಬರು ಟೀಕೆಮಾಡುವದನ್ನು ಬಿಟ್ಟು ಹೊಗಳಲಿಕ್ಕೆ ಪ್ರಾರಂಭಿಸಬೇಕು. ಒಬ್ಬರಿಗೊಬ್ಬರು ದೂರನಾಗಿರುವದಕ್ಕಿಂತ ಕೂಡಿಕೊಂಡಿರಬೇಕು. ನಮಸ್ಕಾರವನ್ನು ಮಾಡಿಸಿಕೊಳ್ಳಬೇಕೆನ್ನುವದಕ್ಕಿಂತ ನಮಸ್ಕಾರವನ್ನು ಮಾಡಹತ್ತಬೇಕು. ಮುಂದರಿಯ ವವರನ್ನು ಹಿಂದೆಳೆಯುಬಾರದು. ಹಿಂದೆ ಬಿದ್ದವರನ್ನು ಮುಂದೆ ತರಲು ಪ್ರಯತ್ನಿಸಬೇಕು. 'ಎನಗಿಂತ ಕಿರಿಯರಾರಿಲ್ಲ, ಶಿವಭಕ್ತರಿಗಿಂತ ಹಿರಿಯರಾರಿಲ್ಲ' ವೆಂದು ಬಸವಣ್ಣನವರು ಹೇಳಿಲ್ಲವೇ? ಇಂಥ ಬಸವಾದಿ ಪ್ರಮಥರ ತತ್ವಗಳನ್ನು ನಾವು ಪರಿಪಾಲಿಸಿದರೆ ನವೀನ ನಾಗರಿಕತೆಯ ದಿವ್ಯ ಸ್ವರೂಪವನ್ನು ನಾವು ಶೀಘ್ರವೇ ಕಂಡುಕೊಳ್ಳುವೆವು.

---

# ಪ್ರಥಮಪೂಜೆ.

(ಶ್ರೀ. ಕವಿ ರವೀಂದ್ರನಾಥ ಟಗೋರರವರ "ಪ್ರಥಮ ಪೂಜನ" ಎಂಬ ಕವಿತೆಯ ಗದ್ಯ ಅನುವಾದವಿದು.— ಈಶ್ವರ ಸಣಕಲ್ಲ ರಬಕವಿ.)

---

ಪೂರ್ವ ಕಾಲದಲ್ಲಿ —ತೀರ ಪೂರ್ವಕಾಲದಲ್ಲಿ ವಿಶ್ವಕರ್ಮನೇ ಸ್ವತಃ ಈ ಮಂದಿರದ ತಳಹದಿಯನ್ನು ಹಾಕಿದನು. ಇದಕ್ಕಾಗಿ ಪ್ರತ್ಯಕ್ಷ ವಾಯುಸುತನೇ ಕಲ್ಲುಗಳನ್ನು ಎತ್ತಿ ತಂದನು, ಎಂದು ಜನರ ಹೇಳಿಕೆ!

ಈ ದೇವಾಲಯವನ್ನು ಕಿರಾತರು ಕಟ್ಟಿದರು. ಈ ದೇವತೆಯು ಸಹ ಅವರದೇ! ಕ್ಷತ್ರಿಯ ರಾಜನು ಈ ದೇಶವನ್ನು ಜಯಿಸಿದಾಗ ಪೂಜಾರಿಯ ರಕ್ತದಿಂದ ಗುಡಿಯ ಅಂಗಣವೆಲ್ಲ ಕೆಂಪಾಗಿದ್ದಿತೆಂದು ಇತಿಹಾಸ ಪಂಡಿತರ ತರ್ಕ.

ದೇವತೆಗೆ ಹೊಸ ಹೆಸರು ಸಿಕ್ಕಿತು ನವೀನಪೂಜಾವಿಧಿಯಲ್ಲಿ ಸಾವಿರಾರು ವರ್ಷಗಳ ಭಕ್ತಿಸ್ತೋತ್ರವು ಪುನಃ ಹರಿಯತೊಡಗಿತು.

ಕಿರಾತನಿಂದು ಅಸ್ಪೃಶ್ಯನಾದನು. ಈ ಮಂದಿರಪ್ರವೇಶಕ್ಕೆ ಅವನಿಗೆ ಪ್ರತಿಬಂಧವಾಯಿತು! ಕಿರಾತನು ಸಮಾಜಬಾಹಿರನಾಗಿ ವಾಸಿಸುವನು. ನದಿಯ ಆಚೆಗೆ ಅವನ ವಸತಿಯು.

ಆ ಭಕ್ತ— ಇಂದು ಅವನಿಗೆ ಗುಡಿಯಿಲ್ಲ! ಆದರೆ ಮೊದಲಿನಿಂದಲೂ ನಡೆಯುತ್ತ ಬಂದ ಭಜನಾ ಸ್ತೋತ್ರಗಳು ಅವನಿಗೆ ಗೊತ್ತು!

ಅವನ ಹಸ್ತಗಳು ನಿಪುಣವಿವೆ. ಅವನ ದೃಷ್ಟಿಯು ಸರಿಯಿದೆ.

ಕಲ್ಲ ಮೇಲೆ ಕಲ್ಲನೇರಿಸಿ ಹೇಗೆ ಕಟ್ಟಬೇಕೆಂಬುದನು ಅವನು ಬಲ್ಲನು. ಹಿತ್ತಾಳಿಯ ಮೇಲೆ ಬೆಳ್ಳಿಯ ಒಪ್ಪನ್ನು ಹೇಗೆ ಕೂಡಿಸಬೇಕೆಂಬುದೂ ಅವನಿಗೆ ಅವಗತವಿದೆ. ಕೃಷ್ಣಶಿಲೆಯ ಮೂರ್ತಿಗಳನ್ನು ನಿರ್ಮಿಸುವದರಲ್ಲಿ ಉಂಟಾಗುವ ಆನಂದವನ್ನೂ ಅವನೇ ಬಲ್ಲ.

ರಾಜಶಾಸನವು ಅವನ ಕೈಯಲ್ಲಿಲ್ಲ! ಅವನ ಶಸ್ತ್ರಗಳಂತೂ ಅವನ ಕೈಬಿಟ್ಟುಹೋಗಿವೆ. ಉಡುಪಿನಲ್ಲಿ, ಇರವಿನಲ್ಲಿ, ವ್ಯವಹಾರದಲ್ಲಿ ಸನ್ಮಾನದ ಲಕ್ಷಣಗಳೆಲ್ಲವೂ ಅವನಿಂದ ಅಂತರಿಸಿವೆ. ಪುಸ್ತಕ ಶಿಕ್ಷಣಕ್ಕಂತೂ ಅವನಿಗೆ ಅಧಿಕಾರವೇ ಇಲ್ಲ.

ಮುರಿಯುತ್ತಿದ್ದಾರೆ. ಸಬಲ ರಾಷ್ಟ್ರಗಳು ದುರ್ಬಲ ರಾಷ್ಟ್ರಗಳ ಮೇಲೆ ಅತಿಕ್ರಮಣ ಮಾಡಹತ್ತಿವೆ. ಬಹುಜನರ ಬಹು ಸುಖವಾಗಬೇಕೆಂದು ಒಂದು ಕಡೆಗೆ ಕ್ರಾಂತಿಕಾರಕ ಸಮಾಜ ಪಕ್ಷದವರು ಚಟುವಟಿಕೆಯು ನ್ನೆಬ್ಬಿಸಿದ್ದಾರೆ. ಇನ್ನೊಂದು ಕಡೆಗೆ ಅಂತರರಾಷ್ಟ್ರೀಯ ಸಂಘದವರು ಶಾಂತತೆಯನ್ನುಂಟುಮಾಡಲಿಕ್ಕೆ ಪ್ರಯತ್ನ ನಡಿಸಿದ್ದಾರೆ. ನಾಗರಿಕರೆಂ ದೆನಿಸುವ ಸಮಾಜಗಳಲ್ಲಿ ಸ್ವಾರ್ಥ, ಮೇಲಾಟ, ದುರಾಶೆ, ಅತ್ಯಾಚಾರ, ಮುಂತಾದ ದುರ್ಗುಣಗಳು ತುಂಬಿಕೊಂಡಿವೆ.

ಸ್ಪರ್ಧೆಯ ಈ ದಿನಗಳಲ್ಲಿ ವೀರಶೈವರಲ್ಲಿಯೂ ಐಕ್ಯತೆಯಿಲ್ಲ. ಜನರು ಅಧಿಕಾರ, ಗೌರವ, ದರ್ಪ, ದುರಾಶೆಗಳಿಗೇ ಮುಂದುವರಿಯುವರಲ್ಲದೆ ಬಸವಾದಿ ಪ್ರಮಥರಂತೆ ಲೋಕಸೇವೆ, ಸ್ವಾರ್ಥತ್ಯಾಗ, ಸಾದಾತನ, ಸರಳವೃತ್ತಿ, ಪ್ರೇಮ, ಐಕ್ಯತೆ ಮುಂತಾದ ಸದ್ವಿಷಯಗಳ ಕಡೆಗೆ ಗಮ ನಿಸುವದಿಲ್ಲ. ಆದುದರಿಂದ ನಮ್ಮ ಸಮಾಜವು ವೀರಶೈವ ಸಮಾಜ ವಾಗಿರದೆ ಸ್ವಾರ್ಥಸಾಧಕರ ಸಮಾಜವಾಗಿದೆ. ಮ್ಯುನಸಿಪಾಲ್ಟಿ ಲೋಕ ಲಬೋರ್ಡು ಸ್ಕೂಲಬೋರ್ಡು ಮುಂತಾದವುಗಳ ಬಗ್ಗೆ ಆಮಿಷಕ್ಕೆ ಕಡಿ ದಾಡುವ ಶುನಕಗಳಂತೆ ನಮ್ಮ ಸುಶಿಕ್ಷಿತರು ಮಾಡಹತ್ತಿದ್ದಾರೆ. ಹಾಳು ಮನೆಯಿಂದ ಹಿಡಿದು ಹಿರೇಮಠದ ವರೆಗೂ ಸ್ವಾರ್ಥವೇ ತುಂಬಿಕೊಂ ಡಿದೆ. ಇಂಥ ಸಮಾಜವು ನಾಗರಿಕ ಸಮಾಜವೇ?

ಕಾಲಗತಿಯು ವಿಚಿತ್ರವಾದರೂ ಮನುಷ್ಯನು ಪ್ರಯತ್ನದಿಂದ ಹಿಂದಿನ ಆದರ್ಶಪ್ರಾಯವಾದ ನಾಗರಿಕತೆಯನ್ನು ಪುನಃ ಪ್ರಸ್ಥಾಪಿಸುವದು ಅಶ ಕ್ಯವೇನೂ ಅಲ್ಲ. ವೀರಶೈವರು ಪರಸ್ಪರ ದೂಷಿಸುವದನ್ನು ಬಿಟ್ಟು ಪ್ರೀತಿಸಹತ್ತಬೇಕು. ಹೆಮ್ಮೆಯನ್ನು ತೋರಿಸುವ ಬದಲು ವಿನಯವನ್ನು ತೋರಿಸಬೇಕು. ಒಬ್ಬರಿಗೊಬ್ಬರು ಟೀಕೆಮಾಡುವದನ್ನು ಬಿಟ್ಟು ಹೊಗ ಳಲಿಕ್ಕೆ ಪ್ರಾರಂಭಿಸಬೇಕು. ಒಬ್ಬರಿಗೊಬ್ಬರು ದೂರನಾಗಿರುವದಕ್ಕಿಂತ ಕೂಡಿಕೊಂಡಿರಬೇಕು. ನಮಸ್ಕಾರವನ್ನು ಮಾಡಿಸಿಕೊಳ್ಳಬೇಕೆನ್ನುವದ ಕ್ಕಿಂತ ನಮಸ್ಕಾರವನ್ನು ಮಾಡಹತ್ತಬೇಕು. ಮುಂದರಿಯುವವರನ್ನು ಹಿಂದೆಳೆಯಬಾರದು. ಹಿಂದೆ ಬಿದ್ದವರನ್ನು ಮುಂದೆ ತರಲು ಪ್ರಯತ್ನಿ ಸಬೇಕು. 'ಎನಗಿಂತ ಕಿರಿಯರಾರಿಲ್ಲ, ಶಿವಭಕ್ತರಿಗಿಂತ ಹಿರಿಯರಾರಿಲ್ಲ' ವೆಂದು ಬಸವಣ್ಣನವರು ಹೇಳಿಲ್ಲವೇ? ಇಂಥ ಬಸವಾದಿ ಪ್ರಮಥರ ತತ್ವಗಳನ್ನು ನಾವು ಪರಿಪಾಲಿಸಿದರೆ ನವೀನ ನಾಗರಿಕತೆಯ ದಿವ್ಯ ಸ್ವರೂಪವನ್ನು ನಾವು ಶೀಘ್ರವೇ ಕಂಡುಕೊಳ್ಳುವೆವು.

# ಪ್ರಥಮಪೂಜೆ.

(ಶ್ರೀ. ಕವಿ ರವೀಂದ್ರನಾಥ ಟಗೋರರವರ "ಪ್ರಥಮ ಪೂಜನ" ಎಂಬ ಕವಿತೆಯ ಗದ್ಯ ಅನುವಾದವಿದು.— ಈಶ್ವರ ಸಣಕಲ್ಲ ರಬಕವಿ.)

---

ಪೂರ್ವ ಕಾಲದಲ್ಲಿ —ತೀರ ಪೂರ್ವಕಾಲದಲ್ಲಿ ವಿಶ್ವಕರ್ಮನೇ ಸ್ವತಃ ಈ ಮಂದಿರದ ತಳಹದಿಯನ್ನು ಹಾಕಿದನು. ಇದಕ್ಕಾಗಿ ಪ್ರತ್ಯಕ್ಷ ವಾಯು ಸುತನೇ ಕಲ್ಲುಗಳನ್ನು ಎತ್ತಿ ತಂದನು, ಎಂದು ಜನರ ಹೇಳಿಕೆ!

ಈ ದೇವಾಲಯವನ್ನು ಕಿರಾತರು ಕಟ್ಟಿದರು. ಈ ದೇವತೆಯು ಸಹ ಅವರದೇ! ಕ್ಷತ್ರಿಯ ರಾಜನು ಈ ದೇಶವನ್ನು ಜಯಿಸಿದಾಗ ಪೂಜಾರಿಯ ರಕ್ತದಿಂದ ಗುಡಿಯ ಅಂಗಣವೆಲ್ಲ ಕೆಂಪಾಗಿದ್ದಿತೆಂದು ಇತಿಹಾಸ ಪಂಡಿತರ ತರ್ಕ.

ದೇವತೆಗೆ ಹೊಸ ಹೆಸರು ಸಿಕ್ಕಿತು ನವೀನಪೂಜಾವಿಧಿಯಲ್ಲಿ ಸಾವಿರಾರು ವರ್ಷಗಳ ಭಕ್ತಿಸ್ತೋತ್ರವು ಪುನಃ ಹರಿಯತೊಡಗಿತು.

ಕಿರಾತನಿಂದು ಅಸ್ಪೃಶ್ಯನಾದನು. ಈ ಮಂದಿರಪ್ರವೇಶಕ್ಕೆ ಅವನಿಗೆ ಪ್ರತಿಬಂಧವಾಯಿತು! ಕಿರಾತನು ಸಮಾಜಬಾಹಿರನಾಗಿ ವಾಸಿಸುವನು. ನದಿಯ ಆಚೆಗೆ ಅವನ ವಸತಿಯು.

ಆ ಭಕ್ತ— ಇಂದು ಅವನಿಗೆ ಗುಡಿಯಿಲ್ಲ! ಆದರೆ ಮೊದಲಿನಿಂದಲೂ ನಡೆಯುತ್ತ ಬಂದ ಭಜನಾ ಸ್ತೋತ್ರಗಳು ಅವನಿಗೆ ಗೊತ್ತು!

ಅವನ ಹಸ್ತಗಳು ನಿಪುಣವಿವೆ. ಅವನ ದೃಷ್ಟಿಯು ಸರಿಯಿದೆ.

ಕಲ್ಲ ಮೇಲೆ ಕಲ್ಲನೇರಿಸಿ ಹೇಗೆ ಕಟ್ಟಬೇಕೆಂಬುದನು ಅವನು ಬಲ್ಲನು. ಹಿತ್ತಾಳಿಯ ಮೇಲೆ ಬೆಳ್ಳಿಯ ಒಪ್ಪನ್ನು ಹೇಗೆ ಕೂಡಿಸಬೇಕೆಂಬುದೂ ಅವನಿಗೆ ಅವಗತವಿದೆ. ಕೃಷ್ಣಶಿಲೆಯ ಮೂರ್ತಿಗಳನ್ನು ನಿರ್ಮಿಸುವದರಲ್ಲಿ ಉಂಟಾಗುವ ಆನಂದವನ್ನೂ ಅವನೇ ಬಲ್ಲ.

ರಾಜಶಾಸನವು ಅವನ ಕೈಯಲ್ಲಿಲ್ಲ! ಅವನ ಶಸ್ತ್ರಗಳಂತೂ ಅವನ ಕೈಬಿಟ್ಟುಹೋಗಿವೆ. ಉಡುಪಿನಲ್ಲಿ, ಇರವಿನಲ್ಲಿ, ವ್ಯವಹಾರದಲ್ಲಿ ಸನ್ಮಾನದ ಲಕ್ಷಣಗಳೆಲ್ಲವೂ ಅವನಿಂದ ಅಂತರಿಸಿವೆ. ಪುಸ್ತಕ ಶಿಕ್ಷಣಕ್ಕಂತೂ ಅವನಿಗೆ ಅಧಿಕಾರವೇ ಇಲ್ಲ.

ದೂರದಲ್ಲಿ—ಬಹು—ದೂರದಲ್ಲಿ ತ್ರಿಲೋಕೇಶ್ವರ ಮಂದಿರದ ಸುವರ್ಣ ಕಲಶವು ಮಾತ್ರ ಅವನಿಗೆ ಕಾಣುತಿದೆ. ಮೂರ್ತಿಯು ಕಾಣದು! ಕಳ ಸವನ್ನು ಕಂಡೊಡನೆಯೇ ಅವನ ಮನೋಭಾವದಲ್ಲಿ ತೇಜಃಪುಂಜವಾದ ಭಾವಮೂರ್ತಿಯು ಅವನಿಗೆ ಹೊಳೆಯುವದು. ಅದಕ್ಕವನು ದೂರದಿಂ ದಲೇ ಎರಗುವನು

ಕಾರ್ತಿಕ ಶುದ್ಧ ಪೌರ್ಣಿಮೆಗೆ ಪೂಜೋತ್ಸವವು.

ತಾಳ, ತಮ್ಮಟೆ, ಶಂಖ, ಜಾಗಟೆ, ಮೃದಂಗ ಮೊದಲಾದ ವಿವಿಧ ವಾದ್ಯಗಳು ಅಬ್ಬರಿಸುತಿವೆ. ಬಯಲಲ್ಲಿ ನೋಡಿದತ್ತೆಲ್ಲ ಗೂಡಾರಗಳೇ ಎದ್ದು ಕಾಣುತಿವೆ! ಮಧ್ಯ ಮಧ್ಯ ಹಳವಿಗೆಗಳು ಎದ್ದು ಫಟಫಟಿಸು ತಿವೆ.

ಬೀದಿಯ ಇಕ್ಕೆಲಗಳು ಅಂಗಡಿಗಳಿಂದ ಕಿಕ್ಕಿರಿದು ಹೋಗಿವೆ. ಅವು ಗಳಲ್ಲಿ ತಾಮ್ರದ ಪಾತ್ರೆ, ಬೆಳ್ಳಿಯ ಅಲಂಕಾರ, ದೇವಮೂರ್ತಿಯ ಚಿತ್ರ ಪಟ, ರೇಶಿಮೆಯ ವಸ್ತ್ರ, ಹುಡುಗರ ಆಟದೊಡವೆ, ಮಣ್ಣಿನ ಬೊಂಬೆ, ಎಲೆಯ ಕವಳಿಗೆ, ಹೂಮಾಲೆ, ಧೂಪ, ಬತ್ತಿ, ತೀರ್ಥದ ಮಿಳ್ಳಿ, ಇತ್ಯಾದಿ ಪೂಜಾಸಾಹಿತ್ಯವು ಈ ಮೊದಲಾದವೂ ಉಂಟು.

ಮೋಡಿಕಾರನು ಉಚ್ಚಸ್ವರದಿಂದ ನಿಶ್ಚಿತ ಶಬ್ದಗಳನ್ನುಚ್ಚರಿಸುತ್ತ ಮೋಡಿಯಾಟವನಾಡಿತೋರಿಸುತ್ತಿಹನು. ಪುರಾಣಿಕನು ರಾಮಾಯಣ ವನ್ನು ಹೇಳುತ್ತಿಹನು.

ಝಗಝಗಿಪ ಉಡುಪುಗಳಿಂದ ಸಶಸ್ತ್ರ ಪ್ರಹರಿಗಳು ಕುದುರೆಯ ಮೇಲೆ ತಿರುಗುತಿಹರು! ಅರಸಮಾತ್ಯರು ಆನೆಯ ಮೇಲೆ ಅಂಬಾರಿ ಯಲ್ಲಿ ಕುಳಿತು ಸಾಗಿರುವರು! ಮುಂದೆ ಕಾಳಿ ಕೂಗುತಿದೆ! ಕಿನಕಾ ಬಿನಿಂದ ಬಿಚ್ಚಿದ ಮೇಣೆಗಳಲ್ಲಿ ಶ್ರೀಮಂತರ ಗ್ರಹಣಿಯರು ನಡೆದಿರು ವರು! ಹಿಂದೆ ಮುಂದೆ ಸೇವಕರು ಸಾಲುಗಟ್ಟಿ ಸಾಗಿರುವರು!

ಪಂಚವಟದ ಛಾಯೆಯ ಕೆಳಗೆ ಸನ್ಯಾಸಿಗಳು ಗುಂಪುಗೂಡಿರು ವರು! ನಗ್ನರಾಗಿ, ಜಟಾಧಾರಿಗಳಾಗಿ ಕೆಲವರಿದ್ದರೆ, ಕೆಲವರು ಮೈಗೆಲ್ಲ ಬೂದಿ ಬಳೆದುಕೊಂಡಿರುವರು! ಸ್ತ್ರೀಯರು ಅವರ ಅಡಿಯೆಡೆಯಲ್ಲಿ ಹಣ್ಣುಹಂಪಲ, ಕಾಯಿಕರ್ಪುರ, ಹಾಲುಸಕ್ಕರೆ, ಅನ್ನತುಪ್ಪ, ಮೊದ ಲಾದ ಪದಾರ್ಥಗಳನ್ನು ಇಟ್ಟಿಟ್ಟು ಹೋಗುತ್ತಿರುವರು!

ತಡೆತಡೆದು ಗಗನಭೇದಿಯಾದ ಜಯಜಯಕಾರವು ಗಂಭೀರವಾಗಿ ಮೊಳಗುತಿದೆ! "ಜಯ ತ್ರಿಲೋಕೇಶ್ವರಕೀ ಜಯ!" "ಜಯತ್ರಿಲೋಕೇಶ್ವರಗೆ ಜಯ!"

ಶುಭಮುಹೂರ್ತದಲ್ಲಿ ರಾಜನು ಪ್ರಥಮಪೂಜೆಯನ್ನು ಮಾಡುವವನು! ಸ್ವತಃ ಪಟ್ಟದಾನೆಯ ಮೇಲೆ ಬರುವನು!

ಅವನು ಬರುವ ಬೀದಿಯ ಇಕ್ಕಡೆಗಳಲಿ ರಂಭಾಸ್ತಂಭಗಳು ನಿಂತಿವೆ. ಕುಸುಮಹಾರಗಳು ಜೋತಿವೆ! ತಳಿರುತೋರಣಗಳು ಕಟ್ಟಿವೆ!

ಮತ್ತು ಕ್ಷಣಕ್ಷಣಕ್ಕೆ ಹಾದಿಯ ಹುಡಿಯ ಮೇಲೆ ಪನ್ನೀರನ್ನು ಸಿಂಪಡಿಸುತ್ತಿರುವರು!

ಶುಕ್ಲತ್ರಯೋದಶಿಯ ರಾತ್ರಿ.

ಮಂದಿರದಲ್ಲಿಯ ಮೊದಲನೆಯ ಪ್ರಹರದ ನಗಾರಿ ನೌಬತ್ತು ಶಂಖ ಘಂಟೆಗಳು ಯಾವಾಗಲೋ ಬಾರಿಸಿ ಹೋಗಿವೆ?

ಇಂದು ಇಂದುವಿನ ಮೇಲೆ ಒಂದು ಬಗೆಯ ಮುಸಕಿನ ಮುಸುಕು!

ಮಂದಮಂದವಾದ ಬೆಳದಿಂಗಳು! ಸ್ತಬ್ಧವಿದೆ ಗಾಳಿಯು!

ಮುಗಿಲಲ್ಲಿ ಮೋಡ ಮುಸುಕಿದೆ! ದೂರದ ಗಿಡಮರಗಳು ಅಸ್ಪಷ್ಟ ಸಾಶಂಕ! ನಾಯಿಗಳು ಅಕಾರಣವಾಗಿ ಬೊಗಳುತಿವೆ! ಕುದುರೆಗಳು ಕಿವಿನಿಮಿರ್ಚಿ ಎಲ್ಲೆಲ್ಲಿಯೋ ನೋಡಿ ನೋಡಿ ಹೇಕರಿಸುತಿವೆ!

ಒಮ್ಮಿಂದೊಮ್ಮೆ ಒಂದು ಗಂಭೀರ ಭೀಷಣ ನಿನಾದವು ನೆಲದೊಡಲಸೀಳಿ ಕೇಳಬಂದಿತು!

ಪಾತಾಳದಲ್ಲಿ ದಾನವರು "ಗುರು, ಗುರು, ಗುರು, ಗುರು" ಎಂದು ರಣದುಂದುಭಿಯನ್ನು ಮೊಳಗಿಸುತ್ತಿರುವರೋ ಏನೋ!

ಮಂದಿರದಲ್ಲಿಯ ಘಂಟೆಯು ಉಚ್ಚವಾಗಿ ಬಾರಿಸತೊಡಗಿತು!

ಬಂಧಿತನಾದ ಗಜಘಟೆಗಳು ಕಟ್ಟುಗಳನ್ನು ಕಿತ್ತುಕೊಂಡು ಗಜಗರ್ಜಿಸುತ ನಾಲ್ದೆಸೆಗೂ ಚದರಿ ಹೋದವು! ಭೂಮಿಯುದರಿ ಕಂಪನದಿಂದ ಅಲ್ಲೋಲಕಲ್ಲೋಲವಾಯಿತು!

ಜನರು ಭ್ರಾಂತರಾದರು! ಗಟ್ಟಿಯಾಗಿ ಅರಚಿ ಕಿರಚಿ ಸಿಕ್ಕತ್ತ ಕಾಲ್ದೆಗೆದರು! ಯಾರಿಗೇನೂ ತಿಳಿಯದು! ಕಣ್ಣಿಗೇನೂ ಹೊಳೆಯದು!

ತನ್ನವರು ಹೆರವರು ಎಂಬ ಭೇದವಳಿಸಿ ಹೋಯಿತು! ಯಾರು ಯಾರನ್ನು ಸೆಳೆದರು ಎಂಬುದರ ಅರುಹೇ ಇಲ್ಲ!

ನೆಲವು ಬಿರಿದು ಹೊಗೆಯು ಸುಳಿಸುಳಿಯಾಗಿ ಹೊರಹೊಮ್ಮ ತೊಡಗಿತು! ಉಷ್ಣರಸದ ಝರಿಯು ಬುಗ್ಗೆ ಬುಗ್ಗೆಯಾಗಿ ಹೊರಚಿಮ್ಮ ತೊಡಗಿತು!

ಭೀಮಸರೋವರದ ಜಲವೆಲ್ಲವೂ ಒಂದೇ ಒಂದು ಕ್ಷಣಾರ್ಧದಲ್ಲಿ ಅಟ್ಟಿಸಿ ಬತ್ತಿಹೋಯಿತು! ಮಂದಿರದ ಒಳಮಾಳಿಗೆಗೆ ತೂಗಹಾಕಿದ ಗಂಟೆಯು ಹೊಯ್‌ಹೊಯ್ದಾಡಿ 'ಠಣ್! ಠಣ್!!' ಎಂದು ಮೊಳಗಹತ್ತಿತು! ಒಮ್ಮಿಂದೊಮ್ಮೆ ಅದು ಹರಿದುಬಿದ್ದು ಘನನಿನಾದವೆಂದು "ಠಣ್! ಠಣ್!!" ಎಂಬ ಸೊಪ್ಪುಳವು ನಿಂತುಹೋಯಿತು!

ಪೃಥ್ವಿಯು ಶಾಂತವಾದಾಗ ಪೂರ್ಣಪ್ರಾಯ ಚಂದ್ರನು ಪಡುವಣದಲ್ಲಿ ತೊಳಗಿಬೆಳಗಿದ್ದನು! ದಗ್ಧ ಗೂಡಾಂಗಳ ಧೂಮವು ಚಕ್ರಾಕಾರವಾಗಿ ಆಕಾಶದಕಡೆಗೆ ಏಳುತ್ತಿತ್ತು! ಅದರಿಂದ ಜ್ಯೋತ್ಸ್ನೆಗೆ ಅಜಗರ ಸರ್ಪವೇ ಸುತ್ತುಹಾಕಿದಂತೆ ಭಾಸವಾಗುತ್ತಿತ್ತು!

ಮರುದಿನ ಸತ್ತವರ ಆಪ್ತೇಷ್ಟರ ವಿಲಾಪದಿಂದ ಶೋಕಾರವದಿಂದ ದಶದಿಶೆಗಳು ತುಂಬಿಹೋದವು! ಆಗ ಮಂದಿರದಲ್ಲಿ ಮತ್ತೆ ಯಾವ ಅಮಂಗಲವೂ ಘಟಿಸಬಾರದೆಂದು ರಾಜಸೈನಿಕರು ಅದನ್ನು ಸುತ್ತುಗಟ್ಟಿಕೊಂಡು ನಿಂತುಬಿಟ್ಟರು.

ರಾಜ ಮಂತ್ರಿಯು ಬಂದನು; ಜ್ಯೋತಿಷಿಯು ಬಂದನು; ಸ್ಮಾರ್ತ ಪಂಡಿತನೂ ಬಂದ! ಅವರು ನೋಡಿದರು:—

ಹೊರಗಣ ಗೋಡೆಯು ನೆಲಸಮವಾಗಿ ಬಿದ್ದುಬಿಟ್ಟಿದೆ!

ಮೂರ್ತಿಯ ವೇದಿಯ ಮೇಲಿನ ಒಳಮಾಳಿಗೆಯು ಕುಸಿದು ಬಿದ್ದಿದೆ!

ಪಂಡಿತನೆಂದ "ಬರುವ ಹುಣ್ಣಿಮೆಯೊಳಗಾಗಿಯೇ ಈ ಗುಡಿಯು ಸುಧಾರಣೆಯಾಗಬೇಕು— ಜೀರ್ಣೋದ್ಧಾರವಾಗಬೇಕು"

ರಾಜನಾಡಿದನು "ಹಾಗಾದರೆ ಸುಧಾರಣೆಯಾಗಲಿ!"

ಮಂತ್ರಿ ನುಡಿದನು "ಆ ಕಿರಾತನ ಹೊರ್ತು ಈ ಕಟ್ಟುವ ಕೆಲಸವನ್ನು ಯಾರು ಮಾಡುವರು? ಅವನ ದೃಷ್ಟಿಯಿಂದೊದಗುವ ಭ್ರಷ್ಟ

ತೆಯಿಂದ ದೇವತೆಯನ್ನು ಹೇಗೆ ರಕ್ಷಿಸುವದು? ದೇವತೆಯ ಅಂಗ ಮಹಿಮೆಯೇ ಮಲಿನವಾದ ಮೇಲೆ ಕೇವಲ ಗುಡಿಯ ಸುಧಾರಣೆಯಿಂದಾಗುವದೇನು?

ಅರಸನು ಕಿರಾತರ ಮುಖಂಡನಾದ ಮಾಧವನನ್ನು ಕರೆಯಿಸಿದನು.

ಮುಪ್ಪಿನ ಮಾಧವನು ಬೆಳ್ಳಬೆಳ್ಳಗಾದ ಕೂದಲುಗಳ ಮೇಲೆ ಒಂದು ಸಾದಾ ವಸ್ತ್ರವನ್ನು ಸುತ್ತಿದ್ದ! ಪೀತವರ್ಣದ ನಡುಕಟ್ಟು! ಉಳಿದ ಗೌರದೇಹವೆಲ್ಲವೂ ನಡುವಿನ ವರೆಗೆ ತೆರೆದಿದೆ ಅನಾವೃತವಾಗಿದೆ! ಎರಡೂ ಕಣ್ಣುಗಳಲ್ಲಿ ಕಾರುಣ್ಯವೂ ನಮ್ರತೆಯೂ ತುಂಬಿ ತುಳುಕುತಿವೆ.

ಸಂಗಡ ತಂದಿದ್ದ ಮುಷ್ಟಿಯಲ್ಲಿಯ ಕುಂದುಕುಸುಮಗಳನ್ನು ಅವನು ದೂರದಿಂದಲೇ ರಾಜನ ಪಾದಸನ್ನಿಧಿಯಲ್ಲಿರಿಸಿದನು! ಸ್ಪರ್ಶವಾಗದಂತೆ ರಾಜನಿಗೆ ಪ್ರಣಾಮಮಾಡಿದನು!

"ಕಿರಾತರಾದ ನಿಮ್ಮನ್ನುಳಿದು ಈ ಗುಡಿಯನ್ನು ಕಟ್ಟುವ ಸುಧಾರಿಸುವ ಕೆಲಸವು ಆಗುವಂತಿಲ್ಲ" ರಾಜನೆಂದನು.

"ನಮ್ಮ ಮೇಲೆ ದೇವತೆಯ ಕೃಪೆಯಿದೆಷ್ಟು?" ಇಷ್ಟೇ ಉದ್ಗಾರದಿಂದ ಮಾಧವನು ದೇವತೆಯನ್ನು ಉದ್ದೇಶಿಸಿ ನಮಸ್ಕರಿಸಿದನು.

ಮಹಾರಾಜನೃಸಿಂಹರಾಯನು ವಿಚಾರಿಸಿದನು "ಕಣ್ಣು ಕಟ್ಟಿಕೊಂಡು ಕೆಲಸ ಮಾಡಬೇಕು. ಮೂರ್ತಿಯ ಮೇಲೆ ದೃಷ್ಟಿಯು ಬೀಳಕೂಡದು! ನಿನ್ನಿಂದ ಈ ಕಾರ್ಯವಾದೀತೋ?"

ಮಾಧವನು ವಿನೀತನಾಗಿ ನುಡಿದನು "ಅಂತರ್ಯಾಮಿಯು ಅಂತರ್ದೃಷ್ಟಿಯಿಂದ ಸರ್ವ ಕಾರ್ಯವನ್ನೂ ಮಾಡಿಸಿಕೊಂಡಾನು! ಕೆಲಸ ಮುಗಿಯುವವರೆಗೆ ಕಣ್ಣುತೆರೆಯೆ"

ಇತರ ಕಿರಾತರು ಗುಡಿಯ ಹೊರಗಣ ಕೆಲಸವನ್ನು ಮಾಡತೊಡಗಿದರು! ಮಾಧವನು ಗುಡಿಯ ಒಳಗಣ ಕೆಲಸಕ್ಕೆ ಹತ್ತಿದನು. ಅವನ ಎರಡೂ ಕಣ್ಣುಗಳನ್ನು ಕ್ಷೀರ ಕರ್ಪೂರಗಾದ ಅರಿವೆಯಿಂದ ಕಟ್ಟಿಹಾಕಿದರು!

ಅವನು ಹೊರಗೆ ಹೋಗುತ್ತಿರಲಿಲ್ಲ. ಹಗಲಿರುಳು ಮಂದಿರದಲ್ಲಿಯೇ ಉಳಿದುಕೊಂಡು ಧ್ಯಾನಗ್ರೈಯುವನು! ಹಾಡುವನು ಹೀಗಿದ್ದರೂ ಅವನ ಕೈಗಳು ಸಾಗಿಯೇ ಇದ್ದವು.

ಮಂತ್ರಿಯು ಬಂದು ಅನ್ನುತ್ತಿದ್ದನು "ಬೇಗ ಮುಗಿಯಲಿ ಕೆಲಸವು ತೀವ್ರವಾಗಲಿ. ದಿನಗಳ ಹಿಂದೆ ದಿನಗಳು ದಾಟುತಿರುವವು. ಮುಹೂರ್ತವು ತಪ್ಪಿಹೋದೀತು!

ಮಾಧವನು ಕೈಜೋಡಿಸಿ ಬಿನ್ನವಿಸುತ್ತಿದ್ದ "ಯಾವನ ಕೆಲಸವಿದೆಯೋ ಅವನಿಗೇನೇ ಆದರ ಅವಸರ. ಆದರ ಅರುಹು! ನಾನು ಕೇವಲ ನಾಮಮಾತ್ರ"

ಅಮಾವಾಸ್ಯೆಯುರುಳಿ ಪುನಃ ಶುಕ್ಲಪಕ್ಷವು ಬಂದಿತು. ಕುರುಡ ಮಾಧವನು ಕೈಬೆರಳುಗಳಿಂದ ಕಲ್ಲನ್ನು ಸೋಂಕಿ ಸೋಂಕಿ ತನ್ನ ಕೆಲಸವನ್ನು ಸಾಗಿಸಿದ್ದ. ಕಲ್ಲಾದರೂ ಅವನ ಕೂಡ ನುಡಿಯುತ್ತಿತ್ತು.

ಮಾಧವನು ಕಣ್ಣುಗಳನ್ನು ತೆರೆಯಬಾರದೆಂದು ಒಬ್ಬ ಕಾವಲುಗಾರನು ಬಳಿಯಲ್ಲಿ ನಿಂತಿದ್ದ.

ಪುರೋಹಿತನು ಬಂದು ಹೇಳಿದನು "ಪ್ರಥಮಪೂಜೆಯ ಶುಭಮುಹೂರ್ತವು ಏಕಾದಶಿಯ ರಾತ್ರಿಯಲ್ಲಿದೆ. ಅದರ ಮೊದಲೇ ಕೆಲಸವು ಮುಗಿದೀತೋ"

ಮಾಧವನು ಪ್ರಣಾಮಮಾಡಿ ನುಡಿದನು. ಆದರ ಉತ್ತರ ಕೊಡಲು ನಾನಾರು? ದೇವರ ಕೃಪೆಯಾದಾಗ ತಮಗದರ ನಿರೋಪ ಕಳಿಸೇನು. ಆದರ ಮೊದಲೇ ಬಂದರೆ ಕೆಲಸಕ್ಕೆ ಅಡ್ಡಿಯಾಗಿ ವಿಳಂಬವಾದೀತು?

ಷಷ್ಠಿಯು ಮುಗಿದು ಸಪ್ತಮಿಯೂ ಹೋಯಿತು. ಬಾಗಿಲೊಳಗಿಂದ ಚಂದ್ರಕಿರಣಗಳು ಮಾಧವನ ಶುಭ್ರಕೇಶಗಳ ಮೇಲೆ ಬಂದು ಬೀಳುತ್ತಿದ್ದವು.

ಸೂರ್ಯನು ಅಸ್ತನಾದನು. ಏಕಾದಶಿಯ ಚಂದ್ರನು ಉದಯಿಸಿನು.

ಒಂದು ದೀರ್ಘ ನಿಶ್ವಾಸ ಬಿಟ್ಟು ಮಾಧವನು ಕಾವಲುಗಾರನಿಗೆ ಹೇಳಿದನು. "ಮಾಧವನ ಕೆಲಸವು ಮುಗಿಯಿತೆಂದು ಹೋಗಿ ಹೇಳು! ಮುಹೂರ್ತವು ತಪ್ಪುವದಿಲ್ಲೆಂದು ತಿಳಿಸು"

ಕಾವಲುಗಾರನು ಹೋದನು.

ಮಾಧವನು ಕಣ್ಣುಗಳ ಮೇಲಿನ ಅರಿವೆಯನ್ನು ಬಿಚ್ಚಿ ಒಗೆದನು.

ತೆರೆದ ಬಾಗಿಲುಗಳೊಳಗಿಂದ ಏಕಾದಶಿ ಚಂದ್ರನ ಪೂರ್ಣ ಪ್ರಕಾಶವು ದೇವಮೂರ್ತಿಯ ಮೇಲೆ ಬಿದ್ದಿದೆ.

ಮಂಡಿಯೂರಿ ಎರಡೂ ಕೈಗಳನ್ನು ಜೋಡಿಸಿಕೊಂಡು ಮಾಧವನು ಕುಳಿತನು.

ದೇವಮೂರ್ತಿಯ ಕಡೆಗೆ ಒಂದೇಸವನೆ ನಿಶ್ಚಲದೃಷ್ಟಿಯಿಂದ ನೋಡುತ್ತಲೇ ಕುಳಿತನು. ಕಣ್ಣೊಳಗಿಂದ ಅಶ್ರುಧಾರೆಯು ಹರಿಯತೊಡಗಿತು. ದೇವರ ಮತ್ತು ಭಕ್ತನ ಸಾವಿರಾರು ವರ್ಷಗಳ ಕ್ಷುಧಿತ ದರ್ಶನವದು.

ರಾಜನು ಮಂದಿರದಲ್ಲಿ ಬಂದನು.

ಮಾಧವನಾಗ ವೇದಿಯ ಸೋಪಾನಕ್ಕೆ ತಲೆವಾಗಿಬಿಟ್ಟಿದ್ದನು.

ಕ್ಷಣಾರ್ಧದಲ್ಲಿಯೇ ರಾಜನ ಖಡ್ಗದಿಂದ ಅವನ ಶಿರವು 'ತಟ್' ಎಂದು ಹರಿದುಬಿದ್ದಿತು. ದೇವತೆಯ ಪಾದದಲ್ಲಿ ಅದೇ ಪ್ರಥಮ ಪೂಜೆಯು. ಅದೇ ಕೊನೆಯ ಪ್ರಣಾಮವು.

---

# ಷಟ್‌ಸ್ಥಲದಿಂದ ಆತ್ಮವಿಕಾಸದ ರೀತಿ.

(ಲೇಖಕ:— ವೇ. ಮೂ. ಬಸವರಾಜ ಶಾಸ್ತ್ರಿಗಳು ವಿಜಾಪುರ.)

---

ವೀರಶೈವ ಧರ್ಮವು ಹಿಂದುಸ್ತಾನದಲ್ಲಿ ಒಂದು ವಿಶಿಷ್ಟಸ್ವರೂಪುಳ್ಳದ್ದದೆ. ಅದರ ತತ್ವಗಳನ್ನು ಕಂಡು ಹಿಡಿಯುವದು ಅತ್ಯಾವಶ್ಯಕವು. ಲೋಕಕಲ್ಯಾಣಕ್ಕಾಗಿಯೇ ವೀರಶೈವ ಸಂಪ್ರದಾಯವು ನೆಲೆಗೊಂಡಿರುವದು. ಆದ್ದರಿಂದ ಅವರು ಪರಸ್ಪರ ಭಿನ್ನತೆಗಳನ್ನು ಎಣಿಸಿಲ್ಲ. ಲಿಂಗಪೂಜೆಯಲ್ಲಿ ಸರ್ವ ವೀರಶೈವರು ಸಮಾನಾಧಿಕಾರಿಗಳೇ. ಸ್ತ್ರೀಪುರುಷರೆಂಬ ಭೇದಭಾವಗಳು ಸಹ ಇರುವದಿಲ್ಲ. ಷಡಧ್ವಶುದ್ಧಿಯಿಂದ ಲಿಂಗಧಾರಿಗಳಾದ ವೀರಶೈವರೆಲ್ಲರೂ ಸಮಾನರೇ ಎಂದು ಭಾವಿಸತಕ್ಕದ್ದು. ಅವರು ಪ್ರತಿದಿವಸ ಮಾಡುವ ಅರ್ಚನಾದಿ ಕ್ರಿಯಗಳಲ್ಲಿ ಆರು ಸ್ಥಲಗಳುಂಟು. ಸೂಕ್ಷ್ಮಾಗಮದಲ್ಲಿ ಅವುಗಳು ವಿವರಿಸಲ್ಪಟ್ಟಿರುವವು. ಏನೆಂದರೆ:—

## ಷಟ್‌ಸ್ಥಲ ವಿವರಣೆ.

ವೀರಶೈವನು ಸ್ನಾನಮಾಡಿ ನಿರ್ಮಲ ಮನಸ್ಸುಳ್ಳವನಾಗಿ ದೃಢ ವಾದ ವಿಶ್ವಾಸದಿಂದ ವಿಭೂತಿ ರುದ್ರಾಕ್ಷಿಗಳನ್ನು ಆಯಾಯ ಮಂತ್ರ ಪೂರ್ವಕವಾಗಿ ಧಾರಣ ಮಾಡುವದೇ ಭಕ್ತಸ್ಥಲವೆಂದು ಹೇಳಲ್ಪಟ್ಟಿದೆ.

ದೃಢತರವಾದ ನಂಬುಗೆಯಿಂದ (ನಿಷ್ಠೆಯಿಂದ) ಮಂತ್ರವನ್ನು ಪಠಿಸುವದೇ ಮಾಹೇಶ್ವರಸ್ಥಲ.

ಚಿತ್ತೈಕಾಗ್ರತೆಯಿಂದ ಅಂಗದಲ್ಲಿರುವ ಲಿಂಗವನ್ನು ಕರಪೀಠದಲ್ಲಿ ಬಹು ಜಾಗರೂಕತೆ ದೃಢತಮವಾದ ನಂಬುಗೆ (ಅವಧಾನಭಕ್ತಿ) ಯಿಂದ ತಂದಿರಿಸಿಕೊಳ್ಳುವದೇ ಪ್ರಸಾದಿಸ್ಥಲ.

ಹೊರಗೊಳಗೆನ್ನದೆ ಅಚಲವಾದ ನಂಬುಗೆಯಿಂದ (ಅನುಭವದಿಂದ) ಆ ಲಿಂಗ ಪೂಜೆಯನ್ನು ಮನಮುಟ್ಟಿ ಮಾಡುವದೇ ಪ್ರಾಣಲಿಂಗಿಸ್ಥಲ.

ಬಳಿಕ ಆನಂದದಿಂದ ಶಿವಲಿಂಗಾರ್ಪಣವನ್ನು ಮಾಡುವದೇ ಶರ ಣಸ್ಥಲ.

ನಂತರ ನಾನು ನೀನೆಂಬ ಭೇದಭಾವವಿಲ್ಲದೆ ಸಮರಸ ಭಕ್ತಿ ಯಿಂದ ಶಿವ ಪ್ರಸಾದೋಪಭೋಗದಿಂದ ತೃಪ್ತಿಹೊಂದುವದೇ ಐಕ್ಯಸ್ಥಲ.

ಈಪ್ರಕಾರ ಲಿಂಗಾರ್ಚನೆಯಲ್ಲಿ ಮಾನಸಿಕ ಔನ್ನತ್ಯವನ್ನು ಮಾಡಿ ಕೊಳ್ಳುವ ಸಾಧನೆಗಳನ್ನು ಕಲ್ಪಿಸಿರುವರು.

ಅವುಗಳಲ್ಲಿ ಭಕ್ತಸ್ಥಲಕ್ಕೆ ಭಕ್ತಿಯೂ ಮಾಹೇಶ್ವರಸ್ಥಲಕೆ, ಕರ್ಮ ಕ್ಷಯವೂ ಪ್ರಸಾದಿಸ್ಥಲಕ್ಕೆ ನಿರ್ಮಲಮತಿಯೂ ಪ್ರಾಣಲಿಂಗಿಸ್ಥಲಕ್ಕೆ ವಿಚಾ ರವೂ ಶರಣಸ್ಥಲಕ್ಕೆ ದರ್ಪಕ್ಷಯವೂ ಐಕ್ಯಸ್ಥಲಕ್ಕೆ ದಿವ್ಯಜ್ಞಾನವೂ, ಎಂಬ ಫಲಗಳು ಉಂಟಾಗುವವು. ಮಾನಸಿಕ ಉನ್ನತಿಯಿಂದ ಮನುಷ್ಯನಲ್ಲಿ ಯಾವ ವಿಧವ ಪರಿಣಾಮಗಳಾಗುತ್ತವೆಂಬದು ಇದರಲ್ಲಿ ವಿವರಿಸಿದೆ.

ತನ್ನ ಜೀವದ ಮೇಲಿದ್ದಂತೆ ಗುರುಹಿರಿಯರ ಮೇಲಿಟ್ಟ ಪ್ರೇಮವೇ ಭಕ್ತಿಯೆನಿಸುವದು. ಅದೇ ಯಾವತ್ತೂ ಪ್ರಾಣಿಗಳ ಮೇಲಿದ್ದರೆ ದಯೆ ಯೆನಿಸುವದು. ಅದು ಹೆಚ್ಚೆಚ್ಚು ಧೃಡತರವಾದಂತೆ ಅದಕ್ಕೆ ಬೇರೆ ಬೇರೆ ನಾಮಗಳುಂಟಾಗುವವು. ಇಂತಹ ಭಕ್ತಿಯುಳ್ಳವೇ ಭಕ್ತಸ್ಥಲವು.

೧ ಭಕ್ತಸ್ಥಲವೆಂಬ ಲಿಂಗಕ್ಕೆ ಆಚಾರವೇ ಲಿಂಗವೆನಿಸುವುದು. ಷಟ್‌ಸ್ಥಲಕಾರರು ಈ ಆಚಾರಲಿಂಗದಲ್ಲಿ ಮೂರುವಿಧ ಮಾಡಿರುವರು. ಅವು ಯಾವವೆಂದರೆ, ಸದಾಚಾರ, ನಿಯತಾಚಾರ, ಗಣಾಚಾರ. ಯಾವದೇ ಒಂದು ಸನ್ಮಾರ್ಗದಿಂದ ಸಕಲ ಸಜ್ಜನರಿಗೆ ಸಂತೋಷವಾಗುವದೇ ಸದಾಚಾರ. ಭಕ್ತಿಯಿಂದ ತಾನು ಹಿಡಿದ ಆಚಾರವನ್ನು ಪ್ರಾಣಹೋಗುವ ವರೆಗೂ ಬಿಡದೆ ನಡೆಸುವದೇ ನಿಯತಾಚಾರ. ಶಿವಮಾಹೇಶ್ವರರನ್ನು ನಿಂದಿಸುವವರನ್ನು ಶಿಕ್ಷಿಸುವೆನೆಂಬುದೇ ಗಣಾಚಾರ.

೨ ನೆಯದಾದ ಮಾಹೇಶ್ವರಸ್ಥಲವೆಂಬ ಅಂಗಕ್ಕೆ ಗುರುವೇ ಲಿಂಗವು. ಈ ಗುರುಲಿಂಗವು ಮೂರು ತೆರನಾಗಿರುವದು. ಆಗಮದಲ್ಲಿ ಹೇಳಿದ ವಿಧಾನದಿಂದಲೂ ಆತ್ಮಶುದ್ಧಿ, ಸ್ಥಾನಶುದ್ಧಿ, ದ್ರವ್ಯಶುದ್ಧಿ, ಲಿಂಗಶುದ್ಧಿ, ಮಂತ್ರಶುದ್ಧಿ, ಮೊದಲಾದ ತರನಾದ ಶುದ್ಧಿಗಳಿಂದಲೂ ಶುದ್ಧನಾಗುವದೇ ದೀಕ್ಷಾಗುರುವೆನಿಸುವುದು. ಜಂಗಮವೇ ಲಿಂಗವೆಂಬ ಜ್ಞಾನ ಮಾಡಿಕೊಳ್ಳುವದೇ ಶಿಕ್ಷಾಗುರುವೆನಿಸುವದು. ಪೂರ್ವಜನ್ಮ ಸಂಸ್ಕಾರ ಬಲದಿಂದ ಭಕ್ತಿಜ್ಞಾನ ಮೊದಲಾದುದು ತಾನಾಗಿ ತೋರುವುದೇ ಅಂದರೆ ಅವುಗಳಲ್ಲಿ ಸಾಕಾರನಾಗಿರುವದೇ ಸ್ವಾನುಭವ ಗುರುವೆನಿಸುವುದು.

ಪ್ರಸಾದಿಸ್ಥಲವೆಂಬ ಅಂಗದಲ್ಲಿ ಶಿವಲಿಂಗವು ಇರುವದು. ಈ ಶಿವಲಿಂಗವು ಇಷ್ಟ, ಪ್ರಾಣ, ಭಾವವೆಂದು ಮೂರು ವಿಧವು. ಗುರುವು ಶಿವದೀಕ್ಷೆಯಿಂದ ಕೊಟ್ಟದ್ದೇ ಇಷ್ಟಲಿಂಗ. ದೇಹಗುಣಗಳ ಮೋಹವ ಬಿಟ್ಟು ಶಿವಲಿಂಗಸ್ವರೂಪದಲ್ಲಿ ಮನಮುಟ್ಟಿ ಇರುವದೇ ಪ್ರಾಣಲಿಂಗ. ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿಯೂ ಶಿವಲಿಂಗದೊಡನೆ ಎರಕದಂತೆ ಬೆರೆತುಕೊಂಡಿರುವುದೇ ಭಾವಲಿಂಗ.

ಪ್ರಾಣಲಿಂಗಿಸ್ಥಲಾಂಗಕ್ಕೆ ಜಂಗಮಲಿಂಗವಿರುವುದು. ಇದರಲ್ಲಿ ಮೂರು ಪ್ರಕಾರ. ಶಿವಲಾಂಛನವನ್ನು ಅಂದರೆ ಸೌಮ್ಯವೇಷವನ್ನು ಧರಿಸಿದಾತನೇ ಲಿಂಗವೆಂದು ತಿಳಿದು ಬಹಿರಂಗದ ಕರ್ಮವನ್ನು ದೂರ ಮಾಡಿ ಯಾವಾಗಲೂ ಆನಂದದಿಂದಿರುವುದೇ ಸ್ವಯಲಿಂಗ. ಶಿವಲಿಂಗದೊಡನೆ ಸಕಲೇಂದ್ರಿಯಗಳೂ ಎರಕವಾಗಿ ಭೇದಭ್ರಾಂತಿಯು ತಿರುಗಿ ಹುಟ್ಟದೆ ನಿಜಾನಂದದಿಂದ ಸ್ವೇಚ್ಛೆಯಿಂದ ವಿಹರಿಸುವುದೇ ಚರಲಿಂಗ. ಸ್ಥಾವರಜಂಗಮಾದಿ ಸಕಲಕ್ಕು ತಾನು ಆಶ್ರಯವಾಗಿರುವುದೇ ಪರಲಿಂಗ.

ಶರಣಸ್ಥಲವೆಂಬ ಅಂದಲ್ಲಿ ಪ್ರಸಾದಲಿಂಗವಿರುವುದು. ಇದು ಶುದ್ಧ ಸಿದ್ಧ ಪ್ರಸಿದ್ಧವೆಂದು ಮೂರುವಿಧ. ಗುರುಭಕ್ತ ಶೇಷವೇ ಶುದ್ಧ. ಲಿಂಗ ಭಕ್ತಶೇಷವೇ ಸಿದ್ಧ. ಜಂಗಮನು ಉಪಭೋಗಿಸಿ ಉಳಿದುದೇ ಪ್ರಸಿದ್ಧ. ಅಥವಾ ಪೂರ್ವದಲ್ಲಿದ್ದ ಸಕಲ ಗುಣಗಳನ್ನು ಬಿಟ್ಟು ಕಾಮ, ಕ್ರೋಧ ಮೊದಲಾದ ಷಡ್ರಿಪುಗಳನ್ನು ತ್ಯಜಿಸಿ ಲಿಂಗಾಣತಿವಿಡಿದು ಇಹುದೇ ಶುದ್ಧ. ಶಿವಜ್ಞಾನೋದಯವಾದುದೇ ಸಿದ್ಧ. ಶಿವನೇ ನಾನೆಂಬ (ಶಿವೋಹಂ) ಭಾವವು ನಿಶ್ಚಲವಾಗಿರುವುದೇ ಪ್ರಸಿದ್ಧ.

ಐಕ್ಯಸ್ಥಲಾಂಗಕ್ಕೆ ಮಹಾಲಿಂಗವಿರುವುದು. ಅದು ಪಿಂಡಜ, ಅಂಡಜ ಬಿಂದ್ವಾಕಾಶಲಿಂಗವೆಂದು ತ್ರಿವಿಧವಾಗಿರುವುದು. ಅವರಲ್ಲಿ ದೇಹವೇ ದೇಗುಲ, ಆತ್ಮನೇ ಲಿಂಗವೆಂಬ ನಿಶ್ಚಯುವೇ ಪಿಂಡಜಲಿಂಗವೆನಿಸುವುದು ಭೂಮಿಯೇ ಪೀಠ, ಆಕಾಶವೇ ಲಿಂಗವೆಂಬ ಸಂಶಯವಿಲ್ಲದ ಭಾವ ನೆಯೇ ಅಂಡಜಲಿಂಗ. ಆಕಾಶವೇ ತನ್ನೊಡನೆ, ತನ್ನೊಡನಾಕಾಶವೆಂಬ ಅನ್ಯೋನ್ಯಸಂಬಂಧವಾದ ಅನುಸಂಧಾನವೇ (ವಿಚಾರವೇ) ಬಿಂದ್ವಾಕಾ ಶಲಿಂಗವೆನಿಸುವುದು.

ಹೀಗೆ ಮನುಷ್ಯನ ವಿಕಾಸವು ಹ್ಯಾಗಾಗುವದೆಂಬದನ್ನು ವೀರಶೈವ ತತ್ವಜ್ಞಾನಿಗಳು ವಿವೇಚಿಸಿರುವರು. ಹೀಗೆ ಅಂಗ ಲಿಂಗಗಳ ಸಂಬಂ ಧವ ತಿಳಿದು ನಡೆಯುವದು ವಿಹಿತ. ಒಟ್ಟಿನಮೇಲೆ ದೇಹ ಮೊದ ಲಾದವುಗಳಲ್ಲಿ ಅಭಿಮಾನ ಬಿಟ್ಟವನು ಭಕ್ತನೆಂದೂ ಒಳಗೂ ಹೊರಗೂ ಬೆಳಗುವ ಕಾಜಿನ ಕೊಡದೊಳಗಿನ ದೀಪದಂತೆ ನಿರ್ಮಲ ಮನಸು ಳ್ಳವನು ಮಾಹೇಶ್ವರನೆಂದೂ, ಚಿತ್ತಶುದ್ಧಿಯುಳ್ಳವ ಪ್ರಸಾದಿಯೆಂದೂ, ಲಿಂಗನಿಷ್ಠನಾಗಿ ಜೀವಭ್ರಾಂತಿಯಿಲ್ಲದಾತನು ಪ್ರಾಣಲಿಂಗಿಯೆಂದೂ, ಸದಾ ಶಿವನಲ್ಲಿ ನಿಶ್ಚಿಂತನಾಗಿ ಸಂತೋಷದಿಂದಿರುವಾತನೇ ಶರಣನೆಂದೂ, ಇವನು ಶಿವ ಇವನು ಜೀವನೆಂಬ ಭ್ರಾಂತಿಯಿಲ್ಲದಾತನು ಅಂದರೆ ಶಿವ ನಲ್ಲಿಯೇ ಬೆರೆತು ಹೋದವನು ಐಕ್ಯನೆಂದೂ ಹೇಳಿಸಿಕೊಳ್ಳುವನು.

ಆ ಭಕ್ತನೇ ಆಚಾರಾದಿ ಷಡ್ವಿಧಲಿಂಗಗಳಲ್ಲಿ ಬೇರೆ ಬೇರೆ ನಡ ತೆಯಿಂದ ಆರಾರಾಗಿ ಮೂವತ್ತಾರು ತೆರನಾಗಿರುವನು.

ಲೋಕಕಲ್ಯಾಣದ ಕೆಲಸವನ್ನು ಮಾಡದ ಆಚಾರಹೀನರಾದ ಹೆಂಡ ರುಮಕ್ಕಳನ್ನು ಬಿಟ್ಟು ನಿರ್ಮೋಹಿಯಾಗಿರುವಾತನೇ ಆಚಾರಲಿಂಗನಿರ್ಮೋಹಿ ಯು. ಶಿವಾಚಾರಕ್ಕೆ ವಿರುದ್ಧವಾದ ಲೋಕಹಿತ ಕಾರ್ಯಕ್ಕೆ ಅಡ್ಡವಾಗಿ

ಒರುವ ಪೂರ್ವಿಕರ ನಡತೆಗಳನ್ನು ಬಿಟ್ಟಾತನೇ ಆಚಾರಲಿಂಗಭಕ್ತನು. ಅನ್ಯ ದೇವತಾ ಭಜನೆಯನ್ನು ಮಾಡದೆ ಮತ್ತೆ ಅದರ ಕಡೆಗೆ ಮನ ವನ್ನಿರಿಸದೆ ಲೋಕಸೇವೆಯಲ್ಲಿಯೇ ಲಿಂಗಾರ್ಚನೆಯಲ್ಲಿಯೇ ತತ್ಪರನಾ ದವನು ಆಚಾರಲಿಂಗಪೂಜಕನು. ತಾನು ಹಿಡಿದ ಆಚಾರವನ್ನು (ಕೆಲಸ) ದೇಶಹಿತದ ಕಾರ್ಯವನ್ನು ಜೀವ ಹೋಗುವ ವರೆಗೂ ಬಿಡದಾತನೇ ಆಚಾರಲಿಂಗವೀರನು.

ಶುಚಿ ಅಶುಚಿ (ಸ್ಪೃಶ್ಯಾಸ್ಪೃಶ್ಯ) ಎಂಬ ಭಾವನೆಯಿಲ್ಲದಾತನೇ ಆಚಾರಲಿಂಗಪ್ರಸಾದಿ. ಶಿವಮಾಹೇಶ್ವರರ (ರಾಷ್ಟ್ರೋದ್ಧಾರಕರ) ನಿಂದೆ ಮಾಡದೆ ಅದನ್ನು ಕಿವಿಯಿಂದ ಕೇಳದೆ ಇರುವಾತನೇ ಆಚಾರಲಿಂಗ ಪ್ರಾಣಿಯೂ ಎನಿಸಿಕೊಳ್ಳುವನು.

ತಂದೆ ತಾಯಿಗಳ ಮೋಹವ ಬಿಟ್ಟು ಗುರುವಿನಲ್ಲಿ ಅಂದರೆ ಇಹ ಪರಸೌಖ್ಯದ ಮಾರ್ಗದರ್ಶಕರಲ್ಲಿ ಪ್ರೀತಿಯನ್ನಿಟ್ಟವನೇ ಗುರುಲಿಂಗ ಮೋಹಿಯೆಂದೂ, ಬಂಧುಗಳ ಉಪಚಾರವನ್ನು ಬಿಟ್ಟು ಗುರುವಿನಲ್ಲಿ (ದೇಶೋದ್ಧಾರಕರಲ್ಲಿ) ಅನುರಾಗವುಳ್ಳವನೇ ಗುರುಲಿಂಗಭಕ್ತನೆಂದೂ, ಉಳಿದ ಸೇವೆಗೆ ಮನವನೆಳಸದೆ ಯಾವಾಗಲೂ ಗುರು [ರಾಷ್ಟ್ರ] ಸೇವೆ ಯಲ್ಲಿಯೇ ಇದ್ದು ಗುರುಲಿಂಗ ಪೂಜಕನೆಂದೂ, ಅನ್ಯ ಮಾರ್ಗವ ಬಿಟ್ಟು ಗುರುವು [ಲೋಕೋದ್ಧಾರಕರು] ಹೇಳಿದ ಮತ್ತು ನಡೆದು ತೋರಿ ಸಿದ ಮಾರ್ಗದಲ್ಲಿದ್ದು ಗುರುಲಿಂಗವೀರನೆಂದೂ ಗುರುವಿನ (ಮಾರ್ಗದ ರ್ಶಕನ) ಅಪ್ಪಣೆಯಂತೆ ನಡೆದು ಗುರುಲಿಂಗಪ್ರಸಾದಿಯೆಂದೂ, ಅನ್ಯ ಸೇವೆಯನ್ನು ಬಿಟ್ಟು ಗುರುಸೇವೆಯಲ್ಲಿ ಅಂದರೆ ಬಹು ಮಹತ್ವವಾದ ಲೋಕಸೇವೆಯಲ್ಲಿ ಸ್ಥಿರವಾಗಿದ್ದು ಗುರುಲಿಂಗಪ್ರಾಣಿಯೆಂದೂ ಅನಿಸಿಕೊ ಳ್ಳುತ್ತಾನೆ.

ಲೋಕಹಿತಕಾರ್ಯವ ಬಿಟ್ಟು ಬೇರೊಂದರಲ್ಲಿ ಮೋಹವಿಲ್ಲದ ಭಕ್ತನೇ ಶಿವಲಿಂಗ ಮೋಹಿಯೆನಿಸುವನು. ಜನಸೇವೆಯ ಹೊರತು ಮತ್ತೊಂ ದಿಲ್ಲವೆಂಬುವಾತನೇ ಶಿವಲಿಂಗಭಕ್ತನು. ಬೇರೊಂದು ದೇವರ ಭಜಿಸ ದಾತನೇ ಶಿವಲಿಂಗಪೂಜಕನು. ಬೇರೆ ಪುಣ್ಯಕ್ಷೇತ್ರಯಾತ್ರಾದಿಗಳನ್ನು ಮಾಡದಾತನೇ ಶಿವಲಿಂಗವೀರನು. ಸುಖದುಃಖಗಳನ್ನು ಸಮವೆಂದು ತಿಳಿದು ಸೈರಿಸುವಾತನೇ ಶಿವಲಿಂಗಪ್ರಸಾದಿಯು. ಸ್ತ್ರೀಸಂಭೋಗಾದಿಗ ಳಿಲ್ಲದಾತನೇ ಶಿವಲಿಂಗಪ್ರಾಣಿಯೆನಿಸುವನು.

ತನ್ನ ಪೂರ್ವದ ಸಂಕುಚಿತವಾದ ನಡತೆಗಳನ್ನು ಅಲ್ಲಗಳೆದಾತನು ಜಂಗಮಲಿಂಗಯೋಗಿ, ಜಾತಿಕುಲಾಭಿಮಾನವನ್ನು ತೊರೆದಿರುವಾತನೇ ಜಂಗಮಲಿಂಗಭಕ್ತನು. ಮತ್ತೊಬ್ಬರ ಸೇವೆಯನ್ನು ಮಾಡಲಿಚ್ಛಿಸದವನೇ ಜಂಗಮಲಿಂಗಪೂಜಕನು. ಅರ್ಥಪ್ರಾಣ ಮೊದಲಾದವುಗಳನ್ನೆಲ್ಲ ದೇಶ ಹಿತಕ್ಕಾಗಿ ಕೊಟ್ಟು ಮರಳಿ ಮೋಹಿಸದಾತನೇ ಜಂಗಮಲಿಂಗವೀರನು. ಶ್ರೇಷ್ಠಕಾರ್ಯಕ್ಕೆ ಸಕಲ ದ್ರವ್ಯಗಳನ್ನು ಸಮರ್ಪಿಸಿ ಪುನಃ ತೆಗೆದುಕೊಳ್ಳದಾತನೇ ಜಂಗಮಲಿಂಗಪ್ರಸಾದಿ. ದೇಶಸೇವೆಯೇ ಈಶಸೇವೆಯೆಂಬ ದೃಢವಾದ ನಂಬುಗೆಯುಳ್ಳವನೇ ಜಂಗಮಪ್ರಾಣಿಯೆಂದೆನಿಸಿಕೊಳ್ಳುತ್ತಾನೆ.

ಅನ್ಯರುಚಿಯನ್ನು ಅರಿಯದ ಭಕ್ತನು ಪ್ರಸಾದಲಿಂಗಯೋಗಿಯೆನಿಸುವನು. ಮೊದಲಿನ ಆಹಾರಗಳನ್ನೆಲ್ಲ ಬಿಟ್ಟು ಇರುವಾತನೆ ಪ್ರಸಾದ ಲಿಂಗಭಕ್ತ. ಅನ್ಯರೊಡನೆ (ಲೋಕಕಂಟಕರ ಕೂಡ) ಸ್ನೇಹ ಸಂಭಾಷಣೆಯನ್ನು ಮಾಡದೆ ದಾನ, ಪ್ರತಿಗ್ರಹ ಮೊದಲಾದ ಲೌಕಿಕ ವ್ಯವಹಾರಗಳಿಲ್ಲದಾತನೇ ಪ್ರಸಾದಲಿಂಗಪೂಜಕನು. ದೇಶಸೇವೆಗಲ್ಲದ ಧನವನ್ನು ಪರದ್ರವ್ಯಗಳನ್ನು ಕೈಯಿಂದ ಮುಟ್ಟದಾತನೇ ಪ್ರಸಾದಲಿಂಗವೀರನು. ಜೀವಹಿಂಸೆಯನ್ನು ಎಲ್ಲೆಲ್ಲಿಯೂ ತಾನು ತ್ರಿಕರಣಪೂರ್ವಕವಾಗಿ ಮಾಡದೆ ಅನ್ಯರಿಂದಲೂ ಮಾಡಿಸದಿರುವಾತನೇ ಪ್ರಸಾದಲಿಂಗ ಪ್ರಾಣಿಯೆನಿಸುವನು.

ಲೌಕಿಕ ಸುಖದ ಸುದ್ದಿಯನ್ನು ಕನಸುಮನಸುಗಳಲ್ಲಿ ನೆನಿಸದಾತನೇ ಮಹಾಲಿಂಗಯೋಗಿ. ಪೂರ್ವದ ಭಕ್ತಿ, ಕರ್ಮಕ್ಷಯ, ನಿರ್ಮಲಮತಿ ಮೊದಲಾದವುಗಳಲ್ಲಿ ಅನುಸಂಧಾನವಿಲ್ಲದಾತನೇ ಮಹಾಲಿಂಗಭಕ್ತ. ಅಜ್ಞಾನಿಗಳೊಡನೆ ಸಹವಾಸವನ್ನೂ ಸಂಭಾಷಣೆಗಳನ್ನೂ ಮಾಡದಾತನೇ ಮಹಾಲಿಂಗಪೂಜಕನು. ಹುಟ್ಟು, ಸಾವು, ಇರುವಿಕೆಗಳಿಗೆ ಎಳ್ಳಷ್ಟು ಚಿಂತಿಸದಾತನೇ ಅಂದರೆ ಮರಣಕ್ಕಂಜದಾತನೇ ಮಹಾಲಿಂಗವೀರ. ಪಂಕ್ತಿಭೋಜನ ಮೊದಲಾದುದನ್ನು ಬಿಟ್ಟಿರುವಾತನೇ ಮಹಾಲಿಂಗಪ್ರಸಾದಿ. ಹೊರಗಿನ ಪೂಜೆ ಅಂದರೆ ಆಡಂಬರದ ಸೇವೆ ಅರ್ಪಣ ಮೊದಲಾದವುಗಳನ್ನು ಒಲ್ಲದೆ ಅಂತರಂಗದ ಕ್ರಿಯಾನಿಷ್ಠನೇ [ಗುಪ್ತಕಾರ್ಯತತ್ಪರನೇ] ಮಹಾಲಿಂಗಪ್ರಾಣಿಯೆನಿಸಿಕೊಂಡು ಲೋಕದಲ್ಲಿ ಬೆಳಗುವನು.

ಇದರಲ್ಲಿ ಪ್ರತಿಯೊಂದು ಲಿಂಗವು ತನ್ನಲ್ಲಿ ಹ್ಯಾಗೆ ಬರಮಾಡಿಕೊಳ್ಳಬೇಕೆಂಬದನ್ನು ಷಟ್‌ಸ್ಥಲಜ್ಞರು ಹೇಳಿರುವರು. ಯಾವ ಯಾವ ಕಾರ್ಯ

ಗಳು ಮನಸ್ಸಿನಲ್ಲಿ ಯಾವ ಬಗೆಯು ಪರಿಣಾಮ ಮಾಡುತ್ತವೆಂಬದನ್ನು ಅವರು ಮೇಲೆ ಹೇಳಿದ ಪ್ರಕಾರ ವಿವರಿಸಿರುವರು.

ಈ ಪ್ರಕಾರ ಇಹಪರ ಸುಖಕ್ಕಾಗಿ ಬೇರೆ ಬೇರೆ ಹೆಸರುಗಳನ್ನು ಹೊಂದಿದ ಭಕ್ತಶ್ರೇಷ್ಠನೊಬ್ಬನೇ ದೇಶೋದ್ಧಾರ, ರಾಷ್ಟ್ರೋದ್ಧಾರ, ಸಮಾಜೋದ್ಧಾರಗಳಿಗೆಲ್ಲ ಮೂಲಕಾರಣನಾಗಿ ಜಗದಲ್ಲಿ ಮೆರೆಯುತ್ತಿರುವನು. ಇಂಥವನ ದರ್ಶನ, ಸ್ಪರ್ಶನ, ಸಂಭಾಷಣೆಗಳಿಂದಲೇ ಮಾನವರು ಪುನೀತರಾಗುವರು.

---

# ಆತ್ಮನಿವೇದನೆ.

ಈ ಸಂಚಿಕೆಯಿಂದ ಶಿವಾನುಭವ ಪತ್ರಿಕೆಯ ೮ ನೇ ವರ್ಷವು ಪ್ರಾರಂಭವಾಗಿರುತ್ತದೆ. ಈ ವರೆಗೆ ಈ ಪತ್ರಿಕೆಯನ್ನು ಚಂದಾದಾರರು ರಕ್ಷಿಸಿ ಪೋಷಿಸಿದರು. ಅವರು ಮಾಡಿದ ಈ ಸಹಾಯಕ್ಕೋಸ್ಕರ ನಾವು ಅವರಿಗೆ ಬಹಳ ಕೃತಜ್ಞರಾಗಿದ್ದೇವೆ. ಆದರೆ ಶಿವಾನುಭವದ ಕಾರ್ಯಗಳು ಇನ್ನು ಮುಗಿದಿಲ್ಲ. ಆರಂಭ ಸಹ ಆಗಿಲ್ಲೆಂದು ನಮ್ಮ ತಿಳಿವಳಿಕೆ. ಆದ್ದರಿಂದ ವಾಚಕರು ಇನ್ನೂ ಹೆಚ್ಚಾಗಿ ಇದಕ್ಕೆ ಸಹಾಯ ಮಾಡಬೇಕೆಂದು ನಮ್ಮ ವಿನಂತಿ ಇದೆ.

ಶಿವಾನುಭವ ಗ್ರಂಥ ಮಾಲೆಯಲ್ಲಿ ಈವರೆಗೆ ೩೨ ಗ್ರಂಥಗಳು ಪ್ರಸಿದ್ಧವಾದವು. ಬಸವಾದಿ ಪ್ರಮಥರ ಕಾಲದಲ್ಲಿ ಉತ್ಪನ್ನವಾದ ವಾಙ್ಮಯದ ಸ್ವರೂಪವು ಇದರಿಂದ ಗೊತ್ತಾಗಬಹುದು. ಆದರೆ ಶಿವಾನುಭವ ಪತ್ರಿಕೆಯು ಈ ಪ್ರಕಾರ ಮಾಡಿದ ಕಾರ್ಯವು ಮಹಾಸಾಗರದಲ್ಲಿ ಒಂದು ಹನಿಯಂತೆ ಮಾತ್ರ ಇದೆ. ಷಟ್‌ಸ್ಥಲ ಶಾಸ್ತ್ರದ ಮರ್ಮಗಳು ಇನ್ನೂ ಹೊರಬಿದ್ದಿಲ್ಲ. ಅವು ಜನತೆಗೆ ಇನ್ನೂ ತಿಳಿದಿಲ್ಲ. ಆದುದರಿಂದಲೇ ಶಿವಾನುಭವದ ಕಾರ್ಯಗಳು ಇನ್ನು ಪ್ರಾರಂಭವಾಗಿಲ್ಲೆಂದು ನಾವು ಅನ್ನಬೇಕಾಗಿದೆ.

ಜನತೆಯು ಶಿವಾನುಭವದ ತತ್ವಗಳನ್ನು ಚನ್ನಾಗಿ ಮಥಿಸಿ ಅದರ ಸಾರವನ್ನು ಹೀರಿ ಅದನ್ನು ಅರಿಯಬೇಕಾಗಿದೆ. ಶಿವಾನುಭವದ ಈ ಉದ್ದೇಶವು ಇನ್ನೂ ಕೊನೆಗಂಡಿಲ್ಲ. ಈ ದೃಷ್ಟಿಯಿಂದ ಅದು ಮುಂದೆ ಕೆಲಸ

ಮಾಡಬೇಕಾಗಿದೆ. ಇದಕ್ಕೋಸ್ಕರ ವೀರಶೈವ ಮಹಾಜನರು ವಿಶೇಷವಾಗಿ ವಿದ್ಯಾವಂತರು ಈ ವಾಙ್ಮಯವನ್ನು ಚನ್ನಾಗಿ ಅಭ್ಯಾಸ ಮಾಡಹತ್ತಬೇಕೆಂದು ನಮ್ಮ ಸವಿನಯ ವಿನಂತಿ ಆದೆ. ಈಪ್ರಕಾರ ಅವರು ಈ ಗ್ರಂಥಗಳನ್ನು ಚನ್ನಾಗಿ ಓದಿ ತಮಗೆ ತೋಚಿದ್ದನ್ನು ವ್ಯಕ್ತಪಡಿಸುತ್ತಿರಬೇಕು. ಇವುಗಳ ಬಗ್ಗೆ ಅವರು ಮೇಲಿಂದ ಮೇಲೆ ಲೇಖಗಳನ್ನು ಬರೆಯುತ್ತಿರಬೇಕು. ಈ ಬಗೆಯ ಪ್ರಚಾರ ಕಾರ್ಯಗಳು ಇನ್ನುಮೇಲೆ ಹೆಚ್ಚಾಗಬೇಕಾಗಿದೆ.

ಈಚೆಗೆ ಶಿವಾನುಭವದ ಬಗ್ಗೆ ಅನೇಕ ಮಹನೀಯರು ತಮ್ಮ ಲಕ್ಷವನ್ನು ಪೂರೈಸುತ್ತಲಿದ್ದಾರೆ. ಇದು ನಮಗೆ ಉತ್ತೇಜನಕರವಾಗಿರುತ್ತದೆ. ಅಲ್ಲದೆ ಮೈಸೂರ ಮುಂಬಯಿ ಸರಕಾರದವರು ಶಿವಾನುಭವ ಗ್ರಂಥಮಾಲೆಯಲ್ಲಿಯ ೧೯ ಗ್ರಂಥಗಳನ್ನು ಮಂಜೂರ ಮಾಡಿರುವರು. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ.

ಶಿವಾನುಭವದ ಈವರೆಗಿನ ಕಾರ್ಯಗಳನ್ನು ಲಕ್ಷಿಸಿ ಇದಕ್ಕೆ ವೀರಶೈವ ಸಮಾಜದವರು ಸಹಾಯ ಮಾಡುವರೆಂದು ಕೋರುತ್ತೇವೆ. ಇದರ ಸಾಂಪತ್ತಿಕ ಸ್ಥಿತಿಯು ಸರಿಯಾಗಿರುವದಿಲ್ಲೆಂದು ಇಷ್ಟೇ ಹೇಳಿದರೆ ಸಾಕು.

ಸಂಪಾದಕ.



ಗುರುವಿಂಗೆ ದೂರುವೆಂ ತಾನಾದುವಕ್ಕೊಂದು
ಕರೆವುತಿರ್ದಳ್ಜಗನ್ಮಯಿ ರೂಪನಂ ನಿಂದು
ಕೈಯೆತ್ತಿ ಕಣ್ಣೀರ ಹೊನಲಿನಿಂ ನೆನೆವುತ್ತೆ
ಸುಯ್ಯೊಡನೆ ಶೋಕ ರವಮುಂಬರವನಡರುತ್ತೆ
ಇರೆ ಕರೆದಳೆನ್ನೈಯ್ಯ ಎನ್ನ ರೇವಣಸಿದ್ಧ
ಕರುಣಿ ಎಂಬರಲಯ್ಯ ನಿನ್ನನಚಲಿತ ಸಿದ್ಧ
ನಿನಗೊಪ್ಪಿಸದೆ ಸುರಗಿಗೊಪ್ಪಿಸಿದ ತೆರನಾಯ್ತು
ನಿನಗೆ ಹೆಸರಾದ ಹಸುಳೆಗೆ ಸುರಗಿಗೆರೆಯಾಯ್ತು
ಎನ್ನ ಕಣ್ಗಳ ಸಿರಿಯೆ, ನಿನ್ನ ಪದಮಂ ತೋರ
ಎನ್ನ ಪುಣ್ಯದ ಪುರುಳೆ ನಿನ್ನಂಘ್ರಿಯಂ ತೋರ
ಎಂಬ ರವವಡರ್ದು ವಾರಣಾಸಿಯುಂ ತೀವಿತ್ತು
ಇಂಬಿನಿಂ ಘನ ಸಿದ್ಧಪತಿಯ ಕಿವಿದಾಗಿತ್ತು

ಕಿವಿದಾಗಲನುಕಂಪದಿಂದೆ ನೆರೆ ಬೆಚ್ಚುತಂ
ಶಿವಶಿವ ಮಹಾದೇವನೇನೆಂಬೆನದ್ಭುತಂ
ಬಂದು ಮಂಗಳವಾಡದೊಳಗಿಳಿಸಿದಂತಿರ್ದು
ಇಂದುಮುಖಿ ಮಾಯಿದೇವಿಯ ಮುಂದೆ ನಿಂದಿರ್ದು

ಇರೆ ಕಂಡು ಕಂಡು ಮತ್ತಂತಳಲ್ಗಳು ಪುಟ್ಟಿ
ಹರಮೂರ್ತಿ ಯೆನಿಪ ಸಿದ್ಧನ ಪಾದದೊಳಗೊಟ್ಟಿ
ಅಳಲುತಂ ತಂದೆ ರೇವಣದೇವಿಯುಂ ಕಂಡು
ಅಳವಳಿಯಲೆಳೆದೊಯ್ದು ಸುರಗಿಗಿಕ್ಕಲ್ಕೊಂಡು
ಎಂತು ಮಾಡುವೆನೆನುತ್ತಿರ್ಪಳಂ ಸಂತೈಸಿ
ಸಂತತಂ ಮಾಯಿದೇವಿಯನಲ್ಲಿ ಬೋಳೈಸಿ
ನಿನ್ನ ಮಗಳೊಬ್ಬಳೀಕೆಲ್ಲರಂ ಬಿಡಿಸುವೆಂ
ಎನ್ನ ಪರಿಯಂ ನೋಡು ನೋಡು ಪೊಸತೆನಿಸುವೆಂ

ಎಂದು ಬಿಜ್ಜಳನ ಸಭೆಗೈತಂದನಾ ಸಿದ್ಧ
ಇಂದುಧರ ನಿಜಯೋಗಿ ನಿಂದನನುಪಮ ಸಿದ್ಧ
ನಿಲೆ ಕಂಡು ಬಿಜ್ಜಳಂ ಶಿವಸಿದ್ಧನೆಂದರಿದು
ಚರಿತದಿಂದಿದಿರೇಳ್ದು ಚರಣದೊಳ್ ಬೀಳ್ದೊಸೆದು

ಭದ್ರಾಸನದೊಳಿರಿಸಿ ಚರಣ ತಳಮಂ ತೊಳೆದು
ಸದ್ರೂಪಿನಿಂದ ಪಾದೋದಕಮುಮಂ ತಳಿದು
ಕೈ ಮುಗಿದು ನಿಂದಿರ್ದ ದೇವ ಬೆಸನಾವುದೆನೆ
ನೈಮೆಯಿಂ ನುಡಿದನಾ ಸಿದ್ಧನಿದು ತಪ್ಪು ಎನೆ
ಏಕೆ ಮರುಳಾದೆ ಕಪ್ಪರನ ನುಡಿಗೆಲೆ ಭೂಪ
ಲೋಕದೊಳು ಕನ್ನಿಕೆಯರಂ ಕೊಲ್ವುದತಿ ಪಾಪ
ಆವನುಂ ತಡೆಯುಬರ್ಪುದೆ ಸುರಿಗಿಯುಜ್ವಳಂ
ಸ್ತ್ರೀ ವಧೆಯುಮಪಕೀರ್ತಿಯುಂ ಸಾರ್ವದಗ್ಗಳಂ
ಬಿಡು ಬಿಡೆಂದಾ ಕುಮಾರಿಯರೆಲ್ಲರಂ ಬಿಡಿಸಿ

ನಡೆ ನಿನಗೆ ಸುರಿಗಿದೋರುವೆನೆಂದೊಡಂಬಡಿಸಿ
ಪೊರಮಟ್ಟನಪ್ರತಿಮಸಿದ್ಧನಾ ಪುರದಿಂದೆ
ನೆರೆ ಪೊಗಳುತಿರೆ ಭುವನ ಜನವೆಲ್ಲ ಮುದದಿಂದೆ
ಹಿಂದೆ ಬಿಜ್ಜಳ ನೃಪಂ ಮುಂದೆ ರೇವಣಸಿದ್ಧ
ನಂದು ಬರುತಿರ್ದ ನಿರವಯದ ನಿರ್ಮಳ ಸಿದ್ಧ
ಒಡನೆ ಗಜ ತುರಗ ಪದಾತಿಬಲವೆಯ್ದೆ ಬರೆ
ಪೊಡೆವ ನಿಸ್ಸಾಳ ರವವಂಬರವನಡರುತಿರೆ
ನಡೆತರುತ್ತಂ ಮಾಸನೂರ ಮುಂದಂ ನಿಂದು
ಪೊಡವಿ ಭಾಪೆನುತಮಿರೆ ಗಜದಿಂದಲಿಳಿತಂದು
ಒಂದೊಂದು ಹರಿಗೋಲರೊಬ್ಬೊಬ್ಬರೇರುತುಂ
ಅಂದು ರೇವಣಸಿದ್ಧನುಂ ನೃಪತಿ ಏರುತುಂ
ನದಿಯಲ್ಲಿ ಸುರಿಗಿ ಇರ್ದಲ್ಲಿಗೇ ನಡೆತಂದು
ಅದಿರದಳುಕದೆ ಸಿದ್ಧನಾನಂದದಿಂ ನಿಂದು
ಆಲಗಿನಾಯುಧದೊಳಗೆ ಕೈಯ್ಯಿಕ್ಕಿ ಬರಸೆಳೆಯೆ
ಉಲಿದು ಹಲುಮೊರೆದು ಗರ್ಜಿಸುತ ಲಗು ಮಿಗೆ ಪೊಳೆಯೆ
ಕಂಡಾ ನೃಪತಿ ನೋಡು ನೋಡೆಂದು ತೋರುತಿರೆ
ಕಂಡು ಪಿಡಿಯಲ್ಕೆಂದು ನೃಪತಿ ಕೈ ನೀಡುತಿರೆ
ಐದು ಹೆಡೆಗಳನು ಹಾವಾಗಿ ಸಲೆ ಭುಸ್ಸೆನಲು
ನೈದೆಗೆದು ವಿಷದ ಶಿಖಿ ತಾಗೆ ಮಿಗೆ ಜುಮ್ಮೆನಲು
ಬಿಜ್ಜಳಂ ಹರಿಗೋಲ ಮೇಲೆ ನೆರೆ ಹಮ್ಮೈಸಿ

ಸಜ್ಜನಂ ಸಿದ್ಧರೇವಣನಲ್ಲಿ ಸಂತೈಸಿ
ಪುಳುತಲಗಂ ಕಂಡು ಬಿಡು ದೇವ ಬಿಡು ದೇವ
ಆಳವುಳ್ಳಲ್ಲಿರಿಸು ಬೇಗವಿರಿಸೆಲೋ ದೇವ
ಎನೆ ನಗುತ ಸಿದ್ಧನಾ ಸುರಿಗಿಯುಂ ಮತ್ತಿರಿಸಿ
ಬಿನದದಿಂ ಬಿಜ್ಜಳಂ ಬೆರಸಿ ತಡೆಗವತರಿಸಿ
ಗಜಮಸ್ತಕವನೇರಿ ನಗರಿಗಭಿಮುಖನಾಗಿ
ಭಜಿಯಿಸುವ ಪುರಜನದ ಪರಕೆಗಾನತನಾಗಿ
ಬಂದು ಬಿಜ್ಜಳನರಮನೆಯನೊಪ್ಪದಿಂ ಪೊಕ್ಕು
ನಿಂದು ರೇವಣಸಿದ್ಧ ತಂದೆಗೆ ಮನಂ ಮಿಕ್ಕು
ತನ್ನ ಮಗಳಂ ವಿಭವದಿಂದೆ ಮದುವೆಯ ಮಾಡಿ
ಉನ್ನತವೆನಿಪ್ಪ ರೇವಣಸಿದ್ಧನೋಳ್ಕೂಡಿ
ಆನೆಯುಂ ಕುದುರೆಯುಂ ಬಳುವಳಿಯನೊಲಿದೀಯೆ
ನಾನಾ ಪದಾತಿಯುಂ ಸುಖಮುಖದೊಳೊಲಿದೀಯೆ
ಸಿದ್ಧ ಕುಲಶೇಖರಂ ಸಂಪದದೊಳೊಪ್ಪಿದಂ
ಸಿದ್ಧ ರೇವಣ ತಂದೆ ಜಗವರಿಯಲೊಪ್ಪಿದಂ

**ತೃತೀಯ ಸ್ಥಲ ಸಂಪೂರ್ಣಂ.**



## ಚತುರ್ಥಸ್ಥಲ



**ವೃತ್ತ**:— ನಿರುಪಮ ಸಿದ್ಧನ ಪ್ರತಿಮ ಸಿದ್ಧನ ಚಿಂತಿತ ಸಿದ್ಧನು ತ್ತಮಾ। ವರಣ ಶರೀರ ಸಿದ್ಧನತಿ ಕಾರಣಿಕ ಸಿದ್ಧನ ಶೇಷಮಂ ಸಮು। ದ್ಧರಿಸುವ ಸಿದ್ಧನಾತ್ಮ ನಿಜ ಸಿದ್ಧನ ಮಾನಪರಾಪರೈ ಕವಿ ಸ್ತರಕರ ಸಿದ್ಧ ನೊಪ್ಪಿದ ನಿಳಾತಳದೊಳ್ನಲೆ ಸಿದ್ಧರೇವಣಂ॥

**ಗದ್ಯ**:— ಇಂತಪ್ಪ ಕಂತುಹರರೂಪಂ ಶಿವಲಿಂಗಸಿಪ್ತಂ ಮಂಗ ಳವಾಡದೊಳ್ ಕೆಲವು ದಿನಂ ರಾಜ್ಯ ಸುಖದೊಳಿರ್ದು ಸಿದ್ಧಕುಲಕಮಲ ಕಮನೀಯ ಭಾಸ್ಕರನೆನಿಪ ರೇವಣಸಿದ್ಧಂ ಪುರಮಂ ಪೊರಮಟ್ಟು ಬಿಜ್ಜಳಂಗೆ ಬೀಳ್ಕೊಟ್ಟು ದಕ್ಷಿಣಾಭಿಮುಖನಾಗಿ ಕರಿಘಟೆಗಳುರವಣಿಸೆ ತುರಗಚಯಂ ಒತ್ತರಿಸೆ ಪದಾತಿಬಲಂ ಪಡಿಸಲಿಸೆ ನಿಸ್ಸಾಳಧನಿಯುಣ್ಮೆ ಕಹಳಾರವಂ ಪೊಣ್ಮೆ ಪಲವಸೆಡೆಗೈದು ಸಕಲಜನಕ್ಕೆ ಸುಖಮನೀವುತಂ ನಡೆತಂದು ಮನಂಮಿಕ್ಕ ಚೋಳದೇಶಮಂ ಪೊಕ್ಕು ರಾಜೇಂದ್ರ ಚೋಳನಂ ಕಾಣಿಸಿಕೊಂಡು ಕರುಣಮನಿತ್ತು ಘನವಿಸ್ತರಮಪ್ಪ ನಿಳಯದ ಸಿಂಹ ವಿಷ್ಟರಕ್ಕೆ ಬಿಜಯಂಗೈದು ಚೋಳನ ಕುಮಾರಿಯ ವಿವಾಹ ಮಾಗೆ ಚೋಳಮಹಾರಾಜನಿಂ ಪೊಡಮಡಿಸಿಕೊಳುತ್ತಂ ಶಿವಭಕ್ತರಿಂ ವಂದಿಸಿಕೊಳುತ್ತಂ ಆ ದೇಶದ ಪಲವು ಶಿವಪುರಂಗಳಂ ನೋಡುತ್ತಂ ತಿರುಗಿ ಪೊರಮಟ್ಟು ಚೋಳಂ ಕೊಟ್ಟ ಬಳುವಳಿಯ ಚತುರಂಗ ಬಲ ವೆರಸಿ ತಿರಿಗಿ ಚೇರ ಮಲೆಯಾಳ ಗೌಳ ಗುಜ್ಜರ ನೇಪಾಳ ಮೊದ ಲಾದ ದೇಶಂಗಳಂ ಪೊಕ್ಕಲ್ಲಲ್ಲಿಯ ರಾಜಪುತ್ರಿಯರಂ ಪರಿಣಯ ಮಾಗಿ ಮನಃಪೂರ್ವಕದಿಂ ಸ್ವೀಕರಿಸಿ ತಟಾಕಂಗಳಂ ಕಟ್ಟಿಸುತ್ತಂ ಶಿವ ಪುರಂಗಳಂ ಮಾಡಿಸುತ್ತಂ ಛತ್ರಂಗಳಂ ನಿರ್ಮಿಸುತ್ತಂ ಕುರುಡರ್ಗೆ ಕಣ್ಗಳಂ ಹೆಳವರ್ಗೆ ಕಾಲ್ಗಳಂ ಬಂಜೆಯರ್ಗೆ ಮಕ್ಕಳಂ ಕೆಟ್ಟರಸು ಮಕ್ಕಳ್ಗೆ ರಾಜ್ಯಮಂ ಕಂಡ ಕಂಡ ಬಡವರ್ಗೆ ಸಂಪದಂಗಳಂ ನೀವು ತ್ತಿಂತಿವು ಮೊದಲಾದ ಪುಣ್ಯ ಲೀಲೆಗಳನಲಂಕರಿಸುತ್ತೆ ಜಗದ್ಧಿತಾರ್ಥ ಮೂರ್ತಿ ಮಂಗಳವಾಡಕ್ಕೆ ಮರಳಿ ಬಪ್ಪಾಗಳ್

ಸಿದ್ಧಸಮಯಚಕೋರ ಚಂದ್ರಿಕಾಯಮಾನನೆಂಬ ಸಿದ್ಧಕುಲಚಾತಕ ಸುಧಾವರ್ಷನೆಂಬ ಪರಸಮಯ ಕುಮುದ ಕಮಲ ಸಖನೆಂಬ ಸಾಮರ್ಥ್ಯ

ಸಾಗರನೆಂಬ ಶಿವಭಕ್ತಿವನವಸಂತನೆಂಬ ಶಿವಪೂಜಾರಾಜನೆಂಬ ಶಿವಯೋ
ಗಿಲಲಾಮನೆಂಬ ತನ್ನ ಬಿರುದಿನ ಕಹಳಾರವಂ ದಿಕ್ತಟವುಂ ಧೀಂಕಿಡೆ ಸರ್ವ
ಸಂಭ್ರಮದೊಳ್ ಬಪ್ಪರ್ಗಳ್ ಮಂಗಳವಾಡದೊಳ್ ಗುಡಿಗಟ್ಟಿ ಸಕಲಪರಿ
ಜನ ಸಹಿತಂ ಬಿಜ್ಜಳರಾಯನಿದಿರ್ಗೊಂಡು ಮೆಯ್ಯಿಕ್ಕಿ ಕಾಣಿಕೆಯನಿತ್ತು
ಕೆಯ್ಮುಗಿದು ನಿಂದಿರೆ ಪರಿಸುತ್ತಂ ವಿಭೂತಿಯಂ ಕರುಣಿಸಿ ಕೊಟ್ಟರಮನೆಗೆ
ಬಿಜಯಂಗೈದು ಸಿಂಹಾಸನಾರೂಢನಾಗಿ ಬಹಿರ್ಭಾವದ ಮಾಯಾ ಸುಖ
ದುಃಖದ ಸಂಭ್ರಮಂ ಶರೀರಕ್ಕಾಗುತ್ತಮಿರೆ ನೋಡುತ್ತಂ ನಿರ್ಲೇಪನಾಗಿ
ಸಾಕ್ಷಿಯಾಗಿ ಪರಮಗುರು ನಗುತ್ತನೇಕ ಕಾಲದೊಳುರುಗ ಲೋಕದೋಳ್
ನರಲೋಕದೋಳ್ ಸುರಲೋಕದೋಳ್ ಸುಖದೊಳಿರ್ಪ ಜಗಚ್ಚರಿತನಪ್ಪ
ಸಿದ್ಧರೇವಣದೇವಂ ನೋಡಿದುದೆ ಜಗತ್ಪಾವನಂ ಮುಟ್ಟಿದುದೆ ಪರುಷಂ
ಮೆಟ್ಟಿದುದೆ ದಿವ್ಯಕ್ಷೇತ್ರಂ ನಡೆದುದೆ ಪುಣ್ಯಮಾರ್ಗಂ ನುಡಿದುದೆ ಪರಮ
ತತ್ವಂ ಇರ್ದುದೇ ದೇವಸಭೆ ಸಾರ್ದುದೇ ಸುರತರುವೆನಿಪ್ಪ ನಿರ್ಮಳ
ಕೀರ್ತಿಯಂ ಪಡೆದು ಶಿವಪ್ರತಾಪಸಿದ್ಧನನವರತಂ ಧರ್ಮತತ್ಪರಂ ಸಂತೋ
ಷದೊಳಿರ್ದೊಂದುದಿನಂ

ಸುಕೃತ ಲೀಲಾಲೋಲಹೃದಯಂ ಮಂಗಳವಾಡದ ಪೊರಪೊ
ಳಲ ನಂದವನಮಂ ನಿರೀಕ್ಷಿಸುತ್ತೆ ಬರುತ್ತೊಂದು ನಿರುಪಮಮಹ
ತಟಾಕಸ್ಥಲಮಂ ಕಂಡಿಲ್ಲಿ ಸಕಲ ಪ್ರಾಣಿಗಳ್ಗೆ ಹಿತಕರಮಪ್ಪ ತಟಾ
ಕಮಂ ನಿರ್ಮಿಸಲ್ವೇಳ್ಕುಮೆಂದಪ್ರತಿಮ ಧರ್ಮ ಮೂರ್ತಿ ನೆನೆದು
ನೋಡಿ ತನ್ನ ಕೆಲಬಲದೊಳಿರ್ದ ಕಲ್ಗಳಂ ಮುಟ್ಟಿ ಹೊನ್ನರಾಶಿಯಾಗೆ
ಪುರಜನಮಂ ಬರಿಸಿ ಕನಕಮನಿತ್ತು ತಟಾಕ ಪ್ರಾರಂಭ ಕರ್ತೃತ್ವಂ
ತಮ್ಮದಪ್ಪ ಕಾರಣದಿಂ ವಾರಣ ಚರ್ಮ ವಸನತನುಜಂ ರೇವಣಸಿದ್ಧಂ
ಭೂಮಿಯಂ ಶೋಧಿಸಿ ಧರ್ಮವಂ ಬಿತ್ತುವಂತೆ ಗುದ್ದಲಿಯಂ ಪಿಡಿವ
ಗೆಯುಲ್ತೊಡಗಲ್ಪೆಂಡಿರೆಲ್ಲಂ ಮಣ್ಣಿದ ಸಿವುಡಂ ಪೊತ್ತು ಪಾಪಮಂ
ಪೊರಸೂಸುವಂತೆ ಮಣ್ಣ ಸೂಸುವ ಪಥದೋಳ್ ವಾಸಿಗೆ ಗಾಸಿಯುಪ್ಪ
ಚೋಳನ ಕುಮಾರಿ ಸೌಕುಮಾರ್ಯ್ಯಮಂ ನಟಿಯಿಸುತ್ತೊಲ್ಲದೆ ಮೂರು
ತಿಂಗಳ ಗರ್ಭದ ನೀರೆ ನಿಂದು ದೇವದೇವ ಚೋಳರಾಜೇಂದ್ರನ ಬಸಿ
ರೋಳ್ಬಂದು ದಿವ್ಯ ಚಕ್ಷುನಿಯಪ್ಪ ನಿಮ್ಮಡಿಗಳ್ಗರಸಿಯಾಗಿಯುಮಿಂತಪ್ಪ
ನಿರೋಧಕ್ಕೆ ಪಕ್ಕಾಗಲಾರೆನೆಂಬ ನುಡಿಗೇಳ್ದು ನಸುನಗುತಯ್ಯೋ ಹಿಂದೆ
ಮಾಡಿದ ಪುಣ್ಯವಿಂದಿನ ಸುಕುಮಾರತೆಯನಿತ್ತುದಿಂದಿನ ಪುಣ್ಯವೇನಂ
ಮಾಡದು ನೀನಾರಾದೊಡೆನ್ನೊಡವೆಯನೆಮಗೆ ಕೊಟ್ಟು ಪೋಗೆಂದು

ನುಡಿಯೆ ಕುಡಲುಂ ಬಿಡಲುಂ ಅರಿಯದಿರ್ಪ ಮುಗ್ಧೆಯುಂ ಕಂಡು ಕರು
ಣಿಸಿ ಸಾಮರ್ಥ್ಯ ಸುಲಭಂ ಸಕಳ ಜೀವಂಗಳುತ್ಪತ್ತ್ಯ ಕರ್ತನಪ್ಪ ರೇವ
ಣಸಿದ್ಧಂ ತನ್ನ ಕರತಳದಿಂದಾ ಲಲನೆಯ ಸುಣ್ಯೋದರಮನೊಯ್ಯನೆ ತಡವೆ
ಪುಣ್ಯಾದುರುಳಿ ಬೀಳ್ವಂತೆ ಬಾಲಕಂ ಗರ್ಭದಿಂ ಭೋಂಕೆನೆ ಬೀಳೆ
ಮುಂತಣಸಿ ತೆಗೆದು ಶಂಕರನಂ ನೆನೆದು ಸಾರಹೃದಯಂ ಮಾರಾರಿ
ಯಣುಗನೇರಿಯ ಮೇಲಣ ನಿವಾಸಸ್ಥಲದೊಳಾದರದಿಂದಿರಿಸಿ ಭಸಿ
ತಮಂ ಕಾಪಿಟ್ಟು ಶಿವಧ್ಯಾನದಿಂ ಮುಸುಂಕಿಟ್ಟು ಜ್ಞಾನನಿಧಾನಮಂ ಚಿತ್ತ
ಭೂಮಿಯೊಳ್ ಬೈಚಿಡುವಂತೆ ಬೈಚಿಟ್ಟು ಕಾಯಗರ್ಭದಿಂ ನೂರ್ಮಡಿ
ರಕ್ಷೆಯಾಗಿರೆ ರೇವಣಸಿದ್ಧಂ ಚೋಳ ಪುತ್ರಿಯುಂ ದಕ್ಷಿಣ ದೇಶಕ್ಕೆ ಕಳುಪಿ

ಜ್ಞಾನನಿಧಿ ಮಹಿಮಾಂಬುರಾಶಿ ಧರ್ಮಧ್ವಜಂ ದಯಾ ಮೇರು ಸತ್ಯ
ಭೂಷಣನನುನಯದಿಂದಾರನೆಯ ಮಾಸಕ್ಕೆ ತಟಾಕಂ ಪೂರ್ಣಮಾಗೆ
ತತ್ತಟಾಕ ವೇಳಾಗ್ರದೊಳಿರಿಸಿದ ಬಾಲಗರ್ಭಕ್ಕೆ ನವಮಾಸಂ ತೀವಿತೆಂಬು
ದನರಿದು ರೇವಣಸಿದ್ಧಂ ಪುತ್ರೋತ್ಸಾಹಕ್ಕನುಕೂಲಮೆನಿಪ ಮೃದು
ಮೃದಂಗ ಮಂಗಳ ಕಲಶ ದರ್ಪಣಾರತಿ ಸುವಾಸಿನಿ ಜನಂ ಬೆರಸಿ
ಪಟ್ಟಣದಿಂ ಪೊರಮಟ್ಟು ಬಂದು ಕೆರೆಯ ಏರಿಯ ಮೇಲೆ ಮುನ್ನಿರಿಸಿದ
ಮುಚ್ಚಳಂದೆಗೆಯೆ ಭಕ್ತಿ ಭೂಮಿ ಜ್ಞಾನರಸದಿಂ ತೊಯ್ದು ಬೀಗಿ ಬೆಳೆದ
ಶಿವಕಳಾಬೀಜದಿಂ ನಳನಳಿಸಿ ಬೆಳದ ಶಿವಜ್ಞಾನಾಂಕುರದಂತೆ ತೊಳ
ತೊಳಪ ಬಾಲಕನಂ ಕೈಯಲೆಡೆಗೊಟ್ಟು ಭೂಮಿದೇವಿಯಕ್ಕೈಯ್ಯೊಳೀಸಿ
ಕೊಂಬಂತೆ ತೆಗೆದುಕೊಂಡು ಕೃಪೆಯಿಂ ನೋಡಿ ಮೋಹದಿಂ ಮುಂಡಾಡಿ
ಮೂರ್ಧ್ನಿಘ್ರಾಣಮಂ ಮಾಡಿ ತಾಯಗರ್ಭದಿಂ ಬರ್ಪನೋವನರಿಯದೆ
ದುಃಖಮಂ ನೀಗಿ ಪುಟ್ಟಿದನಾಗಿ ರುದ್ರಮುನಿದೇವನೆಂಬ ನಾಮಕರಣಮಂ
ಮಾಡಿ ಪುರಕ್ಕೈತಂದು ತಮ್ಮರಸಿಯೋರ್ವಳ್ಪುಣ್ಯಾವನಿತೆಯ ಕೆಯ್ಯೊಳ್ಕುಡೆ
ಬಾಲಚಂದ್ರನಂ ಗಗನಾಂಗನೆ ಸಲಹುವಂತೆ ತರುಣ ತರಣಿಯಂ ಪೂರ್ವ
ದಿಶಾಂಗನೆ ಬೆಳೆಯಿಸುವಂತೆ ಸಾಗಿಸುತ್ತಿರಲೆಂಟನೆಯ ವರುಷದೊಳ್
ಮಗನಂ ನೋಡಿ ಮಿಗೆ ಸಂತಸಂ ಬಟ್ಟು ಶೈವೋಪದೇಶಮಂ ತಾನೆ
ಕರುಣಿಸಿ ಕೃಪೆಯಿಂ ನಿರೀಕ್ಷಿಸಿ ರುದ್ರಮುನಿದೇವರ್ಗೆ ಪರಮ ಸ್ವರೂಪ
ಜ್ಞಾನಬೋಧೆಯಂ ಬೆಸಸುತ್ತಂ ಶಿವಯೋಗ ಸಂಪನ್ನನೆನಿಪ ರೇವಣಸಿದ್ಧ
ಮಂಗಳವಾಡದೊಳಿರ್ದನಂತುಮಲ್ಲದೆಯುಂ.

**ಚತುರ್ಥಸ್ಥಲ ಸಂಪೂರ್ಣಂ.**

## ಪಂಚಮಸ್ಥಲ.



ವೃತ್ತ॥— ನಯದಿಂದಂಪ್ರಿಯದಿಂದೆ ರುದ್ರಮುನಿದೇವಂಗಳ್ಕರಿಂ ಶೈವದೀ-
ಕ್ಷೆಯನಿತ್ತಾನತವೃಂದ ಮೋಕ್ಷದನನೂನೈಶ್ವರ್ಯ ಸಂಯುಕ್ತನ-।
ದ್ವಯಸಿದ್ಧಂ ಶಿವಭಾವಸಿದ್ಧನವನೀಶಂ ಪೂಜ್ಯಸಿದ್ಧಂ ನಿರಾ-।
ಶ್ರಯಸಿದ್ಧಂ ವಿಭುಸಿದ್ಧ ರೇವಣ ಶಿವಂ ಸಂದಿರ್ದನಾಸ್ಥಾನದೋಳ್ ॥

### ರಗಳೆ

ಅಂತಿರ್ದು ಮತ್ತೆ ದಿಗ್ದೇಶಾಂತರಕ್ಕೆಂದು
ಸಂತಸದಿ ಪೊರಮಟ್ಟನತುಳ ಬಲಯುತನಂದು
ಕರಿತುರಗ ಕಾಲಾಳು ರಥ ನಿಕರ ಒಡನೆ ಬರೆ
ಧರೆ ನಡುಗೆ ನಿಸ್ಸಾಳ ರವ ಉಣ್ಮಿ ಪೊಣ್ಮುತಿರೆ
ನಡೆತಂದನಂಗಂ ಕಳಿಂಗದೇಶಂಗಳೊಳ್
ನಡೆ ತಂದು ಗೌಳ ಮಾಳವ ಮಳೆಯ ದೇಶದೊಳ್
ಸಕಲ ದೇಶಂಗಳೊಳ್ಸುಖದಂತೆ ಸುಳಿವುತುಂ
ಸುಕರವೆನೆ ಭೂಜನಕೆ ಸಖನಂತೆ ಸುಳಿವುತುಂ
ಶಶಿಯಂತೆ ಸಿರಿಯಂತೆ ಸುಧೆಯಂತೆ ಸುಳಿವುತುಂ
ಎಸೆವ ಸುರಧೇನು ಸುರ ಕುಜದಂತೆ ಸುಳಿವುತುಂ
ವರ ಸುಕೃತದಂತೆ ಸತ್ಯದ ತೆರದಿ ಸುಳಿವುತುಂ
ಉರು ಶಾಂತಿಯಂತೆ ನಿತ್ಯದ ತೆರದಿ ಸುಳಿವುತುಂ
ಧರೆಯೊಳಗನಂತ ದೃಷ್ಟಾಂತಮುಂ ತೋರುತುಂ
ಹರುಷದಿಂ ಪಲವು ಸಾಮರ್ಥ್ಯಮಂ ಬೀರುತುಂ
ಬರುತಿರ್ದನತ್ತಲಾ ಸಿದ್ಧರೇವಣತಂದೆ

ಧರಣಿಯೊಳಗಿತ್ತಲೊರ್ಬಂ ಶರಣನೊಲವಿಂದೆ
ಎಸೆವ ಹಾವಿನಹಾಳೆನಿಪ್ಪಗ್ರಹಾರದೊಳ್
ಪೆಸರೆಸೆವ ಕಲ್ಲೈಯ್ಯನೆಂದೆನಿಪ ನಾಮದೊಳ್
ಆ ಊರ ಕಲಿದೇವರಲ್ಲಿ ಸಲೆ ಮೆಚ್ಚಾಗಿ
ಭಾವದಿಂದರ್ಚಿಸುತ್ತಿರ್ಪನುನ್ನತವಾಗಿ

ಇದುರ್ ಪರಮಸ್ನೇಹವಂಕುರಿಸುತಿರ್ಕುತಂ
ಸಾದುರ್ ಶಿವಚರಣದೊಳ್ ಪಲ್ಲವಿಸುತಿರ್ಕುತಂ
ಶ್ರೀಗುರು ಪದಂಗಳಂ ಬಯಸಿರ್ಪ ಸಮಯದೊಳ್
ನಾಗಭೂಷಣನ ಮೆಲ್ಲಡಿಯರಿವ ಸಮಯದೊಳ್
ಈ ಬಂದನತಿಬಳಂ ಸಿದ್ಧರೇವಣನೆಂಬ
ಈ ಬಂದನಮ್ಮಮ್ಮ ಸಿದ್ಧಕುಲಪತಿ ಯೆಂಬ
ಕಹಳೆಗಳ ಧ್ವನಿ ಬಂದು ಕಲ್ಲಯ್ಯನೋಳ್ಪುಗಲು
ಬಹು ವಿಧದ ಪುಳುಕ ತತಿ ತನ್ನ ಮನದೊಳ್ನಿಲಲು
ಮಾಯೆಯುಂ ಪಿಂಗಿ ಶಿವಪದಕೆ ಧೀಂಕಿಡುವಂತೆ
ಆಯತಿಕೆಯಿಂದೆ ಭವಚಲವನುತ್ತರಿಪಂತೆ
ಗಳಗಳನೆ ಪರಿತಂದು ರೇವಣಸಿದ್ಧನಂಘ್ರಿಯುಂ
ತೊಳತೊಳಪ ಸದ್ಗತಿಯ ತೋರುತಿರ್ಪಂಘ್ರಿಯುಂ
ಬಿಗಿದಪ್ಪಿಯಾನಂದ ಜಲದಿಂದೆ ತೊಳೆವುತಿರೆ
ತೆಗೆದಪ್ಪಿ ಪುಳಕಂಗಳಿಂ ಪೊದೆಯಿಸುತ್ತಮಿರೆ
ಏಳೈಯ್ಯ ಕಲಿದೇವ ನಿನಗೆ ಲೇಸಕ್ಕುಮೆನೆ
ಏಳೈಯ್ಯ ನಿನ್ನಯ ಮನೋರಥವನೀವೆನೆನೆ
ಏಳ್ದು ಕೈಮುಗಿದಿರ್ದ ಕಲ್ಲಯ್ಯನಂ ಕಂಡು
ತಾಳ್ದು ಕಾರುಣ್ಯಮಂ ಭಕ್ತಿಗೆ ಮನಂಗೊಂಡು
ರುದ್ರಮುನಿದೇವನಿಂ ಕರುಣಮಂ ಮಾಡಿಸುತೆ
ರುದ್ರನಣುಗಂ ಶೈವದೀಕ್ಷೆಯಂ ನೀಡಿಸುತೆ
ಕಲ್ಲಯ್ಯನಂ ತತ್ಪುರಕ್ಕೆ ಕರುಣಿಸಿ ಕಳುಪಿ
ಎಲ್ಲ ತೆರದಿಂದೆ ಭವಬಂಧನಂಗಳ ನಿಳಿಪಿ

ತನ್ನ ಮನದೊಳ್ಸಿದ್ಧರೇವಣಂ ನಡೆ ನೋಡಿ
ಪನ್ನಗಾಭರಣನಿತ್ತಾಜ್ಞೆ ನೆರೆ ಕೈಗೂಡಿ
ಆರಿತೇಳುನೂರರಿಯದೇಳ್ನೂರು ವತ್ಸರಂ
ನೆರೆ ಸಂದುದಿನ್ನಿಳೆಯೊಳಿರಲಾಗದೀಶ್ವರಂ
ಕೊಟ್ಟುದಾಯ್ತೆಂದಲ್ಲಿ ಚಿಂತಿಸುತೆ ಬರವರಲ್
ನಿಷ್ಠೆಯಿಂ ಸಿದ್ಧರೇವಣತಂದೆ ನಡೆತರಲ್

ಸಂದ ಸೊನ್ನಲಿಗೆಯಿಂದೊಲಿದು ಚಾಮಲದೇವಿ
ಮುಂದೆ ಪೈಯ್ಯಿಕ್ಕುತಂ ಬಂದು ಗುರುಪದಭಾವಿ
ತನ್ನ ಗುರುವಂ ಕಂಡು ಚನ್ನಗುರುವಂ ಕಂಡು
ಉನ್ನತ ಶಿವಜ್ಞಾನಕಲ್ಪತರುವಂ ಕಂಡು
ಕೃತಕೃತ್ಯೆಯಾಗುತಂ ಕೈಮುಗಿದು ನಿಂದಿರಲು
ಅತಿಶಯಜ್ಞಾನಿ ಸಿದ್ಧನ ಮುಂದೆ ನಿಂದಿರಲು
ಕಂಡು ಕರುಣವನಾಕೆಗೀವುತ್ತೆ ಓವುತ್ತೆ
ಅಂಡಲೆವ ಮಾಯೆಯುಂ ಸೋವುತ್ತೆ ಕಾವುತ್ತೆ
ಆನೆಯಿಂದಿಳಿವುತಂ ಸಿದ್ಧರೇವಣತಂದೆ
ಸೇನೆಯಂ ಪೊರಗೆ ನಿಲವೇಳುತ್ತೆ ತಾ ಮುಂದೆ
ಹೊನ್ನ ಹಾವುಗೆಗಳಂ ಮೆಟ್ಟಲಮ್ಮದೆ ಕಳೆದು
ತನ್ನ ಮನದೊಳಗೆ ಭಯಭಕ್ತಿರಸಮಂ ತಳೆದು
ಚರಣದಿಂ ನಡೆಯೆ ಚಾಮಲದೇವಿ ಕಾಣುತುಂ
ಧರಣಿಗಿದು ಪೊಸತೆನುತೆ ಕೌತುಕಮನಾಳುತುಂ
ದೇವ ಏನೆಂಬ ಪರಿ ಕರುಣಿಸುವುದಿದನೆಮಗೆ
ದೇವ ದಿವ್ಯಾಂಘ್ರಿಯಿಂ ನಡೆವುದದ್ಭುತವೆನಗೆ
ಎನೆ ಕೇಳು ಮಗಳೆ ಶಿವಲಿಂಗವಾದಪುದಿಲ್ಲಿ
ಘನಮಹಿಮೆಯುಳ್ಳ ಶಿವಭೋಗವಾದಪುದಿಲ್ಲಿ
ಇಲ್ಲಿ ಮೊರಡಿಯ ಮುದ್ದುಗೌಡನರ್ಧಾಂಗಿಯೊಳು
ಸಲ್ಲಲಿತೆ ಸುಗ್ಗವ್ವೆ ಎಂಬ ಕಾರಣಿಕೆಯೊಳು
ಕಾರಣಿಕ ಸಿದ್ಧನುದಯಿಸುವನೊಬ್ಬಂ ಕೇಳ
ಮಾರಾರಿಯಂ ಬಯಸಿ ಭಾವಿಸುವ ವಿಭು ಕೇಳ
ಆತನಂ ನಾವೆಂದು ಬೆಸಕೈದು ಬದುಕುವುದು
ಆತನ ಯಶೋವಲ್ಲಿ ಮೂಜಗಕೆ ಪರ್ಬುವುದು
ಎಂದೊಲಿದು ನಡೆತಂದು ಮುದ್ದುಗೌಡನ ಮನೆಗೆ
ನಿಂದು ಭಿಕ್ಷೆಯನಾಂತು ಕೈಕೊಂಡು ಕೃಪೆ ಬೆಳಗೆ
ಸುಗ್ಗ ಗೌಡಿಯ ಮರೆವ ಪುಣ್ಯೋದರಮನಲ್ಲಿ
ಅಗ್ಗಿಸುತ್ತಂ ಮುಟ್ಟಿ ಭಸಿತಮಂ ಇಡುತಲ್ಲಿ
ಸೇನೆಯಂ ರುದ್ರಮುನಿದೇವರಂ ನೋಡುತುಂ
ಮಾನಿ ಚಾಮಲದೇವಿಗಾಗಳಪ್ಪೈಸುತುಂ

ನೆಗೆದನಾಕಾಶಕ್ಕೆ ಶಶಿಬಿಂಬದಂದದಿಂ
ನೆಗೆದನಂಬರತಳಕೆ ಶಾಂತರವಿಯಂದದಿಂ
ನೆಗೆದಪ್ಪ ಪಕ್ಷಿ ಘನತರ ಪೊಕ್ಕು
ಸೊಗಯಿಸುವ ಶಿವಲಿಂಗ ಮೂರ್ತಿಗೆ ಮನಂ ಮಿಕ್ಕು
ಸರ್ವ ಶಿವಲಿಂಗಮಂ ಬಿಳ್ಕೊಡುತ್ತಂ ಬಂದು
ಸರ್ವ ಶಿವಭಕ್ತರ್ಗೆ ಸುಖಮನೀವುತೆ ಬಂದು
ಗಗನದಿಂ ನಡೆತಂದನಾ ಕೊಲ್ಲಿಪಾಕಕ್ಕೆ
ಬಗೆವರಘಮಂ ಕೆಡಿಪ ಪುಣ್ಯ ಸುಸ್ಥಾನಕ್ಕೆ

ಬಂದು ಶಿವಪುರದ ಶಿವನಿಳಯದೊಳಗಂ ಪೊಕ್ಕು
ಇಂದುಧರನಂ ನೋಡಿ ಪುಳಕದಿಂ ಕೈಮಿಕ್ಕು
ನೆನೆವರ ನಿಧಾನವೆನಿಸುವ ಸೋಮನಾಥನಂ
ಅನುಪಮ ವಿಳಾಸಜಳನಿಧಿ ಸೋಮನಾಥನಂ
ಶರಣ ಸಂಕುಳ ಕಲ್ಪತರು ಸೋಮನಾಥನಂ
ಪರಮ ಶಿವಭಕ್ತ ಕುಲಗುರು ಸೋಮನಾಥನಂ
ಹೊಗಳುತ್ತೆ ಹೊಂಗುತ್ತೆ ಬಂದು ಹತ್ತಿರೆ ಸಾರ್ದು
ಸೊಗಯಿಸುವ ಶಿವಲಿಂಗ ಮೂರ್ತಿಗೆ ಮನಂ ಸಾರ್ದು
ಹುಟ್ಟಿಸಿದ ತಾಯಿತಂದೆ ಬಟ್ಟೆಗೊಡುವುದು ದೇವ
ದಿಟ್ಟಿಮಾರರ ನಿಧಿಯು ಬಟ್ಟೆಗೊಡುವುದು ದೇವ
ಶರಣರ ಮನೋರಥವೆ ತೆರಹುಗುಡುವುದು ದೇವ
ಕರುಣಿಸಿದ ತೆರದಿ ಧರೆಯೊಳ್ಸಂದೆನೆಲೆ ದೇವ

ಎನೆ ಸೋಮನಾಥನೊಯ್ಯನೆ ತೆರಮನಾದರಿಸಿ
ಮನವಾರೆ ಶರಣಂಗೆ ಕರುಣಮಂ ಬಿತ್ತರಿಸಿ
ಪುವ್ವಿನೊಳ್ಪರಿಮಳಂ ಬೀಜದೊಳಗಂಕುರಂ
ಓವಿ ಪಲ್ಲವ ಒಪ್ಪುವಂಕುರದೊಳೊತ್ತರಂ
ಅಂಕುರಂ ಬೀಜದೊಳ್ಪುಗುವಂದದಿಂ ಪೊಕ್ಕು
ಶಂಕರನ ನಿಜಲಿಂಗದೊಳಗೆ ಭಾವಂ ಮಿಕ್ಕು
ಒಳ್ಳಿತೆನೆ ತನ್ನನಾ ಲಿಂಗದೊಳಗೋವಿದಂ
ಕೊಲ್ಲಿಪಾಕಿಯ ಸೋಮನಾಥನೊಳ್ತೀವಿದಂ
ಶಿವಲಿಂಗದೊಳಗೆ ಪೊಕ್ಕಂ ಸಿದ್ಧರೇವಣಂ

ಶಿವನ ಸದ್ಭಕ್ತಿ ಪರ್ವಿದ ಸುಖದ ಕಾರಣಂ
ಆಗಳೆರಗಿದವು ಪುಷ್ಪಾವಳಿಗಳಂತಲ್ಲಿ
ಮೊಗೆ ಮೊಳಗಿದವು ದುಂದುಭಿವೃಂದವಲ್ಲಲ್ಲಿ
ನೆಗೆದುದು ವಿಮಾನವಾ ಪುರಜನಂ ಬೆರಗಾಗೆ
ಗಗನದೋಳ್ಪೋಗುತ್ತ ಮಿರ್ದುದುನ್ನತವಾಗೆ
ಪೋಗಿ ನಂದೀಶ್ವರನ ಬಾಗಿಲೊಳಗಂ ನಿಂದು
ನಾಗಭೂಷಣನ ಕೈಲಾಸದೊಳ್ಪುಗುತಂದು
ಸಿದ್ಧರೇವಣನಲ್ಲಿ ದೇವಂಗೆ ವೈಯಿಕ್ಕಿ
ಉದ್ಧರಿಸುತೀಶ್ವರಂ ಶಿರದೊಳಗೆ ಕೈಯಿಕ್ಕಿ
ಪುಳಕಿಸುವ ಭಕ್ತನಂ ಕಂಡು ಕರುಣಾಕರಂ
ಆಳವಲ್ಲದಳ್ಕರಿಂ ನೋಡಿ ಶಶಿಶೇಖರಂ
ಮುನ್ನಿನಂದದೊಳೆ ಗಣಪದವಿಯುಂ ಸಲಿಸುತ್ತ
ಉನ್ನತಿಯ ರೇಣುಕನೆನಿಪ್ಪ ನಾಮವನಿತ್ತು
ಆವನುಂ ಪೊಗಳ್ಪದಧಿಕತರನೊಪ್ಪಿದಂ
ದೇವ ದೇವರದೇವ ದೇವ ಪತಿಯೊಪ್ಪಿದಂ
ಸಕಳ ಚಲ್ವಿಂಗೆ ಚಲ್ವಾದ ಗುರುವೊಪ್ಪಿದಂ
ಸಕಳ ಬಲ್ಪಿಂಗೆ ಬಲ್ಪಾದ ಶಿವನೊಪ್ಪಿದಂ
ಸಕಲ ಲೇಸಿಂಗೆ ಲೇಸಾದ ಹರನೊಪ್ಪಿದಂ
ಸಕಲ ಗುರುಗಳ್ಗೆ ಗುರುವಾದಭವನೊಪ್ಪಿದಂ
ಪಂಪಾಪುರಾಂಬೋಧಿ ಪೂರ್ಣೇಂದುವೊಪ್ಪಿದಂ
ಪಂಪಾಪುರಾಧಿಪ ವಿರೂಪಾಕ್ಷನೊಪ್ಪಿದಂ

**ಕಂದ**॥ ಅಣಿಯುರದಿಂ ನಿಜಭಕ್ತಿಯ
ಗುಣವಂ ತಾನೆನ್ನೊಳೀಗೆ ಶಾಂತಂ ಸರ್ವಂ ॥
ತ್ರಿಣಯನ ನೊಲವಿಂದಂ ರೇ- ।
ವಣಸಿದ್ಧನ ಕಂದನೆಂದು ಹಂಪೆಯದೇವ

**ಪಂಚಮಸ್ಥಲ ಸಂಪೂರ್ಣ**



# ಶಂಕರದಾಸಿಮಯ್ಯನ ರಗಳೆ.



**ವೃತ್ತ**:— ಅಪ್ರತಿಮ ಪ್ರಭುವಜಾಂಡಕ ಪ್ರಭು ಸರ್ವದೇವರಾಜಪ್ರಭು ನಿರ್ಮಲಪ್ರಭು ನಿರಾವರಣ ಪ್ರಭು ಕೇಳು ಭಾಳನೇ ।
ತ್ರಪ್ರಭುಹಂಪೆಯಾಧ್ಧ ನೊಲವಿಂ ಮಿಗೆ ಶಂಕರದಾಸಿಮಯ್ಯನಂ ।
ವಿಪ್ರಕುಲಾರ್ಕನಂ ಮೆರೆದನಾನತ ಜಂಗಮ ಮಂಗಳಾಸ್ಪದಂ ॥

## ರಗಳೆ.

ಶ್ರೀಮೇದಿನೀತಳದೊಳೊಪ್ಪುಗು ನಿರಂತರಂ
ಪ್ರೇಮದಿಂ ಕಂದಶಿಲೆ ಎಂಬ ನಾಮದ ಪುರಂ
ಅಲ್ಲಿರ್ಪನೋರ್ವ ವಿಪ್ರಂ ಸದಾಚಾರದಿಂ
ಸಲ್ಲಲಿತ ಶೈವಧರ್ಮದ ಮಾರ್ಗನಿಯುತದಿಂ
ಗೋವಿಂದದೇವನೆಂಬುದು ತನಗೆ ಪೆಸರಾಗೆ
ಭಾವಿಸುವಡುಮ್ಮವ್ವೆ ಎಂಬ ಸತಿ ತನಗಾಗೆ
ಸಂತ ಸುಖದಿಂದಿರ್ದು ವೈರಾಗ್ಯಪಡೆಗೊಂಡು
ಚಿಂತಿಸಿದನಲ್ಲಿ ನೆರೆ ಸಂಸಾರವಂ ಕಂಡು
ನಾರಣಾಸಿಗೆ ಪೋಪೆನೆಂದು ಮನದೊಳ್ನೆನೆದು
ಸಾರವತ್ಯಂತ ಸುಖವನೆ ಪಡೆವೆನೆಂದೊಸೆದು
ಭರದಿಂ ಪ್ರಯಾಣೋಚಿತ ಪ್ರಕರಧರನಾಗಿ
ನೆರೆ ಪುಣ್ಯಪಥದತ್ತ ವಿಪ್ರನು ಕ್ರಮವಾಗಿ
ನಡೆತಂದು ತನ್ಮಾರ್ಗ ಗಾವುದದೊಳಿಪ್ಪಿರ್ಪ
ಜಡೆಯ ಶಂಕರದೇವರೊಲ್ದಲ್ಲಿ ನೆಲಸಿರ್ಪ
ನವಿಲೆಯೊಪ್ಪದಪಿಂ ಪರಸ್ನಾನಮಂ ಮಾಡಿ
ಶಿವನಿಳಯಮಂ ಪೊಕ್ಕು ನಲವಿಂದೆ ಮಿಗೆ ನೋಡಿ
ರಂಗಮಂಟಪದೊಳಗೆ ಬಂದು ಕುಳ್ಳಿರ್ದಿರಲು
ಗಂಗಾಧರಂಗೆ ಪೊಡಮಟ್ಟು ಕುಳ್ಳಿರ್ದಿರಲು

ಶಿವನ ಮಜ್ಜನಕೆ ತರ್ಪಗ್ಗಣಿಯ ಸಂಭ್ರಮಂ
ನವ ಪರಿಮಳಂಬೆತ್ತ ಕುಸುಮ ಕುಲವಿಭ್ರಮಂ
ಮಜ್ಜನಕ್ಕೆರೆವ ಶಿವಭಕ್ತ ಸಂದೋಹದಿಂ
ಸಜ್ಜನ ಸ್ಥಾನದೊಳು ನಡೆಸುವತಿನೇಹದಿಂ
ಪನ್ನೀರ ಚಂದನದ ಪರಮ ಸೌರಭ್ಯದಿಂ
ಪನ್ನಗಾಧರಗೆಸೆವ ಪೂಜೆಯಾನಂದದಿಂ
ಅಗಿಲು ಗುಗ್ಗುಳ ಚಂದನದ ಪರಿಮಳಂಗಳಿಂ
ಮಿಗೆ ತೊಳಗಿ ಥಳಥಳಿಸಿ ಬೆಳಗುವಾರತಿಗಳಿಂ
ಪರಮನಾರೋಗಣೆಯ ವಿಭವ ವಿಸ್ತಾರದಿಂ
ಪರಿಪರಿಯಲೆಸೆವ ಶೈವಾಗಮ ವಿಚಾರದಿಂ
ಸೊಗಸು ಮೆರೆಯಲು ಪುರಾಣ ಪ್ರಸಂಗಂಗಳಿಂ
ಬಗೆ ಮಿಗಿಲ್ಕೇಳಿಸುವ ಗೀತವಾದ್ಯಂಗಳಿಂ
ಇಂತೆಸೆವ ಪರಮನುತ್ಸಾಹ ಸಂಕುಲವಲ್ಲಿ
ಕಂತುಮದವೈರಿಯ ನಿರಂತ ಸಂಪದವಲ್ಲಿ
ತನ್ನಯ ಮನಕ್ಕೆ ಸುಖಮಂ ಕೊಡುತ್ತಿರಲಂದು

ಇನ್ನೇಕೆ ವಾರಣಾಸಿಯ ಪಯಣವೆನಗೆಂದು
ಇಲ್ಲಿರ್ಪೆನಿಲ್ಲಿರ್ಪೆ ನಿನ್ನಗಲೆ ನಿನ್ನಗಲೆ
ಒಲ್ಲೆನಿನ್ನೆಲ್ಲಿಗಂ ಪೋಗೆ ನಾನಿಂತು ಸಲೆ
ಎಂದು ತನ್ನೊರ್ಗೆ ಭರದಿಂ ಮರಳಿ ನಡೆತಂದು
ಸಂದಣಿಪ ಮೋಹದಿಂ ನಿಚ್ಚನಿಚ್ಚಂ ಬಂದು
ಜಡೆಯ ಶಂಕರದೇವರಂ ದರುಶನಂ ಮಾಡಿ
ಎಡೆಗೊಂಡ ಭಕ್ತಿಯಿಂ ಕಿವಿವಿಡಿದು ಕುಣಿದಾಡಿ
ಮಿಗೆ ನೆಚ್ಚಿ ಮೈವೆಚ್ಚಿ ಕೈಯ್ಯ ಬೆರಳಂ ಕಚ್ಚಿ
ಬಗೆ ತಿಳಿದು ಬಲ್ಪಳಿದು ಮಾಣ್ಮುತ್ತ ಕಣ್ಮುಚ್ಚಿ
ಭಕ್ತಿ ಸುಖಮಂ ತನ್ನ ಮನದಣಿಯಲನುಭವಿಸಿ
ಯುಕ್ತಿ ಪೊರ್ದದ ನೇಹದೊಳಗೆ ಎಚ್ಚರು ಸೂಸಿ
ಮೈಯಿಕ್ಕಿ ಪೊಡಮಟ್ಟು ಕಾರುಣ್ಯಮಂ ತೋರಿ
ಕೈಯ್ಯೆತ್ತಿ ಕೈಯ್ಯೆತ್ತಿ ನಡೆದು ಲಜ್ಜೆಯ ಬೀರಿ

ಎನಗೆ ವಾರಣಾಸಿಯುಮರ ನದಿಯುಂ ನೀನೆ
ಎನಗೆ ದಿವ್ಯ ಕ್ಷೇತ್ರವುಂ ನೇತ್ರವುಂ ನೀನೆ
ಎನಗೆ ನಿತ್ಯಾವಾಸಮುಂ ದೇಶಮುಂ ನೀನೆ
ಎನಗೆ ಪುಣ್ಯ ಪ್ರಕರಮುಂ ಸಕಲವುಂ ನೀನೆ
ಎನಗೆ ನಿರ್ಮಳ ಕರಣಮುಂ ಹರಣಮುಂ ನೀನೆ
ಎನಗೆ ನಿಶ್ಚಳ ಸೌಖ್ಯಮುಂ ಭೋಗಮುಂ ನೀನೆ
ಎನಗೆ ನಿರ್ಮಳ ಜ್ಞಾನವುಂ ಮೌನವುಂ ನೀನೆ
ಎನಗೆ ಪರಮ ಜ್ಞಾನ ಮಂತ್ರತಂತ್ರಂ ನೀನೆ
ಎನಗೆ ನಿತ್ಯಾನಂದ ಕರ್ತನೆನಿಪಂ ನೀನೆ
ಎನಗೆ ನಿಶ್ಚಲ ನಿತ್ಯವುಂ ಸತ್ಯವುಂ ನೀನೆ
ಎಂದು ನುತಿಗೈದು ನೂತನ ಸುಖವನೊಳಕೊಂಡು
ಇಂದುಧರನಲ್ಲಿ ಭಕ್ತಿಯ ಭರವನೆಡೆಗೊಂಡು
ಇಂತನುದಿನಂ ತನ್ನ ಪುರದಿಂದ ನಡೆತಂದು
ಸಂತತಂ ಶಿವನ ಸದ್ಭಕ್ತಿಯ ಮನಂದಂದು
ಪಗಲೆನ್ನದಿರುಳೆನ್ನದೂಲವಿಂ ನಿರಂತರಂ
ಮಿಗೆ ಗಾಳಿ ಮಳೆ ಶೀತ ವಾತಪದೊಳಂ ಕರಂ
ಬಂದು ಬಂದಭವನಂ ನಿಚ್ಚ ಓಲೈಸುತಿರೆ
ಇಂದುಧರನಂ ಮರೆಯದನುದಿನಂ ನೆನೆಯುತಿರೆ

ಜಡೆಯ ಶಂಕರದೇವನಲ್ಲಿ ಕರುಣಿಸಿ ನೋಡಿ
ಪೊಡವಿಗೀ ಭಕ್ತನಂ ಮೆರೆವೆನೆಂದನು ಮಾಡಿ
ಒಂದು ದಿವಸಂ ಕನಸಿನೊಳಗೆ ದಯೆಯಿಂ ಬಂದು
ಇಂದುಕಳೆ ಜಡೆ ಪುಲಿದೊವಲ್ಭಸಿತದಿಂ ನಿಂದು
ಎಲೆ ಮಗನೆ ಚಳಿಮಳೆಯೊಳಿಡೆಯಾಡಲೇಕೈಯ್ಯ
ನಲಿವು ಮಿಗೆಯೊಲವಿಂದ ನಮ್ಮೂರ್ಗೆ ಬಾರೈಯ್ಯ
ಬಂದೊಡುಪದೇಶಮಂ ಮಾಡಿ ಕರುಣಿಪೆನೆಂದು
ಇಂದುಧರನೊಲ್ದು ಬೆಸಸಲ್ಕೆ ಕರುಣದೊಳಂದು
ಎಚ್ಚತ್ತು ಮೆಲ್ಲನಂತಂತು ಪುಳಕದೊಳಾಳ್ದು
ಬೆಚ್ಚರಂ ಶಿವನ ಮುಕ್ತಿಯನಕ್ಕರಿಂ ತಾಳ್ದು
ಕನಸಿನೊಳಗೊಗೆದ ಸುಖ ಮನಸಿನೊಳಗಂಕುರಿಸಿ

ಕನಸು ಮನಸೆಂಬ ವಿವರಣೆ ಮನಕ್ಕರಿದೆನಿಸಿ
ಮೆಲ್ಲಮೆಲ್ಲನೆ ತಿಳಿಪಿನಿಂದ ಮನದೊಳಗರಿದು
ಸಲ್ಲೀಲೆಯಿಂ ಶಿವಂ ಕರುಣಿಸಿದನೆಂದರಿದು
ಎನ್ನೊಡೆಯನೊಲವಿಂ ಬರಲೆಂದು ಬೆಸಸಿದಂ
ಎನ್ನಾಳ್ದನತಿ ಕರುಣದಿಂದ ಕೃಪೆ ಮಾಡಿದಂ

ಎಂದಲ್ಲಿ ಸತಿವೆರಸಿ ಪೊರಮಟ್ಟು ನಡೆಗೊಂಡು
ಬಂದ ಮಯ್ಯೂರಪುರದೊಳಗೆ ಚಿತ್ತಂಗೊಂಡು
ಜಡೆಯಶಂಕರದೇವರಂ ಕಂಡು ಪೊಡಮಟ್ಟು
ಕಡು ನೇಹಮಂ ತನ್ನ ಮನದ ಮೊನೆಯೊಳಗಿಟ್ಟು
ನವಿಲೆಯೊಳು ಶಿವಪಾದಸಂಗಸುಖದಿಂದಮಿರೆ
ಕವಲರಿಯ.ದಚ್ಚ ಶಿವಸುಖದ ಭರದಿಂದ ಬರೆ

ಒಂದು ದಿವಸಂ ನೇಮಮಂ ಮಾಡುತಿರಲಂದು
ಇಂದುಧರನಿಂತೆಂದನೊಲ್ದು ಕರುಣದೊಳಂದು
ನಾಳೆಯುಪದೇಶಮಂ ಮಾಡಿದಪೆನೆಲೆ ಮಗನೆ
ನಾಳೆ ನೆರೆ ಶುದ್ಧಾಂಗನಾಗಿರ್ಪುದೆಲೆ ಮಗನೆ
ಎಂದು ಕರುಣಿಸಿದೆಯೆಂದೀ ಪರಿಯೊಳಂದೊಲ್ವೆ
ಒಂದು ಪರಿಯಿಂದೊಲ್ವೆ ನಿನ್ನಿಷ್ಟೆಯಿಂದೊಲ್ವೆ
ಅಭವ ಕರುಣಿಸಿದಕ್ಕೆ ಕೃಪೆಗೆಯ್ವುದೆಲೆ ದೇವ
ವಿಭುವೆ ಬಿನ್ನೈಸಿದಂ ಸಲಿಸವೇಳ್ಪುದು ದೇವ
ದೇವ ಕರುಣಿಸಿತಕ್ಕೆ ನೊಸಲ ಕಣ್ಣಂ ಕೊಟ್ಟು
ದೇವ ಕರತಳವನೆನ್ನುತ್ತಮಾಂಗದೊಳಿಟ್ಟು
ಅಪ್ರತಿಮ ಗುರುವೆ ಸುರತರುವೆ ಕರುಣಿಪುದೆನಗೆ
ಸುಪ್ರಸಿದ್ಧ ಪ್ರಭುವೆ ವಿಭುವೆ ಕರುಣಿಪುದೆನಗೆ
ಅಕಲಂಕ ಶಶಿಕಲಾಕಿರಣ ಕರುಣಿಪುದೆನಗೆ
ಸಕಲ ದೇವಾಭರಣ ನಿಕರ ಕರುಣಿಪುದೆನಗೆ
ಮೃಡ ಭೀಮ ಭಾಳಾಕ್ಷ ಭರ್ಗ ಕರುಣಿಪುದೆನಗೆ
ಜಡೆಯ ಶಂಕರದೇವ ಗುರುವೆ ಕರುಣಿಪುದೆನಗೆ.
ಎನೆ ಕೇಳ್ದು ಶಶಿಧರಂ ಕರುಣಿಸಿದೆನೆಂದೆನಲು

ಮನಮಾರೆ ನೊಸಲಕಣ್ಣೆತ್ತಿ ನಾನೆಂದೆನಲು
ಕೇಳುತಂ ಪುಟಮೇರುತಂ ಕೊರ್ಬಿ ಪೆರ್ಚುತಂ
ಬಾಳುತಂ ಬಲ್ಪೇರುತಂ ನಚ್ಚಿ ಪೆರ್ಚುತಂ
ಬೀಗುತಂ ಬಿಕ್ಕುತಂ ತೇಗುತಂ ತೂಗುತಂ
ರಾಗದಿಮ್ಮಡಿಸಿ ನಲಿದೊಗ್ಗುತಂ ಹಿಗ್ಗುತಂ

ನಡೆತಂದು ಮರುದಿವಸದುದಯ ಸಮಯದೊಳೇಳ್ದು
ಕಡುಗೂರ್ತು ನಿರ್ಮಲಸ್ನಾನ ಸುಖಮಂ ತಾಳ್ದು
ಭಸಿತಮಂ ತೀವಿಟ್ಟು ಧವಳ ವಸ್ತ್ರಮನುಟ್ಟು
ಎಸೆವ ರುದಾಕ್ಷ ಮಾಲೆಗಳನಳವಡೆ ತೊಟ್ಟು
ಸುಲಿಪಲ್ಲ ಬೆಳಗು ಬೆಳ್ದಿಂಗಳಂ ಬೀರುತಿರೆ
ನೆಲೆಗೊಂಡ ದೇಹರುಚಿ ಸುರುಚಿರವ ಸೂಸುತಿರೆ
ನಡೆದು ಬಂದಾ ಶಿವಾಲಯದ ಶಿವಮಂಟಪದಿ
ಜಡೆಯ ಶಂಕರ ದೇವರಿರ್ಪ ಗರ್ಭಗೃಹದಿ
ನಿಂದು ಕುಳ್ಳಿರ್ದು ಕಡು ನಿಷ್ಠೆಯಿಂ ಕೈಮುಗಿದು
ಸಂದಣಿಸಿ ಮೈಯ್ಯೊಳಗೆ ಪುಳಕಂಗಳಂ ನೆಗೆದು
ಲಿಂಗದಿಂ ನಡೆತಂದನಾ ಜಡೆಯ ಶಂಕರಂ
ಅಂಗರುಚಿ ಕಣ್ಗೆ ಸವಿಯಂ ಕರೆಯಲೀಶ್ವರಂ
ಪಿಂಗಳ ಜಟಾಭಾರ ಗಂಗೆ ಮಧ್ಯದೊಳೆಸೆಯೆ
ತುಂಗ ತಟದಲ್ಲಿ ಮರಿದಿಂಗಳೊಪ್ಪಂ ಬಡೆಯೆ
ಭಾಳಾಕ್ಷ ಫಣಿ ಕುಂಡಲಂ ಪಂಚವದನದಿಂ
ನೀಲಗಳ ವೀರೈದು ಭುಜವಜಕಪಾಲದಿಂ
ಕರಿಚರ್ಮವಹಿಕಟಕ ಡಮರುಗ ತ್ರಿಶೂಲದಿಂ
ಸುರ ಶಿರೋಮಾಲೆ ಪುಲಿದೊವಲೊಪ್ಪೆ ರಾಗದಿಂ

ಶಂಕರಂ ಬಂದು ಶರಣನನಕ್ಕರಿಂ ನೋಡಿ
ಬಿಂಕದಿಂ ಸ್ನೇಹರಸದೊಳಗೆ ಪೊಕ್ಕೋಲಾಡಿ
ಮೇಲೆ ದುಂದುಭಿ ಮೊಳಗೆ ಪೂಮಳೆಗಳುಂ ಸೂಸೆ
ಘೂಲಲನೆ ಗುಡಿಗಟ್ಟಿ ದೇವಗಣತತಿ ಪರಸೆ

ಸತ್ಯ ಗುರುಶಾಂತ ಗುರುಸಕಲ ಲೋಕೈಕಗುರು
ನಿತ್ಯ ಗುರು ನಿಜದ ಗುರು ಉತ್ತಮದ ಪರಮಗುರು
ದುರಿತ ಕುಲಮಂ ನಿವಾರಿಸುವತುಳಹಸ್ತಮಂ
ಶರಣ ಸಂತತಿಗಭಯಮೀವ ಘನಹಸ್ತಮಂ
ಉದಯಾರ್ಕರುಚಿಗೆ ಮಿಗೆ ಮೆರೆವ ಕರಕಮಲಮಂ
ಸದಮಲ ಶಶಿಪ್ರಭೆಯುಮೀವ ಹಸ್ತಾಗ್ರಮಂ
ಕುಳ್ಳಿರ್ದ ನಿಜಶರಣನುತ್ತಮಾಂಗದೊಳಿಟ್ಟು
ಬಳ್ಳಿವರಿದಡ್ಡೈಪ ನೇಹಮಂ ಮುಂದಿಟ್ಟು
ತನ್ನವಂ ಭಕ್ತಿಯುಂ ಪಂಚಾಕ್ಷರಿಯುಮರುಪಿ
ಉನ್ನತ ಜ್ಞಾನಮಂ ತನ್ನ ಮನದೊಳಗರುಪಿ
ಪರಮನಿಂತುಪದೇಶಮುಮನಕ್ಕರಿಂ ಮಾಡಿ
ಶರಣನಂತಸ್ಥದೊಳು ಸಾಮರ್ಥ್ಯಮಂ ಕೂಡಿ
ಅಸಮನಯನಂ ಸಕಲ ಕಾರುಣ್ಯಮಂ ನೀಡಿ
ನೊಸಲೊಳಗೆ ನೊಸಲಿಟ್ಟು ಭರದಿಂದೆ ಮುಂಡಾಡಿ
ನೊಸಲ ಸಂಗಡ ದಿಟ್ಟಿ ಗರ್ಭಿಣಿಯೊಲಾಗುತಿರೆ
ನೊಸಲ ಕಣ್ಣೊಂದು ಕಣ್ಣಂ ಪಡೆದು ಕೊಡುತಮಿರೆ
ನೊಸಲ ಕಣ್ಣಜ್ಯೋತ್ತಿ ನೊಸಲ ಕಣ್ಣಾಗುತಿರೆ
ಪೊಸಯುಕ್ತಿ ಶಿವಭಕ್ತಿ ಭಾವದೊಳ್ನೆಲಸುತಿರೆ
ಕಣ್ಣಕರ್ಪಂ ನೊಸಲಕಣ್ಣೆ ಕಪ್ಪಾಗುತಿರೆ
ಕಣ್ಣಪ್ಪನಿತ್ತ ಕಣ್ಣಲ್ಲಿ ಸರಿಯಾಗುತಿರೆ
ಜ್ಯೋತಿಯಿಂ ಜ್ಯೋತಿಯಂ ಪೊತ್ತಿಸಿದ ತೆರನಾಗೆ
ಮಾತಿಂಗೆ ಪೆರತಿಲ್ಲ ಭಾವವೆರಡೊಂದಾಗೆ
ಮುಂಡಾಡಿ ಮುಕುರ ಮುಕುರವ ನೋಡಿದಂತಾಗೆ
ಕೊಂಡಾಡಿ ತಾನೆ ತನ್ನಂ ನೋಡಿದಂತಾಗೆ
ಆತ್ಮ ವೈ ಪುತ್ರ ನಾಮಾಸಿ ಎಂಬಂತಾಗೆ
ಸ್ವಾತ್ಮಸಲ್ನೊಸಲ ಕಣ್ಣಾತನೋಳ್ತಾನಾಗೆ
ದೇವಂಗೆ ಭಕ್ತನೆಣೆ ಭಕ್ತಂಗೆ ದೇವನೆಣೆ
ದೇವಂಗೆ ಭಕ್ತಂಗೆ ಸದ್ಭಕ್ತಿ ತಾನೆ ಹೊಣೆ
ಎಂಬಂತೆಯುಪದೇಶಮಂ ಪಡೆದು ವಿಸ್ತರಂ

ತ್ರ್ಯಂಬಕನ ಭಾಳದೊಳಗೆಡೆವಿಡಿದು ಮತ್ಸರದ
ಜ್ಞಾನಾಗ್ನಿ ಕಣ್ದೆರೆದ ತೆರದೊಳಿರ್ದಂ ಕರಂ
ಧ್ಯಾನದೊಳ್ಪುಟ್ಟಿ ಬೆಳೆವುತಿರ್ದನನಂತರಂ

ಅಸಮಾಕ್ಷನಿತ್ತುದಂ ಪಡಿನೋಳ್ಪೆ ನಾನೆಂದು
ಬಿಸಿಗಣ್ಣ ಪಡಿಸಣವನರಿದು ನೋಡುವೆನೆಂದು
ಸಿಡಿಲ ಕಿಡಿಯಂತಿರ್ಪ ಎವೆಯನೊಯ್ಯನೆ ತೆರೆಯೆ
ಘುಡಿಘುಡಿಪ ಘುಳುಘುಳು ಜ್ವಾಲೆ ಭುಗಿಲೆನೆ ನೆಗೆಯೆ
ವಿಷ್ಣುಪ್ರತಿಮೆಯೊಡೆದು ಸಿಡಿದು ಸಿಕ್ಕನೆ ಸೀಳೆ
ವಿಷ್ಣುವಿನ ರೂಪೊಡೆದು ಕೆಡೆದು ಧರಣಿಗೆ ಬೀಳೆ
ಭಾವಿಪೊಡಜ ಪ್ರತಿಮೆ ಬಿರಿದು ಜಗ್ಗನೆ ಜರಿಯೆ
ಮೂವತ್ತುಮೂದೇವರ್ಕೆದೆ ಸುಗಿದುಂ ಬಿರಿಯೆ
ವರ ಸಪ್ತಮಾತೃಕೆಯುರುರಿದು ಮಣ್ಣೊಳ್ಬೆರೆಯೆ
ನೆರೆದಷ್ಟ ವಸುಗಳೆಲ್ಲಂ ಫಳಫಳನೆ ಬಿರಿಯೆ
ನೊಸಲೊಳಗೆ ಪುಟ್ಟಿ ಕಡುಗೋಪದಿಂದಂ ಬೆಳೆದು
ಪಸರಿಪ ಪ್ರತಿಮೆಗಳ ಛಾಯ್ವಣ್ಣೆಯುಂ ತಳೆದು
ಉರವರಿಯೆ ನಡೆಗಲಿತು ಭುಗಿಲೆಂದು ನುಡಿಗಲಿತು
ಪುರ ಉರಿಯೆ ನೋಡಿದನ ಚಾರಿತ್ರಮುಂ ಕಲಿತು
ಸುತ್ತಣ ಪ್ರತಿಮಾದಿಗಳ್ಪೇಳ ಪೆಸರಿಲ್ಲ

ಎತ್ತಲುಂ ನೋಡೆ ಭಾವಿಪೊಡಲ್ಲಿ ರೂಪಿಲ್ಲ
ದಿರಲಲ್ಲಿ ಮಿಕ್ಕು ಪೊರಗಂ ನೋಡಲನುಮಾಡೆ
ಹರನೆಯ್ದಿ ಕಂಡು ಹೋ ಹೋ ಮಗನೆ ನಿನ್ನೋಡೆ
ಪುರ ಉರಿದು ಜರಿದು ಧರೆಯುರಿವುದಿನ್ನೆಲೆ ಮಗನೆ
ನರರೋರ್ವರುಳಿಯದಂತಪ್ಪುದಿನ್ನೆಲೆ ಮಗನೆ
ಬೇಡೈಯ್ಯ ಬೇಡೆಂದು ಘುಡಿಘುಡಿಪ ಭಾಳಕ್ಕೆ
ನೋಡೆ ಶಿವನಂದು ನಂದಿಯ ಮೊಗಪಡವನಿಕ್ಕೆ
ಗವಸಣಿಕೆಗವಿದ ಕಾಲಾಗ್ನಿಯಂದದೊಳಿರ್ದು
ಶಿವನ ಮುಂದಪ್ರತಿಹತ ಪ್ರಭಾವದೊಳಿರ್ದು
ಕೋಪಮುಂ ಮೆಲ್ಲನೊಳಗೊಳಗೆ ಕಾಣಿಸಿಕೊಂಡು
ಆ ಪರಮ ನಿರುಪಮುಂ ಶಾಂತತೆಯನೊಳಕೊಂಡು

ದೇವ ಎನಗೊಂದು ನಾಮವನಿಡುವುದೆಲೆ ತಂದೆ
ಗೋವಿಂದನೆಂಬ ನಾಮಕ್ಕಾರಿನೆಲೆ ತಂದೆ
ಎನಗೆ ಎನ್ನಯ ಸತಿಗೆಯೊಂದು ಪೆಸರಂ ಕೊಟ್ಟು
ತನಿ ನೇಹದಿಂ ನಿಮ್ಮ ಕರುಣಮುಂ ಮುಂದಿಟ್ಟು
ಕರುಣಿಸುವುದೆನೆ ಹರಂ ಮಗನನಪ್ಪುತ್ತಲ್ಲಿ
ಸುರಿವಶ್ರು ಜಲದಿಂದ ನೆನೆದು ನೋಡುತ್ತಲ್ಲಿ
ಎನ್ನಂತೆ ಎನ್ನ ಪೆಸರಾಗಿ ಜಗದೋಳ್ಮೆರೆದು
ಉನ್ನತ ವಿಲೋಚನಂ ಸಾಮರ್ಥ್ಯವುಮನರಿದು
ಧರೆಗೆ ಶಂಕರದಾಸಿಮಯ್ಯನಾಗಿರು ಮಗನೆ
ಶರಣೆ ಶಿವದಾಸಿಯಾಗಿರ್ಕೆ ನಿನಗೆಲೆ ಮಗನೆ
ಎಂದು ಕರುಣಿಸಿಕೊಟ್ಟು ಲಿಂಗದೊಳ್ಪುಗಲಲ್ಲಿ

ಇಂದುಧರನಾಜ್ಞೆಯುಂ ಕೈಕೊಂಡು ನಿಲಲಲ್ಲಿ
ಉಗ್ರನಸಮುಗ್ರ ಪ್ರತಾಪರೂಪಿನ ತೆರದಿ
ಉಗ್ರಲೋಚನನ ಪುರಹರನ ಕೀರ್ತಿಯು ತೆರದಿ
ಹೊಸಮುಸೆ ತ್ರಿಶೂಲಕ್ಕೆ ನೊಸಲಕಣ್ಣೊಗೆದಂತೆ
ಅಸಮನಯನಕ್ಕೆ ಕರ ಚರಣ ಒಲ್ದೊಗೆದಂತೆ
ಸಿಡಿಲ ಸಂಗಡಕೆ ಬರಸಿಡಿಲೊಡಂಬಡುವಂತೆ
ಮೃಡನ ಸಾಮರ್ಥ್ಯಕ್ಕೆ ಕಣ್ದೆರವೆಯಾದಂತೆ
ತರಣಿ ಬಿಂಬದ ಹಿಂಡು ನೊಸಲ ಮರೆಪೊಕ್ಕಂತೆ
ಉರಿವಗ್ನಿ ಹೆರೆ ನೊಸಲ ಹಸೆ ಏರಿ ನಿಂದಂತೆ
ವಡಬಾಗ್ನಿ ದಾವಾಗ್ನಿ ಸಂಗಡಂಗೊಂಡಂತೆ
ಕಡುಪಿನಿಂ ಕಾಲಾಗ್ನಿ ಹಣೆಗೊಂಡು ನಿಂದಂತೆ
ಮುಗಿಲ ಮರೆಯೊಳ್ಮೇಘಪಾವಕಂ ನಿಂದಂತೆ
ಬಗೆಯೊಳರಿವಿನ ಮರೆಯು ನಿಜದ ಬೆಳಗಿರ್ಪಂತೆ
ಮೆರೆವ ನಂದಿಯು ಮೊಗವಡದ ಮರೆಯ ಕಣ್ಣೊಪ್ಪೆ
ಕರೆಗೊರಲನಾಜ್ಞೆ ಮುಸುಕಿದ ನೊಸಲ ಕಣ್ಣೊಪ್ಪೆ
ಇಂತು ಶಂಕರದಾಸಿಮಯ್ಯನೊಪ್ಪುತ್ತಮಿರೆ
ಸಂತತ ಮಯೂರಪುರದೊಳಗೆ ಒಪ್ಪುತ್ತಮಿರೆ

**ಪ್ರಥಮಸ್ಥಲ ಸಮಾಪ್ತ.**

## ದ್ವಿತೀಯಸ್ಥಲ.



**ವೃತ್ತ:**— ಸದಮಲಸೂರ್ಯನಂತೆ ಬಿಸಿಗಣ್ಣಿನ ಕೋಪದ ಪುಂಜದಂತೆ ಕಾ। ಹೊದವಿದ ತೇಜದಂತೆ ಯೊರೆಯುಚ್ಚಿದ ಶೂಲಿಯು ಖಡ್ಗದಂಡೆ ರೌ। ದ್ರದ ನಿಜರೂಪಿನಂದದಿ ಭಯಂಕರ ಶಂಕರದಾಸಿಮಯ್ಯನೊ। ಪ್ಪಿದನತಿ ಭೀಕರಂ ನತಕೃಪಾಕರವೀರ ತನೋ ದಿವಾಕರಂ ॥

**ವಚನ:**— ಇಂತೊಪ್ಪೆ ಜಡೆಯ ಶಂಕರನಂ ಕಂಡು ಭಕ್ತ್ಯಾವೃತವನುಂಡು ಪ್ರತಾಪಮಂ ಕೊಂಡು ನೊಸಲ ಕಣ್ಣಂ ಪಡೆದು ಪ್ರತಿವ್ಯಾದಿಗಳನೊಡೆದು ಪರಸಮಯದ ಗರ್ವಮಂ ಮುರಿದು ದುರಿತ ಕುಲಮಂ ಜಡಿದು ಭವ ವೃಕ್ಷಮಂ ಕಡಿದು ಪುಣ್ಯಪರಿಮಳನುಂ ಮುಡಿದು ನಂದಿಯ ಮೊಗವಾಡವಂ ಪಡೆದು ಉತ್ತಮಾಂಗದ ಶಿವಲಿಂಗದ ಸೊಬಗಂ ಜಡೆಗಳ ಬೆಡಂಗಂ ಭಾಳಾಂಬಕದ ಭಯಂಕರಂ ಸತ್ಯದ ಸಾರ್ವಭೌಮಂ ಸಾಹಿತ್ಯದ ಭೂಷಣನೆನಿಪ ಶಂಕರದಾಸಿಮಯ್ಯಂ ಶಂಕರಾನುಗ್ರಹನಿಶ್ಶಂಕಂ ಶೈವ ಪ್ರತಾಪತೇಜಃಪ್ರಭಾಕರ ಕಿರಣನಾಗಿ ರಂಗಮಂಟಪದೊಳ್ವಿಜಯಂಗೆಯ್ದಿರೆ ಮಯೂರಪುರ ಜನಮುಂ ಪರಮ ಭಕ್ತರುಂ ಹರಕರುಣವಾದುದನರಿದು ಭಾಳಲೋಚನನಮಂ ಪಡೆದುದ ಕಂಡು ಪುರದೋಳ್ಮೆರೆಯಿಸಿ ತಮ್ಮ ನಿಳಯಂಗಳ್ಗೆ ಬಿಜಯಂಗೈಸಿ ಧನಧಾನ್ಯಮಂ ದುಕೂಲಮಂ ತಂದಾರಾಧಿಸಲು

ಇವೆಲ್ಲವನೊಲ್ಲೆಂ ಯಾಯಾವರಂ ತಕ್ಕುದ ತಂದು ಜಡೆಯ ಶಂಕರಂಗಿತ್ತು ಪ್ರಸಾದಮಂ ಕೊಂಡು ಸುಖದೊಳಿರ್ಪುದಲ್ಲದೆ ಪರರರ್ಥವಂ ಹೊದ್ದುವ ಸಿರಿಯುತನಂ ಬೇಡ. ಆರಾಧಿಸಿಕೊಳ್ಳೆಂಬ ಭಾರಕ್ಕಾನಾರೆನೆಂದೊಲ್ಲದೆ ಧೈರ್ಯಸಿಧಿ ಮಾಯಾನಿರಹರಣಂ ನಿತ್ಯತೃಪ್ತಂ ಭಕ್ತಿಯುಂ ಬೀರದೆ ಶಿವನೊಲವಂ ತೋರದೆ ಸಂಸಾರಮುಂ ನಟಿಯಿಸಲೆಂದೊಂದು ಮನೆಯೊಳ್ಧಾನ್ಯಮಂ ತರಲೆಂದು ನಡೆತಂದು ಧಾನ್ಯವಂ ಬೇಡೆ ಕೇಳ್ದಾ ಮನೆಯವಜೋಳವಿಲ್ಲದೆ ಶಂಕರಗಂಡಂ ಪಿರಿದೈಯ್ಯಾ ಪಿರಿದೆಂದು ನುಡಿಯೆ ಜೋಳದ ಪೆಸರ್ಶಂಕರಗಂಡನ ಪೆಸರೆ ಮುನ್ನರಿಯೆನರಿಯೆಂ ನಿನ್ನೊಳ್ಲೆನೊಲ್ಲೆಂ ಶಂಕರನ ಪೆಸರ್ಗೆ ಶರಣೆಂಬುದಿಂತು ಮಾಡಲಾಗದೆಂದು ಭಯಭಕ್ತಿಭರಿತಂ ಶಿವಲಿಂಗನಿಷ್ಠಂ ಶಂಕರನಾಮ ದಶಾವಸ್ಥಂ

ನಡನಡುಗಿ ಜಡೆಯಶಂಕರನಲ್ಲಿಗೈತಂದೆಲೆ ದೇವ ದೇವ ಚಂದ್ರಧರ ಸಕಲ ಸಸ್ಯಾಧಿಪತಿಯೆ ಜೋಳದ ಪೆಸರುಂ ನಿನ್ನ ಪೆಸರಾಗಿರ್ದಪುದು ಎನಗ ರಿದೆಂದು ಕೇಳೆ ವಾಳಿಯುವನಲ್ಲದೆ ಜೋಳವಾಳಿಯುವನಲ್ಲಲ್ಲ ದೇವ ಇಂದು ಮೊದಲ್ಗೊಂಡು ಧಾನ್ಯಮಂ ತರ್ಪುದೆನ್ನಿಂದಾಗದೆಲೆ ದೇವ ಎನೆ ಪನ್ನ ಗಾಭರಣಂ ನೀನೊಲ್ದಂತೆನ್ನಂ ಸಲುಹುವುದೆಂದು ಬಿನ್ನೈಸೆ ತನ್ನಣುಗನ ನಿಷ್ಠೆಗೆ ಲೋಕೈಕನಾಥಂ ಸಾಕಾರ ಸುಧಾವರುಷಂ ಹರುಷಪುಳುಕಿತ ನಾಗಿ ಎಲೆ ಮಗನೆ ನಿಶ್ಶಂಕ ಶಂಕರದಾಸಿಮಯ್ಯ ನೀನೊಲ್ಲದೋಗರಂ ನಮಗೇಕೆ ನಿನಗೆ ಸುಖವಾಗಿರ್ಪ ಲೋಕವಿರೋಧವಾಗಿರ್ಪ ಲೋಳಿಸ ರದ ಹಳುಕುಮಂ ಜೀರ್ಣಚೂರ್ಣಮಂ ಗುಂಜಾಸುಬೀಜಮನೊಂದು ಗೂಡಿ ಅರೆದು ಎಮಗಿತ್ತುದಂದಿಂಗೆ ಪ್ರಸಾದಮಂ ಕೈಕೊಂಡು ನಿತ್ಯ ತೃಪ್ತತೆಯನೊಳಕೊಂಡು ಪ್ರಸಾದ ಪಥ್ಯ ಹೃದಯನಾಗಿ ಸುಖದೊಳಿ ರ್ಪುದೆಂದು ಯಾಯಾವರಕ್ಕೆ ಶಿವಾಲಯದೋಳ್ಪಟ್ಟಿರ್ದ ವಕ್ರಪಾದ ನೆಂಬ ಭೃತ್ಯನಂ ಕರುಣಿಸಿಕೊಡಲೊಡಂ ಶಂಕರದಾಸಯ್ಯ ನೆನೆದ ಬಯಕೆ ಮನವನಿಂಬುಗೊಂಡು ಗುಂಜಾದಿ ತ್ರಯ ವಿಷಕ್ರಿಯಾಯುಕ್ತಂ ಶಂಕರಾ ರ್ಪಿತ ಪ್ರಸಾದ ಜೀವಿಯಾಗಿ ಸುಖತೃಪ್ತಿಯಿಂ ತೇಗಿ ಪರಿಣಾಮದಿಂ ಬೀಗಿ ಜಡೆಯ ಶಂಕರನಿಂ ಶಂಕರದಾಸಂ ನೊಸಲಕಣ್ಣಂ ಪಡೆದನೆಂಬ ಕೀರ್ತಿ ಲೋಕಪ್ರಸಿದ್ಧವಾಗೆ ತದ್ವಾರ್ತೆಯಂ ಕೇಳ್ದಿತ್ತ ಮುದನೂರೊಳು ಜೇಡರ ದಾಸೈಯ್ಯಂ ರಾಮನಾಥ ಪ್ರಸಾದ ಸಗರ್ವಹೃದಯಂ ಶಿವನಿಂ ತವ ನಿಧಿಯಂ ಪಡೆದೊಂದು ದಿವಸಂ ಶಿವನಂತೆ ಕೊಡುವರುಂ ಎನ್ನಂತೆ ಪಡೆ ವರಿಲ್ಲೆಂಬ ಗರ್ವಂ ತನ್ನ ಮನದೋಳ್ಪೊಳೆಯೆ ಮನಸಿಜಹರನೀತನ ಗರ್ವಮಂ ಕಂಡು ತನ್ನಿಂದಧಿಕನಂ ಕೊಂಡೊಯ್ದು ತೋರ್ಪೆನೆಂದು ಶಿವಂ ಸರ್ವಜ್ಞಂ ನಿಜ ಶರಣ ಪ್ರಣಯ ಕಲಹ ಲೀಲಾಲೋಲಂ ಕನಸಿನೊಳ್ಬಂದೆಲೆ ಮಗನೆ ಶಂಕರದಾಸಯ್ಯ ನೀನೊಂದೆಡೆಯೊಳಿರದೆ ಸಮಸ್ತ ಶಿವಪುರಂಗಳಂ ಪೊಕ್ಕು ದಿವ್ಯ ಸ್ಥಾನವಂ ಕಂಡು ಸದ್ಭಕ್ತರಂ ನೋಡಿ ಸಾಮರ್ಥ್ಯಮಂ ತೋರಿ ಪ್ರತಾಪಮಂ ಬೀರಿ ಮರಳ್ದು ಬರ್ಪು ದೆಂದು ಬೆಸಸಿ ಬಿಜಯಂಗೈಯ್ಯಲೆಚ್ಚತ್ತು ಕವಿತರ್ಪಾನಂದಾಶ್ರುಗಳುಮಂ ಏಳ್ತರ್ಪ ಪುಳುಕಂಗಳುಮಂ ಎಂತಕ್ಕೆ ಸಂತೈಸಿಕೊಳುತ್ತಂ ಜಡೆಯ ಶಂಕ ರನಂ ಬೀಳ್ಕೊಂಡು ಶಿವದಾಸಿಯಂ ಪಿಂತಿಕ್ಕಿಕೊಂಡು ಗುಂಜಾದಿವಿಷ ತ್ರಯಂ ವಕ್ರಪಾದನ ಶಿರದೊಳಿಟ್ಟು ನವಿಲೆಯಿಂ ಪೊರಮಟ್ಟು ಒಡನೆ

ಬರ್ಪ ಹರಭಕ್ತರಂ ಮರಳಿ ಕಳುಪಿ ದಕ್ಷಾಧ್ಯಕ್ಷಂ ಕ್ಷುದ್ರದೈವ ವಿದ್ರಾವಣಂ ಅನುಚಿತ ದೈವತಪನಂ ದರ್ಪಿತದೈವ ಧರಾಧರಪವಿ ದೈನ್ಯ ದೈವಕೃಪಾಮೇರುವೆನಿಸ ಶಂಕರದಾಸೈಯ್ಯಂ ಪಶ್ಚಿಮಾಭಿಮುಖನಾಗಿ ನಡೆತರುತಂ

ನೋಡಿದರ್ಗೆ ಶೈವಸಂಪದಮನೀವುತಂ ನುಡಿಸಿದರ್ಗೆ ಧರಣೀಶ್ವರತ್ವಮಂ ಕರುಣಿಸುತ್ತುಂ ಮೆಟ್ಟಿದ ಪ್ರಾಣಿಗಳಂ ಸ್ವರ್ಗಕ್ಕೆ ಕಳುಪುತಂ ಮುಟ್ಟಿದರಂ ಮುಕ್ತಿಗೆ ಕಳುಪುತಂ ಕೆಲವೆಡೆಗೈದು ಪಲವೂರ್ಗಳಂ ಕಳೆದು ದಾಸನ ಮನದ ಗರ್ವಮಂ ಬಿಡಿಸಿ ತವನಿಧಿಯಂ ಪೇರ್ಚಿಸಲೆಂದು ಶಿವಭಕ್ತಿಭೂಷಣರೆನಿಪ ಪುರಾತನರ ವೃದ್ಧಾಚಾರ ಭಕ್ತಿರಸಂ ಮಡುಗಟ್ಟಿದಂತಿರ್ದ ಮುದನೂರ ಪುಗುತರ್ಪಾಗಳ್ ಮಗಧ ಮಾಳವ ವಂಗ ಬಂಗಾಳ ತೆಲಗು ಗುರ್ಜರ ಮೊದಲಾದ ನಾನಾ ದೇಶಂಗಳ್ಗೆ ಪಿಡಿದು ಪೋಪ ಹಿಂಡುಗೊಟ್ಟಿಗೆಯ ತಂಡಂಗಳಂ ತಲೆಹೊರೆಯ ಜನಂಗಳಂ ಬಂಡಿಗಳೊತ್ತೊತ್ತೆಯಂ ದಾಸಂಗೀಶನಿತ್ತ ತವನಿಧಿಯ ಸಂಭ್ರಮದ ಸಂದಣಿಗೆ ಮನದೊಳ್ಸಂತಸಂ ಬಡುತ್ತಂ ಮುದನೂರಂ ಪೊಕ್ಕು ರಾಮನಾಥನಂ ಕಂಡೆರಗಿ ಆ ಶಿವಾಲಯದ ಹತ್ತಿರೆ ಬೀಡಾರಮಂ ಬಿಟ್ಟು ಶಂಕರದಾಸಯ್ಯಂ ಪಥಶ್ರಮಭರನಾಗುತ್ತಲಿರೆ ಇದಂ ಕೇಳ್ದು ಜೇಡರ ದಾಸೈಯ್ಯಂ ಬಂದು ವೈಯ್ಯಿಕ್ಕಿ ಕೆಯ್ಯ ಮುಗಿದು ರವಿ ಹತ್ತಿರೆ ಚಂದ್ರಮಂ ಕುಳ್ಳಿರ್ಪಂತೆ ಕೆಲದೊಳ್ಕುಳ್ಳಿರ್ದು ಶಿವಕಥಾಗೋಷ್ಠಿಯಿಂ ಕಿರಿದು ಪೊಳ್ತಂ ಕಳೆದು ಹರುಷೋದಯರಾಗಿರ್ಪ ಸಮಯದೊಳ್ ಶಿವದಾಸಿಯರು ಎಲೆ ಮಗನೆ ಧಾನ್ಯಕ್ಕೆ ಬಿಜಯಂಗೆಯ್ಯೆಂದು ವಕ್ರಪಾದಂಗೆ ಪೇಳಲಾ ಮಾತಂ ಕೇಳ್ದು ಜೇಡರ ದಾಸೈಯ್ಯಂ ಶಿವಕಾರುಣ್ಯ ಸಗರ್ವಹೃದಯಂ ತವನಿಧಿಯುಂಟೆಂಬ ಗರ್ವದಿಂ ಮುಂಗಾಣದೆ ಮೇಲನರಿಯದೆ ಶಿವಭಕ್ತರ್ಪಿರಿಯರ್ಗೆ ಪಿರಿಯರುಂಟೆಂಬುದನರಿಯದೆ ಶೀತಕರಂಗೆ ತಂಪನೀವಂತೆ ಭಾಸ್ಕರಂಗೆ ಬೆಳಗಂ ಕುಡುವಂತೆ ವಹ್ನಿಗೆ ಉಷ್ಣವಂ ಕುಡುವಂತೆ ಕೈಮುಗಿದು ದೇವರಾರೋಗಣೆಗೆ ಧಾನ್ಯಮಂ ತರಪುಗಲೇಕೆ ಎನ್ನ ಮನೆಯೊಳ್ಸಕುಮಾರ ಧಾನ್ಯಮುಂಟು ಇಲ್ಲಿ ನೀವಿರ್ಪನ್ನೆವರಂ ಧಾನ್ಯಕ್ಕೆ ಪೋಗಲಾಗದು ನಿರೋಧಂಬೇಡ ಹತ್ತು ಇಪ್ಪತ್ತು ಸಾವಿರ ನೆಲ್ಲಹೇರಂ ಕಳಿಪುವೆಂ ಅವಂ ಕೈಕೊಳ್ವುದೆಂದು ಸ್ವಾಧೀನತೆ ಮಿಕ್ಕು ಸ್ನೇಹರಸದೊಡನೆ ಸಂಪನ್ನತೆಗೂಡಿ ಬಿನ್ನಪಂಗೆಯ್ಯೆ ಶಂಕರಧ್ಯಾನಮನಿತುಬೇಗಂ ಮಾಣ್ದಂಕುರಿಸಿದಾ

ಕ್ಷೇಪದ ಮೇಲೆ ಪಲ್ಲವಿಸಿದ ನಸುಗೋಪಂ ಬೆರಸಿ ಮುಗುಳ್ನಗೆ ಮೊಗ
ದೊಳಲರೆ ನೋಡಿ ನುಡಿದನಕ್ಕಕ್ಕ ಬಡ ಭಕ್ತರ್ಗೆಮಗೆ ನೆಲ್ಲೆಲ್ಲಿರ್ಪುದು
ವಿರಂಚಿಯ ವಕ್ತ್ರಮಂ ಚಿವುಂಟೆ ಮೃತ್ಯುವಿನ ಮನೆಯಂ ಮುತ್ತಿ ಹರಿಯ
ನೊಸಲರುಣ ಜಲಮಂ ಭಿಕ್ಷಾಪಾತ್ರೆಯೊಳ್ತೀವಿ ವಿಷ್ವಕ್ಸೇನನನಿರಿದೆತ್ತಿ ತಿರಿ
ದಾಡಿದನ ಮಕ್ಕಳ್ಗೆ ಸಿರಿಯಲ್ಲಿಯುದೆಲೆ ದಾಸ ನೀಂ ಕೊಡುವವ ನಾಂ
ಕೊಳ್ವವನುಂಟುಂಟೆಂದು ನಸು ಕಟಕಿಯನಾಡುತ್ತೇಳ್ದು ಬಂದು ಬೀಡಾ
ರದ ಮನೆಯ ಮುಂದೊಪ್ಪುವ ತಿಪ್ಪೆಯನಾತಂ ತೆಗೆಯಿಸಿ ಪೊನ್ನ ಕಡ
ವರಂಗಳಂ ತೋರಿಸಿ ನಿನಗೆ ಬೇಳ್ಪನಿತಂ ಕೊಳ್ಳು ಕೊಳ್ಳೆಲೆ ದಾಸ ಕೊಳ್ಳೆ
ನುತ್ತ ನಿನ್ನ ನಾಲ್ವೆರಲ್ನೆಲ್ಲ ಜಳ್ಳಿಗೆ ತಕ್ಕ ಮುರುಕವಲ್ಲ ತವನಿಧಿಯಂ
ಕೊಟ್ಟ ದೇವಂ ತಾನೇ ಕೊಂಡಹಂ ನೀಂ ಪೋಗೆಂದು ಶಂಕರದಾಸ್ಯೆಯ್ಯಂ
ಜಡಿದು ನುಡಿಯೆ

ಜೇಡರ ದಾಸಯ್ಯಂಗೆ ಭೀತಿ ಬಲಿದು ಬೆರಗು ರೂಪುಗೊಂಡು
ಕೌತುಕಂ ಪುಟ್ಟಿ ಜಾತಭಯಂ ಜಕ್ಕುಲಿಸಿ ಕಂದಿದ ರವಿಯಂತೆ ಕಳೆ
ಯೊಡೆದ ಚಂದ್ರನಂತೆ ಮರುಳಂತೆ ಮರೆದು ಶೂನ್ಯ ಹೃದಯನಾಗಿ
ನಿಂದಿರಲಮ್ಮದೆ ಮೆಲ್ಲಮೆಲ್ಲನೆ ನಿಜನಿಳಯದತ್ತ ಬರುತಿರ್ದ ದಾಸನಂ
ಕಂಡಿದೇನಿದೇನೊಳಗೆ ತವನಿಧಿ ಕವಲಾಯಿತ್ತು ಪೊರಗೆ ಭಕ್ತಿರಸಂ ಬರಿ
ದಾಯಿತ್ತು ಮುಖದ ನಯಂ ಹಾರಿತ್ತು ಕಣ್ಣುಗಳ ಕಾಂತಿ ಜಾರಿತ್ತು
ಸತ್ಯಶರಣರ ಕೂಡುತ್ತರಂಗೊಟ್ಟರೇಕೆ ಅಲ್ಲದಿರ್ದೊಡಿನಿತಾಗದೆಂದು ನುಡಿಯೆ
ದಾಸಂ ಕೇಳ್ದು ಶಿವಭಕ್ತಿಸಂಪನ್ನ ಅಗ್ಗಳದ ದುಗ್ಗಳೆ ನೀನೆಂದಂತೆ ಶಂಕರ
ದಾಸನೊಳ್ಸಲುಗೆಯಂ ಮಾಳ್ಪರೇ ನಮ್ಮ ಭಕ್ತಿ ಎನಿತು ನಾವೇತರವರು
ರಾಮನಾಥನಾ ಪೊಳ್ತೇನಂ ಮಾಡಿದಪನೆಂದಾರರಿವರು ಇಂತಿದಲ್ಲಲ್ಲ
ನಡೆಯೆಂದು ಸದ್ಭಕ್ತಿಗೂಡಿ ಶಾಂತಿಭೂಷಣೆ ಶಿವೈಕನಿಷ್ಠೆ ಏರಿ ಮೆಲ್ಲ
ಮೆಲ್ಲನಲ್ಲಿಂ ತೊಡಗಿ ಪ್ರೈಯಿಕ್ಕುತಂ ಬಂದು ಚಿತ್ತದಭಯಮಂ ಮನದ
ಲಲ್ಲೆಯುಂ ಮುಖದ ಕಾರ್ಪಣ್ಯಮುಂ ದಿಟ್ಟಿಯ ದೈನ್ಯಮುಂ ಬೆರಸಿ
ದಾಸಂ ಶಂಕರದಾಸ್ಯೆಯ್ಯಗಳ ಪದತಳದೊಳ್ ಧೊಪ್ಪನೆ ಬೀಳ್ದು ದೇವಾ
ಶಿಸುವಿನೊಳ್ಪ್ರೀತಿಯುಂಟೆ ಪಶುವಿನೊಳ್ಬುದ್ಧಿಯುಂಟೆ ಮತಿಹೀನಂಗೆ ಮನ್ನ
ಣೆಯುಂಟೆ ದೀನಂಗೆ ದಾಕ್ಷಿಣ್ಯಮುಂಟೆ ಕ್ಷೀಣಂಗೆ ಜಾಣ್ಮೆಯುಂಟೆ ಭಕ್ತಿ
ಇದ್ದೆಡೆಯೊಳ್ಭಯಮುಂಟೆ ಎನ್ನೊಳ್ಗುಣವನರಸುವರೆ ತೊಳ್ತಿನೊಳ್ತಪ್ಪನರ
ಸುವರೆ ಸತಿಯಪರಾಧಮಂ ಪತಿ ನಿರೀಕ್ಷಿಸುವರೆ ಕೃಪಾಸಮುದ್ರ ಕರುಣಿ

ಕರುಣಿಸುವುದೆಂದು ಮತ್ತೆ ಮತ್ತೆ ಸೈಗೆಡೆದು ಬೀಳ್ದ ದುಗ್ಗಳೆಯುಂ ಶಿವ
ಭಕ್ತಿಭರಿತಂ ಕಿಂಕುರ್ವಾಣ ಭಕ್ತಿರಸದೊಳಗೆ ನೋಡಿ ದಾಸನ ಮೇಲಣ
ಮುನಿಸುಂ ನಿಮಿಷದೊಳ್ಪೋಗೆ ಕರುಣಿಸಿ ಶಿರದ ಮೇಲೆ ಶ್ರೀಹಸ್ತಮ
ನಿಟ್ಟು ರಾಮನಾಥಂ ಕೊಟ್ಟಸಾರ ತವನಿಧಿಯುಂ ಒಳಗಣಿಂದ ತೆಗೆ
ತರ್ಪೆನೆಂಬ ಭ್ರಮೆಯುಂ ಬಿಟ್ಟು ಇಂದು ಮೊದಲಾಗಿ ಮೇಲಣಿಂದುರ್ಕುತ್ತೆ
ಬರಲೆಂದು ವರವಂ ಕೊಟ್ಟು ಅವರೀರ್ವರಂ ಕಳುಪೆ ನಿಜಸಿಳಯಕ್ಕೆ
ಬಂದುಕ್ಕಿ ನೆಗೆವ ತವನಿಧಿಯಂ ಕಂಡು ದಾಸದುಗ್ಗಳೆಯರ್ಗೆ ಹರುಷಂ
ದಳವೇರಿ ಶಿವಭಕ್ತನೋಳ್ನಂಬುಗೆ ನೂರ್ಮಡಿಸಿ ನಿಜನಿಳಯದೊಳು
ಶಿವನಂ ಓಲೈಸುತ್ತಿರಲಿತ್ತ ರುದ್ರಾವತಾರನಪ್ಪ ಶಂಕರದಾಸೈಯ್ಯಂ ಗವ
ಸಣಿಗೆಗವಿಸಿದ ಪಾಶುಪತಾಸ್ತ್ರದಂತೆ ಮೊಗವಡದ ಮಹಿಮಂ ಸದಮಳ
ನಿಳಯಂ ಮುದನೂರೊಳಿರ್ದನತ್ತಲು

ಜಯಸಿಂಹರಾಯನಿರ್ಪ ಕಲ್ಯಾಣದೊಳಂ ದರ್ಭೆಯ ನಿರ್ಭಾಗ್ಯರುಂ
ವೇದವಾದಿಗಳುಂ ಕೊಂಡೆಯರುಂ ತರ್ಕದ ತಾಮಸರುಂ ಯಜ್ಞದ
ಅಜ್ಞಾನಿಗಳುಂ ತಿಲದಾನದ ಕುಲಹೀನರುಂ ಮಹಿಷದಾನದ ಸಾಹಸಿ
ಗಳುಂ ಕಾಳಾಮುಖದಾನದ ದಾಳಿಕಾರರೆನಿಪ ದಾನಯಾಚಕರೆನಿಪ
ನೀಚರುಂ ನೆರೆದು ಬಂದರಸಂಗೆ ಆಶೀರ್ವಾದಮಂ ಕೊಟ್ಟು ಎಲೆ ದೇವ
ನವಿಲೆಯೊಳೋರ್ವ ಶಂಕರದಾಸೈಯ್ಯನೆಂಬಾತಂ ನೊಸಲಕಣ್ಣಂ ಪಡೆದು
ಪರದೈವ ಪ್ರತಿಮೆಗಳಂ ದಹಿಸುವ ಬಿರುದಿನ ಅತ್ಯಾಸುರಂ ಮಾಡಿ
ಕೊಂಡಿರ್ಪನೀಗಳ್ಮುದನೂರೊಳಿರ್ದಪನವನಂ ನಮ್ಮೂರ ತಮ್ಮಡಿಗಳ
ಕೂಡೆ ಕರೆಯಿಸಿ ಹಿರಣ್ಯಕಶ್ಯಪಮದಭಂಜನಂ ನಾರಸಿಂಹಂ ಬಾಯ್ದೆರೆ
ದಿರ್ದಪ ತನ್ಮೂರ್ತಿಯಂ ನೊಸಲಕಣ್ಣ ನೋಡಿಸಿ ಭಕ್ತರ ನುಡಿಯ
ಪೇರ್ಬುಸಿಯ ಪುಸಿಕಂಗಳಂ ನೋಡಲಕ್ಕುಮೆನೆ ಅರಸಂ ಕೇಳ್ದು ಮಾತಿಂಗೆ
ನರಿಯ ಗೀತಕ್ಕೆ ಬಳ್ಳು ತಲೆದೂಗಿದಂತೆ ತಲೆದೂಗುತ್ತಂ ಒಡಂಬಟ್ಟು
ತಲೆದೂಗಿ ಸತ್ಯ ಶರಣನಚ್ಚ ಸಾಮರ್ಥ್ಯವನರಿಯದ ಸ್ವಾಮಿದ್ರೋಹಿಗ
ಳೆಲ್ಲರ್ನೆರೆದು ಆ ಪಟ್ಟಣದ ತ್ರಿಪುರಾಂತಕ ದೇವರ ಸ್ಥಾನಿಕರಂ ಕರೆಯಿಸಿ
ನೀವಿಂದು ಪೋಗಿ ಮುದನೂರೊಳಿರ್ದ ಶಂಕರದಾಸಯ್ಯನಂ ಒಡ
ಗೊಂಡು ಬನ್ನಿರೆಂದರಸಂ ಪೇಳೆ ಕೇಳ್ದು ತಮ್ಮಡಿಗಳ್ಮುದನೂರ್ಗೆ ಬಂದು
ಸತ್ಯಶರಣನಂ ಕಂಡು ದೇವ ದೇವ ಕಲ್ಯಾಣದ ತ್ರಿಪುರಾಂತಕ ದೇವರೇ

**ವಚನ:**— ೨೧. ಕಾಳಗಕ್ಕೆ ಹೋಗದಿರಯ್ಯ ಕಲ್ಲು ಗುಂಡು ತಾಕಿಹವು. ಆರು ದರ್ಶನಗಳಿಗೆ ನಿಮ್ಮನ್ನು ತೋರದಿರಯ್ಯ. ನಾಲ್ಕು ವೇದ ಹದಿನೆಂಟು ಪುರಾಣವೆಂಬುವರ ಬೆನ್ನ ಹತ್ತದಿರು. ಬೇರೆ ತೀರ್ಥ ಯಾತ್ರೆ ಎಂಬುವ ಆಧ್ಯತನ ಬೇಡ. ಪುಣ್ಯ ಪಾಪವೆಂಬವೆರಡು ಭಾಂಡಾರವನು ಬೆನ್ನಿನಲ್ಲಿಕ್ಕಿಕೊಂಡು ಬಾರದಿರು ನೀನು. ನಿನ್ನಲ್ಲೇ ನೀನು ತಿಳಿದು ನೋಡು ಜಗದೊಳಗೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಶಕ್ತಿಗಳನ್ನು ಅಧೀನದಲ್ಲಿ ಇಟ್ಟುಕೊಂಡು ವರ್ತಿಸಿದರೆ, ಅವನಲ್ಲಿ ಪುಣ್ಯ ಪಾಪಗಳು ಉಂಟಾಗಲಾರವು ಎಂಬದನ್ನು ವಚನಕಾರನು ಇದರಲ್ಲಿ ವಿವರಿಸಿ ನುಡಿದಿರುವನು. ಇದು ಉಂಟಾದಲ್ಲಿ ಅವನಿಗೆ "ನಿನ್ನಲ್ಲಿ ನೀನು ತಿಳಿದು ನೋಡು" ಎಂಬುವದನ್ನು ತಿಳಿಯುವ ಸ್ಥಿತಿಯು ಪ್ರಾಪ್ತವಾಗುವದು.

ಇಲ್ಲಿ ಅವನು ಕಾಳಗಕ್ಕೆ ಹೋಗದಿರು ಎಂದು ಹೇಳಿದ್ದಾನೆ. ಯಾಕಂದರೆ ಅಲ್ಲಿ ಗಾಸಿಯಾಗುವದೇ ನಿಜವು. ಅದೇ ಪ್ರಕಾರ ಪ್ರಪಂಚದ ಜಂಜಡದಲ್ಲಿ ಸೇರಿವರೆ ಮನುಷ್ಯನು ಗಾಸಿಯಾಗವೆ ಇರನು. ಅದೇ ಪ್ರಕಾರ ಆರು ದರ್ಶನಗಳಿದ್ದು ಅವುಗಳಿಗೆ ಮನ ಸೋಲಬಾರದು. ಹಾಗೆಯೇ ನಾಲ್ಕು ವೇದ ಹದಿನೆಂಟು ಪುರಾಣಗಳನ್ನು ಓದಿದವರೆಂದು ಇಂಥವರ ಬೆನ್ನು ಹತ್ತಬಾರದು. ಹಾಗೆಯೇ ತೀರ್ಥ ಯಾತ್ರೆಗಳೂ ಇವೆ. ಅವುಗಳಿಗೆ ನಾನು ಹೋಗಿ ಬರುವೆನೆಂದು ಸೊಕ್ಕಿನ ವರ್ತನೆಯೂ ಬೇಡ. ಯಾಕಂದರೆ ಇವೆಲ್ಲವೂ ಪುಣ್ಯ ಪಾಪಗಳನ್ನು ಮಾತ್ರ ಹೆಚ್ಚಿಸುತ್ತವೆ. ಇವು ಹೆಚ್ಚಿದಲ್ಲಿ ಭವದಲ್ಲಿ ಸಿಲ್ಕುವದೇ ನಿಶ್ಚಯವು. ನಿನ್ನನ್ನು ನೀನು ತಿಳಿಯುಲಾರಿ ಎಂದು ಅಂಬಿಗರ ಚೌಡಯ್ಯನು ಎಚ್ಚರು ಕೊಟ್ಟಿರುವನು.

**ವಚನ:**— ೨೨. ಅಂಬಿಗನು ಜಗದೊಳಗೆ ಆಡುವನು, ತುಂಬಿದ ಸಾಗರದೊಳಗೆ ನೋಡಯ್ಯ! ನಿಂದ ಡೋಣಿಯನೇರಿದಂದು ಹುಟ್ಟ ಕಡಿವಂದವ ನರಿದಾತ ತೊಳಸುತ್ತಿದ್ದನು. ಚಂದಗೆಟ್ಟವರೆಲ್ಲ ಬಂದೇರಿ ಡೋಣಿಯನು ಶಿವನೊಂದೆ ಠಾವಿಗೊಯಿದಿಳುಹುವೆನೆಂದ ನಂಬಿಗಚೌಡಯ್ಯ.

**ಭಾವ:**— ಈ ವಚನದಲ್ಲಿ ಅಂಬಿಗರ ಚೌಡಯ್ಯನು ತನ್ನ ಸ್ವಭಾವವನ್ನು ಮತ್ತು ತನ್ನ ವೃತ್ತಿಯನ್ನು ಕುರಿತು ಅತ್ಯಂತ ಅಭಿಮಾನಪೂರ್ವಕವಾಗಿ ನುಡಿದಿರುವನು. ಈ ವಚನದಿಂದ ಚೌಡಯ್ಯನು ಎಂಥ ವಿಶಾಲವೃತ್ತಿಯಿಂದ ಆಚರಿಸುತ್ತಿದ್ದನೆಂಬದನ್ನು ಊಹಿಸಬಹುದಾಗಿದೆ.

ಅವನು ಇದರಲ್ಲಿ ಅನ್ನುವದೇನೆಂದರೆ:— ನಾನು ಒಬ್ಬ ಸಾಮಾನ್ಯ ಅಂಬಿಗನಲ್ಲ. ನಾನು ಜಲದಿಂದ ತುಂಬಿ ತುಳುಕುವ ಮಹಾಸಾಗರದಲ್ಲಿ ಓಲಾಡುತ್ತಲಿದ್ದೇನೆ ಎಂದು ಹೇಳುತ್ತಾನೆ. ನನಗೆ ಈ ಡೋಣಿಯು ಪ್ರಾಪ್ತವಾದಂದಿನಿಂದ ಹುಟ್ಟನ್ನು ಕಡಿಯುವ ರೀತಿಯನ್ನು ಅರಿತು ಕೊಂಡು ಅದನ್ನು ಅತ್ತಿತ್ತ ಹರಿದಾಡಿಸುತ್ತಲಿದ್ದೇನೆ. ಯಾರು ಈ ಪ್ರಪಂಚಸಾಗರವನ್ನು ದಾಟಲಾರದೆ ಇರುವರೋ ಅವರು ನನ್ನ ಈ ಡೋಣಿಯಲ್ಲಿ ಬಂದು ಕುಳ್ಳಿರೆಂದು ವಚನಕಾರನು ಹೇಳುತ್ತಾನೆ. ಮತ್ತು ಹೀಗೆ ಬಂದು ಕುಳಿತುಕೊಂಡಲ್ಲಿ ಶಿವನಿರುವಂಥ ಠಾವಿಗೆ ನಿಮ್ಮನ್ನು ಒಯ್ದು ಇಳುಹುತ್ತೇನೆಂತಲೂ ಇದರಲ್ಲಿ ಅಂದಿದ್ದಾನೆ. ವಚನಕಾರನು ತನ್ನ ಅಂಬಿಗರ ವೃತ್ತಿಯಿಂದ ಜೀವಿಸುತ್ತಿದ್ದದ್ದನ್ನೂ, ಹೀಗೆ ಜೀವಿಸುತ್ತಿದ್ದರೂ ಕೂಡ, ಅವನು ಜನತೆಯ ಉದ್ಧಾರಕ್ಕಾಗಿ ಹ್ಯಾಗೆ ವರ್ತಿಸುತ್ತಿದ್ದನೆಂಬದನ್ನೂ ಈ ವಚನದಿಂದ ಕಂಡುಹಿಡಿಯಬಹುದಾಗಿದೆ.



## ಜ್ಞಾನದ ಸ್ವರೂಪ

**ವಿವರಣೆಃ**— ಪರಮಾತ್ಮನ ಜ್ಞಾನವೆಂದರೆ ಅವನ ಸಂಬಂಧ ವಾಗಿ ನಾನಾ ವಿಧವಾಗಿ ಚರ್ಚಿಸಿ ಊಹೆ, ತರ್ಕಗಳನ್ನು ಮಾಡಿ ವಾದಿ ಸುವದು ಅಲ್ಲ. ಯಾವುದರಿಂದ ಆತನನ್ನು ಕಾಣುವದು ಶಕ್ಯವೋ ಯಾವುದರಿಂದ ತನ್ನ ನಿಜಸ್ಥಿತಿಯು ಹೊಳಪು ಉತ್ಪನ್ನವಾಗುತ್ತದೋ ಯಾವುದರಿಂದ ತನ್ನ ವಿಕಾಸವು ಹೆಚ್ಚುತ್ತ ಹೋಗುತ್ತದೋ ಅದೇ ಶುದ್ಧಜ್ಞಾನವೆನಿಸಿಕೊಳ್ಳುವದು. ಅದು ಅತ್ಯಂತ ಶ್ರೇಷ್ಠಸ್ವರೂಪುಳ್ಳದ್ದಾಗಿರು ವದು. ಅದರ ಮೂಲಕ ಜಗತ್ತಿನಲ್ಲಿ ತಲೆದೋರುವ ಪರಸ್ಪರ ಭಿನ್ನತೆ ಗಳು ಅಡಗಿ ಹೋಗುತ್ತವೆ. ಎಲ್ಲವೂ ಒಂದೇಯಾಗಿ, ಜಗತ್ತಿನ ಬಗ್ಗೆ ಪ್ರೀತಿ ಸಮತಾಭಾವ ದಯಾಭಾವ ಇವುಗಳೆಲ್ಲವೂ ಪ್ರಾದುರ್ಭವಿಸು ತ್ತವೆ. ಅದು ಶುದ್ಧ ಸ್ವರೂಪುಳ್ಳದಾಗಿರುವದರಿಂದ ಅದೇ ರೀತಿಯಾಗಿಯೇ ಎಲ್ಲರು ವ್ಯವಹರಿಸುವಂತೆ ಮಾಡುತ್ತದೆ. ಇವುಗಳೇ ಪರಮಾತ್ಮನ ಜ್ಞಾನದ ಲಕ್ಷಣವೆಂದು ವಚನಕಾರನು ಹೇಳುತ್ತಾನೆ.

**ವಚನಃ**—೨೩. ಅರಿವನರಿದಲ್ಲಿ ತಾನೆನ್ನದೆ ಇದಿರೆನ್ನದೆ, ಮತ್ತೇನುವ ಸಂಪಾದಿಸದೆ, ಅರುಣನ ಕಿರಣದಲ್ಲಿ ಅರತ ಸಾರದಂತೆ, ಕಾದ ಹಂಚಿನ ಮೇಲೆ ಬಿಟ್ಟ ನೀರಿನಂತೆ, ಬಧಿರನ ಕಾವ್ಯದಂತೆ ಚದುರನ ಒಳ್ಪಿನಂತೆ ತಲೆದೋರದೆ ನಿಂದಾತನಡಿಗೆರಗುವೆನೆಂದನಂಬಿಗರ ಚೌಡಯ್ಯ.

**ಅರ್ಥಃ**— ಈ ವಚನದಲ್ಲಿ ವಚನಕಾರನು ಜ್ಞಾನದ ಸ್ವರೂ ಪನ್ನು ಸಂಕ್ಷಿಪ್ತವಾಗಿ ಹೇಳಿರುವನು. ಯಾವನು ಜ್ಞಾನಿಯಾಗಿರು ತ್ತಾನೋ ಅವನಲ್ಲಿ ತಾನು ಮತ್ತು ಹೆರವರು ಎಂಬ ಭೇದಭಾವವು ಹೊರಟುಹೋಗುತ್ತದೆ. ಅವನಿಗೆ ಎಲ್ಲವೂ ಸಮನಾಗಿ ತೋರುತ್ತವೆ. ಮತ್ತು ಹೆಚ್ಚುಕಡಿಮೆ ಭಾವಗಳು ಉಳಿಯಲಾರವು. ಇಂಥವನಲ್ಲಿ ಪೂರ್ಣ ಸ್ಥಿತಿಯು ಉಂಟಾಗಿರುವದರಿಂದ, ಅವನು ಮತ್ತೇನನ್ನೂ ಬಯಸುವ ದಿಲ್ಲ. ಈ ಇತರ ವಸ್ತುಗಳು ಅವನ ಮನಸ್ಸಿನ ಮೇಲೆ ಪರಿಣಾಮ ಮಾಡಲಾ ರವು. ಈ ಸ್ಥಿತಿಯಲ್ಲಿ ಅವನು "ಅರುಣನ ಕಿರಣದಲ್ಲಿ ಅರತ ಸಾರ"ದಂತೆ ಇರುತ್ತಾನೆಂದು ಒಂದು ದೃಷ್ಟಾಂತವನ್ನು ಹೇಳಿರುವನು. ಅರುಣನ ಕಿರಣಗಳು ಶೀತಲವಾಗಿರುತ್ತದೆ. ಆದರೆ ಆ ಕಿರಣದಲ್ಲಿ ಉಷ್ಣತೆಯು ಸಾರವು ಅಡಗಿಕೊಂಡು ಇರುತ್ತದೆ. ಅದೇ ಪ್ರಕಾರ ಜ್ಞಾನಿಯ ವ್ಯವಹಾರ

ದಲ್ಲಿ ಅವನು ಇತರ ಮನುಷ್ಯರಂತೆ ಕಂಡರೂ ಪರಮಾತ್ಮನ ಕಳೆಯು ಅವನಲ್ಲಿ ತೋರದೆ ಅಂತರ್ಭೂತವಾಗಿ ವಾಸಿಸುತ್ತದೆ. ಅದೇ ಮೇರೆಗೆ ಅವನು ಕಾದ ಹಂಚಿನ ಮೇಲೆ ಬಿಟ್ಟ ನೀರಿನಂತೆ ಇರುತ್ತಾನೆ. ನೀರು ಜಡವಸ್ತುವಾದರೂ ಕಾದ ಹಂಚಿನ ಮೇಲೆ ಬಿದ್ದ ಕೂಡಲೇ ಅದರ ಜಡತ್ವವು ಹೊರಟುಹೋಗುತ್ತದೆ. ಆದೇ ಪ್ರಕಾರ ಪ್ರಪಂಚದಲ್ಲಿ ಸಂಸಾರದ ಯಾತನೆಗಳು ಒದಗಿದರೂ ಕೂಡ ಅವು ಅವನಿಗೆ ತಾಕಲಾರವು. ಆ ಯಾತನೆಗಳೆಲ್ಲವೂ ಅವನಿಗೆ ಸ ಖಮಯವಾಗಿ ಪರಿಣಮಿಸುವವು. ಅದೇ ಮೇರೆಗೆ ಅವನು ಕಿವುಡನ ಕಾವ್ಯದಂತೆ ಮತ್ತು ಚತುರನ ಒಳ್ಳೇ ಗುಣದಂತೆ ಇರುತ್ತಾನೆ. ಅವರಿಗೆ ಯಾವ ಪ್ರಕಾರ ತಮ್ಮೊಳಗೆ ಇರುವ ಈ ಗುಣಗಳು ಕಾಣಬರುವದಿಲ್ಲವೋ ಹಾಗೆಯೇ ಜ್ಞಾನಿಗಳಿಗೆ ತಾವು ಜ್ಞಾನಿಗಳಿದ್ದೇವೆಂಬ ತಿಳುವಳಿಕೆಯು ಇರುವದಿಲ್ಲ. ಅವರು ಆದರಲ್ಲಿ ಏಕಾಕಾರವಾಗಿ ಸಂಸಾರದಲ್ಲಿ ಇದ್ದೂ ಇಲ್ಲದಂತೆ ವ್ಯವಹರಿಸುತ್ತಾರೆಂದು ವಚನಕಾರನ ಭಾವವು.

**ವಚನ:**— ೨೪. ಕ್ರಿಯೆಯನರಿನವಂಗೆ ಗುರುವಿಲ್ಲ, ಆಚಾರವನರಿದವಂಗೆ ಲಿಂಗವಿಲ್ಲ, ಉತ್ಪತ್ತಿ ಸ್ಥಿತಿ ಲಯವನರಿದವಂಗೆ ಜಂಗಮವಿಲ್ಲ, ಪರಬ್ರಹ್ಮವನರಿದವಂಗೆ ಸರ್ವೇಂದ್ರಿಯವಿಲ್ಲ ತನ್ನನರಿದವಂಗೆ ಹಿಂದುಮುಂದು ಕಾಂಬುವುದೊಂದು ಇಲ್ಲೆಂದನಂಬಿಗ ಚೌಡಯ್ಯ.

**ಭಾವಃ**— ಇಲ್ಲಿ ಜ್ಞಾನವೆಂದರೆ ತನ್ನನ್ನು ತಾನು ತಿಳಿಯುವದು ಎಂಬ ಅರ್ಥವನ್ನು ಒತ್ತಿ ಹೇಳಿರುವನು. ಗುರುಲಿಂಗಜಂಗಮವು ಜ್ಞಾನಕ್ಕೆ ಸಾಧನವೆಂದು ತಿಳಿದು ಅವುಗಳನ್ನು ತಿಳಿಯಲು ಅಪೇಕ್ಷಿಸುಸುವದು ತಪ್ಪೆಂದು ಪರ್ಯಾಯದಿಂದ ಇಲ್ಲಿ ಹೇಳಿರುವನು. ಅವುಗಳೇ ಮಹತ್ವವಾದವುಗಳೆಂದು ಬಗೆದು ಅವುಗಳ ಆಚರಣೆಗಳಲ್ಲಿಯಷ್ಟೇ ತೊಡಗಬಾರದು. ಆದರೆ ಅವುಗಳು ತನ್ನನ್ನು ತಿಳಿಯಲಿಕ್ಕೆ ಸಾಧನಗಳೆಂದು ಮಾತ್ರ ತಿಳಿದು ಅವನು ವ್ಯವಹರಿಸತಕ್ಕದ್ದು. ಇಲ್ಲಿ ವಚನಕಾರನು ಕ್ರಿಯಾ ಆಚಾರ ಮತ್ತು ಜ್ಞಾನ ಎಂದು ಮೂರು ಭೇದಗಳನ್ನು ಮಾಡಿ, ಕ್ರಿಯೆ ಎಂದರೆ ನಡತೆ, ಇದನ್ನು ತಿಳಿಸಿ ಕೊಡುವಂಥವನು ಗುರುವು ಎಂತಲೂ ಅನೇಕ ಬಗೆಯ ಧಾರ್ಮಿಕ ಆಚಾರಗಳಿದ್ದು ಅವುಗಳ ಜ್ಞಾನ ಮಾಡಿಕೊಡುವಂತಹದು ಲಿಂಗವೆಂತಲೂ, ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳ ಜ್ಞಾನ ಮಾಡಿ ಕೊಡುವಂಥವನು ಜಂಗಮನೆಂತಲೂ ಹೇಳಿ ಇವುಗಳ ಪ್ರೀತಿ ಅಷ್ಟಷ್ಟನ್ನೇ ಆಚರಿಸಿ ವ್ಯವಹರಿಸುವವನಿಗೆ

ಇವಾವೂ ದೊರೆಯಲಾರವು. ಇಷ್ಟೇ ಅಲ್ಲ ಪರಮಾತ್ಮನು ಇದ್ದಾನೆಂಬದನ್ನು ತಿಳಿದು ಆತನನ್ನು ಅರಿತರೂ ಕೂಡ ಉಪಯೋಗವಿಲ್ಲವೆಂದು ಅವನು ಹೇಳಿರುವನು. ಯಾಕಂದರೆ ಪರಮಾತ್ಮನನ್ನು ಅರಿತಲ್ಲಿ ಅನೇಕ ಇಂದ್ರಿಯಗಳ ಮೂಲಕ ವ್ಯವಹರಿಸುವ ಮನುಷ್ಯನು ಅವುಗಳೊಡನೆ ವ್ಯವಹರಿಸುವದು ಮಾತ್ರ ನಿಲ್ಲಬಹುದು. ಎಂದರೆ ಪರಮಾತ್ಮನೂ ತಾನೂ ಒಂದೇಯಾಗಿ ವ್ಯವಹರಿಸಲು ಅವನು ಬಲ್ಲವನಾಗಬಹುದು. ಆದರೆ ಮನುಷ್ಯನು ಇದಕ್ಕೂ ಮುಂದೆ ಹೋಗತಕ್ಕದ್ದು ಅಂದರೆ ತನ್ನನ್ನು ತಾನು ಅರಿತು ತನ್ನೊಳಗಾಗಿ, ಹಿಂದೆ ಮುಂದೆ ಯಾವುದೂ ಇರದೆ ವರ್ತಿಸಬೇಕು ಎಂದು ಹೇಳಿರುವನು. ಇದೇ ನಿಜವಾದ ಜ್ಞಾನವೆಂದು ಅವನು ಹೇಳಿರುವನು.

**ವಚನ:**— ೨೫. ತಟಾಕ ಒಡೆದಡೆ ಕಟ್ಟಿವಡೆವುದಲ್ಲದೆ, ಅಂಬುಧಿ ತುಂಬಿ ಮೇರೆದಪ್ಪಿದಲ್ಲಿ ಕಟ್ಟಿಂಗೆ ಹಿಂಗಿ ನಿಂದುದುಂಟೆ? ಅರಿಯದವಂಗೆ ಅರಿಕೆಯ ಹೇಳಿದಡೆ ಅರಿವನಲ್ಲದೆ ಅರಿದು ಮರೆದವಂಗೆ ಬೇರೊಂದೆಡೆಯ ಹೇಳಿಹೆನೆಂದಡೆ ಕಡೆನಡು ಮೊದಲಿಲ್ಲವೆಂದನಂಬಿಗ ಚೌಡಯ್ಯ.

ಭಾವ:— ಜ್ಞಾನಿಯಾದವನ ಸ್ವರೂಪವನ್ನು ಈ ವಚನದಲ್ಲಿ ವಚನಕಾರನು ವಿವರಿಸಿರುವನು. ಆತನಿಗೆ ಕಟ್ಟು, ಅಥವಾ ಮೇರೆ ಎಂಬುದು ಯಾವದೂ ಇರುವದಿಲ್ಲ. ಅವನು ಮರ್ಯಾದರಹಿತನಾಗಿರುವನು. ತಟಾಕ ಎಂದರೆ ಕೆರೆ, ಇದಕ್ಕೆ ಮೇರೆ ಇದೆ. ಆದರೆ ಮಹಾಸಾಗರಕ್ಕೆ ಮೇರೆಯು ಇಲ್ಲ ಅದೇ ಪ್ರಕಾರ ಜ್ಞಾನಿಗೆ ಆದಿ, ಮಧ್ಯ, ಅಂತ್ಯವೆಂಬುವಾವೂ ಇರುವದಿಲ್ಲ. ಈ ಸ್ಥಿತಿಯನ್ನು ಮನುಷ್ಯನು ಅರಿದು ಮರೆದಿರುವನೆಂದು ವಚನಕಾರನು ವರ್ಣಿಸಿರುವನು. ಎಂದರೆ ಮರೆಯುವದೆಂದರೆ ಗೊತ್ತಿಲ್ಲವೆಂಬುದರ್ಥವಲ್ಲ. ಆದರೆ ಹ್ಯಾಗೆ ಪ್ರಕಾಶಿಸುವ ಕ್ರಿಯೆಗಳು ಗೂಢ ರೂಪದಲ್ಲಿ ಇರುತ್ತವೋ ಆ ಸ್ಥಿತಿಯೇ ಸರಿ. ಜಗತ್ತಿನ ಜ್ಞಾನವು ಹಿಂದೆ ಹೀಗೆ ಮರೆತದ್ದನ್ನು ನೆನಪಿಗೆ ತರುವದೆಂದು ವಚನಕಾರನ ಭಾವವು. ಮನುಷ್ಯನು ಈ ಪ್ರಕಾರ ಒಳಗೆ ಹುದುಗಿದ್ದನ್ನು ಪ್ರಕಟಪಡಿಸಿ, ಹೀಗೆ ಪ್ರಕಟವಾದ ಬಳಿಕ ಅದನ್ನು ಪುನಃ ಮರೆಯಬೇಕು. ಈ ಕಡೆಯ ಸ್ಥಿತಿಯೇ ಮನುಷ್ಯನ ಪೂರ್ಣತ್ವವೆಂದು ವಚನಕಾರನು ಇಲ್ಲಿ ಹೇಳಿರುವನು. ಅರಿದು ಮರೆದವನಿಗೆ ಏನೆಂದೂ ಹೇಳಲು ಶಕ್ಯವಲ್ಲ. ಯಾಕಂದರೆ ಈ ಸ್ಥಿತಿಯನ್ನು ಅವನು ಮೀರಿರುತ್ತಾನೆ. ಒಳಗಿದ್ದುದನ್ನು ಪ್ರಕಟ ಮಾಡುವವನಿಗೆ ಮಾತ್ರ

ವಿವರಿಸುವದು ಶಕ್ಯವು. ಆದರೆ ಜ್ಞಾನಿಗೆ ಹೀಗೆ ವಿವರಿಸಲು ಶಕ್ಯವಲ್ಲ ವೆಂದು ವಚನಕಾರನ ಭಾವವು.

**ವಚನಃ**— ೨೬. ಪೃಥ್ವಿ ಶುದ್ಧವೆಂಬೆನೆ? ಶುದ್ಧವಲ್ಲ. ಜಲ ಶುದ್ಧವೆಂಬೆನೆ? ಜಲ ಶುದ್ಧವಲ್ಲ; ಅಗ್ನಿ ಶುದ್ಧವೆಂಬೆನೆ? ಅಗ್ನಿ ಶುದ್ಧವಲ್ಲ; ವಾಯು ಶುದ್ಧವೆಂಬೆನೆ? ವಾಯು ಶುದ್ಧವಲ್ಲ; ಬೆಳಗು ಶುದ್ಧವೆಂಬೆನೆ? ಬೆಳಗು ಶುದ್ಧವಲ್ಲ. ನೀ ಕೇಳಯ್ಯ ಹುಸಿಮುಸಕವ ಕಳೆದು ಜ್ಞಾನವೆಂಬ ಬೆಳಗ ಸಾಧಿಸಬಲ್ಲಡೆ ಅಲ್ಲಿ ತಾನಿಪ್ಪನೆಂದ ನಂಬಿಗಚೌಡಯ್ಯ.

**ಭಾವಃ**— ವಚನಕಾರನು ಇಲ್ಲಿ ಜ್ಞಾನದ ಸ್ವರೂಪನ್ನು ವಿವರಿಸಿರುವನು. ಅದು ಅತ್ಯಂತ ಶುದ್ಧ ವಸ್ತುವೆಂದು ಅವನು ಹೇಳಿರುವನು. ಅನೇಕರು ಪಂಚಭೂತಗಳು ಎಂದರೆ ಪೃಥ್ವಿ, ಜಲ, ಅಗ್ನಿ, ವಾಯು ಇವು ಅತ್ಯಂತ ಶುದ್ಧ ವಸ್ತುಗಳೆಂದು ಭಾವಿಸುತ್ತಾರೆ. ಆದರೆ ವಚನಕಾರನು ಇವಾವೂ ಶುದ್ಧವಲ್ಲವೆಂದು ನುಡಿದಿರುವನು. ಇಷ್ಟೇ ಅಲ್ಲ, ಪ್ರಕಾಶವು ಸಹ ಶುದ್ಧ ವಸ್ತುವಲ್ಲವೆಂದು ಅಂದಿರುವನು. ಆದರಲ್ಲಿಯೂ ಕಪ್ಪು ಇದೆ. ಆದರೆ ಇವೆಲ್ಲವುಗಳಿಗಿಂತ ಶುದ್ಧವಾದ ವಸ್ತುವು ಜ್ಞಾನವೆಂಬುದಿದೆ. ಹುಸಿಯನ್ನು ಕಳೆದು ಅದನ್ನು ಸಾಧಿಸಿದರೆ ಅಲ್ಲಿ ಪರಮಾತ್ಮನಿರುವನು ಎಂದು ವಚನಕಾರನು ಅಂದಿರುವನು.

**ವಚನಃ**— ೨೭. ಪುಣ್ಯಪಾಪ ವಿರಹಿತನು ಕಂಡ ಕ್ರಿ ಏಕೆ? ಒಬ್ಬನು ಕಂಡ ಆರು ದರ್ಶನವೇಕೆ? ಮಾಟವೆಂಬುದೆಲ್ಲವೂ ಕೋಟಲೆ ಎಂದು ಕಳೆದು ದೂಟಿಸಿ ನುಡಿದಾತನಂಬಿಗ ಚೌಡಯ್ಯ.

**ಭಾವಃ**—ಜ್ಞಾನಿಗೆ ಪುಣ್ಯವೂ ಇಲ್ಲ. ಪಾಪವೂ ಇಲ್ಲ. ಇವುಗಳಿಂದ ಅವನು ಹೊರತಾಗಿರುವನು. ಅವನ ಕ್ರಿಯೆಗಳೇ ಈ ಬಗೆಯುವಾಗಿವೆ. ಅದೇ ಪ್ರಕಾರ ಅವನಿಗೆ ಆರು ದರ್ಶನಗಳ ಸಂಪೂರ್ಣ ಜ್ಞಾನವಾದರೂ ಕೂಡ ಅದು ಅವನಿಗೆ ಪರಿಣಾಮಕರವಾಗಲಾರದು. ಜಗತ್ತಿನಲ್ಲಿ ಕಂಡು ಬರುವ ಕ್ರಿಯೆಗಳೆಲ್ಲವೂ ಅವನನ್ನು ತೊಂದರೆಗಳಿಗೆ ಮಾತ್ರ ಈಡು ಮಾಡುವಂಥವುಗಳಿರುತ್ತವೆ. ಆದ್ದರಿಂದ ಅವುಗಳನ್ನು ಕಳೆದು ಹೊರಗೆ ಹಾಕಿ ಬಿಡಿರೆಂದು ವಚನಕಾರನು ಅಂದಿರುವನು.

**ವಚನಃ**— ೨೮. ಜ್ಞಾನಿಯಾದಲ್ಲಿ ಧ್ಯಾನ ಮೌನಂಗಳಲ್ಲಿರಲೇತಕ್ಕೆ? ಅರಿವು ಕರಿಗೊಂಡಲ್ಲಿ ಸುರುಳಿ ಸುರುಳಿ ಬಿಡಲೇತಕ್ಕೆ? ತಲೆಯೊಡೆಯುಂಗೆ

ಕಣ್ಣು ಹೊರತು ಎಂಬ ತುಡುಗುಣಿತನವೇ? ಆ ಗುಣ ಬಿಡು ಎಂದ ನಂಬಿಗಚೌಡಯ್ಯ.

**ಭಾವಃ**— ಜ್ಞಾನಿಗಳಾದವರು ಯಾವಾಗಲೂ ಧ್ಯಾನ ಮೌನಗಳಲ್ಲಿ ಮಗ್ನರಾಗಿರಬೇಕೆಂದು ಭಾವಿಸುತ್ತಾರೆ. ಆದರೆ ಇದು ತಪ್ಪೆಂದು ವಚನಕಾರನ ಭಾವವು. ಅರಿವು ಪುನಃ ಗುಪ್ತ ಸ್ವರೂಪನ್ನು ಹೊಂದಿದ ಬಳಿಕ, ಅದನ್ನು ಮುಚ್ಚುವುದೂ ಪುನಃ ಬಿಡುವುದೂ ಏತಕ್ಕೆ ಎಂದು ವಚನಕಾರನು ಅಂದಿರುವನು. ಇವನಲ್ಲಿ ಒಮ್ಮೆ ಹಿಡಿಯುವುದೂ ಒಮ್ಮೆ ಬಿಡುವುದೂ ಇರಲಾರದು. ಯಾಕಂದರೆ ಅವನು ಹೀಗೆ ಸಂಶಯಗ್ರಸ್ತನಾಗಿ ಎಂದೂ ವ್ಯವಹರಿಸುವದಿಲ್ಲ. ಕೊಲೆಗಡಿಕನು ತಲೆ ಹಾರಿಸಲು ಸನ್ನದ್ಧನಾಗಿರುವಾಗ್ಗೆ ಕಣ್ಣೊಂದನ್ನು ಉಳಿಸಬೇಕೆಂದು ಅವನ ಮನಸ್ಸಿನಲ್ಲಿ ಎಂದಾದರೂ ಬರಬಹುದೇ? ಎಂದೂ ಬರಲಾರದು. ಆದೇ ಪ್ರಕಾರ ಮನುಷ್ಯನು ಜಗತ್ತಿನಲ್ಲಿ ವರ್ತಿಸುವಾಗ್ಗೆ ಅವನು ಅದು, ಇದು ಎಂಬ ಸಂದೇಹವೃತ್ತಿಯನ್ನು ಬಿಟ್ಟುಕೊಟ್ಟು ಉಚ್ಚ ಧ್ಯೇಯವುಳ್ಳವನಾಗಿ ಅದರಲ್ಲಿ ಮಗ್ನನಾಗಿರುವನೇ ಹೊರ್ತು ಉಳಿದ ಕಾಲ್ಪನಿಕ ವಿಚಾರಗಳಲ್ಲಿ ಮನಸ್ಸು ಹಾಕನು.

**ವಚನಃ**— ೬೯. ಕೇಳಿದೇನೆಲೆ ಮಾನುವ, ಪಂಚಮಹಾಪಾತಕ ದೋಷಾದಿಗಗಳನ್ನು ಮಾಡಿ ಬಾಯಿ ಲೆ ಶಿವ ಶಿವ ಎಂದು ಶಿವನ ನೆನೆದರೆ ಭವ ಹರಿಯಿತೆಂಬ ವಿಚಾರಗೇಡಿಗಳ ಮಾತು ಕೇಳಲಾಗದು. ಜ್ಯೋತಿಯ ನೆನೆದರೆ ಕತ್ತಲೆ ಹಿಂಗುವುದೆ? ರಂಭೆಯ ನೆನೆದರೆ ಕಾಮದ ಕಳವಳ ಹೋಗುವುದೆ? ಮೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವುದೆ? ಮಾಡಿದಂತಹ ದೋಷವು ಹೋಗಲಾರದು. ಇಂತಪ್ಪ ದುರಾಚಾರಿಗಳ ಪಡಿಹಾರಿ ಉತ್ತಣ್ಣಗಳ ಪಾದುಕೆಯಿಂದ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.

**ಭಾವಃ**— ಈ ವಚನದಲ್ಲಿ ವಚನಕಾರನು ಜ್ಞಾನವೆಂದರೆ ಏನೇನೂ ಕೆಲಸ ಮಾಡದೆ ಧ್ಯಾನಸ್ಥನಾಗಿ ಉಳಿಯುವದು ಅಲ್ಲವೆಂದು ನುಡಿದಿರುವನು. ಬರೇ ಶಿವ ಶಿವ ಎಂದು ಪರಮಾತ್ಮನನ್ನು ನೆನೆಯುತ್ತ ಪಂಚ ಮಹಾಪಾತಕಗಳನ್ನು ಮಾಡಿದರೆ ಜ್ಞಾನವು ಲಭಿಸಲಾರದು. ಕತ್ತಲೆಯಲ್ಲಿದ್ದುಕೊಂಡು ಅಲ್ಲಿ ಬೆಳಕನ್ನು ಬಯಸುತ್ತ ಕುಳಿತರೆ ಕತ್ತಲೆಯು ಹರಿಯದು. ಬೆಳಕು ಇದ್ದಲ್ಲಿಗೆ ಹೋಗಿ ಅದನ್ನು ಕಾಣುವದು. ಆದೇ ಮೇರೆಗೆ

ವಚನಕಾರನು ಬೇರೆ ಉದಾಹರಣೆಗಳನ್ನು ಇಲ್ಲಿ ಕೊಟ್ಟಿರುವನು. ಅದ್ದ ರಿಂದ ಬರೇ ಧ್ಯಾನಿಸುವದರಿಂದ ಮಾಡಿದ ಪಾಪಗಳು ಹೋಗಲಾರವೆಂದು ವಚನಕಾರನು ಇಲ್ಲಿ ಅಂದಿದ್ದಾನೆ.

**ವಚನ:**— ೩೦. ವ್ರತವೆಂಬುದೇ ಪ್ರಾಣ, ಘಟವೆಂಬುದೇ ಕಟ್ಟು. ಪ್ರಾಣವಿಲ್ಲದೆ ಘಟಜ್ಞಾನವಿಲ್ಲದೆ, ಈ ಉಭಯಕ್ಕೂ ನಾ ನೀ ಎಂಬು ದನರಿಯಬೇಕೆಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವಃ**—ಜ್ಞಾನಿಯಾದವನು ನಿಶ್ಚಯಿಸಿ ಮಾಡಬೇಕೆಂದು ಇಲ್ಲಿ ವಚನಕಾರನು ಅಂದಿರುವನು. ಪ್ರತಿಯೊಂದು ಕಾರ್ಯಕ್ಕೆ ವ್ರತ ಎಂದರೆ ಒಂದು ಧ್ಯೇಯವನ್ನು ಗೊತ್ತುಪಡಿಸಿ ಅದನ್ನು ಬಿಟ್ಟು ಬಿಡದೆ ಮಾಡು ವದು ಅವಶ್ಯವಿದೆ. ಈ ಧ್ಯೇಯದಂತೆ ವ್ಯವಹರಿಸುವಾಗ್ಗೆ ತನ್ನ ಶರೀ ರದ ಗುಣಗಳ ನಿಜತ್ವವನ್ನು ತಿಳಿದು ವರ್ತಿಸತಕ್ಕದ್ದು. ಶರೀರದ ಗುಣಗಳಿಂದ ಮನುಷ್ಯನು ಬದ್ಧನಾದ್ದರಿಂದ ಅವನಿಗೆ ಇವುಗಳ ಜ್ಞಾನ ವಿರಬೇಕು. ಹೀಗೆ ಪ್ರಾಣ ಮತ್ತು ಘಟ ಇವುಗಳ ಜ್ಞಾನವನ್ನು ಹೊಂದಿ ಅವುಗಳಿಗೆ ಮೀರಿ ನಿಲ್ಲಬೇಕು. ಎಂದರೆ ಅವುಗಳ ಸಿಲ್ಕಿನಲ್ಲಿ ಸಿಗದೆ ನಾ ನೀ ಎಂಬದನ್ನು ತಿಳಿಯಬೇಕೆಂದು ವಚನಕಾರನು ಅಂದಿ ರುವನು.

**ವಚನಃ**— ೩೧. ಅರಿವುದೊಂದು ವಾಯು, ಮರೆವುದೊಂದು ವಾಯು, ಉಭಯದಿಂದ ತೋರುವ ವಾಯು ಒಂದೆಯಾಗಿ, ವೆಗ್ಗಳಿಸಿದಡೆ ನಿಂತು ತೆಗೆದಡೆ ಅಲ್ಲಿಯೇ ಅಡಗುವಂತೆ ಅರಿದು ನುಡಿಯ ನಡೆದಡೆ ಜ್ಞಾನಿ, ನುಡಿದ ನುಡಿಗೆ ನಡೆಯದಗೆ ಆತನೆ ಜೀವ ಭಾವಿ ಎಂದನಂ ಬಿಗ ಚೌಡಯ್ಯ.

**ಭಾವಃ**— ಶರೀರದಲ್ಲಿ ಅನೇಕ ವಾಯುಗಳಿದ್ದು ಅವುಗಳ ಮೂಲಕ ಮನುಷ್ಯನ ಅಂತರಿಂದ್ರಿಯಗಳಲ್ಲಿ ಪರಸ್ಪರ ಸಂಬಂಧವು ಒದಗಿ ಅರಿ ವುದೂ ಮರೆವುದೂ ಮೊದಲಾದ ಸ್ಥಿತಿಗಳುಂಟಾಗುತ್ತವೆ. ಈ ಎಲ್ಲ ವಾಯುಗಳು ಒಂದೇಯಾಗಬೇಕೆಂದು ವಚನಕಾರನ ಭಾವವು. ಇದು ಜ್ಞಾನಿಯ ಚಿನ್ಹವು. ವಾಯುವು ಹೆಚ್ಚಿದಲ್ಲಿ ಅಥವಾ ತಗ್ಗಿದಲ್ಲಿ ಅಲ್ಲಿಯೇ ಅದು ನಿರ್ಬಂಧಿಸಲ್ಪಡಬೇಕು. ಈ ಪ್ರಕಾರ ಸ್ಥಿರತರ ಮನಸ್ಸು ಉಂಟಾ ದಲ್ಲಿ ನಡೆಯೂ ನುಡಿಯೂ ಒಂದೇ ಆಗುವವು. ಒಂದೇ ಆದಲ್ಲಿ

ಜ್ಞಾನಿಯು. ಹಾಗೆ ಆಗದಿದ್ದಲ್ಲಿ ಜೀವಭಾವಿಯು ಎಂದು ವಚನ ಕಾರನು ಹೇಳಿರುವನು.

**ವಚನ:**— ೩೨ ಅಜಾತನನೊಲಿಸನೊಡೆ ಅದೇತರ ಮಂತ್ರ, ಅದೇ ತರಾಗವು ಹೇಳಿರೊ? ಅದಾವ ಮುಖದಲ್ಲಿ ಲಿಂಗ ಬಂದಿಪ್ಪುದೋ? ರೂಪಿಲ್ಲದಾತ ನಿಮ್ಮ ಮಾತಿಂಗೆ ಬಪ್ಪನೇ? ಅದೇತರ ಮಾತೆಂದನಂಬಿಗಚೌಡಯ್ಯ.

**ಭಾವ:**— ಪರಮಾತ್ಮನನ್ನು ಒಲಿಸಬೇಕಾದರೆ ಬರೇ ಮಾತಿನಿಂದ ಒಲಿಸಲಿಕ್ಕೆ ಶಕ್ಯವಲ್ಲ. ಹಾಗೆಯೇ ಬರೇ ಆಗಮಗಳನ್ನು ಉಚ್ಚ ಸ್ವರ ದಿಂದ ಓದುವದರಿಂದ ಅಥವಾ ಮಂತ್ರೋಚ್ಚರಣೆಯಿಂದ ಒಲಿಯಲಾರನು. ಲಿಂಗ ಕಳೆಯು ಹೀಗೆ ತನ್ನಲ್ಲಿ ಉಂಟಾಗಲಾರದು. ರೂಪಿಲ್ಲದಂಥ ಪರ ಮಾತ್ಮನು ಬರೇ ಮಾತಿನ ಮಾಲೆಗೆ ಸಿಕ್ಕಲಾರನು. ಮಂತ್ರಗಳೂ ಆಗ ಮಗಳೂ ಪರಮಾತ್ಮನು ಇಂತಿಂಥಹ ರೂಪುಳ್ಳವನು ಎಂದು ಅವನನ್ನು ಸ್ತುತಿಸುತ್ತವೆಂಬದು ನಿಜವು. ಆದರೆ ಇಂಥ ಸ್ತುತಿಗಳಿಗೆ ಪರಮಾತ್ಮನು ಒಲಿಯಲಾರನು.

**ವಚನ:**- ೩೩ ನಾದದಬಲದಿಂದ ವೇದಂಗಳಾದವಲ್ಲದೆ ವೇದಸ್ವ ಯಂ ಭುವಲ್ಲನಿಲ್ಲು. ಮಾತಿನ ಬಲದಿಂದ ಶಾಸ್ತ್ರಂಗಳಾದವಲ್ಲದೆ ಶಾಸ್ತ್ರ ಸ್ವ ಯಂಭುವಲ್ಲ ನಿಲ್ಲು. ಪಾಷಾಣದ ಬಲದಿಂದ ಸಮಯಂಗಳಾದವಲ್ಲದೆ ಸ ಮಯ ಸ್ವಯಂಭುವಲ್ಲ ನಿಲ್ಲು. ಇಂತೀ ಮಾತಿನ ಬಣಬೆಯ ಮುಂತಿಟ್ಟು ಕೊಂಡು ಆತನ ಕಂಡಿಹೆನೆಂದಡೆ ಆತನತ್ಯತಿಷ್ಠದ್ದಶಾಂಗುಲ. ಆತನೆಂತು ಸಿಲು ಕುವನೆಂದಾತನಂಬಿಗಚೌಡಯ್ಯ?

**ಭಾವ:**— ಓಂಕಾರ ಮಂತ್ರೋಚ್ಚರಣೆಯಿಂದ ಅಥವಾ ವೇದ ಪಠ ನದಿಂದ ಅಥವಾ ಶಾಸ್ತ್ರಾರ್ಥ ಮಾಡುವದರಿಂದ ಅಥವಾ ಕಲ್ಲಿನ ಮೂರ್ತಿಗಳನ್ನು ಪೂಜಿಸುವದರಿಂದ ಪರಮಾತ್ಮನ ಜ್ಞಾನವು ಉಂಟಾಗ ಲಾರದು. ಬರೇ ಸಪ್ಪಳ, ಮಾತು, ಕಲ್ಲು ಇವುಗಳಿಂದ ಪರಮಾ ತ್ಮನು ಸಿಕ್ಕಬಹುದೋ? ಇಂಥ ಮಾತಿನ ಬಣವೆಯನ್ನು ಮುಂದಿಟ್ಟು ಕೊಂಡು ಪರಮಾತ್ಮನನ್ನು ಕಾಣುವೆವೆಂಬದು ಅಶಕ್ಯವಾದ ಸಂಗತಿಯು. ಯಾಕಂದರೆ ಪರಮಾತ್ಮನು ಜಗತ್ತನ್ನು ದಾಟಿ "ಅತ್ಯತಿಷ್ಠದ್ದಶಾಂಗುಲ" ನಾಗಿದ್ದಾನೆ. ಇಂಥವನು ನಮಗೆ ಮೇಲ್ಕಂಡ ರೀತಿಯಿಂದ ಹ್ಯಾಗೆ ಸಿಕ್ಕ ಬಹುದು ಎಂದು ವಚನಕಾರನು ಅಂದಿರುವನು.

## ಜ್ಞಾನ ಸಂಪಾದನೆಯ ರೀತಿ.

**ವಿವರಣೆ:** — ಅಂಬಿಗರ ಚೌಡಯ್ಯನು ಪರಮಾತ್ಮನ ಸ್ವರೂಪವಾವುದು, ಅವನ ಜ್ಞಾನವೆಂದರೇನು ಎಂಬದನ್ನು ವಿವರಿಸಿ, ಆ ಜ್ಞಾನವನ್ನು ಹ್ಯಾಗೆ ಸಂಪಾದಿಸಬೇಕು ಮತ್ತು ತನ್ನ ಪ್ರಗತಿಯನ್ನು ಹ್ಯಾಗೆ ಮಾಡಿಕೊಳ್ಳಬೇಕು ಎಂಬದನ್ನು ಮುಂದಿನ ವಚನಗಳಲ್ಲಿ ವಿವರಿಸಿರುವನು.

ಮನುಷ್ಯನು ಈ ಜಗತ್ತಿನಲ್ಲಿಯೇ ವ್ಯವಹರಿಸಿ ಇಲ್ಲಿಯ ಕಾರ್ಯಗಳಿಂದಲೇ ತನ್ನ ಗುಣಗಳನ್ನು ವಿಕಾಸಗೊಳಿಸತಕ್ಕದ್ದು. ಅವನು ತನ್ನಲ್ಲಿರುವ ಕ್ಷುದ್ರ ಗುಣಗಳನ್ನು ಬಿಟ್ಟುಕೊಡುವದರಿಂದಲೇ ಅವನಲ್ಲಿ ಈ ಶುದ್ಧತ್ವವು ಪ್ರಾಪ್ತವಾಗುತ್ತದೆ. ಹೀಗೆ ಶುದ್ಧತ್ವವನ್ನು ಹೊಂದುವದರಿಂದಲೇ ಅವನಲ್ಲಿ ಲಿಂಗದ ಗುಣಗಳು ಪ್ರಕಟವಾಗುತ್ತ ಹೋಗುತ್ತವೆಂದು ವಚನಕಾರನ ವಿಚಾರಗಳಿವೆ. ಜಗತ್ತಿನಲ್ಲಿ ದುಷ್ಟ ಗುಣಗಳ ಸಂಚಾರವಿದ್ದು ಅವುಗಳು ತನಗೆ ಹತ್ತದಂತೆ ಅವನು ವ್ಯವಹರಿಸತಕ್ಕದ್ದು. ಇದಕ್ಕೋಸ್ಕರ ಅತ್ಯಂತ ಮನೋದಾರ್ಢ್ಯವು ಅವಶ್ಯವು. ಆಚರಣೆಯಲ್ಲಿ ಪವಿತ್ರತೆಯಿಂದ ನಡೆದುಕೊಳ್ಳುವದೇ ಇಷ್ಟಲಿಂಗದ ಪ್ರಾಪ್ತಿಯು. ಮತ್ತು ಮನಸ್ಸಿನ ಕಲಂಕಗಳನ್ನು ಹೋಗಲಾಡಿಸುವದೇ ಪ್ರಾಣಲಿಂಗದ ಪ್ರಾಪ್ತಿಯು ಎಂದು ಹೇಳಲ್ಪಡುತ್ತಿದೆ. ಈ ಪ್ರಕಾರ ವರ್ತಿಸಿದಲ್ಲಿ ಮನುಷ್ಯನಲ್ಲಿ ಲಿಂಗದ ಬೆಳಗು ಪ್ರಕಾಶಮಾನವಾಗುತ್ತ ಹೋಗುವದು. ಈ ಪ್ರಕಾಶವು ಒಳಗೂ ಹೊರಗೂ ವ್ಯಾಪಿಸುವದು. ಮತ್ತು ಕಡೆಗೆ ಅವನು ಈ ಬೆಳಗಿನಲ್ಲಿಯೇ ಏಕಾಕಾರನಾಗುವನು. ಇದೇ ಮೋಕ್ಷ ಪದವನ್ನು ಹೊಂದುವ ರೀತಿಯಾಗಿರುತ್ತದೆ. ಈ ದೃಷ್ಟಿಯಿಂದ ವಚನಕಾರರು ಷಟ್‌ಸ್ಥಲ ಸಿದ್ಧಾಂತವನ್ನು ನೆಲೆಗೊಳಿಸಿರುವರು. ಮತ್ತು ಈ ಸಿದ್ಧಾಂತದ ತತ್ವಗಳನ್ನು ಅವರು ತಮ್ಮ ವಚನಗಳ ಮೂಲಕ ಸಾರಿರುವರು.

**ವಚನ:** — ೩೪. ಅಯ್ಯಾ, ಲಿಂಗಾಚಾರದ ವಿವರವ ವಿಸ್ತಾರವಾಗಿ ಕರುಣಿಸೆಲೆ ಚಿಕ್ಕದಂಡ ಪ್ರಭುವೆ ಎಂದು ಅಕ್ಕಮಹಾದೇವಿ ಮೊದಲಾದ ಸಕಲ ಪ್ರಮಥಗಣಂಗಳೆಲ್ಲ ಹಸ್ತಾಂಜುಳಿತರಾಗಿ ಬೆಸಗೊಳಲು, ಆಗ ಚಿಕ್ಕದಂಡ ಪ್ರಭುವು ದಂಡನಾಥನ ಕಡೆಗಭಿಮುಖವಾಗಲು ಅವರು ಹಸ್ತಾಂಜುಳಿತರಾಗಿ ಬೆಸಗೊಳಲು ಆಗ ಚಿಕ್ಕದಂಡ ಪ್ರಭುವು ಲಿಂಗದಲ್ಲಿ

ಆನಂದಜಲ ಉಕ್ಕಿ ಬೋಧಿಸಿದಂಥ ಮಹಾಪ್ರಸಾದ ಉಂಟು. ಅದೆಂತೆಂದೊಡೆ ಕೇಳಿಲೆ ಮರ್ತ್ಯಲೋಕದ ಮಹಾಗಣಂಗಳೆಂದೊರೆದನಂಬಿಗರ ಚೌಡಯ್ಯನು.

ಭಾವಃ— ಮನುಷ್ಯನಿಗೆ ಮೋಕ್ಷ ಮಾರ್ಗವನ್ನು ತೋರಿಸಿಕೊಡುವುದೇ ಲಿಂಗಾಚಾರವೆನಿಸಿಕೊಳ್ಳುತ್ತದೆ. ಈ ಲಿಂಗಾಚಾರವನ್ನು ಪೂರ್ಣಸ್ಥಿತಿಗೆ ತಂದವನು ಚನ್ನಬಸವನೆಂಬ ಐತಿಹ್ಯವದೆ. ಅವನು ಈ ವಿಷಯವನ್ನು ಶಿವಾನುಭವ ಮಂಟಪದಲ್ಲಿ ಶಿವಶರಣರಿಗೆ ಬೋಧಿಸುತ್ತಿದ್ದನು. ಈ ಬೋಧೆಯನ್ನೇ ನಾನು ಈಗ ಹೇಳುತ್ತಿದ್ದೇನೆ ಎಂದು ಅಂಬಿಗರ ಚೌಡಯ್ಯನು ಇದರಲ್ಲಿ ಹೇಳಿರುವನು.

ವಚನಃ— ೩೫. ಗತಿಪಥದ ಜ್ಞಾನದಲ್ಲಿದ್ದು ನೀಗಿರೋ ನಿಮ್ಮ ಭವಬಂಧನದ ಸಾಗರವನು. ಪ್ರಾಣತ್ಯಾಗವು ಈಗಲೋ ಆಗಲೋ ಯಾವಾಗಲೋ ಎಂದರಿಯಬಾರದು. ರೋಗರುಜಗಳಿಗೆ ಆಗರವು ನಿಮ್ಮ ಒಡಲು. ತನುಮನಪ್ರಾಣವ ನೆಚ್ಚದಿರು. ನಾಗಭೂಷಣನ ಪಾದಪೂಜೆಯ ಮಾಡಿ ಶಿವಯೋಗದಲ್ಲಿ ಲಿಂಗವನೊಡಗೂಡಿ, ಸಾಗಿಹೋಗದವರನು ಭವಗೇಡಿ ಎಂದಾತನೆಮ್ಮ ಅಂಬಿಗರಚೌಡಯ್ಯನು.

ಭಾವಃ— ವಚನಕಾರನು ಸಂಸಾರಸಾಗರವನ್ನು ದಾಟಿ ಹೋಗಿರೆಂದು ಈ ವಚನದಲ್ಲಿ ಬೋಧಿಸುತ್ತಾನೆ. ಈ ಪ್ರಯತ್ನವನ್ನು ಮನುಷ್ಯನು ಕೂಡಲೇ ಪ್ರಾರಂಭಿಸತಕ್ಕದ್ದು. ಯಾಕಂದರೆ ಮರಣವು ಅವನಿಗೆ ಎಂದು ಪ್ರಾಪ್ತವಾಗುವದೆಂಬದು ತಿಳಿಯಲಾರದು. ಅದು ಬೇಕಾದಾಗ ಆಕಸ್ಮಿಕ ರೀತಿಯಿಂದ ಬರಬಹುದು. ಮನುಷ್ಯನ ಶರೀರವು ರೋಗರುಜೆಗಳಿಗೆ ತವರುಮನೆಯಾಗಿದ್ದು, ಅದು ಬೇಕಾದಾಗ ಬಿದ್ದುಹೋಗಬಹುದು. ಆದರೆ ಮನುಷ್ಯನು ತನ್ನ ಶರೀರ, ಮನಸ್ಸು, ಮತ್ತು ಪ್ರಾಣ ಇವುಗಳ ಮೇಲೆ ಭರವಸೆಯನ್ನಿಟ್ಟು ವರ್ತಿಸುತ್ತಾನೆ. ಇವೇ ಶ್ರೇಷ್ಠ ವಸ್ತುಗಳೆಂದು ಭಾವಿಸಿ ವರ್ತಿಸುತ್ತಾನೆ. ಹೀಗೆ ನೆಚ್ಚಬೇಡವೆಂದು ವಚನಕಾರನು ಅಂದಿದ್ದಾನೆ. ಆದರೆ ನಾಗಭೂಷಣನ ಪಾದಪೂಜೆಯನ್ನು ಮಾಡಿ, ಶಿವಯೋಗದ ತತ್ವಗಳನ್ನು ತಿಳಿದು ಅದರ ಮೂಲಕ ಲಿಂಗದಲ್ಲಿ ಬೆರೆದು ಹೋಗಬೇಕು. ಹೀಗೆ ವರ್ತಿಸದವರು ಭವಗೇಡಿಗಳೆಂದು ವಚನಕಾರನು ಅಂದಿದ್ದಾನೆ.

**ವಚನಃ—** ೩೬. ಒಡೆಯದೆ ತೆಂಗಾಯಿ ಮೆದ್ದವರುಂಟೇ? ಕಾಯದ ಗುಣ ಕೀಳದೆ ಅಂಗವನರಿದವರುಂಟೇ? ಜೋಡು ಹರಿದಲ್ಲದೆ ದೇಹ ಹರಿಯದು. ಕೈಯ್ಯ ದೈವ ತಿಳಿದಲ್ಲದೆ ಗುಹೇಶ್ವರ ಲಿಂಗವು ಅರಿಯ ದೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ—** ಶಿವಯೋಗವನ್ನು ಹ್ಯಾಗೆ ಪ್ರಾರಂಭಿಸಬೇಕೆಂಬ ದನ್ನು ವಚನಕಾರನು ಇದರಲ್ಲಿ ಹೇಳಿರುವನು. ಶಿವಯೋಗವೆಂದರೆ ಏನೇನೂ ಕೆಲಸ ಮಾಡದೆ ಧ್ಯಾನಾಸಕ್ತನಾಗಿರುವದು ಅಲ್ಲ. ಇಷ್ಟ ರಿಂದಲೇ ಪರಮಾತ್ಮನು ದೊರಕಲಾರನು. ತೆಂಗಿನ ಕಾಯೊಳಗಿನ ಸೀಯಾದ ಉದಕ ಮತ್ತು ರುಚಿಕರವಾದ ಕೊಬ್ಬರಿಯನ್ನು ತಿನ್ನಬೇಕಾ ದರೆ ಅದರ ಹೊರಗಿನ ಬಿರಿಸಾದ ಪರಟಿಯನ್ನು ಮೊದಲು ಒಡೆಯ ಬೇಕು. ಅದೇ ಪ್ರಕಾರ ಪರಮಾತ್ಮನನ್ನು ಅರಿಯಬೇಕಾದರೆ ಈ ಭವಬಂಧನವೆಂಬ ಕಠಿಣವಾದ ಮತ್ತು ಬಿರಿಸಾದ ಆವರಣವನ್ನು ಮೊದಲು ನಾಶಮಾಡತಕ್ಕದ್ದು. ಈ ಆವರಣವೆಂದರೆ ಮನುಷ್ಯನ ಕೀಳ ಗುಣಗಳೇ ಇರುತ್ತವೆ. ಈ ಗುಣಗಳನ್ನು ದೂರ ಮಾಡದ ಹೊರ್ತು ಅಂಗದ ನಿಜಸ್ಥಿತಿಯು ತಿಳಿಯಲಾರದು. ಆದರೆ ಈ ಗುಣ ಗಳು ನಮ್ಮ ಅಂಗದಲ್ಲಿ ತುಂಬಿ ಹೋಗಿವೆ. ಇವುಗಳ ಸಂಬಂಧ ವನ್ನು ಹರಿಯದ ಹೊರ್ತು ದೇಹವು ದೂರಾಗದು. ಇದಕ್ಕೆ ಒಂದೇ ಸಾಧನವಿದೆ. ಅದು ಯಾವದೆಂದರೆ ಇಷ್ಟಲಿಂಗವನ್ನು ತಿಳಿಯುವದೇ ಇದೆ. ಇದು ತಿಳಿಯದ ಹೊರ್ತು ಪರಬ್ರಹ್ಮ ಸ್ವರೂಪವು ಗೊತ್ತಾಗ ದೆಂದು ಅಂಬಿಗರ ಚೌಡಯ್ಯನು ಅಂದಿರುವನು.

**ವಚನಃ—** ೩೭. ಸಸಿಗೆ ನೀರನೆರೆದಡೆ ಹಸರಾದಂತೆ, ಬೇರಿನ ಬಾಯಿ ತುಂಬಿ ಸಸಿ ಒಡಲು ತುಂಬಿ ಆ ಎಸಕದ ತೆರನಂತೆ ಇಷ್ಟ ಪ್ರಾಣಯೋಗ ವೆಂದನಂಬಿಗ ಚೌಡಯ್ಯ.

**ಭಾವಃ—** ಲಿಂಗವು ಎರಡು ಬಗೆಯಾಗಿದೆ ಎಂದು ವಚನಕಾರನು ಇದರಲ್ಲಿ ಹೇಳಿರುವನು. ಒಂದು ಇಷ್ಟಲಿಂಗವು ಮತ್ತೊಂದು ಪ್ರಾಣ ಲಿಂಗವು. ಅವು ಒಂದಕ್ಕೊಂದು ಹೊಂದಿಕೊಂಡು ಇವೆ. ಅವು ಪರ ಸ್ಪರಾವಲಂಬಿಗಳು. ಒಂದರ ಮೇಲೆ ಮತ್ತೊಂದರ ಹೆಚ್ಚುವಿಕೆಯು ಇದೆ. ಹ್ಯಾಗೆ ಬೇರು ಮತ್ತು ಎಲೆ ಇವುಗಳು ಪರಸ್ಪರಾವಲಂಬಿಗಳೋ ಹಾಗೆಯೇ ಈ ಇಷ್ಟಲಿಂಗ ಮತ್ತು ಪ್ರಾಣಲಿಂಗಗಳು ಪರಸ್ಪರಾವಲಂಬಿಗಳು. ಹಸರು

ಎಂದರೆ ಎಲೆಗಳನ್ನು ಚಿವುಟಿ ಒಗೆಯುತ್ತ ಹೋದರೆ ಸಸಿಯು ಬದುಕಲಾರದು. ಅದಕ್ಕೆ ಬೇರು ಇದ್ದರೂ ಅದು ಸತ್ತು ಹೋಗುವದು. ಆದರಂತೆಯೇ ಬೇರನ್ನು ಕಿತ್ತು ಒಗೆದರೆ ಸಸಿಯು ಬದುಕಲಾರದು. ಆದರೆ ಸಸಿಗೆ ನೀರು ಹಾಕಿದರೆ ಅದರ ಎಲೆಗಳೂ ಚಿಗಿಯುವವು, ಹಾಗೆಯೇ ಬೇರಿನ ಬಾಯಿಯೂ ತುಂಬುವದು. ಈ ಪ್ರಕಾರ ಎರಡೂ ಸಂವರ್ಧನೆ ಹೊಂದಿ ಸಸಿಯು ಪುಷ್ಟವಾಗುವದು. ಈ ಪ್ರಕಾರ ಮನುಷ್ಯನು ಉತ್ತಮ ಆಚರಣೆ ಎಂಬ ನೀರನ್ನು ಶರೀರಕ್ಕೆ ಹಣಿಸುತ್ತ ಹೋದರೆ, ಅವನಲ್ಲಿರುವ ಇಷ್ಟಲಿಂಗ ಮತ್ತು ಪ್ರಾಣಲಿಂಗ ಇವುಗಳೆರಡೂ ವರ್ಧಿಸುತ್ತ ಹೋಗುವವು. ಅವೆರಡೂ ಪರಸ್ಪರಾವಲಂಬಿಗಳಾಗಿ ಪರಸ್ಪರ ಸಂವರ್ಧನೆ ಮಾಡುತ್ತ ಕಡೆಗೆ ಏಕಾಕಾರವಾಗಿ ಹೋಗುವವು. ಇದೇ ಇಷ್ಟ ಪ್ರಾಣಯೋಗವೆಂದು ವಚನಕಾರನು ಇಲ್ಲಿ ನುಡಿದಿರುವನು.

**ವಚನಃ**— ೩೮. ಅಂದ ಚಂದವಬಿಟ್ಟು, ಮುಂಡೆ ಬೋಳಾದ ಮತ್ತೆ ಲಿಂಗಕ್ಕೆ ಚಂದ ಅಲಂಕಾರ ಉಂಟೇ ? ತನ್ನಂಗಸಂಗವನರಿಯದೆ ಲಿಂಗ ಸಂಗಿಯಾದೆನೆಂಬ ಭಂಡರ ನಾನೇನೆಂಬೆನೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ**— ಇಷ್ಟಲಿಂಗ ಮತ್ತು ಪ್ರಾಣಲಿಂಗಗಳು ಹ್ಯಾಗೆ ತನ್ನಲ್ಲಿ ಬರುತ್ತವೆಂಬದನ್ನು ವಚನಕಾರನು ಇದರಲ್ಲಿ ಹೇಳಿರುವನು. ಅನೇಕರು ಜಗತ್ತಿನ ಅಂದ ಚಂದಗಳನ್ನು ಬಿಟ್ಟರೆ, ಲಿಂಗವು ಬರುವದೆಂದು ಹೇಳುತ್ತಾರೆ. ಇದು ತಪ್ಪು. ಹಾಗೆಯೇ ತಲೆಯನ್ನು ಬೋಳಿಸಿಕೊಂಡು ವಿರಕ್ತಾಶ್ರಮವನ್ನು ಹೊಂದಿದರೆ ಲಿಂಗವು ಬರುವದೆಂದು ಹೇಳುವರು. ಇದೂ ತಪ್ಪು. ಲಿಂಗಧಾರಕರಾಗಿ ಆ ಲಿಂಗಕ್ಕೆ ಅನೇಕ ಪರಿ ಪೂಜೆ, ಚಂದಗಳನ್ನೂ ಅಲಂಕಾರಗಳನ್ನೂ ಅಳವಡಿಸುವದರಿಂದ ಲಿಂಗವು ಬರುವದೆಂಬದೂ ತಪ್ಪು. ಆದರೆ ತನ್ನ ಅಂಗದ ಸಂಗವನ್ನು ಅರಿಯಬೇಕೆಂದು ವಚನಕಾರನು ಅಂದಿರುವನು. ಇದು ತಿಳಿದಾಗಲೇ ಲಿಂಗ ಸಂಗಿಯಾಗುವನೆಂದು ಇಲ್ಲಿ ಹೇಳುತ್ತಾನೆ. ಇದಿಲ್ಲದೆ ಹೋಗಿ ಬರೇ ಬಾಹ್ಯ ಆಚರಣೆಗಳಲ್ಲಿ ತೊಡಗಿದರೆ ಅವನು ಭಂಡನೆಂದು ವಚನಕಾರನು ಇದರಲ್ಲಿ ಅಂದಿರುವನು.

**ವಚನಃ**— ೩೯. ಅಂಗಗುಣವರತು ಲಿಂಗ ಗುಣವನರಿಯಬೇಕೆಂಬರು. ಅಂಗವರತ ಮೇಲೆ ಲಿಂಗಕ್ಕೆ ಕುರುಹುಂಟೆ ? ಅಂಗವೆ

ಲಿಂಗ, ನಿರಂಗವೆ ಸಂಗ. ಈ ಭಾವದಂಗವನರಿಯಬೇಕೆಂದನಂಬಿಗ ಚೌಡಯ್ಯ.

**ಭಾವ:—** ಇಲ್ಲಿ ಅಂಗಸಂಗವನ್ನು ಅರಿಯುವದೆಂದರೇನು ಎಂಬದನ್ನು ವಚನಕಾರನು ಹೇಳಿರುವನು. ಅಂಗವನ್ನು ಅರಿಯುವದೆಂದರೆ ಅದನ್ನು ಕ್ಲೇಶಪಡಿಸಿ, ಅದು ತ್ಯಾಜ್ಯವೆಂದು ತಿಳಿದು ವ್ಯವಹರಿಸುವದು ಅಲ್ಲ. ಹೀಗೆ ಮಾಡುವದರಿಂದ ಲಿಂಗದ ಗುಣಗಳು ಬರಲಾರವು. ಯಾಕಂದರೆ ಅಂಗವು ನಾಶವಾದ ಬಳಿಕ ಲಿಂಗವೆಂಬದು ಉಳಿಯಲಾರದು. ಲಿಂಗವೆಂಬುದು ಕುರುಹು ಮಾತ್ರ ಇರುತ್ತದೆ. ಅದೊಂದು ಸಾಧನವಾಗಿರುತ್ತದೆ. ಈ ಸಾಧನೆಯಿಂದ ಅಂಗವನ್ನೇ ಲಿಂಗವಾಗಿ ಮಾಡಬೇಕಾಗುತ್ತದೆ. ಆದ್ದರಿಂದ ಅಂಗವನ್ನು ತೊರೆದಲ್ಲಿ ಲಿಂಗವು ಹ್ಯಾಗೆ ಉಳಿಯಬಹುದು? ಈ ಅಂಗದ ಗುಣಗಳನ್ನು ಹೆಚ್ಚಿಸುತ್ತ ಹೆಚ್ಚಿಸುತ್ತ ಹೋದ ಹಾಗೆ ಅದರ ಜಡತ್ವವು ಹೊರಟು ಹೋಗುತ್ತದೆ. ಆ ಜಡತ್ವವು ಸರಿಯುತ್ತ ಸರಿಯುತ್ತ ಕಡೆಗೆ ಅದು ನಿರಾಕಾರ ವಸ್ತುವಾಗುವದು. ಈ ಸ್ಥಿತಿಯು ಉಂಟಾದಾಗಳೇ ಅದು ಪರಮಾತ್ಮನಲ್ಲಿ ಸಂಬಂಧವಾಯಿತೆಂದು ತಿಳಿಯಬೇಕು. ಈ ಮಾರ್ಗವನ್ನು ಅರಿಯಬೇಕೆಂದು ವಚನಕಾರನು ಹೇಳಿರುವನು.

**ವಚನ:—** ೪೦. ಮೋಹಗೂಡದಲ್ಲಿ ಇರಬಲ್ಲುದೇ? ಮುದ್ರೆಯು ವಸ್ತು ಪ್ರಾಣಲಿಂಗಿಯಾಗಬಲ್ಲುದೇ? ಡಾಗಿನ ಪಶುಗಳೆಲ್ಲ ಭೇದವನರಿಯಬಲ್ಲವೇ? ಎಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವ:—** ಲಿಂಗವಂತನು ಧರಿಸುವ ಬಾಹ್ಯಲಿಂಗವು ಒಂದು ಚಿನ್ಹವಾಗಿ ಮಾತ್ರವಿದೆ. ಹ್ಯಾಗೆ ಮುದ್ರೆಯನ್ನು ಒತ್ತಿದರೆ, ಪದಾರ್ಥವು ಇಂತಹದೆಂದು ತಿಳಿಯಲಿಕ್ಕೆ ಆಸ್ಪದವಾಗುತ್ತದೋ ಹಾಗೆಯೇ ಈ ಚಿನ್ಹವಿರುತ್ತದೆ. ಆದರೆ ಪರಮಾತ್ಮನಲ್ಲಿ ನಿಜವಾದ ಮೋಹವಿರಬೇಕು. ಅದೇ ಲಿಂಗದ ಬರುವಿಕೆಯ ಕುರುಹು. ಅದೇ ಮುಂದೆ ಪ್ರಾಣಲಿಂಗವೆನಿಸುವದು. ಆದರೆ ಬರೇ ಮುದ್ರೆಯ ವಸ್ತು ಪ್ರಾಣಲಿಂಗಿಯಾಗಬಲ್ಲುದೇ? ದೇವರಿಗೆ ಬಿಟ್ಟ ಗೂಳಿಗಳಿಗೆ ಲಿಂಗಮುದ್ರೆಯನ್ನು ಒತ್ತುವದುಂಟು. ಆದರೆ ಆ ಪಶುಗಳಿಗೆ ಈ ಮುದ್ರೆ ಏನೆಂಬುದು ತಿಳಿಯುವದೇ? ತಾವು ಪರಮಾತ್ಮನಿಗೆ ಸಂಬಂಧಿಸಿದ ಪ್ರಾಣಿಗಳೆಂಬ ತಿಳುವಳಿ

ಕೆಯು ಅವುಗಳಿಗೆ ಇರುವುದೇ? ಇರುವದಿಲ್ಲ. ಅದೇ ಪ್ರಕಾರ ಲಿಂಗದ ತಿಳುವಳಿಕೆ ಇಲ್ಲದವರಿಗೆ ಒರೆ ಲಿಂಗಧಾರಣೆಯಾದರೆ, ಅವರು ಇಂಥ ಡಾಗಿನ ಪಶುಗಳೆಂದು ವಚನಕಾರನು ಅಂದಿರುವನು. ಪ್ರತಿಯೊಬ್ಬನಲ್ಲಿ ಪರಮಾತ್ಮನ ಬಗ್ಗೆ ನಿಜವಾದ ಮೋಹವಿರಬೇಕೆಂದು ವಚನಕಾರನ ಭಾವವು. ಈ ಮೋಹದ ಮೂಲಕವೇ ಮನುಷ್ಯನ ಪ್ರಗತಿಯು.

**ವಚನ**:— ೪೧ ತುಪ್ಪದಲ್ಲಿ ಬೆಂದರೇನು? ಸಪ್ಪೆಯಾಗಿ ತೋರಿತ್ತು. ಅರಿವುಳ್ಳವನೆಂದು ಕುರುಹಿನ ಬೆಂಬಳಿಯಲ್ಲಿ ಅಡಗಿದರೆ ಅರುಹು ಕುರುಹು ನಿಷ್ಫಲ. ಆರನೂ ಕೆಡೆ ನುಡಿಯ ಬೇಡೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ**:— ಇಷ್ಟಲಿಂಗದ ಮರ್ಮವನ್ನು ತಿಳಿದುಕೊಂಡು ಮನುಷ್ಯನು ಆಚರಿಸತಕ್ಕದ್ದು. ಇಲ್ಲದೆ ಹೋದಲ್ಲಿ ಅದಕ್ಕೊಂದು ಸಾದೃಶ್ಯವನ್ನು ವಚನಕಾರನು ಕೊಟ್ಟಿರುವನು. ಜನರು ಒಂದು ಪದಾರ್ಥವು ಸಿಹಿಯಾಗಬೇಕೆಂದು ಅದನ್ನು ತುಪ್ಪದಲ್ಲಿ ಕರಿಯುವರು. ಹೀಗೆಯೇ ಈ ಸ್ಥಿತಿಯು ಎಂದು ಅಂದಿರುವನು. ಅಂದರೆ ಈ ಪದಾರ್ಥವು ಕಮ್ಮಗೆ ಆಗಿ ನಾಲಿಗೆಗೆ ಅತ್ಯಂತ ರುಚಿಕರವಾಗಿ ಹತ್ತಬಹುದು. ಆದರೆ ಅದರ ಸಾರವೆಲ್ಲವೂ ಹೊರಟು ಹೋಗಿ ಅದು ಸಪ್ಪೆ ಮಾತ್ರ ಇರುತ್ತದೆಂಬದನ್ನು ಜನರು ತಿಳಿಯರು. ಹಾಗೆಯೇ ಲಿಂಗವೆಂಬುದಾದರೂ ಇರುತ್ತದೆ. ಇಷ್ಟಲಿಂಗವೆಂಬುದು ಕುರುಹು ಮಾತ್ರ ಇದೆ ಎಂಬದನ್ನು ತಿಳಿಯದೆ ಆಚರಿಸಿದಲ್ಲಿ ಅದೂ ನಷ್ಟವಾಗಿ ಹೋಗುತ್ತದೆ. ಅದರೊಡನೆಯೇ ಅರುಹೂ ನಷ್ಟವಾಗುತ್ತದೆ. ಆದರೆ ಹೀಗೆ ನಷ್ಟವಾಗದೆ ಹೋಗಲು ಒಂದು ಸಾಧನವಿರುತ್ತದೆ. ಅದು ಏನಂದರೆ ಜಗತ್ತಿನಲ್ಲಿ ಯಾರ ಕೂಡವೂ ದ್ವೇಷವನ್ನು ಬಳಸದೆ ದುಷ್ಟ ವಾಕ್ಯಗಳನ್ನಾಡದೆ ಇದ್ದರೆ ಕುರುಹೂ ಅರುಹೂ ಎರಡೂ ಬಲಿಯುವವು ಮತ್ತು ಅವು ಶರೀರಕ್ಕೆ ಪುಷ್ಟಿಯನ್ನು ಕೊಡುವವು.

**ವಚನ**:— ೪೨. ಪ್ರಾಣ ಪ್ರಣವವೆಂಬರು. ಪ್ರಾಣಕ್ಕೂ ಪ್ರಣವಕ್ಕೂ ಏನು ಸಂಬಂಧ? ಪ್ರಾಣವೇ ಪ್ರಳಯಕ್ಕೊಳಗಾಗಿ ತಿರುತಿರುಗಿ ಬಪ್ಪುದ ಕ್ಕೊಡಲಾಯಿತ್ತು. ಪ್ರಣವವೆ ಪ್ರಸನ್ನವಾಗಿಪ್ಪುದೆಂದನಂಬಿಗ ಚೌಡಯ್ಯ.

**ಭಾವ**:— ಇದರಲ್ಲಿ ಲಿಂಗಧಾರಣದ ತತ್ವವನ್ನು ವಚನಕಾರನು ಉಲ್ಲೇಖಿಸಿ ಅದರಿಂದ ಹ್ಯಾಗೆ ತನ್ನ ಪ್ರಗತಿಯನ್ನು ಮಾಡಿಕೊಳ್ಳಬೇ

ಕೆಂಬುದನ್ನು ವಿವರಿಸಿರುವನು. ಇಷ್ಟಲಿಂಗವನ್ನು ಕೊಡುವಲ್ಲಿ ಅದು ನಿನ್ನ ಪ್ರಾಣವು ಎಂದು ಹೇಳಿ ಗುರುವು ಕೊಡುವನು. ಹೀಗೆ ಕೊಡುವ ಕಾಲಕ್ಕೆ ಗುರುವು ಮಂತ್ರೋಪದೇಶವನ್ನು ಮಾಡಿ ಆ ಮಂತ್ರದ ಸಾಮರ್ಥ್ಯದಿಂದ ಅವನ ಕಳೆಯನ್ನು ಇಷ್ಟಲಿಂಗದಲ್ಲಿ ತುಂಬುವನು. ಇದರಿಂದ ಮನುಷ್ಯನ ಪ್ರಾಣವು ಪ್ರಣಮವಾಯಿತ್ತೆಂದು ಅನ್ನುವರು. ಆದರೆ ಜನರು ಇವೆರಡರುಗಳ ಸಂಬಂಧವನ್ನು ಅರಿಯರು. ಪ್ರಾಣದ ಗುಣವು ಪ್ರಳಯಕ್ಕೆ ಒಳಗು ಮಾಡುವದು ಇರುತ್ತದೆ. ಅದು ತಿರು ತಿರುಗಿ ಭವಕ್ಕೆ ಬಂದು ಪುನರ್ಜನ್ಮಗಳನ್ನು ಹೊಂದಿಸುತ್ತದೆ. ಈ ಸ್ಥಿತಿಯು ಆಗಬಾರದೆಂದು ಆ ಪ್ರಾಣಕ್ಕೆ ಪ್ರಣಮವನ್ನು ಹೊಂದಿಸುವರು. ಈ ಹೊಂದಿಕೆಯನ್ನು ಅರಿಯಬೇಕೆಂದು ವಚನಕಾರನು ಇದರಲ್ಲಿ ಅಂದಿರುವನು. ಈ ಹೊಂದಿಕೆಯನ್ನು ಅರಿದಾಗಲೇ ಆ ಪ್ರಣಮವು ಅವನಿಗೆ ಪ್ರಸನ್ನವಾಗುತ್ತದೆ. ಇದೇ ಲಿಂಗದ ಅರಿವು, ಆತ್ಮಜ್ಯೋತಿಯ ಪ್ರಕಾಶವನ್ನು ಬರಮಾಡಿಕೊಳ್ಳುವದು ಇರುತ್ತದೆ.

**ವಚನ**:— ೪೩. ಎಲ್ಲವ ಕಳೆದುಳಿದ ಹೂವ ತಂದು ಗೆಲ್ಲ ಸೋಲಕ್ಕೊಳಗಾಗದ ನೀರನೆ ತುಂಬಿ ಕರಣಂಗಳೆಲ್ಲವು ಕಂಗಳು ತುಂಬಿ ನಿಂದು ನೋಡಿ ತನ್ನಂಗದಿಚ್ಛೆಯ ಮರೆದು ಲಿಂಗವ ಪೂಜಿಸಬೇಕೆಂದನಂಬಿಗ ಚೌಡಯ್ಯ.

ಭಾವ:— ಆತ್ಮಜ್ಯೋತಿಯ ಪ್ರಕಾಶವು ಹೊರಹೊರಟ ಬಳಿಕ ಹ್ಯಾಗೆ ಆಚರಿಸಬೇಕೆಂಬದನ್ನು ಅಂಬಿಗರ ಚೌಡಯ್ಯನು ಇಲ್ಲಿ ಹೇಳಿರುವನು. ಆಗ ಇಂಥವನ ಲಿಂಗಪೂಜೆಯೇ ಬೇರೆ ವಿಧವಾಗುವದು. ಅವನು ಸಂಸಾರದ ದುಷ್ಟ ವ್ಯಾಪಾರಗಳನ್ನು ಕಳೆದು ಬಿಟ್ಟಿರುವನು. ಹೀಗೆ ಕಳೆದು ಬಿಟ್ಟ ಬಳಿಕ ಯಾವದು ತನ್ನಲ್ಲಿ ಉಳಿಯುವದೋ ಅದೇ ಅವನ ಪೂಜೆಗೆ ಪುಷ್ಪವು. ಅದನ್ನೇ ಅವನು ಲಿಂಗಕ್ಕೆ ಅರ್ಪಿಸತಕ್ಕದ್ದು. ಅವನಿಗೆ ಗೆಲವೂ ಇಲ್ಲ, ಸೋಲೂ ಇಲ್ಲ. ಎಲ್ಲವೂ ಸಮನಾಗಿ ಇರುತ್ತವೆ. ಇಂಥ ಭಾವವನ್ನು ಅವನು ಮನಸ್ಸಿನಲ್ಲಿ ಇರಿಸತಕ್ಕದ್ದು. ಲಿಂಗಕ್ಕೆ ಅರ್ಪಿಸಲು ಇದೇ ಅವನಿಗೆ ಉದಕವು. ಆಗ ಅವನ ಕರಣಂಗಳೆಲ್ಲವು ಲಿಂಗ ಕರಣಂಗಳಾಗಿ ವ್ಯವಹರಿಸಹತ್ತುವನು. ಈ ಪ್ರಕಾರ ಪರಮಾತ್ಮನಲ್ಲಿ ಬೆರೆದು ಅವನಲ್ಲಿಯೇ ಧ್ಯಾನಾಸಕ್ತನಾಗಿ ಲಿಂಗವನ್ನು ನಿರೀಕ್ಷಿಸುತ್ತಿರು

ವನು. ಆಗ ಅವನಿಗೆ ಅಂಗದ ಗುಣಗಳು ಉಳಿಯುವದಿಲ್ಲ. ಅವು ಗಳನ್ನೆಲ್ಲ ಅವನು ಮರೆದು ಲಿಂಗದೊಡನೆ ವರ್ತಿಸುವನು. ಈ ಪ್ರಕಾರದ ವರ್ತನೆಯೇ ಅವನಿಗೆ ಲಿಂಗ ಪೂಜೆಯು ಎಂದು ವಚನಕಾರನು ಇಲ್ಲಿ ಹೇಳಿರುವನು.

**ವಚನ:**— ೪೪. ಅನೆಂಬುದಿದೇನೊ? ಇದಿರಿಟ್ಟು ತೋರುವುದಿದೇನೋ? ಇದೆಲ್ಲಿಂದಲೊದಗಿತ್ತು, ಇದರಲ್ಲಿ ಲಯುವು ತಾನೇ ಎಂದು ಅನುಮಾನಿಸಿ, ಶ್ರೀಗುರು ಚರಣವ ನಂಬಿ, ಅಂತರ್ಮುಖದಲ್ಲಿ ವಿಚಾರಿಸಿ ನೋಡಿ, ಅಲ್ಲಿ ಒಂದು ಮಾರ್ಗವ ಕಂಡು, ಆ ಮಾರ್ಗದ ಬಳಿವಿಡಿದು, ತಲೆ ಹೊಲಕ್ಕೆ ಹೋಗಿ, ಒಂದು ಮುಂದು ಮರೆದು, ಮಹಾ ಬೆಳಗಿನ ಬೆಳಗಿನೊಳು ನಿಂದು, ಪರಮಾನಂದದ ಸಾಗರದೊಳು ಸಮರಸವಾದವಂಗೆ ಇಹಪರವಿಲ್ಲೆಂದನಂಬಿಗ ಚೌಡಯ್ಯ.

**ಭಾವ:**— ವಚನಕಾರನು ಲಿಂಗ ಪೂಜೆಯ ಮರ್ಮವನ್ನು ಇದರಲ್ಲಿ ಹೇಳಿರುವನು. ಪೂಜೆಯ ಕಾಲದಲ್ಲಿ ನಾನು ಮತ್ತು ಇವರು ಎಂಬ ಭೇದಭಾವವನ್ನು ದೂರಮಾಡತಕ್ಕದ್ದು. ಈ ಉಭಯ ಪದಾರ್ಥಗಳು ಹ್ಯಾಗೆ ಉಂಟಾದವು ಎಂಬದನ್ನು ಅವನು ತಿಳಿಯಬೇಕು. ಹೀಗೆ ತಿಳಿದಲ್ಲಿ ಅವನಿಗೆ ನಿಜವಾದ ಜ್ಞಾನವು ಒದಗುವದು. ಈ ಜ್ಞಾನದಲ್ಲಿಯೇ ಅವನು ಏಕಾಕಾರನಾಗತಕ್ಕದ್ದು. ಇದು ಸಿದ್ಧಿಸಬೇಕಾದರೆ ಗುರುವಿನಲ್ಲಿ ಭಕ್ತಿಯುನ್ನು ಹೊಂದಿರಬೇಕು. ಇದರಿಂದ ಅಂತರಿಂದ್ರಿಯದಲ್ಲಿ ವಿಚಾರ ಹುಟ್ಟುವದು. ಆಗ ಅಲ್ಲಿ ಅವನಿಗೆ ಒಂದು ಮಾರ್ಗವು ಕಣ್ಣಿಗೆ ಬೀಳುವದು. ಆ ಮಾರ್ಗದಿಂದ ಮುಂದೆ ಹೋದಲ್ಲಿ ಬ್ರಹ್ಮರಂಧ್ರವನ್ನು ಪ್ರವೇಶಿಸುವನು. ಅಲ್ಲಿ ಅವನು ನಿಶ್ಶಂಕಮನಸ್ಕನಾಗಿ ಅಲ್ಲಿ ಹಬ್ಬಿದ ಬೆಳಗಿನಲ್ಲಿ ಪುನಃ ಒಂದು ಬೆಳಗನ್ನು ಕಂಡು ಅದರಲ್ಲಿ ನಿಂತುಕೊಳ್ಳಲು ಅವನಿಗೆ ಒಂದು ಬಗೆಯ ಪರಮಾನಂದವಾಗುವದು. ಆ ಆನಂದಸಾಗರದಲ್ಲಿ ಅವನು ಸಮರಸವಾಗಬೇಕು. ಇಂಥವನಿಗೆ ಇಹ ಪರವೆಂಬುವೆರಡೂ ಇಲ್ಲವೆಂದು ವಚನಕಾರನು ಹೇಳಿರುವನು.

**ವಚನ:**— ೪೫ ನವನಾಳ ಪದ್ಮದ ಅಷ್ಟದಳವೊಳಗೆ, ಎಪ್ಪತ್ತು ಮೂರು ನಾಳ ನೋಡಾ! ಸುಳಿದು ಬೀಸುವ ವಾಯು, ಒಳಗೆ ಆತ್ಮಜ್ಯೋತಿ, ಅಲ್ಲಿಂದೊಳಗಿಪ್ಪ ಹಂಸನ ಹೃದಯುವ ನೋಡಾ! ಹಿರಿದೊಂದು ಭೂತ ಹುದುಗಿಪ್ಪ ಭೇದವ ನಿಲುಕಿ ನೋಡಿಯೇ ಕಂಡನಂಬಿಗಚೌಡಯ್ಯ.

**ಭಾವಃ**— ಹೀಗೆ ಶಿವಯೋಗಾನಂದದಲ್ಲಿರುವ ಮನುಷ್ಯನ ಒಳಗಿನ ಶರೀರವು ಹ್ಯಾಗಿರುತ್ತದೆಂಬದನ್ನು ವಚನಕಾರನು ಇಲ್ಲಿ ವಿವರಿಸಿರುವನು. ನವನಾಳ ಪದ್ಮವೆಂಬುದಿದ್ದು ಅದಕ್ಕೆ ಅಷ್ಟದಳಗಳಿವೆ, ೭೩ ನಾಳಗಳಿವೆ. ಇಂಥ ಒಂದು ಕಮಲವು ಹೃದಯದಲ್ಲಿ ಇದೆ. ಇದೇ ಪ್ರಾಣಲಿಂಗದ ಆವಾಸ ಸ್ಥಾನವು. ಇದರ ಮೂಲಕವಾಗಿಯೇ ಮನುಷ್ಯನ ಶಕ್ತಿಯು ಇಂದ್ರಿಯಗಳ ದ್ವಾರಾ ಹೊರ ಹೊರಟು ವ್ಯವಹರಿಸುತ್ತದೆ. ಹೀಗೆ ಹೊರ ಹೊರಡಬೇಕಾದರೆ ಶರೀರದಲ್ಲಿ ವಾಯುಗಳು ಇದ್ದು ಅವುಗಳ ಸಂಬಂಧದಿಂದ ಅನೇಕ ವ್ಯಾಪಾರಗಳು ನಡೆಯುತ್ತವೆ. ಈ ಪ್ರಕಾರ ಒಳಗೆ ಆತ್ಮಜ್ಯೋತಿ ಎಂದರೆ ಪ್ರಾಣಲಿಂಗವಿದ್ದು ಅದರ ಸ್ಥಾನವು ಹೃದಯವು, ಈ ಹೃದಯದಲ್ಲಿ ಜೀವನೆಂಬ ಹಂಸನು ವಾಸಿಸಿದ್ದಾನೆ, ಈ ಸ್ಥಿತಿಯಲ್ಲಿದ್ದುದನ್ನು ನಾನು ಹಣಿಕಿ ಹಾಕಿ ನೋಡುತ್ತಲಿದ್ದೇನೆಂದು ವಚನಕಾರನು ಹೇಳಿರುವನು.

**ವಚನಃ**-- ೪೬. ಬಯಲ ಉದಕವ ಹಿಡಿದು ಮಜ್ಜನಕ್ಕೆರೆವೆನಯ್ಯ. ಅಷ್ಟದಳ ಪುಷ್ಪ ಪೂಜೆಯ ಮಾಡುವೆನಯ್ಯ, ಸುಗಂಧ ದುರ್ಗಂಧವ ಕಳೆದು ಧೂಪಾರತಿಯ ಮಾಡುವೆನಯ್ಯ, ಪರಬ್ರಹ್ಮವ ಹಿಡಿದು ನಿವಾಳಿಯನೆತ್ತುವೆನಯ್ಯ, ಪುಣ್ಯ ಪಾಪವ ಕಳೆದೋಗರವನಿಕ್ಕುವೆನಯ್ಯ, ಹದಿನಾಲ್ಕು ಭುವನವನೊಳಗು ಮಾಡಿ ಹೊರಗೆ ನಿಂದು ಸದಾಶಿವನ ಪೂಜಿಸಿದಾತನಂಬಿಗಚೌಡಯ್ಯ.

ಭಾವಃ— ಈ ಪ್ರಕಾರ ಹೃದಯದಲ್ಲಿ ಪ್ರಾಣಲಿಂಗವಿದ್ದು ಅದರ ಪೂಜೆಯನ್ನು ಮಾಡುತ್ತಿದ್ದೇನೆಂದು ವಚನಕಾರನು ಅಂದಿರುವನು. ಆದರೆ ಈ ಪೂಜೆಯ ತರಹವು ಮಾತ್ರ ಬೇರೆ ಇದೆ. ಅದಕ್ಕೆ ಆಕಾಶವೆಂಬ ಉದಕವನ್ನು ನಾನು ಸುರಿಯುತ್ತಿದ್ದೇನೆ. ಹೃದಯದಲ್ಲಿ ಅಷ್ಟದಳ ಕಮಲವಿದ್ದು ಅದನ್ನೇ ನಾನು ಈ ಲಿಂಗಕ್ಕೆ ಅರ್ಪಿಸುತ್ತೇನೆ. ಯಾವುದಕ್ಕೆ ಸುಗಂಧವೂ ಇಲ್ಲ ದುರ್ಗಂಧವೂ ಇಲ್ಲ ಇಂಥ ಒಂದು ಧೂಪಾರತಿಯನ್ನು ನಾನು ಅದಕ್ಕೆ ತೋರಿಸುತ್ತೇನೆ. ಪರಬ್ರಹ್ಮವನ್ನು ಹಿಡಿದು ಈ ಲಿಂಗವನ್ನು ಶುದ್ಧ ಮಾಡುವೆನು. ಪುಣ್ಯವೂ ಇಲ್ಲ, ಪಾಪವೂ ಇಲ್ಲ ಇಂಥ ಅನ್ನವನ್ನು ನಾನು ಅದಕ್ಕೆ ಅರ್ಪಿಸುತ್ತೇನೆ. ಹದಿನಾಲ್ಕು ಭುವನಗಳಿದ್ದು ಅವುಗಳಲ್ಲಿ ಸೇರಿಕೊಳ್ಳದೆ, ಅಂದರೆ ಅವುಗಳಿಗೆ ಮೀರಿ ನಿಂತು ಸದಾಶಿವ ಪೂಜೆಯನ್ನು ಮಾಡುವೆನೆಂದು ಅಂಬಿಗರ ಚೌಡಯ್ಯನು ಅಂದಿರುವನು.

**ವಚನಃ**— ೪೭. ಒಡಲಿಂಗಾರು ಬಾಯಿ, ನಡುವೆ ಮೂರು ದೇಹ, ಹಿಡಿವ ಪ್ರಣುತೆ ಹದಿನಾರು, ಆ ಸೊಡರಿಂಗೆರೆವೆಣ್ಣೆ ಬಯಲೆಣ್ಣೆ, ಆ ಸೊಡರೊಳಗಣ ಬೆಳಗ ದೃಢವಾಗಿ ಹಿಡಿದು ಕಡೆಗಾಣಿ ಎಂದನಂಬಿಗ ಚೌಡಯ್ಯ.

ಭಾವಃ— ಪ್ರಾಣಲಿಂಗ ಪೂಜೆಯ ರೀತಿಯನ್ನು ಮತ್ತೊಂದು ವಿಧವಾಗಿ ವಚನಕಾರನು ಇಲ್ಲಿ ಹೇಳಿರುವನು. ಶರೀರಕ್ಕೆ ೬ ಮುಖಗಳು ಇವೆ. ಈ ಮುಖಗಳು ಇಂದ್ರಿಯಗಳೇ ಇರುತ್ತವೆ. ಈ ಇಂದ್ರಿಯಗಳಿಗೆ ಸಂಬಂಧಿಸಿ ಮೂರು ದೇಹಗಳಿವೆ. ಅವು ಯಾವವೆಂದರೆ, ಸ್ಥೂಲ, ಸೂಕ್ಷ್ಮ, ಕಾರಣಗಳು. ಈ ಪೂಜೆಯಲ್ಲಿ ೧೬ ಪ್ರಣುತೆಗಳು ಇವೆ. ಈ ಪ್ರಣುತೆಗಳಲ್ಲಿ ಉರಿಯಲಿಕ್ಕೆ ಎಣ್ಣೆ ಎಂದರೆ ಆಕಾಶವೇ ಇದೆ. ಇದರಿಂದ ಒಂದು ಜ್ಯೋತಿಯು ಉದ್ಭವಿಸುವದು. ಆ ಜ್ಯೋತಿಯ ಬೆಳಗನ್ನು ಗಟ್ಟಿಯಾಗಿ ಹಿಡಿದು ಈ ಭವವನ್ನು ದಾಟಿರಿ ಎಂದು ವಚನಕಾರನು ಅಂದಿರುವನು.

**ವಚನಃ**— ೪೮. ಬೆಲ್ಲಕ್ಕೆ ಚಮರ ರಸವಲ್ಲದೆ ಸಿಹಿಗೆ ಚಮರ ರಸ ಉಂಟೆ? ಕುರುಹಿಗೆ ಪೂಜೆಯಲ್ಲದೆ, ಅರುಹಿಂಗೆ ಪೂಜೆಯುಂಟೆ? ಅರುಹು ಕರಿಗೊಂಡಲ್ಲಿ ಕಯ್ಯ ಕುರುಹು ಅಲ್ಲಿಯೇ ಲೋಪವೆಂದನಂಬಿಗಚೌಡಯ್ಯ.

ಭಾವಃ— ಇಲ್ಲಿ ಇಷ್ಟಲಿಂಗ ಮತ್ತು ಪ್ರಾಣಲಿಂಗ ಇವುಗಳಲ್ಲಿಯ ಭೇದವನ್ನು ಹೇಳಿರುವನು. ಬೆಲ್ಲ ಮತ್ತು ಅದರ ಸಿಹಿ ಎಂದು ಎರಡು ಇದ್ದು ಬೆಲ್ಲಕ್ಕೆ ಸಿಹಿ ಇರುತ್ತದೆ ಹೊರ್ತು ಸಿಹಿಗೆ ಸಿಹಿ ಇರಲಾರದು. ಯಾಕಂದರೆ ಅದರಲ್ಲಿ ಅದು ಏಕಾಕಾರವಾಗಿರುವದು. ಹಾಗೆಯೇ ಕುರುಹಿಗೆ ಪೂಜೆ ಇರುತ್ತದಲ್ಲದೆ, ಕುರುಹಿನಲ್ಲಿ ಅಡಗಿರುವ ಜ್ಞಾನಕ್ಕೆ ಪೂಜೆಯು ಇರಲಾರದು. ಪೂಜೆಯ ಉದ್ದೇಶವು ಅರಿವು ಸಂಪಾದಿಸುವದಿದ್ದು ಆ ಅರಿವಿನ ಅರಿವು ಅಸ್ತಿತ್ವದಲ್ಲಿರಲಾರದು. ಅರಿವಿನ ಅರಿವನ್ನು ತಿಳಿಯುವದು ಶಕ್ಯವಲ್ಲ. ಈ ಸ್ಥಿತಿಯೊದಗಿದ ಕೂಡಲೆ ಅದು ಅಲ್ಲಿ ಕರಿಗೊಂಡಂತೆಯೇ ಸರಿ. ಎಂದರೆ ಕಣ್ಣಿಗೆ ಕಾಣಿಸಲಾರದು. ಶೂನ್ಯವಾಗುವದು. ಈ ಸ್ಥಿತಿಯಲ್ಲಿ ಇಷ್ಟಲಿಂಗವು ಅಲ್ಲಿಯೇ ಲೋಪವಾಗುವದೆಂದು ವಚನಕಾರನ ಭಾವವು. ಇಷ್ಟಲಿಂಗವು ಪ್ರಾಣಲಿಂಗದಲ್ಲಿ ಬೆರೆದು ಅದರ ಸ್ವರೂಪು ಹೊರಟುಹೋಗುವದು,

**ವಚನಃ**— ೪೯. ನೆನೆವೆನೆ? ಮರೆದವನಲ್ಲ. ನೆನೆವೆನೆ? ಉದಾಸೀನಿಯಲ್ಲ, ಕುರುಹೆಂಬೆನೆ? ತೆರಹಿಲ್ಲವಾಗಿ. ಅರಿಯೆ ನಿನ್ನಾವ ಭಾವಂಗಳೆಂಬವನು. ಎರಡಳಿದು ಒಂದುಳಿದ ಕಾರಣ ನೆನೆಯಲಿಲ್ಲೆಂದನಂಬಿಗ ಚೌಡಯ್ಯ.

ಭಾವಃ— ಹೀಗೆ ಪ್ರಾಣಲಿಂಗಿಯಾದವನು ಲಿಂಗವನ್ನು ನೆನೆಯು ಲಿಕ್ಕೆ ಬರಲಾರದು. ನೆನೆಯುವದೆಂದರೆ ಗೊತ್ತುಪಡಿಸಿಕೊಳ್ಳುವದು. ಪ್ರಾಣದಲ್ಲಿ ಪ್ರಕಟವಾದ ಲಿಂಗವನ್ನು ಪುನಃ ಗೊತ್ತುಪಡಿಸಿಕೊಳ್ಳು ವದು ಶಕ್ಯವಲ್ಲ. ಆದ್ದರಿಂದ ನೆನೆಯಲಿಕ್ಕೆ ಅದು ಬರಲಾರದು. ಅದೇ ಮೇರೆಗೆ ಉದಾಸೀನಿಯಾದವನು ಎಂದರೆ ತಿಳಿದೂ ಇಲ್ಲ ಮರೆದೂ ಇಲ್ಲ ಇಂಥ ಸ್ಥಿತಿಯಲ್ಲಿರುವವನು ಲಿಂಗವನ್ನು ನೆನೆಯಲು ಶಕ್ಯವು. ಆದರೆ ಪ್ರಾಣಲಿಂಗಿಯಾದವನು ಈ ಸ್ಥಿತಿಯಲ್ಲಿಯೂ ಇರುವದಿಲ್ಲ. ಆದ್ದರಿಂದ ಅವನು ಲಿಂಗವನ್ನು ನೆನೆಯಲಾರನು. ಆದರಂತೆಯೇ ಲಿಂಗವು ಕುರು ಹಿನ ಸ್ಥಿತಿಯಲ್ಲಿದ್ದರೆ ನೆನೆಯಬಹುದು. ಅದರೆ ಪ್ರಾಣಲಿಂಗಿಗೆ ಲಿಂಗವು ಎಲ್ಲ ಕಡೆಗೂ ವ್ಯಾಪಿಸಿರುತ್ತದೆ. ಅದು ಇಂಥದೊಂದು ಸ್ಥಳದಲ್ಲಿದೆ ಎಂದು ಹೇಳಲಿಕ್ಕೆ ಬರಲಾರದು. ಆದ್ದರಿಂದ ಅದನ್ನು ನೆನೆಯಲು ಶಕ್ಯವಲ್ಲ. ಯಾಕಂದರೆ ಆಗ ಲಿಂಗದಲ್ಲಿ ಎರಡು ಎಂಬ ಭಾವವಳಿದು ಒಂದೇ ಉಳಿದಿರುತ್ತದೆ. ಮನುಷ್ಯನ ವ್ಯಾಪಾರ, ಮನಸ್ಸು ಸ್ಥಾನ ಮೊದಲಾದವುಗಳಲ್ಲಿ ಭಿನ್ನತೆಗಳುಳಿಯದೆ ಒಂದೇ ಭಾವ ಉಳಿದಿರುತ್ತದೆ. ಆದ ಕಾರಣ ಈ ಸ್ಥಿತಿಯಲ್ಲಿ ನೆನೆಯಲಿಕ್ಕೆ ಶಕ್ಯವಿಲ್ಲ. ಇದೇ ಐಕ್ಯಸ್ಥಿ ತಿಯು.

ಈ ಪ್ರಕಾರ ಅಂಬಿಗರ ಚೌಡಯ್ಯನು ಆರಂಭ ಸ್ಥಿತಿಯಿಂದ ಹಿಡಿದು ಅಂತ್ಯ ಸ್ಥಿತಿಯ ವರೆಗೂ ಹ್ಯಾಗೆ ಹ್ಯಾಗೆ ತನ್ನ ಪ್ರಗತಿಯನ್ನು ಮಾಡಿಕೊಳ್ಳತಕ್ಕದ್ದು, ಈ ಸ್ಥಿತಿಯುಂಟಾದಲ್ಲಿ ಹ್ಯಾಗೆ ಹ್ಯಾಗೆ ಅವನಲ್ಲಿ ಬದಲಾವಣೆಗಳಾಗುತ್ತ ಹೋಗುವವು ಎಂಬದನ್ನು ವಿವರಿಸಿರುವನು.



## ಲಿಂಗಪೂಜೆಯ ರೀತಿ.

**ವಿವರಣೆ: –** ಪರಮಾತ್ಮನು ಎಂದರೇನು, ಅವನ ಜ್ಞಾನವೆಂದರೇನು, ಅವನು ಎಲ್ಲಿ ಇದ್ದಾನೆ, ಅವನನ್ನು ತಿಳಿಯುವ ಬಗೆ ಹೇಗೆ ಮತ್ತು ತಾನು ಹೇಗೆ ಮುಕ್ತನು ಆಗುವದು ಎಂಬದನ್ನು ವಚನಕಾರನು ವಿವರಿಸಿ, ಪರಮಾತ್ಮನ ಅಥವಾ ಲಿಂಗದ ಪೂಜೆ ಎಂದರೇನು ಎಂಬುದನ್ನು ಕೆಳಗೆ ಕಾಣಿಸಿದ ವಚನಗಳಲ್ಲಿ ವಿವರಿಸಿರುವನು.

ವೀರಶೈವರಲ್ಲಿ ಲಿಂಗಪೂಜೆ ಎಂದರೆ ಬಾಹ್ಯದಲ್ಲಿ ಆಚರಿಸುವ ಒಂದು ಬಗೆಯ ವಿಧಿ ಎಂದು ತಿಳಿಯಕೂಡದು. ಅದಕ್ಕೂ ಮನಸ್ಸಿಗೂ ನಡತೆಗೂ ಅತ್ಯಂತ ಸಂಬಂಧವಿದೆ. ಲಿಂಗಪೂಜೆಯಿಂದ ಮನಸ್ಸು ದೃಢಪಡುತ್ತದೆ. ನೈತಿಕಾಚಾರಣೆಗಳು ಉನ್ನತ ಸ್ಥಿತಿಯನ್ನು ಹೊಂದುತ್ತವೆ. ಮತ್ತು ಈ ಮೇರೆಗೆ ಅವನಲ್ಲಿ ಶುದ್ಧ ವರ್ತನೆಯು ತೋರಿದ ಹಾಗೆ ಲಿಂಗದ ಪ್ರಕಾಶವು ಅವನಲ್ಲಿ ಹೆಚ್ಚೆಚ್ಚಾಗಿ ಒಡಮೂಡುತ್ತ ಹೋಗುತ್ತದೆ. ಈ ಸ್ಥಿತಿಯು ಪ್ರಬಲವಾಗುತ್ತ ಹೋದ ಹಾಗೆ ಅವನ ಲಿಂಗದ ಪೂಜೆಯು ರೀತಿಯಾದರೂ ಬೇರೆ ತೆರನಾಗುತ್ತ ಹೋಗುತ್ತದೆ. ಅಂದರೆ ಅದು ಮಾನಸ ಪೂಜೆಯ ತೆರನಾಗುವದು. ಈ ವಿವರಣೆ ಮುಂದಿನ ವಚನಗಳಲ್ಲಿ ಬಂದಿರುತ್ತದೆ.

**ವಚನ:—** ೫೦. ಈರೇಳು ಭುವನವನೊಳಕೊಂಡ ಮಹಾಘನ ಲಿಂಗವು ಶಿವಭಕ್ತನ ಕರಸ್ಥಲದಾಯತಕ್ಕೆ ಬಂದು ಪೂಜೆಗೊಂಬ ಪರಿಯ ನೋಡಾ. ಅಪ್ರಮಾಣ ಅಗೋಚರವಾದ ಲಿಂಗದಲ್ಲಿ ಸಂಗವ ಬಲ್ಲಾತನೆ ಸದಾಚಾರ ಸದ್ಭಕ್ತನು. ಹೀಗಲ್ಲದೆ ಹಣದಾಸೆಗೆ ಹಂಗಿಗನಾಗಿ ಜಿಹ್ವಾ ಲಂಪಟಕ್ಕೆ ಅನಾಚಾರದಲ್ಲಿ ಉದರವ ಹೊರೆದು ಬದುಕುವಂತಹ ಭಂಡರು ಭಕ್ತರಾದವರುಂಟೇ ಹೇಳಯ್ಯ? ಅಂತಹ ಅನಾಚಾರಿ ಶಿವ ದ್ರೋಹಿಗಳ ಮುಖವ ನೋಡಲಾಗದು. ಅದೆಂತೆಂದೊಡೆ ಕತ್ತೆ ಭಕ್ತ ನಾದಡೆ ಕಿಸುಕುಳವ ತಿಂಬುವುದ ಮಾಣ್ಬುದೆ? ಹಂದೆ ಭಕ್ತನಾದಡೆ ಹಡಿಕೆಗೆ ಹರಿವುದ ಮಾಣ್ಬುದೆ? ಶುನಕಂಗೆ ಪಂಚಾಮೃತವ ನೀಡಲು ಅಡಗ ತಿಂಬುದ ಮಾಣ್ಬುದೆ? ಇಂತೀ ಅಂಗದ ಮೇಲೆ ಲಿಂಗ ಸಾಹಿತ್ಯವಾದ ಬಳಿಕ ಮರಳಿ ತನ್ನ ಜಾತಿಯವರ ಕೂಡಿದರೆ, ಆ

ಕತ್ತೆ ಹಂದಿ ಬೆಕ್ಕು ಶುನಕಗಿಂದತ್ತತ್ತ ಕಾಣಿರೋ. ಚಿನ್ನ ಬೆಟ್ಟವನೇರಿ ಕಣ್ಣುಗಾಣದಲ್ಲನಂತೆ ಗಣಿಯನೇರಿದ ಡೊಂಬ ವೈಮರೆದಿಪ್ಪಂತೆ, ಅಂಕವನೇರಿದ ಬಂಟ ಕೈಮರೆದಿಪ್ಪಂತೆ ಇಂತಿವರು ಮಾಡುವ ಭಕ್ತಿ ಎಲ್ಲವು ನಡು ನೀರೊಳು ಹೋಗುವ ಹರಿಗೋಲು ಹೊಡೆಗೆಡೆದಂತಾಯಿತ್ತು ಎಂದಾತ ಅಂಬಿಗರ ಚೌಡಯ್ಯ.

**ಭಾವ:—** ಲಿಂಗವೆಂಬುದು ೧೪ ಭುವನಗಳನ್ನು ತುಂಬಿಕೊಂಡದ್ದಿರುತ್ತದೆ. ಇಂಥ ವಿಸ್ತಾರವಾದ ಲಿಂಗವು ಕರಸ್ಥಲಕ್ಕೆ ಬರುವದು ಹೇಗೆ ಮತ್ತು ಅದರ ಪೂಜೆ ಮಾಡುವದಾದರೂ ಹೇಗೆ ಎಂಬವನ್ನು ವಚನಕಾರನು ಇಲ್ಲಿ ಹೇಳಿರುವನು. ಭಕ್ತನು ಯಾವನಿರುವನೋ ಅವನ ಕರಸ್ಥಲದಲ್ಲಿ ಮಾತ್ರ ಲಿಂಗವು ಬರುವದು ಶಕ್ಯವೆಂದು ಇಲ್ಲಿ ನಿರ್ದೇಶಿಸಿ, ವಚನಕಾರನು ಭಕ್ತನು ಹೇಗೆ ಇರಬೇಕೆಂಬುದನ್ನು ಹೇಳಿರುವನು. ಅವನು ಅನ್ನುವದೇನೆಂದರೆ, ಮೇರೆ ಇಲ್ಲದಂಥ ಮತ್ತು ಕಣ್ಣಿಗೆ ಕಾಣದಂಥ ಲಿಂಗದಲ್ಲಿ ಕೂಡ ಬಲ್ಲವನೇ ಸದಾಚಾರಿಯಾದ ಸದ್ಭಕ್ತನು. ಇಂಥವನು ಹಣದಾಸೆಯಿಂದ ದೂರಿರುವನು. ನಾಲಿಗೆಯ ರುಚಿಗೆ ಎಳಸನು. ದುಷ್ಟ ಕೃತಿಗಳನ್ನು ಮಾಡಿ ಹೊಟ್ಟೆಯನ್ನು ಹೊರೆಯನು. ಹೀಗೆ ವರ್ತಿಸುವಾತನೇ ನಿಜ ಭಕ್ತನು. ಆದರೆ ಈ ಪ್ರಕಾರ ವರ್ತಿಸದೆ, ಬರೇ ಬಾಹ್ಯ ಚಿನ್ಹಗಳನ್ನು ಯಾವನು ಧರಿಸುತ್ತಾನೋ ಅವನು ಭಕ್ತನೆನಿಸಿಕೊಳ್ಳಲಾರನು. ಕತ್ತೆಗೆ ಭಕ್ತನ ವೇಷವನ್ನು ಹಾಕಿದರೆ ಅದು ಹೊಲಸು ಮತ್ತು ಕಸವನ್ನು ತಿನ್ನದೆ ಬಿಡದು. ಹಂದೆಯು ಭಕ್ತನಾದರೆ, ಕಶ್ಮಲವನ್ನು ತಿನ್ನುವದನ್ನು ಬಿಡದು. ನಾಯಿಗೆ ಪಂಚಾಮೃತವನ್ನು ಉಣ್ಣಿಸಿದರೆ ಅದು ಮಾಂಸಾಹಾರಕ್ಕೆ ಹರಿಯದೆ ಇರದು. ಭಕ್ತನು ಕೆಟ್ಟ ವೃತ್ತಿಯಿಂದ ವರ್ತಿಸಿದರೆ ಮೇಲ್ಕಂಡ ಕೀಳ ಪ್ರಾಣಿಗಳಗಿಂತಲೂ ಕಡೆಯನು. ಇವನಿಗೆ ಲಿಂಗವಿರಲಾರದು. ಈ ಶ್ರೇಷ್ಠ ಚಿನ್ಹವನ್ನು ಧಾರಣ ಮಾಡಿ ಯಾವನು ದುರ್ವರ್ತನೆಯಿಂದ ನಡೆಯುತ್ತಾನೋ ಅವನು ಬಂಗಾರದ ಬೆಟ್ಟವನ್ನೇರಿ ಅದನ್ನು ಕಾಣದ ಕುರುಡನಂತೆ, ಅತ್ಯಂತ ಎತ್ತರವಾದ ಗಣಿಯನ್ನೇರಿ ಡೊಂಬನು ಅಲ್ಲಿ ವೈಮರೆದಂತೆ, ರಣರಂಗವನ್ನು ಹೊಕ್ಕ ಸಿಪಾಯಿಯು ಅಲ್ಲಿ ತನ್ನ ಕೈ ಮರೆದಂತೆ ಸರಿ. ಅಂದರೆ ಇವರು ನಾಶವಾಗುವರು. ಇವರು ಮಾಡುವಂಥ ಭಕ್ತಿಯು ನಡುನೀರಿನಲ್ಲಿ ಹರಿಗೋಲು

ಬುಡಮೇಲು ಮಾಡಿ ಮುಳುಗಿಸಿದಂತೆ ಆಗುವದು. ಭಕ್ತಿ ಇಲ್ಲದೆ ಮಾಡುವ ಪೂಜೆಯು ವ್ಯರ್ಥವೆಂದು ವಚನಕಾರನ ಭಾವವು.

**ವಚನಃ**— ೫೧. ಆರಕ್ಯಾರು ಬಿತ್ತಿದ ಗಿಡದ ಹೂವನೇ ಕೊಯ್ದು, ಊರಲ್ಲಿ ಕಟ್ಟಿದ ನೀರನೆ ತಂದು, ನಾಡೆಲ್ಲ ನೋಡಲೆಂದು ಪೂಜಿಸುವ ಪುಣ್ಯವು ಆ ಹೂವಿಗೋ ಆ ನೀರಿಗೋ ನಾಡೆಲ್ಲ ನೋಡಲೆಂದು ಪೂಜಿಸಿದಾತಗೋ? ಇದ ನಾನರಿಯೆ. ನೀವು ಬಲ್ಲಡೆ ಹೇಳೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ**— ಸಾಮಾನ್ಯ ಜನರು ಲಿಂಗಪೂಜೆಯ ಮರ್ಮವನ್ನು ಏನೂ ತಿಳಿಯದೆ, ಅದನ್ನು ಅವರು ಮಾಡುವ ರೀತಿಯನ್ನು ವಿವರಿಸಿ ಅವರ ಚೇಷ್ಟೆಯನ್ನು ಇಲ್ಲಿ ಮಾಡಿರುವನು. ಜನರು ತಾವು ಏನೂ ಶ್ರಮ ಪಡದೆ ಯಾರೋ ಬಿತ್ತಿದ ಗಿಡದ ಹೂವನ್ನು ತಂದು ಲಿಂಗಕ್ಕೆ ಏರಿಸುವರು. ಎಲ್ಲರೂ ಕೂಡಿ ಕಟ್ಟಿಸಿದ ಕೆರೆಯ ನೀರು ತನ್ನದೆಂದು ಅಂದುಕೊಂಡು ಅದರಿಂದ ಲಿಂಗಕ್ಕೆ ಮಜ್ಜನವೆರೆಯುವರು. ಹೀಗೆ ಅವರು ಜನರೆಲ್ಲರೂ ನೋಡಲೆಂದು ಬಾಹ್ಯ ಅಟ್ಟಹಾಸದಿಂದ ಪೂಜೆಯನ್ನು ಮಾಡುತ್ತಿದ್ದು ಇಂಥವರ ಪೂಜೆಯ ಫಲವು ಅವರಿಗೆ ಬರುತ್ತದೋ ಅಥವಾ ಆ ಹೂವಿಗೆ ಬರುತ್ತದೋ ಅಥವಾ ನೀರಿಗೆ ಬರುತ್ತದೋ ನನಗೆ ತಿಳಿಯದು. ನಿಮಗೆ ಗೊತ್ತಿದ್ದರೆ ಹೇಳಿರಿ ಎಂದು ಅಂದಿರುವನು.

**ವಚನಃ**— ೫೨. ಅರ್ಚನೆಯ ಮಾಡುವಲ್ಲಿ ವೇಷವರತಿರಬೇಕು. ಪೂಜೆಯ ಮಾಡುವಲ್ಲಿ ಪುಣ್ಯಮೂರ್ತಿಯಾಗಿರಬೇಕು. ಕೊಳುಕೊಡೆಯಲ್ಲಿ ಭೂತಹಿತನಾಗಿರಬೇಕು. ಇಂತೀ ಸಡಗರಿಸಿಕೊಂಡಿಪ್ಪಾತನಡಿಗೆರಗುವೆನೆಂದಾತನಂಬಿಗ ಚೌಡಯ್ಯ.

**ಭಾವಃ**— ವಚನಕಾರನು ಪೂಜೆಯನ್ನು ಹೇಗೆ ಮಾಡಬೇಕೆಂಬುದನ್ನು ಇಲ್ಲಿ ವಿವರಿಸಿರುವನು. ಪೂಜೆ ಮಾಡುವ ಕಾಲಕ್ಕೆ ಬಾಹ್ಯ ಆಡಂಬರುಗಳು ಏನೂ ಇರಬಾರದು. ಅವು ಹೊರಟು ಹೋಗಿರಬೇಕು. ಹಾಗೆಯೇ ಅವನು ಪುಣ್ಯ ಮೂರ್ತಿಯಾಗಿರಬೇಕು. ಎಂದರೆ ಸತ್ಕೃತ್ಯಗಳನ್ನು ಮಾಡುತ್ತ ಅವುಗಳ ಉಚ್ಚ ವಾತಾವರಣದಲ್ಲಿ ಮುಳುಗಿರಬೇಕು. ಕೊಡಕೊಳ್ಳುವ ವ್ಯವಹಾರದಲ್ಲಿ ಜಗತ್ತಿನ ಕೂಡ ಮಮತೆಯಿಂದಿದ್ದು ಎಲ್ಲರಿಗೂ ಹಿತವನ್ನು ಮಾಡುತ್ತಿರಬೇಕು. ಈ ಪ್ರಕಾರ ವರ್ತಿಸುವಂ

ಥನನ ಪಾದಕ್ಕೆ ನಾನು ಸಾಷ್ಟಾಂಗ ನಮಸ್ಕಾರ ಮಾಡುತ್ತೇನೆಂದು ಅಂದಿರುವನು.

**ವಚನ**:— ೫೩. ಸಂದೇಹ ಮಾಡುವಲ್ಲಿ ಮಾತೇ ಸೂತಕವಾಗಿ, ಆವೇತರಿಂದ ಒದಗಿದ ಶಿಲೆಯು ಪ್ರತಿಷ್ಠೆಯು ಮಾಡಿ, ತನ್ನ ಒಲವರ ವಿಶ್ವಾಸದಿಂದ ಕುರುಹ ಅರಿವುದು ಶಿಲೆಯೋ ಮನವೋ ಎಂದನಂಬಿಗ ಚೌಡಯ್ಯ.

**ಭಾವ**:— ಲಿಂಗಪೂಜೆಯು ಮಾಡುವಲ್ಲಿ ವಿಶ್ವಾಸವಿರಬೇಕೆಂದು ವಚನಕಾರನು ಇದರಲ್ಲಿ ಹೇಳಿರುವನು. ಈ ವಿಶ್ವಾಸದಿಂದ ಮನಸ್ಸು ದೃಢಪಡುವದು. ಮತ್ತು ಲಿಂಗವೆಂಬ ಕುರುಹಿನ ಜ್ಞಾನವಾಗುವದು. ಹೀಗೆ ಜ್ಞಾನವಾಗುವದು ಆ ಶಿಲೆಯು ಮೂಲಕವಲ್ಲ. ಆದರೆ ತನ್ನ ಮನಸ್ಸಿನ ಮೂಲಕವಾಗಿ ಎಂದು ವಚನಕಾರನು ಇಲ್ಲಿ ಹೇಳಿರುವನು. ಮನಸ್ಸಿನಲ್ಲಿ ಸಂದೇಹವಿಟ್ಟುಕೊಂಡು ಮಾತಾಡಿದಲ್ಲಿ ಆ ಮಾತು ಸೂತಕವೆನಿಸುವದು. ಎಂದರೆ ಶುದ್ಧವಾದುದಲ್ಲ. ಅದೇ ಮೇರೆಗೆ ಸರಿಯಾದ ರೀತಿಯಿಂದ ಶಿಲೆಯು ಪ್ರತಿಷ್ಠೆ ಮಾಡಿದ ಬಳಿಕ ಅದು ಶಿಲೆಯಲ್ಲ, ಆದು ಪರಮಾತ್ಮನ ಕುರುಹು ಎಂದು ತಿಳಿದು ಪೂಜಿಸಿದಲ್ಲಿ ಭಕ್ತನಲ್ಲಿ ಯಾವ ಪರಮಾತ್ಮನ ಜ್ಞಾನವು ಉದಯಿಸುವದೋ ಆ ಜ್ಞಾನವು ಆ ಶಿಲವ ಮೂಲಕವಲ್ಲ. ಅದು ಮನಸ್ಸಿನ ಮೂಲಕವೆಂದು ವಚನಕಾರನು ಇಲ್ಲಿ ಹೇಳಿರುವನು.

**ವಚನ**:— ೫೪. ಅಯ್ಯಾ ಪಾಷಾಣಕ್ಕೆ ಗಿರಿ ಸವೆದು, ಪತ್ರೆಗೆ ತರು ಸವೆದು, ಸಪ್ತಸಾಗರಂಗಳು ಮಜ್ಜನಕ್ಕೆ ಸವೆದು, ಅಗ್ನಿ ಧೂಪಕ್ಕೆ ಸವೆದು, ವಾಯು ಕಂಪಿತಕ್ಕೆ ಸವೆದು, ಉಘೆ ಚಾಂಗು ಭಲಾ ಎಂಬ ಸದ್ದು ಸವೆದು, ಎನಗಿನ್ನೆಂತೋ ಎನಗಿನ್ನೆಂತೋ? ಶರಣನ ಮಹಾ ಮನೆಯಲ್ಲಿ ಅಮರ ಗಣಂಗಳು ಲಿಂಗಾರ್ಚನೆಯು ಮಾಡುತ್ತ ಇದ್ದಾರೆ. ಅವರ ಪಾದುಕೆಯು ಕಾದಿದ್ದನೆಂದಾತನಂಬಿಗಚೌಡಯ್ಯ.

**ಅರ್ಥ**:— ಇಲ್ಲಿ ಬಾಹ್ಯ ಆಡಂಬರ ಮಾಡುತ್ತ ಪೂಜೆ ಮಾಡುವವರನ್ನು ಉದ್ದೇಶಿಸಿ ವಚನಕಾರನು ಚೇಷ್ಟೆಯಿಂದ ಹೇಳಿರುವನು. ಏನೆಂದರೆ, ಜನರು ಅಂಗದ ಮೇಲೆ ಲಿಂಗಧಾರಣ ಮಾಡುವ ಕುರಿತು ಗುಡ್ಡ ಗುಡ್ಡಗಳನ್ನು ಅಗಿದು ಕಲ್ಲು ತಂದು ಅವುಗಳಿಂದ ಲಿಂಗಗಳನ್ನು ಮಾಡಿ ಆ ಗುಡ್ಡಗಳನ್ನೆಲ್ಲ ಸವೆಯಿಸಿ ಬಿಟ್ಟರು. ಹೀಗೆ ಲಿಂಗಧಾರಣವಾದ ಬಳಿಕ ಅವರು

# ಶಿವಾನುಭವ.

ದ್ವೈಮಾಸಿಕವು.



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ
ಬಿ. ಏ. ಎಲ್. ಎಲ್. ಬಿ.

ವಿಜಾಪುರ

ಸಂಪುಟ ೮ ಸಂಚಿಕೆ ೨

ಜುಲೈ

೧೯೩೩

ವಾ. ವರ್ಗಣಿ ೪-೪-೦ ] [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೮] ಜುಲೈ. ೧೯೩೩ [ಸಂಚಿಕೆ ೨


## ಪಂಚಾಚಾರ ಪ್ರಕಾಶ.


(ಲೇಖಕರು—ಕಲ್ಯಾಣಪ್ಪ ಜ್ಯಾಳಿ, ಬಿ. ಎ. ಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ)


ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳು ವೀರಶೈವ ಧರ್ಮಕ್ಕೆ ಮೂಲಾಧಾರಗಳಾಗಿರುವವಷ್ಟೇ. ಅಷ್ಟಾವರಣ ಷಟ್‌ಸ್ಥಲಗಳು ವ್ಯಕ್ತಿಯ ಆತ್ಮೋನ್ನತಿಗೆ ಕಾರಣೀಭೂತವಾಗಿರುವಂತೆ ಪಂಚಾಚಾರಗಳು ಸಮಾಜದ ಭದ್ರತೆಯ ಹಾಗೂ ಉತ್ಕರ್ಷತೆಯ ಹೆಗ್ಗುರುತುಗಳಾಗಿವೆ. ಅಷ್ಟಾವರಣಯುಕ್ತನಾದ ಮನುಷ್ಯನು ಸ್ನಾನ, ಶಿವಪೂಜೆ, ಶಿವಪ್ರಸಾದಗಳ ಕ್ರಮದಿಂದ ತನ್ನಲ್ಲಿ ಆರೋಗ್ಯ, ದೇಹಶುದ್ಧಿ, ಮನಶ್ಶುದ್ಧಿಯನ್ನುಂಟುಮಾಡಿಕೊಳ್ಳುವನು. ಷಟ್‌ಸ್ಥಲ ಸಂಪನ್ನನಾದವನು ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಆನಂದ, ಸಮರಸಭಕ್ತಿಗಳಿಂದ ಲಿಂಗಾಂಗ ಸಾಮರಸ್ಯದ ಜ್ಞಾನವನ್ನು ಪಡೆದು ಸುಖಿಸುವನು. ಆದರೆ ಪಂಚಾಚಾರ ಪರಾಯಣನಾದ ಮನುಷ್ಯನು ಸಮಾಜಪ್ರೇಮ, ಸದ್ವರ್ತನೆ, ಸಮತಾಭಾವ, ಸೇವಾಗುಣ, ದುಷ್ಟನಿಗ್ರಹಾದಿ ಗುಣಗಳಿಂದ ಸಮಾಜದ ಗೌರವ ಹಾಗೂ ಭದ್ರತೆಗಳನ್ನು ಕಾಪಾಡುವನು. ಆದುದರಿಂದ ವೀರಶೈವ ಸಮಾಜೋನ್ನತಿಗೆ ಪಂಚಾಚಾರಗಳು ಅತಿಮಹತ್ವದ ಸಾಧನಗಳಾಗಿವೆ.

ಪಂಚಾಚಾರಗಳಾವವೆಂದರೆ:— (೧) ಲಿಂಗಾಚಾರ (೨) ಸದಾಚಾರ (೩) ಶಿವಾಚಾರ (೪) ಭೃತ್ಯಾಚಾರ, (೫) ಗಣಾಚಾರ.

ಇಷ್ಟಲಿಂಗವಲ್ಲದೆ ಅನ್ಯದೇವರ ಪೂಜೆ ಇಲ್ಲದಿರ್ಪುದೇ ಲಿಂಗಾಚಾರ. ಎಲ್ಲ ಜನರು ಹೌದೆನ್ನುವಂತೆ ನಡೆದುಕೊಳ್ಳುವದೇ ಸದಾಚಾರ ಶಿವಭಕ್ತರಲ್ಲಿ ಜಾತಿಭೇದವನ್ನೆಣಿಸದಿರುವದೇ ಶಿವಾಚಾರ. ಶಿವಶರಣರೇ ಹಿರಿ

ಯುರಾಗಿ ತಾನೇ ಕಿರಿಯನಾಗಿ ಭಯಭಕ್ತಿಯಿಂದ ಆಚರಿಸುವದೇ ಭೃತ್ಯಾಚಾರ. ಶಿವನಿಂದಕರನ್ನೂ ಶಿವಧರ್ಮ ದೂಷಕರನ್ನೂ ಶಾಸನ ಮಾಡುವದೇ ಗಣಾಚಾರ. ಈ ತರಹದ ಗುಣಗಳು ಪ್ರತಿಯೊಬ್ಬ ವೀರಶೈವ ವ್ಯಕ್ತಿಯಲ್ಲಿದ್ದರೆ ನಮ್ಮ ಸಮಾಜದ ಸ್ಥಿತಿಯು ಬಂಧುರವಾಗಿಯೂ ಗೌರವ ಯುಕ್ತವಾಗಿಯೂ ಪರಿಶೋಭಿಸುವದನ್ನಲಿಕ್ಕೆ ಅಡ್ಡಿಯಿಲ್ಲ.

## ಲಿಂಗಾಚಾರ

ಇಷ್ಟಲಿಂಗವು ಸಮಾಜದಲ್ಲಿ ಪ್ರೇಮ ಐಕ್ಯತೆಗಳನ್ನು ನೆಲಿಸುವ ಚಿಹ್ನೆವಾಗಿದೆ. ಲಿಂಗಧಾರಿಗಳೆಲ್ಲ ನನ್ನವರು ನನ್ನ ಬಂಧುಗಳು ಎಂಬ ಭಾವನೆ ಹುಟ್ಟಿ ಅವರ ಹಿತಚಿಂತನೆಗಾಗಿ ಅರ್ಥಾತ್ ಸಮಾಜ ಹಿತಕ್ಕಾಗಿ ತನ್ನ ತನುಮನಧನಗಳನ್ನರ್ಪಿಸುವನು. ಸ್ಕೌಟ ಜನರಲ್ಲಿ ಒಂದೇ ತರಹದ ಉಡಿಗೆ ತೊಡಿಗೆ ಇರುವದರಿಂದ ಅವರವರೊಳಗೆ ಪರಸ್ಪರ ಪ್ರೇಮಾಭಿಮಾನಗಳು ತುಂಬಿತುಳುಕುತ್ತವೆ. ಎಲ್ಲರೂ ಒಂದೇ ತರಹವಿರಬೇಕೆಂಬ ತತ್ವದಲ್ಲಿ ತಥ್ಯವುಂಟು. ನಮ್ಮ ಸಮಾಜದವರು ಪೋಷಾಕಿಗಿಂತಲೂ ಪರಮಾತ್ಮನೇ ಎಲ್ಲರಲ್ಲಿ ಒಂದೇ ತರಹವಿರಬೇಕೆಂದು ಕಟ್ಟಳೆ ಮಾಡಿದ್ದು ನಮ್ಮ ಸಮಾಜದ ಯೋಗ್ಯತೆಯನ್ನೇ ಹೆಚ್ಚಾಗಿ ಬಲಪಡಿಸುತ್ತದೆ.

ವೀರಶೈವರಿಗೆ ಇಷ್ಟಲಿಂಗವೇ ದೇವರು. ಅನ್ಯ ದೇವರನ್ನು ಅವರು ಸರ್ವಥಾ ಪೂಜಿಸಬಾರದು. ಒಬ್ಬೊಬ್ಬರು ಒಂದೊಂದು ದೇವರನ್ನು ಪೂಜಿಸಹತ್ತಿದರೆ ನನ್ನ ದೇವರು ಹೆಚ್ಚು ನಿನ್ನ ದೇವರು ಹೆಚ್ಚೆಂಬ ಬಗ್ಗೆ ಕಲಹ ಹುಟ್ಟಿ ಸಮಾಜದಲ್ಲಿ ಒಂದು ದೊಡ್ಡ ಗೊಂದಲವೇ ಏಳಬಹುದು ಒಂದೇ ದೇವರನ್ನು ಎಲ್ಲರೂ ಪೂಜಿಸುವದರಿಂದ ಭಿನ್ನಭಾವನೆಗೆ ಆಸ್ಪದವಿಲ್ಲದೆ ಎಲ್ಲರೂ ಐಕ್ಯದಿಂದಿರಲು ಅವಕಾಶ ದೊರೆಯುವದು. ಒಬ್ಬನೇ ದೇವರನ್ನು ಶಿವ ವಿಷ್ಣು ಅಲ್ಲಾ ಮಹಾಮಾಯೆ ಮುಂತಾದ ಭಿನ್ನ ಭಿನ್ನ ಹೆಸರುಗಳಿಂದ ಕರೆದೇ ಜಗತ್ತಿನಲ್ಲಿ ನಾನಾ ಧರ್ಮಗಳು ಹುಟ್ಟಿ ಪರಸ್ಪರ ಶ್ರೇಷ್ಠತೆಯ ಬಗ್ಗೆ ದ್ವೇಷಾಸೂಯೆಗಳಿಂದ ವರ್ತಿಸುತ್ತಿರುವವು. ಅದರಂತೆಯೇ ವೀರಶೈವರು ಹನುಮಪ್ಪ, ಭರಮಪ್ಪ, ವೀರಭದ್ರ, ದ್ಯಾಮವ್ವ ಮುಂತಾದ ದೇವರುಗಳನ್ನು ಪೂಜಿಸಹತ್ತಿದ್ದರಿಂದ ಒಂದೆಂಬ ಭಾವವಡಗಿ ಪರಸ್ಪರರಲ್ಲಿ ಭಿನ್ನಭಾವವು ತಲೆದೋರಿತು. ಭಿನ್ನತೆಯು ಸಮಾಜಭದ್ರತೆಯ ಲಕ್ಷಣವಲ್ಲ.

ಪತಿವ್ರತೆಯಾದ ಸ್ತ್ರೀಯಳಿಗೆ ಒಬ್ಬನೇ ಗಂಡನಿರುವಂತೆ ನಿಷ್ಠಾಪರನಾದ ವೀರಶೈವನಿಗೆ ಲಿಂಗವೊಂದೇ ದೈವವು. ಅಂತೆಯೇ ಬಸವಣ್ಣನವರು "ದೇವನೊಬ್ಬ ನಾಮ ಹಲವು. ಪರಮಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದರೆ ಕಿವಿ ಮೂಗ ಕೊಯ್ಯುವನು" ಎಂದು ಅಪ್ಪಣೆ ಕೊಡಿಸಿದ್ದಾರೆ.

ಒಂದೊಂದು ಮತಸಂಘದವರು ತಮ್ಮ ಸಮಾಜಬಂಧುಗಳಿಗೆ ಒಂದೊಂದು ವಿಧವಾಗಿ ತಮ್ಮ ಗುರುತನ್ನು ತೋರಿಸಿಕೊಡುತ್ತಾರೆ. ಮುಸಲ್ಮಾನರು ಗಡ್ಡದಿಂದಲೂ, ಶೀಖರು ಚಕ್ರಾಯುಧದಿಂದಲೂ, ಬ್ರಾಹ್ಮಣರು ಜನಿವಾರದಿಂಲೂ ಕ್ರಿಸ್ತಿ ಪಾರ್ಶಿ ಜನರು ಪೋಷಾಕಿನಿಂದಲೂ ಅನ್ಯರಿಗೆ ತಮ್ಮ ಪರಿಚಯುವನ್ನು ಮಾಡಿಕೊಡುತ್ತಾರೆ. ಇಂತಿಂಥ ಚಿಹ್ನೆಗಳನ್ನು ಧರಿಸಿ ವ್ಯವಹರಿಸುವದು ಅವರವರಿಗೆ ಪ್ರೇಮ ಹಾಗೂ ಅಭಿಮಾನದ ವಿಷಯಗಳಾಗಿವೆ. ವೀರಶೈವರು ಸಾಕ್ಷಾತ್ ಪರವಸ್ತುವಾದ ಇಷ್ಟಲಿಂಗದ ಮೂಲಕ ತಮ್ಮ ಪರಿಚಯುವನ್ನು ಅನ್ಯರಿಗೆ ಮಾಡಿಕೊಡುವರು. ದೇವರೇ ಚಿಹ್ನನಾಗಿಯುಳ್ಳವರು ಜಗತ್ತಿನಲ್ಲಿ ವೀರಶೈವರೊಬ್ಬರೇ. ಆದುದರಿಂದ ಲಿಂಗಧರಿಸಿ ವ್ಯವಹರಿಸುವದು ಸಮಾಜಪ್ರೇಮಕ್ಕೆ ಭೂಷಣವಲ್ಲವೇ? ಕೆಲವರು ಬ್ರಾಹ್ಮಣರಂತೆ ಕಾಣಬೇಕೆಂದು ಶಿಖಾಸೂತ್ರಗಳನ್ನು ಧರಿಸುವರು. ಕೆಲವರು ಯುರೋಪಿಯನ್ನರಂತೆ ಕಾಣಬೇಕೆಂದು ಪಾಶ್ಚಾತ್ಯರಂತೆ ಕ್ರಾಫ್ ಬಿಡುವರು, ಅಂಥ ಉಡುಪುಗಳನ್ನು ತೊಡುವರು. ಆದಾಗ್ಯೂ ಲಿಂಗವೊಂದಿರುವದರಿಂದ ಅವರೆಲ್ಲರೂ ವೀರಶೈವರೇ. ಹೊರಗಿನ ಆಡಂಬರಗಳು ಹೇಗಿದ್ದರೂ ಒಳಗೆ ಲಿಂಗವೊಂದಿದ್ದರೆ ಸಾಕು, ನಾವು ಹೆಚ್ಚಿಗೆ ವಿವಾದಮಾಡುವ ಗೊಡವಿಗೆ ಹೋಗಬಾರದು. ಕ್ರಾಪ್ ಬಿಟ್ಟರೇನಾಯಿತು? ಚಂಡಿಕೆ ಬಿಟ್ಟರೇನಾಯಿತು? ಗಡ್ಡಬಿಟ್ಟರೇನಾಯಿತು? ಲಿಂಗಬಿಟ್ಟರೆ ಮಾತ್ರ ಸಮಾಜಕ್ಕೆ ದೂರ.

ಲಿಂಗಧರಿಸಿದರೇನೇ ಸಮಾಜವು ಒಪ್ಪುವದು. ಲಿಂಗಬಾಹಿರರೊಂದಿಗೆ ಪರಸ್ಪರ ಅನ್ನಪಾನಾದಿ ವ್ಯವಹಾರವು ನಡೆಯಲಾಗದು. ಕ್ರಾಪ್ ಶಿಖಾ ಗಡ್ಡಧಾರಿಗಳಾದ ಲಿಂಗಾಂಗಿಗಳಲ್ಲಿ ಇವೆಲ್ಲ ವ್ಯವಹಾರಗಳು ತಪ್ಪದೆ ನಡೆಯುವವು. ಕಾರಣ ನಮಗೆ ಲಿಂಗಮುಖ್ಯವಲ್ಲದೆ ಹೊರಗಿನ ಆಡಂಬರಗಳೇನೂ ಪ್ರಾಮುಖ್ಯವಲ್ಲ. ಲಿಂಗಬಿಟ್ಟು ಲಿಂಗಾಯತ ಸಮಾಜ

ದೊಳಗೆ ಸೇರಿದರೆ ಕೋಗಿಲೆಗಳ ಗುಂಪಿನಲ್ಲಿ ಕಾಗೆಯು ಸೇರಿದಂತಾಗುತ್ತದೆ. ಸಮಾಜ ಬೇಕಾದವನು ಲಿಂಗಧರಿಸಲೇಬೇಕು. ಬೇಡಾದವನು ಸಮಾಜವನ್ನು ಬಿಟ್ಟು ಹೋಗಬಹುದು. ಲಿಂಗಬಿಟ್ಟು ಲಿಂಗಾಯತನೆನಿಸಿಕೊಳ್ಳಬೇಕೆನ್ನುವದು ಲಾಂಛನಾಸ್ಪದದ ಸಂಗತಿಯು.

ಒಂದು ರಾಜ್ಯವಾಗಲಿ ಸಮಾಜವಾಗಲಿ ಬಂಧುರವಾಗಿ ನಡೆಯಬೇಕಾದರೆ ಕೆಲವು ವಿಶಿಷ್ಟತರಹದ ಕಟ್ಟಳೆಗಳು ಬೇಕಾಗುತ್ತವೆ. ಅದರಂತೆ ಲಿಂಗಧರಿಸಬೇಕೆಂಬದು ನಮ್ಮ ಸಮಾಜದ ಕಟ್ಟಳೆಯಾಗಿದೆ. ಸರಕಾರವು ಪೋಲೀಸರಿಗೆ ಇಂತಿಂಥ ಪೋಷಾಕು ಧರಿಸಬೇಕೆಂದು ನಿರ್ಬಂಧಪಡಿಸಿರುತ್ತದೆ. ತನ್ನ ಕರ್ತವ್ಯವನ್ನು ಚನ್ನಾಗಿ ಮಾಡದಿದ್ದರೂ ಆ ಉಡುಪನ್ನು ಅವನು ಧರಿಸಿದರೆ ಸಾಕು. ಆತನು ಪೋಲೀಸನೇ ಅಹುದು. ಆದರೆ ತನ್ನ ಕರ್ತವ್ಯದಲ್ಲಿ ಒಳ್ಳೆ ಜಾಗರೂಕನಾಗಿದ್ದರೂ ಪೋಷಾಕವೊಂದನ್ನು ಬಿಟ್ಟಿದ್ದರೆ ಆತನು ಪೋಲಿಸನೆಂದು ಯಾರೂ ಕರೆಯಲಾರರು. ಅದರಂತೆ ಲಿಂಗದಲ್ಲಿ ನಿಷ್ಠೆಯಿರಲಿ ಇಲ್ಲದಿರಲಿ ಲಿಂಗಾಯತ ಸಮಾಜಕ್ಕೊಳಪಟ್ಟವನು ಲಿಂಗವನ್ನು ಧರಿಸಿಯೇ ತೀರಬೇಕೆಂದು ನಮ್ಮ ಸಮಾಜದ ಆಜ್ಞೆಯಿದೆ. ಆ ಆಜ್ಞೆಯನ್ನು ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಶಿರಸಾಮಾನ್ಯವಾಗಿ ಪಾಲಿಸಲೇಬೇಕು. ಇಲ್ಲದಿದ್ದರೆ ಅವನಿಗೆ ಕುಂದುಬರುತ್ತದೆ. ಲಿಂಗಧರಿಸಿ ಲಿಂಗಾಂಗಿಗಳೊಡನೆ ವ್ಯವಹರಿಸಬೇಕೆಂಬ ನಮ್ಮ ಸಮಾಜದ ಕಟ್ಟಳೆಯನ್ನು ಮನಃಪೂರ್ವಕವಾಗಿ ಪರಿಪಾಲಿಸುವದೇ ಲಿಂಗಾಚಾರವು.

## ಸದಾಚಾರ.

ಲೋಕವ್ಯವಹಾರದಲ್ಲಿ ಹೌದೆನಿಸಿಕೊಂಡು ಹೋಗಬೇಕಾದರೆ ಮನುಷ್ಯನು ಸುಸ್ವಭಾವವುಳ್ಳವನಾಗಿರಬೇಕಾಗುತ್ತದೆ. ವೈದಿಕ ಸಮಾಜದಲ್ಲಿ ಕೆಲವು ಪಾಪದ ಕೃತ್ಯಗಳೆಂದು ಪರಿಗಣಿಸಲ್ಪಟ್ಟಿವೆ. ಅವುಗಳಿಂದ ದೂರಾಗಿರುವದೇ ಸದಾಚಾರವು- ಉದಾಹರಣಾರ್ಥ ಅಪಾನಪೇಯ, ಅಭಕ್ಷ್ಯಭಕ್ಷಣ, ಪರಸ್ತ್ರೀಗಮನ, ಕೊಲೆಪಾತಕ, ಚೋರತನ, ಪರನಿಂದೆ ಮುಂತಾದ ಕೃತಿಗಳು ನಿಂದ್ಯವಾದವುಗಳೆಂದು ಬಹುಶಃ ಎಲ್ಲ ಮತಸ್ಥರೂ ಒಪ್ಪಿಕೊಳ್ಳುತ್ತಾರೆ. ಸಮಾಜದಲ್ಲಿ ಇಂಥ ಅನಾಹುತಗಳು ದಿನಾಲು ನಡೆಯುಹತ್ತಿದರೆ ಶಾಂತತೆಯೆಲ್ಲಿ? ಸುರಕ್ಷಿತೆಯಲ್ಲಿ? ಮಾನಮರ್ಯಾದೆಗಳೆಲ್ಲಿ?

ಪಾಶವಿಕ ಮತ್ತು ರಾಕ್ಷಸೀವೃತ್ತಿಗಳಿಗೆ ಹೆಚ್ಚು ಬಲವುಂಟಾದರೆ ಸಮಾಜದ ಅಧೋಗತಿಗೆ ವಿಲಂಬವಾಗಬಹುದೇ? ಶಾಸನಗಳ ಮೂಲಕ ಸರಕಾರವು ಇಂಥ ದುಷ್ಟ ಕಾರ್ಯಗಳನ್ನು ನಿರ್ಬಂಧಿಸುವಂತೆ ಸಮಾಜವಾದರೂ ಇಂಥ ಕಾರ್ಯಗಳು ನಡೆಯ ಬಾರದೆಂದು ಶಾಸ್ತ್ರವಚನಗಳ ಮೂಲಕವಾಗಿ ನಮಗೆ ಕಟ್ಟಳೆಯನ್ನು ಮಾಡಿರುವದು. ರಾ. ಸಾ. ಹಳಕಟ್ಟಿಯವರು ಪ್ರಕಟಿಸಿದ 'ನೈತಿಕ ಮತ್ತು ಭಕ್ತಿಯ ವಚನ' ಗಳೆಂಬ ಗ್ರಂಥದಲ್ಲಿ ಮಹನೀಯರ ನೀತಿಪರವಾದ ವಾಕ್ಯಗಳು ಸಜೀವವಾಯವಾಗಿ ವಿರಾಜಿಸುತ್ತವೆ ಸದಾಚಾರಿಯಾಗಬೇಕೆಂದು ಹಾರೈಸುವ ಪ್ರತಿಯೊಂದು ವ್ಯಕ್ತಿಯು ಆ ವಚನಗಳನ್ನು ನಿತ್ಯಪಾರಾಯಣಮಾಡಿದರೆ ಬಹುಮಟ್ಟಿಗೆ ಅವನಿಗೆ ದುಷ್ಟಗುಣಗಳ ಗಾಳಿಯು ಸೋಂಕದು. ಶಾಸನಗಳಿಂದ ಬಾಹ್ಯಕ್ರಿಯೆಗಳನ್ನು ನಿರೋಧಿಸಬಹದು. ಆದರೆ ಅಂತರಂಗದಲ್ಲಿ ನಡೆಯುವ ಪಾಪದ ಕಲ್ಪನೆಗಳನ್ನು ನಿರ್ಬಂಧಿಸುವದು ಬಹು ಕಠಿಣ. ಆದರೆ ಮಹನೀಯರ ವಾಕ್ಯಗಳಲ್ಲಿ ಮನಸ್ಸನ್ನು ಪವಿತ್ರಗೊಳಿಸಿ ಅದು ದುಷ್ಟಕಾರ್ಯಕ್ಕೆ ಪ್ರವರ್ತಿಸದಂತೆ ಮಾಡುವ ಸಾಮರ್ಥ್ಯವಿರುತ್ತವೆ. ಕಲ್ಯಾಣಪಟ್ಟಣದಲ್ಲಿ ಮಹಾ ಶಿವಶರಣರು ಪರಸ್ಪರರನ್ನು ವಂಚಿಸದೆ ಸದಾಚಾರದಿಂದ ಹೇಗೆ ನಡೆಯಲಿಕ್ಕೆ ಬರುತ್ತದೆಂಬದನ್ನು ತಮ್ಮ ಶುದ್ಧಾಚರಣೆಯಿಂದ ತೋರಿಸಿಕೊಟ್ಟಿದ್ದಾರೆ.

ಶ್ರೀ ಬಸವಣ್ಣನವರು ಸದಾಚಾರಿಯ ಲಕ್ಷಣವನ್ನು ಕೆಳಗಿನ ವಚನದಲ್ಲಿ ಈ ಪ್ರಕಾರವಾಗಿ ಅಪ್ಪಣೆ ಕೊಡಿಸಿದ್ದಾರೆ:--

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲು ಬೇಡ. ಇದೇ ಅಂತರಂಗದ ಶುದ್ಧಿ ಇದೇ ಬಹಿರಂಗದ ಶುದ್ಧಿ. ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ"

ಯಾವನಾದರೊಬ್ಬ ಮನುಷ್ಯನು ಸಮಾಜವನ್ನು ತೊರೆದು, ಅಡವಿಯನ್ನು ಸೇರಿ ಜನರಿಂದ ಒಳ್ಳೆ ಸದಾಚಾರಿಯೆನಿಸಿಕೊಳ್ಳಬಹುದು. ಆದರೆ ಪ್ರಪಂಚಕ್ಕೆ ಹೆದರಿ ಕಾನನವನ್ನು ಸೇರಿದ ಸದಾಚಾರಿಗಳು ಪುನಃ ಹೊನ್ನು ಹೆಣ್ಣು ಮಣ್ಣುಗಳನ್ನು ಕಂಡರೆ ಅವುಗಳಿಗೆ ಮರುಳಾಗುವವರೇ. ಆದರೆ ಗೃಹಸ್ಥಾಶ್ರಮಿಗಳಾಗಿ ಸಮಾಜದಲ್ಲಿಯೇ ಇದ್ದುಕೊಂಡು ತ್ರಿವಿಧದಾಶೆಯನ್ನು ನೀಗಿ ಜಗತ್ತಿಗೆ ಆದರ್ಶಪ್ರಾಯರಾದ ಮಹಾ ಶಿವಶರಣರಾಚರಣೆಯೇ ನಿಜವಾದ ವೀರಶೈವಾಚಾರವು. ಅದೇ ಸದಾಚಾರದ ಗುಟ್ಟು.

ಆದು ಕಾರಣ ವೀರಶೈವನು ತನ್ನ ಶೀಲಕಾಯಕಗಳನ್ನು ಕಾಪಾಡಿಕೊಂಡು ಸಮಾಜದಿಂದ ಹೌದೆನಿಸಿಕೊಳ್ಳುವಂತೆ ವರ್ತಿಸುವದೇ ಸದಾಚಾರ.

## ಶಿವಾಚಾರ

ಮಾತಾ ಚ ಪಾರ್ವತೀ ದೇವೀ ಪಿತಾ ದೇವೋ ಮಹೇಶ್ವರಃ ।
ಬಾಂಧವಾಃ ಶಿವಭಕ್ತಾಶ್ಚ ಶಿವಕುಲಂ ಭುವನತ್ರಯಂ ॥

ವೀರಶೈವರಲ್ಲಿ ಜಾತಿಭೇದಗಳಿಲ್ಲ. ಅವರಿಗೆ ಶಿವನೇ ತಂದೆಯು. ಪಾರ್ವತಿಯೇ ತಾಯಿಯು. ಶಿವಭಕ್ತರೇ ಬಂಧುಗಳು. ಶಿವಕುಲವೇ ಶ್ರೇಷ್ಠಕುಲವು. ಮನೆಗೊಂದು ಜಾತಿ, ಮಠಕೊಂದು ಜಾತಿ, ತಲೆಗೊಂದು ಜಾತಿಯಾದರೆ ಸಮಾಜದಲ್ಲಿ ಐಕ್ಯತೆ ಹೇಗುಂಟಾಗಬೇಕು ? ಪರಸ್ಪರ ಪ್ರೇಮವು ಹೇಗೆ ಬೆಳೆಯಬೇಕು ? ಸಮಾಜದಲ್ಲಿ ಪ್ರೇಮ ಐಕ್ಯತೆಗಳಿಲ್ಲದೆ ಘನತರವಾದ ಕಾರ್ಯಗಳು ಹೇಗಾಗಬೇಕು ? ಸಮಾಜದಲ್ಲಿ ಒಳಪಂಗಡಗಳು ಹೆಚ್ಚುತ್ತ ಹೋದಂತೆ ಅವರಲ್ಲಿ ಶಿಥಿಲತೆಯು ಅಧಿಕವಾಗುತ್ತ ಹೋಗುತ್ತದೆ. ಒಳಪಂಗಡಗಳು ಕಾಯಕಗಳಿಂದ ಹುಟ್ಟಿರುವವಲ್ಲದೆ ಗುಣಸ್ವಭಾವಗಳಿಂದ ಬಂದಂಥವುಗಳಲ್ಲವೆಂದು ಶಿವಶರಣರು ಸಾರಿ ಸಾರಿ ಹೇಳಿದ್ದಾರೆ. ದಾಸೀಪುತ್ರನಾಗಲಿ ವೇಶ್ಯಾಪುತ್ರನಾಗಲಿ ಶಿವನಲ್ಲಿ ನಿಷ್ಠೆಯನ್ನಿಟ್ಟು ಸದಾಚಾರ ಸಂಪನ್ನನಾದರೆ ಅವನು ಸತ್ಕುಲದವನೆಂದೇ ಭಾವಿಸುವದು ಧರ್ಮವು. ಅಂಥವನನ್ನು ನಿಂದಿಸುವದು ಪಾಪವು. ಶಿವನಲ್ಲಿ ನಿಷ್ಠೆಯುಳ್ಳ ಸದಾಚಾರಿಗಳನ್ನು ಮನ್ನಿಸುವದೇ ಶಿವಾಚಾರವು. ಶಿವಾಚಾರವು ಸಮಾಜದ ಗೌರವಕ್ಕೂ ದೃಢತೆಗೂ ಮೂಲಾಧಾರವಾಗಿದೆ.

ನಾನಾ ಜಾತಿಗಳಲ್ಲಿ ಹುಟ್ಟಿದ ತ್ರಿಷಷ್ಠಿ ಪುರಾತರನ್ನು ಗುಣೈಕಪಕ್ಷಪಾತಿಗಳಾದ ಬಸವಾದಿ ಪ್ರಮಥರು ತಮ್ಮ ತಲೆಯ ಮೇಲೆ ಹೊತ್ತುಕೊಂಡು ಕುಣಿದಾಡಲಿಲ್ಲವೇ ? ಅದರಂತೆಯೇ ಅನೇಕ ಜಾತಿಗಳಲ್ಲಿ ಜನ್ಮತಾಳಿದ ೬೩ ಜನ ಪ್ರಮಥರನ್ನು ಕೂಡ ನಮ್ಮ ಸಮಾಜದವರು ಪೂಜ್ಯರೆಂದೇ ತಿಳಿದು ಅವರ ನಾಮಸ್ಮರಣ ಮಾಡುವದಿಲ್ಲವೇ ? ಸದಾಚಾರ ಸಂಪನ್ನರೆಲ್ಲ ಶಿವನ ಸ್ವರೂಪಿಗಳೇ. ಅವರು ಯಾವ ಕುಲದಲ್ಲಿ ಹುಟ್ಟಿದರೇನು ? ಅಂಥವರನ್ನು ಪೂಜಿಸುವದೂ ಗೌರವಿಸುವದೂ ಅವರಿಗೆ ಅರ್ಥಪ್ರಾಣಾಭಿಮಾನಗಳನ್ನರ್ಪಿಸುವದೂ ಶಿವಾಚಾರವೆಂದೇ ಹೇಳಲ್ಪಡುತ್ತದೆ. ಗುಣಗ್ರಾಹಿಗಳಾಗದೆ ಕುಲಕ್ಕೆ ಮಹತ್ವ ಕೊಡುವದು ಕೀಳ್ತ

ರದ ಸ್ವಭಾವವು. ವೀರಶೈವರು ಉದಾರ ಹೃದಯುದವರಾದುದರಿಂದ ಭಿನ್ನ ಭಿನ್ನ ಕಸಬು ಕಾಯಕಗಳನ್ನು ಮಾಡುವ ಸದಾಚಾರ ಸಂಪನ್ನರನ್ನೆಲ್ಲ ಶಿವನ ಸ್ವರೂಪಿಗಳೆಂದೇ ಭಾವಿಸುವರು. ಶಿವಭಕ್ತನ ಜಾತಿಯನ್ನೆತ್ತು ವದು ಮಹಾ ಪಾಪವು. ಹಾಗೆ ಮಾಡಿದರೆ ಲಿಂಗದ್ರೋಹ ಮಾಡಿದಂ ತಾಗುತ್ತದೆ.

ಈ ಶಿವಾಚಾರದ ತಿರುಳನ್ನು ಶಿವಶರಣಶ್ರೇಷ್ಠರಾದ ಬಸವಣ್ಣನವರು ೧೨ ನೆಯ ಶತಮಾನದಲ್ಲಿ ಆಚರಿಸಿ ಸಮಾಜದ ಗೌರವವನ್ನು ಬೆಳೆಯಿಸಿ ದ್ದಲ್ಲದೆ ತಮ್ಮ ವಚನಗಳ ಮೂಲಕ ನಮಗೆ ಬುದ್ಧಿಗಲಿಸುತ್ತಿದ್ದಾರೆ. ಈಗ ನಮ್ಮ ಸಮಾಜದಲ್ಲಿ ಸ್ವಾರ್ಥದ ಮೂಲಕ ಒಳಪಂಗಡಗಳು ಹೆಚ್ಚಾಗಿ ಅನೈಕ್ಯತೆ ಅಪ್ರೇಮಗಳು ಅಧಿಕವಾಗಿವೆ. ಆದರೆ ಸಮಾಜದಲ್ಲಿ ಪ್ರೇಮ ಐಕ್ಯತೆಗಳನ್ನು ನೆಲೆಗೊಳಿಸುವದಕ್ಕಾಗಿಯೇ ಶಿವಾಚಾರವುಂಟೆಂಬದನ್ನು ಯಾರೂ ಮರೆಯಬಾರದು.

## ಭೃತ್ಯಾಚಾರ

'ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಾರಿಲ್ಲ' ಎಂದು ಬಸವಣ್ಣನವರು ಹೇಳಿರುವರಷ್ಟೇ. ಇದೇ ಭೃತ್ಯಾಚಾರದ ರಹಸ್ಯವು. ತಾನು ಎಲ್ಲರಗಿಂತಲೂ ಹೆಚ್ಚಿನವನೆಂದು ಹೇಳಿಕೊಳ್ಳುವ ವ್ಯಕ್ತಿಯಷ್ಟು ಕೀಳಪ್ರಾಣಿಯು ಮತ್ತೊಂದಿಲ್ಲ. ಮಹನೀಯರಾದವರು ಯಾವಾಗಲೂ ತಾವು ಕಡಿಮೆಯೆಂದೇ ಹೇಳಿಕೊಂಡಿದ್ದಾರೆ. ಅಂತೆಯೇ ಅವರು ಇವ ತ್ತಿಗೂ ಪ್ರಕಾಶಮಾನರಾಗಿ ಬೆಳಗುತ್ತಿರುವರು. ಈಗಿನ ನಾಮಧಾರಿ ಮಹನೀಯರು ನಾನು ಜಗದ್ಗುರು ಜಗದಾಚಾರ್ಯ, ಸಚ್ಚಿದಾನಂದ, ನಿತ್ಯ ಪರಿಪೂರ್ಣ, ಅವಿರಳ ಪರಂಜ್ಯೋತಿಯೆಂದು ಜಯಭೇರಿಯನ್ನು ಹೊಡಿ ಸುತ್ತ ಅಂದಣದಲ್ಲಿ ಮೆರೆದರೂ ಅವರ ಸದ್ದು ಸುಳಿವೇ ಇರುವದಿಲ್ಲ. ಮೂಢಜನರ ಅಜ್ಞಾನದ ದುರುಪಯೋಗ ಹೊಂದಿ ಮೆರೆದಾಡುವ ಕುನ್ನಿ ಗಳೆಂದಾದರೂ ಶ್ರೇಷ್ಠರಾಗಬಲ್ಲರೇ ? ದಾಸಾನುದಾಸರಾಗಿ ಮಾನಾಪ ಮಾನಗಳನ್ನು ಸಹಿಸಿಕೊಂಡು ಹಗಲಿರುಳು ಸಮಾಜಸೇವಾ ಕಾರ್ಯದಲ್ಲಿ ನಿರತರಾದ ವಿಭೂತಿಗಳೇ ಜಗದ್ಗುರುಗಳು, ಜಗದಾಚಾರ್ಯರು. ನಮ್ಮ ಸುಜ್ಞ ಸಮಾಜವು ಆಳಾಗಿ ದುಡಿಯುವವರಿಗೆ ಮಹತ್ವಕೊಡುವದಲ್ಲದೆ ಅರ ಸಾಗಿ ಉಣ್ಣುವವರಿಗೆ ಮನ್ನಣೆ ಮಾಡಲಾರದು.

ಸಮಾಜಸೇವಕನಾಗಿ ಸಮಾಜಸೇವೆಯ ಕೆಲಸವನ್ನು ಮಾಡು ವದೇ ಭೃತ್ಯಾಚಾರವು. ಆದರೆ ಸಮಾಜಸೇವಕ, ಶರಣಸೇವಕ, ಶಿವ ಶರಣರದಾಸ ಎಂಬೀ ನಾಮಾಂಕಿತಗಳನ್ನಿಟ್ಟುಕೊಂಡು ಜನರಿಂದ ತಾನು ಸೇವೆಮಾಡಿಸಿಕೊಳ್ಳುವ ಮಹಾತ್ಮನೇನೂ ಭೃತ್ಯಾಚಾರಿಯಲ್ಲ. ಸಮಾ ಜದಲ್ಲಿ ಅತ್ಯಂತ ಕೀಳೆನಿಸುವ ಕೆಲಸವನ್ನು ಮಾಡಲಿಕ್ಕೆ ಭೃತ್ಯಾಚಾ ರಿಯು ಹಿಂದುಮುಂದು ನೋಡುವದಿಲ್ಲ. ಮಹಾತ್ಮಾ ಗಾಂಧಿಯವರು ಪ್ರಸಂಗಬಂದಾಗ ಶೌಚಸಮ್ಮಾರ್ಜನೆಯನ್ನು ಮಾಡಲಿಕ್ಕೆ ಹಿಂದುಮುಂದೆ ನೋಡಿದರೇ? ಅವರೇಕೆ ಭೃತ್ಯಾಚಾರಿಗಳಲ್ಲ! ಶಿವಶರಣರ, ಹಾಗೂ ಸಮಾಜದ ಸೇವೆಯನ್ನು ಅಹೋರಾತ್ರಿ ಮಾಡಲಿಕ್ಕೆ ಕಂಕಣಬದ್ಧರಾಗಿ ರುವದು ಭೃತ್ಯಾಚಾರದ ಲಕ್ಷಣವು.

ಕೆಲವು ಪುಣ್ಯಾತ್ಮರು ಹಿರಿಯರು ಗಳಿಸಿಟ್ಟ ಕೀರ್ತಿಯ ಮೇಲೆ ತಮ್ಮ ಧ್ವಜವನ್ನೇರಿಸಿ ಹೆಮ್ಮೆಯಿಂದ ತಮ್ಮ ದೊಡ್ಡಸ್ತನವನ್ನು ತೋರ್ಪ ಡಿಸುವರು. ಉಳಿದ ಮಹಾಶಯರು ದುಡ್ಡು ಸೂರೆಮಾಡಿ ಅಧ್ಯಕ್ಷ, ಚೇರಮನ್ ಮೊದಲಾದ ಗೌರವದ ಪದವಿಗಳನ್ನು ಕೊಂಡುಕೊಳ್ಳುವರು. ಏನೂ ಅರಿಯದ ಕಂದಮ್ಮಗಳಿಗೆ ಕೆಲವರು ಕಾವಿ ಧರಿಸಿ ಮರಿಗಳನ್ನು ಬಿಟ್ಟು ಅಂದಣದಲ್ಲಿ ಮೆರಿಸಿ ಇಲ್ಲದ ಯೋಗ್ಯತೆಯನ್ನು ಅವರ ಮೇಲೆ ಆರೋಪಿಸುವರು. ನಿಜವಾದ ಯೋಗ್ಯತೆಯು ಪೂರ್ವಜರಿಂದಾಗಲಿ, ದುಡ್ಡು ಸುರಿಸುವದರಿಂದಾಗಲಿ, ಅಥವಾ ಒಬ್ಬರನ್ನು ಸುಮ್ಮನೆ ಮೇಲ ಕ್ಕೆತ್ತಿ ಕೂಡ್ರಿಸುವುದರಿಂದಾಗಲಿ ಬರಲಾರದು. ಯಾವನು ತನ್ನ ಸಮಾ ಜದ ಸೇವೆಯನ್ನು ಪರಿಶುದ್ಧಾಂತಃಕರಣದಿಂದ ಅವಿಶ್ರಾಂತ ಪರಿಶ್ರಮ ವಹಿಸಿ ಮಾಡುವನೋ ಅವನಲ್ಲಿಯೇ ನಿಜವಾದ ಯೋಗ್ಯತೆ ಇರುತ್ತದೆ. ಈಗಿನ ನಮ್ಮ ಜಾರ್ಜ ದೊರೆಗಳು ಸಾರ್ವಭೌಮ ಪದವಿಯನ್ನು ಪಡೆ ಯಬೇಕಾದರೆ ಅವರು ೩೦--೪೦ ವರ್ಷಗಳ ವರೆಗೆ ದಂಡಿನಲ್ಲಿಯೂ ತೋಫಖಾನೆಯಲ್ಲಿಯೂ, ಹಡಗದಲ್ಲಿಯೂ, ಪಾರ್ಲಿಮೆಂಟಿನಲ್ಲಿಯೂ, ಆಳಿನ ಆಳಾಗಿ ದುಡಿದಿರುವರು. ಬ್ರಿಟಿಶ್ ಸರಕಾರವು ಸ್ವಪರಿಶ್ರಮ ದಿಂದ ಯೋಗ್ಯತಾಪತ್ರವನ್ನು ಪಡೆಯದಂಥವನನ್ನೆಂದಿಗೂ ಸಾರ್ವಭೌ ಮನೆಂದು ಒಪ್ಪಿಕೊಳ್ಳಲಾರದು. ಆಳಾಗಿ ದುಡಿದವನೇ ಅರಸನಾಗಿ ಆಳ ಬಲ್ಲನು. ಅದರಂತೆಯೇ ನಮ್ಮ ಸಮಾಜದಲ್ಲಿ ಅನೇಕ ವರ್ಷ ಕಳಕಳಿ ಯಿಂದ ಸೇವೆಮಾಡಿದ ಪುಣ್ಯಾತ್ಮರೇ ಜಗದ್ಗುರುಗಳಾಗಬಹುದು; ಜಗ

ದಾಚಾರ್ಯರಾಗಬಹುದು, ಅಧ್ಯಕ್ಷ ಚೇರಮನ್ನರಾಗಬಹುದು, ಸ್ವಾಮಿಗಳಾಗಬಹುದು. ಭೃತ್ಯಾಚಾರಿಯಾಗಿ ಸಮಾಜಸೇವೆಮಾಡಿ ಯೋಗ್ಯತಾಪತ್ರವನ್ನು ಪಡೆಯುವ ಹೊರತು ಅಂಥವನನ್ನು ದೊಡ್ಡ ಪೀಠದ ಮೇಲೆ ಕೂಡ್ರಿಸುವದೂ ಮೆರೆಯಿಸುವದೂ ಸಮಾಜಕ್ಕೆ ಅಗೌರವವು. ಹಾಗೆ ಮೆರೆಯುವವರಿಗೂ ಪೀಠದ ಮೇಲೆ ಕೂಡ್ರುವವರಿಗೂ ಲಾಂಛನಾಸ್ಪದವು.

ಹಳ್ಳಿಯ ಉದ್ಧಾರದ ಸಲುವಾಗಿ ಸ್ವಯಂಸೇವಕರು ಸೇವಾಕಾರ್ಯವನ್ನು ಕೈಕೊಳ್ಳಬೇಕೆಂದು ೧೧ ನೆಯ ಅಖಿಲ ವೀರಶೈವ ಮಹಾಸಭೆಯಲ್ಲಿ ಠರಾವು ಪಾಸಾಗಿರುವದಷ್ಟೇ. ಅಂಥ ಪವಿತ್ರ ಕಾರ್ಯವನ್ನು ಮಾಡುವ ಸ್ವಯಂಸೇವಕರೇ ಭೃತ್ಯಾಚಾರಿಗಳು. ಹಿಂದಕ್ಕೆ ಭೃತ್ಯಾಚಾರಿಗಳಾಗಿ ದೇಶಿಕರಾಗಿ ಬ್ರಹ್ಮಚಾರಿಗಳಾಗಿ ಅನೇಕವರ್ಷ ಕಷ್ಟ ಸಹಿಸಿ ಸಮಾಜಹಿತಕ್ಕಾಗಿ ಹೆಣಗಾಡಿದ ಮಹಾ ವಿಭೂತಿಗಳೇ ಜಗದ್ಗುರುಗಳೂ ಜಗದಾಚಾರ್ಯರೂ ಆಗಿ ಹೋದರು. ಈಗಾದರೂ ಸಮಾಜವು ಅಂಥವರನ್ನೇ ಗೌರವಿಸಬೇಕಲ್ಲದೆ ನಾಮಧಾರಿಗಳನ್ನು ಸರ್ವಥಾ ಗೌರವಿಸಬಾರದು. ಮಾಣಿಕವನ್ನು ಬಿಟ್ಟು ಕಾಜಿನ ಕಿಮ್ಮತ್ತನ್ನು ಹೆಚ್ಚಿಸುವದು ಮೂರ್ಖತನದ ಲಕ್ಷಣವು. ಕಾರಣ ಸ್ವಾರ್ಥತ್ಯಾಗ, ಸಮಾಜಸೇವೆ, ದುರಭಿಮಾನ ನಿರಸನ ಮುಂತಾದ ಗುಣಗಳು ಭೃತ್ಯಾಚಾರಕ್ಕೆ ಭೂಷಣವಾಗಿವೆ.

## ಗಣಾಚಾರ

'ಶಠಂ ಪ್ರತಿ ಶಾಠ್ಯಂ' ಎಂಬ ಶಾಸ್ತ್ರವಿದೆ. ಯಾವದಾದರೊಂದು ಸಮಾಜವು ಏಳ್ಗೆ ಹೊಂದಬೇಕಾದರೆ ಅದು ಬಹಳ ಮೆತ್ತಗಾಗಿದ್ದರೆ ಪ್ರಯೋಜನವಿಲ್ಲ. ಅದರ ದುರುಪಯೋಗವನ್ನು ಬಹುಜನರು ಹೊಂದುವರು. ದುರ್ಬಲರನ್ನು ರಕ್ಷಿಸುವವರಿಗಿಂತಲೂ ಅವರನ್ನು ಘಾತಮಾಡುವವರೇ ಹೆಚ್ಚು. ನಮ್ಮ ಸಮಾಜವು ಬಹು ಮೆತ್ತಗಾದರೆ ಅನೇಕರು ಅದಕ್ಕೆ ಅಪಹಾಸ್ಯ ನಿಂದೆಗಳನ್ನಾಡಿ ದಕ್ಕಿಸಿಕೊಳ್ಳುವರು. ನಮ್ಮ ಸಮಾಜದ ಶ್ರೇಷ್ಠತೆಯನ್ನು ನೋಡಿ ಸಹಿಸಲಾರದ ಕುತ್ಸಿತರು ನಮಗೆ ಕೀಳಧರ್ಮದವರೆಂದು ಕರೆಯುವದಿಲ್ಲವೇ ? ನಮ್ಮ ಸೌಮ್ಯದ ದುರುಪಯೋಗ ಹೊಂದಿ ಕೆಲವು ಉದ್ಧಟರು ನಮ್ಮ ಹಕ್ಕ ಬಾಬುಗಳನ್ನೂ ದೇವಸ್ಥಾನದ ಪೂಜೆಯ ಅಧಿಕಾರವನ್ನೂ ನಮ್ಮಿಂದ ಕಸೆದುಕೊಳ್ಳಲು ಹೆಣಗಾಡುವದಿಲ್ಲವೇ? ನಮ್ಮ ಅಜ್ಞಾನ ಸ್ವಾರ್ಥಗಳನ್ನು ಸಾಧಿಸಿ ಕೆಲವು ಮುಸಲ್ಮಾನ ಸಾಧಕರು ಕ್ರಿಸ್ತಿ

ಪಾದ್ರಿಗಳು ನಮ್ಮ ಅಜ್ಞಾನಿಗಳನ್ನು ಮತಾಂತರ ಮಾಡಲಿಕ್ಕೆ ಮುಂದುವರಿದಿಲ್ಲವೇ ? ಈ ಅಖಿಲ ಕರ್ನಾಟಕವು ವೀರಶೈವರ ನಾಡು. ಹೀಗಿದ್ದು ನಮ್ಮ ಸಂಭಾವಿತತನದ ದುರುಪಯೋಗ ಹೊಂದಿ ಅನ್ಯಮತದ ಕೆಲವು ಮುಂದಾಳುಗಳು ನಮ್ಮನ್ನು ಹಿಂದುಳಿದವರ ಮಾಲಿಕೆಯಲ್ಲಿ ಸೇರಿಸಿಲ್ಲವೇ? ನಮ್ಮ ಸಮಾಜಕ್ಕೂ ಧರ್ಮಕ್ಕೂ ಅಪಮಾನವಾದರೆ ನಾವು ಕಣ್ಣು ಮುಚ್ಚಿಕೊಂಡು ಸುಮ್ಮನೆ ಕೂಡ್ರಬೇಕೇ ? ಹಾಗೆ ಮಾಡುವದು ಹೇಡಿಯ ಲಕ್ಷಣವಲ್ಲವೇ ? ಸಮಾಜದ ಪ್ರತಿಷ್ಠೆಗಾಗಿ ಗೌರವಕ್ಕಾಗಿ ಮನಃಪೂರ್ವಕವಾಗಿ ಹೊಡೆದಾಡುವದೂ ಅದಕ್ಕಾಗಿ ತನುಮನ ಪ್ರಾಣಗಳನ್ನರ್ಪಿಸುವದೂ ಸ್ವಾಭಿಮಾನಿಯಾದ ವೀರಶೈವನಿಗೆ ಭೂಷಣವಲ್ಲವೇ ? ಗಣಾಚಾರದ ಮುಖ್ಯ ಗುಟ್ಟಾದರೂ ಇದೇ ಇರುತ್ತದೆ.

ನಮ್ಮ ಧರ್ಮಕ್ಕೆ ಆಪತ್ತು ಬಂದರೆ, ನಮ್ಮ ಸಮಾಜಕ್ಕೂ ಸಮಾಜೋದ್ಧಾರಕರಿಗೂ ಯಾರಾದರೂ ಕಲಂಕ ಹಚ್ಚಿದರೆ ನಮ್ಮ ಸಮಾಜದ ವ್ಯಾಪಾರ, ಕೈಗಾರಿಕೆ, ಸಂಸ್ಕೃತಿ ಶಿಕ್ಷಣಾದಿಗಳನ್ನು ಅನ್ಯರು ಅಪಹರಿಸಿದರೆ ನಾವು ದುಷ್ಟರ ನಿಗ್ರಹಕ್ಕಾಗಿ ಟೊಂಕ ಕಟ್ಟಲೇಬೇಕು. ದುಷ್ಟನಿಗ್ರಹ, ಶಿಷ್ಟಪರಿಪಾಲನ, ಧರ್ಮಕ್ಕಾಗಿ ಸರ್ವಸ್ವವನ್ನು ಧಾರೆಯೆರೆಯುವದು ಮುಂತಾದ ಗುಣಗಳು ಗಣಾಚಾರದಲ್ಲಿ ಸಮಾವೇಶವಾಗುತ್ತವೆ. ಶಿವನು ದಯಾಘನನಾದರೂ ದುಷ್ಟನಿಗ್ರಹಕ್ಕಾಗಿ ತ್ರಿಶೂಲವನ್ನು ಹಿಡಿದೇ ಇದ್ದಾನೆ. ವಿಷ್ಣುವು ಕರುಣಾಶಾಲಿಯಾದಾಗ್ಯೂ ದುರ್ಗುಣಿಗಳ ಶಾಸನಕ್ಕಾಗಿ ಚಕ್ರಾಯುಧವನ್ನು ಧರಿಸಿದ್ದಾನೆ. ಪಾಪಿಗಳಿಗೆ ತಕ್ಕ ಶಾಸನವನ್ನು ಮಾಡಲೇಬೇಕು. ಅಂಥ ಕಂಟಕಗಳ ನಿವಾರಣೆಗಾಗಿ ತನುಮನಧನ ಪ್ರಾಣಗಳನ್ನಾದರೂ ಅರ್ಪಿಸಬೇಕು. ಬಿಜ್ಜಳ ಭೂಪತಿಯು ಹರಳಯ್ಯನವರೆಂಬ ಒಬ್ಬ ಜಂಗಮನನ್ನು ಶೂಲಕ್ಕೇರಿಸಿದ್ದರಿಂದ ಶಿವಶರಣರು ಕೈಯ್ಯಲ್ಲಿ ಶಸ್ತ್ರವನ್ನು ತಾಳಿ ಹೋರಾಡಿದರು. 'ಒಬ್ಬ ಜಂಗಮದ ಅಭಿಮಾನದಿಂದ ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು ನೋಡಾ' ಎಂಬ ವಚನವಿದೆ. ಹರಳಯ್ಯ ಮಧುವಯ್ಯಗಳ ಕೊಲೆಯನ್ನು ಕೇಳಿ ಜಗದೇವ ಬೊಮ್ಮಯ್ಯಗಳು ಬಿಜ್ಜಳ ರಾಜನ ಕೊಲೆಯನ್ನು ಮಾಡಿದರು. ಬಸವ, ಚೆನ್ನಬಸವ, ಅಲ್ಲಮಪ್ರಭು, ಅಕ್ಕಮಹಾದೇವಿಯವರು ದೇಶತ್ಯಾಗ ಮಾಡಿ ಅಲ್ಲಲ್ಲಿ ದೇಹ ಬಿಟ್ಟರು. ಕಲ್ಯಾಣವೆಂಬದು ಕಟಗಗೇರಿಯಾಯಿತು. ಅನೇಕ ಗಣಾಧೀಶ್ವರರು ರಣದಲ್ಲಿ ಕಾದಿ ಮಡಿದರು.

ಪ್ರಾಣಕ್ಕಿಂತಲೂ ಮಾನಾಭಿಮಾನಗಳು ಹೆಚ್ಚಿನವಲ್ಲವೇ? ಧರ್ಮವೂ ಜಂಗಮವೂ ಹೆಚ್ಚಿನವಲ್ಲವೇ ? ಒಬ್ಬ ಹರಳಯ್ಯನವರ ಅಭಿಮಾನ ಹಿಡಿದದ್ದರಿಂದ ಇಷ್ಟೆಲ್ಲ ಅನರ್ಥಕ್ಕೆ ಕಾರಣವಾದರೂ ಶಿವಶರಣರು ಹಿಂದು ಮುಂದೆ ನೋಡಿದರೇ ? ವೀರಶೈವರು ಸಮಾಜಾಭಿಮಾನ ಹಿಡಿಯಬೇಕು. ಧರ್ಮದ ಅಭಿಮಾನ ಹಿಡಿಯಬೇಕು. ಅಂಜಿಕೊಂಡು ಆರ್ಜವವೃತ್ತಿಯನ್ನವಲಂಬಿಸುವದು ಗಣಾಚಾರದ ಲಕ್ಷಣವಲ್ಲ. ತನ್ನವರೆಂಬ ಅಭಿಮಾನವು ತನಗಿದ್ದರೆ ನಮ್ಮ ಸಮಾಜವು ಇಷ್ಟು ಅಧೋಗತಿಗೆ ಹೋಗುತ್ತಿದ್ದಿತೇ ? ನಮ್ಮಲ್ಲಿ ಸ್ವಾರ್ಥವು ಹೆಚ್ಚಾಗಿ ಒಬ್ಬರೊಬ್ಬರ ಅಹಿತವನ್ನೇ ಚಿಂತಿಸುತ್ತೇವೆ. ಒಬ್ಬರನ್ನೊಬ್ಬರು ಎತ್ತಿ ಹಿಡಿಯದೆ ಮೂಲಿಗೊತ್ತುವದರಲ್ಲಿಯೇ ಅಭಿಮಾನಪಡುತ್ತೇವೆ. ಇದೇನೂ ಗಣಾಚಾರದ ಲಕ್ಷಣವಲ್ಲ

ಕ್ಲೈಬ್ಯಂ ಮಾಸ್ಮಗಮಃ ಪಾರ್ಥನೈತತ್ವಯ್ಯುಪಪದ್ಯತೇ ।
ಕ್ಷುದ್ರಂ ಹೃದಯ ದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥

ಹೀಗೆಂದು ಶ್ರೀ ಕೃಷ್ಣನು ಹೇಳಿದಂತೆ ಗಣಾಚಾರವನ್ನು ಅಂಗೀಕರಿಸಿ ನಮ್ಮ ಧರ್ಮಕ್ಕಾಗಿ ಕ್ಷುದ್ರವಾದ ಹೃದಯ ದುರ್ಬಲತೆಯನ್ನು ನೀಗಬೇಕು.



# ಸೋಮೇಕಟ್ಟೆ ಕರಿವೃಷಭಯೋಗೀಂದ್ರರು ರಚಿಸಿದ ಅಷ್ಟಾವರಣ ತ್ರಿವಿಧಿ.

ಸಂಗ್ರಹಕಾರರು— ಹೊನ್ನುಡಿಕೆ ರುದ್ರಯ್ಯಾ ಮಹಾಂತಯ್ಯಾ ಬಿ. ಎ. ಆನರ್ಸ್



(ಕವಿ ಪರಿಚಯಃ— ಮೈಸೂರು ಸೀಮೆಯಲ್ಲಿ ತುಮಕೂರು ಜಿಲ್ಲಾ ತಿಪಟೂರು ತಾಲೂಕಿನಲ್ಲಿ "ನೊಣವಿನಕೆರೆ" ಎಂಬ ಗ್ರಾಮವುಂಟು. ಆ ಊರಿನಲ್ಲಿ "ಸೋಮೆಕಟ್ಟೆಮಠ" ವೆಂಬ ವಿರಕ್ತಮಠವೊಂದುಂಟು. ಆ ಮಠದಲ್ಲಿ ಈಗ್ಗೆ ಸುಮಾರು ಅರುವತ್ತು ಎಪ್ಪತ್ತು ವರ್ಷಗಳ ಹಿಂದೆ "ಕರಿವೃಷಭದೇಶಿಕೇಂದ್ರ" ರೆಂಬ ಸ್ವಾಮಿಗಳು ಪೂರ್ಣ ಶಿವಾನುಭವಿಗಳಿದ್ದು, ಅನೇಕಾನೇಕ ಭಕ್ತರುಗಳನ್ನು ತಮ್ಮ ಉಪದೇಶಾಮೃತದಿಂದ ಪುನೀತರನ್ನಾಗಿಮಾಡಿ, ಶಿವೈಕ್ಯರಾದರು. ಇವರು ತಮ್ಮ ಸಣ್ಣ ಕೋಣೆಯಲ್ಲಿ, ತೂಗುಮಂಚದಮೇಲೆ ಕುಳಿತು, ಶಿವಯೋಗ ನಿದ್ರಾಪರವಶರಾಗಿ ಹಾಡಿದ ಪದಗಳಿವು. ಇನ್ನೂ ಸಂಗ್ರಹಿಸಬೇಕಾದ ಪದಗಳು ಬಹಳವಿರುತ್ತವೆ. ಇವರ ಜೀವನಚರಿತ್ರೆಯನ್ನೂ ಕ್ಷಿಪ್ರದಲ್ಲಿಯೇ ವಾಚಕರ ಮುಂದಿಡಲು ಯತ್ನಿಸುವೆನು.)

ಗುರುವೆ, ಎನ್ನಯಭಾಗ್ಯದಿರವೆ, ಸುರತರುವೆ, ಮದ್ಗುರುವೆ, ಕರುಣಿಪುದು।
ಪರಮಪದವಿಯನೀಗ, ಕರಿವೃಷಭಲಿಂಗ ಕೃಪೆಯಾಗು ॥ ಪಲ್ಲ ॥

ಏನೇನೂ ಇಲ್ಲದ ಮಹದಾದಿ ಕಾಲದೊಳು ಸುಮ್ಮನದೊಳಿರ್ದು ।
ನೆನೆಯಲ್ಕೆ ನಾದವು ಭುವನ ಮುಸುಕಿತ್ತು ಸಹಜ ॥೧॥

ನಾದ ಬಿಂದು ಕೂಡಿ ನವಖಂಡವಾಯಿತು ಆಧಾರ ಆದಿಪಶ್ಚಿಮ ।
ಅಂತ್ಯದೋಳ್‌ಬಿಂದು ನಾದಮಯನೆಂಬ ಪೆಸರಾಯ್ತು ॥೨॥

ನಾದವೆ ಗುರುರೂಪ, ಬಿಂದು ಲಿಂಗವೆ ಆಗಿ ವೇಧಿಸಿ ಕಳೆಯು ।
ಚರಲಿಂಗ ರೂಪೆಂದು ಪೇಳಿದ ಗುರುವೇ ಕೃಪೆಯಾಗು ॥೩॥

ಮೂರಕ್ಕೆ ಆರಾಗಿ ಆರುಮೂವತ್ತಾರು ನೂರೊಂದು ಷೋಡಶ ।
ಪರಿಪೂರ್ಣಮಯನೆಂಬ ಸಾರವ ಎನಗೆ ಅರುಹಿದೆ ॥೪॥

ವೇದವು ಪೊಗಳಿ ತಾ ಆದಿಕಾಣದೆ ಪೋಗಿ ಮೇದಿನಿಗೆ ಬಿದ್ದು ।
ಹೊರಳಿದರೆಸಿಲ್ಕದಾ ಅನಾದಿಮಹಿಮನೆ ಕೃಪೆಯಾಗು ॥೫॥

ಹರಿಯುಜ ಸುರರೆಲ್ಲ ಅರಿಕೆಯು ಕುರಿಯಂತೆ ಮರೆದೊರಗಿದರು ।
ತಮ್ಮ ಪ್ರಾಚೀನ ಕರ್ಮದಿ ಗುರುವಿನ ಗೊತ್ತ ತಿಳಿಯದೆ ॥೬॥

ಒರೆದುನೋಡ್ಯೆ ಮುನ್ನ ಗುರುವಿನ ಮಹಿಮೆಯು ಪರುಷಸೋಂಕಿದ ।
ಲೊಹಪರುಷವು ಆದಂತೆ ಗುರುಪಾದ ಸೋಂಕಿ ನಿಜಮುಕ್ತ ॥೭॥

ಭ್ರಮರ ಕೀಟವ ತಂದು ಭ್ರಮರವ ಮಾಡಿದ ಪರಿಯಂತೆ ।
ಎನ್ನ ಕರವಿಡಿದ ಸದ್ಗುರುವೆ ಸರಿಯುಂಟೆ ನಿನಗೆ ಧರೆಯೊಳು ॥೮॥

ನಗುರೋರಧಿಕವೆಂದು ನಾಂಟ್ಯವನಾಡುತ್ತ ಅಘಹರನ ಶರಣ ।
ರೊಡಗೊಂಡು ಪೋದನು ಸುಗುಣ ಗುರುಭಕ್ತ ನಿಜಮುಕ್ತ ॥೧೦॥

ಭಕ್ತನು ಪುಷ್ಪವನೆತ್ತಿ ತರುತಿರಲೊಂದು ಹತ್ತಿಕೊಂಡಿರುವೆ ।
ಪುಷ್ಪದೊಳಿರುತಿರೆ ಕರ್ತೃಮಸ್ತಕಕೆ ಪೂಜಿಸಿದ ॥೧೧॥

ಸುತ್ತಲು ಮಸ್ತಕವ ಹತ್ತಿಕೊಂಡಿರುವೆಗೆ ಮುಕ್ತಿಪರಲೋಕ ।
ಗತಿ ಕೊಟ್ಟ ಲಿಂಗವೆ ನಿತ್ಯ ನೀ ಎನಗೆ ಕೃಪೆಯಾಗು ॥೧೨॥

ಚರಲಿಂಗಮೂರ್ತಿಗೆ ಶಿರಬಾಗಿ ಶರಣೆಂದು ಪರಮನಿರಂಜನನ ।
ತನುವಿನೊಳೊಡೆವೆರೆದ ಗುರುಲಿಂಗ ಚರಕೆ ನಮಿಸುವೆ ॥೧೩॥

ವೃಡರೂಪ ಚರಲಿಂಗ ಅಡವಿಯೊಳ್ ಬರುತಿರೆ ಕಡಿವ ಕಟ್ಟಿಗೆಯು ।
ಶಬರ ಕಡಿವುದಕೆ ಶಿರವಾಗಿ ಪೊಡವಿಯಲಿ ಮುಕ್ತಿವಡೆದನು ॥೧೪॥

ಶರಣನ ಪದಜಲದ ಸಾಸಿರಾಂಶದೊಳೊಂದು ವರಬಿಂದು ವೈದ ।
ಲರಿಯವು ಧರೆಯೊಳು ಇರುವ ತೀರ್ಥಗಳು ಇದು ಸಹಜ ॥೧೫॥

ಶರಣನು ಚರಣವ ತೊಳೆಯಲು ಉರಗಗೆ ತಾ ಸಿಡಿದು ತಾ ।
ಚೋರನದು ಕಡಿಯೆ ಈರ್ವರಿಗೂ ಪರಲೋಕಗತಿಯು ದೊರಕಿತ್ತು ॥೧೬॥

ಭಕ್ತನು ಮರೆದು ತಾನುಂಡು ಮಿಕ್ಕುದನು ಜಲಕದ್ದಿ ಅದ ಬಿಸುಡೆ ।
ಭಕ್ಷಿಸಿದ ಮತ್ಸ್ಯನು ಸಿಕ್ಕಿತು ವ್ಯಾಧನ ಹಸ್ತದೊಳು ॥೧೭॥

ಸಿಕ್ಕಿದ ಮೀನನು ಅಕ್ಕರಿಂ ಸವಿಯಲು ಗಕ್ಕನೆ ಮೋಕ್ಷದೊರಕಿತು ।
ಶಬರನು ಮುಕ್ಕಣ್ಣನೊಳಗೆ ಸುಖವಿರ್ದ ॥೧೮॥

ಶ್ರೀ ವಿಭೂತಿಯನೀಗ ಭಾವಶುದ್ಧದಿ ಧರಿಸೆ ಸಾವಿಲ್ಲ ಕರಣಗಳ ।
ಭಯವಿಲ್ಲ ದೇವಗಣ ಪದವು ದೊರಕುವುದು ॥೧೯॥

ಸತ್ತವನ ಫಣೆಯೊಳು ಶ್ವಾನವು ಬೂದಿಯು ಕಾಲಿಂದೊತ್ತಿ ತಾ ಪೋಗೆ ।
ಅಂತಕನು ಕಂಡಾಗ ಕರ್ತೃವಿನ ಬಳಿಗೆ ಕಳುಹಿದ ॥೨೦॥

ಅಂಗಗುಣಗಳ ದಹಿಸಿ ಮಂಗಳ ಬೆಳಗಿನೊಳು ಕಂಗಳೊಂದಾಗಿ ।
ಮಂಗಳಮಣಿಯನು ಸರ್ವಾಂಗದೊಳ್ ಧರಿಸಿ ನಿಜವಡೆವೆ ॥೨೧॥

ಗಾರ್ದಭನ ಮೇಲೆ ರುದ್ರಾಕ್ಷಿಯು ಹೇರಲು ಬಿದ್ದಿತು ಲೋಳಿಯೊಳ ।
ಗೊಂದು ಮಣಿಸೇರೆ ರುದ್ರಗಣಪದವು ದೊರಕಿತು ॥೨೨॥

ವೇದಕ್ಕೆ ಮಾತೆಯಾದ ಆದಿಪಂಚಾಕ್ಷರವನೋದಿ ನೀವೆಲ್ಲ ।
ಪರಲೋಕದ ಹಾದಿಯು ಸಾಧಿಸಿರಣ್ಣ ಸಜ್ಜನರು ॥೨೩॥

ಪರಶಿವನು ಪಾರ್ವತಿಗೆ ಒರೆದು ಬೋಧಿಸುತಿರಲು ಭರದಿಂದದುಂಬಿ ।
ಮುಡಿಯೊಳು ಆದಕೇಳಿ ಪರಲೋಕಕಾಗಿ ನಡೆದುದು ॥೨೪॥

ಅಷ್ಟಾವರಣದ ಘನವ ನಿಷ್ಠೆವಂತರು ಕೇಳಿ ಮುಟ್ಟಿ ಪೂಜಿಸಲು ।
ಶ್ರೇಷ್ಠರೆಂದೆನಿಸುವರು ಇಷ್ಟದೊಳ್ ಬೆರೆದು ಸುಖಿಸುವರು ॥೨೫॥

ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ।
ವೆಂದೆಂಬುವ ಗೊತ್ತಿನ ಮಠದ ಪತಿಗಳು ॥೨೬॥

ಪಂಚಾಕ್ಷರವ ಪಂಚ ಸ್ಥಾನದೊಳು ನಿರ್ಮಿಸಿ ವಂಚನೆ ।
ಇಲ್ಲದಿರುವ ಹೃದಯದೋಳ್ ಸಂಚರಿಸ ಮಹಾ ಘನಲಿಂಗ ॥೨೭॥

ದಿನಕರನ ಮಂಡಲದಿ ಘನಲಿಂಗವಿರ್ಪುದು ಘನಲಿಂಗವನ್ನು ।
ಕರಮನ ಭಾವದೊಳು ವಿನಯದಿಂ ಪೂಜಿಸಿ ಸುಖಿಯಾಗಿ ॥೨೮॥

ತನುವ ಗುರುವಿಗೆ ಕೊಟ್ಟು ಮನವ ಲಿಂಗದೊಳಿಟ್ಟು ಧನವ ।
ಜಂಗಮಕೆ ಅನುದಿನ ಕೊಡುತಿರ್ಪ ಘನಮಹಿಮನೀನು ಕೃಪೆಯಾಗು ॥೨೯॥

ನಮ್ಮ ಶರಣರ ನೋಡಿ ನಮ್ಮ ಶರಣರ ಕೂಡಿ ನಮ್ಮ ಶರಣರನು ।
ಹಾಡಿಕೊಂಡಾಡುವೆ ನಿರ್ಮಲಮೂರ್ತಿ ಕೃಪೆಯಾಗು ॥೩೦॥

ಭಕ್ತರ ಬಾಗಿಲ ಕಾಯ್ದುಕೊಂಡಿರುವಂತೆ ಗೊತ್ತುಮಾಡಿ ।
ಎನ್ನ ಸಲಹಿದ ಸದ್ಯೋನ್ಮುಕ್ತನೆ ಎನಗೆ ದಯುವಾಗು ॥೩೧॥

ತೊದಲುನುಡಿಯಲ್ಲದೆ ಬದಲು ನುಡಿಯಬಾರದು ಸದಮಲ
ಹೃದಯರಿದ ಕೇಳಿ ಗ್ರಹಿಸಿದರೆ ಒದಗುವುದು ಮುಕ್ತಿಕೈವಲ್ಯ ॥೩೨॥

ಅನಿಮಿಷಗೆ ಆನಂದ ಮನವು ಆಗಿರುವಂಥ ಚಿನುಮಯನ ।
ಸೋಮೆಕಟ್ಟೆ ಕರಿವೃಷಭೇಂದ್ರನ ಘನ ನಿರಂಜನನೊಳೊಡೆವೆರೆದೆ ॥೩೩॥

# ವೀರಶೈವರ ಪ್ರಸಾದಮಂದಿರ

(ಲೇಖಕ:-- ಓರ್ವ ಪ್ರಸಾದಿಕ)

---

ವೀರಶೈವರ ಪ್ರಸಾದ ಮಂದಿರವು ಪ್ರಾರ್ಥನಾಲಯದಂತೆ ಪರಿಶುದ್ಧವಾಗಿಯೂ ನಿರ್ಮಲವಾಗಿಯೂ ಪ್ರಕಾಶವುಳ್ಳದ್ದಾಗಿಯೂ ಶುದ್ಧ ಹವೆಯುಳ್ಳದ್ದಾಗಿಯೂ ಇರಬೇಕು. ಅದರಲ್ಲಿ ಮಹಾನುಭಾವರ ಭಾವಚಿತ್ರಗಳನ್ನು ಗೋಡೆಗೆ ಸಾಲಾಗಿ ಹಚ್ಚಿರಬೇಕು. ಪುಷ್ಪ, ಪತ್ರಿ, ಧೂಪದ ಹೊಗೆಯು ಅಲ್ಲಿ ಘಮಘಮಿಸುತ್ತಿರಬೇಕು. ಊಟಕ್ಕೆ ಕೂಡ್ರುವ ಮಣಿಗಳೂ ಪಂಕ್ತಿಚಾಪಿಗಳೂ ತಾಟು ತಾಂಬಂಡಿಗಳೂ ಸ್ವಚ್ಛವಾಗಿರಬೇಕು. ಅಡಿಗೆಯ ಪಾತ್ರೆಗಳು ಕನ್ನಡಿಯಂತೆ ಥಳ ಥಳ ಹೊಳೆಯುತ್ತಿರಬೇಕು. ಅಡಿಗೆ ಮಾಡುವವರು ಸ್ವಚ್ಛವಾಗಿಯೂ ಅಚ್ಚುಕಟ್ಟಾಗಿಯೂ ಇರಬೇಕು. ಊಟ ಮಾಡುವವರು ಸ್ನಾನಮಾಡಿ ಮಡಿಯ ವಸ್ತ್ರವನ್ನುಟ್ಟುಕೊಂಡು ಸ್ವಚ್ಛವಾದ ಹಸ್ತಪಾವುಡವನ್ನು ತೆಗೆದುಕೊಂಡು ಪ್ರಸನ್ನಚಿತ್ತದಿಂದ ಕುಳಿತುಕೊಳ್ಳಬೇಕು. ಊಟಕ್ಕೆ ಕುಳಿತುಕೊಳ್ಳುವ ಪೂರ್ವದಲ್ಲಿ ಪರಮಾತ್ಮನ ಭಜನೆಯನ್ನು ಮಾಡಬೇಕು. ಊಟ ನಡೆದಾಗ ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು. ನಾವು ಸೇವಿಸುವ ಪ್ರಸಾದವನ್ನು ಒಳ್ಳೆ ನಿರ್ಮಲ ದೃಷ್ಟಿಯಿಂದ ನೋಡುತ್ತ ಅದರಲ್ಲಿ ಲಿಂಗದ ಭಾವನೆಯನ್ನಳವಡಿಸುತ್ತ ಸಾವಕಾಶವಾಗಿ ತೆಗೆದುಕೊಳ್ಳಬೇಕು. ಹಸಿದ ಪಶುವು ಅಶನವನ್ನು ಗಪಗಪ ತಿಂದಂತೆ ತಿನಬಾರದು. ಈ ಪ್ರಕಾರ ಆಧ್ಯಾತ್ಮಿಕ ಭಾವನೆಯಿಂದ ನಾವು ಪ್ರಸಾದವನ್ನು ಸೇವಿಸಿದರೆ ನಮ್ಮ ಕರಣವೃತ್ತಿಗಳು ಅಡಗುವವು. ನಮ್ಮ ರಕ್ತನಾಳಗಳಲ್ಲಿ ಆಧ್ಯಾತ್ಮಿಕ ಪ್ರಭೆಯು ಹೊರಚಿಮ್ಮುವುದು. ಒಟ್ಟಿನ ಮೇಲೆ ಪ್ರಸಾದ ಗೃಹವು ನೋಡುವವರಿಗೆ ಚಿತ್ತಪ್ರಸನ್ನತೆಯನ್ನುಂಟು ಮಾಡುವಂತಹದಾಗಿರಬೇಕು.

ಬಸವಾದಿ ಪ್ರಮಥರಕಾಲಕ್ಕೆ ಕಲ್ಯಾಣಪಟ್ಟಣದಲ್ಲಿ ಶಿವಶರಣರೆಲ್ಲರು ಒತ್ತಟ್ಟಿಗೆ ಕೂಡಿ ಪ್ರಸಾದವನ್ನು ಸೇವಿಸುತ್ತಿದ್ದರು. ಒತ್ತಟ್ಟಿಗೆ ಸೇರಿ ಸಭೆ, ಪುರಾಣ, ಪ್ರವಚನ, ಕೀರ್ತನ ಪ್ರಾರ್ಥನೆಗಳನ್ನು ಮಾಡುವದಕ್ಕಿಂತಲೂ ಒತ್ತಟ್ಟಿಗೆ ಕೂಡಿ ಎಲ್ಲರೂ ಊಟಮಾಡುವದರಿಂದ ಪರಸ್ಪರರಲ್ಲಿ ಪ್ರೇಮ ಐಕ್ಯತೆಗಳು ಹೆಚ್ಚಾಗಿ ಬೆಳೆಯುತ್ತವೆ. ಸ್ವಾರ್ಥ ಗುಣವು

ಹಿಮ್ಮೆಟ್ಟುತ್ತದೆ. ತಾನು ದುಡಿದು ಬೇಕಾದಹಾಗೆ ಗಳಿಸಿ ಸ್ವತಂತ್ರಿಸಿ ಯಥೇಚ್ಛವಾಗಿ ಊಟಮಾಡುತ್ತೇನೆಂಬದು ಪಾಪದ ವಿಚಾರವು. ಅದರಂತೆಯೇ ಏನೂ ಕಾಯಕಷ್ಟಮಾಡದೆ ಅನ್ಯರು ದುಡಿದದ್ದರಲ್ಲಿ ನಾನೂ ಪಾಲುಗಾರನಾಗುತ್ತೇನೆಂಬದೂ ಪಾಪದ ವಿಚಾರವೇ. ಆದರೆ ತನುವ ಬಳಲಿಸಿ ಮನವ ನೋಯಿಸಿ ನಿತ್ಯ ಶುದ್ಧಕಾಯಕದಿಂದ ಬಂದ ಪ್ರಸಾದದಲ್ಲಿ ನಾವೆಲ್ಲರೂ ಬಂಧುಗಳಂತೆ ಭಾಗಿಗಳಾಗೋಣವೆಂಬುದು ಅತ್ಯಂತ ಪವಿತ್ರ ಭಾವನೆಯು. ಹಿಂದಕ್ಕೆ ಶಿವಶರಣರು ನಾನಾ ಕಾಯಕಗಳನ್ನು ಮಾಡಿ ಪ್ರತಿನಿತ್ಯದಲ್ಲಿಯೂ ಒತ್ತಟ್ಟಿಗೆ ಕೂಡಿ ಪ್ರಸಾದವನ್ನು ಸೇವಿಸುತ್ತಿದ್ದರು. ಕೀಳು ಕಸಬು ಮಾಡುವವನಿಂದ ಮೊದಲ್ಗೊಂಡು ಮಂತ್ರಿವರ್ಯನಾದ ಬಸವೇಶನ ವರೆಗೂ ಎಲ್ಲ ಶರಣರೂ ಒಂದೇ ಪ್ರಕಾರದ ಪ್ರಸಾದವನ್ನು ಯಾವ ಭಿನ್ನಭಾವನೆಯಿಲ್ಲದೆ ಸೇವಿಸುತ್ತಿದ್ದರು. ಅಂದಮೇಲೆ ಸಮಾಜದಲ್ಲಿ ಪ್ರೇಮೈಕ್ಯತೆಗಳು ನೆಲೆಗೊಳ್ಳದೇನು ಮಾಡಿಯಾವು? ಸಮಾಜದ ಕಾರ್ಯಗಳು ಸುಸಂಘಟಿತವಾಗಿ ನಡೆಯದೇನು ಮಾಡಿಯಾವು? ಒಡಲ ಕಳವಳಕ್ಕಾಗಿಯೇ ಸಮಾಜದಲ್ಲಿ ಒಡಕುಗಳು ಹೆಚ್ಚಾಗುವವು. ನಾನು ಹೆಚ್ಚಿನವನು ನಾನು ಬೇರೆಯಾಗಿ ಊಟಮಾಡುತ್ತೇನೆ. ನೀನು ಕಡಿಮೆಯುವನು ನೀನು ಬೇರೆ ಊಟಮಾಡು ನಿನ್ನ ಕುಲ ಹೆಚ್ಚು ನನ್ನ ಕುಲ ಕಡಿಮೆಯೆಂದು ಹೇಳಿ ಪರಸ್ಪರ ಅನ್ನ ವ್ಯವಹಾರವನ್ನು ಬಿಟ್ಟಿರುವ ಸ್ವಾರ್ಥಸಾಧಕರಿಂದ ಸಮಾಜದಲ್ಲಿ ಐಕ್ಯತೆಯು ಹೇಗಾಗಬೇಕು? ಮದುವೆ, ಪ್ರಸ್ತ, ಮಹೋತ್ಸವಾದಿಗಳು ಪರಸ್ಪರ ಪ್ರೇಮಕ್ಕಾಗಿಯೇ ಉಂಟಾಗಿರುತ್ತವೆ. ಎಲ್ಲರೂ ಕೂಡಿಕೊಂಡು ಮಾತನಾಡುವದಕ್ಕಿಂತಲೂ ಕೂಡಿಕೊಂಡು ಊಟಮಾಡುವದರಲ್ಲಿ ಹೆಚ್ಚಿನ ಸಂಘಟಿತ ಶಕ್ತಿಯೂ ಸಮಾಜದ ಘನತರ ಕಾರ್ಯಗಳೂ ಸಂಘಟಿಸುವವೆಂಬದನ್ನು ಯಾರೂ ಮರೆಯಲಾಗದು. ತನ್ನಷ್ಟಕ್ಕೆ ತಾನೇ ಉಣ್ಣುವದು ಸ್ವಾರ್ಥದ ಲಕ್ಷಣವು. ತನ್ನ ಬಳಗದೊಂದಿಗೆ ಕೂಡಿಕೊಂಡುಣ್ಣುವದು ವೀರಶೈವ ಲಕ್ಷಣವು.

ಕೂಡಿಕೊಂಡು ಊಟ ಮಾಡುವದು ಎಲ್ಲ ಸಮಾಜಗಳಲ್ಲಿಯೂ ಉಂಟು. ಮುಸಲ್ಮಾನರು ಪರಸ್ಪರರಲ್ಲಿ ಪ್ರೇಮ ಐಕ್ಯತೆಗಳು ಹೆಚ್ಚಾಗಲೆಂದೇ ಎಲ್ಲರೂ ಕೂಡಿ ಒಂದೇ ತಾಟಿನಲ್ಲಿ ಹೆಚ್ಚು ಕಡಿಮೆಯೆಂಬ ಭಾವನೆಯನ್ನು ತೊರೆದು ಊಟ ಮಾಡುವರು. ಯುರೋಪಿಯನ್ನರಾದರೂ ತಮ್ಮ ಕ್ಲಬ್ಬ

ಗಳನ್ನು ಮಾಡಿಕೊಂಡು ಪರಸ್ಪರ ಕೂಡಿ ಅನ್ನಪಾನಾದಿಗಳನ್ನು ಸೇವಿಸಿ ಪ್ರೇಮಾನಂದಗಳನ್ನು ಹೆಚ್ಚಿಸಿಕೊಳ್ಳುವರು. ಪಾಶ್ಚಿಮ ಜನಗಳಾದರೂ ಹಾಗೆಯೇ ಮಾಡುವದುಂಟು. ಆದರೆ ಅವರಾರಲ್ಲಿ ಪ್ರಸಾದದ ಬಗ್ಗೆ ಭೋಗ ಬುದ್ಧಿಯಿರುವದಲ್ಲದೆ ತ್ಯಾಗಬುದ್ಧಿಯು ಕಂಡು ಬರುವದಿಲ್ಲ. ಕೂಡಿ ಕೊಂಡು ಎಲ್ಲರೂ ಭೋಗಿಸಬೇಕೆನ್ನುವವರೇ ಹೊರತು ಬಡಬಗ್ಗರಿಗೂ ಅನಾಥರಿಗೂ ಆ ಆಹಾರವು ಸಲ್ಲಬೇಕೆಂದು ಅವರು ಕನಸು ಮನಸಿನಲ್ಲಿ ಸಹ ವಿಚಾರವನ್ನು ತರುವದಿಲ್ಲ. ಆದರೆ ಹಿಂದೂ ಧರ್ಮದಲ್ಲಿ ಅನ್ಯ ಜೀವಿ ಗಳನ್ನು ನೋಡದೆ ಕೇವಲ ತನ್ನ ಹೊಟ್ಟೆಗೆ ತಿನ್ನುವದು ಪಾಪದ ಕೆಲಸ ವೆಂದು ತಿಳಿಯುತ್ತಾರೆ. ಭಗವದ್ಗೀತೆಯಲ್ಲಿ "ಭುಂಜಂತೇ ತೇತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್" ಎಂದು ಹೇಳಿದೆ. ಅಂದರೆ ಕೇವಲ ತನ್ನ ದೆಶೆಯಿಂದಲೇ ಅಡಿಗೆ ಮಾಡಿಕೊಂಡು ಊಟ ಮಾಡುವವನು ಪಾಪವನ್ನೇ ಭುಂಜಿಸುತ್ತಾನೆ. ವೀರಶೈವರಲ್ಲಿ ಪ್ರಸಾದವು ಇದೇ ಆಧ್ಯಾ ತ್ಮಿಕ ತತ್ವವನ್ನೊಳಕೊಂಡದ್ದಾಗಿದೆ. ಪ್ರಸಾದ ಭೋಗಕ್ಕಿಂತಲೂ ಪ್ರಸಾದ ತ್ಯಾಗದಲ್ಲಿಯೇ ವೀರಶೈವರು ಹೆಚ್ಚು ಸಂತೋಷಬಡುವರು. ವೀರಶೈವರು ತಮ್ಮ ಒಡಲಿಗಾಗಿ ಪ್ರಸಾದವನ್ನು ಸೇವಿಸದೆ ಗುರು ಲಿಂಗ ಜಂಗಮಕ್ಕೆ ಸಲ್ಲಿಸಿ ಮಿಕ್ಕ ಪ್ರಸಾದವನ್ನು ತಾವು ಸೇವಿಸುವರು. ಮಿತಿಯಿಂದ ಪ್ರಸಾ ದವನ್ನು ಸೇವಿಸುವರು ಹೆಚ್ಚೆಚ್ಚಿಗೆ ಆಹಾರವನ್ನು ಸೇವಿಸುವದಾಗಲಿ, ಹೆಚ್ಚುಳಿದುದನ್ನು ಚಲ್ಲುವದಾಗಲಿ ಅನ್ಯ ಜೀವಿಗಳನ್ನು ಹತ ಮಾಡಿದಂತೆ ಯೆಂದು ಭಾವಿಸುತ್ತಾರೆ.

ಪ್ರತಿಯೊಬ್ಬ ವೀರಶೈವನ ಮನೆಯೇ ಮಠವು; ಅನ್ನಛತ್ರವು; ದಾಸೋ ಹಮಂದಿರವು. ಪ್ರತಿನಿತ್ಯದಲ್ಲಿಯೂ ಆತನ ಮನೆಯಲ್ಲಿ ದಾಸೋಹವು ನಡೆದಿರುತ್ತದೆ. ವೀರಶೈವರ ಪ್ರಸಾದವು ಶಿವಾರ್ಪಣ ಬುದ್ಧಿಯಿಂದ ಕೂಡಿದ್ದಾಗಿದೆ. ಆದ್ದರಿಂದ ತ್ಯಾಗಗುಣವು ಕಂಗೊಳಿಸುತ್ತದೆ. ನಿವೃತ್ತಿ ಮಾರ್ಗದ ರಹಸ್ಯವು ಪ್ರಕಾಶಿಸುತ್ತದೆ. ಎಲ್ಲಿ ನಿವೃತ್ತಿ ಮಾರ್ಗವಿದೆಯೋ ಅಲ್ಲಿ ಸಕಲ ಜೀವಜಂತುಗಳ ನಿಜವಾದ ಸೌಖ್ಯವಿರುತ್ತದೆ. ಆದರೆ ಯಾರಾದರೂ ತಮ್ಮ ಭೋಗಕ್ಕಾಗಿ ಅನ್ಯರ ಗಂಟಲನ್ನು ಹಿಚುಕಿ ತಮ್ಮ ಒಡಲನ್ನು ತುಂಬಿಕೊಂಡು ಹೆಚ್ಚುಳಿದದ್ದನ್ನು ನಾಳಿಗೆ ಬರಲೆಂದು ಕೂಡಿ ಟ್ಟುಕೊಂಡರೆ ಅದೇ ಜಗತ್ತಿನ ದುಃಖಕ್ಕೆ ಕಾರಣವಾಗುತ್ತದೆ.

ಜಗತ್ತಿನ ಎಲ್ಲ ಜೀವಿಗಳಿಗೂ ಹೊಟ್ಟೆ ಇದೆ. ಅವು ತಮ್ಮ ಜೀವ ಧಾರಣೆಗಾಗಿ ಒಂದನ್ನೊಂದು ಕೊಂದು ಜೀವಿಸುತ್ತಲಿವೆ. ದುರ್ಬಲ

ಪ್ರಾಣಿಗಳನ್ನು ಸಬಲ ಪ್ರಾಣಿಗಳು ಕೊಂದು ಜೀವಿಸುವದು ಸೃಷ್ಟಿಯ ನಿಯಮವಾಗಿದ್ದರೂ ಜ್ಞಾನಿಯಾದ ಮನುಷ್ಯನು ತನ್ನ ಒಡಲಿಗಾಗಿ ಅನ್ಯರನ್ನು ಹಿಂಸಿಸುವದು ಮಹಾಪಾಪವು. ಈ ಹೋರಾಟದ ಯುಗದಲ್ಲಿ ದುರ್ಬಲರನ್ನು ಬಲವಂತರು ಹಿಂಡಿ ಹಿಪ್ಪೆ ಮಾಡಿ ತನ್ನ ಹೊಟ್ಟೆಯನ್ನು ಗಟ್ಟಿ ಮಾಡಿಕೊಳ್ಳುವರು. ಆದರೆ ಸಬಲರಿಗೂ ಶ್ರೀಮಂತರಿಗೂ ಜೀವಿಸಲಿಕ್ಕೆಷ್ಟು ಅಧಿಕಾರವಿದೆಯೋ ಅಷ್ಟೇ ದುರ್ಬಲರಿಗೂ ದರಿದ್ರರಿಗೂ ಇರುತ್ತದೆ. ಇದನ್ನರಿತು ಅವರ ಪಾಲಿಗೆ ಸಲ್ಲುತ್ತಿರುವ ಅನ್ನವನ್ನು ಕೆಲವು ವ್ಯಕ್ತಿಗಳು ಅಪಹರಿಸಿದರೆ ಅದರಂಥ ಪಾಪವು ಮತ್ತೊಂದಿಲ್ಲ. ಅಶಕ್ತರ ಮತ್ತು ದರಿದ್ರರ ಒಡಲಿನಲ್ಲಿಯೂ ಪರಮಾತ್ಮನಿರುತ್ತಾನೆ. ಸಬಲರೂ ಬದುಕಬೇಕು; ದುರ್ಬಲರೂ ಬದುಕಬೇಕು; ಶ್ರೀಮಂತರೂ ಬದುಕಬೇಕು; ಬಡವರೂ ಬದುಕಬೇಕು. ಇದೇ ವೀರಶೈವ ತತ್ವವು. ಅವುಗಳನ್ನು ಕೊಂದು ನಾವು ಬದುಕಬೇಕೆಂಬದು ಭವಿಯ ತತ್ವವು. ನಿಜವಾದ ವೀರಶೈವನು ಒಬ್ಬರನ್ನು ನಾಶಗೊಳಿಸಿ ತಾನು ಬದುಕಬೇಕೆಂದು ಎಂದಿಗೂ ಚಿಂತಿಸಲಾರನು. 'ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾ ಸುರೀ ಮತಾ' ಎಂದು ಗೀತೆಯಲ್ಲಿ ಹೇಳಿದೆ. ಸಕಲ ಜೀವರಾಶಿಗಳಿಗೆ ಪರೋಪಕಾರ ಮಾಡುವ ಸಂಪತ್ತೇ ದೈವೀ ಸಂಪತ್ತು. ಇದು ತನಗೂ ಅನ್ಯರಿಗೂ ಸುಖಶಾಂತಿಯನ್ನೀಯುವದು. ಇದೇ ವೀರಶೈವರ ಸಂಪತ್ತು. ಅನ್ಯರನ್ನು ಹಿಂಡಿ ಹಿಪ್ಪೆ ಮಾಡಿ ತನ್ನ ಒಡಲನ್ನು ತುಂಬಿ ಹೊರಚಲ್ಲಿಸುವ ಸಂಪತ್ತು ಆಸುರೀ ಸಂಪತ್ತು. ಇದು ಜಗತ್ತಿನ ದುಃಖ ಸಂತಾಪಗಳಿಗೆ ಕಾರಣವಾಗಿದೆ. ವೀರಶೈವರು ನಾಳಿಗೆಂದು ಕೂಡಿಡುವದು ಸಹ ಪಾಪದ ಕೆಲಸವಾಗಿದೆ. ದೇವರ ದಾಸಿಮಯ್ಯನವರು ಅಪ್ಪಣೆ ಕೊಡಿಸಿರುವದೇನಂದರೆ, 'ಇಂದಿಗೆಂದು ನಾಳಿಗೆಂದು ಚಿಂತಿಸಲೇಕೆ ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ' ಇದೇ ಅಲ್ಲವೇ ನಿಜವಾದ ಪ್ರಸಾದದ ತತ್ವವು.

ಇದನ್ನರಿಯದೆ ಕೆಲವು ಸ್ವಾರ್ಥಪರಾಯಣರಾದ ವ್ಯಕ್ತಿಗಳು ತಾವು ಸೇವಿಸುವ ಮೃಷ್ಟಾನ್ನವನ್ನು ಅನ್ಯರು ನೋಡಬಾರದೆಂಬ ಸಂಕಟದಿಂದ ಅವರ ದೃಷ್ಟಿಗೆ ಕಾರಣನಾದ ಸೂರ್ಯನನ್ನೇ ಭವಿಯೆಂದು ಕರೆದಿರುವರು. ಇಂಥ ಪುಣ್ಯಶಾಲಿಗಳು ಭವಿಯಾದ ಸೂರ್ಯನ ಕಿರಣಗಳು ಬೀಳದಂಥ ಕತ್ತಲೆಯ ಕೋಣೆಯಲ್ಲಿ ದೀಪವನ್ನು ಹಚ್ಚಿಕೊಂಡು ನೊಣ ನೊರಜುಗಳಿಂದ ಕಲುಷಿತವಾದ ಸ್ಥಳದಲ್ಲಿ ಊಟಮಾಡುವರು. ಬೆಳಕಿ

ಲ್ಲದ ಸ್ಥಳದಲ್ಲಿ ಭಾವಿಯನ್ನು ತೋಡಿಸಿ ಅದರ ನೀರನ್ನು ಅನ್ಯರಿಗೆ ಉಪಯೋಗವಾಡಗೊಡದೆ ತಾವೇ ಉಪಯೋಗಿಸುವರು. ಸೂರ್ಯನು ಭವಿಯಾದರೆ ಕತ್ತಲೆಯೇಕೆ ಭವಿಯಲ್ಲ? ನೊಣನೊರಜುಗಳೇಕೆ ಭವಿಯಲ್ಲ? ಮನೆಯಲ್ಲಿ ಬಿದ್ದಿರುವ ಸೂರ್ಯನ ಬೆಳಕೇಕೆ ಭವಿಯಲ್ಲ? ಮನೆಯಲ್ಲಿ ಸಂಚರಿಸುವ ಹವೆಯೇಕೆ ಭವಿಯಲ್ಲ? ಸೂರ್ಯನೇನೂ ಭವಿಯಲ್ಲ. ನಾವು ಊಟಮಾಡುವ ಪ್ರಷ್ಟಾನ್ನವನ್ನು ನೋಡಿ ಅನ್ಯರು ಹೊಟ್ಟೆಕಿಚ್ಚುಬಟ್ಟಾರೆಂಬ ಸಂಕುಚಿತ ಭಾವವೇ ಭವಿತನವು. ನಮ್ಮ ಬಾವಿಯು ಬೈಲಿಗಿದ್ದರೆ ಅದರ ನೀರನ್ನು ಅನ್ಯರು ಉಪಯೋಗಮಾಡಿಯಾರೆಂಬ ಸ್ವಾರ್ಥಬುದ್ಧಿಯೇ ಭವಿತನವು. ಎಲ್ಲರೂ ತನಗಾಗಿಯೇ ಇರಬೇಕು ಅನ್ಯರಿಗೆ ಬೇಡವೆಂಬ ದುಷ್ಟಗುಣವೇ ಭವಿತನವಲ್ಲದೆ ಸೂರ್ಯನು ಭವಿಯೇ? ಸೂರ್ಯನಿಂದಲೇ ಧಾನ್ಯ, ಅನ್ನ, ಹೂ ಕಾಯಿ, ಸಕಲ ಜೀವಜಂತುಗಳ ಅಸ್ತಿತ್ವವಿರುತ್ತಿರಲು ಅವನಿಗೆ ಭವಿಯೆಂದೆನ್ನುವದು ಪಾಪವಲ್ಲವೇ? ನಾವು ಸೂರ್ಯನು ಭವಿಯೆಂದರೆ ಭವಿಯ ಸಂಸರ್ಗವನ್ನು ಬಿಟ್ಟು ನಿಶಾಚರರಾಗಿ ಸಂಚರಿಸಬೇಕಾದೀತು. ಅಂಧಕಾರಮಯವಾದ ನಿಶೆಯಾದರೂ ಭವಿಯೇ ಸರಿ. ಅಂದಮೇಲೆ ನಮಗೆ ಸೂರ್ಯನ ಸಂಗವೂ ಬೇಡ ರಾತ್ರಿಯ ಸಂಗವೂ ಬೇಡ. ಹೀಗಾದರೆ ನಾವು ಜಗತ್ತಿನಲ್ಲಿ ಕಾಲೂರಿ ನಿಲ್ಲುವ ಪರಿಯೆಂತು? ಈ ಸ್ವಾರ್ಥಗುಣವು ಪ್ರಸಾದದ ಲಕ್ಷಣವೇ? ಆದರೆ ಬಿಸಿಲು, ಮಳೆ, ಗಾಳಿ, ಧೂಳಿಯುಳ್ಳ ಮಲಿನವಾದ ಸ್ಥಳದಲ್ಲಿ ಕುಳಿತು ಊಟ ಮಾಡಬಾರದೆಂದು ಹೇಳಿದರೆ ಯಾರಾದರೂ ಒಪ್ಪಬಹುದು. ಆದರೆ ಸ್ವಾರ್ಥ ಸಾಧಕರು ಸೂರ್ಯನೇ ಭವಿಯೆಂದು ತಮ್ಮ ಅನ್ನಪಾನಾದಿಗಳು ಎರಡನೆಯವರಿಗೆ ಸಲ್ಲಬಾರದೆಂದು ಸಾಧಿಸುವರು. ಇವರೆಂಥ ಪ್ರಸಾದಿಗಳು? ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವಂಥ ಪುಣ್ಯಾತ್ಮರೇ ಪ್ರಸಾದಿಗಳು.

ಸೂರ್ಯನಿಗೆ ಲಿಂಗವಿಲ್ಲವಾದ್ದರಿಂದ ಅವನು ಭವಿಯೆಂದು ಪ್ರತಿಪಾದಿಸುವದು ಮೂರ್ಖತನವು. ಮನೆಯಲ್ಲಿ ಕಂಬ, ಗೋಡೆ, ನೆಲ, ಗೋದಲೆಗಳಿಗೂ ಲಿಂಗವಿಲ್ಲದ್ದರಿಂದ ಅವೂ ಭವಿಗಳೇ ಅಲ್ಲವೇ? ಅವುಗಳೆದುರಿಗೆ ನಾವೇಕೆ ಊಟ ಮಾಡಬೇಕು? ಅದೊತ್ತಟ್ಟಿಗಿರಲಿ, ನಾವು ಧರಿಸಿರುವ ಲಿಂಗಕ್ಕಾದರೂ ಲಿಂಗಧಾರಣವೆಲ್ಲಿಯಾಗಿದೆ? ಅದೂ ಭವಿಯೆಂದೇ ತಿಳಿಯಬಹುದೇ? ಸಾಕ್ಷಾತ್ ಲಿಂಗಸ್ವರೂಪಿಯಾದ ಶಿವನಿ

ಗಾದರೂ ಲಿಂಗವಿದೆಯೇ ? ಆ ಪರಶಿವನ ನೇತ್ರವೆನಿಸಿದ ಸೂರ್ಯನು ಭವಿಯು ಹೇಗೆ ? ಆದರೂ ಆತನು ಭವಿಯೆಂದೆನ್ನುವ ಮಹಾತ್ಮರು ಸೂರ್ಯ, ಚಂದ್ರ, ಬ್ರಹ್ಮ, ವಿಷ್ಣು, ಮಹೇಶ್ವರ ಇಂದ್ರಾದಿ ದೇವತೆಗಳಿಗೆ ಲಿಂಗಧಾರಣ ಮಾಡಿ ಪುಣ್ಯಕಟ್ಟಿಕೊಳ್ಳಬಾರದೇ ? ಸೂರ್ಯನಿಗೆ ಭವಿ ತನದ ಆರೋಪ ಹೊರಿಸುವದೂ ಕ್ರಿಯಸ್ಥನೆಂಬ ಹೆಸರಿನಿಂದ ಬಳಗ ಬಿಟ್ಟು ನಡೆಯುವದೂ ವಿಸ್ತೃತ ದೃಷ್ಟಿಯ ವಿಷಯಗಳಾಗಿರದೆ ಸ್ವಾರ್ಥ ದೃಷ್ಟಿಯ ಮಾತುಗಳಾಗಿವೆ. ಇಂಥ ಸಂಕುಚಿತ ದೃಷ್ಟಿಯ ಸ್ವಾರ್ಥ ಬುದ್ಧಿಯು ವೀರಶೈವರ ಮನೆಯಲ್ಲಾಗಲಿ ಮಠದಲ್ಲಾಗಲಿ ಸರ್ವಥಾ ನಡೆಯಬಾರದು.

---

## ಸೋಮೋಕಟ್ಟೆ ಕರಿವೃಷಭಯೋಗೀಂದ್ರ ವಿರಚಿತ ಮಪ್ಪ ಅಷ್ಟೋತ್ತರಶತ ತ್ರಿವಿಧಿ.

(ಸಂಗ್ರಹಕಾರರು—ಹೊನ್ನುಡಿಕೆ ರುದ್ರಯ್ಯಾ ಮಹಾಂತಯ್ಯಾ ಬಿ. ಎ. ಆನರ್ಸ್)

---

ಜಯತು ಕರಿವೃಷಭೇಶ ಜಯತು ಷಟ್ಸ್ಥಲದೀಶ
ಜಯಜಯತು ಪರಮ ಪರಮೇಶ ನಿಮ್ಮಡಿಗೆ
ಜಯತು ಕರಿವೃಷಭ ದಯವಾಗೋ ॥೧॥

ರಾಜೋಟಿದೇವನ ಆ ಚಿತ್ಕಳಾರೂಪ
ಸೂಚಿಸಿ ರುದ್ರಪಶುಪತಿ ಪಟ್ಟಕ್ಕೆ
ನೀ ಚದುರ ಕುಳಿತೆ ದಯವಾಗೋ ॥೨॥

ಪ್ರಭು ಚನ್ನಬಸವನ ವಿಭುವೆ ನೀನಹುದೆಂದು
ಶುಭದಿಂದ ಮೂರುಸಾವಿರದ ಒಳಗಾದ
ಅಭವ ಗುರುರಾಯ ದಯವಾಗೋ ॥೩॥

ಸತ್ತು ಚಿತ್ತುಗಳೆಂಬ ಗೊತ್ತನು ನೀ ಬಲ್ಲೆ
ಮತ್ತೆನ್ನ ಭವದ ಬಳ್ಳಿಯನು ಕತ್ತರಿಸಿ
ಕರ್ತೃ ಗುರುರಾಯ ದಯವಾಗೋ ॥೪॥

ಮಾರೇಳು ಮಹಿಮೆಯನು ಸಾರಿ ಪ್ರಾಣದೊಳಿರಿಸಿ
ನಾರಿ ಮಾಯೆಯನು ಮೀರಿ ನಿಂದಿರುತಿರ್ಪ
ಮಾರಹರಗುರುವೆ ದಯವಾಗೋ ||೫||

ಕಾಮಕಾಲರ ಪುರದಿ ಕಾಮಿಸಿ ಪಾಪವನು
ಆ ಮಹಾಭವದಿ ತಿರುಗಲಾರೆನು ಸ್ವಾಮಿ
ಸೋಮಶೇಖರನೆ ದಯವಾಗೋ ||೬||

ಪಂಚಭೂತದ ದೇಹ ವಂಚನೆಯೊಳು ಸಿಲ್ಕಿ
ಪಂಚಪಾತಕವ ಮಾಡುತಲಿ ಕೆಟ್ಟೆನು
ಪಂಚಮುಖದವನೇ ದಯವಾಗೋ ||೭||

ಮಾಯಾಕಾಯವ ನೆಚ್ಚಿ ನ್ಯಾಯವರಿಯದೆ
ರಾಯ ನರಕವನು ತಿರುತಿರುಗಿ ಕೆಡುತಿರ್ಪೆ
ದಾಯವ ತೋರಿ ದಯವಾಗೋ ||೮||

ಕುಂಭಕಾಯವ ನೆಚ್ಚಿ ಕುಂಭಿಣಿಯೊಳು ನಿಮ್ಮ
ಹಂಬಲನೆ ಮರೆದು ಕೆಡುತಿಹೆನು ನಾನಿನ್ನು
ಶಂಭು ಗುರುರಾಯ ದಯವಾಗೋ ||೯||

ಬಿಸುಗೆ ದೇಹವ ನೆಚ್ಚಿ ಬಸಿವ ಶೂಲಕೆ ಸಿಲ್ಕಿ
ಹಸಗೆಟ್ಟು ಸರ್ವ ವಿಷದಿ ನಶಿಯುವೆನು
ಶಶಿಧರ ಗುರುವೆ ದಯವಾಗೋ ||೧೦||

ಮನ ಬುದ್ಧಿ ಚಿತ್ತವು ಬಿನುಗು ಅಹಂಕಾರವು
ಅನುದಿನ ನಿಮ್ಮ ನೆನೆಯಗೊಡವು ಮುಂದೆ
ಚಿನುಮಯ ಗುರುವೆ ದಯವಾಗೋ ||೧೧||

ಏಳು ವ್ಯಸನಗಳೆನ್ನ ಬಾಳಲೀಸದೆ ಬಲು
ದಾಳಿಯ ಮಾಡಿ ಕೋಳು ಪಿಡಿದೈದಾವೆ
ಭಾಳಾಕ್ಷ ಗುರುವೆ ದಯವಾಗೋ ||೧೨||

ಹತ್ತುವಾಯುಗಳೆನ್ನ ತುತ್ತೆ ಜೀವನ ಶಿರವ
ಕತ್ತರಿಸಲಾಗಿ ಮತ್ತೆ ಭವದೊಳು ಬಂದೆ
ಮೃತ್ಯುಹರಗುರುವೆ ದಯವಾಗೋ ||೧೩||

ಪಂಚವಿಷಯಗಳೆಮ್ಮ ಸಂಚಲಿಸೆ ನಾ ನಿಮ್ಮ
ವಂಚನೆಯ ಕಲಿತು ಅಂಚ ಅರಿಯಾದೇನು
ಪಂಚಾಕ್ಷರಿ ಗುರುವೆ ದಯವಾಗೋ ॥೧೪॥

ರಾಗದ ಬಲದಿಂದ ರೋಗಿಯಂದದಿ ನಾನು
ಸಾಗರವೇಳ ತಿರುಗಿ ಕೆಟ್ಟೆನು ಇನ್ನು
ನಾಗಭೂಷಣನೆ ದಯವಾಗೋ ॥೧೫॥

ಆಸೆ ಎಂದೆಂಬುವ ಕೋಶದೊಳಗೆ ಬಿದ್ದು
ಘಾಸಿಯಾಗಿರುವೆ ಭವಭವದಿ ತಿರುಗುತ್ತ
ಈಶ ಗುರುರಾಯ ದಯವಾಗೋ ॥೧೬॥

ವಿಷಯ ಲಂಪಟದಲ್ಲಿ ಹಸಗೆಟ್ಟು ಹೋದೆನು
ರಸಕಸವನೆಲ್ಲ ಬಯಸುವ ಮಾನವಗೆ
ವಿಷಧರ ಗುರುವೆ ದಯವಾಗೋ ॥೧೭॥

ಶುಕವೋದಿ ಮುಲವನು ನಿಖಿಳರೆಂದಂದದಿ
ಅಖಿಳ ಶಾಸ್ತ್ರವನು ಓದಿ ಸಂಸ್ಕೃತಿಯ ಪಿಡಿವೆ
ಮುಕುತಿಯ ಗುರುವೆ ದಯವಾಗೊ ॥೧೮॥

ಪದ್ಮಗೀತವ ಪಾಡಿ ಪದ್ಮಶಾಸ್ತ್ರವ ನೋಡಿ
ಮುದ್ದನು ಆಗಿ ಕೆಡುತಿಹೆನು ನಾನಿನ್ನು
ಮುದ್ದುಗುರುರಾಯ ದಯವಾಗೋ ॥೧೯॥

ನಾಡಮಾತನು ಕಲಿತು ಕೇಡುಗುಣದೊಳು ಮುಳಿತು
ಮೂಢನಂದದಲಿ ಕೆಡುತಿರ್ಪ ಮಾನವಗೆ
ರೂಢೀಶ ಗುರುವೆ ದಯವಾಗೋ ॥೨೦॥

ಎಲ್ಲ ಶಿವನಾಟವೆಂದು ಅಲ್ಲದ ನಡೆಯೊಳು
ಖಲ್ಲ ವಿದ್ಯೆಯೊಳು ಸಿಲುಕಿರ್ಪ ಮಾನವಗೆ
ಅಲ್ಲಮ ಗುರುವೆ ದಯವಾಗೋ ॥೨೧॥

ಜಗವೆಲ್ಲ ಶಿವನಾಗಿ ಹಗರಣವೇಕೆಂದು
ಮಗುವಿನಂದದಲಿ ನುಡಿವ ಮಾನವಗೆ
ಮೃಗಧರ ಗುರುವೆ ದಯವಾಗೋ ॥೨೨॥

ಶಿವನು ನಿರವಯವಾಗಿ ಭವಗಳವಗಿಲ್ಲವು
ಭವಕೆ ಸಿಕ್ಕಿವೆನು ನಾನೆಂಬ ಮನುಜಗೆ
ಭವದೂರ ಗುರುವೆ ದಯವಾಗೋ ॥೨೩॥

ಮಾತಿನೊಳಗೆ ಬ್ರಹ್ಮ, ಪ್ರೀತಿ ಮೂರ್ನಲದೊಳು
ರೋತಿಜನ್ಮದೊಳು ಬರುವಂಥ ಮಾನವಗೆ
ತಾತಗುರುರಾಯ ದಯವಾಗೋ ॥೨೪॥

ತಿಪ್ಪೆಯು ಬಗೆದೊಡೆ ತುಪ್ಪವಲ್ಲಿರ್ಪುದೆ ?
ಅಪ್ಪುವಪರಂತೆ ಎನ್ನಯ ಗುಣಗಳು
ಮುಪ್ಪುರ ವೈರಿ ದಯವಾಗೋ ॥೨೫॥

ಕಾಗೆ ರಾಗದಿ ಕೂಗೆ ಕೋಗಿಲಾಗುವುದುಂಟೆ
ಜೋಗಿ ಮಾನವಗೆ ಬೋಧಿಸಲು ಮೊದಲಂತೆ
ಶ್ರೀ ಗುರುನಾಥ ದಯವಾಗೋ ॥೨೬॥

ನೇತ್ರಹೀನನು ತಾನು ಶಾಸ್ತ್ರ ನೋಡುವದುಂಟೆ
ಪಾತ್ರವೇಶ್ಯೆಯರಿಗೊಲಿದಿರ್ಪ ಮಾನವಗೆ
ತ್ರಿಣೇತ್ರ ಗುರುರಾಯ ದಯವಾಗೋ ॥೨೭॥

ಕೊಳವ ರಾತ್ರಿಲಿ ಕಂಡು ಬೆಳಗಿಲಿ ಬಿದ್ದಂತೆ
ನಳ ಕೃಷ್ಣರುಗಳ ಕಥೆಗೇಳಿ ಮರೆದವಗೆ
ಕಳಹಂಸ ಗುರುವೆ ದಯವಾಗೋ ॥೨೮॥

ಹಿಂದೆ ಭವದೊಳು ಬಂದೆ ಮುಂದೆ ಸ್ವರ್ಗದಿ-ನಿಂದೆ
ಹಿಂದು ಮುಂದಕೆ ಎಡೆಯಾಡುತಿರ್ಪಗೆ
ಇಂದುಧರ ಗುರುವೆ ದಯವಾಗೋ ॥೨೯॥

ಮುನ್ನ ಪಾಪದಿ ಬಂದು ಇನ್ನು ಕರ್ಮವ ತುಮು
ನಿನ್ನನು ಮರೆದು ಕೆಟ್ಟೆನು ನಾನು ಇನ್ನು
ಪನ್ನಗಧರನೆ ದಯವಾಗೋ ॥೩೦॥

ಕೋಣ ಗೀತವ ಪಾಡೆ ಗಾನವ ಬಲ್ಲುದೆ
ಹೀನ ಮಾನವನು ಧ್ಯಾನವ ಬಲ್ಲನೇ
ಮಾನನಿಧಿ ಗುರುವೆ ದಯವಾಗೋ ॥೩೧॥

ಸುರೆಯ ಸೇವಿಪ ನರಗೆ ತುರುವಿನ ಹಾಲು ರುಚಿಯೇ
ಸುರತಕೇಳಿಯೊಳು ಇರುತಿರ್ಪ ಮಾನವಗೆ
ಕರಿವೃಷಭಾರ್ಯ ದಯವಾಗೋ ॥೩೨॥

ಮಾದಿಗ ಮಾಂಸವ ತಿಂದು ಗೋದಿಯ ರೊಟ್ಟಿಯು ಹಿತವೇ
ಆದಿಯಿಂ ವಿಷಯ ಕಚ್ಚಿರ್ಪ ಮಾನವಗೆ
ಮಾದೇವರೊಡೆಯ ದಯವಾಗೋ ॥೩೩॥

ಎಲುಬ ಕಡಿಯುವ ಕಿರುಬ ಸಲೆ ಇಕ್ಷು ಬಯಸುವುದೆ
ಲಲನೆಗೊಲಿದಿರ್ಪ ಮಾನವಗೆ ಅತಿಬೇಗ
ಮಲಹರ ಗುರುವೆ ದಯವಾಗೋ ॥೩೪॥

ಕುರಿಯು ಸೋಗೆಯ ತಿಂದು ತಳಿರ ರುಚಿಯರಿಯದ
ಪರಿಯಂತೆ ಒಳಗನರಿಯದೆ ನಾ ಕೆಟ್ಟೆ
ಕರಿವೃಷಭಾರ್ಯ ದಯವಾಗೋ ॥೩೫॥

ವರಾಹ ಮಲವನು ತಿಂದು ಹಿರಿಯ ಸಕ್ಕರೆ
ಸೇರದಿರುವಂತೆ ಎನ್ನ ಮತಿಯು ಸೇರದು ನಿಮ್ಮ
ಕರಿಕಂಠ ಗುರುವೆ ದಯವಾಗೋ ॥೩೬॥

ಗೂಗೆ ಬಲ್ಲುದೆ ಹಗಲ ರೋಗಿ ಬಲ್ಲನೆ ಹಾಲ
ಜೋಗಿ ಮಾನವನು ವಿರಾಗಿಯ ಬಲ್ಲನೆ
ನಾಗಭೂಷಣನೇ ದಯವಾಗೋ ॥೩೭॥

ಪಾಪಿ ಬಲ್ಲನೆ ಪುಣ್ಯ ಕೋಪಿ ಬಲ್ಲನೆ ಹಿತವ
ತಾಪ ಮೂರರೊಳು ಮುಳುಗಿರ್ಪ ಮಾನವಗೆ
ಆ ಪರಮ ಗುರುವೆ ದಯವಾಗೋ ॥೩೮॥

ಅಕ್ಕ ಇವಳೆಂಬುದ ಚಿಕ್ಕಮಗು ಬಲ್ಲುದೆ
ರಕ್ಕಸ ಗುಣದ ಮನುಜ ತಾ ಬಲ್ಲನೆ
ತಕ್ಕವರ ನಡೆಯ, ದಯವಾಗೋ ॥೩೯॥

ಬೇವಿನ ಬೀಜಕ್ಕೆ ಹಾಲೆರೆದು ಬೆಳೆಯಿಸಲು
ಕೀವಿದ ಕಾಯಿ ಅದರಂತೆ ಅಲ್ಲದೆ
ಪಾವನ ಮೂರ್ತಿ ದಯವಾಗೋ ॥೪೦॥

"ಮುಟ್ಟೇ, ಮುಟ್ಟೇಯೆ" ಎಂದು ಮುಟ್ಟಲೊಲ್ಲರು ನರರು
ಮುಟ್ಟಿಲ್ಲ ಕೂಡಿ ಗಟ್ಟಿಯಾದ ಮಾನವಗೆ
ಸೃಷ್ಟೀಶ ಗುರುವೆ ದಯವಾಗೋ ॥೪೧॥

ತಾಯಿತಂದೆಯು ಬಿಂದು ಆಯದಿಂ ತನುವಾಯ್ತು
ಮಾಯೆ ಕಾಯುವನು ನಾನೆಂಬ ಮಾನವಗೆ
ರಾಯ ಸದ್ಗುರುವೆ ದಯವಾಗೋ ॥೪೨॥

ತಾಯಗರ್ಭದಿ ಸಿಕ್ಕಿ ಆಯಾಸಗೊಳುತಲಿ
ಜೀವ ಸಲಹೆಂಬ ನುಡಿಯ ಮರೆತಿರುವಂಗೆ
ಕಾಯಜವೈರಿ ದಯವಾಗೋ ॥೪೩॥

ಬಾಲತನದಿ ಮಲದ ಹಾಲನೆ ಕುಡಿದೆನು
ಮೇಲೆ ಯೌವನದಿ ಬಾಲೆಯರಿಗೊಲಿದಗೆ
ಕಾಲಹರ ಗುರುವೆ ದಯವಾಗೋ ॥೪೪॥

ವರುಷ ನಾಲ್ವತ್ತರಲಿ ವರಲು ರೋಗವು ಬಂದು
ಕರದಿ ದಂಡವನು ಪಿಡಿದುಚರಿಸುವನಿಗೆ
ಗರಳಕಂಧರನೆ ದಯವಾಗೋ ॥೪೫॥

ಪ್ರಾಣ ಹಾರುವ ವೇಳೆ ಕೇಣವಿಲ್ಲದ ಬಳಗ
ಕಾಣೆನು ಒಬ್ಬರುಳುಹಿಕೊಂಬುವರೆನ್ನ
ಪ್ರಾಣೇಶ ಗುರುವೆ ದಯವಾಗೋ ॥೪೬॥

ಸಾವು ಎಂಬುದು ಬ್ರಹ್ಮದೇವಂಗೂ ತಪ್ಪದು
ಮಾವ ವೈದುನರು ಉಳಿಸಬಲ್ಲರೆ ಇನ್ನು
ದೇವ ಗುರುರಾಯ ದಯವಾಗೋ ॥೪೭॥

ಎಷ್ಟು ಭವದೊಳು ಹೀಗೆ ಕಷ್ಟಪಟ್ಟೆನು ಶಿವನೆ
ಭ್ರಷ್ಟ ದೇಹಗಳು ಮಣ್ಣುಪಾಲಾದವು
ಶ್ರೇಷ್ಠ ಸದ್ಗುರುವೆ ದಯವಾಗೋ ॥೪೮॥

ಭವವ ಗೆಲ್ಲುವೆನೆಂದು ಭಾವಜ್ಞಾನಿಲ್ಲದೆ
ಕವೆಗೋಲೆಂತೆಂಬ ಕರ್ಮದೊಳು ಸಿಲುಕಿದೆ
ಭವದೂರ ಗುರುವೆ ದಯವಾಗೋ ॥೪೯॥

ಕಷ್ಟಿ ಸ್ನಾನವ ಮಾಡೆ ತಪ್ಪುವುದೆ ಜನ್ಮವು
ಒಪ್ಪದಿಂ ತೊಳೆಯೆ ತನುವನು ಅದರಂತೆ
ಸರ್ಪಭೂಷಣನೆ ದಯವಾಗೋ ॥೫೦॥

ಧ್ಯಾನ ಮಾಡುವೆನೆಂದು ಮೌನದ ಬಕದಂತೆ
ನಾನು ಮೌನದಲಿ ಕುಳಿತು ಕೆಟ್ಟೆನು
ಜ್ಞಾನಿಗಳೊಡೆಯ ದಯವಾಗೋ ॥೫೧॥

ಅಷ್ಟಾಂಗಯೋಗವು ಶ್ರೇಷ್ಠಸಾಧನೆಗಳು
ಎಷ್ಟು ಹೇಳಲಿಕೆ ಸುಲಭವಾಗಿರುವುದು
ಸೃಷ್ಟೀಶ ಗುರುವೆ ದಯವಾಗೋ ॥೫೨॥

ಯಮವೆಂಬೋ ಮೊದಲಂಗ ಅಮಮ ಮನ ನಿಲ್ಲುವುದೇ
ಕಮಲ ಮೊದಲಾದ ಇಂದ್ರಿಯವ ಕಡಿಯಲಿಕೆ
ಕಮಲಾಸನಗರಿದು ದಯವಾಗೋ ॥೫೩॥

ಶೌಚ ನಿತ್ಯ ಕರ್ಮ ಕವಚವಂಗಕೆ
ಸತ್ಯ ಗುರುಸೇವೆ ಭಕ್ತಿ ಶ್ರದ್ಧೆ
ಆಚಾರವು ನಿಯಮವೆಂಬುವುದು ದಯವಾಗೋ ॥೫೪॥

ಕುಕ್ಕುಟ ಪದ್ಮಾಸನ ಸ್ವಸ್ತಿ ವೀರಾಸನ
ಲೆಕ್ಕಕ್ಕೆ ಎಂಭತ್ತು ಆಸನ ಇವು ಮೊದಲು
ಮುಕ್ಕಣ್ಣ ಗುರುವೇ ದಯವಾಗೋ ॥೫೫॥

ಪ್ರಾಣಾಯಾಮವು ಎಂಬ ಪ್ರಾಣಶ್ವಾಸವ ಪಿಡಿದು
ಕೇಣವಿಲ್ಲದಲೆ ರೇಚಿಸಿ ಪೂರಿಸೆ
ಪ್ರಾಣನಾಯಕನೆ ದಯವಾಗೋ ॥೫೬॥

ಬಾಹ್ಯವಿಷಯಕೆ ಅರಿವ ಅಸಹ್ಯ ಕರಣವನೀಗ
ಒಯ್ಯಾರದಿಂದ ಒಳಗೆ ಸೆಳೆದರೆ
ಸೈಯ್ಯಹರವರು ದಯವಾಗು ॥೫೭॥

ಪ್ರತ್ಯಗಾತ್ಮಕನನ್ನು ಪ್ರತ್ಯಕ್ಷ ಮಾಡುವರೆ
ಪ್ರತ್ಯೇಕ ಗುರುಚರಣದ ಭಜನೆಯು
ಉತ್ತಮವೈಸೇ ದಯವಾಗೋ ॥೫೮॥

ಗುರುದೇವ ರೂಪನ್ನು ಚರಿಸದೆ ಬಲಿವರೆ
ಹರಿಯುವ ಮನವ ನಿಲಿಸಲು ಇದು ಈಗ
ಪರಮ ಧ್ಯಾನವು ದಯವಾಗೋ ॥೫೯॥

ಯೋಗಧಾರಣೆಯಲ್ಲಿ ಬೇಗ ಮನವದು ನಿಂದು
ಆಗು ಹೋಗಿನ ಒಳಹೊರಗೆ ಮರೆದರೆ
ಈಗ ಸಮಾಧಿ ದಯವಾಗೋ ॥೬೦॥

ದಳನಾಲ್ಕು ದಳನಾರು ದಳಹತ್ತು ಹನ್ನೆರಡು
ದಳವು ಷೋಡಶವು ಈ ಎರಡು ದಳದೊಳಗಿರ್ಪ
ಕಳಹಂಸ ಗುರುವೇ ದಯವಾಗು ॥೬೧॥

ಮೂರುದಳಪೀಠ ಆರಿಗಸಾಧ್ಯವು
ಸಾವಿರ ದಳವ ದಾಂಟಿ ಒಂದರೊಳಿರ್ಪ
ಮಾರಹರ ಗುರುವೆ ದಯವಾಗೋ ॥೬೨॥

ಏಳು ಭೂಮಿಗಳನ್ನು ಹೇಳುವೊಡೆಯೆನಗಳವೆ
ಭಾಳಲೋಚನಗೆ ಇವು ಸಾಧ್ಯವವಿನ್ನು
ಲೋಲ ಗುರುರಾಯ ದಯವಾಗು ॥೬೩॥

ತಾಪ ಸಂಸಾರದ ಕೂಪಕ್ಕೆ ಹೆದರುತ
ಆ ಪರಮ ಮೋಕ್ಷ ಬಯಸುವದಿದುವೊಂದು
ಭೂಪ ಗುರುರಾಯ ದಯವಾಗೋ ॥೬೪॥

ಹೋಗಿ ಗುರುಸನ್ನಿಧಿಗೆ ಬೇಗ ರಹಸ್ಯವ ತಿಳಿದು
ಸಾಗರದಂತೆ ತುಂಬಿ ತುಳುಕದೆ ಇರಲು
ಈಗ ಎರಡಾಯ್ತು ದಯವಾಗೋ ॥೬೫॥

ಜನದ ಶಂಕೆಗೆ ಹೆದರಿ ಘನವ ಧ್ಯಾನಿಸುತಾಗ
ಸನುಮತವಾದ ಸಾಧನದೊಳಿರುವುದು
ವಿನಯ ಮೂರಾಯ್ತು ಗುರುರಾಯ ॥೬೬॥

ತನ್ನ ತಾನೇ ನೋಡಿ ಬಿನ್ನಾಣದಿಂದಲಿ
ಚನ್ನಾಗಿ ನಂಬಿ ಇರುತಿರ್ಪ ನಾಲ್ಕನೆಯ
ಉನ್ನತ ಭೂಮಿ ದಯವಾಗೋ ॥೬೭॥

ಆರೂಢನಾಗಿಯೆ ಜ್ಞಾನಾಜ್ಞಾನಿಲ್ಲದೆ
ಮೂರೊಂದು ಪದವ ಬಯಸದೆ ಇರ್ದೊಡೆ
ಆರನೆಯಭೂಮಿ ದಯವಾಗೋ ||೧೮||

ತುರ್ಯಾತೀತವು ಎಂಬುದಾರಿಗಸಾಧ್ಯವು
ನಾರಿಮಾಯೆಯನು ಮೀರಿದ ಗುರುವಾದ
ಆರೊಂದುಭೂಮಿ ದಯವಾಗೋ ||೧೯||

ಮನದ ವಾಸನೆಗಳುದಿನಿಸಿಗಿಲ್ಲದೆ ಹೋಗಿ
ಚಿನುಮಯನಲ್ಲಿ ಮನವು ನಿಂದಿರ್ದೊಡೆ
ಅನುಮಾಯಿತಯ್ಯ ದಯವಾಗೋ ||೨೦||

ಅಷ್ಟವರಣಗಳೆಂದು ಸೃಷ್ಟಿಯೊಳು ಶಿವಮತವು
ಭ್ರಷ್ಟಮನುಜರಿಗೆ ತಿಳಿಯದು ಈ ಮರ್ಮ
ಶ್ರೇಷ್ಠ ಗುರುವೇ ದಯವಾಗೋ ||೨೧||

ಪರಶಿವನ ತನುಮೂರು ಗುರುಲಿಂಗ ಜಂಗಮವು
ಹಿರಿಯ ವಿಭೂತಿ ರುದ್ರಾಕ್ಷಿ ಮಂತ್ರವು
ಪರಮ ಗುರುರಾಯ ದಯವಾಗೋ ||೨೨||

ಕರುಣ ರಸವದು ತೀರ್ಥ ಆನಂದವದೆ ಶೇಷ
ಇರವಾದವೆಂಟಿ ಅಷ್ಟಾವರಣವು ಎಂದು
ಒರೆದ ಸದ್ಗುರುವೆ ದಯವಾಗೋ ||೨೩||

ಆಚಾರ ಪಂಚಕ ಈಚೆ ಕರ್ಮವು ಪಂಚ
ಖೇಚರದೊಳಗೆ ಅಡಗಿರ್ಪ ಪಂಚಮನ
ಆಚಾರವೈಸೆ ದಯವಾಗೋ ||೨೪||

ಭಕ್ತನ ಸ್ಥಲವಂದು ಯುಕ್ತವಾಗಿರುವುದು
ಯುಕ್ತಿಯನರಿದು ನಡೆಯಬಲ್ಲನೆ
ಮುಕ್ತನು ಆಹನು ಗುರುರಾಯ ದಯವಾಗೋ ||೨೫||

ಮಹೇಶನೆಂಬುವನ ಊಹಿಸಲಳವಲ್ಲ
ಸಾಹಸಿಯಾಗಿ ಏಕಲಿಂಗದಿ ನಿಂತ
ಮಹದೇವ ಗುರುವೇ ದಯವಾಗು ||೨೬||

ಪ್ರಸಾದಿಸ್ಥಲವೆಂಬುದೀಶಭಕ್ತರು ಪೇಳೆ
ಅಸಮಾಕ್ಷಬಲ್ಲ ಅವನ ಮಹಾತ್ಮ್ಯವ
ಶಶಿಧರ ಗುರುವೇ ದಯವಾಗೋ ॥೭೭॥

ಪ್ರಾಣಲಿಂಗಿಯು ಎಂದು ಜಾಣರು ನುಡಿವರು
ತ್ರಿಕೋಣೆಯೊಳಿರ್ಪ ಲಿಂಗದ ಬೆಳಗನು
ಕಾಣಿಸುವ ಗುರುವೇ ದಯವಾಗು ॥೭೮॥

ಶರಣಸ್ಥಲವೆಂಬುವದು ಕರಣ ಚರಿಪಗೆ ಅರಿದು
ಗುರುವಿನ ಕರುಣ ಪಡೆದವ ಬಲ್ಲನು
ಕರಿವೃಷಭಾರ್ಯ ದಯವಾಗೋ ॥೭೯॥

ಐಕ್ಯನೆಂಬುವನನ್ನು ಅಖಿಳ ಜನವರಿಯರು
ಸಕಲ ಸಾಧನೆಯು ಕಲಿತೊಡಸಾಧ್ಯವು
ಅಕಳಂಕ ಗುರುವೇ ದಯವಾಗು ॥೮೦॥

ಇಷ್ಟ ಪ್ರಾಣವು ಭಾವ ನಿಷ್ಠೆಯಿಂದಲಿ ಪೂಜೆ
ಶ್ರೇಷ್ಠ ಚತ್ಕಳೆಯು ಕೂಡೆಂದು ಪೇಳಿದ
ಸೃಷ್ಟಿಯ ಒಡೆಯ ದಯವಾಗೋ ॥೮೧॥

ಆರು ಚಕ್ರವನೇರಿ ಸೇರಿ ಪಶ್ಚಿಮದಲ್ಲಿ
ಸಾರುವ ಕಳೆಯು ಸವಿಯೆಂದು ಪೇಳಿದ
ಧೀರ ಗುರುರಾಯ ದಯವಾಗೋ ॥೮೨॥

ಮೂರು ಮಂಡಲ ಮಧ್ಯೆ ತೋರುವ ಲಿಂಗವನು
ಬೇರಾಗದೊಂದು ಕೂಡೆಂದು ಅರುಹಿದ
ಕಾರಣಿಕನೆ ದಯವಾಗೋ ॥೮೩॥

ವರನಾಡಿಯುಗ್ರದೊಳಿರುವಂಥ ಅಮೃತವ
ಗುರುಮುಖದಿಂದ ಕರಸ್ಥಲದೊಳು ಕಂಡು
ಬೆರೆ ಎಂದ ಗುರುವೆ ದಯವಾಗೋ ॥೮೪॥

ಪಂಚ ವರ್ಣದೊಳಿರ್ಪ ಗೊಂಚಲಿನ ಲಿಂಗವನು
ಚಂಚಲವಿಲ್ಲದಿರುವಂಥ ಮನದೊಳು
ಹಂಚಿ ತೋರಿಸಿದೆ ದಯವಾಗೋ ॥೮೫॥

ಅಷ್ಟದಳದೊಳಗಿರ್ಪ ಸೃಷ್ಟೀಶ ಲಿಂಗವನು
ಪಟ್ಟಣದೊಳಗೆ ಇಟ್ಟಿನ್ನ ಸಲಹಿದ
ಅಷ್ಟಮೂರುತಿಯೇ ದಯವಾಗು ॥೮೬॥

ಗುರುವೆ ನಿಮ್ಮಯ ಮಹಿಮೆ ಹರಿ ಬ್ರಹ್ಮಗಳವಲ್ಲ
ಮರುಳು ಮಾನವನು ಅರಿಯದೆ ನುಡಿದೆನು
ಕರಿವೃಷಭಾರ್ಯ ದಯವಾಗೋ ॥೮೭॥

ಪಾದ ಬ್ರಹ್ಮವೆಂದು ವೇದ ಪೇಳುತಲಿದೆ
ಮೂದೇವರುಗಳು ಅರಿಯದ ಮಹಿಮನು
ಬೋಧಿಸಿ ಎನಗೆ ದಯವಾಗೋ ॥೮೮॥

ನಾದ ಬಿಂದುಗಳೆಂಬನಾದಿ ಬೀಜವ ತಂದು
ಮೂದೇವರೊಡೆಯ ಬಿತ್ತಲ್ಕೆ ಜಗವಿದು
ನಾದಮಯವೆಂಬೆ ದಯವಾಗೋ ॥೮೯॥

ಸತ್ತುಚಿತ್ತುಗಳೆಂಬ ಗೊತ್ತನು ತಿಳಿಯದೆ
ಕತ್ತೆಯಂದದಲಿ ಸುತ್ತುತಲಿರುವನಿಗೆ
ಕರ್ತೃ ಕರಿವೃಷಭ ದಯವಾಗೋ ॥೯೦॥

ಪ್ರೇಮಸ್ಥಿಭಾತಿಯ ಮೀರಿ ನಿಂದಿರುತಿರ್ಪ
ಆ ಮಹಾಸಂವಿದುಳಿಮೆಯ ನೀನೆಂದು
ಪ್ರೇಮ ಸದ್ಗುರುವೇ ದಯವಾಗು ॥೯೧॥

ತತ್ಪಾದತ್ವಂಪಾದ ಹಸಿಪಾದ ಮೂರನು
ಚಿತ್ಪಾದದಲ್ಲಿ ಅರ್ಥವ ಬೋಧಿಸಿದ
ಮಹತ್ಪಾದ ಗುರುವೇ ದಯವಾಗೋ ॥೯೨॥

ರವಿ ಸರ್ವಸಾರವನು ಸವಿದು ಸಾಕ್ಷಿಕನಂತೆ
ಭವದೂರವಾದ ತತ್ವಜ್ಞಾನಿಗಳೊಡೆಯ
ಸವಿದೋರಿ ಎನಗೆ ದಯವಾಗೋ ॥೯೩॥

ಅಗ್ನಿಯಂದದಿ ವಿಷಯ ಭಗ್ನವ ಮಾಡಿಯೆ
ಸುಜ್ಞಾನದೊಡನೆ ಸಂಜ್ಞೆಯ ತೋರಿಸಿದ
ಪ್ರಾಜ್ಞರ ಒಡೆಯ ದಯವಾಗೋ ॥೯೪॥

ಮರುತ ಸರ್ವವ ಸೋಂಕಿ ಮಲಿನ ಹೊಂದದ ತೆರದಿ
ಪರಿಪರಿಯ ವಿಷಯ ಸೋಂಕಿ ಸೋಕದೆ ಇರ್ಪ
ಶರಣರ ಒಡೆಯ ದಯವಾಗೊ ॥೯೫॥

ಮರದೊಳಿಹುದನಲ, ಆ ಮರವು ಅನಲದಲ್ಲಿರದ
ಪರಿಯಂತೆ ಸಂಸಾರದೊಳಗಿರ್ಪ
ಶರಣರ ಒಡೆಯ ದಯವಾಗೋ ॥೯೬॥

ಪುಸಿಯಲ್ಲ ನಿಜವಲ್ಲ ರಸವಲ್ಲ ಕಸವಲ್ಲ
ಅಸಮಾಕ್ಷನಲ್ಲ ವಸುಧೆ ಮೊದಲೇ ಅಲ್ಲ.
ಶಶಿಧರ ಗುರುವೆ ದಯವಾಗೋ ॥೯೭॥

ನಾಮರೂಪಗಳಿಲ್ಲ ಸೀಮೆ ಕ್ರಿಯೆಗಳು ಇಲ್ಲ
ಆ ಮಹಾ ಉಳಿಮೆ ನೀನೆಂದು ನೀನೆಂದು ಬೋಧಿಸಿದ
ಸ್ವಾಮಿ ಗುರುರಾಯ ದಯವಾಗೋ ॥೯೮॥

ಬ್ರಹ್ಮನಾಮವು ಪುಸಿಯು ಹಮ್ಮಿನೀಶ್ವರ ಪುಸಿಯು
ತಮ್ಮಮತವಾದ ತ್ರೈಮೂರ್ತಿ ಪುಸಿಯೆಂದ
ನಮ್ಮ ಗುರುರಾಯ ದಯವಾಗೋ ॥೯೯॥

ನಾನು ಎಂಬುದು ಪುಸಿಯು ನೀನು ಎಂಬುದು ಪುಸಿಯು
ಜ್ಞಾನ ಅಜ್ಞಾನವೇನಿಲ್ಲ ಎಂದೊಡೆ
ತಾನು ತಾನಾದೆ ದಯವಾಗೋ ॥೧೦೦॥

ತಪ್ಪು ಇರ್ದೊಡೆ ತ್ರಿವಿಧಿ ಒಪ್ಪದಿಂ ತಿದ್ದುವುದು
ಕಪ್ಪೆ ಮಾನವನು ನಾನರಿಯೆನಿದರರ್ಥ
ಬಪ್ಪ ಶರಣರ್ಗೆ ಶರಣೆಂಬೆ ॥೧೦೧॥

ಛಂದಸ್ಸು ಗಣ ಯತಿಯನೊಂದೂ ತಿಳಿದವನಲ್ಲ
ಇಂದು ಕರಿವೃಷಭ ನುಡಿಸಿದಂದದಿ ನುಡಿದೆ
ಕುಂದೆಲ್ಲ ತಿದ್ದಿ, ಶರಣೆಂಬೆ ॥೧೦೨॥

ಶರಣು ಪ್ರಭು ಚರಣಕ್ಕೆ, ಶರಣು ಚನ್ನಣ್ಣಂಗೆ
ಶರಣು ಶರಣೆಂದು ನಮಿಸುವೆ ಕಲ್ಯಾಣ
ಪುರದ ಶರಣರ್ಗೆ ಶರಣೆಂಬೆ ॥೧೦೩॥

ಬಸವ ಭಕ್ತಗೆ ಶರಣು, ಅಸಮ ಮಾಚಿಗೆ ಶರಣು
ವಸುಧೆಯ ಸರ್ವಶರಣಕುಲದಂಘ್ರಿಗೆ
ಅಸುವ ಬಾಗಿನ್ನು ಶರಣೆಂಬೆ ॥೧೦೪॥

ಶಿವೆಗೆ ಪರಶಿವಗೆ ಕುವರ ಷಣ್ಮುಖನಿಗೆ
ಕವಿಗಳ ಒಡೆಯ ಗಣಪನ ಚರಣಕ್ಕೆ
ತವಕದಿಂ ಶರಣು ಶರಣೆಂಬೆ ॥೧೦೫॥

ಆದಿ ಅನಾದಿಯಿಂದ್ಹೋದ ಶಿವಶರಣರ್ಗೆ
ಈದಿನ ಜಗದೊಳಗಿರುವರ್ಗೆ
ಮುಂದಾದ ಶರಣರ್ಗೆ ಶರಣೆಂಬೆ ॥೧೦೬॥

ಗುರುಕುಲೋತ್ತುಮರಿಗೆ ಗುರುವಂಶಜಾತರಿಗೆ
ಗುರುಕರದೊಳುದಿಸಿರ್ಪ ಶರಣರಿಗೆ
ಗುರು ಕೃಪೆಯಿಂದ ಶರಣೆಂಬೆ ॥೧೦೭॥

ಸೋಮೆಕಟ್ಟೇಶಗೆ ಪ್ರೇಮುಸದ್ಗುರುವಿಂಗೆ
ಆಮಹಾ ಕರಿವೃಷಭಾರ್ಯನಂಘ್ರಿಗೆ
ನಾ ಮಣಿದು ಶಿರವ, ಶರಣೆಂಬೆ ॥೧೦೮॥

ಇತಿ ಶ್ರೀಮತ್ಸೋಮೆಕಟ್ಟಿ ಕರಿವೃಷಭ ಯೋಗೀಂದ್ರ
ವಿರಚಿತ ಅಷ್ಟೋತ್ತರಶತ ತ್ರಿವಿಧಿ ಸಂಪೂರ್ಣಂ

॥ ಇತಿ ಸರ್ವಂ ಶಿವಂ ॥

# ಲಿಂಗಾಯತರು ಮತ್ತು ಆರಾಧ್ಯರು

("*Mysore Tribes and Castes*" ಎಂಬ ಪುಸ್ತಕದಲ್ಲಿನ ಪ್ರಕರಣಗಳ ಮೇಲೆ ವಿಚಾರ)

[ಲೇಖಕಃ— ಜೀರಗೆ ಬಸವಲಿಂಗಪ್ಪ, ಅರಳೇಪೇಟೆ, ಬೆಂಗಳೂರು ಸಿಟಿ.]

ಈಚೆಗೆ ಪ್ರಸಿದ್ಧಿಪಡಿಸಲ್ಪಟ್ಟ "*Mysore Tribes and Castes*" ಎಂಬ ೨ ನೇ ಮತ್ತು ೪ ನೇ ಸಂಪುಟಗಳಲ್ಲಿ ಕೆಲವು ವಿಷಯಗಳು ಬರೆಯಲ್ಪಟ್ಟಿವೆ ಎಂಬುದನ್ನು ಕೇಳಿ, ನಾನು ಬೆಂಗಳೂರಿನಲ್ಲಿರುವ (*Public Library*) ಎಂಬ ಪುಸ್ತಕ ಭಂಡಾರಕ್ಕೆ ಹೋಗಿ (ಸಂಪುಟ ೪) ಲಿಂಗಾಯತರ ವಿಷಯವಾಗಿ ಹೇಳುವ ಮತ್ತು (ಸಂಪುಟ ೨) ಆರಾಧ್ಯರ ವಿಷಯವಾಗಿ ಹೇಳುವ ಪ್ರಕರಣಗಳನ್ನು ಓದಿದೆನು. ಆ ಪ್ರಕರಣಗಳನ್ನು ಓದಿದ್ದರ ಮೇಲೆ ಅದರಲ್ಲಿ ಅನೇಕ ಭಾಗಗಳು ಬರೀ ಹೇಳಿಕೆಗಳ ಮೇಲೆ ಬರೆಯಲ್ಪಟ್ಟಿವೆ ಎಂಬುದನ್ನು ಮತ್ತು ಲಿಂಗಾಯತ ಅಥವ ವೀರಶೈವ ಮತ ವಿಚಾರವಾಗಿ ನಿಜಸ್ಥಿತಿಯನ್ನು ಕಂಡುಹಿಡಿಯುವದಕ್ಕೆ ಶ್ರಮ ತೆಗೆದುಕೊಳ್ಳಲ್ಪಟ್ಟಿಲ್ಲವೆಂಬುದು ತಿಳಿದು ಬರುವದು. ಬಸವೇಶ್ವರ ಮತ್ತು ಇತರ ಶರಣರ ವಚನಗಳಂತೆ, ಹಂಪೆ ಹರೀಶ್ವರ ದೇವರ ಬಸವರಾಜ ರಗಳೆಯಂತೆ, ರಾಘವಾಂಕರ ಸಿದ್ಧರಾಮ ಪುರಾಣದಂತೆ, ಅದೇ ಗ್ರಂಥಕರ್ತರ ಆದಿಶೆಟ್ಟಿ ಪುರಾಣದಂತೆ, ಕೆರೇ ಪದ್ಮರಸರ ದೀಕ್ಷಾಬೋಧೆಯಂತೆ ಮತ್ತು ಅನೇಕ ಇತರ ಗ್ರಂಥಗಳಂತೆ ಧಾರ್ಮಿಕ ಮತ್ತು ಚಾರಿತ್ರಕ ಮೌಲ್ಯವುಳ್ಳ ಪುಸ್ತಕಗಳು ಎಷ್ಟು ಮಾತ್ರಕ್ಕೂ ಅವಲೋಕಿಸಲ್ಪಟ್ಟಿರುವದಿಲ್ಲ. ಪ್ರಕರಣಗಳ ಅನೇಕ ಭಾಗಗಳು ಬರೀ ಉಕ್ತಿಗಳಾಗಿರುತ್ತವೆ. ವ್ಯಕ್ತಿಗಳ ಹೇಳಿಕೆಗಳ ಮೇಲೆ ಪುಸ್ತಕಗಳನ್ನು ಬರೆಯುವ ಕೆಲವು ಇಂಗ್ಲೀಷು ಜನರ ಪುಸ್ತಕಗಳಿಗೆ ಅಲ್ಲಲ್ಲಿ ದಾಕಲೆ ತೋರಿಸಲ್ಪಟ್ಟಿರುತ್ತವೆ. ಆದರೂ ಈ ಇಂಗ್ಲೀಷು ಜನರು ಯಾವುದೊಂದು ವಾಲುವಿಕೆ ಇಲ್ಲದೆ ತಮ್ಮ ಶಕ್ತಿ ಇದ್ದಷ್ಟು ಮಟ್ಟಿಗೂ ಸತ್ಯವನ್ನು ಕಂಡುಹಿಡಿಯುವದಕ್ಕೆ ಪ್ರಯತ್ನ ಮಾಡುವವರಾಗಿರುತ್ತಾರೆ.

ಆರಾಧ್ಯರಿಗೆ ಸಂಬಂಧಪಟ್ಟ ಪ್ರಕರಣದಲ್ಲಿ—"ಆರಾಧ್ಯರು ಒಂದು ಪಂಗಡದ ಬ್ರಾಹ್ಮಣರಾಗಿರುತ್ತಾರೆ" ಎಂದು ಹೇಳಲ್ಪಟ್ಟಿದೆ ಇಲ್ಲಿ ಸೂಚಿ

ಸಲ್ಪಟ್ಟಿರುವ ಆರಾಧ್ಯರು ಮೈಸೂರು ದೇಶದ ಆರಾಧ್ಯರಾಗಿರುತ್ತಾರೆ.
ಜಂಗಮರ ಅನೇಕ ಪಂಗಡಗಳವರಲ್ಲಿ ಆರಾಧ್ಯರೆಂಬ ಅಂಕಿತದಿಂದ
ಕರೆಯಲ್ಪಡತಕ್ಕಂತದ್ದು ರೂಢಿಯಾಗಿರುತ್ತದೆ. ಅವರು ಅಯ್ಯ, ದೇವರು,
ಒಡೆಯರು ಮತ್ತು ಸ್ವಾಮಿ ಎಂಬ ಅಂಕಿತಗಳನ್ನೂ ಸಹ ಉಪಯೋಗಿ
ಸುತ್ತಾರೆ. ವಿಶೇಷವಾಗಿ ಆರಾಧ್ಯರೆಂಬ ಹೆಸರಿನಿಂದ ಕರೆಯಲ್ಪಡತಕ್ಕ
ಕೇವಲವಾದ ಒಂದು ಜಂಗಮರ ಗುಂಪಿನವರು ಮೈಸೂರು ಪಟ್ಟಣ
ದಲ್ಲೂ ಮತ್ತು ಮೈಸೂರು ಸುತ್ತಮುತ್ತಣ ತಾಲೂಕುಗಳಲ್ಲೂ ಇರು
ತ್ತಾರೆ. ಇವರು ಬ್ರಾಹ್ಮಣರೆಂದು ಕರೆದುಕೊಳ್ಳತಕ್ಕ ವಾಡಿಕೆ ಇದ್ದಿಲ್ಲ.
ಪದ್ಮರಾಜ ಪುರಾಣಕ್ಕೆ ಮಲ್ಲಾರಾಧ್ಯರಿಂದ ಬರೆಯಲ್ಪಟ್ಟಿರುವ ಉಪೋ
ದ್ಘಾತದ ಪ್ರಕಾರ ಆರಾಧ್ಯರು ಕ್ರಿ. ಶ. ೧೧೬೫ ರಲ್ಲಿ ಹೊಯಿಸಳರಾಜ
ನರಸಿಂಹ ಬಲ್ಲಾಳನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಕೆರೆ ಪದ್ಮರಸನ
ವಂಶಕ್ಕೆ ಸೇರಿರುತ್ತಾರೆಂಬದಾಗಿ ಸಾಧಿಸಲ್ಪಟ್ಟಿರುತ್ತದೆ. ಇವರು ರೇಣು
ಕರೇ ಮೊದಲಾದ ಐದು ಜನರ ವಂಶದಿಂದ ಬಂದಿರುತ್ತಾರೆಂದೂ ಕೂಡ
ಸಾಧಿಸಲ್ಪಟ್ಟಿರುತ್ತದೆ. ಈ ಕಾರಣದಿಂದ ಇವರು ಬ್ರಾಹ್ಮಣರೆಂದು ಕರೆ
ಯಲ್ಪಡಬಹುದೆಂದು ಸಾಧಿಸಲ್ಪಟ್ಟಿರುತ್ತದೆ. ಆದರೆ ಮೇಲ್ಕಂಡ ಐದು
ಜನ ಶರಣರೂ ಮತ್ತು ಪದ್ಮರಸರೂ ವೀರಶೈವ ಮತಾವಲಂಬನೆ ಮಾಡಿದ
ಮೇಲೆ ವರ್ಣಾಶ್ರಮವನ್ನು ಬಿಟ್ಟು ಬಿಟ್ಟು ಖಂಡಿತ ವೀರಶೈವರಾಗಿ ಆಚರಿ
ಸಿದರು. ಆಗಿನಿಂದಲೂ ಆರಾಧ್ಯರು ಸುಮ್ಮನೆ ಆರಾಧ್ಯರೆಂದು ಕರೆದು
ಕೊಳ್ಳುತ್ತಾರೆ. ಆರಾಧ್ಯ ಬ್ರಾಹ್ಮಣರೆಂದು ಕರೆದುಕೊಳ್ಳುವದಿಲ್ಲ. ಈ
ವಿಶೇಷ ಪಂಗಡದವರು ಮೇಲ್ಕಂಡ ಪ್ರಕರಣದಲ್ಲಿ ಆರಾಧ್ಯ ಬ್ರಾಹ್ಮಣರೆಂದು
ಕರೆಯಲ್ಪಟ್ಟಿರುತ್ತಾರೋ ಅಥವ ಸಾರ್ವತ್ರಿಕವಾಗಿ ಎಲ್ಲ ಪಂಗಡದ ಜಂಗ
ಮರೂ ಆರಾಧ್ಯ ಬ್ರಾಹ್ಮಣರೆಂದು ಕರೆಯಲ್ಪಟ್ಟಿರುತ್ತಾರೋ ಸ್ಪಷ್ಟವಾಗಿ
ಗೊತ್ತಾಗುವದಿಲ್ಲ.

ಕ್ರಿ. ಶ. ೧೮೭೧, ೧೮೮೧, ೧೮೯೧ ರ ಸೆನ್ ಸಸ್ಸುಗಳ ಕಾಲದ ಲಾಗಾ
ಯತು ಲಿಂಗಾಯತರ ಪಂಗಡಗಳಲ್ಲಿ ಬ್ರಾಹ್ಮಣರೆಂದು ಹೇಳಿಕೊಳ್ಳುವ
ದಕ್ಕೆ ಅತ್ಯಂತ ಆಶೆಯುಂಟಾಗಿರುತ್ತದೆ. ಇದಕ್ಕೆ ಮೂಲವೇನೆಂದರೆ,
೧೮೭೧ ಮತ್ತು ೧೮೮೧ ನೆ ವರ್ಷಗಳಲ್ಲಿ ಆರಾಧ್ಯರ ಸಮೇತವಾಗಿ ಲಿಂಗಾ
ಯತರು ಅಕ್ರಮ ಪಂಕ್ತಿಯಲ್ಲಿ ಸೇರಿಸಲ್ಪಟ್ಟರು. ಇದಕ್ಕೆ ಲಿಂಗಾಯತರು
ಅಸಮಾಧಾನ ಹೊಂದಿದವರಾಗಿ ಭಾವಿಸಿ, ತಾವು ಗೊತ್ತಿಲ್ಲದೆ, ಜನಸರಿ

ಗಣಿಯಲ್ಲಿ ಪ್ರತ್ಯೇಕವಾಗಿ ಸೇರಿಸಲ್ಪಡಬೇಕೆಂದು ಹೇಳುವದರ ಬದಲಾಗಿ, ತಾವು ಲಿಂಗಾಯುತ ಬ್ರಾಹ್ಮಣರೆಂದು ಕರೆದುಕೊಳ್ಳುವದಕ್ಕೆ ಹಕ್ಕನ್ನು ಮುಂದೆ ಚಾಚಿದರು. ಆಗಿನಿಂದಲೂ ಲಿಂಗಾಯುತರಲ್ಲಿ ವಿವಿಧ ಪಂಗಡಗಳವರು ತಮ್ಮ ತಮ್ಮ ಆಧಿಕ್ಯದ ವಿಷಯುವಾಗಿ ಪರಿಜ್ಞಾನವುಳ್ಳವರಾಗಿ ತಮ್ಮ ತಮ್ಮ ಜಾತಿಯು ಶ್ರೇಷ್ಠತ್ವವನ್ನು ಮುಂದೆ ಚಾಚುವದಕ್ಕೆ ಪ್ರಯತ್ನಪಡುತ್ತಲಿದ್ದಾರೆ. ಈಗಲೂ ಕೂಡ ಲಿಂಗಿಬ್ರಾಹ್ಮಣ ಅಥವಾ ವೀರಶೈವ ಬ್ರಾಹ್ಮಣ ಎಂಬ ಶಬ್ದ ಪ್ರಯೋಗಗಳು ಅನೇಕ ಸ್ಥಲಗಳಲ್ಲಿ ಉಪಯೋಗಿಸಲ್ಪಡುತ್ತವೆ

ಈ ವರೆಗೂ ಆರಾಧ್ಯ ಬ್ರಾಹ್ಮಣ ಎಂದರೆ ಲಿಂಗ ಮತ್ತು ಜನಿವಾರ ಎರಡನ್ನೂ ಧರಿಸುತ್ತಿರುವ ಮತ್ತು ಶಿವಾರಾಧ್ಯರೆಂದು ಕರೆಯಲ್ಪಡುತ್ತಿರುವ ಲಿಂಗವಿಲ್ಲದ ಸ್ಮಾರ್ತಶೈವ ಬ್ರಾಹ್ಮಣರಲ್ಲಿ ವಿವಾಹ ಸಂಬಂಧ ಮಾಡುವ ನೆಲ್ಲೂರು ಮತ್ತು ಸುತ್ತಮುತ್ತಣ ಪ್ರಾಂತ್ಯದಲ್ಲಿರುವ ತೆಲುಗು ಆರಾಧ್ಯ ಬ್ರಾಹ್ಮಣರಿಗೆ ಅನ್ವಯಿಸುತ್ತದೆಂದು ಅರ್ಥ ಮಾಡಲ್ಪಡುತ್ತಿತ್ತು. ನನಗೆ ತಿಳಿದ ಮಟ್ಟಿಗೂ ಲಿಂಗಾಯುತ ಆರಾಧ್ಯರಿಗೂ ಮತ್ತು ಮೇಲೆ ಹೇಳಿದ ತೆಲುಗು ಆರಾಧ್ಯ ಬ್ರಾಹ್ಮಣರಿಗೂ ಯಾವ ಸಂಬಂಧವೂ ಇರುವದಿಲ್ಲ ಮೈಸೂರು ಲಿಂಗಾಯುತ ಆರಾಧ್ಯರು ತಾವು ಆರಾಧ್ಯ ಬ್ರಾಹ್ಮಣರೆಂದು ಕರೆಯಲ್ಪಡುವದಕ್ಕೆ ಅಪೇಕ್ಷಿಸಿರುವದಾಗಿ ನಾನು ಊಹಿಸುತ್ತೇನೆ. ಪ್ರಾಯಶಃ ಈ ಕಾರಣದಿಂದಲೇ ಆ ಪ್ರಕರಣದಲ್ಲಿ ಆರಾಧ್ಯರು ಬ್ರಾಹ್ಮಣರ ಒಂದು ಪಂಗಡವೆಂದು ಹೇಳಲ್ಪಟ್ಟಿರುತ್ತದೆ.

ಅದೇ ಪ್ರಕರಣದಲ್ಲಿ ಆರಾಧ್ಯರು ಗಾಯತ್ರಿ ಮಹಾ ಮಂತ್ರ ಪುನಸ್ಚರಣ ಮತ್ತು ಯಜ್ಞೋಪವೀತ ಧಾರಣೆ ಮೊದಲಾದ ಕೆಲವು ಬ್ರಾಹ್ಮಣ ವಿಧಿಗಳನ್ನು ಉಳಿಸಿಕೊಂಡಿರುವದಾಗಿ ಹೇಳಲ್ಪಟ್ಟಿದೆ. ಈ ವರೆಗೂ ಅವರಿಗೆ ಬ್ರಾಹ್ಮಣ ವಿಧಿಗಳಿದ್ದಿಲ್ಲ. ಅವರು ಜನಿವಾರವನ್ನು ಧರಿಸುತ್ತಿದ್ದದ್ದನ್ನು ನಾನು ನೋಡಿಲ್ಲ. ಅವರು ಲಿಂಗಾಯುತರಲ್ಲಿ ಏಕತ್ವವುಳ್ಳವರಾಗಿದ್ದರು.

ಅದೇ ಪ್ರಕರಣದಲ್ಲಿ ಆರಾಧ್ಯರ ಒಂದು ಗುಂಪಿನ ಚಿತ್ರವು ಕೊಡಲ್ಪಟ್ಟಿರುತ್ತದೆ. ಅದರಲ್ಲಿ ಅವರು ಯಜ್ಞೋಪವೀತವನ್ನೂ ಮತ್ತು ತೆಲುಗು ಆರಾಧ್ಯ ಬ್ರಾಹ್ಮಣರ ಬಗೆಯ ಬೆಳ್ಳಿಯ ಕರಡಿಗೆಯನ್ನು ಧರಿಸಿರುವಂತೆ ಉನ್ನತವಾಗಿ ತೋರಿಸಲ್ಪಟ್ಟಿರುತ್ತದೆ. ಇದರಿಂದ ಈಗ ಆರಾಧ್ಯರು ಯಜ್ಞೋಪವೀತವನ್ನು ಧರಿಸುತ್ತಿರುವದಾಗಿ ಊಹಿಸಲ್ಪಡಬೇಕಾಗಿರುತ್ತದೆ.

ಪ್ರತಿಯೊಬ್ಬ ಜನರು ಆವರವರ ಅನುಕೂಲಕ್ಕೆ ಸರಿಯಾಗಿ ನಡೆದು ಕೊಳ್ಳುವದಕ್ಕೆ ಸ್ವಾತಂತ್ರ್ಯವುಳ್ಳವರಾಗಿರುತ್ತಾರೆ. ನಾನು ಈ ಸಂಗತಿಗಳನ್ನು ಇದ್ದಿದ್ದ ಹಾಗೆ ತಿಳಿಸುವದಕ್ಕಾಗಿ ಹೇಳಿರುತ್ತೇನೆ.

ಅದೇ ಪ್ರಕರಣದಲ್ಲಿ ಪೂರ್ವದೊಳಗೆ ಅತಿಶಯವಾಗಿ ಮನಸ್ತಾಪಗಳಿದ್ದವೆಂದು ಹೇಳಲ್ಪಟ್ಟಿರುತ್ತದೆ. ಇದರಿಂದ ಎರಡು ಪ್ರಭೇದಗಳಾಗುವದಕ್ಕೆ ಅವಕಾಶವಾಯಿತು ಎಂದು ಹೇಳಲ್ಪಟ್ಟಿರುತ್ತದೆ. ಇದು ನಿಜವಲ್ಲ. ಮೈಸೂರು ದೇಶದ ಆರಾಧ್ಯರು ಈ ವರಿಗೂ ತಾವು ಲಿಂಗಾಯತರೆಂದೇ ತಿಳಿದುಕೊಂಡು ಬಂದಿರುತ್ತಾರೆ. ಮತ್ತು ಲಿಂಗಾಯತರ ಇತರ ಪಂಗಡಗಳ ಜೊತೆಗೆ ಅನ ಸಾರವಾಗಿ ಕೆಲಸ ಮಾಡಿರುತ್ತಾರೆ. ಇತರ ಲಿಂಗಾಯತರ ಜೊತೆಗೆ ಇವರಿಗೆ ಜಗಳವಿರಲಿಲ್ಲ. ಲಿಂಗಾಯತರಲ್ಲಿ ಎರಡು ಭಾಗಗಳಿರಲಿಲ್ಲ. ಈಗ ತಾನೇ ತಾವು ಹೆಚ್ಚಿನ ಪಂಗಡದವರೆಂದು ಊಹೆ ಮಾಡುವ ಕೆಲ ಜನರು ಲಿಂಗಾಯತರಲ್ಲಿ ಜಾತಿ ಭೇದಗಳನ್ನು ಪ್ರಬೋಧಿಸುವವರಲ್ಲಿಯೂ, ಬಸವೇಶನನ್ನು ಕುರಿತು ಹೀನ ಶಬ್ದಗಳಿಂದ ಮಾತಾಡುವವರಲ್ಲಿಯೂ, ಲಿಂಗಾಯತರಲ್ಲಿ ವಿಚ್ಛಿದ್ರವನ್ನು ತಂದೊದಗಿಸಿರುತ್ತಾರೆ. ಇವೆಲ್ಲಾ ಲಿಂಗಾಯತರಲ್ಲಿ ಬ್ರಾಹ್ಮಣ್ಯವನ್ನು ಸಂಪಾದಿಸುವದಕ್ಕಾಗಿ ಉಂಟಾದ ತೊಂದರೆಯಾಗಿರುತ್ತದೆ. ಈ ತೊಂದರೆಯು ಮೇಲೆ ಹೇಳಿದಂತೆ ಮೊದಲಿನ ಜನ ಪರಿಗಣಿತಿಯ ಲಾಗಾಯಿತು ಉಂಟಾದುದಾಗಿರುತ್ತದೆ.

ಅದೇ ಪ್ರಕರಣದಲ್ಲಿ ವೀರಶೈವ ಸಮಯದ ಪ್ರಕಾರ ಆರಾಧ್ಯ ಬ್ರಾಹ್ಮಣರು ರೇವಣಾರಾಧ್ಯ ಅಥವ ರೇವಣಸಿದ್ಧ, ಏಕೋರಾಮ, ಮರುಳಸಿದ್ಧ, ಪಂಡಿತಾರಾಧ್ಯ ಮೊದಲಾದ ಐದು ಜನ ಪ್ರಮಥರನ್ನು ತಮ್ಮ ಗುರುಗಳನ್ನಾಗಿ ಅಂಗೀಕರಿಸಿರುತ್ತಾರೆಂದು ಹೇಳಲ್ಪಟ್ಟಿರುತ್ತದೆ. ಆ ಪ್ರಕರಣದಲ್ಲಿ ಆರಾಧ್ಯರಿಗೆ ಋಷಿಗೋತ್ರವು ಹೇಳಲ್ಪಟ್ಟಿಲ್ಲ. ತೆಲಗು ದೇಶದಲ್ಲಿ ಶಿವಾರಾಧ್ಯರೆಂದು ಕರೆಯಲ್ಪಡುವ ಲಿಂಗಧಾರಣವಿಲ್ಲದ ಸ್ಮಾರ್ತಶೈವ ಬ್ರಾಹ್ಮಣರಲ್ಲಿ ವಿವಾಹ ಸಂಬಂಧ ಮಾಡುವ ತೆಲುಗು ಆರಾಧ್ಯ ಬ್ರಾಹ್ಮಣರಿಗೆ ಋಷಿಗೋತ್ರಗಳಿರುತ್ತವೆ.

ಮತ್ತೂ ಹೇಳಲ್ಪಟ್ಟಿರುವುದೇನೆಂದರೆ:— ವೀರಶೈವ ಸಮಯವು ಮೇಲ್ಕಂಡ ಆರಾಧ್ಯರಿಂದ ಒಂದು ರೂಪಕ್ಕೆ ತರಲ್ಪಟ್ಟಿತೆಂತಲೂ, ಆರಾಧ್ಯರು ವಿದ್ಯೆ ಮತ್ತು ಪಾರಿಶುದ್ಧ್ಯತೆಯುಳ್ಳ ಜನರಾಗಿದ್ದರೆಂತಲೂ, ಈ

ಚೆನ್ನಬಸವೇಶ್ವರನೇ ಮೊದಲಾದ ಸುಧಾರಕರು ಈ ಸಮಯಕ್ಕೆ ಖಂಡಿತ ವಾಗಿ ಆಹಿತದ ಮತ್ತು ಬ್ರಾಹ್ಮಣ್ಯ ವಿರೋಧದ ಲಕ್ಷಣವನ್ನು ಕೊಟ್ಟರೆಂ ತಲೂ ಹೇಳಲ್ಪಟ್ಟಿದೆ. ಮೇಲೆ ಹೇಳಿದ ಆರಾಧ್ಯರು ಬಸವನ ತತ್ವಕ್ಕೆ ವಿರುದ್ಧವಾದ ವೀರಶೈವ ಧರ್ಮವನ್ನು ಬೋಧಿಸಿದರೇನು ? ಆರಾಧ್ಯರ ಮತವೂ ಬಸವನ ಮತವೂ ಒಂದೇ ಅಲ್ಲವೇನು ? ವೀರಶೈವ ಮತವು ಶೈವಮತದ ಅನೇಕ ಹಳೆ ನಡವಳಿಕೆಗಳನ್ನು ಬಿಟ್ಟಿರುತ್ತದೆಂದು ಅರ್ಥ ವಾಗುವದಿಲ್ಲವೆ ? ಶಿವಾಗಮಗಳು, ಬಸವ ಮೊದಲಾದ ಪ್ರಮಥರ ವಚ ನಗಳು ಮತ್ತು ಬಸವನ ಕಾಲದಿಂದ ಈ ವರೆಗಿನ ವೀರಶೈವ ಸ್ವತಂತ್ರ ಗ್ರಂಥಗಳು ವೀರಶೈವಕ್ಕೆ ಜಾತಿಗಳಿಲ್ಲವೆಂದು ಸ್ಪಷ್ಟವಾಗಿ ಹೇಳುವದಿಲ್ಲವೆ? ಆರಾಧ್ಯರು ಬಸವನಿಗಿಂತ ಮೊದಲಿದ್ದರೇನು ? ಸಂಸ್ಕೃತದಲ್ಲಾಗಲೀ, ಕನ್ನ ಡದಲ್ಲಾಗಲೀ ಅವರಿಂದ ಬರೆಯಲ್ಪಟ್ಟಿರುವ ಗ್ರಂಥಗಳಾವವು ? ಮಲ್ಲಿ ಕಾರ್ಜುನ ಪಂಡಿತಾರಾಧ್ಯನು ಬಸವನ ಸಮಕಾಲದವನಲ್ಲವೇ ? ಅವನು ಬಸವನ ಸ್ತುತಿರೂಪನಾಗಿ ಬಸವ ಮಹಾತ್ಮ್ಯ ಗೀತೆಯನ್ನು ಬರೆಯಲಿಲ್ಲವೆ? ಏಕೋರಾಮನು ಮೊದಲು ಶೈವನಾಗಿದ್ದು, ಆ ಮೇಲೆ ವೀರಶೈವ ಮತಾ ವಲಂಬಿಯಾಗಿಲ್ಲವೇ ? ರೇವಣಸಿದ್ಧನು ಬಸವನ ಸಮಕಾಲದವನಲ್ಲವೇ ? ಅವನ ಧರ್ಮಬೋಧೆಯೂ ಬಸವನ ಧರ್ಮಬೋಧೆಯಿಂದ ಭಿನ್ನವಾಗಿ ತ್ತೇನು ? ಆತನು ಬೇರೆ ಬೇರೆ ವಂಶದ ರಾಜರ ಹೆಣ್ಣುಮಕ್ಕಳುಗಳನ್ನು ಮದುವೆಯಾಗಿ, ವೀರಶೈವಕ್ಕೆ ಜಾತಿಭೇದವಿಲ್ಲವೆಂಬುದನ್ನು ತೋರಿಸಲಿ ಲ್ಲವೇ ? ಸಿದ್ಧಾಂತ ಶಿಖಾಮಣಿಯಲ್ಲಿ ಜಾತಿಭೇದವು ನಿರಾಕರಿಸಲ್ಪಟ್ಟಿ ಲ್ಲವೇ ? ಆಚಾರ್ಯರಿಗೆ ಸಂಬಂಧಪಟ್ಟ ಪುಸ್ತಕಗಳು, ಅಂದರೆ ರೇವಣ ಸಿದ್ಧ ಪುರಾಣ, ಸಿದ್ಧರಾಮ ಪುರಾಣ, ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆ, ಏಕೋರಾಮಾರಾಧ್ಯರ ಪುರಾಣಗಳು ಸತ್ಯವನ್ನು ಕಂಡು ಹಿಡಿ ಯುವದಕ್ಕಾಗಿ ಶೋಧಿಸಲ್ಪಟ್ಟವೋ ? ಪಂಚಾರಾಧ್ಯರೆಲ್ಲರೂ ಬಸವನ ಸಮಕಾಲದವರಾಗಿರುತ್ತಾರೆ. ಅವರ ಮತಬೋಧೆಗೂ, ಬಸವನ ಮತ ಬೋಧೆಗೂ ಏನೂ ವ್ಯತ್ಯಾಸವಿರುವದಿಲ್ಲ. ನಾನು ಮತ್ತೊಂದು ವಿಷಯ ವನ್ನು ತೋರಿಸಬೇಕಾಗಿರುತ್ತದೆ. ನಾಲ್ಕು ಜನ ಆರಾಧ್ಯರು ಅಂದರೆ:— ರೇವಣಾರಾಧ್ಯ, ಮರುಳಾರಾಧ್ಯ, ಪಂಡಿತಾರಾಧ್ಯ, ಏಕೋರಾಮರು ಶಿವಾ ನುಭ ಮಂಟಪದಲ್ಲಿ ಬಸವನನ್ನು ಆತನ ದ್ವಿತೀಯ ಕಾಲಮಾನದಲ್ಲಿ ದರ್ಶ ನಗೊಂಡು ಅವನಿಂದ ಜಂಗಮಸ್ಥಲವನ್ನು ಹೊಂದಿದರು. ಇದು ಸಂಗ ನಬಸವೇಶ್ವರ ವಚನ ಮತ್ತು ಇತರ ಪುಸ್ತಕಗಳಲ್ಲಿ ಪ್ರಕಟವಾಗಿರುತ್ತದೆ.

ಆಧಾರವಾಗಿಟ್ಟುಕೊಂಡಿರುವ ಪುಸ್ತಕಗಳಾವವು? ಐದು ಆರಾಧ್ಯರು ಗಳನ್ನು ತಮ್ಮ ಗುರುಗಳೆಂದು ಭಾವಿಸುತ್ತಾರೆಂದು ಹೇಳಲ್ಪಟ್ಟಿರುತ್ತದೆ. ಆ ಐದು ಆರಾಧ್ಯರು ವೇದಗಳಲ್ಲಿ ಹೇಳಿರುವ ಯಾಗಗಳಾವವನ್ನಾದರೂ ನಡಿಸಿದರೋ? ಈ ಐದು ಆರಾಧ್ಯರ ವಿಚಾರವನ್ನು ಹೇಳುವ ಪುಸ್ತಕ ಗಳನ್ನು, ಅಂದರೆ ರೇವಣಸಿದ್ಧ ಪುರಾಣ, ಚತುರಾಚಾರ್ಯ ಪುರಾಣ, ಪಂಡಿತಾರಾಧ್ಯ ಚರಿತ್ರೆ, ಏಕೋರಾಮ ಪುರಾಣ ಇವುಗಳನ್ನು ಅಧ್ಯ ಯನ ಮಾಡಲಿ. ವೀರಶೈವ ತತ್ವದ ಮುಖ್ಯ ಭಾಗವಾದ ಜಾತಿ ನಿರಾಕರಣವನ್ನು ಯೋಚಿಸಿದರೆ, ಐದು ಆರಾಧ್ಯರುಗಳು ಆರಾಧ್ಯರಗಿಂತ ಹೆಚ್ಚಾಗಿ ಲಿಂಗಾಯತರ ಸ್ಪಾಶ್ಯವಾಗಿರುತ್ತಾರೆ.

---

## ಸರ್ವಬ್ರಾಹ್ಮಣ ಶ್ರೇಷ್ಠ

(ಶ್ರೀ ಕವೀಂದ್ರ ರವೀಂದ್ರನಾಥ ಟಾಗೋರರವರ 'ಫ್ರೂಟಗ್ಯಾದರಿಂಗ' ಎಂಬ ಪುಸ್ತಕದಲ್ಲಿಯ ಒಂದು ಕವಿತೆಯ ಅನುವಾದವಿದು.)

(ಅನುವಾದಕ:--ಈಶ್ವರ ಸಣಕಲ್ಲ, ರಬಕವಿ)

---

ಅರಣ್ಯದ ನಿಬಿಡತೆಯೊಳಗೆ ನದಿಯ ಪಡುವಣಂಚಿನ ಮೇಲೆ ಸೂರ್ಯನು ಅಸ್ತಂಗತನಾಗಿದ್ದನು.

ಆಶ್ರಮ ವಟುಗಳು ತುರು ಕರುಗಳನ್ನು ಮನೆಗೆ ಹೊಡೆದುಕೊಂಡು ಬಂದು ಗುರುಗೌತಮನ ಉಪದೇಶ ಶ್ರವಣಕ್ಕಾಗಿ ಬೆಂಕಿಯ ಸುತ್ತು ಮುತ್ತು ಕುಳಿತಿದ್ದರು. ಆಗ ಹೊಸಬನಾದ ಹುಡುಗನೊಬ್ಬನು ಬಂದು, ಫಲಪುಷ್ಪಗಳನ್ನಿರಿಸಿ ಗೌತಮನ ಪಾದಸನ್ನಿಧಿಯಲ್ಲಿ ತಲೆವಾಗಿ ಹಕ್ಕಿಯ ಇನಿದನಿಯಲ್ಲಿ ಇಂತು ಬಿನ್ನಹ ಮಾಡಿದನು. "ಗುರುವೇ, ಕೃಪೆ ಮಾಡಿ ನನಗೆ ಸರ್ವೋತ್ಕೃಷ್ಟವಾದ ಸತ್ಯಪಥವನ್ನು ತೋರಿಸು; ಅದಕ್ಕಾಗಿಯೇ ನಾನಿಲ್ಲಿಗೆ ಬಂದುದು! ನನ್ನ ಹೆಸರು ಸತ್ಯಕಾಮ!"

ಸತ್ಯಕಾಮನನ್ನು ಆಶೀರ್ವದಿಸಿ ಗೌತಮನು ಕೇಳಿದನು.

"ಮಗುವೇ, ನಿನ್ನ ಗೋತ್ರವಾವುದು ? ಉಚ್ಚ ವಿದ್ಯೆಗಾಗಿ ಆಶೆಬಡು ವದು ಬ್ರಾಹ್ಮಣನಿಗಷ್ಟೇ ಉಚಿತವು."

ಆ ಹುಡುಗನು ಉತ್ತರಿಸಿದನು. "ಒಡೆಯಾ, ನನ್ನ ಗೋತ್ರವಾವುದು ನನಗೆ ಗೊತ್ತಿಲ್ಲ! ಮರಳಿ ಹೋಗಿ ತಾಯಿಯನ್ನು ಕೇಳಿ ಬರುವೆ."

ಹೀಗೆ ನುಡಿದು, ಸತ್ಯಕಾಮನು ಗೌತಮನಪ್ಪಣೆ ಪಡೆದು ಕಿರಿದಾದ ಪ್ರವಾಹವನ್ನು ದಾಟಿ, ಋಷ್ತಗ್ರಾಮದಂಚಿನಲ್ಲಿ ಹಾಳು ಮಳಲು ಗಾಡಿನ ಕೊನೆಗಿರುವ ತನ್ನ ತಾಯಿಯ ಗುಡಿಸಲಿಗೆ ಮರಳಿದನು.

ದೀವಿಗೆಯು ಒಳಗೆ 'ಮಿಣಿ ಮಿಣಿ' ಉರಿಯುತ್ತಿತ್ತು. ತಾಯಿಯು ಮಗನ ಬರವಿಗಾಗಿ ಕಾದುಕೊಂಡು ಬಾಗಿಲ ಬಳಿಯಲ್ಲಿ ಕತ್ತಲಲ್ಲಿ ನಿಂತಿದ್ದಳು !

ಅವಳು ಅವನನ್ನು ಎದೆಗವಚಿಕೊಂಡು, ಶಿರವನಾಘ್ರಾಣಿಸಿ, ಮುತ್ತನಿತ್ತು ಗುರುವಿನ ಕಡೆಗೆ ಅವನು ಹೋದ ಸುದ್ದಿಯನ್ನು ಕೇಳಿದಳು.

ಆ ಹುಡುಗನಂದನು— "ಅಮ್ಮಾ, ನನ್ನ ತಂದೆಯ ಹೆಸರೇನು ? "ಉಚ್ಚ ವಿದ್ಯೆಗಾಗಿ ಆಸೆಬಡುವದು ಬ್ರಾಹ್ಮಣರಿಗಷ್ಟೇ ತಕ್ಕುದು" ಎಂದು ಗೌತಮ ಗುರುಗಳಂದರು."

ಅವಳು ಅವನತ ಮುಖಿಯಾಗಿ ಪಿಸುಮಾತಿನಲ್ಲಿ ಹೇಳಿದಳು "ಮಗೂ ನನ್ನ ತಾರುಣ್ಯದಲ್ಲಿ ನಾನು ಬಡವಿಯಾಗಿದ್ದೆ ! ಆಗ ನನಗೆ ಅನೇಕ ಜನ ಪತಿಗಳಾದರು ! ಮುದ್ದು ಮಗೂ, ಪತಿಯಿಲ್ಲದ ನಿನ್ನ ತಾಯಿ ಜಾಬಾಲೆಗೆ ನೀನು ಜನಿಸಿ ಬಂದೆ !"

ಆ ಅರಣ್ಯಾಶ್ರಮದ ವೃಕ್ಷಶಿಖರಗಳು ಬೆಳಗಿನ ಸೂರ್ಯಕಿರಣಗಳಿಂದ ಹೊಳೆಯ ತೊಡಗಿದವು.

ಪ್ರಾತಃಸ್ನಾನದಿಂದ ಇನ್ನೂ ಹಸಿಯಾರದ ತೊಡಕು ತೊಡಕಾದ ಕೇಶಗಳಿಂದೊಪ್ಪಿದ ವಿದ್ಯಾರ್ಥಿಗಳು ಹಳೆಯ ಹೆಮ್ಮರದ ಕೆಳಗೆ ತಮ್ಮ ಗುರುವಿನ ಮುಂದೆ ಕುಳಿತರು.

ಆಗ ಬಂದನಾ ಸತ್ಯಕಾಮನು !

ಅವನು ಯತಿಯ ಚರಣ ಕಮಲಗಳಲ್ಲಿ ನಮ್ರನಾಗಿ ಸುಮ್ಮನೇ ನಿಂತನು !

ಆ ಮಹಾಗುರುವು ಅವನನ್ನು ವಿಚಾರಿಸಿದನು "ಹೂಂ, ಹೇಳು, ನಿನ್ನ ಗೋತ್ರವಾವುದು ?"

ಆ ಹುಡುಗನು ಪ್ರತ್ಯುತ್ತರಿಸಿದನು. "ನನ್ನೊಡೆಯಾ, ನನಗದು ಗೊತ್ತಿಲ್ಲ; ಅವ್ವನನ್ನು ಕೇಳಲು ಅವಳು ಹೀಗೆ ಹೇಳಿದಳು. "ನನ್ನ ಪ್ರಾಯದಲ್ಲಿ ನಾನೆಷ್ಟೋ ಜನ ಪತಿಗಳನ್ನು ಸೇವಿಸಿದೆ ! ಮಗೂ, ಪತಿಯಿಲ್ಲದ ನಿನ್ನ ತಾಯಿ ಜಾಬಾಲೆಯು ಕೈಗೆ ನೀನು ಹುಟ್ಟಿ ಬಂದೆ"

ಜೇನ ಹುಟ್ಟಿನಲ್ಲಿಯು ಪೀಡಿತ ನೊಣಗಳ ಪ್ರಕ್ಷುಬ್ಧ ಝೇಂಕಾರದಂತೆ ಗುಣು ಗುಣು ಧ್ವನಿಯೆದ್ದಿತು ! ವಿದ್ಯಾರ್ಥಿಗಳು ಆ ಜಾತಿಭ್ರಷ್ಟನ ನಿರ್ಲಜ್ಜತನದ ಸೆಡಕಿಗಾಗಿ ಗುಜುಗುಟ್ಟಿದರು !

ಗುರುಗೌತಮನು ತನ್ನ ಪೀಠದಿಂದೆದ್ದು ಬಂದು ನೀಳವಾದ ಬಾಹುಗಳನ್ನು ಚಾಚಿ ಆ ಹುಡುಗನನ್ನು ತನ್ನೆದೆಗಪ್ಪಿಕೊಂಡು "ನನ್ನ ಕೂಸೇ, ನೀನು ಸರ್ವಬ್ರಾಹ್ಮಣಶ್ರೇಷ್ಠನು ! ಸತ್ಯಕ್ಕಾಗಿ ನಿನಗೆ ಸರ್ವೋತ್ಕೃಷ್ಟವಾದ ಬಾಧ್ಯತೆಯು ಉಂಟು." ಎಂದು ಸಂತೈಸಿದನು !

---

## ಲಿಂಗಾಂಗಿ ಧರ್ಮದ ಸೃಷ್ಟಿಕರ್ತರಾರು ?

(ಲೇಖಕ:— ಓರ್ವ ಜಿಜ್ಞಾಸು, ಬೆಂಗಳೂರುನಗರ)

---

ಭವಿತ್ವವನ್ನು ನೀಗಿ, ಶಿವತ್ವವನ್ನು ಪಡೆದು ಭಕ್ತಿ ಮಾರ್ಗದ ಮೂಲಕ ಮುಕ್ತಿದ್ವಾರದೊಳಹೊಗಲು ಅತ್ಯಂತ ಸುಲಭ ಸಾಧನವುಳ್ಳುದೂ, ತನ್ನದೇ ಒಂದು ವೈಶಿಷ್ಟ್ಯತೆಯು ಪವಿತ್ರ ಸಂಸ್ಕೃತಿಯನ್ನುಳ್ಳುದೂ, ಒಂದು ಕಾಲದಲ್ಲಿ ರಾಜಮಹಾರಾಜರುಗಳಿಂದಲೂ ಚಕ್ರಾಧಿಪತಿಗಳಿಂದಲೂ, ಅವಲಂಬಿಸಲ್ಪಟ್ಟು ಪರಮಪೂಜ್ಯವೆನ್ನಿಸಿಕೊಂಡು ಭರತಖಂಡದ ತುಂಬಾ ಪಸರಿಸಿಕೊಂಡಿದ್ದೂ ಭಾರತದ ಹೊರದೇಶಗಳಲ್ಲಿಯೂ ಪೂಜನೀಯವೆಂದು ಪರಿಗಣಿತವಾಗಿದ್ದೂ, ಈ ನಮ್ಮ ವೀರಶೈವ ಧರ್ಮವು ಪ್ರಸ್ತುತ ಪರಿಸ್ಥಿತಿಯಲ್ಲಿ ಕೇವಲ ಮೇಲು-ಕೀಳುಗಳ ಕುಕಲ್ಪನೆಯ ಮೂಲಕ ಯಾದವೀ ಕಲಹವನ್ನೆಬ್ಬಿಸಿ ಆ ಕಲಹಾಗ್ನಿಯಲ್ಲಿ ಬೆಂದುಬೆಂಡಾಗುತ್ತಿರುವುದಷ್ಟೆ. ಇದೇ ಸಮಯದಲ್ಲಿ ಹುಣ್ಣಿನ ಮೇಲೆ ಉಪ್ಪನ್ನಿರಿಸಿದಂತೆ

ಮತಸ್ಥಾಪಕರ ವಿಷಯವಾಗಿಯೂ ಹಲವು ಬಗೆಯ ತರ್ಕವಿತರ್ಕಗಳಿದ್ದಿವೆ. ಕೆಲವರು ಶ್ರೀಜಗದ್ಗುರು ರೇಣುಕಾದಿ ಪಂಚಾಚಾರ್ಯರೇ ವೀರಶೈವ ಧರ್ಮಸ್ಥಾಪಕರೆಂತಲೂ, ಮತ್ತೆ ಕೆಲವರು ಮಹಾನುಭಾವ ಶ್ರೀಬಸವಣ್ಣನವರೇ ಧರ್ಮಸ್ಥಾಪಕರೆಂತಲೂ, ತಮ್ಮ ತಮ್ಮ ವಾದಗಳನ್ನು ಸಮರ್ಥಿಸುತ್ತಿರುವರು. ಇತ್ತ ಈ ತಿಕ್ಕಾಟವು ನಡೆದಿದ್ದರೆ ಅತ್ತ ನಿಷ್ಕಲ್ಮಷ ಹೃದಯಿಗಳೂ, ಸತ್ಯ ಶೋಧಕರೂ ಆದ ಸಂಶೋಧಕ ವರ್ಗದ ವಿದ್ವಾಂಸರುಗಳು ತಮಗೆ ದೊರೆತ ಆಧಾರಗಳಿಂದ, ವೀರಶೈವ ಧರ್ಮವು ಅತ್ಯಂತ ಪ್ರಾಚೀನವೆಂದೂ, ಬಸವ ಮತ್ತು ರೇಣುಕಾದ್ಯಾಚಾರ್ಯರ ಕಾಲಕ್ಕಿಂತ ಮೊದಲೂ, ಲಿಂಗಾಂಗೀ ಧರ್ಮವು ವಿರಾಜಿಸುತ್ತಿದ್ದಿತೆಂತಲೂ, ಆದರೂ ಲಿಂಗಾಂಗೀ ಧರ್ಮವು ಯಾವ ಕಾಲದಲ್ಲಿ ಯಾರಿಂದ ಸ್ಥಾಪಿಸಲ್ಪಟ್ಟಿತೆಂಬುದಕ್ಕೆ ಬಲವಾದ ಯಾವ ಆಧಾರವೂ ಈ ವರೆಗೆ ದೊರೆತಿಲ್ಲವೆಂದೂ ಮುಂತಾದ ಅಭಿಪ್ರಾಯ ಗರ್ಭಿತವಾದ ತಮ್ಮ ಸಂಶೋಧನಾತ್ಮಕ ವಿಚಾರಗಳನ್ನು ಹೊರಗೆಡಹುತ್ತಲಿರುವರು.

ಮತಸ್ಥಾಪಕರಾರೇ ಆಗಿರಲಿ ಈಗಿನ ಜನಾಂಗವು ಮತಕ್ಕೆ ಶ್ರೇಷ್ಠತ್ವವನ್ನು ಕೊಡಬೇಕಾದರೆ ಮತಸ್ಥಾಪಕರ ಪ್ರಾಚೀನತೆ, ಅರ್ವಾಚೀನತೆಗಳಿಗೆ ಮಹತ್ವ ಕೊಡುವುದಿಲ್ಲ. ಆದರೆ ಮತದ ಧ್ಯೇಯಗಳ ಕಡೆಗೂ, ಧಾರ್ಮಿಕ ತತ್ವಗಳ ಅಂತರಾಳವನ್ನೊಳಹೊಕ್ಕು ವಿಮರ್ಶಿಸುವುದರಲ್ಲಿಯೂ ವಿಶೇಷವಾಗಿ ಶ್ರಮಿಸುತ್ತಿದೆ. ಮಾನವರು ಮೊದಲು ಕಪಿಗಳೆಂತಲೂ ಕ್ರಮಕ್ರಮವಾಗಿ ಯುಗಾಂತರಗಳ ಪರಿಶ್ರಮದಿಂದ ನಾಗರಿಕತೆಯನ್ನನುಸರಿಸಿದ ಸುಧಾರಣಾ ಸಂಸ್ಕರಣದಿಂದ ಮಾನವರು ಇಂದು ಜಗತ್ತಿನ ಮೇಲೆ ಈಶ್ವರ ಸೃಷ್ಟಿಯಲ್ಲೆಲ್ಲಾ ಶ್ರೇಷ್ಠತರಗತಿಗೆ ಸೇರಿದವರೆಂತಲೂ, ಇವರಲ್ಲಿ ಸುಧಾರಣಾ ಸಂಸ್ಕರಣವು ನಡೆದಂತೆಲ್ಲಾ ಧಾರ್ಮಿಕ ಭಾವನೆಯೂ, ಜ್ಞಾನವೃದ್ಧಿಯೂ, ಹೆಚ್ಚಿ ತನ್ಮೂಲಕ ಮಾನವರು ಇನ್ನೂ ಶ್ರೇಷ್ಠತರಗತಿಗೆ ಸೇರುವರೆಂತಲೂ ಮುಂತಾದ ಅಭಿಪ್ರಾಯದ ವಿಚಾರಗಳನ್ನು ಇಂದಿನ ವಿಜ್ಞಾನಶಾಸ್ತ್ರಜ್ಞರೂ, ಸಂಶೋಧಕ ವರ್ಗದ ವಿದ್ವಾಂಸರೂ ಜನತೆಯ ಮುಂದಿಟ್ಟಿರುವರಷ್ಟೆ. ಈ ತತ್ವದಂತೆ ನೋಡಿದರೆ, ಪ್ರಾಚೀನತೆಯು ಪ್ರಾಮುಖ್ಯವಾಗಿರದೆ ಈಗಲೂ, ಇನ್ನು ಮುಂದೆಯೂ, ನಡೆಯುವ ಸುಧಾರಣೆಗಳಿಗೂ, ಸುಧಾರಣಾ ಸಂಸ್ಕರಣ ಕರ್ತೃಗಳಿಗೂ ಪ್ರಾಮುಖ್ಯತೆಯು ದೊರೆಯುವುದಲ್ಲವೆ? ಆದುದರಿಂದ ಜಗತ್ತಿಗೇ ಪುರಾ

ತನವೆನಿಸುವ ಲಿಂಗಾಂಗೀ ಧರ್ಮಕ್ಕೆ ಶ್ರೀರೇಣುಕಾದ್ಯಾಚಾರ್ಯರು ಅಥವ ಶ್ರೀಬಸವಾದಿ ಪ್ರಮಥರೇ ಮೂಲ ಸ್ಥಾಪಕರೆಂದು ಹೆಮ್ಮೆಯಿಂದ ವಾದಿಸುವುದು ಸಮಾಜದ ಮೇಲೆ ಮತ್ತು ಪರಧರ್ಮೀಯರ ಮನಸ್ಸಿನ ಮೇಲೆ ಅಷ್ಟೇನೂ ಉತ್ತಮ ಪರಿಣಾಮಕಾರಿಯಾಗದು. ಆದುದರಿಂದ ಯಾವುದಾದರೊಂದು ಮತದ ಶ್ರೇಷ್ಠತೆಯನ್ನು ಪರಿಶೀಲಿಸಬೇಕಾದರೆ ಅದರ ಸ್ಥಾಪಕರ ಪ್ರಾಚೀನತೆಯ ವಿಚಾರವು ಅನವಶ್ಯಕವೆಂತಲೂ, ಆ ಮತ ತತ್ವದ ಅಂತರಾಳವನ್ನು ಒಳಹೊಕ್ಕು ವಿಮರ್ಶಿಸಿ ಅವಲೋಕನ ಮಾಡುವುದೇ ಮುಖ್ಯವೆಂತಲೂ ಆ ಮತದ ತತ್ವಗಳು ಸರ್ವಶ್ರೇಷ್ಠವೂ ಜನರ ಅವಲಂಬನೆಗೆ ಯೋಗ್ಯವೂ ಆಗಿ ಕಂಡು ಬಂದರೆ ಆ ಮತದ ಪುರಾತನತ್ವ ನೂತನತ್ವಗಳೇನೂ ಕೆಲಸಕ್ಕೆ ಬಾರದೆ ಆ ಮತವು ಸರ್ವಶ್ರೇಷ್ಠತ್ವವನ್ನು ಪಡೆಯುವುದೆಂಬುದು ನಿರ್ವಿವಾದವಲ್ಲವೇ ? ಇನ್ನು ಈ ಮತಸ್ಥಾಪಕರ ಕಿತ್ತಾಟದ ವಾದಗಾರರು ಒಬ್ಬೊಬ್ಬರು ಒಂದೊಂದು ವಿಧವಾಗಿ ತಮ್ಮ ವಾದಗಳನ್ನು ಸಮರ್ಥಿಸುತ್ತಿರುವರು. ಒಂದು ಪಕ್ಷದವರು ಶ್ರೀರೇಣುಕಾದ್ಯಾಚಾರ್ಯರು ಯುಗಯುಗಾಂತರಗಳಲ್ಲಿಯೂ ಬೇರೆ ಬೇರೆ ನಾಮಗಳಿಂದವತರಿಸಿ ಮತಸ್ಥಾಪಕರಾಗಿರುವರಾದುದರಿಂದ ಶ್ರೀಮದಾಚಾರ್ಯರೇ ಮತಸ್ಥಾಪಕರೆಂದು ವಾದಿಸಿದರೆ, ಮತ್ತೊಂದು ಪಕ್ಷವವರೂ ಸಹ ಶ್ರೀಮದ್ಬಸವಾದಿ ಪ್ರಮಥರೂ ಚತುರ್ಯುಗಗಳಲ್ಲಿಯೂ ಅನುಕ್ರಮವಾಗಿ ಸ್ಕಂದಗಣೇಶ, ನಿರಂಜನ ದೇವರು— ನೀಲಲೋಹಿತ ಗಣೇಶ, ನಿರ್ಮಾಯ ದೇವರು— ವೃಷಭ ಗಣೇಶ, ನಿಷ್ಕಲ ದೇವರು— ಬಸವ ಗಣೇಶ, ಪ್ರಭುದೇವರು— ಹೀಗೆ ಬೇರೆ ಬೇರೆ ನಾಮಗಳಿಂದವತರಿಸಿ ಯುಗಯುಗಾಂತರಗಳಲ್ಲಿಯೂ ಮತಸ್ಥಾಪನೆ ಮಾಡಿದುದರಿಂದ ಬಸವನೇ ಮತಸ್ಥಾಪಕನೆಂತಲೂ ವಾದಿಸುತ್ತಿರುವರು. ಈ ಇತ್ತಂಡವಾದವನ್ನು ಪೌರಾಣಿಕ ವಿಚಾರಗಳಲ್ಲಿ ಅತ್ಯಂತ ಶ್ರದ್ಧಾಭಕ್ತಿಗಳನ್ನುಳ್ಳ ಪುರಾಣ ಮತವಾದಿಗಳು ಮಾತ್ರ ನಂಬಿ ಯಾವುದಾದರೊಂದು ಪಕ್ಷದ ಮುಖಂಡ ವ್ಯಕ್ತಿಯ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಆ ಪಕ್ಷದ ಬೆಂಬಲಿಗರಂತೆ ಕಿತ್ತಾಡುತ್ತಿರುವರೇ ಹೊರ್ತು ವಿಮರ್ಶಕರೂ, ಜಿಜ್ಞಾಸು ಬುದ್ಧಿಯುಳ್ಳವರೂ ಈ ಬಗೆಯ ಪೌರಾಣಿಕ ವಿಚಾರಗಳಿಗೆ ಅಷ್ಟೇನೂ ಪ್ರಾಧಾನ್ಯತೆಯನ್ನು ಕೊಡರು. ಮತ್ತು ಸಮಾಜಕ್ಕೆ ಶ್ರೀಮದಾಚಾರ್ಯರು ಎಷ್ಟು ಪೂಜ್ಯರೋ ಶ್ರೀಮದ್ಬಸವಾದಿ ಪ್ರಮಥ ವೃಂದವೂ ಅಷ್ಟೇ ಪೂಜನೀಯವು. ವೀರಶೈವ ಧರ್ಮದ ಪುನರುದ್ಧರಣ ಕಾರ್ಯದಲ್ಲಿ ಶ್ರೀಮದ್ಬಸವಾದಿ

ಪ್ರಮಥ ವೃಂದವು ಎಷ್ಟು ಮಾತ್ರದ ವ್ಯವಸಾಯವನ್ನು ನಡೆಯಿಸಿತೋ ಶ್ರೀಮದಾಚಾರ್ಯ ವೃಂದವೂ ಅಷ್ಟೇ ಶ್ರಮಿಸಿದ್ದೀತು. ಅಷ್ಟೇ ಹೊರ್ತು ವೀರಶೈವ ಧರ್ಮದ ಆದಿ ಸ್ಥಾಪಕರೇ ಶ್ರೀಬಸವ, ಅಥವ, ಶ್ರೀಮದಾಚಾರ್ಯರೆಂಬುದನ್ನು ಗುಣಜ್ಞರೂ, ಜಿಜ್ಞಾಸುಗಳೂ, ವಿಮರ್ಶಕರೂ ಒಪ್ಪರು. ಈ ವಿಚಾರವಾಗಿ ಅಭಿಜ್ಞರನೇಕರು ತಮತಮಗೆ ತೋರುವ ಬಗೆಬಗೆಯ ಅಭಿಪ್ರಾಯಗಳನ್ನು ಪ್ರಕಟಿಸುತ್ತಿರುವರು. ಅವರಲ್ಲಿ ಸುಪ್ರಸಿದ್ಧ ಸ್ವಾಮಿ ವಿರೂಪಾಕ್ಷ ಒಡೆಯರ್, ಮಹಾಸ್ವಾಮಿಗಳವರು ಮೈಸೂರ ಸ್ಟಾರ್ ಪತ್ರಿಕೆಯಲ್ಲಿ ಬರೆಯುತ್ತಿರುವ ಲಿಂಗಧಾರಣ ಚಂದ್ರಿಕೆಯ ಕನ್ನಡ ಭಾಷಾಂತರದ ಎಂಟನೆಯ ಲೇಖಾಂಕದ ಒಂದು ಭಾಗವನ್ನಿಲ್ಲಿ ಎತ್ತಿ ಬರೆದಿದೆ.

"ಲಿಂಗಾಂಗೀ ಧರ್ಮದ ಪೂರ್ವಾಚಾರ್ಯರೆಲ್ಲರು "ಸರ್ವಲಿಂಗಂ ಸ್ಥಾಪಯತಿ" ಎಂಬಲ್ಲಿ ಪೂರ್ವದಲ್ಲಿ ಇಲ್ಲದ ಹೊಸದಾದ ಒಂದು ವಿಧಿಯನ್ನೇನೂ ತೋರಿಸಿರುವದಿಲ್ಲ. ಅರ್ಥಾತ್ ಲಿಂಗಧಾರಣೆಯು ಅನಾದಿ ಸಂಸಿದ್ಧವಾದ ಈಶ್ವರ ನಿರ್ಮಿತ ಧರ್ಮವೆಂದು ನಿರ್ಣಯಿಸಿರುವದಾಗಿ ಹೇಳಿರುವರು. ಹ್ಯಾಗೆಂದರೆ ಈಶ್ವರೋಕ್ತವಾದ "ಏತತ್ ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂಬ ವೇದ ಮಂತ್ರದಲ್ಲಿ ಯಾವನು ಅನನ್ಯ ಭಕ್ತಿಭಾವನೆಯಿಂದ ಆ ಶಿವಲಿಂಗವನ್ನು ಹಸ್ತದಲ್ಲಿ ಸದಾ ಧರಿಸಿ ಮಂತ್ರವಿಧಿ ಪೂರ್ವಕವಾಗಿ ಪೂಜಿಸುವನೋ ಆವನನ್ನು ಪವಿತ್ರ ಮಾಡುವದಾದ್ದರಿಂದ ಆ ಲಿಂಗಕ್ಕೆ "ಪವಿತ್ರ" ವೆಂಬ ಹೆಸರು ಬಂದಿದ್ದು ಅಂಥಾ ಪವಿತ್ರವಾದ ಲಿಂಗವನ್ನು ಸದಾ ಹಸ್ತ ಧರಿಸಬೇಕೆಂಬ "ಪಾಣಿಮಂತ್ರಂ ಪವಿತ್ರಂ" ಎಂಬ ವಿಶೇಷಣ ವಾಕ್ಯದಿಂದ ಹಸ್ತದಲ್ಲಿಯೇ ಇಟ್ಟು ಪೂಜಾ ಪ್ರತಿಪಾದನ ಮಾಡಿರುವ ವಿಧಿಯಿಂದಲೇ "ಸರ್ವ ಲಿಂಗಂ ಸ್ಥಾಪಯತಿ" ಎಂಬ ವಾಕ್ಯಕ್ಕೆ ಹಸ್ತದಲ್ಲಿಯೇ ಲಿಂಗಧಾರಣ ಪೂಜಾದಿಗಳು ಸಿದ್ಧವಾಗುವವು. ಅನ್ಯಥಾ ಭೂಮ್ಯಾದಿಗಳಲ್ಲಿ ಲಿಂಗವನಿಟ್ಟು ಪೂಜಿಸುವದು ವೇದವಾಕ್ಯಕ್ಕೆ ಸರ್ವಥಾ ವಿರೋಧವು. ಇದರಿಂದಲೇ ದೇಹದಲ್ಲಿ ಯಾವಾಗಲೂ ಲಿಂಗವನ್ನು ಧರಿಸಿಯೇ ತೀರಬೇಕೆಂಬ ಲಿಂಗಧಾರಣೆಯ ತ್ರೈಕಾಲಿಕತ್ವವು ಪ್ರಾಪ್ತವಾಗುವದೆಂಬದಾಗಿ ಅನೇಕ ಪೂರ್ವಾಚಾರ್ಯರೆಲ್ಲಾ ಹೇಳಿರುವರೆಂದು "ಪೂರ್ವಾಚಾರ್ಯ ಇತ್ಯೂಚುಃ" ಎಂಬದಾಗಿ ಲಿಂಗಧಾರಣ ಚಂದ್ರಿಕಾಕಾರರು

ವೀರಶೈವರಲ್ಲಿ ಅನಂತ ಪೂರ್ವಾಚಾರ್ಯರುಂಟೆಂದು ಹೇಳಿರುವರು. ಇದರಂತೆಯೇ ಶ್ರೀ ಕರಭಾಷ್ಯ ಕ್ರಿಯಾಸಾಗರಗಳಲ್ಲೆಲ್ಲಿಯೂ ಉಲ್ಲೇಖಿಸಲ್ಪಟ್ಟಿದೆ. ಮತಸ್ಥಾಪಕರ ವಿಚಾರದಲ್ಲಿ ಪರಮಪೂಜ್ಯ ಮಹಾಸ್ವಾಮಿಗಳವರ ಅಭಿಪ್ರಾಯವಿದು.

ಪೂಜ್ಯಪಾದರ ಅಭಿಪ್ರಾಯದಂತೆಯೂ ಸಹ ಶ್ರೀ ಜಗದ್ಗುರು ಪಂಚಾಚಾರ್ಯರು ಅಥವಾ ಶ್ರೀ ಬಸವಾದಿಗಳು ಮತದ ಆದಿಸ್ಥಾಪಕರಾಗದೆ ಲಿಂಗಾಂಗೀ ಧರ್ಮವು ಸಾಕ್ಷಾತ್ ಈಶ್ವರ ನಿರ್ಮಿತವಾದುದೆಂದೇ ತಿಳಿಯುವದಿಲ್ಲವೇ ? ಶ್ರೀ ಪಂಚಾಚಾರ್ಯರನ್ನೂ ಶ್ರೀ ಬಸವಾದಿಗಳನ್ನೂ ಕುರಿತು ಈ ವರೆಗೆ ಬರೆಯಲ್ಪಟ್ಟಿರುವ ಎಲ್ಲ ಗ್ರಂಥಗಳಲ್ಲಿಯೂ ಖಿಲವಾಗುತ್ತಿರುವ ವೀರಶೈವ ಧರ್ಮವನ್ನು ಪುನರುಜ್ಜೀವನಗೊಳಿಸುವದಕ್ಕಾಗಿಯೇ ಶ್ರೀ ರೇಣುಕಾದ್ಯಾಚಾರ್ಯರು ಜಗತ್ಪತಿಯಾದ ಪರಶಿವನಿಂದಾಜ್ಞಾಪಿತರಾಗಿ ಧರೆಯೊಳಗವತರಿಸಿದರೆಂತಲೂ, ಶ್ರೀ ಬಸವಾದಿಗಳೂ ಹೀಗೆಯೇ ಆಜ್ಞಾಪಿತರಾಗಿ ಧರೆಗೆ ಬಂದವರೆಂತಲೂ, ಬರೆದಿರುವದರಿಂದಲೂ ಮೇಲೆ ಕಂಡ ಶ್ರೀಗಳವರ ಅಭಿಪ್ರಾಯದಂತೆಯೂ, "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭೂತಲೇ, ತದಾತದಾವತಾರೋಽಯಂ ಗಣೇಶಸ್ಯ ಮಹೀಪತೀ" ಎಂಬುಕ್ತಿಯಂತೆ ಪಂಚಾಚಾರ್ಯ ಮತ್ತು ಬಸವಾದಿಗಳು ಈಶ್ವರ ನಿರ್ಮಿತವಾದೀ ಲಿಂಗಾಂಗಿ ಧರ್ಮದ ಜೀರ್ಣೋದ್ಧಾರಕರಾಗಿ ಅವತರಿಸಿದವರೇ ಹೊರತು ಧರ್ಮದ ಆದಿ ಸ್ಥಾಪಕರಲ್ಲವೆಂದು ನಿರ್ಧರವಾಗುವದಲ್ಲವೇ ?

ಇನ್ನು ಮೇಲೆ ಕಂಡ ಶ್ರೀಗಳು ಲಿಂಗಧಾರಣ ಚಂದ್ರಿಕೆಯ ಕನ್ನಡ ಭಾಷಾಂತರದಲ್ಲಿ ವಿವರಿಸಿರುವಂತೆ ಲಿಂಗಾಂಗೀ ಧರ್ಮಕ್ಕೆ ಅನಂತ ಪೂರ್ವಾಚಾರ್ಯರುಂಟೆಂಬುದನ್ನೂ ವೀರಶೈವ ಧರ್ಮಿಯರು ವಿವಾಹಾದಿ ಸಾಮಾಜಿಕ ಕರ್ಮಗಳಲ್ಲಿ ಶ್ರೀ ಪಂಚಾಚಾರ್ಯರ ಗೋತ್ರ ಸೂತ್ರಗಳನ್ನನುಸರಿಸುವದನ್ನೂ ನೋಡಿದರೆ ಲಿಂಗಾಂಗಿ ಧರ್ಮದ ಪೂರ್ವಾಚಾರ್ಯರೆಲ್ಲರೂ ಒಂದೆಡೆಯಲ್ಲಿ ಸೇರಿ, ಚರ್ಚಿಸಿ, ಭರತಖಂಡದ ತುಂಬಾ ಹಬ್ಬಿಕೊಂಡಿದ್ದ ಲಿಂಗಾಂಗೀ ಧರ್ಮವನ್ನು ಕಾಯ್ದುಕೊಳ್ಳಲೂ ಅದರ ಪ್ರಸಾರಣ ಕಾರ್ಯವನ್ನು ಕೈಗೊಳ್ಳಲೂ ಭಾರತದ ಮುಖ್ಯ ಮುಖ್ಯವಾದ ಮಧ್ಯವರ್ತಿ ಪ್ರಾಂತ್ಯಗಳಲ್ಲಿ ಒಂದೊಂದು ಧರ್ಮಾಚಾರ್ಯ ಪೀಠಗಳನ್ನು ನಿಯಮಿಸಿರುವರೆಂತಲೂ ಆಯಾ ಪ್ರಾಂತ್ಯಗಳ ವೀರಶೈವರು ತಮ್ಮ ತಮ್ಮ ಆಚಾರ್ಯ

ಸಂಪ್ರದಾಯವನ್ನನುಸರಿಸಿಯೇ ಸಮಾಜದ ಧಾರ್ಮಿಕ ಕಾರ್ಯಕಲಾಪ ಗಳನ್ನು ನೆರವೇರಿಸಿಕೊಳ್ಳಬೇಕೆಂತಲೂ ಭರತಖಂಡದ ಲಿಂಗಾಂಗಿ ಸಮಾ ಜದಲ್ಲಿ ಪರಸ್ಪರ ಸಹಕಾರಬುದ್ಧಿ ಐಕಮತ್ಯ ಭಾವನೆಗಳು ಸ್ಥಾಯಿಯಾಗಿ ನೆಲೆಗೊಳ್ಳಲೆಂಬುದ್ದೇಶದಿಂದ ಒಂದು ಪ್ರಾಂತದ ಆಚಾರ್ಯಪೀಠ ಸಂಪ್ರ ದಾಯಕರು ಮತ್ತೊಂದು ಪ್ರಾಂತ್ಯದ ಧರ್ಮಪೀಠದ ಅನುಯಾಯಿಗ ಳೊಡನೆ ಕೊಡುವ, ತೆಗೆದುಕೊಳ್ಳುವ ವ್ಯವಹಾರವನ್ನು ನಡೆಯಿಸಿ ಪರ ಸ್ಪರರು ಸಂಬಂಧವನ್ನಿಟ್ಟುಕೊಳ್ಳಬೇಕೆಂಬುದ್ದೇಶದಿಂದಲೂ ವೀರಶೈವ ಧರ್ಮಾಚಾರ್ಯ ಪೀಠಗಳು ಭರತಖಂಡದ ಮುಖ್ಯ ಮುಖ್ಯ ಸ್ಥಾನಗಳಲ್ಲಿ ಸ್ಥಾಪಿಸಲ್ಪಟ್ಟಿರುವವೆಂದು ನಿರ್ಧರವಾಗುವುದಿಲ್ಲವೇ ?

ಇನ್ನು ಯಾರಿಂದಲೂ ತಿಳಿಯಲಾಗದಷ್ಟು ಪ್ರಾಚೀನವೂ ಜಗತ್ತಿನ ಸಮಸ್ತ ಧರ್ಮಗ್ರಂಥಗಳಿಗಿಂತಲೂ ಶ್ರೇಷ್ಠವೆನಿಸಿದುದೂ, ಈಶ್ವರ ಪ್ರಣೀತ ವೆಂದರಿಯಲ್ಪಟ್ಟಿರುವುದೂ, ಆದ ಭಾರತೀಯ ವೇದ ಧರ್ಮವು ಹೇಗೆ ಜಗ ನ್ಮಾನ್ಯವಾಗಿ ಪ್ರಪಂಚದ ಸಮಸ್ತ ಧರ್ಮಗ್ರಂಥಗಳಿಗಿಂತಲೂ ಪುರಾತನ ವೆನ್ನಿಸಿಕೊಂಡಿದೆಯೋ, ಅಂತಹ ವೇದಪ್ರಣೀತವಾದೀ ನಮ್ಮ ಲಿಂಗಾಂಗಿ ಧರ್ಮವೂ ಸಹ ಈಶ್ವರ ನಿರ್ಮಿತವಾದುದೆಂಬುದೂ ಶ್ರೀ ರೇಣುಕಾದ್ಯಾ ಚಾರ್ಯರೂ, ಶ್ರೀ ಬಸವಾದಿ ಪ್ರಮಥರೂ ಲಿಂಗಾಂಗೀ ಧರ್ಮಕ್ಕೊದ ಗುತ್ತಿದ್ದ ಎಡರುಗಳನ್ನು ನಿವಾರಿಸಿ ಅದರ ಹೆಚ್ಚಳವನ್ನು ಜಗತ್ತಿನ ಮೇಲೆ ಹರಡಲು ಅವತರಿಸಿದ್ದವರೆಂಬುದೂ ನಿರ್ವಿವಾದವಲ್ಲವೇ ?

ಪೂಜ್ಯ ಶ್ರೀ ಪಂಚಾಚಾರ್ಯರ ಮತ್ತು ಶ್ರೀ ಬಸವಾದಿಗಳ ಪ್ರಾಚೀ ನತೆ, ಅರ್ವಾಚೀನತೆಗಳನ್ನು ಪ್ರಸ್ತಾಪಿಸುವುದು ಲೇಖಕನ ಉದ್ದೇಶವಲ್ಲ ವಾದ್ದರಿಂದ ಲಿಂಗಾಂಗಿ ಧರ್ಮದ ಸೃಷ್ಟಿಕರ್ತರಾರು ಎಂಬ ವಿಚಾರವಾಗಿ ಮನಸ್ಸಿನಲ್ಲಿ ಹುಟ್ಟಿದ ಸಂಶಯಗಳ ನಿವಾರಣೆಗಾಗಿ ಜಿಜ್ಞಾಸು ಭಾವನೆ ಯಿಂದ ಈ ಲೇಖವು ಬರೆಯಲ್ಪಟ್ಟಿರುವುದರಿಂದ ವಾಚಕರು ಇದರಲ್ಲಿ ತಮಗೆ ಸರಿದೋರದ ವಿಚಾರಗಳಿಗಾಗಿ ಕುಪಿತರಾಗದೆ ತಮ್ಮ ಸಮಂಜಸ ವಿಚಾರಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿ ಜಿಜ್ಞಾಸುಗಳೆಲ್ಲರ ಸಂಶಯ ನಿವಾ ರಣೆಗೊಳಿಸಲೆಂಬುದೇ ಲೇಖನದ ಮುಖ್ಯೋದ್ದೇಶವು.



## ಬಾಳ್ವಣ್ಣ

( ಕಲಾಸಂಘದ ಗುರುಬಸವ )

ಹದಗೊಳಿಸಿದ ನೆಲಕೊಳ್ಳೆಯ ಕಾಲವು
ಒದಗಿಸೆ ಮಳೆಯನು ಮೊಳೆಯಲಿ ಜೀವವು ॥೧॥
ಮೊಗ್ಗೆಯ ತೆರದಲಿ ಹಿಗ್ಗಲಿ ಬಾಲ್ಯವು
ಕಮ್ಮಲರಂತರಳಲಿ ನವ ಪ್ರಾಯವು ॥೨॥
ಕಾಯಾಗೆಸೆಯಲಿ ಪ್ರೌಢಾವಸ್ಥೆಯು
ಹಣ್ಣಿನೊಲೊಗೆಯಲಿ ವೃದ್ಧಾವಸ್ಥೆಯು ॥೩॥
ಪಾಡಾಗುತೆ ಕಳಿತಿಹ ಹಣ್ಣಿನೊಲು
ಕಳಚಲಿ ಜಗಹಿತಕೆನ್ನಯ ಬಾಳು ॥೪॥

## ತಿಳಿದು ನೋಡು !

ಕಣ್ಣುಗಳೆರಡು,
ಬಾಯ್ಮಾತನೊಂದು !
ಇಮ್ಮಡಿ ನೋಡೈ !
ಒಮ್ಮಡಿಯಾಡೈ ॥೧॥
ಕರ್ಣಗಳೆರಡು,
ಬಾಯ್ಮಾತನೊಂದು !
ಇಮ್ಮಡಿ ಕೇಳೈ !
ಒಮ್ಮಡಿ ಹೇಳೈ ॥೨॥
ಹಸ್ತಗಳೆರಡು,
ಬಾಯ್ಮಾತನೊಂದು !
ಇಮ್ಮಡಿ ಗಳಿಸೈ !
ಒಮ್ಮಡಿ ಬಳಸೈ ॥೩॥

# ಪೀಠಿಕೆ.

ಈಗಿನ ಗ್ರಂಥದಲ್ಲಿ ಪ್ರಭುದೇವ, ರೇವಣಸಿದ್ಧ, ಶಂಕರದಾಸಿಮಯ್ಯ ಮತ್ತು ಆದಯ್ಯ ಇವರ ರಗಳೆಗಳನ್ನು ಪ್ರಸಿದ್ಧಿಸಿದ್ದೇವೆ. ಇವುಗಳನ್ನು ಮಹಾಕವಿಯಾದ ಹರಿಹರನು ರಚಿಸಿದನೆಂದು ಪ್ರತೀತಿ ಇದೆ. ಈ ನಾಲ್ವರು ಮಹಾನುಭಾವರು ವೀರಶೈವ ಸಮಾಜದ ಆರಂಭಕಾಲದಲ್ಲಿ ಧರ್ಮೋನ್ನತಿಯ ಸಲುವಾಗಿ ಮಹತ್ತರ ಕಾರ್ಯಗಳನ್ನು ಮಾಡಿದವರಾದ್ದರಿಂದ ಅವರ ರಗಳೆಗಳನ್ನು ನಾವು ಈಗ ಪ್ರಸಿದ್ಧಿಸಿರುವೆವು. ಹರಿಹರನು ವೀರಶೈವ ಕವಿಗಳಲ್ಲಿ ಬಹಳ ಹಿಂದಿನವನು. ಆದ್ದರಿಂದ ಅವನು ಇವರ ವಿಷಯವಾಗಿ ಬರೆದ ಸಂಗತಿಗಳಿಗೆ ನಾವು ಹೆಚ್ಚಿಗೆ ಮಹತ್ವ ಕೊಡುವದು ಅವಶ್ಯವಾಗಿದೆ.

ಈ ರಗಳೆಗಳನ್ನು ನಾವು ತುಮಕೂರು ಜಿಲ್ಹೆಯಲ್ಲಿರುವ ದಂಡಿನಶಿವರದಲ್ಲಿರುವ ಶ್ರೀ ಮೂ. ಕಲ್ಲಯ್ಯನವರಲ್ಲಿ ದೊರೆದ ಪ್ರತಿ ಮತ್ತು ಶ್ರೀ ಮೂ. ಶಿವಮೂರ್ತಿ ಶಾಸ್ತ್ರಿಗಳು ಹುಲುಕುಂಟೆಮಠ ಕೀರ್ತನಕೇಸರಿ ಮು. ತುಮಕೂರು ಇವರು ದೊರಕಿಸಿದ ಪ್ರತಿ ಹೀಗೆ ಈ ಎರಡು ಪ್ರತಿಗಳ ಸಹಾಯದಿಂದ ಪ್ರಕಟಿಸಲಾಗಿದೆ. ಈ ಪ್ರಕಾರ ಈ ಕಾರ್ಯದಲ್ಲಿ ಈ ಉಭಯ ಮಹನೀಯರು ಸಹಾಯ ಮಾಡಿದ್ದಕ್ಕೆ ನಾವು ಅವರ ಆಭಾರಿಯಾಗಿದ್ದೇವೆ. ಪ್ರಭುದೇವರ ರಗಳೆಯನ್ನು ಸಿದ್ಧಪಡಿಸಲು ಶ್ರೀ ಮೂ. ಬುದ್ಧಯ್ಯಸ್ವಾಮಿ ಪುರಾಣಿಕಮಠ ಮು. ಧಾರವಾಡ ಇವರು ಓರಿಎಂಟಲ್ ಲೈಬ್ರರಿಯಲ್ಲಿಯ ಪ್ರತಿಯ ನಕಲನ್ನು ತರಿಸಿದ್ದು ಅದನ್ನು ನಮ್ಮ ಕಡೆಗೆ ಕಳಿಸಿದ್ದಕ್ಕೆ ನಾವು ಅವರ ಆಭಾರಿಯಾಗಿದ್ದೇವೆ.

**ಫ. ಗು. ಹಳಕಟ್ಟಿ.**
ಸಂಪಾದಕ.

# ಅನುಕ್ರಮಣಿಕೆ.

ಮೊದಲಾದ ಮಹಾಸ್ಥಾನಂಗಳಂ ಕಂಡು ಶಿವಭಕ್ತರಂ ನೋಡಲ್ಪಿಜ
ಯಂಗೈವುದೆಂದು ಪೇಳಲೊಡಂಬಟ್ಟು,

ಭಕ್ತಜನವೇಷ್ಟಿತಂ ಶಂಕರದಾಸಯ್ಯಂ ನರಸಿಂಹೋಪಸಂಹಾ
ರಕ್ಕೆ ಪೊರಮಡುವ ಶರಭದೇವನಂತೆ ಪೊರಮಟ್ಟು ನಡೆದುಬಂದು ಕಲ್ಯಾ
ಣಮಂ ಪುಗುತಪ್ಪಾಗಳ್ ಜಯಸಿಂಹರಾಯಂ ಹಸ್ತ್ಯಶ್ವರಥಪದಾತಿ
ಗಳಿಂ ಛತ್ರಚಾಮರ ಕಳಶ ಕನ್ನಡಿಗಳಿಂದಿದಿರ್ಗೊಳೆ ಪಟ್ಟಣಮಂ ಪೊಕ್ಕು
ಶರಣರ ನಿಳಯದೊಳು ಬಿಜಯಂಗೈದು ಶರಣಕುಲ ಸಂಭಾಷಿತ ಶಿವ
ಪುರಾಣ ಶಿವಕಥಾಮೃತ ರಸವೊಳವಗಾಹಂಗೈದು ವಿಕಸಿತ ಹೃದಯ
ಕಮಲನಾಗುತ್ತೊಂದೆರಡು ದಿನವಿರಲಲ್ಲಿಗೆ,

ಜಯಸಿಂಹರಾಯಂ ಕ್ಷುದ್ರಮಂತ್ರಾಳೋಚನೆಯಂ ಮಾಡಿ ಪ್ರಧಾ
ನಿಗಳಂ ಕೂಡಿಕೊಂಡು ಬಂದು ಶಂಕರ ದಾಸಯ್ಯಗಳಿಗೆ ಕೈಯ್ಯಂ
ಮುಗಿದು ದೇವ ಶಿವದೇವ ಸ್ಥಾನಂಗಳಂ ನೋಡಲ್ಪಿಜಯಂಗೈವುದೆಂದು
ತಾನೇಳ್ದು ಕೈಗೊಟ್ಟು ನಡೆತಂದು ಪಲವು ಲಿಂಗಂಗಳಂ ಭರದಿಂ ತೋರುತ್ತಂ
ಬಪ್ಪಾಗಳ್ಮುಂದೆ ಸುವರ್ಣ ಖಚಿತವಾಗಿ ಕೋಳಿಯ ಗೂಡಿನಂತಿರ್ಪ
ವಿಷ್ಣುಗೃಹದೊಳ್ನಿಂದು ದೇವಕಳಾಸಾನ್ನಿಧ್ಯವಹ ನೃಸಿಂಹ ಪ್ರತಿಮೆಯಂ
ನಿಮ್ಮ ನೊಸಲಗಣ್ಣಿಂ ನೋಡಲು ಘನ ಪ್ರತಿಷ್ಠೆಯಾದಪುದು, ನೋಡಿ
ಕರುಣಿಸಿಮೆನೆ ಶಂಕರ ದಾಸಯ್ಯಂಗಳಿರಿದಯ್ಯೋ ಶರಭದೇವರ ಕೆಯ್ಯೋ
ಳ್ಕಿಚ್ಚು ನೂರಾದಪನಡಿಗಡಿಗೆ ಕಾಡಲೇಕೆ? ನೋಡಿದ ಪ್ರತಿಮೆಗಳ್ಗಳಿ
ವಕ್ಕು. ನಿಮಗೆ ನಿರೊಧಂಬಕರ್ಮ. ಬೇಡ ಬೇಡಕಟ ಪ್ರಾಣಿಗಳ ಮನವ
ನೋಯಿಸಲೇಕಯ್ಯ ಬೇಡೆಂದು ಸುಮ್ಮನಿರೆ, ಮತ್ತೆ ಮೆಯ್ಯಿಕ್ಕಿ ನಿಮ್ಮ
ಡಿಗಳ್ನೋಡಿದೊಡಳಿವುಂಟೆ, ಸುಪ್ರತಿಷ್ಠಮಕ್ಕೆಂದಾಕ್ಷೇಪದಿಂ ಪರಿಹಾಸ್ಯವ
ನಾಡೆ, ಆ ಕಟಕಿಯಂ ಕೇಳಲಾರದೆ ಚಿತ್ತದೊಳ್ ಘೂರ್ಮಿಸಿ ಅಹಂಕಾ
ರದೊಳ್ಸಡಗರಿಸಿ ಬುದ್ಧಿಯೊಳ್ಪಲಿದು ಮನದೊಳ್ಮೊಳೆದು ಕೋಪದೊ
ಳ್ಮೊಸಂಕಿ ಅದ್ಭುತ ರಸದೊಳಂಕುರಿಸಿ ರೌದ್ರದೊಳ್ವೃದ್ಧಿಸಿ ಭಯಾನಕ
ದೊಳ್ಛಾವಿಸಿ ಗಂಭೀರದೊಳ್ಸುಳಿಘುಳಿಸಿ ವೀರದೊಳ್ಗಜರಿ ವಿಕ್ರಮದೊ
ಳ್ಗರ್ಜಿಸಿ ಬರಸಿಡಿಲ ಗವಸಣಿಕೆದೆಗೆವಂತೆ ಕಡೆಗಾಲದ ಕಿಚ್ಚಿನ ಮುಚ್ಚು
ಳ್ದೆರೆವಂತೆ ನಂದಿಯ ಮೊಗವಡವನೊಯ್ಯನೊಯ್ಯ ನೋಸರಿಸಲೊಡಂ
ಬಿಸಿಗಣ್ಣಿನೊಳಗೆ ಘುಳುಘುಳಿಸಿ ಸುಳಿದು ಥಗಿಲ್ಭಗಿಲೆಂದು ಭೋಂಕೆನೆ
ನೆಗೆದು ಮುಂಗಾಣಿಸಿ ಪರಿದು ನೃಸಿಂಹ ಪ್ರತಿಮೆಯಂ ನೆರೆದುರುಪೆ ನೃಕೇ

ಸರಿಯೆ ಘುರಿಘುರಿಲನುರಿದು ಬಾಯಿ ಹುರಿಹಂಚಾಗಿ ಕೋರೆದಾಡೆ ನೆರೆ ಬಿರಿದು ನಿಡುನಾಲಿಗೆ ಸೆಕ್ಕನೆ ಸೀಳ್ದು ಬಿಡುಗಣ್ಗಳೊಡೆದು ಹಾರಿ ಮೃಗವದನಂ ಭುಗಿಲೆಂದು ನಖದ ಕೈ ನೆರೆ ಸೀದು ಕರಿಮುರಿಯಾಗಿ ಸರ್ವಾಂಗಂಗಳರಳ್ದು ಫಳಫಳನೆ ಕಳಲ್ದು ಬಿರ್ಚಿ ಬೇರಾಗಿ ಅರಗಿನ ರೂಪನುರಿಯ ಕೊನೆ ಪತ್ತಿದಂತಾಗೆ ಬಾದುಮಯ್ಯನ ಮೆಯ್ಯಂಬರ ಪಿಡಿಲು ಪೊಡೆದಂತಾಗೆ ನೃಸಿಂಹ ಪ್ರತಿಮೆ ಧರೆಯ ಮೇಲುರುಳೆ,

ಜಯಸಿಂಹರಾಯನುಂ ವೈಷ್ಣವರುಂ ವಾದಿಗಳುಂ ಉರಿದು ಮೊಗಹುಗೆಡೆ ಪರಸಮಯಿಗಳ್ಮೊರೆಯಿಟ್ಟು ಹಲ್ಲಂ ಕಿರಿದು ಹುಲ್ಲಂ ಕರ್ಚಿ ದೇವ ರುದ್ರಾವತಾರನೆಂದರಿಯದೆ ಮರೆದು ಮರುಳಾದ ಸರ್ವಾಪರಾಧಿಗಳು ದೇವ ಉಗ್ರಲೋಚನನಂ ಮುಸುಂಕು ಮುಚ್ಚಳಿಕ್ಕೆಂದು ಚರಣದೊಳ್ ಸೈಗೆಡೆದು ಪಟ್ಟಿರ್ದೊರಲ್ದು ಮೇಲನರಿಯದ ಬಾಲಕರ್ಗೆ ಪಿರಿಯರನರಿಯದ ನರಗುರಿಗಳ್ಗೆ ನಿತ್ಯರನರಿಯದನಿತ್ಯರಂ ಕಾವುದೆಂದು ಕಿಂಕುರ್ವಾಣಮಂ ತೋರೆ ಶಂಕರದಾಸಯ್ಯಂ ಕರುಣಿಸಿ ನೋಡಿ ನಂದಿಯ ಮೊಗವಡಮಂ ಮುಸುಂಕಿ ಜಯಸಿಂಹರಾಯಂಗಭಯಮಂ ಕೊಟ್ಟು ನಿಜನಿಳಯಮಂ ಪೊಕ್ಕು ಪುರಹರನ ಪ್ರತಾಪರೂಪಂ ನರಸಿಂಹಪ್ರತಿಮಾವಿಭಾಕರನುಂ ನರಲೋಕ ವೀರಭದ್ರನುಂ ಸತ್ಯನಿಳಯಂ ಶರಣರೊಡಗೂಡಿ ಶಂಕರಾರೋಹಣಮನೋತರಂಗ ಸಮುಲ್ಲಸಿತ ಸಿತಹೃತ್ಕಮಲಂ ಕಲ್ಯಾಣದೊಳಿರೆಯಿರೆ.

## ದ್ವಿತೀಯಸ್ಥಲ ಸಮಾಪ್ತ.



## ತೃತೀಯಸ್ಥಲ.

**ವೃತ್ತ॥**— ಅರಿಯದೆ ಮೋಘವಹ್ನಿಗಿದಿರಾದ ನರಂಗೆ ಹುತಾಶನಾರ್ಚಿಗಂ
ತರಗೆಲೆಯಾಗುತಿರ್ದವೆನಿಸುಂ ಸಲೆ ಶಂಕರದಾಸಿಮಯ್ಯನಂ
ಮೆರೆದ ಮಹೇಶನಂ ನಿಟಲ ಲೋಚನನಂ ಶಿವತತ್ವರೂಪನಂ
ಮರೆಯದೆ ನಿಚ್ಚ ಲೋಲೈಸುತೊಪ್ಪಿದನಾ ಜಯಸಿಂಹ ಭೂಭುಜಂ ॥

### ರಗಳೆ

ಇಂತು ಜಯಸಿಂಹನೃಪನೋಲೈಸುತಿರಲಲ್ಲಿ
ಮುಂತೆ ಶಂಕರದಾಸಿಮಯ್ಯನೊಪ್ಪುತ್ತಲ್ಲಿ
ನೆನೆದನಾ ಜಡೆಯ ಶಂಕರದೇವನಂ ಪ್ರಿಯಂ
ನೆನೆವರಭಿಮತವೀವ ಕಾರುಣ್ಯವಾರ್ಧಿಯಂ
ನೆನೆದು ಪೊರಮಟ್ಟನಾ ಶಿವಭಕ್ತರೊಡನೆ ಬರೆ
ಮನವೊಸೆದು ಜಯಸಿಂಹರಾಯನೋಲೈಸಿ ಬರೆ
ಬಂದರಸನಂ ಶರಣ ಸಂದೋಹಮುಂ ಕಳಿಪಿ
ಸಂದಣಿಪ ಪರದೈವ ಕುಲದ ಗರ್ವವನಿಳಿಪಿ
ಶಿವದಾಸಿಗಳ್ಪಿಂತೆ ಪಿಂತೆ ನಡೆತರುತಿರಲು
ಶಿವನಿತ್ತ ವಕ್ರಪಾದಂ ಮುಂದೆ ಬರುತಿರಲು

ಶೈವಾಂಬುವಾರ್ಧಿವರ್ಧನ ವಿಮಲಚಂದ್ರಮಂ
ಶೈವ ಕುಲಗಗನ ಧವಳಿಪ ದಿನಪವಿಭ್ರಮಂ
ವೃಷಭೇಂದ್ರ ಮುದ್ರಿತ ಲಲಾಟೇಕ್ಷಣಾಂಕಿತಂ
ದಶದಿಗಂತ ಪ್ರಸಿದ್ಧ ಪ್ರತಾಪಾನ್ವಿತಂ
ಹರಭಕ್ತಿ ಭೂಷಣಂ ಪರಸಮಯ ಭೀಷಣಂ
ನರಹರಿ ಪ್ರತಿಮಾ ಮದ ಪ್ರಖರ ಶೋಷಣಂ
ನಡೆತಂದನಮ್ಮಮ್ಮ ನೆರೆ ಮನದ ನಿಷ್ಟಳಂ
ನಡೆತಂದನೆಲೆಲೆ ಪರಸಮಯ ಕೋಳಾಹಳಂ
ಬರುತಂ ಬಳಲ್ದು ಪೆಂಬೇರಿ ಪೊರಗೆಸೆದಿರ್ಪ
ನರರು ಕೊಂಡಾಡುವಾ ಮೈಲಾರನೊಪ್ಪಿರ್ಪ

ಮಾಳಿಗೆಯು ಕೆಲದ ಪಾಸಿನ ಮೇಲೆ ಕುಳ್ಳಿರ್ದು
ಮೈಳುಗನ ನಡೆಪುತಂ ತಾಗುತಂ ಕುಳ್ಳಿರ್ದು
ಸುಟ್ಟುರುಪದಿಂದೆನ್ನನಡಸಿದಂ ಬರ್ದುಕಿದೆಂ
ಮುಟ್ಟಬಾರದ ಮಹಿಮನಂಫ್ರಿಯುಂ ಸೋಂಕಿದೆಂ
ಎಂದಾಗಳಾ ಪ್ರತಿಮೆ ಬರ್ದುಕಿದೆನೆನುತಮಿರೆ
ನಿಂದವರು ಕರುಣಮಂ ಪಾರುತಂ ನಡುಗುತಿರೆ
ಅಂದು ಶಂಕರದಾಸಿಮಯ್ಯನೊಪ್ಪುತ್ತಮಿರೆ
ಮುಂದೆ ನಲವಿಂ ವಕ್ರಪಾದ ಕುಳ್ಳಿರುತಮಿರೆ

ಬಂದಳೋರ್ವಳ್ವನಿತೆ ದಂಡಿಗೆಯು ಪನ್ನಗದ
ಸಂದಣಿಪ ವೀರಧೀರರ ಸತಿಯುರೊತ್ತರದ
ಪೆಂಬೇರ ಪಟ್ಟಣದ ಸೊಬಗಿನಗ್ಗದ ವನಿತೆ
ಇಂಬಿನಿಂ ಮೆರೆವ ಮೈಲಾರದೇವಿ ರಾಗಿಸುತೆ
ಸಂದಣಿಪ ಹರುಷದಿಂದಂದಣಮನಿಳಿತರುತೆ
ಬಂದೊಳಗೆ ಪುಗಲಮ್ಮದಲ್ಲಿ ಪೊರಗೆಯೆ ನಿಲುತೆ
ಮುಂದೆ ಶಂಕರದಾಸಿಮಯ್ಯನಿರುತಿರೆ ಕಂಡು
ಎಂದಳಾ ಸತಿಯುವರ್ಗೆ ನೀವಿದಂ ಕೈಕೊಂಡು
ಅಯ್ಯ ಪೂದಂಬುಲವನೇರಿಸಿರೆ ಮೈಲಂಗೆ
ಕಯ್ಯಾರೆ ಮಾಡಿರೇ ವರವೀವ ಮೈಲಂಗೆ
ಎನುತಲ್ಲಿ ವೀಳೆಯುಮುಮಂ ಕರ್ಪುರಂಗಳಂ
ಕೊನೆಯುರಳ ಮಲ್ಲಿಗೆಯು ಸಂಪಿಗೆಯು ನನೆಗಳಂ
ನೀಡಿದಳ್ ಹರವೇಷವೆಂದರಿಯುದಾತಂಗೆ
ನೀಡಿದಳ್ ಹರಗೆ ಶಂಕರದಾಸಿಮಯ್ಯಂಗೆ
ಕೊಡಲೀಸಿಕೊಂಡವಂ ಶಂಕರಂಗರ್ಪಿಸುತೆ
ಮೃಡನ ಪ್ರಸಾದಮಂ ಲೀಲೆಯುಂ ಕೈಕೊಳುತೆ
ಗಂಧವಂ ಕಕ್ಷ ವಕ್ಷಸ್ಥಳಕೆ ಪೂಸುತಂ
ಬಂಧುರ ಪ್ರಸವಮಂ ಮಕುಟದೊಳ್ಸುತ್ತುತಂ
ವೀಳೆಯುಮನಲ್ಲಿ ನಲವಿಂದೆ ಕೈಕೊಳುತಮಿರೆ
ಮೈಳಯುಗೆ ಕೊಡದೆ ತಾನೇ ಭೋಗಿಸುತ್ತಮಿರೆ

ಕಂಡದಂ ರಮಣಿ ಮಿಗೆ ಕೋಪಿಸುತೆ ತಾಪಿಸುತೆ
ಕೊಂಡಿರಿಂತಿದನು ಮೈಲಾರಂಗೆ ನೇಮಿಸುತೆ
ಎಲೆಯಯ್ಯ ಮೈಲಂಗೆ ಕೊಡದೆ ನೀಂ ಕೊಂಬರೇ
ಒಲವಿಂದೆ ಪೂದಂಬುಲವನಿಕ್ಕದಿರ್ಪರೇ
ಎಂದು ಮೈಲಾದೇವಿ ನಿಂದಾಗ ಸಖಿಯರುಂ
ನೊಂದು ಮನವಳಿದು ಮೈಲೆಯಗಂಜುತೆಲ್ಲರುಂ
ಸಾರೆ ಮೈಲಯ್ಯನತ್ಯಗ್ರನೆಂದೆನುತಮಿರೆ
ಮೀರಿ ಶಂಕರದಾಸಿಮಯ್ಯನಂ ನುಡಿವುತಿರೆ

ನಸುನಗುತ್ತಲಿರ್ದಾ ಭವಿಗಳಂ ನೆರೆ ನೋಡಿ
ಒಸೆದು ಕಾರುಣ್ಯದಿಂ ಪ್ರತಿಮೆಯಂ ನೆರೆ ನೋಡಿ
ಪಿಡಿಯೊರ್ಮೆ ಬಾರೆಲವೊ ತಂಬುಲವನೆನುತಲ್ಲಿ
ಕೊಡಿ ಯೆನುತೆ ನಡುಗಿ ಮೈಯಿಕ್ಕುತಂ ಬೀಳ್ದಲ್ಲಿ
ಕೈಯೊಡ್ಡಿ ತಂಬುಲವ ಕೊಂಡು ಸವಿದಂ ನಲಿದು
ಮೆಯ್ಯೊಳಗೆ ಪೂಸಿಕೊಂಡಾನಂದದಿಂ ನಲಿದು
ನಿಂದಿರಲ್ಪಂದವರು ಬೆದರಿ ಬೆಬ್ಬಳಿವೋಗಿ
ಮುಂದುಗೆಟ್ಟರಿವುಗೆಟ್ಟತಿಭಯಾನತರಾಗಿ
ಎಡಹುತಂ ತಾಗುತಂ ನಡೆಗೊಂಡು ಪರಿತಂದು
ಕಡುಭೀತಿಯಿಂದೆ ಪುರಜನಕೆ ಪೇಳುತ್ತಂದು
ಏನೆಂದು ಪೇಳ್ವೆವಿದನೀ ಧರೆಗೆ ಪೊಸತಾಯ್ತು.
ಏನೆಂದು ನುಡಿದಪೆವು ಕಣ್ಗೆ ಕೌತುಕವಾಯ್ತು
ನಮ್ಮ ಮೈಲಾರದೇವಂಗೀಗಳಿಂತೋರ್ವ
ತಮ್ಮಡಿ ಬರುತ್ತಿರ್ದನತಿ ಗರ್ವದಿಂದೋರ್ವ
ನಿಂದು ತನ್ನಯ ಬಾಯ ತಂಬುಲವನಿಕ್ಕಿದಂ
ಕುಂದಿತ್ತು ಮೈಲುಗನ ಸಾಮರ್ಥ್ಯ ಸಂಪದಂ
ಮೈಲಾರನೆಲ್ಲರೆಂಜಲ್ ತಿಂಬ ತೆರನಾಯ್ತು
ಮೈಲಾರನೊಳಗೆ ದೂಷಣೆಯೆಂಬುದಿಂತಾಯ್ತು
ಇನ್ನೇಕೆ ಮೈಲಾರನೊಪ್ಪದಿಂ ಪೂಜಿಪುದು
ಇನ್ನೇಕೆ ಹಾಳಾದ ದೂಳವಿಯ ಪೂಜಿಪುದು

ಎನೆ ಕೇಳ್ದು ಪೆಂಬೇರ ಜನವೆಲ್ಲ ನಡೆತಂದು
ತಮತಮಗೆ ಚೋದ್ಯಮಂ ನೋಡಲೆಂದೈತಂದು
ಅರರೆ ಶಂಕರದಾಸಿಮಯ್ಯನೊಲವಿಂದಂದು
ಇರದೆ ಪೋಗಲ್ವೇಳ್ಕು ಮೆಂದಾಗ ಮನಟಂದು
ಅಲ್ಲಿಂದೆ ಪೋಗಲೆಂದಾಗಲುದ್ಯೋಗಿಸುತೆ
ಮೆಲ್ಲನೇಳುತ್ತೆ ಹರನಂ ನೆನೆದು ಸಾಗಿಸುತೆ
ಕೊಡೆವಿಡಿದು ಬಾರೆಂದು ಕರುಣದಿಂ ಬೆಸಸುತಿರೆ
ನಡೆತರುತೆ ವಕ್ರಪಾದಂಗೆ ಬೆಸಸುತ್ತಮಿರೆ
ತನಗೆ ಬೆಸಸಿದರೆಂದು ಮೈಲಾರನೊಲ್ದೇಳ್ದು
ಮನದೊಳಗೆ ಬದುಂಕಿದನೆನುತ್ತೆ ಸುಖಮಂ ತಾಳ್ದು
ನಡೆದು ಶಂಕರದಾಸಿಮಯ್ಯಂಗಳೊಡನೊಡನೆ
ಕಡು ಭಕ್ತ ಮೈಲಾರ ಕೊಡೆವಿಡಿದು ಬರಲೊಡನೆ
ಲೋಕವರ್ಚಿಸುವ ಮೈಲಾರ ಕೊಡೆಯಂ ಪಿಡಿಯೆ
ಆಕಸ್ಮಿತಂ ತಾನೆನುತ್ತೆಲ್ಲರುಂ ನುಡಿಯೆ
ಆ ಪೋದನಾ ಪೋದನಕಟಕಟ ಮೈಲಾರ
ಆ ಪಿಡಿದನಾ ಕೊಡೆಯನಯ್ಯಯ್ಯೊ ಮೈಲಾರ
ಎಂದಲ್ಲಿ ಜನರೆಲ್ಲ ಬಾಯಳಿದು ಬರುತಮಿರೆ
ನೊಂದು ಮೈಗುಂದಿ ಮಿಗೆ ಮರುಗಿ ಮೊರೆಯಿಡುತಮಿರೆ
ಪರ ಸಮಯಿಗಳ್ಕಸಿಯೆ ಪರ ದೈವವಲ್ಲಾಡೆ
ನೆರೆದ ಜನವೆಲ್ಲವದ್ಭುತದೊಳುಂ ಮುಳುಗಾಡೆ
ನಡೆತಂದನಪ್ರತಿಮನಲ್ಲಿ ಕಿರಿದಂತರಂ
ಕೊಡೆಯ ನೆಳಲೊಳಗೆ ಮೃಡಮೂರ್ತಿ ಬರುತಿರೆ ಕರಂ
ಮೈಲಾರನಂ ಬಿಡುವುದೆಮಗೆ ಶಶಿಶೇಖರಾ
ಮೈಲಾರನಂ ಬಿಡುವುದೆಮಗೆ ಕರುಣಾಕರಾ
ಎಂಬ ಕಿಂಕುರ್ವಾಣದವರುಮಂ ಮನಂಗೊಂಡು
ಬೆಂಬಳಿಯೊಳೈತರ್ಪ ಜನದ ಬರವಂ ಕಂಡು
ತಿರುಗಿ ಮೈಲಾರನಂ ನೋಡಿ ನೀನೇಂ ಬಂದೆ
ಪುರಜನಂ ಮರುಗುತಿರಲೇಕೆ ಮೈಲುಗ ಬಂದೆ
ಕೊಡು ಕೊಡೆಯನಾ ವಕ್ರಪಾದಂಗೆನುತ್ತಮಿರೆ
ಕೊಡಲಾರದಲ್ಲಿ ಮೈಲುಗ ನುಡಿದನೊಪ್ಪುತಿರೆ

ದೇವ ಈ ಕೊಡೆ ಎನಗಿರಲ್ಬೇಕು ಶಂಕರಾ
ದೇವ ಈ ಕೊಡೆಯ ನಾಂ ಕೊಡೆ ಬಿಡೆಂ ಶಂಕರಾ
ಕೊಡೆವಿಡಿದು ಪೊಡವಿಯೊಳು ರಂಜಿಸುವೆನೆಲೆ ದೇವ
ಕೊಡೆಯಿರಲ್ಭೂತಳಂ ಬೆಸಕೈವುದೆಲೆ ದೇವ
ಕಡು ಕರುಣದಿಂ ನೋಡಿ ಕೊಡೆವಿಡಿದು ನಿಲ್ಲೆಂದು
ಪೊಡವಿಗೀ ಕೊಡೆಯಿಂದೆ ಪೆಸರಕ್ಕೆ ನಿನಗೆಂದು
ಇಂತು ಮೈಲಾರನಂ ಕೊಡೆವಿಡಿಸಿ ನೋಡುತಂ
ಅಂತ್ರಕಾಂತಕತನುಜನತಿ ಮುದದೊಳೊಪ್ಪುತಂ

ತಿರುಗಿ ಕಿರಿದಂತರಂ ನಡೆತರುತ್ತಿರ್ಪಲ್ಲಿ
ಉರವಣಿಸಿ ಭೈರವಂ ಸಂಭ್ರಮದೊಳಿರಲಲ್ಲಿ
ಪಿಡಿದ ಡಮರುಗದ ಕಡು ಹೊಯ್ಲು ಸಂಭ್ರಮಗಳಿಂ
ನಡೆದು ಕೂಳಂ ಬಂದು ತಿರುಗುತಿರ್ಪವರ್ಗಳಿಂ
ತಲೆಗೆದರಿ ಯಲಗಿನಿಂ ತಿವಿದುಕೊಳುತಿರ್ಪರಿಂ
ನೆಲದಿ ನಿಂದಿರ್ದ ಮಾಮುಸಕದಿಂ ಕುಣಿವರಿಂ
ಎಸೆದಿರ್ದ ಭೈರವನ ನೆರವಿಯಂ ನೆರೆ ಕಂಡು
ಅಸದಳದ ಶಿವಭಾರವಲ್ಲಿರ್ಪುದಂ ಕಂಡು
ಶಿವಭಾರವೇಕೆ ತ್ರಿಶೂಲಿ ತಾನಿವರ್ಗೇಕೆ
ಶಿವನ ಭಕ್ತರ್ಗಲ್ಲದನ್ಯರ್ಗೆ ತಾನೇಕೆ
ಎಂಬ ನುಡಿಯಿಂ ಮುನ್ನ ಜನದ ಎದೆ ಜಗ್ಗೆನಲು
ಇಂಬರಿದು ಭೈರವಂ ಪರಿತಂದು ಭೋಂಕೆನಲು
ಶಿವಭಾರಮಂ ಪೊಳ್ತು ಪದತಳಕ್ಕೆರಗುತಿರೆ
ಶಿವಮೂರ್ತಿ ನೀನೆನಗೆ ಕರುಣಿಪುದೆನುತ್ತಮಿರೆ
ಕರುಣದಿಂ ಭೈರವಂಗಿತ್ತು ಶಿವಭಾರಮಂ
ಧರೆ ಪೊಗಳುತಿರೆ ಕೊಟ್ಟ ಕಿಂಕರಾಕಾರಮಂ

ತಿರುಗಿದಂ ನವಿಲೆಯತ್ತಲು ಶಂಕರಧ್ಯಾನಿ
ಬರುತಿರ್ದನಮ್ಮಮ್ಮನತುಳ ಬಲ ಕಡುಮಾನಿ
ಶಿವನಲ್ಲಿ ನೊಸಲಕಣ್ಣಂ ಪಡೆದ ಸಂಪದಂ
ತವನಿಧಿಯನೊಳಕೊಂಡು ಕೊಟ್ಟ ಮಹಿಮಾಸ್ಪದಂ

ಉಗ್ರ ನರಸಿಂಹನಂ ಭಂಗಿಸಿದ ಭೀಕರಂ
ಉಗ್ರಲೋಚನದ ಭಾಳಸ್ಥಳ ಭಯಂಕರಂ
ಪೆಂಬೇರ ವೈಲನಂ ಕೊಡೆವಿಡಿಸಿದುನ್ನತಂ
ಬೆಂಬಿಡದೆ ಭೈರವನನುದ್ಧರಿಸಿದುನ್ನತಂ
ಪರದೈವಸಂತಾನ ಘನಪವನವಿಸ್ತಾರಂ
ಪರಸಮಯ ತಿಮಿರ ಕುಲಕಮನೀಯ ಭಾಸ್ಕರಂ
ಅರರೆ ಷಡ್ದರ್ಶನದ ಗರ್ವಸರ್ವಸ್ವಹಂ
ನರರ ದುರಿತೋಷ್ಣಕಾನನ ದಾವದರ್ಪಹಂ
ಆಹ ನಂದಿಯ ಮೊಗವಡದ ಮಹಿಮನೈತರಲು
ಸಾಹಸಾಭರಣನೋಲ್ದುರುತ್ತ ನಡೆತರಲು

ಕಂಡಿದಿರ್ಗೊಂಡರಾ ನವಿಲೆಯ ಮಹಾಗಣಂ
ಚಂಡ ಕರದಂಡಧರ ಹರನ ನಚ್ಚಿನ ಗಣಂ
ಸಿಡಿಲನಿದಿರ್ಗೊಳ್ವ ಜೀಮೂತ ಸಂಕುಲದಂತೆ
ಕಡುಗಾಯ್ದು ಬಿಸಿಗಣ್ಣನಿದಿರ್ಗೊಳ್ವ ನೊಸಲಂತೆ
ದಿನಕರನನಿದಿರ್ಗೊಳ್ವ ಪೂರ್ವಾದ್ರಿಯಂದದಿಂ
ಅನುಪಮನನಿದಿರ್ಗೊಳ್ಳುತೆಲ್ಲರಾನಂದದಿಂ
ಇದಿರ್ಗೊಂಡು ಬಂದು ಶಂಕರದೇವರಂ ಕಂಡು
ಸದಮಲನನೀಶ್ವರನನಪ್ರತಿಮನಂ ಕಂಡು
ನಳನಳಿಪ ಕೆಂಜೆಡೆಯ ಕಮನೀಯನಂ ಕಂಡು
ತೊಳತೊಳಪ ಸುಲಿಪಲ್ಲ ಸತ್ಯಮಯನಂ ಕಂಡು
ಪರಮಗುರುವಂ ಶರಣಕಲ್ಪತರುವಂ ಕಂಡು
ವರಬಂಧುವಂ ಭಕ್ತಸುಖಸಿಂಧುವಂ ಕಂಡು
ಜಡೆಯಶಂಕರದೇವರಂ ಹರುಷದಿಂ ಕಂಡು
ಬಿಗಿದಪ್ಪಿ ತೆಗೆದಪ್ಪಿ ಕಟ್ಟಕ್ಕರಿಂದಪ್ಪಿ
ಆಗಿವತಿ ಸ್ನೇಹರಸದಿಂದಗಲದಂತಪ್ಪಿ
ಮುಂಡಾಡಿ ಕೊಂಡಾಡಿ ತಳ್ಕೈಸಿ ಕುಣಿದಾಡಿ
ಕೊಂಡಾಡಿ ಕೊಂಡಾಡಿ ಭಕ್ತಿಯಿಂ ಮಣಿದಾಡಿ
ಪೋದ ಬಂದಾದ ವೃತ್ತಾಂತಮಂ ಬಿನ್ನೈಸಿ
ಸಾದರಂ ಮಿಗೆ ಲಲ್ಲೆಗರೆದು ನೆರೆ ಬೋಳೈಸಿ

ಗುಂಜಾದಿ ನವವಿಪಕ್ರಿಯೆಗಳಂ ಮೇಳೈಸಿ
ರಂಜಿಸಲ್ ಶಂಕರಂಗಿತ್ತಿತ್ತು ಹಾರೈಸಿ
ಸತ್ಯಪ್ರಸಾದಮಂ ಮನವಾರೆ ಕೈಕೊಂಡು
ನಿತ್ಯನಾನಂದದಿಂ ಶಂಭುವಂ ಬೀಳ್ಕೊಂಡು
ನಡೆತಂದು ನಿಜನಿಳಯಮಂ ಪೊಕ್ಕು ರಾಗದಿಂ
ಜಡೆಯು ಶಂಕರನ ಚರಣಧ್ಯಾನ ಯೋಗದಿಂ
ಇರುತಮಿರಲಂದಾಗ ವಕ್ರಪಾದಂ ಪೋಗಿ

ಪುರದೊಳಗೆ ಧಾನ್ಯಕ್ಕೆ ಪೋಗುತಮಿರೆ ಪಿರಿದಾಗಿ
ತಂದ ಧಾನ್ಯಂ ಪೆರ್ಚಿ ರಾಶಿಯಾಗಿರೆ ಕಂಡು
ಅಂದು ಶಂಕರ ದಾಸಿಮಯ್ಯಂ ಮನಂಗೊಂಡು
ಗಣಪರ್ವಮಂ ಮಾಡಲೆಂದು ಮನದೊಳ್ಬಗೆದು
ತ್ರಿಣಯನಂ ವಕ್ರಪಾದನನಳ್ಕರಿಂ ಕರೆದು
ಸುರಿದಿರ್ದ ಧಾನ್ಯಮಂ ಕೊಟ್ಟಣವ ಹಾಯ್ಕಿಸೆನೆ
ಇರದೆ ಶಂಕರಪುರದ ಮನೆಗಳೊಳ್ ಸುರಿವುದೆನೆ
ಕರವೊಪ್ಪಿತೆಂದಲ್ಲಿ ವಕ್ರಪಾದಂ ಬಂದು
ಭರದೊಳೈತಂದಲ್ಲಿ ಧಾನ್ಯಂಗಳಂ ತಂದು
ಸುರಿಯಲ್ಕಿದೇನೆನಲು ಕೊಟ್ಟಣವ ಮಿದಿವುದೆನೆ
ಅರಿದಿದಿಂದೆಲೆ ಮಾರಿಕವ್ವೆ ತಾಂ ಮಿದಿವಳೆನೆ

ಕೇಳ್ದಲ್ಲಿ ವಕ್ರಪಾದಂ ತಿರುಗಿ ಪರಿತಂದು
ಆಳ್ದ ಅವಧಾರೆಂದು ಮೆಯ್ಯಿಕ್ಕುತಂ ನಿಂದು
ಒಂದು ಮನೆಯೊಳಗೆ ಬತ್ತವನೆಯ್ದೆ ಸುರಿವಲ್ಲಿ
ಎಂದಳೊಕ್ಕಲಿತಿ ಯೋರ್ವಳ್ಳಿಂದು ತಾನಲ್ಲಿ
ಮಿದಿಯಲಾರೆಂ ಮಾರಿಕವ್ವೆ ಮಿದಿಯಲ್ಕೆಂದು
ಒದರಿ ನುಡಿಯಲ್ಕೆ ಆ ಬತ್ತವಂ ತಂದಿಂದು
ಎಂದೊಡಾಹಾ ನಮಗೆ ಬುದ್ಧಿಗೊಟ್ಟಳ್ಮಗನೆ
ತಂದು ಧಾನ್ಯವನೆಲ್ಲವಂ ಬೇಗದಿಂ ಮಗನೆ
ಊರ ಪೊರಗಣ ಮಾರಿ ಮಸಣಿಗಳ ಗುಡಿಗಳಿಗೆ
ಆರೈದು ಧಾನ್ಯಮಂ ರಾಸಿ ಮಾಡಿಂದು ಮಿಗೆ

ಒಳ್ಳಿತಾದುದು ವಕ್ರವಾದ ಪೋಗೆಂದೆನಲು
ಒಳ್ಳಿತೆನೆ ಧಾನ್ಯಮಂ ರಾಶಿಮಾಡೆಂದೆನಲು

ನಡೆದು ಹೆಡಿಗೆಯ ಧಾನ್ಯಮಂ ಬಂಡಿಯಂ ನೋಡೆ
ಎಡೆವಿಡದೆ ಪುರಜನಂ ಹಾದಿಗೊಂಡುದು ನೋಡೆ
ಮಾರಿ ಮಸಣಿಗಳು ಮಾಳಿಗೆಯ ಮುಂದಿರೆ ಕಂಡು
ಧಾರುಣಿಗೆ ರಂಜಿಸುವ ಬೆಟ್ಟದಂತಿರೆ ಕಂಡು
ನಡೆತಂದು ಮಾರಿಮಸಣಿಯರೆಳ್ದು ಭರದಿಂದೆ
ಕಡು ಭೀತಿ ಎಡೆಗೊಂಡು ಬಂದು ಭರವಸದಿಂದೆ
ಅಕ್ಕಿ ಯಾಗದೊಡೆ ಪೊಡೆದುರುಪಿ ಕಳೆವಂ ನಾಳೆ
ಮುಕ್ಕಣ್ಣನವತಾರವರಿದರಿದು ನೀಂ ಕೇಳೆ
ನರಸಿಂಹನಂ ನೊಸಲಕಣ್ಣಿಂದೆ ಸೀಳಿದಂ
ಮರುಳು ಶಂಕರದಾಸ ಧರೆಗೆಲ್ಲ ಬಲ್ಲಿದಂ
ಎಂದೀರ್ವರುಂ ಮರುಳ ತಂಡಂಗಳಂ ಕರೆದು
ಬಂದು ಪುರದೊನಕೆ ಮೊರಗಳನೆಲ್ಲವಂ ತಂದು
ಮಾರಿಮಸಣೆಗಳೊನಕೆ ಪಿಡಿದು ಭೂತಂ ಸಹಿತೆ
ಮಾರಾರಿ ಯಣುಗನಂ ಪಾಡಿಸುತೆ ಕೇರಿಸುತೆ
ಮಿದಿದರಾ ರಾತ್ರಿಯೊಳ್ಧರೆ ಮೊಳಗುವಂದದಿಂ
ಮಿದಿದರೆಲ್ಲಾ ಭೂತಮುಂ ಕೂಡಿ ಚಂದದಿಂ
ಅಕ್ಕಿಯಂ ನುಚ್ಚು ತೌಡಂ ಕೇರುತಂ ಬೇರೆ
ಲೆಕ್ಕದಿಂ ರಾಶಿ ಮಾಡುತ್ತೆ ನಲವಿಂ ಬೇರೆ
ಇರಿಸೆ ಶಂಕರದಾಸಿಮಯ್ಯನತ್ತಲ್ನೋಡಿ

ತರಣಿಯುದಯಿಸೆ ಕಿರಣ ಪರ್ವತಾಗ್ರದಿ ಮೂಡಿ
ನೊಸಲಕಣ್ಣಾತನಾನಂದದಿಂ ಬರುತಮಿರೆ
ಅಸಮಪ್ರತಾಪನಿಧಿ ಕರುಣದಿಂ ಬರುತಮಿರೆ
ಮುಂದೊಪ್ಪಿ ಮಾರಿಮಸಣಿಗಳಿರ್ದರಂತಲ್ಲಿ
ಒಂದೊಂದು ಮರದಲ್ಲಿ ಕೇರುತಂ ಇರಲಲ್ಲಿ
ನರೆಮಂಡೆ ಬಿಚ್ಚೋಲೆ ನಸುಮಾಸಿದುಡಿಗೆಯಿಂ
ತೆರೆಗೊಂಡ ಮೆಯ್ಯ ನುಣ್ಪುರಿಸಿನದ ಗಾಡಿಯಿಂ
ಮೊಗದೊಳುಂ ದಾಡೆಯೋಳ್ಪತ್ತಿರ್ದ ತೌಡಿನಿಂ
ಸೊಗಯಿಸಿರೆ ತೊತ್ತು ನಡೆವಂತೆ ಮಿಗೆ ಚಲ್ವಿನಿಂ

ಇರ್ದರ್ ಶಂಕರದಾಸಿಮಯ್ಯನಂ ನಡೆ ನೋಡಿ
ಸಾರ್ದರ್ ಭಯಭಕ್ತಿಯಿಂ ಸೈಗೆಡೆದು ಕೊಂಡಾಡಿ
ನಿಂದಿರ್ದರ್ ಹೆರೆಸಾರ್ದರ್ ಕೈಮುಗಿದು ಪೊಡೆವಟ್ಟು
ಇಂದುಧರ ಬೆಸಸೆಲ್ಲವಾದುದಂ ಮುಂದಿಟ್ಟು
ನೋಡು ದೇವಾ ಅಕ್ಕಿ ಇವು ನುಚ್ಚು ತೌಡೆಂದು
ಕೂಡೆ ತೋರುತ್ತಮಿರೆ ಲೇಸು ಮಾಡಿದಿರೆಂದು
ಕರುಣಿಸುತ್ತಕ್ಕಿಯಂ ಶಿವನಿಳಯದೊಳಗಿರಿಸಿ
ಒರೆ ನುಚ್ಚನಾ ಮಾರಿ ಮಸಣಿಯರ್ಗಪ್ಪೈಸಿ
ಒಂದು ಗಣಪರ್ವವನಗುರ್ವಿನಿಂ ಮಾಡಿದಂ
ನಿಂದು ಶರಣಾವಳಿಗೆ ತುಷ್ಟಿಯಂ ಮಾಡಿದಂ
ಚಾರುತರ ಗಿರಿಗಳೊಳ್ಮೇರುಗಿರಿಯಪ್ಪಂತೆ
ಸುರುಚಿರ ನವಗ್ರಹದ ನಡುವೆ ರವಿ ಇರ್ಪಂತೆ
ನಡುವೆ ಶಂಕರದಾಸಿಮಯ್ಯನೊಪ್ಪುತ್ತಮಿರೆ
ಮೃಡಮೂರ್ತಿಯಾಗಿ ಸಲೆ ನೆಲೆ ಭುವನಕೊಪ್ಪುತಿರೆ
ಇಂತು ಶರಣರ ನಡುವೆಯನವರತಲೊಪ್ಪುತಂ
ಕಂತುಮದಮರ್ದನನ ಭಾವಸುಮನಪ್ಪುತಂ

ಇರಲಲ್ಲಿ ಶಿವದಾಸಿಗಳ್ಗೆ ಗರ್ಭಂ ಮೂಡೆ
ಪರಮ ಶೈವ ಜ್ಞಾನದುರುಳಿ ಬಲಿಯಿತು ಕೂಡೆ
ಪೊರಗೆ ಲಾವಣ್ಯರಸಮಂಗದೊಳಗೋಲಾಡೆ
ಮೆರೆವ ಗರ್ಭದ ಪಕ್ವ ಸೂಚನೆ ಕರಂ ಮೂಡೆ
ನವಮಾಸಮಾದುದಾ ಶಿವದಾಸಿಗಳ್ಗಲ್ಲಿ
ಅವಯವಂಗಳ್ಸಡಿಲಿದುಚ್ಚವಮನುಗಲಲ್ಲಿ
ಪುಟ್ಟಿದಂ ಕಂದಂ ಶಿವಜ್ಞಾನದಂದಮೆನೆ
ಮೆಟ್ಟಿದಂ ಮಾಯೆಯಂ ತನಗೆ ನಿತ್ಯತ್ವಮೆನೆ
ಆಗಳಾ ಕಂದನಂ ಕಂಡು ಮಿಗೆ ನಸುನಗುತೆ
ರಾಗದಿಂ ಜಡೆಯ ಶಂಕರದೇವರಂ ಪೊಗುತೆ
ಕಂದನಂ ನೆರೆ ನೋಡಿ ಜಾತಕರ್ಮವ ಮಾಡಿ
ಸಂದ ಸದ್ಯೋಜಾತನೆಂಬ ಪೆಸರಂ ಮಾಡಿ
ಜಡೆಯ ಶಂಕರದೇವರ ಪ್ರಸಾದವನಿಕ್ಕಿ

ಒಡನೆ ಶಿವಭಕ್ತಿಯುಂ ಬಾಯ್ವೆಣ್ಣೆಯುಮನಿಕ್ಕಿ
ಸಲಹುತಿರೆ ನೆರೆದ ನಾಲ್ಕೈದು ಸಂವತ್ಸರಂ

ನೆಲಿಸಲ್ಕೆ ಗರ್ಭಾಷ್ಟಮಂ ದ್ವಿಜಾಗಮಕರಂ
ಕಂಡು ಶಂಕರದಾಸಿಮಯ್ಯನತಿ ಮಹಿಮೆಯಿಂ
ಖಂಡೆಂದುಮೌಲಿಯಲ್ಲಿಗೆ ಬಂದ ನೊಲ್ಮೆಯಿಂ
ಸಕಲ ಮಾಹೇಶ್ವರರ ಪ್ರಕರಮಂ ಕರೆಯಿಸುತೆ
ಅಕಳಂಕ ಚಿತ್ತನಾನಂದದಿಂ ಕರೆಯಿಸುತೆ
ಜಡೆಯ ಶಂಕರನ ಸನ್ನಿಧಿಯಲ್ಲಿ ಹರುಷದಿಂ
ಮೃಡನ ಕಾರುಣ್ಯಮಂ ಪಡೆದು ಅನುರಾಗದಿಂ
ರಂಗಮಂಟಪವೆ ಯುಪನಯನ ಮಂಟಪವಾಗೆ
ಜಂಗಮಪ್ರಕರವೇ ದ್ವಿಜಸಮಿತಿಗೆಣೆಯಾಗೆ
ಉಪನಯನವಾಯ್ತು ಸದ್ಯೋಜಾತ ದೇವಂಗೆ
ಉಪದೇಶವಾಯ್ತು ತಂದೆಯ ಕೈಯ್ಯೊಳಾತಂಗೆ
ಅಂತಾಗ ಪುತ್ರನಂ ಶಿವಭಕ್ತನಂ ಮಾಡಿ
ಸಂತತಂ ಗಣತತಿಯನಾನಂದದಿಂ ನೋಡಿ
ಮಾರಿಮಸಣಿಗಳಿಂದೆ ಕೊಟ್ಟಣಂ ಗುಟ್ಟಿಸುತೆ
ಮಾರಾರಿ ಮೆಚ್ಚೆ ಗಣ ಪರ್ವಮಂ ಮಾಡಿಸುತೆ
ಬಂದ ಶರಣರ್ಗೆ ಪುತ್ರನನೊಪ್ಪಿಸಿಯೆ ಕೊಟ್ಟು
ಇಂದು ಶೇಖರನ ಶ್ರೀಪದಕೆ ನಂಬುಗೆಗೊಟ್ಟು
ಜಡೆಯ ಶಂಕರನ ಅನುದಿನವರ್ಚಿಸುವುದೆಂದು
ಮೃಡನ ಶರಣರ್ಗೆ ಮಿಗೆ ಬೆಸಕೆಯ್ವುದಿನ್ನೆಂದು
ಅಂದು ಸದ್ಯೋಜಾತದೇವಂಗೆ ತಿಳಿಪುತಂ
ಬಂದ ಗಣ ಸಂಕುಲಕೆ ಬಿನ್ನಪವ ಮಾಡುತಂ

ನರಲೋಕದೊಳಗಿರವು ಸಾಲ್ಗಿನ್ನು ಕರುಣಿಪುದು
ಹರನೊಳಗೆ ಪುಗುವುದಕನುಜ್ಞೆಯಂ ಬೆಸಸುವುದು
ಎಂದಲ್ಲಿ ಜಂಗಮದನುಜ್ಞೆಯಂ ಕೈಕೊಂಡು
ಬಂದನಾನಂದದಿಂ ಪುಳಕಮಂ ಕೈಕೊಂಡು
ನಡೆತಂದು ಜಡೆಯ ಶಂಕರದೇವರಂ ಕಂಡು
ಮೃಡನೊಳಗೆ ಪುಗುತೆ ಕಡು ದೃಢವಂ ಮನಂಗೊಂಡು

ದೇವ ಶಂಕರ ಚಂದ್ರಧರ ಕೃಪಾವಾರ್ಧಿಯೇ
ದೇವ ಗಂಗಾತರಂಗಾವೃತ ಕಪರ್ದಿಯೇ
ದೇವ ಸಂಸಾರವಾರಾಶಿ ವಡಬಾನಲಾ
ದೇವ ಮಾಯಾಬೃಹದರಣ್ಯ ದಾವಾನಲಾ
ದೇವ ಹರಿಯಜರರಿಯದಾದ್ಯಂತ ರಹಿತನೇ
ದೇವ ಪೂಜಿಸುವ ಸದ್ಭಕ್ತ ಸಂಪನ್ನನೇ
ದೇವ ಎಡೆಗುಡುವುದೆನಗೆಲೆ ಜಡೆಯ ಶಂಕರಾ
ಭಕ್ತರಂ ಗರ್ಭದೊಳಗಿರಿಸೆಲೆ ಕೃಪಾಕರಾ
ಭಕ್ತರಂ ಕರುಣದಿಂ ರಕ್ಷಿಸು ದಯಾಪರಾ

ಎನುತೆ ಪುಳಕಿಸುತೆ ಕಂಪಿಸುತೆ ನಸು ಬೆಮರುತ್ತೆ
ತನಿನೇಹ ವುಣ್ಮುತ್ತೆ ಕೊನೆದು ತಲ್ಲಣಿಸುತ್ತೆ
ತೆಗೆ ಪಂಚವಕ್ತ್ರವನೆನುತ್ತೆ ಹತ್ತಿರೆ ಸಾರೆ
ಸೊಗಯಿಸುವ ಶಂಕರಂ ತೆರಹುಗುಡೆ ಮನವಾರೆ
ಬೀಜದೊಳಗಂಕುರಂ ಪುಗುತಿರ್ಪ ಮಾಳ್ಕೆಯಿಂ
ತೇಜಮಂ ಕಾಂತಿ ಬಗೆದೊಳಪುಗುವ ಮಾಳ್ಕೆಯಿಂ
ಬಿಟ್ಟ ಹಮ್ಮಂ ಜೀವನುಂ ಪರಮನಪ್ಪಂತೆ
ನೆಟ್ಟನೆ ಜ್ಯೋತಿ ಪರಮ ಜ್ಯೋತಿಯಪ್ಪಂತೆ
ಕೊಡನುದಕವಾ ಮಹಾಜಲದೊಳ್ಬೆರಿಸುವಂತೆ
ಜಡೆಯ ಶಂಕರದೇವನೊಳ್ಪೊಕ್ಕನೊಲ್ದಂತೆ
ಆಗಳೆರಗಿದವು ಪೂಮಳೆ ಜಗಂ ಮಿಗೆ ಪೊಗಳೆ
ರಾಗದಿಂ ದುಂದುಭಿಧ್ವನಿ ಗಗನದೊಳ್ನೆಗಳೆ
ನೆಗೆದುದು ವಿಮಾನವಾಕಾಶದೊಳ್ಬೆಳಗುತಂ
ಬಗೆ ಮಿಗಲ್ಕೈಲಾಸದತ್ತತ್ತ ಪೋಗುತಂ

ಬಂದು ರಜತಾದ್ರಿಯಂ ಪೊಕ್ಕು ಶಿವನಂ ಕಂಡು
ನಿಂದು ಮೆಯ್ಯಿಕ್ಕಿದರ್ ನಿಷ್ಠೆಯಂ ಕೈಕೊಂಡು
ಇರ್ದ ಶಂಕರದಾಸಿಮಯ್ಯನಂ ನೆರೆ ನೋಡಿ
ಸಾರ್ದು ಪುಳಕಂಗಳಿಂ ತೆಗೆದಪ್ಪಿ ಕೈಗೂಡಿ
ಕೇಳು ನಂದೀಶ ಇಂತಪ್ಪ ಭೀಕರರುಂಟೆ
ಭಾಳಲೋಚನವನೆಮ್ಮಿಂದ ಪಡೆದವರುಂಟೆ

ಹರಿಯಜ ಪ್ರತಿಮೆಗಳ ನುರುಹಿ ಕಳೆದವರುಂಟೆ
ಧರೆಯೊಳೆನ್ನಾಜ್ಞೆಯಂ ಕೊಂಡು ತೊನೆದವರುಂಟೆ
ಮಾರಿಯಿಂ ಕೊಟ್ಟಣಂಗುಟ್ಟಿಸಿದರಿಂತುಂಟೆ
ವೀರ ಮೈಲಾರನಿಂ ಕೊಡೆವಿಡಿಸಿದವರುಂಟೆ
ಭಾಪು ಶಂಕರದಾಸ ದೇವ ಶಂಕರದಾಸ
ಭಾಪು ಮಝು ಭಾಪೆನ್ನ ವೀರ ಶಂಕರದಾಸ
ಎಂದು ಕೊಂಡಾಡುತಂ ಗಣಕುಲಕೆ ತೋರುತಂ
ಇಂದುಮುಖಿ ಪಾರ್ವತಿಗೆ ಬೆಸಸಿ ಕೊಂಡಾಡುತಂ
ಹರುಷದಿಂದಂ ನೋಡಿ ಸಾರೂಪ್ಯ ಪದವಿತ್ತು
ಕರುಣದಿಂದಂ ತಂದು ನಿತ್ಯ ತೃಪ್ತಿಯನಿತ್ತು
ಭಾವಜಶರೀರ ವನದಾವ ಮುಖನೊಪ್ಪಿದಂ
ದೇವಪರಿವೃತ ದಕ್ಷ ಯಜ್ಞಹರನೊಪ್ಪಿದಂ
ನಿರುಪಾಧಿಕಾನಂದ ಕಾಂತಿಯಿಂದೊಪ್ಪಿದಂ
ಪರಮ ಶುಭಕರ ಶಾಂತಿ ವರದನಿಂತೊಪ್ಪಿದಂ
ಬೊಬ್ಬಿಡುವ ಸುರರ ತಲೆಗಳ ಭೀಮನೊಪ್ಪಿದಂ
ಅಬ್ಬರಿಸುವಜ ಕಪಾಲದ ಭರ್ಗನೊಪ್ಪಿದಂ
ಅಮೃತಮಥನೋದ್ಭೂತ ಗರಳಧರನೊಪ್ಪಿದಂ
ಅಮರಕುಲಮುಕುಟಮಣಿಖಚಿತಪದನೊಪ್ಪಿದಂ
ಸುರಚಿರ ಬ್ರಹ್ಮಾಂಡ ಭರಿತ ಶಿವ ನೊಪ್ಪಿದಂ
ಗಿರಿಜೆಯಪ್ಪಿನ ಪುಳಕ ಭರಿತಾಂಗನೊಪ್ಪಿದಂ
ಅಮಮ ಭಕ್ತರ ಪೆತ್ತ ತಂದೆ ಇಂತೊಪ್ಪಿದಂ
ಅಮಮ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ

**ವೃತ್ತ**:- ಮುದದಿಂ ಶಂಕರದಾಸಿಮಯ್ಯ ವಿಭುವಿಂ ಗಾಶ್ಚರ್ಯದಿಂದಿತ್ತು ಭಾ।
ಳದ ಕಣ್ಣಂ ಜಗದೊಪ್ಪುತಾಪ ಶಿವಭಕ್ತಿಜ್ಞಾನ ವೈರಾಗ್ಯಸಂ॥
ಪದದಿಂ ಶೌರ್ಯದೊಳಾವಗಂ ಮೆರೆದ ಗೌರೀವಲ್ಲಭಂ ಭಕ್ತಿ ಸಂ।
ಪದಮಂ ಕೂರ್ತೆಮಗೀಗೆ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ॥

**ಸಮಾಪ್ತ.**

# ಆದಯ್ಯನ ರಗಳೆ.



**ಕಂದ**— ಆದಯ್ಯನನೂರ್ವಿಗೆ ಗುರು।
ಮಾದಯ್ಯನನರುಹಕುಂಭಿಕುಂಭಸ್ಥಳನಿ ।
ರ್ಭೇದ್ಯಯ್ಯನ ನೆರೆ ಮೆರೆದಂ।
ಮೇದಿನಿಯೊಳಗೆಮ್ಮ ಹಂಪೆಯ ವಿರೂಪಾಕ್ಷಂ॥

### ಮಂದಾನಿಲ ರಗಳೆ

ಶ್ರೀಗೌರೀಪತಿಯೊಡ್ಡೋಲಗದೊಳು
ರಾಗಂ ಮಿಗಿಲಿರೆ ಗಣತತಿ ಕುಲದೊಳು
ಅಲ್ಲಿಯನಾದಿ ಯೆನಿಪ್ಪ ಗಣೇಶಂ
ಸಲ್ಲೀಲೆಯೊಳಿರ್ಪಲ್ಲಿ ವಿಳಾಸಂ
ಮಿಗೆ ಬಂದಳು ಸುರಕನ್ನೆಯದೋರ್ವಳು
ಸೊಗಯಿಪ ರೂಪಿಂದೊಪ್ಪುವಳೋರ್ವಳು
ಬರೆ ಕಂಡಾ ಗಣನಾಥಂ ಸೋಲ್ತಿರೆ
ಸುರಕಾಮಿನಿಯಂ ಮೋಹದೊಳೆಳಸಿರೆ
ಹರನವರೀರ್ವರ ನೀಕ್ಷಿಸಿ ನಗುತಂ
ಕರೆದಿಂತೆಂದಂ ಕೃಪೆಯೊಳ್ಮಿಗುತಂ
ನೀವಿರ್ಬರುಮಾ ಧರೆಯೊಳು ಜನಿಸೀ
ಕಾಮನನೇಳಿಪ ಸುಖಮಂ ಧರಿಸೀ
ಬರ್ಪುದೆನಲ್ಬಿನ್ನೈಸಿದನೊಲವಿಂ
ಸರ್ಪಾಭರಣಗೆ ನಗುತವೆ ನಲವಿಂ
ದೇವಾ ಬಳಿಕಿಲ್ಲಿಗೆ ಬರಲುಂಟೇ
ದೇವಾ ಚರಣಮನೀಕ್ಷಿಪುದುಂಟೇ
ಕಾಮಂ ಕ್ರೋಧಂ ಪಿರಿದಾಧರೆಯೊಳು
ವ್ಯಾಮೋಹಂ ಪಿರಿದವನೀತಳದೊಳು

ವಂಚನೆಯುಂ ಡಂಬುಂ ಪುಸಿಯುವರೊಳು
ಸಂಚಿತ ಪಾಪಂಗಳುಮುಂಟವರೊಳು
ಎಂತಂತಿರ್ಪನದಿನ್ನೇನಪ್ಪಂ
ಕಂತುಹರಾ ಬಳಿಕೆಂದಾಂ ಒಪ್ಪಂ

ಎನೆ ನಗುತೀಶ ಗಣೇಶನನೀಕ್ಷಿಸಿ
ನಿನಗಂಜಲದೇಕಾನೇ ರಕ್ಷಿಸಿ
ನಡೆಯಿಸುವೆಂ ಕಾರಣ ವುಂಟದರೊಳು
ಕಡು ಪೆರ್ಚಿರ್ದಾರ್ ಸವಣರ್ಜಗದೊಳು
ಅವರಂ ಶಿಕ್ಷಿಸಿ ಧರೆಯೊಳ್ಮೆರೆವುತ
ಅವನಿಗೆ ಕೌತುಕ ರಸವಂ ಕರೆವುತ
ಬಳಿಕೆಮ್ಮಲ್ಲಿಗೆ ಸುಖದಿಂ ಬಪ್ಪುದು
ಪಳಿಯಾಂತಿಲ್ಲಿ ಗಣೇಶ್ವರ ನಪ್ಪುದು
ಎನೆ ಸಂತಸದಿಂದುಬ್ಬುತೆ ಕೊಬ್ಬುತೆ
ತನು ತೀವಿದ ಪುಳಕಂಗಳ ನಾನುತೆ
ಹರನಂ ಬೀಳ್ಕೊಂಡೊಲವಿಂ ಬಂದಂ
ನರಜನ್ಮಕ್ಕೆಳಿಸುತೆ ವೈಸಂದಂ

ಬಂದುತ್ತರ ಭಾಗದ ಶಿವಪುರದೊಳು
ಇಂದುಧರನ ಕರುಣಂ ಮಿಗೆ ಭರದೊಳು
ಶಿವಭಕ್ತನ ಸತಿಯುದರದೊಳಿರುತಿರೆ
ಶಿವಭಕ್ತೆಗೆ ಗರ್ಭಂ ಮಾಡುತ್ತಿರೆ
ನಡೆ ಮೆಲ್ಲ ಮೆಲ್ಲನೇ ಜಡನಾಗಿರೆ
ತೊಡೆ ಢಾಳದ ಮೇಳದ ಸುಖಿಯಾಗಿರೆ
ತ್ರಿವಳಿಗಳವಿರಳವಾಗುತೆ ಹಾರಲು
ನವನಾಭಿಯು ಗುಣ್ಪೊಳಗಂ ತೋರಲು
ನಡು ಪೊಂಗುತೆ ಕೀಳ್ಪೊಡೆ ವಳವೇರಲು
ಸಿಡು ಬಾಸೆಗೆ ನಯವೇರುತೆ ಬೀರಲು
ಪೀನ ಕುಚಂಗಳ ತುದಿ ಕಾಗಿಡುತಿರೆ
ನಾನಾ ರುಚಿ ಕಕ್ಷಮನೊಳಕೊಳುತಿರೆ
ಕಂಬುಗ್ರೀವಂ ತೊಳತೊಳಗುತ್ತಿರೆ
ಇಂಬಿಂ ಮುಖವಳಯಂ ಬೆಳಗುತ್ತಿರೆ

ಅಲರ್ಗಣ್ಕುವಲಯಮುಮಂ ಪಳಿವುತ್ತಿರೆ
ನಲವಿಂ ಕುಂತಳ ವಗ್ಗಳಿಸುತ್ತಿರೆ
ನವಮಾಸಂ ಶಿವಭಕ್ತಗೆ ತೋರಲು
ನವಕಾಂತಿಗಳಾ ಮೆಯ್ಯೊಳ್ಬೀರಲು
ಶಿವನಣುಗಂ ಪೊರಮಡಲನುವಾದಂ
ಅವನಿಯನೀಕ್ಷಿಸಲುರೆ ಕಣ್ದೆರೆದಂ
ಸರ್ವಾಂಗಸ್ಸಡಿಲಲ್ಸಡಿಲುತ್ತಂ
ಸರ್ವೇಶನನೊಳಗಳವಡಿಸುತ್ತಂ
ಕ್ಷೀರಾಂಬುಧಿಯಿಂ ಶಶಿಯೊಗೆವಂದದಿ
ಮೇರುವಿನಿಂ ಸುರಕುಜವೊಗೆವಂದದಿ
ಪುಟ್ಟಿದರ್ವನಿಗೆ ಸತ್ಯಂ ಪುಟ್ಟಲು
ಮುಟ್ಟಿದನವನಿಗೆ ಸುಕೃತಂ ಮುಟ್ಟಲು
ಶಿವನಂ ನೋಡಲು ನೆರೆ ಕಣ್ದೆರೆದಂ
ಸವಿಯಲು ಪ್ರಸಾದಕೆ ಬಾಯ್ದೆರೆದಂ
ಆದಯ್ಯನೆನಿಪ್ಪುದು ತನ್ನಾಮಂ

ಸಾದರಮೀಶಂಗತ-ಳ ಪ್ರೇಮಂ
ಆಗಿರೆ ಬಾಲ್ಯಮನೊಲವಿಂ ಕಳೆದಂ
ಸಾಗಿಪ ಸುಕುಮಾರತೆಯುಂ ತಳೆದಂ
ಸಂಸಾರದ ಸವಿಗಾಣುತ ಬೆಳೆದಂ
ಹಂಸಂ ಬೆಳೆವಂದದಿ ಮಿಗೆ ಬೆಳೆದಂ

ಬೆಳೆಯಲು ಗುರುಕರುಣಂ ತನಗೊದವಿತು
ತಿಳಿವಿನ ಮುಖವೀಶ್ವರನೊಳಗೊದಗಿತು
ತಿಸುಳಂ ಡಮರುಗವಜಶಿರವಭಯಂ
ನೊಸಲೊಳ್ಕಣ್ವೃಷಭಾರೂಢತೆಯಂ
ಲಿಂಗದೊಳಗೆ ಕಂಡಂ ಶಿವನಿರವಂ
ಪಿಂಗದೆ ಕಂಡಂ ಪರಮನ ವರವಂ
ಸೋಮಯ್ಯನೆ ಗುರು ತನಗೆಂದರಿದಂ
ಸೋಮೇಶಂಗತಿ ಮತಿ ಯೆಂದರಿದಂ

ಇಂತರಿವುತ್ತಂ ನೇಮಂ ಮಾಡುತ್ತಿ
ಸಂತತ ಶಿವಸುಖದೊಳಗೋಲಾಡುತ್ತಿ

ಇರೆ ಯೌವ್ವನವಾದಯ್ಯಂಗಾಗಲು
ಹರಭಕ್ತಿಯು ತನ್ನೊಳು ಪುಟವೇಳಲು
ನೊಸಲೊಳು ಭಸಿತವು ನೊಪ್ಪದೊಳಿಡುತಂ
ಎಸೆಯಲು ರುದ್ರಾಕ್ಷಿಗಳಂ ಕೊಡುತಂ
ಶಿವನಂಘ್ರಿಗಳಂ ಚಲುವಿಂ ಮುಟ್ಟುತೆ
ಶಿವಸುಖ ಸಂತಸದೊಳಗೋಲಾಡುತೆ
ಶಿವಗಿತ್ತಾ ವೀಳೆಯುಮಂ ಸವಿವುತೆ
ಶಿವಧೂಪದೊಳಂ ತನ್ನಂ ಪೊರೆವುತೆ
ಬಲವರುತಂ ಲಲನೆಯುರಂ ನೋಡುತೆ
ನಲವಿಂ ಪಶುಪತಿಗಂ ಬಿನ್ನವಿಸುತೆ
ಶಿವನಂ ನೆನೆವುತೆ ಸುಖಮುಂ ತಳೆವುತೆ
ಭವನಂ ಪಾಡುತೆ ಭಾವಮುನೆಣಿಸುತೆ
ಸರ್ವಂ ಬೆವಹಾರಂಗಳ ತೆರನಂ
ಉರ್ವಿಯೊಳಗೆ ಪರಿದಾಡುವ ತೆರನಂ
ಕೂಡಿದ ಮೊದಲಂ ಲಾಭದ ಪರಿಯಂ
ನೋಡಲು ಲೆಕ್ಕದ ಗಣಿತದ ಪರಿಯಂ
ಕಲಿಸಿದನಾದಯ್ಯಂಗಾ ಜನಕಂ
ಕಲಿಸಲು ಪುತ್ರನ ಕಣ್ಣಂ ಮನಕಂ
ಮಾಯಾ ವೆವಹಾರಂ ತಿಳಿವುತ್ತಿರೆ
ಆ ಯೌವ್ವನದಿಂದಂ ಗರ್ಜಿಸುತಿರೆ
ಪಿತನಾದಯ್ಯನ ಪರಿ ಮೆಚ್ಚುತ್ತಂ
ಸತತಂ ಸಂತಸದಿಂ ಬಾಳುತ್ತಂ

ಮಗನಂ ಕರೆದೆಲ್ಲಮನಾಳೋಚಿಸಿ
ಸೊಗಯಿಪ ಭಂಡಂಗಳ ನೊಲಿದೊಪ್ಪಿಸಿ
ಪಲವೆತ್ತಿನೊಳಂ ತೀವುತ್ತೇವುತೆ
ಪಲವುಂ ದೋಣಿಗರಂ ಕರದೀವುತೆ

ಪುತ್ರಂಗೆಲ್ಲವನಪ್ಪೈಸುತ್ತಂ
ಪತ್ತು ಸಹಸ್ರಂ ಪೊಂಗಳ ತರುತಂ
ಪುತ್ರನ ಕೈಯ್ಯೊಳ್ಕೊಟ್ಟಂತೆಂದಂ
ಉತ್ತಮ ವಸ್ತುಗಳಂ ಕೊಳ್ಳೆಂದಂ
ಪುಲಿಗೆರೆಯಣಿಗೆರೆಯಂ ಪುರದೊಳಗಂ
ನಲಿವಿಂ ಪಲವುಂ ಪಟ್ಟಣದೊಳಗಂ
ಪರಿದಾಡುವುದೆಲೆ ಕಂದ ಎನುತ್ತಂ
ಹರನಂ ನೆನವುದು ಮರೆಯದೆನುತ್ತಂ
ಸೋಮಯ್ಯಂ ನಿನ್ನೊಡನೇ ಬಪ್ಪಂ
ಸೋಮಯ್ಯಂ ಚಿತ್ತದೊಳೊಲವಿಪ್ಪಂ
ಲೋಭದೊಳಿಪ್ಪುದು ಸದ್ವ್ಯಯವಾಗದು
ಲಾಭವನರಿವುದು ಮರೆದಿರಲಾಗದು
ಎನೆ ನಸುನಗುತಾದಯ್ಯಂ ನುಡಿದಂ
ಮನಸಿಜ ಹರನಣುಗಂ ನೆರೆ ನುಡಿದಂ
ಮೊದಲೀಶನ ಸದ್ಭಕ್ತಿಯೆ ಲಾಭಂ
ತದನಂತರವಿನ್ನುಂಟೇ ಲಾಭಂ
ಎನುತಾಗಳೆ ಪಿತನಂ ಬೀಳ್ಕೊಂಡಂ
ಮನದೊಳು ಸೋಮಯ್ಯನನೆಡೆಗೊಂಡಂ
ನಡೆತಂದಂ ಭಕ್ತಿಯೊಳಾದಯ್ಯಂ
ನಡೆ ತರುತಿರ್ದಂ ಶಿವನಾದಯ್ಯಂ

ಇತ್ತಲು ಸುರಸತಿ ಶರ್ವನ ಸಭೆಯೊಳು
ಉತ್ತಮಗುಣ ನಿಧಿ ಜನನದ ವಶದೊಳು
ಸಲುತಂ ಪುಲಿಗೆರೆಯೊಳು ಬಂದೊಪ್ಪುವ
ಸಲೆ ಸವಣರ್ಸಂತಸದಿಂದೊಪ್ಪುವ
ಸುರಹೊನ್ನೆಯ ಬಸದಿಯ ಪೂಜಾರಿಯ
ಅರುಹಂತನನರ್ಚಿಪ ಪೂಜಾರಿಯ
ಹರುಷದಿ ಯುವನಾ ಲಲನೆಯ ಬಸಿರೊಳು
ಅರುಹಂತನ ಪಾಪದ ಕಗ್ಗೆಸರೊಳು

ಪಂಕಜದಂತಿರೆ ಪುಟ್ಟಿದಳೊಲವಿಂ
ಪಂಕವನೆಂದುಂ ಪೊರ್ದದೆ ನಲವಿಂ

ಪುಟ್ಟಲು ಪದ್ಮಾವತಿ ಯೆನೆ ನಾಮಂ
ಗೊಟ್ಟರು ಪಿತೃಮಾತೆಯರತಿ ಪ್ರೇಮಂ
ತಾನಾಗಿರೆ ಶೈಶವಮಂ ಕಳೆದಳು
ನಾನಾಭರಣಂ ರಂಜಿಸೆ ಬೆಳೆದಳು
ಸಸಿಕಳೆಯಂದದಿ ಕೌಮುದಿಯಂದದಿ
ಬಿಸಕಂದದ ಕುಂದದ ಮುಗುಳಂದದಿ
ತಳೆದಳು ಪದ್ಮಾವತಿ ವಿಭ್ರಮಮಂ
ತೆಳದಳು ನವ ಯೌವ್ವನ ಭೂಷಣಮಂ
ನಡು ನಡೆ ನುಡಿಗಳು ಕಿರಿದಾಗುತ್ತಿರೆ
ಮುಡಿವೊಲೆ ಜಘನಂ ಪಿರಿದಾಗುತ್ತಿರೆ
ಭಾಳತಳಂ ನಯಮಂ ಕರೆವುತ್ತಿರೆ
ತೋಳ ಮೊದಲು ಪೊಗರಂ ಸೂಸುತ್ತಿರೆ
ಅಳಕಂ ನೊಸಲೊಳು ರಂಗಂಬೊಗುತಿರೆ
ತಿಳಕಂ ಕಾಂತಿಯ ಮರೆಯೊಳು ನಿಂದಿರೆ
ತರದಿಂ ಬಾಲ್ಯದ ತೆರೆ ಸರಿವುತ್ತಿರೆ
ನಿರುತದ ನಲವಿಂ ಯೌವ್ವನ ವೊಪ್ಪಿರೆ
ಪುಷ್ಪಾಂಜಲಿಯಂ ನೋಟಂ ಕೆದರಲು
ಪುಷ್ಪಶರಂ ಮನದೊಳು ಮಿಗೆ ಹೆದರಲು
ತೊಡಿಗೆಯ ನಿನದಂ ವಾದ್ಯಗುಡುತ್ತಿರೆ
ನಡೆ ಸುಗತಿಗಳಂ ಮೇಳೈಸುತ್ತಿರೆ
ಯೌವ್ವನಮಲ್ಲಿ ಸುಪಾತ್ರಮದಾಗಿರೆ
ಅವ್ವಳಿಸುವ ವಿಟರೆದೆ ಬಿರಿವುತ್ತಿರೆ
ತನಗೊಳಗಾದಯ್ಯನ ನರಸುತ್ತಂ
ಮನುಜರನಾವಗ ವೊಲ್ಲದಿರುತ್ತಂ
ಇರೆ ತಾಯ್ತಂದೆಗಳರಿಯದೆ ಮರುಗುತ
ಹರೆಯದೊಳಾರುಮನೊಲ್ಲಳಿದದ್ಭುತ

ಈ ಸುಖವಿನ್ನಾರಿಗೆ ಇರ್ದಪುದೋ
ಈ ಸೊಬಗಿನ್ನಾರಂ ಸಾರ್ದಪುದೋ
ಎಂದುಮ್ಮಳದಿಂದಂ ನೋಡುತ್ತಿರೆ
ಅಂದಂದಿಂಗತಿ ಚಿಂತೆಯೊಳಿರುತಿರೆ

ಬರುತಿರ್ದಂ ಶಂಕರನಾದಯ್ಯಂ
ದುರಿತ ಕುಳಂಗಳ ನೆರೆ ಪೊಯ್ವಯ್ಯಂ
ಪುರದೊಳಗೆಲ್ಲಂ ಕಾವುಳ ನೆಗೆಯಲು
ಅರುಹಾಗಾರದೊಳದ್ಭುತ ವೊಗೆಯಲು
ಸುರಹೊನ್ನೆಯ ಬಸದಿಯ ಜಿನನಳುತಿರೆ
ಅರುಹ ವ್ರತಿಗಳ್ಕೌತುಕವೆನುತಿರೆ
ಪುಲಿಗೆರೆಯೊಳು ಪೊಕ್ಕಂ ಶಿವಭಕ್ತಂ
ಕಲಿಥಳಿ ಸೌವ್ಯಭಾಷಾಯುಕ್ತಂ
ಪುಗುತಂ ಬಸದಿಗಳಿದಿರಿರೆ ಕಂಡಂ
ಮಿಗೆ ಬಗೆಯೊಳಗೆ ನಿರೋಧಂಗೊಂಡಂ
ಅರಸುತ ಬಂದಂ ಹರನಾಲಯಮಂ
ಹೆರೆಯಂ ಸೂಡಿರ್ದನ ಮಂದಿರಮಂ
ಕಂಡಂ ಹೋಜೇಶ್ವರನಿಪ್ಪಿರವಂ
ಕಂಡಂ ಮೂಲಸ್ಥಾನದ ವರವಂ
ಅಲ್ಲಿಯೆ ಬೀಡಾರಂ ತನಗಾದುದು
ಎಲ್ಲಾ ವಸ್ತುವಿನಾಲಯಮಾದುದು
ಬಂದ ಸುವಸ್ತುವನಲ್ಲಿರಿಸುತ್ತಂ
ಬಂದ ಗ್ರಾಹಕ ತತಿಗೀವುತ್ತಂ
ಮೊದಲುಂ ಲಾಭಂಗಳ ನೋವುತ್ತಂ
ಸದಮಲ ಚಿತ್ತಂ ಸುಖದೊಳಿರುತ್ತಂ

ಒಂದು ದಿನಂ ನೇಮಂ ಮಾಡುತ್ತಿರೆ
ಇಂದುಧರನ ಭಕ್ತಿಯನೊಳಕೊಂಡಿರೆ
ಪುಳುಕದ ಸಂದಣಿಯಿಂ ಪರುಶನಮಂ
ಜಳಬಿಂದುಗಳಿಂದಂ ದರುಶನಮಂ

ಮಾಡುತ ಪಾದೋದಕಮಂ ಕೊಳುತಂ
ನೋಡುತೆ ಹರಕರುಣಮನೆಡೆಗೊಳುತಂ
ಭರದಿಂ ಪ್ರಸಾದ ಜೀವಕನಾದಂ
ಹರಪದ ಪಂಕಜ ಭಾವಕನಾದಂ

ಪಟ್ಟಣಮಂ ನೋಡಲು ಪೊರಮಟ್ಟಂ
ನೆಟ್ಟನೆ ಸುಖನಿಕರದೊಳಳವಟ್ಟಂ
ಸುಕುಮಾರ ಶಿರೋಮಣಿ ಬರ್ಪಂದದಿ
ಅಕಳಂಕ ಸುಧಾಕರ ಪೊಳೆವಂದದಿ
ನಲವಿಂ ಪದುಮನ ಸಖ ಬಪ್ಪಂದದಿ
ಸುಲಲಿತ ಸೌಂದರ್ಯಂ ನಡೆವಂದದಿ
ಜಂಗಮ ಸುರತರು ನಡೆತಪ್ಪಂದದಿ
ಲಿಂಗದ ಮಹಿಮಾನಿಧಿ ಬಪ್ಪಂದದಿ
ಮೆಲ್ಲನೆ ಪುರವೀಧಿಯೊಳಂ ಬರುತಿರೆ
ಬಲ್ಲಿದನಾದಯ್ಯಂ ಬರುತಿರೆ ಇರೆ

**ಪ್ರಥಮಸ್ಥಲ ಸಂಪೂರ್ಣ**



## ದ್ವಿತೀಯಸ್ಥಲ.

**ಕಂದ**— ಪುಲಿಗೆರೆಯ ಪುರಜನಂಪ್ರೂ।
ವಲಿಗೆದರಿದ ಪುಷ್ಪಸೌರ ಭಾಸ್ವಾದಮವಾ ।
ಕುಳಿತ ಮಧುಕರ ಮುಖೋದ್ಗತ।
ಕಳರವವೀಧಿಯೊಳೆ ಬರಲಾದಯ್ಯಂ॥

**ಗದ್ಯ**— ಇಂತು ಪುರವೀಥಿ ನಿರೀಕ್ಷಣ ಸಂಜನಿತ ಹರುಷ ಪುಳಕ ಶರೀರಂ ಸುಖನಿಕರ ಮುಖಾವಲೋಕನನಾಗುತ್ತಂ ಬರೆವರೆ ಮುಂದೆ ಸುಧಾಧವಳಿತ ಸೌರಭಾದಿ ವೇದಿಕಾಸ್ತಂಭಂಗಳ ನಡುವೆ ಹಂಸ ಕುಳ ಕೀರ ಕುರವಕ ಸರಸೀರುಹ ಲತಾವಳಿಗಳ ತಂಡಣೆಯಿಂ ಕೊಳನಂತೆ ವಿರಾಜಿಪ ವೇದಿಕೆಯ ಮೇಲೆ ಪದ್ಮಾವತಿಯಂ ಭೋಂಕನೆ ಕಂಡು ಸ್ನೇಹಂ ಕವಿದು ಆರ್ತಂ ತಲೆದೋರಿ ತಾತ್ಪರ್ಯಂ ಕೈಮಿಕ್ಕು ಲವಲವಿಕೆ ಬೆಳೆದು ಸವಿನೋಟಂ ಸಂದಣಿಸಿ ಸೌಂದರ್ಯದ ಮದಂ ಸೀಮೆಯ ನೊಳಕೊ ಳಲಾರದೆ ಲಾವಣ್ಯದ ರಸದೊಳು ತಾಂ ಮುಳುಗಿ ನೋಡಲರಿಯದೆ ಸಿಕ್ಕಿದ ವಿಲೋಚನದ ಬಳಿಸಂದು ಮನದೊಡನೆ ಭಾವಂ ಬಲಿದು ಸಾತ್ವಿಕ ರಸಪರವಶದಿಂ ಮಿತ್ರರ ಮೇಲೆ ಮೆಯ್ಯಸೀಡಾಡಿ ಪರಮಹಂಸನಂತಿರ್ದ ಆದಯ್ಯನಂ ಪದ್ಮಾವತೀದೇವಿ ಬೋಂಕನೆ ಕಂಡು ನವಯೌವ್ವನವಂ ಮುಂಗಾಣ್ಕೆಗೊಟ್ಟು ರೂಪನೊಪ್ಪಿಸಿಕೊಟ್ಟು ನೋಟಮಂ ಇಂಬುಗೊಟ್ಟು ಆಸೆಯಂ ನಿಮಿರ್ತಗೊಟ್ಟು ಚೆಲ್ವಂ ಸೂರೆಗೊಟ್ಟು ಪ್ರೇಮರಸಂ ತೀವಿ ಮನಂ ನನೆ ಏರಿ ತವಕಂ ಬೀಗಿ ತನುವರಳ್ದಿರಲಿರ್ಬರ ಪರ್ಬುಗೆಯ ನೇಹಮಂ ಮಿತ್ರಜನಂ ಕಂಡು ಕಮಳಾಕರಕ್ಕೆ ಹಂಸಮಿಥುನಂಗಳಂ ತಪ್ಪಂತೆ ತಂದು ಪದ್ಮಾವತಿಯ ಸೆಜ್ಜೆಯರಮನೆಯ ಮೃದುತರ ಹಂಸ ತೂಲ ತಲ್ಪದೊಳು ಸುಖಮಿಥುನಮನೊಲ್ದಿರಿಸುವಂತಿರಿಸಿ ಸಖೀ ಜನಂ ಕೃತಕ ಸಂಕೇತ ಗಮನಸ್ಥಾನವಾದರಿತ್ತಲು,

ಪದ್ಮಾವತಿಯುಂ ಆದಯ್ಯನುಂ ಗಾಢಾಲಿಂಗನದ ಮುತ್ತಿಗೆಯುತ್ತಲಗ್ಗ ಳವಾಗಿ ಸಕಲೇಂದ್ರಿಯಂಗಳೊಳಗುಗೊಟ್ಟು ಲಜ್ಜಾರಸಂ ಬೆಂಗೊಟ್ಟು ಅಭಿ ಮಾನದ ಕೋಂಟೆ ಕೋಳುವೋಗಿ ಧೈರ್ಯದ ಕದಂದೆರೆದು ಕರಣಂ ಕಲಿವಿಲಿಯಾಗಿ ಸುಖಂ ಸೂರೆವೋಗಿ ಮನಂ ಪಿಡಿವಟ್ಟು ಮುಟ್ಟಿದ ಸುಖ

ಮಂ ಸೋಮನಾಥನ ಸ್ಮರಣೆಯಿಂ ಸವಿವುತ್ತಿರ್ಪ ಸುಖ ಸಮಯದೊಳು ಮುನಿಸಿಲ್ಲದ ಕಲಹಂ ಕೋಪವಿಲ್ಲದ ಖಾತಿ ಭಂಗವಿಲ್ಲದ ಸೋಲಂ ಭಾರವಿಲ್ಲದ ಬಳಲ್ಕೆ ನಿಸ್ರೆ ಇಲ್ಲದ ನಿಡುಸೂಯ್ ತಣಿವಿಲ್ಲದ ತೃಪ್ತಿ ಅಗಲ್ಕೆ ಇಲ್ಲದ ವಿರಹವಾತುರಿಸಿ ಚಿತ್ತ ಭೂಮಿಯೊಳೊಳಪೊಕ್ಕು ನೇಹದ ಬೀಜಂ ದೇಹ ಮನ್ಮಥ ಘಟ್ಟಿ ಯಂತ್ರದಾಟದೊಳ್ಪುಟ್ಟಿದ ಸ್ವೇದ ಜಲದಿಂ ತಳಿತು ಪುಳುಕದಗೆಯೊಯ್ದು ನಳನಳಿಸಿ ಬೆಳೆದ ಮಕರಕೇತನುದ್ಯಾನದೊಳು ವಿಸಟಂ ಬರಿವ ವ್ಯಾಕುಳಾಕ್ಷರಂ ಕೊಳರ್ವಕ್ಕಿಯ ಧ್ವನಿಯನಿಂಬುಗೊಳುತಿರೆ ಕುಣಿವ ಳಕಂ ಶಿಳೀಮುಖಂಗಳನನುಕರಿಸೆ ನರು ಸುಯ್ಯಲರೆಂಬ ಗಂಧವಾಹಂ ಸುಳಿಯೆ ಗಾಢಾಲಿಂಗನದ ಲತೆವನೆಯೊಳಗೆ ಸಮಸುಖ ಸಾರ್ವಭೌಮರಾಗಿ ತಮ್ಮೊಳು ತಮ್ಮನಲ್ಲದೆ ಮತ್ತೊಂದೇನುಮನರಿಯದೆ ತಾವಿಬ್ಬರೊಬ್ಬರಾದಂತೆರಡನರಿಯದೆ

ಪಲಕೆಲವು ವತ್ಸರಂಮಿರ್ದೊಂದು ದಿನವಾದಯ್ಯನುಂ ಪದ್ಮಾವತಿಯುಂ ಒಂದಾಗಿ ಬಿನದದಿಂ ವ್ಯಾಘ್ರಪುರದ ಪೊರಗಣ ಪೂರ್ವ ತಟಾಕದಪರಭಾಗದ ತರುವನದೊಳು ಶುಕಪಿಕ ಹಂಸ ಮಯೂರಕೀರ ಲೀಲಾ ನಿರೀಕ್ಷಣಾಸಕ್ತರಾಗಿರಲಲ್ಲಿಗೆ ನೀಳ್ದ ಕೆಂಜೆಡೆಯಿಂ ತಾಳ್ದ ಕುಂಡಲದಿಂ ಉಟ್ಟ ಪುಲಿದೊವಲಿಂ ತೊಟ್ಟ ರುದ್ರಾಕ್ಷೆಯಿಂದಿಟ್ಟ ಭಸಿತದಿಂ ಪೊಳೆವ ಕಣ್ಗಳಿಂ ಬೆಳಪ ಗಂಡಸ್ಥಲದಿಂ ತೊಳಪ ಸುಲಿಪಲ್ಲ ವಿಳಾಸದಿಂ ಮೆರೆವ ವೈವೆಳಗು ಬನಕ್ಕೆ ಬೆಳ್ದಿಂಗಳಂ ಸೂಸೆ ಸತ್ಯದಂತೆ ಪುಣ್ಯದಂತೆ ಭಕ್ತಿಯಂತೆ ಬರುತಿರ್ಪ ತಪೋಧನಮೂರ್ತಿಗಳ ಆದಯ್ಯಂ ಕಂಡು ಭಯಭಕ್ತಿಯಿಂದಿದಿರ್ವಂದು ಅಷ್ಟಾಂಗ ಪ್ರಣುತನಾಗಿ ನಿಂದಿರ್ದು ದೇವ ಎತ್ತಣಿಂ ಬಿಜಯಂಗೈದಿರಿ ಕಂಗಳ ಕಾಂತಿ ಕುಂದಿದವು ಮುಖಮಂಡಲಂ ಕೊರಗಿದವು ಪುಣ್ಯೋದರಂ ಒಡವಾದುದು ಬೆಸಕೈವೆನೆಂದು ಬಿನ್ನೈಸಿದ ಭಕ್ತನ ಮೊಗಮಂ ನೋಡಿ ಎಲೆ ಮಗನೆ ಮುಂದರಿಯದೆ ಬಂದೀ ಊರಂ ನಿನ್ನೆ ಪೊಕ್ಕುನ್ನತಿಗೆಟ್ಟ ಬಸದಿಗಳಂ ಬತ್ತಲೆಯ ಬೊಂಬೆಗಳಂ ಕಂಡು ಬೆಗಡುಗೊಂಡು ಬೇವಿನ ವನಮಂ ಪೊಕ್ಕಂತೆ ಪೊಲಗೇರಿಯಂ ಸಾರ್ದಂತೆ ದೆಸೆಗೆಟ್ಟು ತೃಷೆಯಡಗದೆ ಪತ್ತುಪವಾಸಂ ಪತ್ತಿ ನಡೆಯುಡುಗಿ ತ್ರಾಣಂ ವರತು ಕಂದಿ ಕುಂದಿ ನೊಂದು ವ್ಯಾಘ್ರಪುರಮಂ ಪೊಕ್ಕು ವ್ಯಾಘ್ರಮುಖಮಂ ಕಂಡಂತತಿ ಭಯದಿಂ ಪೊರಮಟ್ಟು ಮೆಲ್ಲಮೆಲ್ಲನೆ ತಟಾಕದೇರಿಯ ಮೇಲೆ ಬರುತಂ ಭಸ್ಮಾವಶೇಷ ಲಲಾಟನಾಗಿರ್ದ ನಿಮ್ಮಂ ಕಂಡೆ

ವಿನ್ನೆಲ್ಲಿಗಂ ಪೋಗಲಾರೆವೆಂದೊಂದು ನಿರುಪಮಸ್ಥಲದ ನೆಳಲ ಹೊಸ ಹಸಲೆಯ ಮೇಲೆ ಬಳಲ್ದು ಪಟ್ಟಿರಲವರಂ ಕಂಡು,

ಕಣ್ಣೀರಂ ತೀವಿ ಕುಕ್ಕುಳಂಗುದಿದು ಶೋಕರಸದೊಳಾಳ್ದು ದೈನ್ಯದಿಂ ಪದ್ಮಾವತಿಯ ಮೊಗಮಂ ನೋಡಲಾಕೆಯನುಕೂಲಾಲೋಚನೆಯನರಿದು ಸಂತಸಮನಾಂತು ದೇವದೇವ ಪುರದೊಳು ಪೊಕ್ಕತಿಬೇಗದಿಂ ಬೋನಮನನುತರಿಸಿ ತಳುವುಮಾಡದೆ ಬರ್ಪೆನನ್ನೆವರ ಈ ನೆಳಲೊಳಿಲ್ಲಿಯೆ ನೆಲಸಿರ್ಪುದೆಂದು ನಲವಿಂ ಬಿನ್ನೈಸೆ ಸಂತಸಂಬಟ್ಟು ನೀನೆ ಸರ್ವಸಾಧನಮಂ ಬೇಗ ಮಾಡೆಂದು ಕಳುಪೆ ಬಂದು ಪುರಮಂ ಪೊಕ್ಕು ಸಕಲ ಪದಾರ್ಥಂಗಳಂ ತಂದು ಪದ್ಮಾವತಿಗೊಪ್ಪಿಸಲೊಡಂ ದಿವ್ಯ ಪರಿಮಳದಿಂ ಸವಿಯಂ ।ಸಾಲಿಡುವಮೃತಾನ್ನಮನತ್ಯಾದರದಿಂ ಮಾಡುತ್ತಿರೆ ಅತ್ತಲಾದಯ್ಯಂ ತಪಸ್ವಿ ಪಸಿದನೆಂದು ಬೇಗ ಬಂದು ನಿಳಯಮಂ ಪೊಕ್ಕು ಪದ್ಮಾವತಿಯ ಮೊಗಮಂ ನೊಡಲಾಕೆ ಒಡೆಯರಂ ಬಿಜಯಂಗೈಸಿ ತರುವುದೆನೆ ಅತ್ತಲ್ವನಕ್ಕೆ ಪೋದನಿತ್ತಲು,

ಪದ್ಮಾವತಿಯ ಪಿತನಪ್ಪ ಪಾರಿಷಪಂಡಿತಂ ಮೇರೆಗೆಟ್ಟ ಮತಿಹೀನಂ ಕೋಪಣದಿಂ ಬಂದ ಹೊಸ ಋಷಿಯರೆನಿಪ ನೀಚರಿಗೆ ಚರಿಗೆಯಂ ಪೇಳೆ ಬರಿಯ ಭಂಡರುಂ ಲೋಚಿನಂ ತಾಲ್ಯರುಂ ಬೆತ್ತಲೆಯ ಭ್ರಷ್ಟರುಂ ಕಂಚದ ಖೂಳರುಂ ತಟ್ಟುಗಳ ಅಜ್ಞಾನಿಗಳುಂ ನಾರುವಾಯ ನರಕಿಗಳುಂ ಸರ್ವಮಲಭಾಂಡರುಂ ನೆರೆದು ಬಂದು ಮನೆಯ ಮುಂದೆ ಸಂದಣಿಸೆ ಪಾರಿಷ ಪಂಡಿತಂ ಕಂಡು ಪೇಳ್ದುದೊಂದು ಮಡಿ ಬಂದುದು ನಾಲ್ಮಡಿಯಾಯ್ತಿನ್ನೇನಂ ಮಾಳ್ಪೆನೆಂದು ಚಿಂತಿಸಿ ತನ್ನ ಸತಿಯಂ ಕರೆದು ಕೇಳಲದಕ್ಕಂಜಲುಬೇಡ ನಮ್ಮ ಪದ್ಮಾವತಿಯ ಗಂಡಂ ಗೊರವರ್ಗೆಂದು ಮಾಡಿಸಿದ ಬೋನಮಿದರ್ಪುದೇಳಿ ಎಂದು ಮಗಳಂ ಕರೆದು ಕೆಸರ ಕೊರತೆಗೆ ಕತ್ತುರಿಯಂ ಕೊಳ್ವಂತೆ ಸುಣ್ಣದ ಕೊರತೆಗೆ ಬೆಳ್ದಿಂಗಳಂ ಬಳಸುವಂತೆ ಮಸಿಯ ಕೊರತೆಗೆ ಮಾಣಿಕವಂ ಕೂಡುವಂತೆ ಬೇಲಿಯ ಕೊರತೆಗೆ ಕಲ್ಪತರುವಂ ತರಿವಂತೆ ಕಸದ ಕೊರತೆಗೆ ಕರ್ಪುರದ ರಜವಂ ಬೆರಿಸುವಂತೆ ಪದ್ಮಾವತಿಯಂ ಬೋನವಂ ಬೇಡೆ ಪದ್ಮಾವತಿ ನಡನಡುಗಿ ಬೇಡ ಬೇಡ ಕೊಡುವುದಿಲ್ಲೆಂದು ಬಾಗಿಲೊಳ್ನಿಲೆ ಚಂದ್ರಕಳೆಯಂ ರಾಹು ಪಿಡಿವಂತೆ ಪಿಡಿದು ಒಳಪೊಕ್ಕು ಕೊಂಡು ಪೋಗಿ ಸುರಹೊನ್ನೆಯ ಜಿನಪ್ರತಿಮೆಗೆ ಮಾರಿಯಂ ತಪ್ಪಂತೆ ತಂದು ಕಾಡುಗಿಚ್ಚಿಂಗೆ ತುಯ್ಯಲ ಸೂಡುವಂತೆ ಸುಧೆಯಂ ನಾಯಿಗೆ

ರೆವಂತೆ ಪಂಚಭಕ್ಷ್ಯಮಂ ವಾಯಸಂಗಿಕ್ಕುವಂತೆ ಫಳರಸನುಂ ಬಕಂಗಿ ಕ್ಕುವಂತೆ ತಂದು ಬೆತ್ತಲೆಯ ಬಣಗುಗಳಿಗಿಕ್ಕಿ ಕೆಂಗೈಗಳೊಳು ತಮ್ಮ ಪೂರ್ವಜನ್ಮದ ಕರ್ಮಶೇಷವನುಂಬಂತುಂಡು ಚಂಡಿಗಳೆಲ್ಲಂ ಪೊರಮ ಡುವ ಸಮಯದೊಳು,

ಬಳಲ್ದ ತಪೋಧನ ದೇವರ್ಗೆ ಕೈಗೊಟ್ಟು ಮೆಲ್ಲಮೆಲ್ಲನೊಡಗೊಂಡು ಬರ್ಪಾಗಳು ಬೆಳಗಿನ ಮುಂದಣ ಕತ್ತಲೆ ಪರಿವಂತೆ ಪುಣ್ಯದ ಮುಂದಣ ಪಾಪಂ ಪರಿವಂತೆ ನೋಡೆ ನೋಡೆ ಋಷಿಯರ್ಪರಿದು ಪೋಗಲಾದಯ್ಯಂ ಸಂದೇಹಿಸುತ್ತಂ ಮನೆಗೆ ಬಂದು ನೋಡುವಾಗಳ್ ಇರುಳ ತಾವರೆಯಂತೆ ಹಗಲ ಚಂದ್ರಮನಂತೆ ಮಶಿ ಪತ್ತಿದ ಸುವರ್ಣ ಪುತ್ತಳಿಯಂತೆ ಕಂದಿರ್ದ ಪದ್ಮಾವತಿಯಂ ಬೆಸಗೊಳಲು ನುಡಿಯಲಮ್ಮದೆ ಸುಮ್ಮನೆ ಸೆರೆ ಬಿಗಿದು ಭೀತಿ ಗೊಂಡಾಗ ತಮ್ಮ ತಾಯ್ತಂದೆಗಳು ಬಲ್ಪಿಂ ಮನೆಯಂ ಪೊಕ್ಕು ಬೋನನುಂ ಕೊಂಡೊಯ್ದು ಋಷಿಯರ್ಗಿತ್ತರಿನ್ನಿವರ್ಗೆ ಬೋನಮಂ ಮಾಳ್ಪೆನೆಂದು ನುಡಿಯಲಾ ನುಡಿಗೊಮ್ಮೆ ಸತ್ತು ಹುಟ್ಟಿ ಕೆಂಪಡರ್ದ ಕಂಗಳಿಂ ಕೆತ್ತುವ ಮೀಸೆಯಿಂ ಒತ್ತುವ ಕರಣಂಗಳಿಂ ಒತ್ತುವಾಸೆಯಿಂ ಮುತ್ತುವ ಕೋಪದಿಂ ಕನಲ್ದು ನೋಡುತ್ತಿವಳಂ ಕೊಂಡೊಡಂ ಪಂಡಿತನಂ ಖಂಡಿಸಿದೊಡಂ ತಪೋ ಧನನಂ ತಣಿಪಿದಂತಾಗದೆನುತ್ತಂ ಒಳಗೊಳಗೆ ಹೊತ್ತಿ ಹೊಗೆವ ಜೈನರ ಸಾವಿನ ಸಂಚಕಾರದುರಿ ಕೋಪಮಂ ಬೈತಿಟ್ಟು ತಪೋಧನನಂ ನೋಡಿ ಎನ್ನೊಡವೆ ನಿಮಗೇಕೆ ಸಲ್ವುದು ಪಾಪಿಯ ಒಡವೆ ಪುಣ್ಯಕಪ್ಪುದೆ ಎಂದ ನುತಾಪದಿಂದವರನೊಡಗೊಂಡು ಪೋಗಿ ನವಫಲವಿಕ್ರಯ ವೀಥಿಯೊಳು ಕದಳೀಫಳ ದ್ರಾಕ್ಷ ಖರ್ಜೂರ ನಾರಿಕೇಳಾದಿ ಫಲಂಗಳಿಂ ತಪೋಧನನಂ ಕಳಿಪಿ,

ಆದಯ್ಯ ಮನೆಗೆ ಬಂದುಮ್ಮಳದಿಂ ಪಟ್ಟಿರಲಲ್ಲಿಗೆ ಪದ್ಮಾವತಿ ಬಂದಾ ದಯ್ಯನನಾರೋಗಣೆಗೆಬ್ಬಿಸೆ ಕನಲ್ದು ಕಿಡಿಕಿಡಿಯಾಗಿ ತನ್ನ ದೇಹವಂ ಛಿನ್ನಪತ್ರವಾಗಿ ಬಿಸುಡವೇಳ್ಪುದಲ್ಲದೊಡೆ ಒಂದುಪವಾಸವನಾದೊಡಂ ಮಾಳ್ಪೆನಲ್ಲದೂಟಮಿಲ್ಲೆಂದು ನುಡಿದ ಮಾತಂ ಕೇಳ್ದು ಮಗಳ ಮೋಹಕ್ಕೆ ಮಾತಾಪಿತರ್ಬಂದು ಬೇಡಿಕೊಂಡೆಲ್ಲಾ ತೆರದಿಂದೊಲ್ಲದಿರೆ,

ಇಂತಪ್ಪಾಪ್ರಶ್ಚರ್ಯವೆಂತಾದೊಡಂ ತಾನರ್ಚಿಪ ಸೋಮನಾಥನಂ ಸುರಹೊನ್ನೆಯ ಬಸದಿಗೆ ತಂದಡಲ್ಲದುಂಬನಲ್ಲ ತನ್ನಂ ಪ್ರಾರ್ಥಿಸಲೇ ಕೆಂದು ನುಡಿಯೆ ಪಾರಿಷಂ ಕೇಳ್ದು ನೆಟ್ಟನೆ ನುಡಿದ ಕಟ್ಟಣಕಮುಂ

ತೊಟ್ಟನೆ ಕಿವಿಯಂ ಮುಟ್ಟಿ ಘೂರ್ಮಿಸಿ ಗಜರಿ ನುಡಿದಂ ಅದಕ್ಕಾದಯ್ಯಂ ಕೇಳಿಲೊ ಮರುಳು ಜೈನ ನೀಂ ಪ್ರತಿಯಲ್ಲ ನಿನ್ನ ಮನಮಂ ಪ್ರೇರಿಪ ನೀಶ್ವರಂ ನೀನೆಂದಂತೆ ಜಿನನಂ ಇಬ್ಭಾಗ ಮಾಡಿ ಸೌರಾಷ್ಟ್ರ ಪತಿಸೋಮ ನಾಥನಂ ಬಿಜಯಂಗೈದಲ್ಲದೂಟವಿಲ್ಲೆಂಬ ನೇಮಮಂ ಕೈಕೊಂಡೆಂ ಕೊಂಡೆನೆಂದು ಗದ್ದುಗೆಯಂ ಪೊಯ್ದಾಸ್ಫೋಟಿಸಿ ನಿಂದಿರ್ದ ಪುಲಿಗೆ ರೆಯಿಂ ಪೊರಮಡುವಾಗಳೊಡನೊಡನೆ ಬರ್ಪ ಪದ್ಮಾವತಿಯಂ ಕಂಡು ಸೋಮನಾಥನಂ ತಂದಪೆಂ ಪುಸಿಯಲ್ಲಂಜದಿರೆಂದು ಸತ್ಯದೃಷ್ಟಿಯಿಂ ಸಾಗಿಸಿ ನೋಡೆ ಪಿಂತಿರಲಾಕೆಯುಂ ನೀವೆಂದು ಬರ್ಪನ್ನೆಗಂ ಅಶನ ಪ್ರತಮಂ ಕೈಕೊಂಡೆಂ ಪೆರಪಿಂಗಿ ನಿಲೆ,

ಸತ್ಯ ನಿಧಿಯೆನಿಪ ಸತ್ಯ ಶರಣನುತ್ತರಾಭಿಮುಖನಾಗಿ ವಿಭೂತಿಯ ವೀರಂ ರುದ್ರಾಕ್ಷಿಯ ಭದ್ರಗಜಂ ಪಂಚಾಕ್ಷರಿಯ ಪಂಚಾನನಂ ಜೈನಕುಲ ಕುಮುದ ಮಾರ್ತಾಂಡನೆನಿಪಾದಯ್ಯಂ ನಡೆದು ಬರುತಂ ಗಿಡಮುಂ ಮುಳ್ಳುಂ ಮಳೆಯುಂ ಸರಿಯುಂ ದರಿಯುಂ ಹಳ್ಳಂ ಕೊಳ್ಳಂ ಗಟ್ಟ ಬೆಟ್ಟಂ ಗಳೆನ್ನದೆ ಹುಲಿ ಕರಡಿ ಸಿಂಹ ಶಾರ್ದೂಲಂಗಳಂ ಲೆಕ್ಕಿಸದೆ ಮಳೆ ಬಿಸಿಲು ಗಾಳಿಗಳಂ ಲೆಕ್ಕಿಸದೆ ಕ್ಷುತ್ತು ತೃಷೆ ನಿದ್ರೆಗಳೆನ್ನದೆ ನಡೆವೆಡೆಯೊಳಂಗಾಲು ಮೊನೆಗಲ್ಲೊತ್ತಿ ಹಲ್ಲಯಿಸಿ ಬಿರಿದು ಬಿಸಿ ನೆತ್ತರ್ಜಿಗುರ್ತು ರಕ್ತಪಂಕದಿಂ ಮುಳ್ಳು ಕಡ್ಡಿ ದಸಿಗಳ್ಪತ್ತಿ ಮೆತ್ತಿದೊಡಂ ಕರಯುಗಮಂ ಕಂಪಿಸಿ ಬಸಿರ್ಬತ್ತಿ ಬಾಯ್ಬತ್ತಿ ಪಲ್ದೋರಿ ಬೆನ್ನು ಕುಸಿದು ಮೊಗ ಬಣಗಿ ಕಣ್ಗಂದಿ ಕಾವುಳಂ ಕವಿದೊಡಂ ಸೋಮನಾಥನ ದರ್ಶನಭರಭರಿತ ಸರ್ವಾಂಗಂ ಬಗೆಗೊಳ್ಳದೆ ಭಾವಿಸದೆ ಸರ್ಪಭೂಷಣನ ಧ್ಯಾನದಿಂದಿಪ್ಪತ್ತೆಂಟು ದಿನಮೀ ತೆರದೊಳಾ ತುರದಿಂ ಬರ್ಪಲ್ಲಿ,

ನೆತ್ತರ್ಗಲ್ಲೆಗಳಿನುಗುಳ್ವ ಪದತಳದಡಿ ಇಡಲ್ಬಾರದೊಡೆ ಕುಳ್ಳಿರ್ದುಂ ಕುಳ್ಳಿರಲ್ಬಡೆಯದೆ ಪೊರಳ್ದುರುಳ್ದು ಬರುತ್ತೊಂದು ಬೆಲ್ಲವತ್ತದ ಮರದ ನೆಳ ಲೊಳ್ವಿಗತಚೇತನಂ ಪಥಶ್ರಮ ಮೂರ್ಛಿತನಾಗಿ ಬರಲಲ್ಲಿಗೆ ಚೀಲಾಳನ ಚಿತ್ತವಲ್ಲಭಂ ಅರಿವಾಳ್ತಾಂಡರ ಎಲುದೋರಿ ಸರಸವಾಡುವ ಸುಲಭಂ ವಹಿ ಲಯ್ಯನ ಓವದೆ ನೋಡುವ ದಯಾಭರಿತಂ ತಿರುಕುರುಪೆತೊಂಡರ ಇರದೆ ಕಾಡುವ ದಯಾಪರಂ ಸಾಯ ಬಡಿದು ಕಿವಿಯನೂದುವ ಕರುಣಿ ಎನಿಪ ಸೌರಾಷ್ಟ್ರದೊಡೆಯಂ ಸೋಮನಾಥನೋರ್ವ ವೃದ್ಧ ಮಹೇಶ್ವರನಾಗಿ ಕೊಡೆ ಕಮಂಡಲಂ ಯಜ್ಞೋಪವೀತಂ ನೊಸಲಭಸಿತಂವೆರಸಿ ಆ ದಾರಿಯಿಂ

ಬರ್ಪಂತೆ ಬಂದಾದಯ್ಯನ ಮುಂದಿಳಿವಿದಂತೆ ನಿಂದಿರೆ ಮಗನೆ ಮಗನೆ ನೀನೆಲ್ಲಿಗೆ ಪೋದಪೆ ಬಳಲ್ಕೆ ಪಿರಿದಾಯ್ತು ಸಮೀಪದೊಳೂರುಂಟೆ ಎಂದು ಕೇಳಲೊಡಂ ಚಂದ್ರಂಗೆ ಮೇಘಂ ಕವಿದೊಡಂ ಜಗಕ್ಕೆ ತಣ್ಪು ತಪ್ಪದೆಂಬಂತೆ ವೇಷದ ಮರೆಯ ಚಂದ್ರಚೂಡನ ಸುಧಾವಾಕ್ಯವಾದಯ್ಯಂಗೆ ಶೀತಳಾಮೃತವಿತ್ತು ಚೇತನಂಗೊಡಲೆದ್ದು ನಿಂದಿರ್ದು ಮಹೇಶ್ವರಂಗುತ್ತರಂಗುಡುವುದರಿಂ ಮತ್ತೆ ಹತ್ತಡಿಯಂ ಸೋಮನಾಥನನಲ್ಲಿಗೆ ನಡೆವೆನೆಂದು ಮರುಮಾತುಗೊಡದೆ ಪೋಗುತ್ತಿರೆ ತನ್ನ ಮೇಲಣ ನಿಷ್ಠೆಗೆ ಪನ್ನಗಭೂಷಣಂ ಮೆಚ್ಚಿ ಮುಂದಡ್ಡ ಬಂದು ಕೈಯ್ಯಂ ಪಿಡಿದು ಪೇಳು ಪೇಳೆಲ್ಲಿಗೆ ಪೋದಪ್ಪೆ ಎನೆ ಸೌರಾಷ್ಟ್ರ ಪತಿಯಂ ಪುಲಿಗೆರೆಗೆ ಬಿಜಯಂಗೈಸಿ ತರಲು ಪೋದಪೆಂ ನೀಂ ಬಲ್ಲೆಯಾ ನಾನರಿಯದೊಡಾತನನರಿವನ್ನೆಗಂ ಎನ್ನಸುರುಳ್ಳನ್ನೆಗವೈದುವೆನೆಂದು ನುಡಿದ ನಿಶ್ಚಲ ವಚನಕ್ಕೆ ಮೆಚ್ಚಿ ನಿಂದೆಲೆ ಮಗನೆ ಇಂತಾದೊಡಾಂ ಸೋಮನಾಥಂ ನಿನ್ನ ನಿಷ್ಠೆಗೆ ಮೆಚ್ಚಿ ಬಂದೆಂ ಕಂದಾ ಬಳಲದಿರೆಂದು ಕರುಣಿಸಲೊಡಂ ಬಳಲಿಕೆಯಡಂಗಿದುದರಿಂ ನಂಬುಗೆ ಏರುತ್ತಂ ವೇಷಮುಂ ಕಂಡು ಶಂಕಿಸುತ್ತಂ ದೇವ ಮಾನುಷ ಚರಿತ್ರಂ ಮಾನುಷಾಕಾರನಾಗಿರ್ದೊಡೇನೆಂದು ನಂಬಲರಿಯದಿರ್ಪೆಂ ಎನ್ನ ಮನದ ಸಂದೇಹಮಂ ಪಿಂಗಿಸಿ ಕರುಣಿಪುದೆಂದು ಬಿನ್ನವಿಸಲಾ ಮಾತಿನೊಡನೆ ಚಂದ್ರಕಳೆ ದಶಭುಜಂ ಕೆಂಜೆಡೆ ಲಲಾಟಲೋಚನಂ ಪುಲಿದೊವಲು ನಂದಿವಾಹನವೊಪ್ಪೆ ಗುರು ಕರುಣಿಸಿದ ಶಿವಲಿಂಗದೊಳಗಣ ಮೂರ್ತಿ ವಿಳಾಸಂ ಸಾಕಾರ ಸಂವಿತ್ತವಯವದ ಪರಬೊಮ್ಮಂ ಸೋಮನಾಥನಾದಯ್ಯನ ಕಣ್ಣ ಪುಣ್ಯದಂತೆ ಮುಂದೆ ತೋಳಗುತ್ತಿರೆ ಇರೆ.

## ದ್ವಿತೀಯಸ್ಥಲ ಸಂಪೂರ್ಣ



## ತೃತೀಯಸ್ಥಲ.

→⁂←

**ಕಂದ**— ಕಂಡಂ ತ್ರಿಶೂಲವ ಭಯಂಕ
ರಂಡ ಮರುಗವಜಕಪಾಲವಹಿಪತಿಕಟಕಂ
ಕುಂಡಲವಿಂದು ಕಳಾಪಂ
ಮಂಡಿತನಂ ಹಂಪೆಯಾಳ್ದನಂ ನಲವಿಂದಂ

### ರಗಳೆ.

ಕಂಡು ತವಕದಿಂದಂ ಸ್ಯೆಗೆಡೆದಂ
ತಂಡದ ಪುಳಕವನಂಗದೊಳಿಡಿದಂ
ಅಧ್ವಶ್ರಮಮಂ ಕಳೆದಂ ತಳೆದಂ
ಸಾಧ್ವಿಯೆನಿಪ ಭಕ್ತಿಯನುರೆ ತಳೆದಂ
ಸಿಂದಿರ್ದಂ ಕೈಮುಗಿದಂ ಮುಗಿದಂ
ಇಂದುಧರನ ನೀಕ್ಷಿಸುತೊಳಸುಗಿದಂ
ದೇವಾ ಮುನ್ನಿನ ತೆರದಿಂದಿಪ್ಪದು
ದೇವಾ ನೋಡುವಡೆನಗರಿದಪ್ಪುದು
ಎಂದೊಡೆ ಮುನ್ನಿನ ಅಂದದೊಳಿರ್ದಂ
ಕಂದನ ಸಾಗೊರ್ಯ್ಯನೆ ಸಾರ್ತಂದಂ
ನಾಡಿದು ಬರ್ಪೆಂ ಸೋಮನವಾರಂ
ಬೇಡೈ ಬೇಡೆಂದಾ ಸಂಸಾರಂ
ಎನಲಾದಯ್ಯಂ ನಾಡಿದು ಬಂದೊಡೆ
ಎನಗೆಂತಭವಾ ನೀನೆಂತೆಂದೊಡೆ
ಇಪ್ಪತ್ತೆಂಟುಂ ದಿನವೆಂದಿತ್ತಂ
ತಪ್ಪದೆ ನಡೆಯಲು ಬಾರದೆನುತ್ತಂ
ಪ್ರಭುವೇ ವಿಭುವೇ ರಕ್ಷಿಪುದೆನುತಂ
ಅಭವಾ ಶಂಕರ ಕರುಣಿಪುದೆನುತಂ
ಆದಯ್ಯನ ನಲವಿಂದಪ್ಪುತ್ತಂ
ಸಾದರದಿಂ ಕೃಪೆಯಿಂ ನೋಡುತ್ತಂ
ಬಿಲ್ವತ್ತದ ನೆಳಲೊಳು ಪಟ್ಟಿರ್ಪೆಸು

ಚೆಲ್ವಿಂ ಪುಲಿಗೆರೆಯೊಳಗಿಟ್ಟಿರ್ಪೆನು
ಮರುದಿವಸಂ ಬಂದಪೆನೆರಡಿಲ್ಲಂ
ನೆರೆ ನಂಬುದಿದೇ ನುಡಿಗೆಡೆ ಇಲ್ಲಂ
ಎಂದಾ ಸುತನಂ ಪಟ್ಟಿರಿಸುತ್ತಂ
ಕಂದನನೊಲವಿಂ ಬೋಳೈಸುತ್ತಂ
ನಡೆದಂ ಪುಲಿಗೆರೆಯತ್ತಂ ಶರ್ವಂ
ಮೃಡನಭವಂ ನಿತ್ಯಂ ತಾನೋರ್ವಂ

ಇತ್ತಲು ಮರೆವಟ್ಟಿರ್ದಾಪಯ್ಯಂ
ಚಿತ್ತಜಹರನಾಜ್ಞೆಯೊಳಾದಯ್ಯಂ
ಘಳಿಲನೆ ಕಣ್ದೆರೆದಂ ಪುಲಿಗೆರೆಯೊಳು
ಬಳಲುವ ಪದ್ಮಾವತಿ ಇಪ್ಪೆಡೆಯೊಳು
ಕಣ್ದೆರೆಯಲು ಕಂಡಳು ಪದ್ಮಾವತಿ
ನುಣ್ದನಿಯಿಂ ನುಡಿದಳು ಪದ್ಮಾವತಿ
ಎನ್ನಯ ನಿಧಿ ಬಂದುದೆ ಸುಧೆ ಬಂದುದೆ
ಎನ್ನಯ ಕರಿ ಬಂದುದೆ ಸಿರಿ ಬಂದುದೆ
ಎನುತುಪವಾಸದಿ ಪಟ್ಟಿರ್ದೇಳುತೆ
ಮನದೊಲವಿಂ ಪ್ರಿಯನಂ ಬಂದಪ್ಪುತೆ
ಶಿವನಂ ಕಂಡವನಂ ಕಾಣುತ್ತಂ
ಪವಣಿಲ್ಲದ ಸುಖದಿಂ ಸೇರುತ್ತಂ
ಲಲನೆಯರಂ ಪದ್ಮಾವತಿ ಕರೆವುತೆ
ನಲವಿಂ ಬೋನವ ಮಾಡಲು ಪೇಳುತೆ
ಇರಲಾದಯ್ಯಂ ಸತಿಗಿಂತೆಂದಂ
ಭರದಿಂದಂ ಬೋನಂ ಬೇಡೆಂದಂ
ನಾಳೆ ಶಿವಂ ಸೋಮಯ್ಯಂ ಬರ್ಪಂ
ಶೀಲಗಳಂ ಸೋಮಯ್ಯಂ ಬರ್ಪಂ
ಗುರು ಬರ್ಪಂ ಉರುತರ ನಿಧಿ ಬರ್ಪಂ
ಹರಿಯಜರರಿಯದಗಮ್ಯಂ ಬರ್ಪಂ
ಸುರಹೊನ್ನೆಯ ಜಿನನಂ ಸೀಳುತ್ತಂ
ಅರುಹ ವ್ರತಿಗಳ ನುರೆ ಹೋಳುತ್ತಂ

ಬಂದ ಬಳಿಕ್ಕಂ ಬೋನಂ ಮಾಳ್ಪುದು
ಇಂದುಧರನ ಕರುಣದೊಳಿಸೆದಿರ್ಪುದು

ಎಂಬೀ ನುಡಿಯಂ ಸತಿಯರ್ಕೇಳುತೆ
ಬೆಂಬೇಳುತೆ ನಡೆದೆಡಹುತೆ ತಾಗುತೆ
ಪಾರಿಶ ಪಂಡಿತನಲ್ಲಿಗೆ ಬರುತಂ
ದೂರಿಸುತುಮ್ಮಳದಿಂದಂ ನಿಲುತಂ
ಆದಯ್ಯಂ ನುಡಿದುದನರುಪುತ್ತಿರೆ
ಆದರ ಉಡುಗುತ್ತಂ ಪೇಳುತ್ತಿರೆ
ಆಹಾ ತಾನೇ ತಪ್ಪಂ ತಪ್ಪಂ
ಆಹಾ ಆಹಾ ಬಳಿಕೇನಪ್ಪಂ
ಇನ್ನೇನಿನ್ನೇನಭವಂ ಬಂದಂ
ಇನ್ನೇನೀ ಬಸದಿಯೊಳೇ ನಿಂದಂ
ತಪ್ಪದೆ ಯಾತನ ನುಡಿಯುಂ ಧರೆಯೊಳು
ತಪ್ಪದೆ ಭಕ್ತನ ನುಡಿಯುಂ ಇಳೆಯೊಳು
ತಂದಂ ತಂದಂ ತಾರದೆ ಮಾಣ್ಬನೆ
ಬಂದಂ ಬಂದಂ ಬಾರದೆ ಮಾಣ್ಬನೆ
ನಡೆನಡೆ ಎನುತಂ ಬಸದಿಗೆ ಬಂದಂ
ಕಡುಗೋಪದೊಳೆಲ್ಲರ್ಗಿಂತೆಂದಂ
ಸೋಪುಯ್ಯಂ ಬಸದಿಗೆ ಬಂದಂ ಗಡ
ಏಮಾತೇ ಊರೊಳು ನಿಂದಂ ಗಡ
ಹಸನಾಯ್ತುಳಿಯುನ ನೋಟಂ ಬೇಟಂ
ವಿಷವಾಯ್ತುಳಿಯುನ ಮಾಟಂ ಕೂಟಂ
ಏಳಿರೆ ರಂಗವೊಲೆಗಳುಮನಿಕ್ಕಿರೆ
ಏಳಿರೆ ಗುಡಿ ತೋರಣಮಂಗಟ್ಟಿರೆ
ಎಂಬೀ ಕಟಕಿಗಳಂ ನುಡಿವುತ್ತಂ
ನಂಬದ ನರಕಿಗಳೊಂದಾಗುತ್ತಂ

ಇರಲಸ್ತಾದ್ರಿಯನೇರಿದನರ್ಕಂ
ಧರೆಗಾದುದು ತಿಮಿರದ ಸಂಪರ್ಕಂ

ಜೈನರ ಕಣ್ಣಂಧತೆ ಕವಿದಂದದಿ
ಜೈನರ ಪಾಪಂ ಪೂರಿಸಿದಂದದಿ
ಕತ್ತಲೆ ಪುರದೊಳು ತೀವಿದ ಬಳಿಕಂ
ಒತ್ತಂ ಬಿಸುತಂ ಪರ್ವಿದ ಬಳಿಕಂ
ಬೆಳಗಿನ ಬಿತ್ತಂಕುರಿಸುವ ತೆರದಿಂ
ತೊಳತೊಳಗಿದವಾ ತಾರಕಿ ನಭದಿಂ
ಸೋಮಯ್ಯನ ಬರವರಿಪುವ ತೆರದಿಂ
ಸೋಮಂ ಪೊರಮಟ್ಟಂ ಸಮ್ಮದದಿಂ
ದಿಸೆಯುಂ ಕೌಮುದಿಯಿಂ ಧವಳಿಸುತಂ
ರಸೆಯುಂ ಕೂಡೆ ಕುಳಿರ್ಕೋಡಿಸುತಂ
ಚಂದ್ರಂ ಪೊರಮೊಟ್ಟೊಪ್ಪಿಪ್ಪಿರುಳೊಳು
ಚಂದ್ರಿಕೆ ಸುತ್ತಂ ತೀವಿರ್ಪೆಡೆಯೊಳು
ಸೋಮಯ್ಯನ ಚಿಂತೆಯೊಳಾದಯ್ಯಂ
ವ್ಯಾಮೋಹಂಗಳನಳಿದಾದಯ್ಯಂ
ಚಿಂತಿಸುತಿರಲರುಣೋದಯವಾದುದು
ಕಂತುಹರನ ಕರುಣೋದಯವಾದುದು
ಸವಣರನಾದಯ್ಯಂ ಭಂಗಿಪುದಂ
ತಪೆ ನೋಳ್ಪಿಂ ಭರದಿಂ ಸೋಲಿಪುದಂ
ಎಂಬಂದದೊಳಾದಿತ್ಯಂ ಮೂಡಲು
ಇಂಬಿನ ತಮವೆಲ್ಲಂ ಪರಿದೋಡಲು

ಪಾರಿಷ ಪಂಡಿತನೆಂದಿನ ತೆರದಿಂ
ಆರಯ್ಯದೆ ನಡೆತರುತಂ ಭರದಿಂ
ಸುರಹೊನ್ನೆಯ ಬಸದಿಯ ಪೊಸ ಕದವಂ
ಹರನೊಳಗುದ್ಭವಿಸಿದ ಸನ್ಮತವಂ
ತಗೆಯಲ್ಕುದ್ಯೋಗಿಸಿ ಹೋಗದೆ ನಿಲೆ
ಬಗೆಯೊಳ್ನಿರೆ ಬೆರಗಾಗುತ್ತುಂ ನಿಲೆ
ಒತ್ತಲು ನೂಂಕಲು ಮಿಡುಕದೆ ನಿಂದಿರೆ
ಕೆತ್ತಲು ಕಡಿಯಲು ಸೆಡೆಯದೆ ನಿಂದಿರೆ
ಕದವದು ಚಲಿಸದೆ ಧಾರುಣಿಯಂತಿರೆ

ಕದವದು ತೆರೆಲಗದೆ ಮೇರುವಿನಂತಿರೆ
ಕಂಡಲ್ಲಿಯು ಸವಣರ್ನಡಗುತ್ತಂ
ಚಂಡಿಗಳೆಲ್ಲಂ ಬೆಂಡಾಗುತ್ತಂ
ಬಿತ್ತಲೆಗಳ್ನೆರೆಬಾಯಿಂ ಬಿಡುತಂ
ಸುತ್ತಿದ ಸವಣರ್ನೆರೆ ಕೂಗಿಡುತಂ
ಪಂಡಿತರೆಲ್ಲಂ ಖಂಡಿತರಾಗುತ್ತೆ
ತಂಡದ ಋಷಿಗಳ್ ತೆರದಿಂ ನೋಡುತ್ತೆ

ಇರೆ ಬರುತಿರ್ದಂ ಹರನಾದಯ್ಯಂ
ಬರುತಿರ್ದಂ ಶಶಿಧರನಾದಯ್ಯಂ
ಧರಣೀ ತಳದೊಳು ಗುರುವಾದಯ್ಯಂ
ಶರಣ ಜನದ ಸುರತರುವಾದಯ್ಯಂ
ಸುಮ್ಮಾನದ ಸಮುಸುಖಿಯಾದಯ್ಯಂ
ಹಿಮ್ಮೆಟ್ಟದ ಕಲಿಥಲಿಯಾದಯ್ಯಂ
ನಡೆತರೆ ಪದ್ಮಾವತಿ ಬೆಂಬಿಡದಿರೆ
ಕಡು ನೇಹಿತೆ ಯೊಡನೊಡನೆ ಬರುತ್ತಿರೆ
ಒಪ್ಪಾದಯ್ಯನ ಸಾಮರ್ಥ್ಯದೊಳುಂ
ಸರ್ಪಾಭರಣನ ಘನ ಕರುಣದೊಳುಂ
ಬಸದಿಯ ಮುಂದಣ ಕುರುಡಂ ಹೆಳವಂ
ಮಿಸುಗುವ ಕಣ್ಕಾಲ್ಪಡೆದುಜ್ವಲವಂ
ತಳೆದಿದಿರ್ವಂದಾದಯ್ಯಂಗೆರಗಲು
ತೊಳತೊಳಗುವ ಭಸಿತವನಿಟ್ಟಿರಲು
ದೇವಾ ಗುರು ನೀವೆಂದೊಡಬರುತಿರೆ
ಭಾವಿಸೆ ಜೈನರು ಬೆರಗಾಗುತ್ತಿರೆ

ಆಯುತಿಯಿಂ ಭಕ್ತಿಯ ಭಂಡಾರದಿ
ಬೀಯುಗದಲ್ಲಿಗೆ ಕೈ ಬಪ್ಪಂದದಿ
ನಿಷ್ಠೆಯ ನಿಧಿ ಕಡುಪಿಂದೈತಂದಂ
ನೆಟ್ಟನೆ ಬಾಗಿಲು ಮುಂದಂ ನಿಂದಂ
ಸವಣರ ಹಾಳೆದೆ ಕದದೆರೆವಂತಿರೆ

ಸವಣರ ಕಲ್ಲೆದೆ ಹಾಳಾಗುತ್ತಿರೆ
ನಲಿದಾದಯ್ಯಂ ಕಂಡಂ ವಿಭುವಂ
ಸಲೆ ನೆಲಿಸಿದ ಸೋಮಯ್ಯ ಪ್ರಭುವಂ
ಶಿವಭಕ್ತರ ಘನತರಸುಖ ಸಿಂಧುವೆ
ಶಿವಭಕ್ತರ ಮನದನುಪಮ ಬಂಧುವೆ
ಶರಣ ಮಹತ್ವದ ನಿತ್ಯದ ಪುರುಳೇ
ಶರಣರ ಚಿತ್ತದ ಬಿತ್ತಿನ ತಿರುಳೇ
ಸುರುಚಿರ ಶರಣರ ಕಣ್ಣಿಂಗತಿಯೇ
ವರಮುನಿಗಳ ಘನಮತಿಯುನ್ನತಿಯೇ
ಎಂದಾದಯ್ಯಂ ನೆರೆ ಪೊಗಳುತ್ತಿರೆ
ಇಂದುಧರನ ಕರುಣಂ ಕವಿವುತ್ತಿರೆ

ಭಕ್ತಿಯು ಬಾಸಣ ಓಸರಿಸಂದದಿ
ಮುಕ್ತಿಯ ಮುಚ್ಚುಳ ಮುಖವರಳ್ವಂದದಿ
ಘಳಿಲನೆ ಶಿವನ ಕವಾಟಂದೆರೆಯುಲು
ಪುಳುಕಂ ಭಕ್ತನ ಮೆಯ್ಯೊಳು ನೆಗೆಯುಲು
ಕಾಮಹರಂ ಕೃಪೆಯಿಂದೊಳಗಿರ್ದಂ
ಸೋಮಧರಂ ಮುದದಿಂ ಮೂಡಿರ್ದಂ
ಅರುಹನನೆರಳ್ಭಾಗಂ ಮಾಡುತ್ತಂ
ಹರನೊಲವಿಂದಂ ಸಲೆ ನೆಲಿಸುತ್ತಂ
ಸುರನದಿ ಜಡೆಮುಡಿ ಶಶಿಕಳೆಯೊಪ್ಪಿರೆ
ಉರಗಾಧಿಪ ಕುಂಡಲಯುಗ ಒಪ್ಪಿರೆ
ಶಶಿರವಿಶಿಖಿನಯನತ್ರಯ ವೆಸೆದಿರೆ
ಹೊಸ ಸುಧೆ ಸೂಸುವ ಸುಖಮುಖ ವೆಸೆದಿರೆ
ಡಮರುಗ ತಿಸುಳಂ ದಶಭುಜವೆಸೆದಿರೆ
ಕಮಳಜ ಶಿರವಭಯಕರಂ ಮೆರೆದಿರೆ
ಬಿಸಲಂ ಬೀರುವ ಪುಲಿದೊವಲೆಸೆಯುಲು
ಅಸದಳವೆಡೆಗಾಲೊಳು ತೊಡರೆಸೆಯುಲು
ಉರಗನ ಹೆಡೆಗಳ ಮಣಿಗೊಡೆ ಎಸೆಯುಲು
ಅರರೇ ಸೋಮೇಶಂಗೆ ಸಿಂಗರಿಸಲು
ಅಣಿಯುರದಿಂದೊಪ್ಪುವ ವೃಷಭೇಶನ

ಫಣಿಗಳ ಫಣೆಗಟ್ಟಿನ ಮುಗುಳ್ನೋಡಿನ
ಶೃತಿಗಳ ನೆಲೆವನೆ ಯೆನಿಸುವ ಕಿವಿಗಳ
ಅತಿ ಧರ್ಮದ ಕಣ್ಣೆನಿಸುವ ಕಣ್ಗಳ
ಭೀಕರ ತತಿಯಂ ಕೆಡಿಸುವ ಘ್ರಾಣದ
ಲೋಕದ ಭಕ್ತರ ಬೆಳೆ ಮುಖವಾದುದ
ಸತ್ಯಂ ಶಾಂತಂ ತನುವಾದಂತಿರೆ
ಮುಕ್ತಿಯು ಮೊಳೆ ಫಲವಾದಂತಿರುತಿರೆ
ಯುಗ ಧರ್ಮಂ ಸೇವಿಪ ಚತುರಂಘ್ರಿಯು
ಸೊಗಯಿಪ ಉರಗೆಜ್ಜೆಯು ಘನ ಘಂಟೆಯು
ಪ್ರಣವು ಧ್ವನಿಗಳು ಅಂದುಗೆಯಾಗಿರೆ
ಅಣಿಯುರದಿಂ ಶೃತಿ ತಿಂಥಿಣಿಯಾಗಿರೆ
ಚಲುವಿಂದೊಪ್ಪುವ ನಂದಿಯನೇರಿದ
ಒಲಿದ ಗಣೇಶ್ವರರೊಲವಂ ಹೇರಿದ
ಹರಿಯಜ ಸುರರಿಗೆ ಪದವಂ ತೋರಿದ
ಶರಣ ಜನಕೆ ತನ್ನಿರವಂ ತೋರಿದ
ಸುರಹೊನ್ನೆಯ ಬಸದಿಯೊಳು ನೆಲಸಿದ
ನರಲೋಕದೊಳಚ್ಚರಿಯಂ ಮಾಡಿದ
ಸೋಮಯ್ಯನನತಿ ಮುದದಿಂ ಕಾಣುತ

ಕಾಮಹರನನತಿ ಒಲವಿಂ ನೋಡುತ
ಆದಯ್ಯಂ ಸುಖದಿಂ ನಲಿದಾಡುತ
ಆದರದಿಂ ಹೆಚ್ಚುತ ಹೊರೆಯೇರುತ
ಕುಣಿವುತೆ ಕೂಗುತೆ ತೊನೆಯುತ್ತೆ ತೂಗುತೆ
ಮಣಿವುತೆ ಒಲಿವುತೆ ಬೀಗುತೆ ತೇಗುತೆ
ಬಂದಾ ವೃಷಭನ ಚರಣವನಪ್ಪುತೆ
ಮುಂದರಿಯದೆ ಸುಖ ಮೂರ್ಛೆಯೊಳೊಪ್ಪುತೆ
ಪುಳಕದೊಳುಬ್ಬುತೆ ಗದ್ಗದಿಸುತ್ತಂ
ಇಳಿವಶ್ರುಗಳಿಂದಂ ನನೆಯುತ್ತಂ
ಬೆಮರುತೆ ಬಿಕ್ಕುತೆ ಸುಖದಿಂ ಸೋಂಕುತೆ
ಅಮರ್ದಪ್ಪುತ್ತುಬ್ಬುತೆ ಬೊಬ್ಬಿಕ್ಕುತೆ

ಇರ್ದಾದಯ್ಯನನೀಶ್ವರ ನೋಡುತೆ
ಸಾರ್ದವನಂ ಪಿಡಿದೆತ್ತುತ್ತಪ್ಪುತೆ
ನಲವಿಂ ಮೂರ್ಧ್ನಿಘ್ರಾಣಂ ಮಾಡುತೆ
ಒಲವಿಂ ಸಾಮರ್ಥ್ಯಮುಮಂ ಕೂಡುತೆ

ಕೇಳೆಲೆ ಕಂದಾ ಸವಣರ್ನೆರೆದರು
ಆಳಿದ್ದೆಲ್ಲಾ ಕ್ಷುದ್ರರ್ನೆರೆದರು
ಹೋಗಿಯವಂದಿರನುರೆ ಸಂಹರಿಪುದು
ಬೇಗಂ ಶಿವಭಕ್ತಿಯನುದ್ಧರಿಪುದು
ಪೋಗೆಂದೋರ್ವ ಗಣೇಶನ ನೀವುತೆ
ರಾಗದಿ ಬತ್ತೀಸಾಯುಧವೀವುತೆ

ಕಳುಪಲ್ಕಾದಯ್ಯಂ ನಡೆತಂದಂ
ಕಳೆಯೇರುತೆ ಬಾಗಿಲೊಳಂ ನಿಂದಂ
ನಿಂದಿರೆ ಸವಣರ್ಲಕ್ಕದ ಸಂಖ್ಯೆಗೆ
ಬಂದುರವಣಿಸುತ್ತಿರೆ ಕೋಪಂ ಮಿಗೆ
ಕಂಡಾದಯ್ಯಂ ಬೇಡೆಂದೆನುತಿರೆ
ತಂಡದ ಜೈನರನುರೆ ಗರ್ಜಿಸುತಿರೆ
ನೋಡಿದಪೆಂ ಸೋಮಯ್ಯನನೆಲ್ಲಂ
ಬೇಡೆನ್ನದಿರೆವಿಮ್ಮೃಷ್ಟವನೆಲ್ಲಂ
ಎನುತಂ ವಚನದೊಳೊಳ್ಪಿತ್ತಾಡುತೆ
ಮನದೊಳು ಪಾತಕಮುಂ ನೆರೆ ನೆನೆವುತೆ
ಬರಲಾದಯ್ಯಂ ಗರ್ಜಿಸಿ ನುಡಿದಂ
ಅರುಹ ವ್ರತಿಗಳನೆಲ್ಲರ ಜಡಿಪಂ
ಕತ್ತಲೆ ಸೂರ್ಯನನಾಲೋಕಿಪುದೇ
ಬತ್ತಲೆಗಳಿರಾ ನಿಮಗೊದಗುವುದೇ
ತರಗೆಲೆ ದಾವಾನಲನಂ ನೋಳ್ಪುದೆ
ಉರಗ ಸಮೂಹಂ ಸಿಡಿಲಂ ನೋಳ್ಪುದೆ
ನೆರೆ ಮೂರ್ಖರಿರಾ ನಿಮಗಿದು ತಕ್ಕುದೆ
ಎನೆ ಲೆಕ್ಕಿಸದುರವಣಿಸುತೆ ಬರೆವರೆ

ತನತನಗೆಲ್ಲಾ ಜೈನರ್ನಡೆತರೆ
ಗಣನಾಥನನಾದಯ್ಯಂ ನೋಡಲು

ಕ್ಷಣದಿಂದೀರ್ವರು ಆಯುಧ ವಿಡಿಯಲು
ಕೊಂಡಾದಯ್ಯಂ ಶಿವನಂ ನೆನೆವುತೆ
ಕಂಡುರವಣಿಸುತೆ ಜೈನರನಟ್ಟುತೆ
ಕೆಡೆ ಕೆಡೆ ಕೆಟ್ಟ ಶಿವದ್ರೋಹಿಗಳಿರ
ಫಡಫಡ ಪಚ್ಚ ಪಸಿಯ ಪಾತಕರಿರ
ಎನುತಿರಲೊಂದು ಸಹಸ್ರಂ ಸತ್ತುದು
ಮುನಿದಿಡಲಿಚ್ಛಾಗಿಸಿರ ಧರೆಗದ್ದುದು
ಈ ತೆರದಿಂ ಬತ್ತೀಸಾಯುಧದಿಂ
ಪಾತಕರಂ ಕೊಲುತಿರೆ ಕಡು ಭರದಿಂ
ಕಂಡಾ ಜೈನರ ತಿಂಥಿಣಿ ಎಲ್ಲಂ
ಗಂಡುಗೆಡುತ್ತತಿ ಭೀತಿಯೊಳೆಲ್ಲಂ
ಸೈಗೆಡೆದುದು ಸಲ್ಲಂ ಕಿರಿವುತ್ತಂ
ವೈಗರೆವುತೆ ಪುಲ್ಲಂ ಕಚ್ಚುತ್ತಂ
ಶರಣೆಂದರನೆಲ್ಲಂ ಮಿಗೆ ಕಾವುತೆ
ಧುರದೊಳಗಿದಿರಾದವರಂ ತೀರ್ಚುತೆ
ಮರೆವೊಕ್ಕವರ ನೆರೆ ರಕ್ಷಿಸುತ್ತಂ
ಹೆರೆ ಸೂಡಿದನಲ್ಲಿಗೆ ತಿರುಗುತ್ತಂ

ಬಂದಾ ಸೋಮಧರಂಗೆರಗುತ್ತಂ
ನಿಂದೊಲವಿಂದಂ ಕೈಮುಗಿವುತ್ತಂ
ದೇವಾ ಜೈನರು ಸಾರ್ದರು ತೀರ್ದರು
ದೇವಾ ಖಳರಂತಕನಂ ಸಾರ್ದರು
ಪರಮ ಪ್ರಭುವೇ ಆಯುಧವಿಂತಿವೆ
ಉರಿವುರಿವುತೆ ಘೋರ್ಗರೆವುತ ನಿಂತಿವೆ
ಇವನೆಲ್ಲಿರಿಸುವೆನಂತಕಹರನೇ
ಭವನೇ ಭರ್ಗನೆ ಗಿರಿಜಾವರನೇ
ಎನೆ ಸೋಮಯ್ಯಂ ಕರುಣಿಸಿ ನೋಡುತೆ
ತನಯನನಾಲಿಂಗಿಸಿ ಮುಂಡಾಡುತೆ
ಖಡ್ಗವನೊಂದೆಡೆಯುಲಿ ಬೈತಿರಿಸಲು
ಖಡ್ಗದ ನಾಮದ ತೀರ್ಥವದೆನಿಸಲು

ಆ ಸಮಯದೊಳೆಲ್ಲಾ ಶರಣರ್ಬರೆ
ದೇಶದ ಗಣ ಮುಖ್ಯರ್ಕವಿಗಳು ಬರೆ
ಕಂಡಾದಯ್ಯಂ ಗಣಕುಲಕೆರಗುತೆ
ತಂಡದ ಪುಳುಕಾವಳಿಯುಂ ಹೇರುತೆ
ಸೋಮಯ್ಯನೊಲವಿಂ ತೋರುತ್ತಂ
ಕಾಮಹರಂ ಎಲ್ಲರ್ಗರುಪುತ್ತಂ
ನಲವಿಂ ಪ್ರಸಾದ ಭೋಗಂ ಮಾಡುತೆ
ನಲಿನಲಿದೂಲೆದೊಲೆದಕ್ಕರೊಳಾಡುತೆ
ಪದ್ಮಾವತಿಯುಂ ನಲವಿಂದಪ್ಪುತೆ
ಪದ್ಮಜ ಮಸ್ತಕ ಹಸ್ತನನರಿಪುತೆ

ಇರೆ ಪೂಮಳೆಗರೆದುದು ನಭದಿಂದಂ
ತರದಿಂ ಮೊಳಗಿತು ದುಂದುಭಿವೃಂದಂ
ಬಹುವಿಧ ವಾದ್ಯಧ್ವನಿ ಪೊಣ್ಮುತ್ತಿರೆ
ಕಹಳಾರವ ವೇಣ್ಡೆಸೆ ಗುಣ್ಮುತ್ತಿರೆ
ಬಂದುದು ಪುಷ್ಪಕವಾಗಸದಿಂದಂ
ನಿಂದುದು ಶರಣರ ನಡು ಒಲವಿಂದಂ
ಏರಿದನಾದಯ್ಯಂ ಶುಭಚರಿತಂ
ಏರಿದನಾ ಪದ್ಮಾವತಿ ಸಹಿತಂ
ಶರಣರು ಸುಖದಿಂ ನಲಿದಾಡುತ್ತಿರೆ
ಅರುಹ ವ್ರತಿಗಳು ಒಲವಳಿವುತ್ತಿರೆ
ಪುರಜನವೆಲ್ಲಂ ಬೆರಗಾಗುತ್ತಿರೆ
ಧರೆ ಕೌತುಕದಿಂ ಕೊಂಡಾಡುತ್ತಿರೆ
ನೆಗೆದುದು ಪುಷ್ಪಕವಂಬರ ತಳದೊಳು
ಬಗೆ ಮಿಗೆ ನೆಗೆದುದು ತಾರಾಪಥದೊಳು
ನಡೆತರುತಂ ನಂದೀಶನ ಬಾಗಿಲ
ನಡುವೆ ವಿಮಾನವ ನಿಳಿದಾದಯ್ಯಲ
ಒದವಿದ ಭಕ್ತರ ಭಾಗ್ಯದ ಬಯಕೆಗೆ
ಸದಮಲ ಶರಣರ ಪರಮಜ್ಯೋತಿಗೆ
ನಿರುಪಾಧಿಕ ಜ್ಯೋತಿರ್ಮಯ ಭಾನುಗೆ

ಎರಡಾಗದ ನತ ಜನಸುರ ಧೇನುಗೆ
ಮೆಯ್ಯಿಕ್ಕುತ ಪುದದಿಂ ಪಟ್ಟಿರ್ದಿರೆ
ಕೆಯ್ಯೆತ್ತುತ ಕರುಣಂ ದೋರುತ್ತಿರೆ
ಶಿವನಾದಯ್ಯಂ ನಲಿದಪ್ಪುತ್ತಂ
ಪವಣಿಲ್ಲದ ಸುಖದಿಂದಪ್ಪುತ್ತಂ
ನಂದೀಶಂಗಾದರದಿಂ ತೋರುತೆ
ನಿಂದ ಗಣಾಳಿಗೆ ನಲವಿಂ ಪೇಳುತೆ
ಮುನ್ನಿನ ಆದಿಗಣೇಶನ ನಾಮಂ
ಸನ್ನುತವಾಗಿಯೆ ಕೊಡುತಂ ಪ್ರೇಮಂ
ಮಿಗೆ ಪದ್ಮಾವತಿಯುಂ ಕರೆವುತ್ತಂ
ಸೊಗಯಿಪ ಸುರಸತಿಯರೊಳಿರಿಸುತ್ತಂ
ಕೈಲಾಸಾಧೀಶ್ವರ ನೊಪ್ಪಿರ್ದಂ
ಶೈಲಜೆಯರ ಘನನಿಧಿಯೊಪ್ಪಿರ್ದಂ
ಪುಲಿಗೆರೆಯೊಳು ನೆಲಸಿದನೊಪ್ಪಿರ್ದಂ
ಪುಲಿಗೆರೆ ಯರಸಂ ತಾನೊಪ್ಪಿರ್ದಂ
ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದಂ
ಹಂಪೆಯ ವಿರುಪಂ ತಾನೊಪ್ಪಿರ್ದಂ

**ಕಂದಃ** — ಆಯ್ಯಯ್ಯ ನಿಮ್ಮ ನೊಲವಿಂ
ದೊಯ್ಯನೆ ಪುಲಿಗೆರೆಗೆ ಬರಿಸಿ ನಿಲಿಸಿದ ಕಲಿಯಾ
ವೈಯ್ಯನವನೆಂದು ಭಕ್ತಿಯ
ನಯ್ಯಯ್ಯಾ ಕರುಣಿಸೆನಗೆ ಹಂಪೆಯರಾಯಾ

**ಸಮಾಪ್ತಂ**



ಲಿಂಗ ಪೂಜೆ ಮಾಡುವಲ್ಲಿ ಪತ್ರೆಗಳನ್ನು ಹರಿಹರಿದು ತಂದದ್ದರಿಂದ ಗಿಡಗಳೆಲ್ಲವೂ ನಾಶವಾಗಿ ಹೋದವು. ಅವರುಲಿಂಗಕ್ಕೆ ಮಜ್ಜನವನ್ನು ಎರೆದು ಎರೆದು ಏಳು ಸಮುದ್ರಗಳು ಬರಿದಾಗಿ ಹೋದವು. ಲಿಂಗಕ್ಕೆ ಧೂಪ ವನ್ನು ಅರ್ಪಿಸಿ ಅರ್ಪಿಸಿ ಅಗ್ನಿಯು ಸಹ ಬರಿದಾಯಿತು. ಇಂಥ ಪೂಜಾ ಕಾರ್ಯಗಳಲ್ಲಿ ಓಡಾಟಕ್ಕೆ ವಾಯು ಸಹ ನಿಂತು ಹೋಯಿತು. ಲಿಂಗದ ಹೊಗಳಿಕೆಯ ಶಬ್ದಗಳನ್ನು ಉಚ್ಚರಿಸಿ ಉಚ್ಚರಿಸಿ ಸಪ್ಪಳವು ಸಹ ಆಗು ವದು ನಿಂತು ಹೋಯಿತು. ಜನರು ಈ ಪ್ರಕಾರ ಲಿಂಗ ಪೂಜೆ ಮಾಡು ತ್ತಿರುವಲ್ಲಿ ನನಗೇನೂ ಲಿಂಗ ಪೂಜೆಯ ಸಾಮಗ್ರಿಯು ಉಳಿಯಲಿಲ್ಲೆಂದು ವಚನಕಾರನು ಇಲ್ಲಿ ದುಃಖಿಸುತ್ತಾನೆ. ಈ ಸ್ಥಿತಿಯು ಒದಗಿದ ಬಳಿಕ ನಾನು ಮಾಡುವ ಪೂಜೆ ಯಾವುದೆಂದರೆ ಶರಣರ ಮನೆಯಲ್ಲಿ ಲಿಂಗಾ ರ್ಚನೆಯು ನಡೆಯುವದುಂಟು, ಅಲ್ಲಿ ಅವರ ಪಾದುಕೆಗಳನ್ನು ಕಾಯುತ್ತ ಇರುವುದು ಮಾತ್ರ ಎಂದು ವಚನಕಾರನು ಹೇಳಿದ್ದಾನೆ. ಎಂದರೆ ವಿನಯಭಾವದಿಂದ ಶಿವಶರಣರ ಮನೆಯಲ್ಲಿದ್ದುಕೊಂಡು ಅವರಲ್ಲಿ ವಿಶ್ವಾ ಸವನ್ನಿಟ್ಟು ವರ್ತಿಸುವದೇ ನಿಜವಾದ ಲಿಂಗ ಪೂಜೆಯೆಂದು ಆತನ ಭಾವವು.

---

## ಸದಾಚಾರಿಯೇ ಲಿಂಗಧಾರಣಕ್ಕೆ ಯೋಗ್ಯನು.

**ವಿವರಣೆ:**— ಲಿಂಗ ಮತ್ತು ಸದಾಚಾರ ಸದ್ವೃತ್ತಿಗಳು ಪರಸ್ಪರ ಸಂಬಂಧವುಳ್ಳವು. ಸದಾಚಾರವಿಲ್ಲದಿದ್ದರೆ, ಲಿಂಗವಿಲ್ಲವೆಂದು ವಚನಕಾರರು ಮೇಲಿಂದ ಮೇಲೆ ಹೇಳುವದುಂಟು. ಇದೇ ಅಭಿಪ್ರಾಯವನ್ನೇ ಅಂಬಿಗರ ಚೌಡಯ್ಯನು ಕೆಳಗೆ ಕಾಣಿಸಿದ ವಚನಗಳಲ್ಲಿ ಹೇಳಿರುವನು. ಲಿಂಗಧಾರಣ ಮಾಡುವ ಗುರುವಿಗೂ ಶಿಷ್ಯನಿಗೂ ಅತ್ಯಂತ ನಿಕಟಸಂಬಂಧ ಇದೆ. ವಚನಕಾರರ ಪ್ರಕಾರ ಗುರುವಿನ ಕರ್ತವ್ಯವು ಲಿಂಗಧಾರಣವಾದ ಕೂಡಲೇ ಮುಗಿಯುವದಿಲ್ಲ. ಗುರುವಿನ ಸಂಬಂಧವು ಶಿಷ್ಯನೊಡನೆ ಆಮರಣ ಉಳಿಯತಕ್ಕದ್ದು. ಶಿಷ್ಯನು ತನ್ನ ಆಯುಷ್ಯವನ್ನು ಹ್ಯಾಗೆ ಕಳೆಯಬೇಕೆಂಬುವನ್ನು ಅವನು ಸದಾ ಬೋಧಿಸುತ್ತಿರಬೇಕು. ಇಷ್ಟೇಅಲ್ಲ, ಉಭಯತರ ಪ್ರಾಣಗಳು ಸಹ ಒಂದೇ ಎಂದು ಭಾವಿಸಿ ವರ್ತಿಸತಕ್ಕದ್ದು. ಶಿಷ್ಯನು ಹೀಗೆ ವರ್ತಿಸಿದಲ್ಲಿ ಅವನ ಅಂತರಂಗ ಬಹಿರಂಗಗಳಲ್ಲಿ ಸರ್ವಾವಯವಗಳಲ್ಲಿ ಕೂಡ ಲಿಂಗದ ಕಳೆಯು ವೇಧಿಸಹತ್ತುವದು. ಈ ಕಳೆಯು ಅವನಲ್ಲಿ ದೃಢವಾಗುತ್ತ ಹೋದ ಹಾಗೆ ಅವನು ಮೋಕ್ಷಸ್ಥಾನವನ್ನು ಸಮೀಪಿಸಹತ್ತುವನು. ಮತ್ತು ಕಡೆಗೆ ಲಿಂಗಾಂಗ ಸಾಮರಸ್ಯವನ್ನು ಹೊಂದುವನು. ಈ ಭಾವವನ್ನು ಅಂಬಿಗರ ಚೌಡಯ್ಯನು ಕೆಳಗಿನ ವಚನಗಳಲ್ಲಿ ಹೇಳಿದ್ದಾನೆ.

**ವಚನ:**— ೫೫. ಎರಡು ಗ್ರಾಮದ ನಡುವೆ ಕಟ್ಟಿದ ಸೀಮೆಯ ಕಲ್ಲು, ಆದಿಯನರಿಯದ ಗುರು, ಭೇದಿಸಲರಿಯದ ಶಿಷ್ಯ, ಆದಕಟ್ಟಿದಾತ ಗುರುವಲ್ಲ, ಕಟ್ಟಿಸಿಕೊಂಡಾತ ಶಿಷ್ಯನಲ್ಲ. ಇವರಿಬ್ಬರು ಭ್ರಷ್ಟರೆಂದಾತ ಅಂಬಿಗರಚೌಡಯ್ಯ.

**ಭಾವ:**— ವಚನಕಾರನು ಲಿಂಗವೆಂದರೆ ಎರಡು ಗ್ರಾಮಗಳ ನಡುವೆ ನಡಿಸಿದ ಸೀಮೆಯ ಕಲ್ಲು ಎಂದು ಅದನ್ನು ವಿವರಿಸಿದ್ದಾನೆ. ಹ್ಯಾಗೆ ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಹೋಗುವಾಗ ಸೀಮೆಯ ಕಲ್ಲು ಒಂದು ಗ್ರಾಮದ ಮೇರೆಯು ಅಲ್ಲಿಗೆ ತೀರಿತು, ಮತ್ತು ಮತ್ತೊಂದು ಗ್ರಾಮವು ಪ್ರಾರಂಭವಾಯಿತು, ಎಂದು ಹೇಳುವದೋ ಹಾಗೆಯೇ ಲಿಂಗಧಾರಣವಾದ ಕೂಡಲೆ ಮನುಷ್ಯನು ತನ್ನ ಮೊದಲಿನ ಸ್ಥಿತಿಯು ಮುಗಿದು

ಹೊಸ ಸ್ಥಿತಿಯು ಪ್ರಾರಂಭವಾಯಿತೆಂದು ತಿಳಿಯಬೇಕು. ಭವ ಸಂಬಂಧದ ಆಚಾರಗಳನ್ನು ಮತ್ತು ವರ್ತನೆಗಳನ್ನು ಅವನು ಬಿಡಬೇಕು. ಮತ್ತು ಪರಮಾತ್ಮನಿಗೆ ಸಂಬಂಧಿಸಿದ ಹೊಸ ವರ್ತನೆಯನ್ನು ಸ್ವೀಕರಿಸಬೇಕು. ಈ ರೀತಿಯನ್ನು ತೋರಿಸತಕ್ಕವನು ಗುರುವು. ಆದರೆ ಈ ರೀತಿ ಯಾವುದೆಂಬದನ್ನು ಅರಿಯದ ಗುರುವು ಮತ್ತು ಅದನ್ನು ತಿಳಿಯಲಾರದ ಶಿಷ್ಯನು ಇದ್ದರೆ ಹೀಗೆ ಲಿಂಗಧಾರಣ ಮಾಡುವಂಥವ ಗುರುವೂ ಅಲ್ಲ, ಕಟ್ಟಿಸಿಕೊಂಡಾತ ಶಿಷ್ಯನೂ ಅಲ್ಲ ಉಭಯತರೂ ಭ್ರಷ್ಟರೆಂದು ವಚನಕಾರನು ಅಂದಿದ್ದಾನೆ. ಅಂದರೆ ಲಿಂಗಧಾರಣವಾದ ಬಳಿಕ ಶಿಷ್ಯನು ಪರಮಾತ್ಮನಿಗೆ ಉಚಿತವಾದ ಹೊಸ ವೃತ್ತಿಯನ್ನು ಗುರುವಿನಿಂದ ತಿಳಿದುಕೊಂಡು ಹಾಗೆ ವರ್ತಿಸಬೇಕೆಂದು ವಚನಕಾರನ ಅಭಿಪ್ರಾಯವು.

**ವಚನ:**— ೫೬. ಅರಿಯದ ಗುರು ಅರಿಯದ ಶಿಷ್ಯ ಇವರಿಬ್ಬರಿಗೇನಪ್ಪುದೊ? ಕುರುಡ ಕುರುಡನ ಕೈಯ್ಯ ಪಿಡಿದು ಪಥವ ನಡೆಯಬಲ್ಲರೆ? ತೊರೆಯುಲದ್ದಿ ಹೋಹನ ಈಸಲರಿಯದವ ತೆಗೆದಂತಾಯಿತ್ತೆಂದ ನಂಬಿಗಚೌಡಯ್ಯ.

**ಭಾವ:**— ಅರಿಯದ ಗುರು ಮತ್ತು ತಿಳಿಯದ ಶಿಷ್ಯ ಇವರ ಸ್ಥಿತಿಯನ್ನು ವಚನಕಾರನು ಇಲ್ಲಿ ಬೇರೊಂದು ಉದಾಹರಣೆಯನ್ನು ಕೊಟ್ಟು ಹೇಳಿರುವನು. ಇಂಥವರ ಸ್ಥಿತಿಯು ಒಬ್ಬ ಕುರುಡನು ಇನ್ನೊಬ್ಬ ಕುರುಡನಿಗೆ ದಾರೀ ತೋರಿಸುವೆನೆಂದು ಹೇಳಿ ಅವನನ್ನು ಕರೆದುಕೊಂಡು ಹೋದಂತೆಯೇ ಸರಿ. ಕಡೆಗೆ ಇಬ್ಬರೂ ನಷ್ಟವಾಗುವರು. ಅದೇ ಪ್ರಕಾರ ಒಬ್ಬನು ಹೊಳೆಯುಲ್ಲಿ ಮುಳುಗುತ್ತಿರುವಾಗ ಅವನನ್ನು ಈಸಲರಿಯದವ ಹೊರಗೆ ತೆಗೆಯಲಿಕ್ಕೆ ಹೋದಂತೆಯೇ ಸರಿ. ಇಬ್ಬರೂ ಮುಳುಗಿ ಸಾಯುವದು ನಿಶ್ಚಯ. ಈ ಅಜ್ಞಾನಿಗಳಾದ ಗುರುಶಿಷ್ಯರು ಕಡೆಗೆ ವ್ಯರ್ಥ ಸತ್ತುಹೋಗುವರು, ಮತ್ತು ಮೋಕ್ಷವನ್ನು ಹೊಂದಲಾರರೆಂದು ವಚನಕಾರನ ಭಾವವು.

**ವಚನ:**— ೫೭. ತುತ್ತಿನಾಸೆಗೆ ಲಿಂಗವ ಕೊಟ್ಟುಹೋಗುವ ವ್ಯರ್ಥಮೂಳ ನಿನಗೆ ಗುರುವಾದನಲ್ಲದೆ, ಸತ್ಯ ಸದಾಚಾರವ ಬಲ್ಲಡೆ, ತತ್ವಜ್ಞಾನವ ಬೋಧಿಸಿ, ಲಿಂಗಕ್ಕೂ ನಿನಗೂ ಸಂಬಂಧ ಮಾಡದಿಹ ಕರ್ತೃ ಗುರುವಿನ ಪಾದ ಹಿಡಿದಿಹೆಯಾಗಿ ಸ್ವಯ ಲಿಂಗವೇ ನಿನಗೆ ಕಿರಿದಾಯಿತ್ತು. ಕ್ಷೇತ್ರಲಿಂಗವೇ ನಿನಗೆ ಹಿರಿದಾಯಿತ್ತು. ಕಂಕಣಪತಿ ಲಿಂಗವ

ಕಿರಿದು ಮಾಡಿ, ಕೊಂಕಣಪತಿ ಲಿಂಗವ ಹಿರಿದು ಮಾಡುವೆ. ಮುಕ್ಕಣ್ಣ ಲಿಂಗವನು ನಮ್ಮ ಕೈಯ್ಯಲ್ಲಿ ಕೊಡಲಾರದಿರ್ದೊಡೆ ಈ ಹರಗೋಲ ಹೊರಲಾರದೆ, ಭೋಂಕನೆ ಮುಳುಗುವದೆಂದಾತ ನಮ್ಮ ಅಂಬಿಗರಚೌಡಯ್ಯನು.

**ಭಾವ:—** ಇಲ್ಲಿ ವಚನಕಾರನು ಲಿಂಗದ ಮರ್ಮವನ್ನು ಅರುಹಿ ಗುರುವು ಹೇಗಿರಬೇಕೆಂಬುದನ್ನು ಹೇಳಿರುವನು. ಲಿಂಗಧಾರಣದ ಉದ್ದೇಶವು ಪರಮಾತ್ಮನಿಗೂ ಶಿಷ್ಯನಿಗೂ ಸಂಬಂಧವನ್ನುಂಟುಮಾಡುವದಿರುತ್ತದೆ. ಈ ಸಂಬಂಧವು ಕೇವಲ ಬಹಿರಂಗಮಾತ್ರವಾಗಿರದೆ, ಅಂತರಂಗಿಕವಾಗಿಯೂ ಇರತಕ್ಕದ್ದು. ಈ ಅಂತರಂಗಿಕ ಸಂಬಂಧವನ್ನು ಜ್ಞಾನಮೂಲಕವಾಗಿಯೇ ತಿಳಿಯತಕ್ಕದ್ದು. ಈ ಜ್ಞಾನದ ರೀತಿಯನ್ನು ಗುರುವು ಬೋಧಿಸತಕ್ಕದ್ದು. ಇದು ಆತನ ಕರ್ತವ್ಯವು. ಈ ರೀತಿಯನ್ನು ಆತನು ಅರಿಯದೆ ಹೋಗಿ ಬರೇ ತನ್ನ ತುತ್ತಿನ ಆಸೆಗಾಗಿ ಲಿಂಗವನ್ನು ಕೊಟ್ಟದ್ದಾದರೆ ಅದು ವ್ಯರ್ಥವೆಂದು ವಚನಕಾರನ ಭಾವವು. ಸರಿಯಾಗಿ ಕೊಟ್ಟ ಲಿಂಗವೇ ಮಹತ್ತರವಾದದ್ದು. ಆದರೆ ಕ್ಷೇತ್ರದಲ್ಲಿ ಇರುವಂಥ ಲಿಂಗವು ಮಹತ್ವದ್ದೆಂದು ಎಣಿಸತಕ್ಕದ್ದಲ್ಲ. ಯಾಕಂದರೆ ಈ ಅಂತರಂಗಿಕ ಲಿಂಗವು ಮುಕ್ಕಣ್ಣನಿಂದ ಬಂದಂಥಾದ್ದು. ಈ ರೀತಿಯಿಂದ ಲಿಂಗವನ್ನು ಕೊಡದಿದ್ದರೆ ಅದು ಪರಮಾತ್ಮನ ಅರುಹೆಂದು ತಿಳಿಯಲಿಕ್ಕೆ ಬರಲಾರದು. ಲಿಂಗವು ನದಿಯನ್ನು ದಾಟಿಸುವ ಹರಗೋಲಿನಂತೆ ಇದೆ. ಆದರೆ ಅರಿಯದ ಗುರುವು ಕೊಟ್ಟ ಲಿಂಗವು ಶಿಷ್ಯನನ್ನು ಭವಸಾಗರದೊಳಗಿಂದ ದಾಟಿಸಲಾರದು. ಅದು ಅವನನ್ನು ಮುಳುಗಿಸಿಯೇ ಬಿಡುವದೆಂದು ವಚನಕಾರನು ಇಲ್ಲಿ ಅಂದಿರುವನು.

**ವಚನ:—** ೫೮. ಗುರು ಲಿಂಗ ಜಂಗಮವೆಂದರಿಯದ ಗೊಡ್ಡುಗಳ ಶಿಷ್ಯರ ಮಾಡಿಕೊಂಬ ಹೆಡ್ಡ ಜೀವಿಗಳನೇನೆಂಬೆನಯ್ಯ? ಆಚಾರ ಅನಾಚಾರದ ಭೇದವನರಿಯದ ಹೆಡ್ಡ ಮಾನವರಿಗೆ ಉಪದೇಶವ ಕೊಡುವ ಮತಿಭ್ರಷ್ಟರನೇನೆಂಬೆನಯ್ಯ? ಅವನ ಅಜ್ಞಾನವಳಿಯದೆ ಅವನ ನಡೆನುಡಿ ಹಸನ ಮಾಡದೆ ಅವನ ಆದಿ ಅಂತ್ಯವ ತಿಳಿಯದೆ ಧನಧಾನ್ಯದಾಸೆಗೆ ಶಿವದೀಕ್ಷೆಯ ಮಾಡುವನೊಬ್ಬ ಗುರುವು ಹುಟ್ಟಂಧಕನೆಂಬೆನಯ್ಯ. ತನ್ನ ಗುರುತ್ವವನರಿಯದೆ ಗುರುವಿನಿಂದುಪದೇಶವ ಪಡೆವನೊಬ್ಬ ಶಿಷ್ಯ ಕೆಟ್ಟಗಣ್ಣವನೆಂಬೆನಯ್ಯ. ಇಂತಿವರ ಗುರುಶಿಷ್ಯರೆಂದರೆ ನಮ್ಮ ಪ್ರಮಥರು

ಮೆಚ್ಚರಯ್ಯ. ನಮ್ಮ ಪ್ರಮಥರು ಮೆಚ್ಚರಲ್ಲಿ. ಇಂತಪ್ಪ ಗುರುಶಿಷ್ಯರಿಬ್ಬರಿಗು ಯಮದಂಡನೆ ತಪ್ಪದೆಂದಾತ ನಮ್ಮ ಅಂಬಿಗರ ಚೌಡಯ್ಯ.

**ಅರ್ಥ:**— ಗುರು ಶಿಷ್ಯರಿಬ್ಬರು ಸದಾಚಾರವುಳ್ಳವರಿರಬೇಕೆಂಬದನ್ನು ಇಲ್ಲಿ ವಚನಕಾರನು ಪುನಃ ಬೇರೆ ಶಬ್ದಗಳಿಂದ ಹೇಳಿದ್ದಾನೆ. ಗುರುವು ಮಾತ್ರ ಸದಾಚಾರಿಯಾಗಿರಬೇಕೆಂಬುದಲ್ಲ, ಶಿಷ್ಯನೂ ಕೂಡ ಸದಾಚಾರಿಯಾಗಿರಬೇಕೆಂದು ಇಲ್ಲಿ ಹೇಳಿರುವನು. ಹಿಂದಿನ ವಚನಗಳಲ್ಲಿಯ ಭಾವವೇ ಇದರಲ್ಲಿ ಬಂದಿದೆ.

**ವಚನ:**— ೫೯. ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳ ನೇನೆಂಬೆನಯ್ಯ? ಏನೇನು ಅರಿಯದ ಎಡ್ಡ ಮಾನವರಿಗೆ ಉಪದೇಶವ ಮಾಡುವ ಗೊಡ್ಡ ಮಾನವನ ಮುಖವ ತೋರದಿರಯ್ಯ. ಅದೇನು ಕಾರಣವೆಂದಡೆ ಆ ಮೂಢ ಜೀವಿಯು ಪ್ರಪಂಚವ ಕಳೆಯಲಿಲ್ಲ. ಅವನ ಪಂಚೇಂದ್ರಿಯಂಗಳು ಸಪ್ತವ್ಯಸನಂಗಳು ಅಷ್ಟಮದಂಗಳೆಂಬ ಖೊಟ್ಟಿ ಗುಣಂಗಳ ಬಿಡಿಸಲಿಲ್ಲ. ಸೂತಕ ಪಾತಕಂಗಳ ಕೆಡಿಸಿ, ಮೂರು ಮಲಂಗಳ ಬಿಡಿಸಿ, ಮುಕ್ತಿಪಥಂಗಳನರುಹಲಿಲ್ಲ. ಮಹಾಶೂನ್ಯ ನಿರಾಳ ನಿರಂಜನ ಲಿಂಗವ ಕರಮನ ಭಾವ ಸರ್ವಾಂಗದಲ್ಲಿ ತುಂಬಿ ನಿತ್ಯನೆಂದೆನಿಸಲಿಲ್ಲ. ಇದನರಿಯದ ವ್ಯರ್ಥ ಕಾಯರುಗಳ ಗುರುವೆಂದಡೆ ಪ್ರಮಥರು ಮೆಚ್ಚುವರೆ? ಇಂತಪ್ಪ ಗುರುಶಿಷ್ಯರೀರ್ವರು ಅಜ್ಞಾನಿಗಳು. ಅವರು ಇಹಲೋಕ ಪರಲೋಕಕ್ಕೆ ಹೊರಗೆಂದಾತನಂಬಿಗಚೌಡಯ್ಯ.

**ಭಾವ:**— ಗುರುವು ಶಿಷ್ಯನಲ್ಲಿ ಸದಾಚಾರವನ್ನು ದೃಢಪಡಿಸಬೇಕೆಂಬ ಭಾವವನ್ನು ಇಲ್ಲಿ ಹೆಚ್ಚಿಗೆ ಬಲವಾದ ರೀತಿಯಿಂದ ಹೇಳಿರುವನು. ಲಿಂಗವು ಮಹಾಶೂನ್ಯ ನಿರಾಳ ನಿರಂಜನ ಸ್ವರೂಪವಾಗಿದೆ. ಅದಕ್ಕೆ ಆಕಾರವಿಲ್ಲ, ಬರಿದಾಗಿದೆ, ಶುದ್ಧವಾಗಿದೆ. ಇಂಥದನ್ನು ಕರ, ಮನ, ಭಾವಗಳಲ್ಲಿ ಬರಮಾಡಿಕೊಳ್ಳಬೇಕೆಂದು ವಚನಕಾರನು ಹೇಳಿರುವನು. ಮನುಷ್ಯನು ಹ್ಯಾಗೆ ವರ್ತಿಸಬೇಕೆಂಬುದನ್ನು ಗುರುವು ಹೇಳಿಕೊಟ್ಟರೆ, ಲಿಂಗದ ಚೈತನ್ಯವು ಅವನಲ್ಲಿ ಬರುವದು. ಶಿಷ್ಯನು ನೀತಿ, ನಡತೆಯಲ್ಲಿ ಅತ್ಯಂತ ಶುದ್ಧನಾಗದಿದ್ದರೆ ಲಿಂಗದ ಕಳೆಯು ಅವನಲ್ಲಿ ಬರುವದು. ಈ ರೀತಿಯನ್ನು ಅರಿಯದ ಅಜ್ಞಾನಿ ಗುರುಶಿಷ್ಯರು ಇಹಲೋಕ ಪರಲೋಕಕ್ಕೆ ಹೊರತಾಗಿರುವರು.

## ಅನೇಕ ದೇವರುಗಳನ್ನು ನಂಬಬೇಡ.

**ವಿವರಣೆ:**— ಲಿಂಗಧಾರಣದಿಂದ ಲಿಂಗ ಚೈತನ್ಯವು ಶರೀರದಲ್ಲಿ ಉಂಟಾದ ಬಳಿಕ, ಭಕ್ತನು ತನ್ನ ಲಿಂಗ ಭಕ್ತಿ ಮತ್ತು ಲಿಂಗಾಚರಣೆಯಿಂದ ಅದನ್ನು ಹೆಚ್ಚೆಚ್ಚಾಗಿ ತನ್ನಲ್ಲಿ ದೃಢಪಡಿಸುತ್ತಹೋಗುವದು ಅವನ ಕರ್ತವ್ಯವಾಗಿರುವದು. ಇವರ ರೀತಿಯನ್ನು ಷಟ್‌ಸ್ಥಲ ಮಾರ್ಗವು ಹೇಳುತ್ತದೆ. ವೀರಶೈವನಾದವನು ಈ ಮಾರ್ಗದ ರೀತಿಯನ್ನು ತಿಳಿದುಕೊಂಡು ತನ್ನಲ್ಲಿ ಪರಮಾತ್ಮನ ಕಳೆಯನ್ನು ಬರಮಾಡಿಕೊಳ್ಳುತ್ತ ಹೋಗಬೇಕು. ಮತ್ತು ಕಡೆಗೆ ಲಿಂಗಾಂಗ ಸಾಮರಸ್ಯವನ್ನು ಹೊಂದಬೇಕು. ಆದ್ದರಿಂದ ವೀರಶೈವನು ಇತರ ದೇವತೆಗಳನ್ನು ಎಂದೂ ನಂಬಬಾರದು. ನಂಬಿದ್ದಾದರೆ, ಈ ಲಿಂಗ ಕಳೆಯು ಅವನಲ್ಲಿ ನಷ್ಟವಾಗುವದು, ಮಂತ್ರ ಶಕ್ತಿಯು ಲೋಪವಾಗುವದು. ಆಗ ಅವನು ಧರಿಸಿದ ಲಿಂಗವು ಕೇವಲ ಪಾಷಾಣವೇ ಸರಿ. ವೀರಶೈವರು ಶಿವ, ಪಾರ್ವತಿ, ವೀರಭದ್ರ, ನಂದಿ ಮೊದಲಾದ ದೇವತೆಗಳನ್ನು ನಂಬಬಹುದೆಂದು ಅನೇಕರು ಭಾವಿಸುವದುಂಟು. ಆದರೆ ಇದಾದರೂ ಷಟ್‌ಸ್ಥಲ ಮಾರ್ಗಕ್ಕೆ ಹೊರತಾದದ್ದು. ಈ ದೇವತೆಗಳಲ್ಲಿ ಯಾವನನ್ನೂ ಅವನು ಭಜಿಸಕೂಡದು. ಯಾಕಂದರೆ ಪರಮಾತ್ಮನು ನಿರಾಕಾರನೂ ಸರ್ವಶೂನ್ಯನೂ ಆಗಿರುತ್ತಾನೆ. ಅವನ ಕಳೆಯು ಜಗತ್ತಿನಲ್ಲೆಲ್ಲ ವ್ಯಾಪಿಸಿರುತ್ತದೆ. ಈ ಕಳೆಯನ್ನು ತನ್ನಲ್ಲಿ ಬರಮಾಡಿಕೊಳ್ಳುತ್ತ ಮೋಕ್ಷವನ್ನು ಹೊಂದತಕ್ಕದ್ದು. ಲಿಂಗವು ಈ ಕಾರ್ಯದಲ್ಲಿ ಒಂದು ಸಾಧನ ಮಾತ್ರವಾಗಿರುವದು. ಈ ತತ್ವವನ್ನು ವೀರಶೈವನು ಅನುಸರಿಸಬೇಕಾದ್ದರಿಂದ ಅವನು ಇತರ ದೈವಗಳನ್ನು ನಂಬಬಾರದು. ಒಂದು ವೇಳೆ ನಂಬಿ ಪೂಜಿಸಿದರೆ ಅವನ ಪ್ರಗತಿಯು ನಿಂತು ಹೋಗುವದು. ಈ ವಿಷಯವನ್ನು ವಚನಕಾರರು ಬಹು ಬಲವಾದ ರೀತಿಯಿಂದ ತಮ್ಮ ವಚನಗಳಲ್ಲಿ ಹೇಳುತ್ತಾರೆ. ಅಂಬಿಗರ ಚೌಡಯ್ಯನಾದರೂ ಇವೇ ವಿಚಾರಗಳನ್ನು ತನ್ನ ಸ್ವಾಭಾವಿಕ ಸ್ಪಷ್ಟ ಶಬ್ದಗಳಿಂದ ಕೆಳಗಿನ ವಚನಗಳಲ್ಲಿ ಹೇಳಿರುವನು.

**ವಚನ:** – ೬೦. ಗಂಡನೆಂಜಲಿಗೆ ಹೇಸುವಳು ಮಿಂಡನ ತೊಂಬಲವ ತಿಂಬುವ ತೆರನಂತೆ, ಗುರುವಿನುಪದೇಶವ ಕೊಂಡು ಅನೀತಿ ದೇವರುಗಳ ಎಡೆಯ ತಿನ್ನುವಂತಹ ಮಾದಿಗರು ನೀವು ಕೇಳಿರೋ, ಅಂಡಜ ಉತ್ಪತ್ತಿ ಎಲ್ಲ ದೇವರಿಂದಾಯಿತ್ತು. ಮೈಲಾರ ಬೀರ ಭೈರವ ಧೂಳ

ಕೇತನೆಂಬ ಕಿರಿ ದೈವಕ್ಕೆರಗಿ ಭಕ್ತರೆನಿಸಿಕೊಂಬುವ ಛಂಡಿ ನಾಯಿಗಳ ಕಂಡು ಮನ ಹೇಸಿತ್ತೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.

**ಭಾವ:**— ಭಕ್ತ ಮತ್ತು ಲಿಂಗ ಇವರಲ್ಲಿಯ ಸಂಬಂಧವು ಸತಿ ಪತಿಗಳ ಸಂಬಂಧದಂತೆ ಇರುವದೆಂದು ವಚನಕಾರರು ಯಾವಾಗಲೂ ಹೇಳುವದುಂಟು. ಭಕ್ತನು ತಾನು ಹೆಂಡತಿ ಲಿಂಗವು ತನ್ನ ಗಂಡ ನೆಂದು ತಿಳಿದು ಅವನು ವರ್ತಿಸತಕ್ಕದ್ದು. ಎಂದರೆ ಗಂಡಹೆಂಡಿರು ಹ್ಯಾಗೆ ಪರಸ್ಪರ ಪ್ರೀತಿಯನ್ನು ಹೊಂದಿದವರಾಗಿ ಸಾಮರಸ್ಯ ಭಾವ ದಿಂದ ವರ್ತಿಸುತ್ತಾರೋ ಹಾಗೆಯೇ ಅವನು ಲಿಂಗದೊಡನೆ ಇರತ ಕ್ಕದ್ದು. ಆದ್ದರಿಂದ ಭಕ್ತನು ಲಿಂಗವನ್ನು ಬಿಟ್ಟು ಇತರ ದೇವತೆಗಳನ್ನು ಸೇವಿಸುವದು ಸಲ್ಲದ್ದು. ಒಂದು ವೇಳೆ ಸೇವಿಸಿದರೆ ಸ್ತ್ರೀಯು ವ್ಯಭಿ ಚಾರಮಾಡಿದಂತೆಯೇ ಸರಿ. ಅಂಬಿಗರ ಚೌಡಯ್ಯನು ಈ ವಚನದಲ್ಲಿ ಅನ್ನುವದೇನಂದರೆ, ಜಗತ್ತಿನ ಉತ್ಪತ್ತಿ ಎಲ್ಲವೂ ಒಬ್ಬ ಪರಮಾತ್ಮನಿಂದ ಆಗಿರುತ್ತದೆ. ಅಂಥ ಪರಮಾತ್ಮನನ್ನು ನಂಬದೆ, ಅನೀತಿ ಮಾರ್ಗವು ತುಂಬಿರುವ ಮೈಲಾರ ಬೀರ ಭೈರವ ಮೊದಲಾದ ಕಿರಿ ದೈವತೆಗ ಳನ್ನು ನಂಬುವದೆಂದರೆ ಗಂಡನೆಂಜಲಿಗೆ ಹೇಸಿ ಮಿಂಡನ ತೊಂಬುಲವ ತಿಂದಂತೆಯೇ ಸರಿ ಎಂದು ಇಲ್ಲಿ ಹೇಳಿದ್ದಾನೆ.

**ವಚನ:** ೬೧ ಬೆಟ್ಟದ ಲಿಂಗವ ಹಿರಿದು ಮಾಡಿ ತನ್ನ ಇಷ್ಟ ಲಿಂಗವ ಕಿರಿದು ಮಾಡುವ ಮೂಳ ಹೊಲೆಯರಿರಾ ಅಣುರೇಣು ತೃಣ ಕಾಷ್ಠ ಮೊದಲಾದ ಬ್ರಹ್ಮಾಂಡ ಪರಿಪೂರ್ಣವಾದ ಮಹಾಲಿಂಗವೆ ಅಂಗಕ್ಕೆ ಗುರುವು ಎಂದು ಸಂಬಂಧಿಸಿ ಸರ್ವ ಸಕಲವ ತೋರಿದ ಬಳಿಕ ಇಂತಪ್ಪ ಮೋಕ್ಷಕ್ಕೆ ಕಾರಣವಾದ ಲಿಂಗವನು ಅಡಿಮಾಡಿ ನಟ್ಟ ಕಲ್ಲಿಂಗೆ ಅಡ್ಡ ಬೀಳುವ ಹೊಲೆಯರಿಗೆ ಲಿಂಗವ ಕಟ್ಟುವುದು ಕಿರಿದು. ಗೊಡ್ಡೆಮ್ಮೆಗೆ ಲಿಂಗ ವದು ಕರ ಲೇಸು. ಇಂಥ ಮೂಳ ಹೊಲೆಯರು ಶಿವಭಕ್ತರೆಂದು ನುಡಿವ ಭ್ರಷ್ಟರನು ಕತ್ತೆಯನೇರಿಸಿ ಕೆರವಿನಟ್ಟೆಯಲ್ಲಿ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯನೆಂಬ ನಿಜಶರಣನು.

**ಭಾವ:**— ಮಹಾಲಿಂಗವು ಬಹ್ಮಾಂಡದಲ್ಲಿ ಅಣು ರೇಣು ತೃಣ ಕಾಷ್ಠದಲ್ಲಿ ತುಂಬಿಕೊಂಡಿರುವದು. ಈ ಲಿಂಗವೇ ಭಕ್ತನ ಶರೀರಕ್ಕೆ ಗುರುವು ಎಂದು ಅನು ಅವನಿಗೆ ಸಂಬಂಧಿಸಲ್ಪಡುವದು. ಇದೇ ಲಿಂಗ

ಧಾರಣವು. ಹೀಗೆ ಸಂಬಂಧಪಟ್ಟ ಬಳಿಕ ಈ ಲಿಂಗವನ್ನೇ ಹಿಡಿದುಕೊಂಡು ಮೋಕ್ಷವನ್ನು ಹೊಂದುವದನ್ನು ಬಿಟ್ಟುಕೊಟ್ಟು ಬೆಟ್ಟಗಳ ಮೇಲಿರುವ ಲಿಂಗಗಳೇ ಶ್ರೇಷ್ಠವೆಂದು ತಿಳಿದು ಅವುಗಳಿಗೆ ಅಡ್ಡ ಬಿದ್ದದ್ದಾದರೆ ಅಂಥವರಿಗೆ ಲಿಂಗಧಾರಣವನ್ನು ಎಂದೂ ಮಾಡಬಾರದು. ಒಂದು ವೇಳೆ ಧಾರಣ ಮಾಡಿದರೆ ಗೊಡ್ಡೆಮ್ಮೆಗೆ ಲಿಂಗವನ್ನು ಕಟ್ಟಿದಂತೆಯೇ ಸರಿ. ಇಂಥವರನ್ನು ಚನ್ನಾಗಿ ಶಿಕ್ಷಿಸಬೇಕೆಂದು ಅಂಬಿಗರ ಚೌಡಯ್ಯನು ಇಲ್ಲಿ ಹೇಳಿದ್ದಾನೆ.

**ವಚನ:—** ೬೨. ಸತ್ತರೆ ಸಂಗಾತಿ ಹೂಳಿಸಿ ಕೊಂಬ ಇಷ್ಟಲಿಂಗವ ಸಟೆ ಮಾಡಿ, ಮತ್ತೆ ಅನ್ಯದೈವಕ್ಕೆರಗುವ ಕತ್ತೆ ಹೊಲೆಯರು ನೀವು ಕೇಳಿರೋ, ತನ್ನ ಪುರುಷನಿರಲು ಅನ್ಯ ಪುರುಷನ ಕೂಡಿಹ ಸ್ತ್ರೀಗೆ ನರಕವಲ್ಲವೆ? ಮೋಕ್ಷಾರ್ಥಿ ಎಂದು ಗುರುವು ಕೊಟ್ಟ ಇಷ್ಟಲಿಂಗವು ಅಂಗಕ್ಕೆ ಸಂಬಂಧಿಸಿದ ಬಳಿಕ ಹಲವು ದೇವರೆಂದು ಭಾವಿಸಿ ಪೂಜೆಯ ಮಾಡುವ ಭ್ರಷ್ಟರು ನೀವು ಕೇಳಿರೋ. ನೀವು ಮಾಡಿದ ಪೂಜೆಯು ಹಾದರಿಯ ಸ್ತ್ರೀಯುಳಂತೆ ಕಾಣಿರೋ. ಕಡೆಗೆ ಅದೇ ಲಿಂಗವೆ ಮುಂದೆ ಮಾರಿಯಾಗಿ ಮೋಕ್ಷಕ್ಕೆ ದೂರಮಾಡುವುದೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ:—** ಲಿಂಗವು ತನ್ನನ್ನು ಬಿಟ್ಟು ಎಂದೂ ಇರಲಾರದು. ಅದು ಭಕ್ತನಲ್ಲಿ ಯಾವಾಗಲೂ ಇದ್ದು ಮುಂದೆ ಗುರುವಿನಿಂದ ಹೊರಪಟ್ಟು, ಆದರೊಡನೆ ಅವನು ವ್ಯವಹರಿಸುತ್ತ, ಆದರ ಕಳೆಯನ್ನು ಹೆಚ್ಚಿಸುತ್ತ, ಕಡೆಗೆ ಅದರೊಡನೆಯೇ ಅವನು ಸಮಾಧಿಯನ್ನು ಹೊಂದತಕ್ಕದ್ದು. ಇಂಥ ಲಿಂಗವನ್ನೇ ಭಕ್ತನು ನಂಬಬೇಕು. ಈ ಲಿಂಗವೇ ನಿಜವಾದ ದೈವತವು. ಇಂಥ ಲಿಂಗವನ್ನು ಸುಳ್ಳು ಮಾಡಿ ಅನ್ಯ ದೈವಕ್ಕೆರಗುವದು ನರಕವು. ಇಷ್ಟೇ ಅಲ್ಲ, ಆ ಧರಿಸಿದ ಲಿಂಗವು ಅವನಿಗೆ ಮಾರಿಯಾಗಿ ಕಡೆಗೆ ಅವನನ್ನು ಮೋಕ್ಷಕ್ಕೆ ದೂರ ಮಾಡುವದೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನ:—** ೬೩. ಒಬ್ಬ ತಂದೆಯ ಬಸುರಿನಲ್ಲಿ ಒಂಬತ್ತು ಮಕ್ಕಳು ಹುಟ್ಟಿದರೇನಯ್ಯ? ಅವರೊಳಗೊಬ್ಬಾತಂಗೆ ಸೆರಗ ಕಟ್ಟಿ, ಮದುವೆಯ ಮಾಡಿದ ಬಳಿಕ ಆತಂಗೆ ತನ್ನಂಗದ ಸುಖವನೊಪ್ಪಿಸಬೇಕಲ್ಲದೆ, ಉಳಿದಿರ್ದವರೆಲ್ಲ ತನ್ನ ಮಾವನ ಮಕ್ಕಳೆಂದು, ಅವರಿಗೆ ಸೆರಗು ಹಾಸುವಳನು ಒಪ್ಪುವರೇ ಲೋಕದೊಳು? ಪರಮಾತ್ಮನೆಂಬ ಶಿವನಿಗೆ ಆಶ್ರಯವಾಗಿ

ಹುಟ್ಟಿತ್ತು ಲಿಂಗ. ಆತಂಗೆ ವಾಹನವಾಗಿ ಹುಟ್ಟಿದಾತ ವೃಷಭ. ಆತಂಗೆ ಯೋಗವಾಗಿ ಹುಟ್ಟಿದಾತ ವಿನಾಯಕ. ಆತಂಗೆ ಯುದ್ಧಕ್ಕೆ ಸರಿಯಾಗಿ ಹುಟ್ಟಿದಾತ ವೀರಭದ್ರ. ಇಂತಿವರೆಲ್ಲ ಶಿವನ ಮಕ್ಕಳಾದರೆ ತನಗೊಂದು ಪ್ರಾಣಲಿಂಗವೆಂದು ಕಂಕಣ ಕಟ್ಟಿ, ಕರಸ್ಥಲಕ್ಕೆ ಬಂದ ಬಳಿಕ ಅದನು ನಂಬಲರಿಯದೆ ಮತ್ತನ್ಯ ದೈವಕ್ಕೆರಗಿದಡೆ ನಾಯಕ ನರಕವೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಈ ವಚನದಲ್ಲಿ ಅಂಬಿಗರ ಚೌಡಯ್ಯನು ವೃಷಭ, ವಿನಾಯಕ, ವೀರಭದ್ರ ಇಂಥ ದೇವತೆಗಳು ಶಿವಸಂಬಂಧವಾದವುಗಳೆಂದು ತಿಳಿದು ಅವುಗಳನ್ನು ಸಹ ಪೂಜಿಸಬಾರದೆಂದು ಹೇಳಿರುವನು. ಯಾಕಂದರೆ ಪ್ರಾಣಲಿಂಗವು ಸನ್ನದ್ಧವಾದ ಬಳಿಕ ಅದನ್ನೇ ನಂಬಿ ಆತ್ಮೋನ್ನತಿಯನ್ನು ಮಾಡಿಕೊಳ್ಳತಕ್ಕದೆಂದು ಅವನ ಭಾವವು. ಇಲ್ಲವಿದ್ದರೆ ಇದೂ ವ್ಯಭಿಚಾರವೆನಿಸುತ್ತದೆಂದು ವಚನಕಾರನು ಅಂದಿರುವನು.

**ವಚನ:**— ೬೪. ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ, ಹೊಟ್ಟೆಡಿಯಾಗಿ ಬೀಳುವ ಲೊಟ್ಟೆ ಮೂಳನ ಕಂಡರೆ ಮೆಟ್ಟಿದ್ದ ಎಡದ ಪಾದರಕ್ಷೆಯ ತಕ್ಕೊಂಡು, ಲಟಲಟನೆ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಈ ವಚನದಲ್ಲಿ ಭಕ್ತನು ತನ್ನ ಇಷ್ಟಲಿಂಗವನ್ನು ಬಿಟ್ಟುಕೊಟ್ಟು, ಬೆಟ್ಟ ಗುಡ್ಡಗಳಲ್ಲಿ ಸ್ಥಾಪಿತವಾದಂಥ ಸ್ಥಾವರ ಲಿಂಗಗಳನ್ನು ಪೂಜಿಸುವದು ತರವಲ್ಲವೆಂದು ಅಂದಿರುವನು. ಮತ್ತು ಹೀಗೆ ಪೂಜಿಸುವವರನ್ನು ಚನ್ನಾಗಿ ಶಿಕ್ಷಿಸಬೇಕೆಂದು ಅವನ ಭಾವವು.

**ವಚನ:**— ೬೫. ಭವಿತನಕ್ಕೆ ಹೇಸಿ ಭಕ್ತನಾದ ಬಳಕ ಕೊರಳಿಗೆ ಕವಡೆಯ ಕಟ್ಟಿ ನಾಯಾಗಿ ಬೊಗಳುವದು ಅದಾವ ವಿಚಾರವಯ್ಯ? ಭವಿತನಕ್ಕೆ ಹೇಸಿ ಭಕ್ತ ಹುರಿಬೆನ್ನ ಸಿಡಿಬಾಯ ಬೀಗದಲ್ಲಿ ಹೋಗುವುದು ಅದಾವ ವಿಚಾರವಯ್ಯ? ಬೇವಿನ ಉಡಿಗೆಯನುಟ್ಟು ಹಡಲಿಗೆಯ ಹೊತ್ತು 'ಉದೋ' ಎಂಬುದು ಅದಾವ ವಿಚಾರವಯ್ಯ? ಇಂಥ ಭವಿಮಾರ್ಗದಲ್ಲಿ ಚರಿಸುವ ಶಿವದ್ರೋಹಿಗಳಿಗೆ ಲಿಂಗಧಾರಣ ಮಾಡುವನೊಬ್ಬ ಗುರುದ್ರೋಹಿ. ಅವರಿಗೆ ಚರಣೋದಕವ ತಾ ಧರಿಸುವ ವಿಭೂತಿ ರುದ್ರಾಕ್ಷಿಯ ಕೊಡುವನೊಬ್ಬ ಲಿಂಗದ್ರೋಹಿ. ಅವನು ಭಕ್ತನೆಂದು ಅವನ

ಮನೆಯ ಹೊಕ್ಕು ಮಂತ್ರವ ಹೇಳಿ ಅನ್ನವ ತಿಂಬುವನೊಬ್ಬ ಜಂಗಮ ದ್ರೋಹಿ. ಇಂತೀ ನಾಲ್ವರಿಗೆ ಸೂರ್ಯಚಂದ್ರರುಳ್ಳನಕ ಎಕ್ಕಲ ಕುಂಡ ದಲ್ಲಿ ಇಕ್ಕದೆ ಮಾಣ್ಬನೆ ನಮ್ಮ ಅಂಬಿಗರ ಚೌಡಯ್ಯ?

**ಭಾವಃ—** ಅನ್ಯ ದೈವಗಳ ಪೂಜೆಯು ಷಟ್‌ಸ್ಥಲ ಮಾರ್ಗಕ್ಕೆ ಸಲ್ಲದ್ದು. ಈ ದೈವಗಳ ಪೂಜೆಯ ತರಹಗಳೇ ಬೇರೆಯಾಗಿರುತ್ತವೆ. ಒಂದು ದೈವದ ಭಕ್ತರು ಕವಡೆ ಕಟ್ಟಿಕೊಂಡು ನಾಯಾಗಿ ಬೊಗಳುವರು. ಮತ್ತೊಂದು ದೈವದ ಭಕ್ತರು ಸಿಡಿಯಾಡುವದೂ ಬಾಯ ಬೀಗ ಹಾಕಿ ಕೊಳ್ಳುವದೂ ಇಂಥ ಅನೇಕ ತರದ ಶರೀರ ಯಾತನೆಗಳನ್ನು ಮಾಡಿಕೊಳ್ಳು ವರು. ಇನ್ನೊಂದು ದೈವದ ಭಕ್ತರು ಬತ್ತಲೆಯಾಗಿ ಬೇವಿನ ಉಡಿಗೆಯನ್ನು ತೊಟ್ಟುಕೊಂಡು ಅಸಹ್ಯ ನುಡಿಗಳನ್ನು ನುಡಿಯುತ್ತ ತಿರುಗುವರು. ಹೀಗೆ ಆಚರಿಸುವದು ಯಾವ ಬಗೆಯ ಪೂಜೆಯು? ಇವು ಅತ್ಯಂತ ಹೀನತರದ ವೆಂದು ವಚನಕಾರನ ಅಭಿಪ್ರಾಯವು. ಷಟ್‌ಸ್ಥಲಾಚರಣೆಯುಳ್ಳ ವೀರ ಶೈವನ ಲಿಂಗಪೂಜೆಯ ರೀತಿಗಳು ತೀರ ಭಿನ್ನವಾಗಿವೆ. ಅವು ಶುದ್ಧವೂ ಸಾಧುವೂ, ಮನಸ್ಸಿನ ಕಲಂಕವನ್ನು ಹೋಗಲಾಡಿಸುವಂಥವೂ ಇವೆ. ಆದ್ದರಿಂದ ಹೀಗೆ ಹೀನ ತರದ ಪೂಜೆಗಳನ್ನು ಮಾಡುವವರಿಗೆ ಲಿಂಗಧಾರಣ ವನ್ನೆಂದಿಗೂ ಮಾಡಕೂಡದು. ಲಿಂಗ ಧಾರಣದಲ್ಲಿ ಗುರುವು ಶಿಷ್ಯನನ್ನು ಗುರುಸ್ವರೂಪನನ್ನಾಗಿ ಮಾಡಬೇಕಾಗುತ್ತದೆ. ಇದನ್ನು ಅವನು ತನ್ನ ಚರಣೋದಕ ತನ್ನ ವಿಭೂತಿ ರುದ್ರಾಕ್ಷಿ ಇವುಗಳ ಮೂಲಕ ಮಾಡುವನು. ಮತ್ತು ತನ್ನ ಶಕ್ತಿಯನ್ನು ಮಂತ್ರ ಮೂಲಕ ಶಿಷ್ಯನಲ್ಲಿ ಎರಚುವನು. ಈ ಬಗೆಯಾಗಿ ಭವಿಯ ಕೂಡ ಆಚರಿಸುವದು ಸಲ್ಲದ್ದು ಮತ್ತು ಅಶಕ್ಯವಾದದ್ದು. ಒಂದು ವೇಳೆ ಆಚರಿಸಿದರೆ ಅದು ಗುರುದ್ರೋಹ, ಲಿಂಗದ್ರೋಹ, ಜಂಗಮ ದ್ರೋಹವೆಂದು ವಚನಕಾರನು ಅಂದಿರುವನು.

**ವಚನ—** ನಿಜ ಗಂಡನ ಸಂಗವನೊಲ್ಲದೆ, ಬೊಜಗರ ಸಂಗ ಮಾ ಡುವ, ಬಾಜರ ತೊತ್ತಿಗೆಲ್ಲಿಯದೊ ನಿಜ ಮುತ್ತೈದಿತನ? ತ್ರಿಜಗವಂದಿತ ಲಿಂಗವ ಕರಕಮಲದಲ್ಲಿ ಹಿಡಿದುಕೊಂಡಿರ್ದ ಬಳಿಕ, ಅಲ್ಲಿ ನಂಬಿ ಪೂಜಿಸಿ, ಮುಕ್ತಿಯ ಪಡೆಯಲರಿಯದೆ, ಲೋಕದ ಗಜಬಿಜಿಯ ದೈವಂಗಳಿಗೆರಗುವ ಕುನ್ನಿ ಮಾನವರ ಕಂಡರೆ ಯಮನು ಜಿಗಿದೆಳದೊಯ್ದು ಕೊಲ್ಲದಿಪ್ಪನೇ? ಹಾಗೇ ಸಾಯಲೆಂದಾತ ನಮ್ಮ ಅಂಬಿಗರಚೌಡಯ್ಯನು.

**ಭಾವ**— ಲೋಕದ ಕ್ಷುದ್ರ ದೈವಗಳನ್ನು ನಂಬಿದರೆ ಮೋಕ್ಷವೆಂದಿಗೂ ಆಗದು. ಹೀಗೆ ನಂಬಿದವರಿಗೆ ಮೃತ್ಯುವು ಮಾತ್ರ ಒದಗುವದೆಂದು ವಚನಕಾರನು ಹೇಳಿದ್ದಾನೆ.

**ವಚನ**— ೬೭. ಅಯ್ಯಾ ಅಷ್ಟಾವರಣ ಪಂಚಾಚಾರವುಳ್ಳ ಸದ್ಭಕ್ತರ ಉದರದಲ್ಲಿ ಜನಿಸಿ ಭವಿಸಂಗ ಮಾಡುವುದು ಪಾಪ. ಭವಿಸಂಗಕ್ಕಿಂತಲು ಸುರಾಪಾನಿಯ ಸಂಗ ಪಾಪ. ಸುರಾಪಾನಿಯ ಸಂಗಕ್ಕಿಂತಲು ಮಾಂಸಾಹಾರಿಯ ಸಂಗ ಪಾಪ. ಮಾಂಸಾಹಾರಿಯ ಸಂಗಕ್ಕಿಂತಲೂ ಭಂಗೀಭಕ್ಷಕನ ಸಂಗ ಪಾಪ. ಭಂಗೀಭಕ್ಷಕನ ಸಂಗಕ್ಕಿಂತಲೂ ನಾಶಿ ತಂಬಾಕು ಮಾಡುವನ ಸಂಗ ಮಹಾಪಾಪ. ನಾಶಿ ತಂಬಾಕು ಮಾಡುವನ ಸಂಗಕ್ಕಿಂತಲೂ ಅನ್ಯದೈವದ ಪೂಜೆ ಮಾಡುವನ ಸಂಗ ಅದೇ ದೊರೆ ಹಿರೇ ನರಕ ಕಾಣಾ ಎಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವ**— ವೀರಶೈವರು ಅಷ್ಟಾವರಣ ಪಂಚಾಚಾರ ಇವುಗಳಿಗನುಸರಿಸಿ ವರ್ತಿಸುವಂಥವರು. ಇಂಥವರ ಕುಲದಲ್ಲಿ ಜನಿಸಿದ ಬಳಿಕ ಇದಕ್ಕುಚಿತವಾದ ಲಿಂಗ ಸಂಗವನ್ನು ತೊರೆದು ಅನ್ಯದೈವ ಸಂಗಮಾಡುವದು ಹೊಲ್ಲದ್ದು. ಆದರಿಂದ ಮಹಾ ನರಕವು ಪ್ರಾಪ್ತವಾಗುವದೆಂದು ವಚನಕಾರನು ಇಲ್ಲಿ ನುಡಿದಿರುವನು.

**ವಚನ**— ೬೮. ಕಾಶೀ ಯಾತ್ರೆಗೆ ಹೋದಿಹೆನೆಂಬ ಹೇಸಿ ಹೀನರ ನುಡಿಯ ಲಾಲಿಸಲಾಗದು. ಕೇದಾರಕ್ಕೆ ಹೋದಿಹೆನೆಂಬ ಹೇಸಿಗಳ ಮಾತು ಕೇಳಲಾಗದು. ಸೇತುಬಂಧ ರಾಮೇಶ್ವರಕ್ಕೆ ಹೋದಿಹೆನೆಂಬ ಸರ್ವಹೀನರ ಮುಖವ ನೋಡಲಾಗದು. ಪರ್ವತಕ್ಕೆ ಹೋದಿಹೆನೆಂಬ ಪಂಚ ಮಹಾಪಾತಕರ ಮುಖವ ನೋಡಲಾಗದು. ಅದೆಂತೆಂದೊಡೆ ಕಾಯವೇ ಕಾಶಿ, ಒಡಲೇ ಕೇದಾರ, ಮಾಡಿನೀಡುವ ಹಸ್ತವೇ ಸೇತುಬಂಧ ರಾಮೇಶ್ವರ, ಮಹಾಲಿಂಗವ ಹೊತ್ತಿರುವ ಶಿರಸ್ಸೇ ಶ್ರೀಶೈಲ ನೋಡಾ. ಇಂತಿದನರಿಯದೆ ಪರ್ವತಕ್ಕೆ ಹೋಗಿ ಪಾತಾಳಗಂಗೆಯಲ್ಲಿ ಮುಳುಗಿ ತಲೆಯ ಬೋಳಿಸಿಕೊಂಡು ಗಂಗೆಯೊಳು ಕೋಣನ ಹಾಗೆ ಮೈಗೆಟ್ಟು ಪಕ್ಕನೆ ಮುಳುಗಿ ಅಲ್ಲಿಂದ ಬಂದು ಅನ್ನ ವಸ್ತ್ರ ಕುಸುಮವಂ ಕೊಟ್ಟು ಪಾಪ ಹೋಯಿತ್ತೆಂದು ಅಲ್ಲಿಂದ ಬಂದು ಲಿಂಗವನಡಿಗಡಿಗೆ ಹೊಯ್ದು ಬಾರದ ಪಾಪವ ತಾವಾಗ ಬರಿಸಿಕೊಂಡು ತಗರ ಜನ್ಮದಲ್ಲಿ

ಹುಟ್ಟುವರಯ್ಯ. ಕೋಲು ಬುಟ್ಟಿಯು ಕೊಟ್ಟು, ಅಟ್ಟಿಸಿ ಬಿಟ್ಟ ಬಳಿಕ ಅಲ್ಲಿಂದ ಬಂದವರಿಗೆ ಇಲ್ಲಿದ್ದವರು ಹೋಗಿ ಇದಿರ್ಗೊಂಡು ಕರೆತರುವುದಕ್ಕೆ ಕತ್ತೆಮೂಳ ಹೊಲೆಯರಿರಾ ನೀವು ಕೇಳಿರೊ ಅದೆಂತೆಂದೊಡೆ ಶ್ರೀಮಹಾ ಪರ್ವತಕ್ಕೆ ಹೋದವರು ತಿರುಗಿ ಬಪ್ಪರೆ? ಮೇರುಪರ್ವತಕ್ಕೆ ಹೋದವರು ತಿರುಗಿ ಬಪ್ಪರೆ? ಛೀ, ಛೀ, ಮೂಳದಿಂಡೆಯ ನೀಳ ಹೊಲೆಯರೆಂದಾತ ನಮ್ಮ ದಿಟ್ಟ ವೀರಾದಿವೀರ ಅಂಬಿಗರ ಚೌಡಯ್ಯ.

**ಭಾವ**— ಅನೇಕರು ಕಾಶೀ, ಕೇದಾರ, ಸೇತುಬಂಧ ರಾಮೇಶ್ವರ ಪರ್ವತ ಮುಂತಾಗಿ ಕ್ಷೇತ್ರ ಯಾತ್ರೆಗಳಿಗೆ ಹೋಗುವದುಂಟು. ಇವೆಲ್ಲವೂ ವ್ಯರ್ಥವೆಂದು ವಚನಕಾರನು ಹೇಳಿ ಅಲ್ಲಿ ನಡೆಯುವ ಕಾರ್ಯಗಳು ವೀರಶೈವಾಚಾರಕ್ಕೆ ಹೊರತಾದುವೆಂದು ಅವುಗಳನ್ನು ವಿವರಿಸಿರುವನು. ಆದರೆ ಯಾವತ್ತು ಕ್ಷೇತ್ರಗಳೂ ತೀರ್ಥಗಳೂ ಮನುಷ್ಯನ ದೇಹದಲ್ಲಿಯೇ ಇವೆ. ಎಂದು ಹೇಳಿ ಇಲ್ಲಿಯೇ ಪರಮಾತ್ಮನನ್ನು ಕಾಣಬೇಕೆಂದು ವಚನಕಾರನು ಹೇಳಿರುವನು.

**ವಚನ**— ೬೯. ಕೇಳಿರಯ್ಯ ಮಾನವರೆ, ಗಂಡ ಹೆಂಡಿರ ಮನಸ್ಸು ಒಂದಾಗಿದ್ದರೆ ದೇವರ ಮುಂದೆ ನಂದಾದೀವಿಗೆಯು ಮುಡಿಸಿದ ಹಾಗೆ. ಗಂಡಹೆಂಡಿರ ಮನಸ್ಸು ಬೇರಾದರೆ ಗಂಜಳದೊಳಗೆ ಹಂದಿ ಹೊರಳಾಡಿ ಒಂದರ ಮೇಲೆ ಒಂದು ಬಂದು ಮೂಸಿದ ಹಾಗೆ. ಛೀ, ಛೀ, ಇದು ಭಕ್ತಿ ಭಕ್ತಿಯಲ್ಲಣ್ಣಾ. ಅದೇನು ಕಾರಣವೆಂದೊಡೆ ಕಾಶಿಗೆ ಹೋದೆನೆಂಬವರು ಹೇಸಿ ತೊತ್ತಿನ ಮಕ್ಕಳಯ್ಯ. ರಾಮೇಶ್ವರಕ್ಕೆ ಹೋದೆನೆಂಬವರು ಶುದ್ಧ ಹೊಲೆಯ ಮಕ್ಕಳಯ್ಯ. ಮೈಲಾರಕ್ಕೆ ಹೋದೆನೆಂಬವರು ಮಾದಗಿತ್ತಿಯ ಮಕ್ಕಳಯ್ಯ. ಪರ್ವತಕ್ಕೆ ಹೋದೆನೆಂಬವರು ಪಂಚಮಹಾ ಪಾತಕರಯ್ಯ. ಹಂಪೆಗೆ ಹೋದೆನೆಂಬವರು ಹಾದರಗಿತ್ತಿಯ ಮಕ್ಕಳಯ್ಯ. ರಾಚೋಟಿಗೆ ಹೋದೆನೆಂಬವರು ಲಜ್ಜೆಮಾರಿ ತೊತ್ತಿನ ಮಕ್ಕಳಯ್ಯ. ಛೀ, ಛೀ, ಇದು ಭಕ್ತಿಯಲ್ಲವಯ್ಯ. ಅದೆಂತೆಂದೊಡೆ ಪರಬ್ರಹ್ಮಮೂರುತಿಯಾದ ಪರಶಿವನೆ ಗುರುನಾಮದಿಂ ಬಂದು ಇಷ್ಟಲಿಂಗವ ಧರಿಸಿ ಪಂಚಾಕ್ಷರಿಯ ಬೋಧಿಸಿದ ಮೇಲೆ ಆ ಭಕ್ತನ ಕಾಯವೇ ಕೈಲಾಸ. ಅವನ ಒಡಲೆ ಸೇತುಬಂಧ ರಾಮೇಶ್ವರ. ಅವನ ಶಿರವೆ ಶ್ರೀಶೈಲ. ಆತ ಮಾಡುವ ಆಚಾರವೆ ಪಂಚಪರುಷ. ಇದ ತಿಳಿಯದೆ ಶಾಸ್ತ್ರದಿಂದ ಕೇಳಿ ಅರಿಯದೆ ಮಂದಬುದ್ಧಿಯಿಂದ ಪರ್ವತಕ್ಕೆ ಹೋಗಿ ಪಾತಾಳಗಂಗೆಯಲ್ಲಿ

# ಕಾಲ ಜ್ಞಾನದ ವಚನಗಳು

## ಚನ್ನಬಸವರಾಜದೇವರು ಉಳಿವೆಗೆ ಚಿತ್ತೈಸಿದ ಪ್ರಸ್ತಾವದ ವಚನ

ಸ್ವಸ್ತಿ ಸಮಸ್ತ ಸಹಿತ ಶ್ರೀ ಮಹಾಕಲ್ಯಾಣಪುರದಲ್ಲಿ ಏಳುನೂರಿಪ್ಪತ್ತು ಅಮರಗಣಂಗಳು ಅಸಂಖ್ಯಾತ ಪುರಾತನರು ಮಹಾಗಣಂಗಳು ಮುಖ್ಯವಾದ ಪ್ರಮಥರು ಸಹಿತ ಚನ್ನಬಸವರಾಜದೇವರು ಅನುಭವ ಮಂಟಪದಲ್ಲಿ ಮೂರ್ತಂಗೈಯ್ದಿರ್ಪ ಸಮಯದಲ್ಲಿ ಜಗದೇವ, ಮಲ್ಲಿಬೊಮ್ಮಣ್ಣಂಗಳೀರ್ವರು ಬಂದು ಬಿನ್ನವಿಸಿದ ಪ್ರಸ್ತಾವದ ವಚನ.

ಚನ್ನಬಸವರಾಜದೇವರು ಮುಂತಾದೆಲ್ಲ ಗಣಂಗಳು ಕೇಳಿರೈಯ್ಯಾ, ಬಿನ್ನಹಂ ಮಾಡಿಹೆವು. ಈಗ ನಡೆವ ರಾಕ್ಷಸನಾಮ ಸಂವತ್ಸರದಲ್ಲಿ ನಾಳೆ ಮಂಗಳವಾರ ಶುಕ್ಲಪಕ್ಷದ ಕಾರ್ತೀಕ ಶುದ್ಧ ಪೌರ್ಣಮೆಯಲ್ಲಿ ನಾಳೆ ಮಂಗಳವಾರ ಅಸ್ತಮಾನವಾದ ಹದಿನೆಂಟು ಗಳಿಗೆಗೆ ಬಿಜ್ಜಳರಾಯನ ಇರಿದು ಕೊಂದಿಹೆವು. ನೀವೆಲ್ಲ ಗಣಂಗಳು ಸಹಿತವು ಉಳಿವೆಗೆ ಕಳುಹಿಸಿಕೊಂಡು ಚತ್ತೈಸುವುದೆಂದು ಬಿನ್ನವಿಸಲು,

ಆಗ ಚೆನ್ನಬಸವರಾಜದೇವರು ಮಡಿವಾಳಯ್ಯಗಳ ಮುಖವಂನೋಡುತ್ತಿ ಎನ್ನ ತಂದೆ ಮಡಿವಾಳಯ್ಯಗಳೆ ಮುಂದೆ ಮಹಾ ಕದನ ಹುಟ್ಟುವಲ್ಲಿ ವೀರ ಬಿಜ್ಜಳನ ಒಂದುಕಾಲು ಲಕ್ಷ ಕಾಲ್ದಳದ ಮುಂದೆ ಹನ್ನೆರಡು ಸಾವಿರ ಷಟ್‌ಸ್ಥಲ ಬ್ರಹ್ಮಿಗಳು ಏಳನೂರೆಪ್ಪತ್ತಮರಗಣಂಗಳು ಸಹಿತವಾಗಿ ಉಳಿವೆಯ ಮಹಾಮನೆಗೆ ಹೋಹ ಪರಿ ಆವುದೆಂದು ನಿರೂಪಮಂ ಕೊಡಲು,

ಕೇಳಯ್ಯ ಚನ್ನಬಸವಣ್ಣ, ನಮ್ಮ ಪ್ರಮಥಗಣಂಗಳು ಉಳಿವೆಯ ಮಹಾಮನೆಗೆ ಹೋಹ ಪರಿಯಂತರವು ಒಬ್ಬರನು ಬಿಟ್ಟೆನಾದೊಡೆ, ನನ್ನ ಕೈಯ್ಯಲ್ಲಿರ್ಪ ವೀರಭದ್ರರಣ ವಿಜಯವೆಂಬ ಖಡ್ಗವು ಉರಿದೇಳುತ್ತ ಸಿಡಿದು ಹೋಗದೆ ? ನನ್ನ ಕೈಯ್ಯಲ್ಲಿರ್ಪ ಕಾಲಾಗ್ನಿ ರುದ್ರನೆಂಬ ಮುರಿಗೆಯು ಅಳಿವಾಡಿ ನಗದೆ ? ಕಾಲಕರ್ಮಂಗಳ ಗಂಡನೆಂಬ ಸುರಿಗೆಯು ಎನ್ನೆದೆಯಲ್ಲಿ ಹಾಯ್ದು ಬೆನ್ನಲ್ಲಿ ಒಡೆಹಾಯದೆ ? ಪರವಾದಿಗಳ

ಗಂಡನೆಂಬ ಪದದ ಬಾವುಲಿಯು ಬೊಂಬೆಯು ತೊಡರು ಭಂಗಿಸುತ್ತ ಹೋಗದೆ? ಎನ್ನ ಕರ್ಣದಲ್ಲಿರ್ದ ಲಿಂಗಾಂಗವೆಂಬ ಗಂಟೆ ಬಿದ್ದು ಹೋಗದೆಯುಯ್ಯಾ ಕಲಿದೇವರು ಸಾಕ್ಷಿಯಾಗಿ ಚನ್ನಬಸವಣ್ಣಾ ಎನಲು,

ಆ ಸಮಯದಲ್ಲಿ ಜಗದೇವ ಮೊಲ್ಲಿ ಬೊಮ್ಮಣ್ಣಗಳೀರ್ವರು ಅಡ್ಡ ಬಿದ್ದು ನಮಸ್ಕರಿಸಿ ಮಡಿವಾಳಯ್ಯಗಳ ಹಸ್ತದಲ್ಲಿರ್ದ ಕಾಲಭೈರವನೆಂಬ ಜಮದಂಡಿಯನೀಸುಕೊಂಡು ಪಂಜು ಕಟ್ಟುಪದಕ್ಕೆ ಅಡಕವಾಯಿತ್ತೆಂದು ಆ ಗಣಂಗಳ ಮುಂದೆ ಮಡಿವಾಳಯ್ಯಗಳ ಹಸ್ತದಲ್ಲಿರ್ದ ವಿಭೂತಿಯು ನೀಡಿಸಿಕೊಂಡು ನವ ಸ್ಕಾರವಂ ಮಾಡಿ ಕಳುಹಿಸಿಕೊಂಡು ಹೋದರಿತ್ತಲು,

ಚನ್ನಬಸವಣ್ಣ ಮಡಿವಾಳದೇವರು ಸೊಡ್ಡಳ ಬಾಚರಸರು ಮೋಳಿಗೆಯ ಮಾರಯ್ಯಗಳು ಮುಂತಾದೆಲ್ಲ ಗಣಂಗಳು ಸಹವಾಗಿ ಎದ್ದು ಚನ್ನಬಸವಣ್ಣನು ತಮ್ಮರಮನೆಯ ಅನುಭಾವ ಮಂಟಪದಲ್ಲಿ ಮಹಾಮೇರು ವಿನ ಸ್ಥಾನ ಮಂಟಪದಲ್ಲಿರ್ಪ ಹನ್ನೆರಡು ಸಾವಿರ ಷಟ್‌ಸ್ಥಲ ಬ್ರಹ್ಮಿಗಳಪ್ಪ ಮಾಯಾ ಕೋಳಾಹಳರಪ್ಪ ಚರರಿದ್ದೆಡೆಗೆ ಬಂದು ನಮಸ್ಕರಿಸಿ ವಿಭೂತಿ ವೀಳೆಯಮಂ ಮುಂದಿರಿಸಿ ಕರಕಮಲಮಂ ಮುಗಿದು ಚನ್ನಬಸವೇಶ್ವರ ದೇವರು ಬಿನ್ನೈಸಿ ಎಲೆ ಸ್ವಾಮಿಗಳಿರಾ, ನಾಳೆ ರಾತ್ರಿಗೆ ಬಿಜ್ಜಳರಾಯ ಕ್ಷಯವಾಗಿ ಪೋಪನು, ಅದ್ಭುತ ರಣಮಯವಾದಿತ್ತು, ಮಹಾಕದನವಾಹವು, ನೀವು ಉಳಿವೆಯ ಮಹಾಮನೆಗೆ ಪಯಣವಾಗಿ ಎಂದು ಬಿನ್ನಹಂ ಮಾಡಲು,

ಕೇಳಯ್ಯ ಚನ್ನಬಸವಣ್ಣ, ದೇಹಪ್ರಾಣ ಒಂದಾದ ಬಳಿಕ ಮತ್ತೆ ನಾವು ದೇಹವು ನೀವೆ ಪ್ರಾಣವು. ನೀವೆಲ್ಲಿರಿಸಿದಲ್ಲಿ ಇಹೆವಾಗಿ ನೋಟದಲ್ಲಿ ನುಡಿಯುಡಗಿತ್ತು. ಬೇಟದಲ್ಲಿ ಕೂಟವಡಗಿತ್ತು. ನಮ್ಮ ಭಾವ ನಿಮ್ಮಲ್ಲಡಗಿತ್ತು. ನಿಮ್ಮುತ್ತರವ ದಾಂಟಿದ ಬಳಿಕ ಅನುಭಾವದ ಸುದ್ದಿ ಇನ್ನೇಕೆ? ನಿಮ್ಮ ಕೂಡೆ ಬಾಹೆವೆನಲು ಸಂತೋಷದಿಂ ನಮಸ್ಕರಿಸಿ

ಕೂಡಲಚನ್ನಸಂಗೈಯ್ಯನ ಶರಣರಿಗೆ ಪೇಳದೆ ಪೋಪುದು ಪಂಚ ಮಹಾಪಾತಕವೆಂದುದಾಗಿ ಉಳಿದ ಚರಲಿಂಗಕ್ಕೆ ಪೇಳಿ ಕಳುಹಿಸಿ ಕರೆದು ಬಹೆನೆಂದು ಶರಣಾರ್ಥಿಯಂ ಮಾಡಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಮಹೇಶ್ವರರಿಪ್ಪ ವಿಚಾರ ಮಂಟಪಕ್ಕೆ ಬಂದು ಅಲ್ಲಿರ್ದ ಮಹಾ

ಮೂರ್ತಿಗಳ್ಗೆ ಸಾಷ್ಟಾಂಗ ನಮಸ್ಕಾರವಂ ಮಾಡಿ ವಿಭೂತಿ ವೀಳೆಯಮುಂ ಮುಂದಿರಿಸಿ ಕರಗಳ ಮುಗಿದುಕೊಂಡು, ಎಲೆ ಸ್ವಾಮಿಗಳಿರಾ ಎಮಗೆ ಉಳಿವೆಯ ಮಹಾಮನೆಗೆ ಪೋಪ ಪಯಣವಾಯಿತ್ತು. ನೀವು ಚಿತ್ತೈಸಿ ಎಂದು ಬಿನ್ನಹಂ ಮಾಡಲು, ಕೇಳಯ್ಯ ಚನ್ನಬಸವಣ್ಣ ನೀವು ಉಳಿವೆಗೆ ಪೋಗಿ ಶಿವಲೋಕಕ್ಕೆ ಪೋಗುವಿರಿ, ನಮಗಿನ್ನು ಮರ್ತ್ಯಲೋಕದ ಭೋಗ ಸವೆಯದು, ನೀವು ಕೈಲಾಸಕ್ಕೆ ಪೋಗಿ ತಿರುಗಿ ಬಹ ಪರಿಯಂತರವು ನಾವು ಗಿರಿಗಂಹರಗಳಲ್ಲಿ ಚರಿಸಾಡುತಿರ್ಪೆವು, ನೀವು ಮರ್ತ್ಯಕ್ಕೆ ಬಂದಂದಿಂಗೆ ನಾವು ಬಂದು ಪೂಜೆಯ ಕೈಕೊಂಡಿಹೆವು ನೀವು ಚಿತ್ತೈಸಿ ಎಂದು ನುಡಿಯಲು, ಚನ್ನಬಸವಣ್ಣ ಮುಂತಾದೆಲ್ಲ ಗಣಂಗಳು ನಗುತ್ತೆ ಅವರಿಂದ ಕಳುಹಿಸಿಕೊಂಡು ಗಂಗೆವಾಳುಕ ಸಮರುದ್ರರಿಪ್ಪ ಬಿಶಾಲ ಮಂಟಪಕ್ಕೆ ಬಂದು ನಮಸ್ಕಾರಂಗಳಂ ಮಾಡಿ ನಮಗುಳುವೆಯ ಮಹಾಮನೆಗೆ ಪಯಣವಾಯಿತ್ತು, ನಿಮ್ಮ ದೇವರುಗಳೆಲ್ಲ ಚಿತ್ತೈಸುವುದೆಂದು ಬಿನ್ನಹಂ ಮಾಡಲು, ಕೇಳೆಯ್ಯಾ ಚನ್ನಬಸವಣ್ಣ, ನೀವು ಒಂದು ಬಾರೆ ಕೈಲಾಸಕ್ಕೆ ಪೋಗಿ ಬಹ ಪರಿಯಂತರ ನಾವು ಹತ್ತು ಹತ್ತು ಬಾರೆ ಘಟವ ತೊಟ್ಟು ತೊಟ್ಟು ಬಂದಿಹೆವು, ನೀವು ಚಿತ್ತೈಸಿಯೆಂದು ನುಡಿಯಲು, ಅವರಿಗೆ ಶರಣಾರ್ಥಿ ಎಂದು, ಅಲ್ಲಿ ಅರವತ್ತು ನಾಲ್ಕು ಶೀಲ ವ್ರತಕ್ಕಧಿಪತಿಗಳಪ್ಪಾಚಾರ ಸಂಪನ್ನರನುಭಾವ ಮಂಟಪಕ್ಕೆ ಬಂದು, ನಮಸ್ಕಾರಂಗಳ ಮಾಡಿ ನಮಗೆ ಉಳಿವೆಯ ಮಹಾಮನೆಗೆ ಪಯಣವಾಯಿತ್ತು ನೀವು ಚಿತ್ತೈಸುವುದೆನಲು, ಕೇಳೈಯ್ಯ ಚನ್ನಬಸವಣ್ಣಾ, ನೀವು ಬಹ ಪರಿಯಂತರ ನಾವು ಹಿಡಿದ ಕಾಯಕ ವ್ರತದಾಸೋಹಂ ತಪ್ಪದೆ ನಡೆದು ಗುರುಲಿಂಗ ಜಂಗಮದ ಪ್ರಸಾದ ಸಂತುಷ್ಟರಾಗಿಹೆವು, ನೀವೇ ಚಿತ್ತೈಸಿ ಎನ್ನಲು, ಅವರಿಗೆ ನಮಸ್ಕಾರಂಗಳ ಮಾಡಿ, ಅಲ್ಲಿಂದ ಕಳುಹಿಸಿಕೊಂಡು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಚರಲಿಂಗವಿರ್ದ ಗವಿಯ ಸಿಂಹಾಸನಕ್ಕೆ ಬಂದು ದೀರ್ಘದಂಡ ನಮಸ್ಕಾರಂಗಳಂ ಮಾಡಿ ವಿಭೂತಿ ವೀಳೆಯಮಂ ಮುಂದಿರಿಸಿ ಎನ್ನ ಗುರುವಿನ ಗುರು ಪರಮ ಗುರುವೆ ಪರಶಿವ ಮೂರ್ತಿ ಚರಲಿಂಗವೆ ನಿಮ್ಮ ತೊತ್ತು ಸೇವೆಯ ಮಾಡು ಎಂದು ಕೊಟ್ಟ ಮಣಿಹವು ಇಂದಿಂಗೆ ತೀರಿತ್ತು, ನಿಮ್ಮ ದೇವರುಗಳುಳುವೆಯ ಮಹಾಮನೆಗೆ ಚಿತ್ತೈಸುವುದೆಂದು ಬಿನ್ನಹಂ ಮಾಡಲು, ಕೇಳಿಯ್ಯ ಚನ್ನಬಸವಣ್ಣ ಇನ್ನು ಕೆಲವು ದಿವಸ ಮರ್ತ್ಯದಲ್ಲಿದ್ದು ಪೂಜೆಗೊಂಡಿಹೆವು, ಈ ಕಂಥೆ ಪಳದಾದರೂ ಮತ್ತೊಂದು

ಕಂಥೆಯುಂ ತೊಟ್ಟು ನೀವು ಬಂದಂದಿಂಗೆ ನಾವು ಪೂಜೆಗೊಂಡಿಹೆವು, ನೀವೆಲ್ಲಿದ್ದರೂ ಈ ಮರ್ತ್ಯದಲ್ಲಿ ಶಿವಗಣಂಗಳು ನಮ್ಮ ಪೂಜೆಯ ಮಾಡುವ ಕಾರಣ ನಾವು ನಿಮ್ಮನಗಲಿದ ಚಿಂತೆಯಲ್ಲದೆ ಮತ್ತೊಂದು ಚಿಂತೆ ಇಲ್ಲ ಸ್ವಾಮಿಗಳಿರಾ ಎಂದು ನಮಸ್ಕಾರಮಂ ಮಾಡಿ ವಿಭೂತಿಯನೀಡಿಸಿಕೊಂಡು ಕೈಗಳ ಮುಗಿದು ಕಳುಹಿಸಿಕೊಂಡು

ಅಲ್ಲಿಂದ ಪ್ರಭುದೇವರ ಪರಮಾನಂದ ಪ್ರಕಾಶ ಮಂಟಪಕ್ಕೆ ಬಂದು ಅಲ್ಲಿ ಪಂಚಾಕ್ಷರಿ ದೇವರಿಗೆ ನಮಸ್ಕಾರಮಂ ಮಾಡಿ ವಿಭೂತಿ ವೀಳೆಯಂ ಮುಂದಿರಿಸಿ ನಮಗುಳುವೆಯ ಮಹಾಮನೆಗೆ ಪಯಣವಾಯಿತ್ತು, ನೀವು ಚಿತ್ತೈಸುವುದೆನಲು, ಕೇಳಯ್ಯಾ ಚನ್ನಬಸವಣ್ಣಾ, ನಮಗೆ ನಾಗಾಂಬಿಕೆಯರ ಗಣಪರ್ವದಲ್ಲಿ ಪ್ರಭುದೇವರು ಪರಮಪ್ರಸಾದಮಂ ತವನಿಧಿಯಾಗಿ ದಯಪಾಲಿಸಿದ್ದಾರೆ, ನೀವು ಬಾಹ ಪರಿಯಂತರ ಪ್ರಸಾದ ತೀರದು, ನಾವು ನೆಲಮಾಳಿಗೆಯಲ್ಲಿ ಆರು ಕಾಣದ ಹಾಗೆ ಇಹೆವು, ಈ ಗೃಹದ ಬಾಗಿಲು ಮರ್ತ್ಯದ ಪಾಪಿಗಳಿಗೆ ಕಾಣಿಸದು, ಇಲ್ಲಿಂದ ನೀವು ಸುಖದಲ್ಲಿ ಪೋಗಿ ಬಾಹುವೆಂದು ಬೀಳ್ಕೊಡಲು ಅವರಿಗೆ ಶರಣಾರ್ಥಿಯಂ ಮಾಡಿ,

ಅಲ್ಲಿಂದ ಬಸವರಾಜದೇವರ ಶಿವಪೂಜಾಗ್ರಹದ ನೆಲ ಮಾಳಿಗೆಯಲ್ಲಿರ್ಪ ಜ್ಞಾನಪ್ರಕಾಶ ಮಂಟಪಕ್ಕೆ ಬಂದು ಶಿವಪೂಜೆಯ ಸಂಗಮನಾಥ ದೇವರಿಗೆ ಶರಣಾರ್ಥಿಯಂ ಮಾಡಿ ನಮಗುಳುವೆಯ ಮಹಾಮನೆಗೆ ಪಯಣವಾಯಿತ್ತು, ದೇವರು ಚಿತ್ತೈಸುವುದೆಂದು ಬಿನ್ನಹಂ ಮಾಡಲು ಕೇಳಯ್ಯಾ ಚನ್ನಬಸವಣ್ಣಾ, ನೀವು ಬಾಹ ಪರಿಯಂತರವು ನಾವೀ ನೆಲ ಮಾಳಿಗೆಯಲ್ಲಿರ್ಪೆವು. ಶಿವಯೋಗದಿಂದ ನಿತ್ಯ ಪರಮಾಮೃತವನುಂಡು ಪರಮ ಸಂತೋಷದಲ್ಲಿಹೆವು ಎನೆ ಬಸವಣ್ಣನ ಶಿವಪೂಜಾಯುಪಕರಣಂಗಳಂ ಆ ಪರವಾಸದೊಳಿಂಬಿಟ್ಟು ಅವರಿಂದ ಬೀಳ್ಕೊಂಡು ಅಕ್ಕನಾಗಮ್ಮನವರ ಶಿವಪೂಜೆಯ ಸಂಗ್ರಹದ ನೆಲಮಾಳಿಗೆಯ ಪ್ರಸನ್ನ ಮಂಟಪಕ್ಕೆ ಬಂದು ಪ್ರಸಾದಿ ಸೋಮೇಶ್ವರ ದೇವರಿಗೆ ನಮಸ್ಕಾರವಂ ಮಾಡಿ ನಮಗೆ ಉಳವೆಯ ಮಹಾಮನೆಗೆ ಪಯಣವಾಯಿತ್ತು, ದೇವರು ನೀವು ಚಿತ್ತೈಸುವುದೆನಲು, ಕೇಳಯ್ಯ ಚನ್ನಬಸವಣ್ಣಾ, ನಮಗೆ ನಾಗಾಂಬಿಕೆಯರ ಗಣಪರ್ವದಲ್ಲಿ ಪ್ರಭುದೇವರು ಪರಮಪ್ರಸಾದಮಂ ತವನಿಧಿಯಾಗಿ ಪಾಲಿಸಿದ್ದಾರೆ. ನೀವು ಬಾಹ ಪರಿಯಂತರವು ಪ್ರಸಾದ ತೀರದು. ನಾವೀ ನೆಲ ಮಾಳಿಗೆಯಲ್ಲಿ ಆರು ಕಾಣದ ಹಾಗೆ ಇದ್ದೇವೆ. ಈ ಗೃಹದ ಬಾಗಿಲ

ಮರ್ತ್ಯದ ಪಾಪಿಗಳ ಕಣ್ಣಿಗೆ ಕಾಣಿಸದು. ಇಲ್ಲಿಂದ ನೀವು ಸುಖದಲ್ಲಿ ಹೋಗಿ ಬಾಹುದೆಂದು ಬೀಳ್ಕೊಡಲು ಅವರಿಗೆ ಶರಣಾರ್ಥಿಯಂ ಮಾಡಿ,

ಅಲ್ಲಿಂದ ಪಂಡಿತಾರಾಧ್ಯರ ಶಿಷ್ಯರು ಆರಾಧ್ಯದೇವರಿಹ ನೀಲಲೋಚನೆಯಮ್ಮನವರ ಶಿವಪೂಜೆಯ ಮಾಣಿಕದ ನೆಲಮಾಳಿಗೆಗೆ ಪೋಗಿ ಆ ಆರಾಧ್ಯದೇವರಿಗೆ ಶರಣಾರ್ಥಿಯಂಮಾಡಿ, ಎಲೆ ಅಯ್ಯಾ ನಮಗುಳ ವೆಯ ಮಹಾಮನೆಗೆ ಪಯಣವಾಯಿತ್ತು ದೇವರು ಚಿತ್ತೈಸುವುದೆಂದು ಬಿನ್ನಹಂಮಾಡಲು, ಕೇಳಯ್ಯಾ ಚನ್ನಬಸವಣ್ಣ ನಮ್ಮ ದೇವರು ಈ ಮಂಟಪದಲ್ಲಿ ನೀವು ತಿರುಗಿ ಬಹ ಪರಿಯಂತರವು ನಮ್ಮ ಪಂಡಿತಾರಾಧ್ಯದೇವರು ನಮಗೆ ಪ್ರಸನ್ನ ಪ್ರಸಾದವಂ ತವನಿಧಿಯಾಗಿ ಪಾಲಿಸಿಹರು. ಈ ಗುರುಪ್ರಸಾದವೆ ನಿತ್ಯ ಪ್ರಸಾದವು. ಈ ಪ್ರಸಾದವ ಬಿಟ್ಟು ಬಾರೆವು. ನೀವು ಸುಖದಲ್ಲಿ ಪೋಗಿಬಾಹುದೆಂದು ನಿರೂಪವಂ ಕೊಡಲು, ಅವರಿಗೆ ಶರಣಾರ್ಥಿಯಂ ಮಾಡಿ ಅಲ್ಲಿಂದ ಕಳುಹಿಸಿಕೊಂಡು ಬಹ ಸಮಯದಲ್ಲಿ,

ಮಡಿವಾಳಯ್ಯಗಳು ಚನ್ನಬಸವರಾಜದೇವರು ಕೂಡಿ ಮಾತಾಡುವಾಳೋಚನೆಯುಪ್ರಶ್ನೆ—ಎಲೆ ಚನ್ನಬಸವಣ್ಣ ಹೀಗಲ್ಲಿಗಲ್ಲಿಗೆ ಪೋಗಿ ಕಳುಹಿಸಿಕೊಂಬರೆ ವರುಷ ಪರಿಯಂತರವು ಸಾಲದು. ಅಸ್ತಮಯವಾಯಿತ್ತು. ನಾಳೆಯಾರನು ಕಾಂಬುದಕ್ಕೆ ಅವಕಾಶವಿಲ್ಲ. ರಾತ್ರಿಗೆ ಗಣಪರ್ವದ ಸಮೂಹಕ್ಕೆ ಗವಿಬಿಲದ್ವಾರ ನೆಲಮಾಳಿಗೆ ಮುಂತಾದ್ದರಲ್ಲಿ ಜಪಸಮಾಧಿ ನಿಷ್ಠಾಪರರಪ್ಪ ಹಿರಿಯರುಗಳೆಲ್ಲರು ಬಾಹುದಕ್ಕೆ ಪಡಿಹಾರಿ ಉತ್ತಣ್ಣಗಳಿಂದ ಸಾರಿಸಿ ಕರೆಯಿಸಬೇಕೆಂದರೆ, ಮಡಿವಾಳಯ್ಯಗಳೆಂದುದೆ ಯೋಚನೆ ಎಂದಾನಂದಿಸಿ ಆಗ ಪಡಿಹಾರಿ ಉತ್ತಣ್ಣಗಳ ಕರೆದು ನೆಲಮಾಳಿಗೆ ಬಿಲದ್ವಾರಂಗಳಲ್ಲಿ ಜಪಸಮಾಧಿಗಳಲ್ಲಿಹ ದೇವರುಗಳೊಬ್ಬರುಳಿಯದೋಪಾದಿಯಲ್ಲಿ ಬಿಜಯಂಗೈಸಿ ತಾಹುದೆಂದು ಕಳುಪಲು,

ಇತ್ತ ಚನ್ನಬಸವರಾಜದೇವರು ಮಡಿವಾಳಯ್ಯಗಳು ಸೊಡ್ಡಳ ಬಾಚರಸರು ಮೋಳಿಗೆಯ ಮಾರೈಯ್ಯಗಳು ಸಹವಾಗಿ ಎಲ್ಲ ದೇವರುಗಳು ಬಾಹ ಪರಿಯಂತರವು ರುದ್ರಮುನಿದೇವರ ಬಿಡಾರಕ್ಕೆ ಪೋಗಿ ಕಳುಹಿಸಿಕೊಂಡು ಬಾಹೆವೆಂದು ನಡೆತಂದು ರೇವಣಸಿದ್ಧೇಶ್ವರ ದೇವರು ಕಟ್ಟಿಸಿದ ಚಂಗಣಗಿಲ ಮಂಟಪಕ್ಕೆ ಬಂದು ರುದ್ರಮುನಿದೇವರಿಗೆ ನಮಸ್ಕಾರಮಂ ಮಾಡಿ ವಿಭೂತಿವೀಳೆಯವ ಮುಂದಿರಿಸಿ ಕೈಗಳ ಮುಗಿದು ಚನ್ನಬಸವರಾಜದೇವರು ಮಾಡುವ ಬಿನ್ನಪವು.

ನಾನು ಮೊನ್ನೆ ಪುಟ್ಟಿದ ತರಳ. ನಾನೇನೆಂಬುದನರಿಯೆನು. ನಿಮ್ಮ ಕೃಪೆಯಿಂದೆ ಪೇಳುವ ಪ್ರಶ್ನೆ. ಈ ರಾಕ್ಷಸನಾಮ ಸಂವತ್ಸರದಲ್ಲಿ ನಾ ಬಂದ ಮಣಿಹವು ಇಂದಿಗೆ ಸಾಧ್ಯವಾಯಿತ್ತು. ಬಸವರಾಜದೇವರಿಗೆ ಕೈಲಾಸದಲ್ಲಿ ದ್ವಾರಪಾಲಕರು ತಡೆದ ಕಾರಣ ಮರ್ತ್ಯಕ್ಕೆ ಕಳುಹಿಸಿ ಕೊಂಡು ಬಂದು ಇಂದಿಂಗೆ ಮೂವತ್ತಾರು ವರುಷವಾಯಿತ್ತು. ನಾನು ಬಂದು ಇಂದಿಂಗೆ ಹನ್ನೆರಡು ವರುಷವಾಯಿತ್ತು. ಇನ್ನೂ ಮುಂದಣ ಕಥನಕ್ಕೆ ಪ್ರಭುದೇವರು ಸಿದ್ಧರಾಮಯ್ಯದೇವರು ಏಳುನೂರೆಪ್ಪತ್ತ ಅಮರಗಣಂಗಳು ಸಹಿತ ನಾನು ಕಲ್ಯಾಣಮಂಡಲಕ್ಕೆ ಬಂದು ಮುಂದೆ ನಿಮ್ಮನೆ ಪೂಜೆಯ ಮಾಡಿಹೆವು. ದೇವರು ಚಿತ್ತೈಸಬೇಕೆಂದು ಬಿನ್ನಹಂ ಮಾಡಲು, ಆಗ ರುದ್ರಮುನಿದೇವರು ನಿರೂಪಿಸುವ ನಿರೂಪವು.

ಕೇಳಯ್ಯಾ ಚನ್ನಬಸವಣ್ಣಾ, ನಾವು ನಿಮ್ಮ ಕೂಡ ಉಳಿವೆಯ ತನಕ ಬಂದು ನೀವು ಕೈಲಾಸಕ್ಕೆ ಹೋದ ಬಳಿಕ ನಾವು ತಿರುಗಿ ಬಂದಿಲ್ಲಿದುರ್ ಶ್ರೀಗಿರಿಯಲ್ಲಿ ಗೋಪ್ಯವಾಗಿರ್ದಿಹೆವು. ನಮ್ಮ ರೇವಣಸಿದ್ಧೇಶಂಗೆ ನೀಲಲೋಚನೆಯಮ್ಮ ನೀಡಿದ ಭಿಕ್ಷವ ಮಹಾ ಸಿದ್ಧಿಯನುಳ್ಳ ಖರ್ಪರದಲ್ಲಿ ಪರಮ ಪ್ರಸಾದವಾಗಿ ಅಕ್ಷಯಪಾತ್ರೆಯಲ್ಲಿ ಪಾಲಿಸಿದ್ದಾರೆ. ತೀರದ ತವನಿಧಿಯಾಗಿದ್ದಿತು. ನಮ್ಮ ಹಸ್ತಾಗ್ರದಲ್ಲಿ ಅಮೃತಕೂಪದ ಕ್ಷೀರಾಹಾರದಿಂದ ನಿತ್ಯ ತೃಪ್ತಿಯಾಗಿದ್ದಿತು. ಅಲ್ಲಿಗೆ ಪೋಗಿ ಬಾಹೆವೆಂಬ ಭ್ರಾಂತುಂಟೆ ಶರಣಂಗೆ ? ನಿಮ್ಮ ಪುರಾತನರು ಬಾಹ ಪರಿಯಂತರವು ಮರ್ತ್ಯದಲ್ಲಿ ಕೃತ್ಯಂಗಳು ಬಹಳ. ನೀವು ಬಾಹಂದಿಂಗೆ ನಿಮ್ಮ ಬಂಡಾರದಲ್ಲಿಹ ವಚನಂಗಳುಮಂ ತೆಗೆದು ಅವು ಮರ್ತ್ಯದಲ್ಲಿ ಹರಿದಾವು. ದಿಕ್ಕಿದಿಕ್ಕಿನಲ್ಲಿ ಕೊಂಡಾಡಿಸಿ ಕೊಂಡು ಮೆರೆದಾವು. ಅಷ್ಟ ದಿಕ್ಕುಗಳಲ್ಲಿ ಭಕ್ತಿ ಬಹಳವಾದೀತು. ಮಹಾ ಪುರುಷರು ಹುಟ್ಟಿ ಸುಳುಹುದೋರಿಹರು. ಗುರುಲಿಂಗಜಂಗಮಕ್ಕೆ ತನು ಮನಧನಂಗಳಂ ಸಮರ್ಪಿಸುವ ಭಕ್ತರು ಉದಯವಾದಾರು. ದಕ್ಷಿಣದಿಕ್ಕು ಕೈಲಾಸಕ್ಕೆ ಸಮವಾದೀತು. ಎಣ್ಣೆ ಕಾವೇರಿಯ ಮಧ್ಯದಲ್ಲಿ ಎರಡನೆಯ ಕಲ್ಯಾಣವಾದೀತು. ನಮ್ಮ ಪುರಾತನರ ವಚನಭಾಂಡಾರನುಂ ತೆಗೆದೋದಿಸಿ ಮೆರೆದಾರು. ಸತ್ಯಶುದ್ಧ ಕಾಯಕ ನಿತ್ಯ ನಿಯಮಂಗಳಧಿಕವಾದಾವು. ಅಷ್ಟ ದಿಕ್ಕುಗಳಲ್ಲಿ ಷಟ್‌ಸ್ಥಲ ಬ್ರಹ್ಮಜ್ಞಾನಿಗಳು ಮಾಯಾಕೋಲಾಹಳರುದಯವಾದಾರು. ಆ ದಕ್ಷಿಣದಿಕ್ಕಿನಲ್ಲಿ ನಮ್ಮ ರೇವಣಸಿದ್ಧೇಶ್ವರ ಶಾಂತಮಲ್ಲಿಕಾರ್ಜುನದೇವರು ಶರಣರು ಹುಟ್ಟಿಯಾರು. ಆ ಶರಣರ

ಒತ್ತಿನಲಿ ಆಡುತ್ತಿಹವಯ್ಯ ಚನ್ನಬಸವಣ್ಣಾ ಮಡಿವಾಳಯ್ಯಗಳೇ ಎಂದು ರುದ್ರಮುನಿದೇವರು ನಿರೂಪವಮಂ ಕೊಡಲು,

ಮಹಾಪ್ರಸಾದವೆಂದು ಆ ಸಮಯದಲ್ಲಿ ಚನ್ನಬಸವಣ್ಣನು ನಿರೂಪಿಸಿದ ಪ್ರಸ್ತಾವದ ವಚನ. ಮುಂದೆ ಕಲಿಯುಗ ಪ್ರಬಲವಾದೀತು. ಭಕ್ತಿ ಬರನಾದೀತು. ಮುಂದೆ ಏಳನೂರಿಪ್ಪತ್ತು ವರುಷ ತನಕ ಕಲ್ಯಾಣಕ್ಕೆ ರಾಯ ಪಟ್ಟವಿಲ್ಲ. ಮುಂದೆ ಅಳಿಯ ಬಿಜ್ಜಳನು ರಾಕ್ಷಸ ನಾಮ ಸಂವತ್ಸರ ಪರಿಯಂತರ ಆಳಿಯಾನು. ಬಿಜ್ಜಳರಾಯನರಮನೆಯ ಹೊನ್ನಕೊಪ್ಪರಿಗೆ ಮುತ್ತಿನ ಸಿಂಹಾಸನ ಭಂಡಾರ ದ್ರವ್ಯವೆಲ್ಲವಂ ನಿಕ್ಷೇಪವಮಂ ಮಾಡಿಯಾನು. ಅಲ್ಲಿಂದ ಮೇಲೆ ಕ್ಷಯವಾದಾನು. ಓರುಗಲ್ಲ ಪ್ರತಾಪರುದ್ರನು ಹದಿನೆಂಟು ವರುಷವಾಳಿಯಾನು. ಬಸವರಾಜದೇವರರಮನೆಯಲ್ಲಿ ಸಾವಿರದ ಮುನ್ನೂರರವತ್ತು ಹೊನ್ನ ಕಲಶ ಮುತ್ತು ಮಾಣಿಕ ಪುಷ್ಯರಾಗ ವೈಢೂರ್ಯ ವಜ್ರದಿಂ ರಚಿಸಿದ ಕಳಸದಿಂದೊಪ್ಪುವರಮನೆಯುಪ್ಪರಿಗೆ ಶೂನ್ಯಸಿಂಹಾಸನ ಪ್ರಭುದೇವರ ಧ್ಯಾನಕ್ಕೆ ನೆಲೆಯಾದ ದಿವ್ಯ ಮಾಣಿಕದ ಮಾಡ ಸಕಳ ಭಂಡಾರವ ನಿಕ್ಷೇಪವ ಮಾಡಿಯಾರು. ಆರುನೂರು ವರುಷ ಕಲ್ಯಾಣ ಗಜಾರಣ್ಯವಾದೀತು. ಅಲ್ಲಿಂದ ಮೇಲೆ ತುರುಕರು ಹರಿದಾರು. ಹಂಪೆಯ ಸಿಂಹಾಸನ ಹಾಳಾದೀತು. ಪಂಪೆಯ ಜಾಳೀಂದ್ರ ಪರ್ವತದಲ್ಲಿ ಮುನ್ನೂರರುವತ್ತುಮೂರು ಸಾವಿರ ಋಷಿಗಳು ಸಮಾಧಿಸನ್ನದ್ಧರಾದಾರು. ನಾರಸಿಂಹಾವತಾರದ ರಾಯ ನರಬೇಂಟೆಯನಾಡಿಯಾನು. ಕಲಿಯುಗದಲ್ಲಿ ಮಹಿಮೆಯ ನೆಲೆಗಾರರು ವೆಗ್ಗಳವಾದಾರು. ಶಿವಸಮಯ ತಗ್ಗೀತು. ಶ್ರೀ ಪರ್ವತದಲ್ಲಿ ಮನುಷ್ಯರ ರೋಹಿತ ಹರಿದೀತು. ವಿಷ್ಣುವಿನವತಾರ ಶ್ರೀ ಪರ್ವತನ ಮೆಟ್ಟೀತು. ಪಂಚಸ್ಥಾನ ಮಧ್ಯದಲ್ಲಿ ಅಳಿದೀತು. ಮಿಕ್ಕುದು ಹಂಪೆಯಲ್ಲಿ ಬಯಲಾದೀತು. ಉತ್ತರ ದಕ್ಷಿಣದಲ್ಲಿ ಭಕ್ತಿ ವಿಶೇಷವಾದೀತು. ಉತ್ತರದಲ್ಲಿ ನಮ್ಮ ಪೂರ್ವದ ಭಕ್ತಿಯ ಮೆರೆದಾರು. ದಕ್ಷಿಣದಲ್ಲಿ ರಾಜಭಕ್ತಿಯ ಮೆರೆದಾರು. ನಮ್ಮ ಪುರಾತರ ವಚನಂಗಳೆಲ್ಲವ ಓದಿಯಾರು. ಓದಿಯೂ ನಂಬುಗೆ ಇಲ್ಲದಾದಾರು. ನೂರಕ್ಕೊಬ್ಬರಲ್ಲದೆ ನಂಬರು. ನಮ್ಮ ಪುರಾತನರ ವಚನಂಗಳನೆಲ್ಲವ ಜರಿದಾರು. ತಮ್ಮ ಕವಿತ್ವಂಗಳ ಮೆರೆದಾರು. ನಮ್ಮ ಪುರಾತನರ ವಚನಂಗಳಿಂದೊದಗಿದ ಜ್ಞಾನವೆಂಬುದನರಿಯರು. ನಮ್ಮ ಪುರಾತನರು ತಮ್ಮಂತೆಯಾಗಬೇಕೆಂದಿರಿಸಿದರೆಂಬುದನರಿಯರು. ತಾಯಿಂದ ಮಕ್ಕಳಾದರೆಂಬುದನರಿಯರು. ಊರೆಲ್ಲಕ್ಕೂ ಹುಟ್ಟಿದ

ವರ ಹಾಗೆ ನುಡಿದಾರು. ನಮ್ಮ ಪುರಾತನರ ವಚನಂಗಳೇ ತಾಯಿತಂದೆ ಎಂದರಿಯರು. ನಮ್ಮ ಆದ್ಯರ ವಚನಂಗಳು ಗುರುಲಿಂಗ ಜಂಗಮವ ತೋರಿಸಿಹವು. ನಮ್ಮ ಆದ್ಯರ ವಚನಂಗಳಜ್ಞಾನದ ತಲೆ ತೆಗೆದಿರಿಸಿತ್ತು. ನಮ್ಮಾದ್ಯರ ವಚನ ಮದಮತ್ಸರ ಅರಿಷಡ್ವರ್ಗ ಸಪ್ತವ್ಯಸನ ಪಂಚೇಂದ್ರಿಯದಶವಾಯುಗಳಿಚ್ಛೆಗೆ ಹರಿವ ಮನವ ಸ್ವಸ್ಥವಾಗಿರಿಸಿತ್ತು. ನಮ್ಮಾದ್ಯರ ವಚನ ಅರ್ಪಿತಂಗಳ ಮೂರರಲ್ಲಿ ಕೊಂಡುದ ತೋರಿಸಿತ್ತು. ನಮ್ಮಾದ್ಯರ ವಚನ ನೂರೊಂದು ಸ್ಥಲವ ಮೀರುವ ಮಹದಲ್ಲಿರಿಸಿತ್ತು. ನಮ್ಮಾದ್ಯರ ವಚನ ಇನ್ನೂರು ಹದಿನಾರು ಲಿಂಗಕ್ಕೆ ಸರ್ವೇಂದ್ರಿಯಂಗಳ ಸನ್ಮತವ ಮಾಡಿ ಸಾಕಾರವ ಸವಿದು ನಿರಾಕರವನರಿದು ನಿರ್ವಯಲ ನಿತ್ಯ ಸುಖದಲ್ಲಿರಿಸಿತ್ತು. ಇಂತಹ ನಮ್ಮ ಆದ್ಯರ ವಚನ ಭಾಂಡಾರವಂ ನಮ್ಮ ಪ್ರಭುದೇವರು ಮುಖ್ಯವಾದೇಳ್ನೂರೆಪ್ಪತ್ತಮರಗಣಂಗಳು ಅಸಂಖ್ಯಾತ ಪುರಾತನರು ಪ್ರಮಥಗಣಂಗಳು ಕೇಳಿ ಹೇಳಿ ಕೊಂಡಾಡಿದ ಕಾರಣ, ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ಸುಖವ ಸೂರೆಗೊಂಡರು. ಸ್ವಯಲಿಂಗವಾದರು. ಇಂತಹ ಪುರಾತನರು ಇಂತಹ ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯರು ಅಪೂರ್ವ. ನಮ್ಮ ಪುರಾತನರು ಬಾಹ ಕಾಲಕ್ಕೆ ನೂರುಕೊಬ್ಬರು ಭಕ್ತರು ನೂರುಕೊಬ್ಬ ಜಂಗಮವು ಅಲ್ಲಲ್ಲಿಗೊಬ್ಬರು ಸುಳಿದಾರು. ಮಿಕ್ಕಿನವರೆಲ್ಲ ಕುಟಿಲ ಪೂಜಕರು. ಅದೆಂತೆಂದೊಡೆ ಹೊರಗೆ ಲಿಂಗದ ಪೂಜೆ ಒಳಗೆ ಅರ್ಧಾಂಗನೆಯರ ಪೂಜೆ. ಹೊರಗೆ ಭಕ್ತಿಯ ಮಾಟ. ಒಳಗೆ ಕರ್ಮದ ಕೂಟ. ಹೊರಗೆ ಶೀಲದ ಮಾಟ. ಒಳಗೆ ನರಕದಾಟ. ಹೊರಗನುಭಾವದಾಟ. ಒಳಗೆ ಪ್ರಪಂಚಿನ ಕೂಟ. ಇಂತಲ್ಲದೆ ಹಾವ ತೊರಿಖಗ ಮೃಗಂಗಳಂ ಕೊಂದು ಒಡಲ ಹೊರೆದಂತಾಯಿತ್ತು ಮುಂದಣ ಕಲಿಯುಗದ ಭಕ್ತಿಯ ಮಾಟ. ಗುರುಲಿಂಗ ಜಂಗಮಕ್ಕೆಂದು ಬೇಡರು. ಮನೆಯ ಮಕ್ಕಳಿಗೆಂದು ಬೇಡುವರು. ಜಂಗಮಲಿಂಗ ಬಂದರೆ ಮಂದಕ್ಕೆ ಸಾಗಿಸುವ ಜೇಟ. ಸಂಗಟಕ್ಕೆ ಮಾಡಿ ನೀಡುವರಲ್ಲದೆ ಭಕ್ತಿಯಿಂದ ಮಾಡಿ ನೀಡುವ ಕಾಯಕ ದಾಸೋಹವಿಲ್ಲ. ಭಕ್ತರ ಕಂಡರೆ ಭಕ್ತರು ಸೇರರು ಜಂಗಮವ ಕಂಡರೆ ಜಂಗಮವು ಸೇರದು. ತಮ್ಮೊಳಗೆ ತಾವೇ ಮಚ್ಚರದಿಂದ ಉಭಯ ಲಿಂಗವನರಿಯದೆ ಕೆಟ್ಟರು. ಎಲ್ಲರು ಏಕಪ್ರಸಾದಿಗಳಾಗಿ ಉಂಡಾರು. ಒಬ್ಬರ ಕುಲವ ಒಬ್ಬರು ಹಳಿದಾರು. ಕನ್ನಗಳ್ಳ ಸಹವಾಗಿ ಸಪ್ತಧಾತು ವೇಷಕರು ಮೊದಲೆ ನಂಬುಗೆ ವಿಶ್ವಾಸ ತಪ್ಪಿತ್ತೆಂಡು ಆ ಕನ್ನಗಳ್ಳರಿಗಿಂದಲು

ಮೊದಲು ತಾವೇ ಕಳ್ಳರಾಗಿ ಒಬ್ಬರಾಪತ್ತಿಗೊಬ್ಬರು ತಪ್ಪಿಸಿಕೊಂಬರು. ವಿರಕ್ತರೆಲ್ಲರು ಹೊನ್ನು ಸಹ ಹೆಣ್ಣಿನಲ್ಲಿ ಪಾಶಬದ್ಧರಾಗಿ ಮುಳುಗಿಹರು. ತನು ಮನ ಬಳಲಿ ಕಾಯಕವ ತಂದು ನೀಡುವ ಭಕ್ತನ ಮನೆಯ ಕಾಯಿದ್ದಿರ್ಪ ಜಂಗಮನಪೂರ್ವ. ಒಳಗಿದ್ದ ನಮ್ಮ ಮರುಳುಶಂಕರ ದೇವರಂತಿರಬೇಕು. ಹೊನ್ನು ಹೆಣ್ಣು ಮಣ್ಣಿನಲ್ಲಿ ಬದ್ಧರಾಗಿ ಮುಳುಗಿಹರು. ಒಳಗಿದ್ದರೆ ನಮ್ಮ ಪ್ರಭುದೇವರಂತಿರಬೇಕು. ಸಕಳೈಶ್ವರ್ಯದೊಳಗಿದ್ದರೂ ನಮ್ಮ ಶಿವಯೋಗಿ ಸಿದ್ಧರಾಮಯ್ಯನಂತಿರಬೇಕು. ಸಕಳ ಭೋಗಾದಿ ಭೋಗಂಗಳ ಭೋಗಿಸುವಲ್ಲಿ ನಮ್ಮ ಸಂಗನಬಸವರಾಜ ದೇವರ ಮಠದ ಜಂಗಮದಂತಿರಬೇಕು. ಇಂತಲ್ಲದೆ ಹೊನ್ನು ಹೆಣ್ಣು ಮಣ್ಣಿನಾಸೆಗೆ ಭಕ್ತರ ಮನೆಯ ಕಾಯ್ದು ಮತ್ತೊಬ್ಬ ಜಂಗಮ ಬಂದರೆ ಉಬ್ಬಸಂಗೊಂಡು ಆವಾಗ ಹೋಹನೋ ಎಂದು ಹಾದಿಯ ನೋಡುವರಲ್ಲದೆ ತಮ್ಮಂಗವ ಮರೆದು ನಮ್ಮ ಗುರುವಿನ ಗುರು ಪರಮಗುರು ಬಂದಿಹರೆಂದು ಭಕ್ತನ ಕೈಯ್ಯ ಸೇವೆಯ ಮಾಡಿಸುವ ಜಂಗಮವಪೂರ್ವವು. ಜಂಗಮದಿಚ್ಛೆಯಲ್ಲಿಪ್ಪ ಭಕ್ತನಪೂರ್ವವು. ನಮ್ಮ ಪುರಾತನರಿಗೆ ಹಿಡಿದ ಛಲವ ಬಿಡೆನೆಂಬ ಬಿರಿದು. ಆ ಬಿರಿದಿಗೆ ಪ್ರಸಾದವೆ ಮೀಸಲೆಂದು ಆ ಪ್ರಸಾದಕ್ಕೆ ಮನವೇ ಮೀಸಲೆಂದು ಆ ಮನಕ್ಕೆ ಲಿಂಗವೇ ಮೀಸಲೆಂದು ಆ ಲಿಂಗಕ್ಕೆ ಜಂಗಮವೇ ಮೀಸಲೆಂದು ಆ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನವೇ ಮೀಸಲೆಂದು ನಮ್ಮಾದಿಯ ಪುರಾತನರು ಪ್ರಸಾದಕ್ಕೆ ತಪ್ಪದೆ ನಡೆದರು. ನಡೆ ತಪ್ಪದೆ ನುಡಿದರು. ನುಡಿ ತಪ್ಪದೆ ಹಿಡಿದರು. ಹಿಡಿದಲ್ಲಿ ಅಡಗಿ ಐಕ್ಯವಾದರು. ಇಂತಹ ಪುರಾತನರಪೂರ್ವ. ನಮ್ಮಾದ್ಯರ ವಚನವ ಎರಡಿಲ್ಲದೆ ತಿಳಿದು ಕೊಂಡಾಡಿ ಗುರುಲಿಂಗ ಜಂಗಮಕ್ಕೆ ತಮ್ಮ ತನುಮನಧನವ ಎರಡಿಲ್ಲದೆ ಸಮರ್ಪಿಸುವ ಭಕ್ತರ ಭೃತ್ಯರ ಭೃತ್ಯ ನಾನಯ್ಯ. ಆಳಿನಾಳು ನಾನೈಯ್ಯ. ಕೂಡಲಚನ್ನಸಂಗನ ಶರಣರು ಸಾಕ್ಷಿಯಾಗಿ ರುದ್ರಮುನಿಲಿಂಗವೆ ನಮ್ಮ ಪುರಾತನರು ನಾವು ಬಾಹ ಕಾಲಕ್ಕೆ ಇಂತಹ ಸದ್ಭಕ್ತರನೆ ತೋರಿಸಯ್ಯ ಸ್ವಾಮಿ ಎಂದು ಕಳುಹಿಸಿಕೊಂಬ ಸಮಯದಲ್ಲಿ,

ಮಡಿವಾಳಯ್ಯಗಳ ಬಿನ್ನಹವು:—ಇನ್ನು ಏಳುನೂರೆಪ್ಪತ್ತು ವರುಷ ತನಕ ಇಲ್ಲಿಯ ಪರಿ ಅವುದು? ಕಲಿಯುಗ ಬಹಳ ವೆಟ್ಟೆಯಾದಿತ್ತು. ವಿಶ್ವಾಸದ ಭಕ್ತಿ ಬರನಾದಿತ್ತು. ಈ ಪ್ರಮಥಗಣಂಗಳ ಸಮೂಹದ ಸಡ

ಗರವನಗಲಿ ಹೀಗೆ ಇದ್ದರೆ ಎಲ್ಲ ನೆಲವನಾಳಿಗೆಯಲ್ಲಿದ್ದ ಹಿರಿಯರು ಎಚ್ಚ ರಿಕೆಯಲ್ಲಿರಿ. ಈ ಕಲಿಯುಗದ ಭಕ್ತಿಯ ಮಹಿಮೆಯ ಚನ್ನಾಗಿ ನೋಡಿ ಹರುಷವಲಿರಿ. ಅಂದಿನ ಪುರಾತನರು ಅಂದೇ ಹೋದರೆಂಬರಲ್ಲದೆ ತಮ್ಮ ನಿಜನಿಷ್ಠೆಯ ತೋರಲರಿಯರು. ಎಷ್ಟು ಮಹಿಮೆಯಾದವರು ಹಾಸ್ಯಗಳ ನಾಡಿ ನಿಂದೆಯನಾಡಿಹರು. ನಮ್ಮ ಶರಣರು ಕುರುಹಳಿದು ಅರಿವೆಯ ಹೊದ್ದು ಬಂದರೆ ಎತ್ತಲಿಂವೆ ಬಂದೆ ನೀನಾರೆಂದು ಹಾಸ್ಯವನಾಡಿಯಾರು. ತಮ್ಮ ಸಿರಿಯ ಬೆಳಗಿನ ಗರುವ ಹಿಡಿದು ಗರ್ವದಲ್ಲಿ ಅನಿತ್ಯವೆಂಬುದನರಿಯದೆ ನಮ್ಮ ಶರಣರ ನಮ್ಮ ಪುರಾತನರ ಕವಳಿಕೆಗೆ ಸಂದವರು ನೂರಕೊಬ್ಬ ರಲ್ಲದೆ ಮತ್ತಾರು ಅರಿಯರು. ನಮ್ಮ ಕಲಿದೇವರು ಸಾಕ್ಷಿಯಾಗಿ ನಮ್ಮ ಪುರಾತನರು ಬಾಹ ಕಾಲಕ್ಕೆ ಉತ್ತರದಕ್ಷಿಣದಲ್ಲಿ ಭಕ್ತಿ ವಿಶೇಷವಾದುದೇ ಸಾಕ್ಷಿ. ಅದರೊಳಗೆ ನೂರಕೊಬ್ಬ ಶರಣರು ಕರುಳಿಲ್ಲದ ಕಲಿಗಳು ಸುಳಿ ದುದೆ ಸಾಕ್ಷಿಯಯ್ಯ, ರುದ್ರಮುನಿಲಿಂಗವೇ ಎನಲು,

ಆ ಸಮಯದಲ್ಲಿ ರುದ್ರಮುನಿದೇವರು ನಿರೂಪಿಸಿದ ಪ್ರಸ್ತಾವದ ವಚನ. ಕೇಳಯ್ಯ ಚನ್ನಬಸವಣ್ಣ ಮಡಿವಾಳಯ್ಯಗಳೆ ಎಂದು ಹೇಳಿದ ವಚನ. ಅಂದಿನವರಿಗಲ್ಲದೆ ಮುಂದಣವರಿಗಿಲ್ಲನೆಂಬ ಭಂಗಹೀನ ಅನಾ ಚಾರಿಗಳ ಮುಖವ ನೋಡಲಾಗದು. ನಮ್ಮ ಶಿವ ಶರಣರು ಮರ್ತ್ಯಕ್ಕೆ ಬಂದು ಆಡಿ ಹಾಡಿ ಕೊಂಡಾಡಿಹರೆಂದು ಪ್ರಭುದೇವರು ಮುಖ್ಯವಾದ ಏಳುನೂರೆಪ್ಪತ್ತಮರಗಣಂಗಳು ತಮ್ಮ ವಚನಭಂಡಾರಂಗಳ ನಿಕ್ಷೇಪಿಸಿ ದರಯ್ಯ. ಇಂತಪ್ಪ ಸಾಕ್ಷಿಯನರಿಯದೆ ತಪ್ಪಿ ನುಡಿವ ತನುವಂಚಕ ಗುರುವಿನಲ್ಲಿ, ಮನವಂಚಕ ಲಿಂಗದಲ್ಲಿ, ಧನವಂಚಕ ಜಂಗಮದಲ್ಲಿ, ಇಂತೀ ತ್ರಿವಿಧ ವಂಚಕರಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ ಪಾದೋ ದಕ ಪ್ರಸಾದವಿಲ್ಲ. ಅಂಗಹೀನರು, ಅರ್ಥಘಾತಕರು, ಅವರ ನುಡಿಸಲಾ ಗದಯ್ಯ. ನಮ್ಮ ಪುರಾತನರ ಸಡಗರವ ಮುಂದೆ ಕಾಣಲರಿಯರು. ನಮ್ಮ ರೇವಣಸಿದ್ಧೇಶ್ವರದೇವರು ಮಲ್ಲಿಕಾರ್ಜುನದೇವರು ಸಾಕ್ಷಿಯಾಗಿ ನೀವು ಮರ್ತ್ಯಕ್ಕೆ ಬಹ ಕಾಲಕ್ಕೆ ಎಲ್ಲಿ ಹುಟ್ಟಿ ಎಲ್ಲಿ ಬೆಳೆದು ಎಲ್ಲಿ ಸುಳಿವಿರಿ ಅಲ್ಲಿ ಅರಸುತ್ತಲಿದ್ದೆವು ಚನ್ನಬಸವಣ್ಣ ಸಾಕ್ಷಿಯಾಗಿ ಮಡಿವಾಳಯ್ಯಗಳೇ ಎನಲು,

ಆ ಸಮಯದಲ್ಲಿ ಪಡಿಹಾರಿ ಉತ್ತಣ್ಣಗಳು ಬಂದು ರುದ್ರಮುನಿ ದೇವರಿಗೆ ನಮಸ್ಕಾರಂಗಳಮಾಡಿ ವಿಭೂತಿವೀಳೆಯಮಂ ಮುಂದಿರಿಸಿ ಎಲ್ಲ ಹಿರಿಯರು ಎಲ್ಲ ಪುರಾತನರು ಎಲ್ಲ ಘನಮಹಿಮರು ಮೂರ್ತವಂ ಮಾಡಿ

ಇಹರು, ನಿಮ್ಮ ದೇವರನು ಬರಹೇಳಿ, ಎನ್ನನು ದೇವರ ಬಿಜಯಂಗೈಸಿ ತರಹೇಳಿ ಕಳುಹಿದರು ಎನಲಾಗಿ, ಚನ್ನದಂಡನಾಯಕರು ಪಡಿಹಾರಿ ಉತ್ತಣ್ಣಗಳ ಕೂಡೆ ನುಡಿದ ವಚನಂಗಳು, ಎಲ್ಲ ಮಾಹೇಶ್ವರರು ಮೂರ್ತ ಮಾಡಿ ಇದ್ದಾರೆ ಎಂದು ಕೇಳಲಾಗಿ, ಇಂದು ಬಂದವರೆಲ್ಲ ಬಂದು, ಮೂರ್ತವ ಮಾಡಿದ ಘನ ತಿಂಥಿಣಿ ಎಲ್ಲ ದೇವರನ ಭಾವಮಂಟಪವ ಬಳಸಿ, ಗಾವುದ ತೆರಹಿಲ್ಲದೆ ತುಂಬಿ ಮೂರ್ತವ ಮಾಡಿ ಇದ್ದಿತ್ತು, ಅದು ಸಾಲದೆ ಕಿಕ್ಕಿಂಧವಾಗಿ ತುಂಬಿತ್ತು, ನಿಮ್ಮ ಗಣಂಗಳ ಸಡಗರವ ನೀವೆ ಬಲ್ಲಿರಿ ಚನ್ನಬಸವರಾಜದೇವರೆ ಎಂದು ಬಿನ್ನೈಸಲು,

ಮಹಾ ಹರುಷದಿಂದೆ ಚನ್ನದಂಡನಾಯಕರು ಮಡಿವಾಳಯ್ಯಗಳು ಮೋಳಿಗೆಯ ಮಾರಯ್ಯಗಳು ಸಹವಾಗಿ ರುದ್ರಮುನಿದೇವರ ಬಿಜಯಂಗೈಸಿಕೊಂಡು ಚನ್ನದಂಡನಾಯಕರು ತಮ್ಮರಮನೆಗೆ ಚಿತ್ತೈಸುತ್ತ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಚರಲಿಂಗ ಮುಖ್ಯವಾದ ಪ್ರಮಥಗಣಂಗಳಿಗೆ ಸಾಷ್ಟಾಂಗದಂಡಪ್ರಣಾಮವಂ ಮಾಡಿ, ಇತ್ತ ರುದ್ರಮುನಿದೇವರಿಗೆ ಗಂಗಾಂಬಿಕೆಯರು ಸಕಲ ಪುರಾತನರ ರಾಣಿವಾಸ ಸಹವಾಗಿ ಇದಿರ್ಗೊಂಡು ನಮಸ್ಕಾರಮಂ ಮಾಡಿ ಪಾದಾರ್ಚನೆಯಂ ಮಾಡಿ ಗದ್ದುಗೆಯನಿಕ್ಕಿ ಮೂರ್ತಂಗೊಳಿಸಿ, ಗಂಗಾಂಬಿಕೆಯರು ಸಕಲ ಪುರಾತನ ರಾಣಿವಾಸ ಸಹ ನಿಮಿಷಮಾತ್ರಕ್ಕೆ ಸಕಲ ಪದಾರ್ಥಗಳಂ ಮಾಡಿ, ಸಮಸ್ತ ಮಾಹೇಶ್ವರರಿಗೆ ಎಡೆಮಾಡಲು, ಚನ್ನದಂಡನಾಯಕರು ಆ ಮಹಾಮಹಂತಿಂಗೆ ಅಡ್ಡಬಿದ್ದು, ಎಲೆ ಸ್ವಾಮಿಗಳಿರಾ ಸಾವಧಾನದಿಂ ಲಿಂಗಾರ್ಚನೆಯಂ ಮಾಡಿ ಎಂದು ಬಿನ್ನಹಂ ಮಾಡಲು, ಆ ಮಹಾಮಹಂತು ಎಲೆ ಚನ್ನಬಸವಣ್ಣ ನೀವು ಪ್ರಸಾದ ಭೋಗಮಂ ಮಾಡಬನ್ನಿ ಎಂದು ಆ ನಿರೂಪಕ್ಕೆ ನಿಮ್ಮ ಒಕ್ಕು ಮಿಕ್ಕ ಪ್ರಸಾದವನ್ನು ಅಸಂಖ್ಯಾತ ಪ್ರಮಥ ಗಣಂಗಳು ಸಹವಾಗಿ ಆರೋಗಣೆಯಂ ಮಾಡುವೆವು. ದೇವರು ಲಿಂಗಾರ್ಪಣವ ಮಾಡಿ ಎಂದು ಬಿನ್ನೈಸುತ್ತೆ ಮೂರ್ತಗೊಂಡಿರಲು, ಆ ಚರಲಿಂಗವೆಲ್ಲ ಆನಂದಿಸುತ್ತ ಆರೋಗಣೆಯಂ ಮಾಡಿ, ಚನ್ನದಂಡನಾಯಕರಿಂದೆ ಕಳುಹಿಸಿಕೊಂಡು ಚಿತ್ತೈಸಿದರು. ಅತ್ತ ಇತ್ತ ಎಲ್ಲ ಗಣಂಗಳು ಸಹಿತ ಚನ್ನಬಸವಣ್ಣನು ಅವರೊಕ್ಕುಮಿಕ್ಕ ಪ್ರಸಾದವನ್ನು ಅಣು ಮಾತ್ರ ಉಳಿಯದಂತೆ ಎತ್ತಿ ತಂದು ಎಡೆ ಮಾಡಲು ಆನಂದಿಸುತ್ತರ್ಪಿಸುತ್ತೆ ಚನ್ನದಂಡನಾಯಕರು ಪ್ರಸಾದಕ್ಕೆ ಮೂರ್ತಗೊಂಡು ಹನ್ನೆರಡು ಸಾವಿರ ಷಟ್‌ಸ್ಥಲ

ಬ್ರಹ್ಮಿಗಳು ಸಹಿತ ಅಮರಗಣಂಗಳು ಸಹಿತ ಆ ಮಹಾಪ್ರಸಾದವ ಎಡೆ ಗೊಂಡು ಪ್ರಸಾದ ಪರುಷದ ಗಿರಿ ಪ್ರಸನ್ನವಾಗಿ ಬೆಳವುತ್ತಿರ್ಪದ ಕಂಡು ಆ ಮಹಾ ಪ್ರಸಾದದ ಸತ್ತುಲು ಮೂರ್ತಗೊಂಡು ಲಿಂಗಾರ್ಪಿತಮಂ ಮಾಡಿ ಒಬ್ಬರಿಗೊಬ್ಬರು ಭೋಜ್ಯಂಗಳಂ ಕೊಳುತ್ತಿ ಪ್ರಭುದೇವರ ಪ್ರಸನ್ನ ಪ್ರಸಾದವಿದೆ. ಮರುಳುಶಂಕರದೇವರ ಮಹಾಪ್ರಸಾದವಿದೆ. ಸಿದ್ಧರಾಮ್ಯೆ ಯ್ಯದೇವರ ಪ್ರಸಿದ್ಧ ಪ್ರಸಾದವಿದೆ. ಅರುವತ್ತು ಮೂವರ ಆದಿ ಪ್ರಸಾದ ವಿದೆ. ಷೋಡಶಗಣಂಗಳ ಶುಭಾನಂದ ಪ್ರಸಾದವಿದೆ. ತೇರಸರ ತೇಜೋ ಮಯ ಪ್ರಸಾದವಿದೆ. ದಶಗಣಂಗಳ ಜಯಶೀಲ ಪ್ರಸಾದವಿದೆ. ಅಜ ಗಣ್ಣದೇವರ ಐಕ್ಯಪ್ರಸಾದವಿದೆ. ಚಂದಿಮರಸರ ಪರಿಪೂರ್ಣ ಪ್ರಸಾದವಿದೆ. ಬಿಬ್ಬಿ ಬಾಚೈಯ್ಯಗಳ ಬಿರುದಿನ ಪ್ರಸಾದವಿದೆ. ಮಡಿವಾಳಯ್ಯಗಳ ಮನ್ನ ಣೆಯ ಪ್ರಸಾದವಿದೆ. ಮೋಳಿಗೆಯ ಮಾರಯ್ಯಗಳ ಸತ್ಯ ಪ್ರಸಾದವಿದೆ. ಸೊಡ್ಡಳ ಬಾಚರಸರ ಪರಿಣಾಮ ಪ್ರಸಾದವಿದೆ. ಕಿನ್ನರಯ್ಯಗಳ ಉನ್ನತ ಪ್ರಸಾದವಿದೆ. ಹಡಪದಪ್ಪಣ್ಣಗಳ ಹರುಷ ಪ್ರಸಾದವಿದೆ. ಮಹಾದೇವಿ ಯಕ್ಕಗಳ ವೈರಾಗ್ಯ ಪ್ರಸಾದವಿದೆ. ಮುಕ್ತಾಯಕ್ಕಗಳ ಮುಕ್ತಿ ಪ್ರಸಾದ ವಿದೆ. ನೀಲಲೋಚನೆಯಮ್ಮನವರ ನಿರ್ಮಲ ಪ್ರಸಾದವಿದೆ. ಗಂಗಾಂ ಬಿಕೆಯರ ಘನಪ್ರಸಾದವಿದೆ. ಅಕ್ಕನಾಗಲಾಂಬಿಕೆಯರ ಅನಾದಿ ಪ್ರಸಾದ ವಿದೆ. ತಂಗಟೂರು ಮಾರಯ್ಯಗಳ ರಾಣಿಯರ ನಿರ್ಮಳ ಪ್ರಸಾದವಿದೆ. ಸಕಲ ಪುರಾತನರ ರಾಣಿಯರ ಅಮೃತ ಪ್ರಸಾದವಿದೆ. ಏಳುನೂರೆಪ್ಪತ್ತಮ ರಗಣಂಗಳ ಅಸಂಖ್ಯಾತ ಪುರಾತನರ ಕಾರುಣ್ಯ ಪ್ರಸಾದವಿದೆ. ಗುರು ಲಿಂಗ ಜಂಗಮದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಸಾದವಿದೆ. ಎಂದು ಒಬ್ಬರಿಗೊಬ್ಬರು ಭೋಜ್ಯಗಳಂ ಮಾಡಿ ಊಡಿಸುತ್ತೆ ಚನ್ನಬಸವರಾಜ ದೇವರು ಎಲ್ಲ ಗಣಂಗಳು ಕೂಡಿ ಕುಣಿದಾಡಿ ನಲಿನಲಿದಾಡಿ ಉಘೇ ಚಾಂಗು ಭಲಾ ಎಂದು, ಪ್ರಭುದೇವರೆ ಬಸವರಾಜದೇವರೆ ಚನ್ನಯ್ಯನೆ ಚನ್ನದಂಡನಾಯಕರೆ ಎಂದು, ಎಲ್ಲ ಗಣಂಗಳು ಒಬ್ಬ ಚನ್ನಬಸವಣ್ಣಂಗೆ ಪ್ರಸಾದ ಭೋಜ್ಯಗಳ ಮಾಡಿಕೊಡುತ್ತಾನಂದಿಸುತ್ತಿರಲು, ಚನ್ನದಂಡ ನಾಯಕರು ಎಲ್ಲ ಗಣಂಗಳಿಗೆ ಉಣಬಡಿಸುತ್ತಿರಲು, ಆ ಪ್ರಸಾದ ಸವೆಯ ದಿರಲು, ಒಬ್ಬ ಚನ್ನಬಸವೇಶ್ವರ ದೇವರಿಗೆ ಗಣಂಗಳೆಲ್ಲರು ಉಣಿಸುತ್ತಿರಲು, ಆ ಪ್ರಸಾದ ಬೀಗಿ ಬೆಳೆವುತ್ತಿರಲು, ಚನ್ನಬಸವೇಶ್ವರ ದೇವರು ನೋಡಿ ಆನಂದಿಸುತ್ತಿರಲು, ಇತ್ತ ಹನ್ನೆರಡು ಸಾವಿರ ಷಟ್‌ಸ್ಥಲ ಬ್ರಹ್ಮಿಗಳು ಕಂಡು ನಿಮ್ಮ ಕೈಯ್ಯಲ್ಲಿ ಈ ಮಹಾಪ್ರಸಾದ ತೀರದೆ ಇದ್ದರೆ ನಮ್ಮ ದೇವರುಗ

ಳಿಗೆ ಪಾಲಿಸಿರೆಯ್ಯ ಎನಲಾಗಿ, ಇತ್ತಮರಗಣಂಗಳ ರಾಣಿವಾಸದ ವರು ನಮಗೆ ಪ್ರಸಾದವುಂ ಪಾಲಿಸೆನಲು, ಸಮಸ್ತ ಪ್ರಮಥರು ಎಮಗೆ ತಮಗೆಂದು ಪ್ರಸಾದವುಂ ಸೂರೆಗೊಂಡು ತೆಗೆದು ಕೊಂಡಾಡಿ ಸಲಿಸಲು, ಆ ಪ್ರಸಾದ ತೀರದೆ ಇರಲು, ಚನ್ನಬಸವಣ್ಣನು ತಮ್ಮ ಶ್ರೀ ಹಸ್ತದಿಂದೆ ಪ್ರಸಾದವುಂ ತೆಗೆದು, ಷಟ್‌ಸ್ಥಲ ಬ್ರಹ್ಮಿಗಳ ಮುಂದಿರಿಸಲು, ಮತ್ತಾಗಣಂ ಗಳ ರಾಣಿವಾಸದ ಮುಂದಿರಿಸಲು, ತೀರದೆ ಇರಲು ನೋಡುವ ಹಿರಿಯರೆ ಲ್ಲರು ಆಶ್ಚರ್ಯಂ ಬಟ್ಟು ಕೊಂಡಾಡುತ್ತಿರಲು, ಎತ್ತೆತ್ತ ನೋಡಲತ್ತತ್ತ ಲೆಲ್ಲ ಪಾದತೀರ್ಥ ಪ್ರಸಾದಮಯವಾಗಿರಲು, ಅನುಭಾವ ಮಂಟಪವೆಲ್ಲ ಪ್ರಸಾದಮಂಟಪವಾಗಿರಲು, ಇಂತೀ ತೀರದ ತವನಿಧಿಯಾಗಿರಲು, ಆ ಪ್ರಸಾದದಿಂದೊಗೆದ ಮಹಾಹರುಷದಿಂ ಚನ್ನಬಸವರಾಜದೇವರು ಆನಂ ದಿಸಿ, ಅಕ್ಕರಿಂದೆಲ್ಲ ಗಣಂಗಳು ಸಕಲ ಪುರಾತನರ ವಚನಂಗಳ ಪಾಡುತ್ತೆ ಪ್ರಸಾದವುಂ ಸವಿದಾಡುತ್ತಿರಲು, ಆ ಪ್ರಸಾದ ಮಹಾಗಿರಿಯಂತೆ ಬೆಳೆಯಲು ಚನ್ನಬಸವರಾಜದೇವರು ಕಕ್ಕಯ್ಯಗಳ ಪ್ರಸಾದ ಸಂಭವಂ, ಚಿಕ್ಕದಂಡ ನಾಯಕಂ, ಬಸವಣ್ಣನ ನಿರ್ವಯಲ ಪ್ರಸಾದವೆಂದು ಕೊಂಡಾಡಿ ಪಾಡಲು, ಪ್ರಭುದೇವರ ನಿರ್ವಯಲ ಪ್ರಸಾದವೆಂದು ಊಡಿಸಲು, ಅಜಗಣ್ಣನೈಕ್ಯ ಪ್ರಸಾದವೆಂದು ಊಡಿಸಲು, ಆ ಪ್ರಸಾದ ಗಿರಿಯು ಚನ್ನಬಸವಣ್ಣನ ಕರ ದೊಳಗಡಗಿತ್ತೆಂಬಂತೆ ಬಯಲಾಯಿತ್ತು.

ಇತ್ತ ಚನ್ನಬಸವರಾಜದೇವರು ಸಕಲ ಗಣಂಗಳು ಹಿರಿಯರುಗಳು ಮೂರ್ತಗೊಂಡಿಹ ಸಮಯದಲ್ಲಿ ಮಡಿವಾಳಯ್ಯಗಳ ಬಿನ್ನಹ. ಬಾರೈಯ್ಯ ಚನ್ನಬಸವಣ್ಣ, ಇನ್ನು ಬೆಳಗು ನಾಲ್ಕು ಗಳಿಗೆ ಉಳಿಯಿತ್ತು. ಎಲ್ಲ ಹಿರಿ ಯರುಗಳಂ ಕಳುಹಿಸೆನಲು, ಆಗ ಚನ್ನಬಸವರಾಜದೇವರೆದ್ದು ನಮಸ್ಕಾ ರಂಗಳಂ ಮಾಡಿ, ಎಲೆ ಸ್ವಾಮಿಗಳಿರಾ ದೇವರವರ ಚಿತ್ತಕ್ಕೆ ಬಂದಕ ಡೆಗೆ ಚಿತ್ತೈಸುವುದೆಂದು ಏಳುನೂರೆಪ್ಪತ್ತು ಅಮರಗಣಂಗಳು ಸಹಿತ ನಮಿಸಿ ಕರಂಗಳಂ ಮುಗಿದು ನಿಂದಿರಲು, ಆ ಚರಲಿಂಗವು ಆವಾವ ಕಾಲದಲ್ಲಿಯು ಬಸವಣ್ಣನಂತಹ ಭಕ್ತರಾಗಿ ಪ್ರಮಥಗಣಂಗಳೆ ಬಂಧು ಗಳಾಗಿ ಸಕಲ ಪುರಾತನರ ರಾಣಿಯರೆ ತಾಯಿಗಳಾಗಿ ಇಂತಹ ಮಾಟ ಕೂಟವೆ ಭವಭವದಲ್ಲಿ ಬಂದರೂ ಕುಂದದಂತೆ ಇರಲಿ, ಚನ್ನಬಸವಣ್ಣ ನಿತ್ಯನಾಗು, ಎಂದು ವಿಭೂತಿಯಂ ಧರಿಸಿ ಕಳುಹಿಸಿಕೊಂಡು, ದುಃಖ ಶರಧಿ ಯೊಳ್ಮುಳಿಗೇಳುತ್ತೆ ಕಣ್ಣ ನೀರು ಕೋಡಿವರಿವುತ್ತೆ ಚಿಂತಿಸುತ್ತೆ ಹೋದರತ್ತ.

ಇತ್ತಂ ಚನ್ನಬಸವರಾಜದೇವರು ಪ್ರಮಥಗಣಂಗಳು ಸಹಿತ ಶಿವ ಲಿಂಗಾರ್ಚನೆಯಂ ಮಾಡಿ ತೀರ್ಥಪ್ರಸಾದಮಂ ಸಲಿಸಿ ವ ಹಾ ಮೇರು ವಿನನುಭಾವ ಮಂಟಪದಲ್ಲಿ ಮಾರ್ತಣವ ಮಾಡಿಹ ಸಮಯದಲ್ಲಿ ಚನ್ನಬ ಸವರಾಜದೇವರು ಪಡಿಹಾರಿ ಉತ್ತಣ್ಣಂಗಳಂ ಕರೆದು ನಾವು ಉಳಿವೆಯ ಮಹಾಮನೆಗೆ ಹೋಗಿ ಎಲ್ಲ ಗಣಂಗಳಿಗೆ ಗಣಪರ್ವಮಂ ಮಾಡಬೇಕು, ಹೇರುಗಳಲ್ಲಿ ಅಕ್ಕಿ ಬೇಳೆ ಬೆಲ್ಲ ಕಾಯಿ ಪದಾರ್ಥ ರುಚಿಗಾಯಿ ಘೃತ ತೈಲ ಶಾಕಂಗಳಂ ಕಂಬಿಯಂ ಕಟ್ಟಿಸಿ ಸಾಗಿಸಿಕೊಂಡು ಪಯಣವಾಗೆಂದು ನಿರೂಪಮಂ ಕೊಡಲು,

ಕ್ಷಣದಲ್ಲಿ ಹತ್ತೈದು ಸಾವಿರ ಹೇರುಗಳಲ್ಲಿ ಅಕ್ಕಿಯಂ ತುಂಬಿಸಿ ಎತ್ತುಗಳಂ ಹೇರಿಸಿ ಸಾವಿರಸಂಖ್ಯೆ ಕಂಬಿಕಾವಡಿಗಳಂ ಕಟ್ಟಿಸಿ, ಸಮಸ್ತ ಸನ್ನಾಹಗಳನೆಲ್ಲ ಸಾಗಿಸಿ, ದ್ರವ್ಯ ವಸ್ತ್ರ ಕಪ್ಪಡ ತಾಮ್ರಭಾಂಡಂಗಳಂ ಚಿನ್ನ ಬೆಳ್ಳಿ ಸ್ವರೂಪಂಗಳಂ ಕೊಡಪಾನ ಕೊಪ್ಪರಿಗೆ ಮುಂತಾದ ಸರ್ವ ಸಮ್ಮತವಹ ವಸ್ತುಗಳಂ ಮೊದಲೆ ಸಾಗಿಸಿ ಕಳುಹಿದನು.

ಇತ್ತ ಜಗದೇವ ಮೊಲ್ಲೆ ಬೊಮ್ಮಣ್ಣಗಳು ಪಂಜುಗಾರರಾಗಿ ದೀವ ಟಿಗೆಯ ಪಂಜುಗಳಂ ಜೋಡಿಸಿಕೊಂಡು ತಾಯಿ ಸೋಮಾಂಬೆಯಮ್ಮ ನವರಿಗೆ ಶರಣಾರ್ಥಿಯಂ ಮಾಡಿ ನೀವು ಗಂಗಾಂಬಿಕೆಯಮ್ಮನವರ ಕೂಡೆ ಚಿತ್ತೈಸುವುದೆನಲು, ಶಿವಶಿವ ಜಗದೇವ ಮೊಲ್ಲೆ ಬೊಮ್ಮಣಗಳೇ ನಾನಿಂತಿಹ ಜೀವಿಯೇ? ನಾನಾ ಪರವಾದಿ ಬಿಜ್ಜಳನ ಕೊಂದಲ್ಲದೆ ಅಡಿ ಇಡುವಳಲ್ಲ. ನೀವು ಪರವಾದಿ ಬಿಜ್ಜಳನೆ ಸಂಹರಿಸಿ, ಎಂದು ಹರಿಸಿ ಜಯಸೇಸೆಯನಿಕ್ಕಿ ಕಳುಹಿಸಲು,

ಇತ್ತ ಚನ್ನದಂಡನಾಯಕರು ಓಲಗದೊಳೊಪ್ಪಿರಲು, ಅಲ್ಲಿಗತಿಬೇ ಗದಿಂ ಬಂದು ದೀರ್ಘದಂಡ ನಮಸ್ಕಾರಮಂ ಮಾಡಿ, ಎಲೆ ದೇವ ನಿಮ್ಮ ಶಿಶುಗಳ ವೀರತ್ವಮಂ ನೋಡಿ ಎಂದು ಬೀಳ್ಕೊಡಲು, ಆಗ ಚನ್ನಬಸ ವೇಶ್ವರ ದೇವರು ಸಮಸ್ತ ಪ್ರಮಥ ಗಣಂಗಳು ವೀಳೆಯಂ ಕೊಡಲು, ವೀಳೆಯಂ ಪಿಡಿದು ನಿಂದಿರಲು, ಮಡಿವಾಳಯ್ಯಗಳು ಎಲೆ ಜಗದೇವ ಮೊಲ್ಲೆ ಬೊಮ್ಮಣ್ಣಗಳಿರಾ, ಪರವಾದಿ ಬಿಜ್ಜಳನ ಇರಿವ ಠಾವಾವುದೆಂದು ಕೇಳಲು, ಆ ಜಗದೇವ ಮೊಲ್ಲೆ ಬೊಮ್ಮಣ್ಣದೇವಗಳು ಹೆಗ್ಗಡತಿ ಹೊನ್ನ ಮ್ಮನ ಚಾವಡಿಯ ನಡುವಿನ ಠಾವಿನೊಳಲ್ಲದೆ ಮತ್ತೆಲ್ಲಿಯು ಕೊಲುವ

ದಾಗದು ಅಲ್ಲಿಯೆ ಇರಿದರೆ ಆರೆಂದರಿಯಬಾರದು. ತಮ್ಮ ಪಂಜುಗಾರ ರೆಂದಹರಲ್ಲದೆ ನಾವು ಕೊಂದರೆಂದರಿಯಬಾರದು ಎಂದು ನುಡಿಯಲು

ಮಡಿವಾಳಯ್ಯಗಳು ಕೇಳಿರಯ್ಯ ಜಗದೇವ ಮೊಲ್ಲೆ ಬೊಮ್ಮಣ್ಣಗ ಳಿರಾ, ನೀವು ಪರವಾದಿಯ ಕೊಂದು ಕಳಿವಿನಿಂದ ಬಾಹುದು ಸಾಮ ರ್ಥ್ಯವೆ? ಅಲ್ಲ. ನಾವೀಗ ಹರಳಯ್ಯ ಮಧುವಯ್ಯಗಳ ನೋಯಿಸಿದ ಪರವಾದಿ ಬಿಜ್ಜಳನ ಕೊಂದೆವು, ನಾವು ವೀರಕುಮಾರರು, ಜಂಗಮದ ಭೃತ್ಯರು, ನಾವು ಜಗದೇವ ಮೊಲ್ಲೆ ಬೊಮ್ಮಣ್ಣನವರು, ಎಂದು ಸಾರಿ ಬೊಬ್ಬೆಯಿಂದಬ್ಬರಿಸಿ ಬೊಬ್ಬೆಯನಿಟ್ಟು ಸಾರುತ್ತ ಬರಬೇಕು ಎಂದು ಮಡಿವಾಳಯ್ಯಗಳು ನುಡಿಯಲು,

ಎಲೆ ಮಡಿವಾಳಯ್ಯಗಳೆ ಹೊರಯುಪ್ಪರಿಗೆಯ ಹಜಾರ ಚಾವ ಡಿಯ ಬಾಗಿಲಲ್ಲಿ ತಳವಾರ ನಾಗರಾಜನು ಅಯಿನೂರು ಕುದುರೆಯ ಜೋಡಿನಿಂದ ಕಾದಿರ್ಪನು. ಇಂದು ಮಂಗಳವಾರವನ ಸರತಿಯ ದಿನ, ನಿಮ್ಮ ಶರಣರ ಹಿಂದಟ್ಟಿ ಬಾಹನೆನಲು,

ಅದಕ್ಕೆ ಮಡಿವಾಳಯ್ಯಗಳು ಕೇಳಿರಯ್ಯ ಜಗದೇವ ಮೊಲ್ಲೆ ಬೊಮ್ಮ ಣ್ಣಗಳಿರಾ, ಅವನು ನಮ್ಮ ಶರಣರ ಬೆಂಬತ್ತಿ ಬಂದರೂ ಬರಲಿ, ನಾನಿದಿ ರಾಗಿ ಬೆನ್ನಾಗಿ ಬೇಗ ಬೊಬ್ಬಿರಿವುತ್ತೆ ಬಂದಿಹೆನು. ಈ ಕದನಕ್ಕಾಗಿ ಎರಡು ವೇಳೆ ಲಿಂಗದಲ್ಲಿ ಐಕ್ಯವಾಗಿ ಎರಡು ವೇಳೆ ಕಳುಹಿಸಿಕೊಂಡು ಬಂದೆವು. ಎಂದು ಬಸವೇಶ್ವರದೇವರು ಬಿಜಯಂಗೈಯ್ವಲ್ಲಿ ನಿಮ್ಮನೆಲ್ಲ ರನು ನನ್ನ ಕಯ್ಯಲ್ಲಿ ಕೊಟ್ಟು ಪೋದರು. ಅದಲ್ಲದೆ ನಾವಿದೇ ನಿಮಿತ್ತ ವಾಗಿ ಕೈಲಾಸದಿಂದ ಕಳುಹಿಸಿಕೊಂಡು ಬಂದೆವು. ನೀವು ಪರವಾದಿಯ ನಿರಿದು ಅಲ್ಲೆ ಬೊಬ್ಬಿರಿವುತ್ತೆ ಬನ್ನಿ. ನಿಮ್ಮಿಂದಲ್ಲದೆ ಈ ಆಟ ಬಯಲಾ ಗದು. ಸುಮ್ಮನೆ ಹಯ್ಯಲ ತೆಗೆಯಬಾರದು. ಹರಳಯ್ಯ ಮಧುವಯ್ಯ ಗಳ ಕಥನದಿಂದ ನಿಮ್ಮ ಕೈ ಮುಂಚಾಗ ಬೇಕೆಂಬುದಕ್ಕಾಗಿ ನಾವು ಸುಮ್ಮನೈದಿಹೆವು. ನಿಮ್ಮ ಕೈ ಮುಂಚಾದಲ್ಲದೆ ನಿಮ್ಮ ಶಾಪ ನಿಃಶಾಪ ವಾಗದು ಎನಲಾಗಿ,

ನಿಮ್ಮ ಕಾರುಣ್ಯದ ಶಿಶುಗಳ ವೀರತ್ವವ ನೋಡಿ ಎಂದು ನಾಲ್ಕು ದಿಕ್ಕಿನ ಹಜಾರದ ಚಾವಡಿಯ ಬಾಗಿಲ ಕಾಯ್ದಿಹ ನಾಲ್ಕು ಸಾವಿರ ಕುದುರೆ ನಾಲ್ಕು ಸಾವಿರ ಮಂದಿ ಕವಿದು ಬಂದರೆ ಅನುತ್ತೆ ಇರಿದು ಕೆಡ ಪುತ್ತೆ ಇರಿದಾಡುತ್ತೆ ಬಂದಿಹೆವು. ಆಗ ನಸುಗತ್ತಲೆಯಾಯಿತ್ತು, ಎಚ್ಚ

ರಿಕೆಯಲ್ಲಿ ಹೋಗೆಂದು ಶರಣಾರ್ಥಿಯಂ ಮಾಡಲು ಶರಣಾರ್ಥಿ ಎಂದೆ ರಗಿ ಬೀಳ್ಕೊಂಡು,

ಜಗದೇವ ಮೊಲ್ಲೆ ಬೊಮ್ಮಣ್ಣಗಳು ಅತ್ತಲೆರಡು ದಿನದಲ್ಲಿಯೆ ಪಂಜಿನವರಾಗಿ ದೀವಟಿಗೆಯ ಪಂಜಿಂಗೆ ಜೀತವಂ ಪಿಡಿದು ಇದ್ದರಾಗಿ ಎಲ್ಲಿಂದ ಬಂದಿರಿ ನೀವು, ನಾವು ಕೊಲ್ಲಾಪುರದಿಂದೆ ಬಂದೆವೆನಲು, ಎಲೆ ಅಣ್ಣಗಳಿರಾ, ನಿಮ್ಮ ನಾಮಾಂಕಿತವೇನೆಂದು ಕೇಳಲು, ನಾವು ಜಗದೇವ ಮೊಲ್ಲೆ ಬೊಮ್ಮಣ್ಣಗಳೆಂದು ಹೇಳಲು, ಬಿಜ್ಜಳನ ಪಂಜುಗಳ ಹತ್ತಿಸುವ ಸಮಯದಲ್ಲಿ ರಾಯನೋಲಗಕ್ಕೆ ಪೋಗಿ ದೀವಟಿಗೆಯ ಪಂಜುಗಳಂ ಹೊತ್ತಿಸಿ ಎತ್ತಿ ಹಿಡಿದರತ್ತ,

ಇತ್ತ ಗಂಗಾಂಬಿಕೆಯಮ್ಮನವರು ರುದ್ರಮುನಿದೇವರಿಗೆ ಶಿವಾರ್ಚನೆ ಗೆಡೆಯಾಯಿತ್ತೆಂದು ಬಿನ್ನಹಂ ಮಾಡಲು, ಆ ವೇಳೆಯಲಿ ಚನ್ನಬಸವ ರಾಜದೇವರು ಪಡಿಹಾರಿ ಉತ್ತಣ್ಣಂಗಳ ಕರೆದು ನಮ್ಮನುಭಾವಮಂಟಪದಲ್ಲಿ ಮೂರ್ತ ಮಾಡಿಹ ಮೂರ್ತಿಗಳನ್ನೆಲ್ಲ ಅಕ್ಕ ನಾಗಾಂಬೆಯರ ಭೋಜನಶಾಲೆಯಲ್ಲಿಗೆ ಬೇಗ ಬಿಜಯಂಗೈಸಿ ತಾಹುದೆಂದು ನಿರೂಪಿಸಲು, ಪಡಿಹಾರಿ ಉತ್ತಣ್ಣಗಳು ಬೇಗದಿಂ ಬಂದು ವಿಭೂತಿ ವೀಳೆಯವಂ ಮುಂದಿರಿಸಿ ನಮಸ್ಕಾರಂಗಳಂ ಮಾಡಿ, ದೇವರುಗಳೆಲ್ಲ ಆರೋಗಣೆಗೆ ಚಿತ್ತೈಸುವುದೆಂದು ಬಿನ್ನಹಂ ಮಾಡಲು, ಬಾರೈಯ್ಯ ಉತ್ತಣ್ಣಗಳೆ ಮಾಯಾ ಕೋಳಾಹಳರು ಷಟ್‌ಸ್ಥಲದ ಮಹೇಶ್ವರರು ಸುಮ್ಮನೆ ಬಾಹರೇ? ಒಬ್ಬೊಬ್ಬರಿಗೆ ಬೇರೆ ಬೇರೆ ವಿಭೂತಿಯಂ ಕೊಟ್ಟು ಬಿನ್ನಹಂ ಮಾಡಿದಲ್ಲದೆ ವಿರಕ್ತರು ಅತಿಥಿಗಳಾದ ಮಹೇಶ್ವರರು ಸುಮ್ಮನೆ ಬರಲಮ್ಮರು, ನಿನಗೆ ನಂದಿಯ ಕೋಲ ಹಿಡಿದುಕೊಂಡು ಬಸವಣ್ಣನ ಮನೆಗೆ ಅವರ ಕರದಭ್ಯಾಸವೆ? ಬಸವಣ್ಣನ ಮನೆಯ ಸೇವಕರೆಲ್ಲರು ಹೀಗೆ ಎಂದು, ಶ್ರೀ ಪರ್ವತದಲ್ಲಿ ಹಡಪದಪ್ಪಣ್ಣನು ನಿನ್ನ ಹಾಗೆ ಒಂದು ಬಾರಿ ಬಂದು ಏಳಿರೈಯ್ಯ ಎಂದು ಕರೆಯಲು ಅವರು ತಮ್ಮ ಸಮಯಾಚಾರದ ಭಕ್ತಿಯಲ್ಲವೆಂದು ಒಲ್ಲದಿರಲು, ಆಗ ಬಸವಣ್ಣ ತಾನೆ ಬಂದು ಬಿನ್ನಹಂ ಮಾಡಿ ಬೇರೆ ಬೇರೆ ವಿಭೂತಿಯನಿರಿಸಿ ಬಿನ್ನಹಂ ಮಾಡಿದನು ಎನಲಾಗಿ, ಆಗ ಚನ್ನದಂಡನಾಯಕರ ನಿರೂಪದಿಂ ಉತ್ತಣ್ಣಗಳು ಮಹೇಶ್ವರರಿಗೆ ಬೇರೆ ಬೇರೆ ಅಡ್ಡಬಿದ್ದು ವಿಭೂತಿ ವೀಳೆಯಂ ಮುಂದಿರಿಸಿ ಚಿತ್ತೈಸುವುದೆಂದೆನಲು, ಹಿರಿಯರುಗಳೆಲ್ಲ ಹರುಷದಿಂದೆದ್ದು, ಉತ್ತಣ್ಣಗಳೊಡನೆ ಬಂದು

ಚನ್ನಬಸವಣ್ಣನ ಪಂತಿಯಲ್ಲಿ ಮೂರ್ತ ಮಾಡಿ ಶಿವಾರ್ಚನೆಗಳಂ ಮಾಡಿ ಅಮೃತಾನ್ನ ಷಡ್ರಸಗಳಂ ಏಳನೂರೆಪ್ಪತ್ತು ಅಮರಗಣಂಗಳ ಸಹಿ ತಾರೋಗಣೆಯಂ ಮಾಡಿ ತೃಪ್ತಿಯನೆಯ್ದಿ ಆನಂದಿಸಿ ಅರ್ಪಿಸುವ ಸಮಯದಲ್ಲಿ,

ಚೆನ್ನದಂಡನಾಯಕರು ಮಡಿವಾಳಯ್ಯಗಳು ಕೂಡಿ ಇಂತೆಂದರು. ನಾವು ಉಳಿವೆಯ ಮಹಾಮನೆಗೆ ಹೋಹಾಗ ಸಿದ್ಧರಾಮಯ್ಯ ದೇವರು ತಾವು ಬಂದಿಹೆವೆಂದು ನಿರೂಪವಂ ಕೊಟ್ಟಿದ್ದರು. ಏನ ಮಾಡಿಯೂ ಈ ಕ್ಷಣ ಬರಬೇಕೆಂದರೆ ಮಡಿವಾಳಯ್ಯಗಳಿಂತೆಂದರು,

ಸಿದ್ಧರಾಮಯ್ಯದೇವರು ಪ್ರಭುದೇವರೊಡನೆ ಅಂದೆ ಶಿವಯೋಗ ಸಮಾಧಿಯಲ್ಲಿ ಸನ್ನದ್ಧರಾದೆವೆಂದು ನಿರೂಪವಂ ಕೊಟ್ಟರು. ಅದು ಕಾರಣ ಬಾರದೆ ಉಳಿದರು ಎನಲಾಗಿ

ಆ ಪ್ರಸಂಗಕ್ಕೆ ಚನ್ನಬಸವಣ್ಣ ನಿರೂಪಿಸಿದರು, ಪ್ರಭುದೇವರು ನಮ್ಮ ಕೊಂಡಾಡಿದರಾಗಿ ನೀವು ಗಣಪರ್ವವಂ ಮಾಡಿ ಶಿವಲೋಕಕ್ಕೆ ಹೋಹನ್ನಕ್ಕರ ನಾವು ಶಿವಯೋಗ ಸಮಾಧಿಯನೈಯ್ದುವುದಿಲ್ಲ. ನಾವು ಸುಮ್ಮನೆ ಮೂರ್ತಂಗೊಂಡು ಶಿವ ಯೋಗಿನಾಥನಂ ಪಾಡುತ್ತೆ, ನಿಮ್ಮ ಕೈಯ್ಯಿಂದೆ ಕಳುಹಿಸಿಕೊಂಡಲ್ಲದೆ ಗುಹೇಶ್ವರ ಲಿಂಗದಲ್ಲಿ ಸನ್ನದ್ಧ ಸಮಾಧಿ ಯೋಗವನೈಯ್ದಲೊಲ್ಲವೆಂದು ನಿರೂಪವಂ ಕೊಟ್ಟು ಚಿತ್ತೈಸಿದರೆಂದು ನಿರೂಪಿಸುವ ಸಮಯದಲ್ಲಿ,

ಸಿದ್ಧರಾಮಯ್ಯದೇವರು ಬಿಜಯಂ ಮಾಡಲು, ಚನ್ನಬಸವಣ್ಣ ಮಡಿ ವಾಳಯ್ಯ ಮುಂತಾದೆಲ್ಲ ಗಣಂಗಳಿದಿರೆದ್ದು ನಮಸ್ಕಾರವಂ ಮಾಡಿ ದೇವರವರು ನಾವು ಸ್ಮರಿಸುವ ಸಮಯ್ಯದಲ್ಲಿಯೇ ಪ್ರಸನ್ನವಾದರಿ, ನಾವು ಬದುಕಿದೆವೆಂದು ಎರಡು ಕರಂಗಳಂ ಮುಗಿದು ನಮಸ್ಕಾರವಂ ಮಾಡಿ ಗದ್ದುಗೆಯನಿಕ್ಕಿ ಮೂರ್ತಂಗೊಳಿಸಿ ಅರ್ಘ್ಯಪಾದ್ಯಾಚಮನಂಗಳಂ ಮಾಡಿ ಸದುಪಚಾರಂಗಳಂ ಮಾಡಿ ವಿನಯದಿಂದಿರಲು, ಆಗ ಸಿದ್ಧರಾಮಯ್ಯ ದೇವರು ನಿರೂಪಿಸಿದ ಪ್ರಸ್ಥಾವದ ವಚನ,

ಎಲೆ ಚನ್ನಬಸವಣ್ಣ, ಈ ಮಹಾ ಮಂಗಳವಾಡ ಪಟ್ಟಣದಲ್ಲಿ ಒಬ್ಬರು ಚರಮೂರ್ತಿಗಳು ಇಲ್ಲ. ಶಂಖ ಘಂಟಾರವವೆಂದೆಂಬುದೊಂದು ಠಾವಿನಲ್ಲಿ ಲ್ಲವಾಗಿ ಒಬ್ಬರು ಶಿವಭಕ್ತರು ಇಲ್ಲ. ಸರ್ವಶೂನ್ಯವಾಗಿದೆ. ಆಶ್ಚರ್ಯವಾ

ಗಿದೆ ಎಂದು ನಿರೂಪವಂ ಕೊಡಲು, ಎಲೆ ಸಿದ್ಧರಾಮಯ್ಯದೇವರೇ ಜಗದೇವ ಮೊಲ್ಲೆ ಬೊಮ್ಮಣ್ಣನವರು ಪಂಜುಗಾರರಾಗಿ ಬಿಜ್ಜಳನ ಸಂಹರಿಸುತ್ತಿದ್ದಾರೆ. ಆದರಿಂದ ಸಮಸ್ತ ಹಿರಿಯರುಗಳು ಸಮಸ್ತ ಮಹೇಶ್ವರರುಗಳೆಲ್ಲ ಚಿತ್ತೈಸಿದರು. ನಾವಿದ್ದಿಹೆವು. ನೀವು ಇರಲಾಗದೆಂದು ಗಣಂಗಳ ಕೈಯ್ಯಲ್ಲಿ ಕಳುಹಿಸಿಕೊಂಡು, ಈಗಳೆ ಎನ್ನದೆ ಚಿತ್ತೈಸಿ, ಎಂದು ಬಿನ್ನಹಂ ಮಾಡಲು ಆ ಸಿದ್ಧರಾಮಯ್ಯದೇವರು ಹನ್ನೆರಡು ಸಾವಿರ ಷಟ್‌ಸ್ಥಲದ ಬ್ರಹ್ಮಿಗಳ ಕೈಯ್ಯ ಕಳುಹಿಸಿಕೊಂಡು ನಿಮ್ಮ ಚಿತ್ತದಲ್ಲಿ ನಮ್ಮ ಮೇಲಣ ಕೃಪೆ ಇರಲಿ ಎಂದು ನಿರೂಪಿಸಲು, ಮತ್ತಂ ಆ ಗಂಗಾಂಬಿಕೆಯರು ಮುಂತಾದ ಸಕಲ ಪುರಾತನರ ರಾಣಿವಾಸದ ತಾಯಿಗಳಿರಾ, ನಿಮ್ಮ ಹೃದಯದಲ್ಲಿ ನಮ್ಮ ಮೇಲಣ ಕೃಪೆಯಿಂದ ಸಿದ್ಧರಾಮಯ್ಯ ಎಂದು ಹರಸಿಕೊಂಡಾಡಿರಮ್ಮಾ ಗಂಗಾಂಬಿಕೆ ತಾಯೆ ಭವಾನಿ ಎಂದು ಪ್ರೀತಿಯಿಂ ಸ್ತುತಿಸಿ ಕಳುಹಿಸಿಕೊಂಬ ಸಮಯದಲ್ಲಿ

ಗಂಗಾಂಬಿಕೆಯರು ಎಲೆ ಸಿದ್ಧರಾಮೇಶ್ವರಲಿಂಗವೇ ಎನ್ನ ಮೇಲಣ ಕರುಣದಿಂ ದೇವರು ಮಹಾ ಬಳಲಿ ಚಿತ್ತೈಸಿದಿರಿ, ಒಂದು ಕ್ಷಣ ಮೂರ್ತಂಗೊಂಡು ವಿಶ್ರಮಿಸಿಕೊಂಡು ಚಿತ್ತೈಸುವುದೆಂದು ಬಿನ್ನಹಂ ಮಾಡಿಕೊಂಡು ಶಿವಾರ್ಚನೆಯಂ ಮಾಡಿಸಿ ಕದಳೀಪಣ್ಣು ಸಕ್ಕರೆ ಪಾಲು ತುಪ್ಪ ಎಡೆಗೆ ಮುಂತಾದವರಿಂದಾರೋಗಣೆಯಂ ಮಾಡಿಸಿ, ಬಳಲಿದಿರಿ ಸ್ವಾಮಿ ಎಂದು ಸಮಸ್ತ ಗಣಂಗಳ ಸತಿಯರು ಸಹ ಗಂಗಾಂಬಿಕೆಯರು ನಮಸ್ಕರಿಸಿ ಎಲೆ ಸ್ವಾಮಿ ನೀವು ಚಿತ್ತೈಸಿದಿರಿ ಎಂದೆನಲು.

ಆ ಸಿದ್ಧರಾಮಯ್ಯಯ್ಯ ದೇವರಿಂತೆಂದರು. ನಿನ್ನೆ ಬಾರೆವು ನಮ್ಮ ಗೃಹಕ್ಕೆ ಏಳುನೂರೆಪ್ಪತ್ತು ಚರಮೂರ್ತಿಗಳು ಚಿತ್ತೈಸಿದರು ಆ ದೇವರುಗಳಿಗೆ ನೈವೇದ್ಯಂಗಳ ಮಾಡಿಸಿ ಆರೋಗಣೆಯಂ ಮಾಡಿಸುವನ್ನಕ್ಕರ ಇಷ್ಟು ತಡವಾಯಿತ್ತು ಆ ದೇವರುಗಳು ಇಲ್ಲಿಯ ವೃತ್ತಾಂತಂಗಳನೆಲ್ಲವನು ಒಂದುಳಿಯದೆ ನಿರೂಪವಂ ಕೊಟ್ಟರು, ಆ ದೇವರುಗಳೆಲ್ಲ ಮುಂದಕ್ಕೆ ಕಳುಹಿಸಿಕೊಂಡು ಚಿತ್ತೈಸಿದರು, ಎನಲಾ ಗಂಗಾಂಬಿಕೆಯರು ನಮಸ್ಕಾರವಂ ಮಾಡಿ ಎಲೆ ಸಿದ್ಧರಾಮೇಶ್ವರ ಲಿಂಗವೇ ಈ ಮರ್ತ್ಯದಲ್ಲಿದ್ದರೂ ಕೈಲಾಸಕ್ಕೆ ಪೋದರು. ನಿಮ್ಮ ಶರಣರ ಸೇವೆಯಲ್ಲದೆ ಮತ್ತೇನನರಿಯದಂತಿರಿಸಯ್ಯ ಗುರುವೆ ಎನಲು, ಆಗ ಸಿದ್ಧರಾಮಯ್ಯದೇವರು ನುಡಿದ ಪ್ರಶ್ನೆ. ಆವಾವ ಪ್ರಳಯಂಗಳಾದರು ಭವ ಭವಾಂತರದಲ್ಲಿ ಬಂದರು

ಇಂತಹ ಗಂಗಾಂಬಿಕೆಯರ ಅಮೃತಮಯವಾದ ಶ್ರೀ ಹಸ್ತದ ಭಿಕ್ಷವನೆ ಸಲಿಸುವಂತೆ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೇ ಎಂದು ವಿಭೂತಿಯಂ ಧರಿಸಲು, ಆ ಸಮಯದಲ್ಲಿ ಸಕಲ ಪುರಾತನರ ರಾಣಿವಾಸದ ತಾಯಿಗಳೆಲ್ಲರು ಬಂದು ನಮಸ್ಕಾರಂಗಳಂ ಮಾಡಿ, ಎಲೆ ಗುರುವೆ ನೀನಾವಾವ ಭವಾಂತರದಲ್ಲಿ ಬರಿಸಿದರೂ ನಿಮ್ಮ ಶರಣರ ಮನೆಯ ತೊತ್ತಾಗಿ ಹುಟ್ಟಿಸಿ, ಕಸ ನೀರು ಹೊತ್ತಿರಿಸುವಂತೆ ಮಾಡಯ್ಯ ಗುರುವೇ ಸಿದ್ಧರಾಮೇಶ್ವರಲಿಂಗವೆ ಎಂದು ನಮಸ್ಕಾರವಂ ಮಾಡಲು, ಇಂತಹ ಸತ್ಯವಂತೆಯರಾದ ಪುಣ್ಯಾಂಗನೆಯರ ಶ್ರೀ ಹಸ್ತದಲ್ಲಿ ನಿತ್ಯತ್ವವಾದ ಭಿಕ್ಷವನೆ ಬೇಡಿ ನೀಡಿಸಿಕೊಂಡು ಸ್ವೀಕರಿಸುವಂತೆ ಮಾಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ ಎಂದು ವಿಭೂತಿಯಂ ಧರಿಸಲು, ಆ ವೇಳೆಯಲ್ಲಿ ಮೋಳಿಗೆಯ ಮಾರಯ್ಯಗಳು ಬಂದು ನಮಸ್ಕಾರವಂ ಮಾಡಿ ತನುಮನ ಬಳಲಿ ಶುದ್ಧ ಕಾಯಕವ ಮಾಡಿ ತಂದು ಸತಿಪತಿಗಳೇಕಚಿತ್ತರಾಗಿ ಗುರುಲಿಂಗಜಂಗಮದ ಸೇವೆಯಂಮಾಡಿ ನೀಡಿ ಅವರೊಕ್ಕು ಮಿಕ್ಕ ಪ್ರಸಾದಮಂ ಕೊಂಡು ನಿಶ್ಚಲರಾಗಿರ್ಪ ಭಕ್ತರ ಬಾಗಿಲ ಕಾಯ್ದಿರ್ಪಂತೆ ಮಾಡು ಸಿದ್ಧರಾಮೇಶ್ವರ ಲಿಂಗವೇ ಎನಲು, ಇಂತಪ್ಪಮೋಳಿಗೆಯ ಮಾರಿ ತಂದೆಗಳ ಸತ್ಯ ಕಾಯಕದ ನಿತ್ಯ ಪ್ರಸಾದವನು ಸ್ವೀಕರಿಸುವಂತೆ ಮಾಡಯ್ಯ ಕಪಿಲ ಸಿದ್ಧ ಮಲ್ಲಿಕಾರ್ಜುನ ಲಿಂಗವೇ ಎಂದು ವಿಭೂತಿಯಂ ಧರಿಸಿ, ಆ ಸಮಯದಲ್ಲಿ ಸೊಡ್ಡಳ ಬಾಚರಸರು ಬಂದು ನಮಸ್ಕಾರವಂ ಮಾಡಿ ಗುರಲಿಂಗಜಂಗಮವೆ ಘನವೆಂದು ಪ್ರಣವ ಪಂಚಾಕ್ಷರಿಯೇ ಅಧಿಕವೆಂದು ಹೊಗಳಿ ಬದುಕುವೆನು ಭವಭವಾಂತರದಲ್ಲಿ ಇಂತಹ ಪುಣ್ಯದಲ್ಲಿರಿಸಿ ಬದುಕಿಸಯ್ಯ ಸಿದ್ಧರಾಮೇಶ್ವರ ಲಿಂಗವೆ ಎನಲು, ಇಂತೆಸೆವ ಸೊಡ್ಡಳ ಬಾಚರಸರ ಪ್ರಣವ ಪಂಚಾಕ್ಷರಿಯ ಮಂತ್ರವ ಕೇಳಿ ಬದುಕುವಂತೆ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೇ ಎಂದು ವಿಭೂತಿಯಂ ಧರಿಸಲು, ಆ ಸಮಯದಲ್ಲಿ ಮಡಿವಾಳಯ್ಯಗಳು ಬಂದು ನಮಸ್ಕಾರವಂ ಮಾಡಿ ಆಕಾಶ ಭೂಮಿ ಚಂದ್ರ ಸೂರ್ಯರೆಲ್ಲ ಅಳಿದರೂ ಯುಗಜುಗಂಗಳೆಲ್ಲವು ಬಾರದೆ ಹೋದರೂ ರಜತ ಗಿರಿ ಲಯವಾದರೂ ದೇವರು ನಿಃಕಳದಲ್ಲಿದ್ದರೂ ಏಕಾಂತದಲ್ಲಿದ್ದರೂ ಗುರುಲಿಂಗಜಂಗಮದ ಭೃತ್ಯನಾಗಿ ಇರ್ಪಂತೆ ಶಿವ ನಿಂದೆಯ ಕೇಳದಂತೆ ನಿಮ್ಮ ಪ್ರಮಥರ ಬೆನ್ನ ಬಿಡದೆ ಸೇವಕನಾಗಿರ್ಪಂತೆ

ಮಾಡಯ್ಯ ಸಿದ್ಧರಾಮಯ್ಯ ಲಿಂಗವೇ ಎನಲಾಗಿ, ಇಂತಹ ಶರಣಕುಲ ಚಕ್ರವರ್ತಿ ಶ್ರೀವೀರ ಮಡಿವಾಳಯ್ಯಗಳ ನೆನೆನೆನೆದು ಅವರ ಭಾವದಲ್ಲಿ ಆವಾವ ಕಾಲದಲ್ಲಿಹಂತೆ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೇ ಎಂದು ವಿಭೂತಿಯಂ ಧರಿಸಲು, ಆ ಸಮಯದಲ್ಲಿ ಬೇರೆ ಬೇರೆ ವಿಭೂತಿಯಂ ಧರಿಸಿಹೆವೆಂದರೆ ಒಂದು ತಿಂಗಳಾದರೂ ಸಾಲದು ಎಂದು, ಚನ್ನ ದಂಡನಾಯಕರು ಮುಂತಾದ ಏಳ್ನೂರೆಪ್ಪತ್ತು ಅಮರಂಗಣಂಗಳು ಅಸಂಖ್ಯಾತ ಪುರಾತನರುಗಳೆಲ್ಲ ಒಂದೇ ಬಾರೆ ನಮಸ್ಕಾರಂಗಳಂ ಮಾಡಿ ಕರಂಗಳಂ ಮುಗಿದು ನಿಂದಿರಲು, ಆ ಸಿದ್ಧರಾಮಯ್ಯ ದೇವರು ಮಹಾ ಚಿಂತೆಯಿಂದ ದುಃಖಿತರಾಗಿರಲು, ಹರಹರಾ ಇಂತಹ ಅಲ್ಲಮ ಪ್ರಭು ದೇವರು ಸಿದ್ಧರಾಮಯ್ಯಗಳು ಸಂಗನಬಸವರಾಜ ದೇವರು ಹನ್ನೆರಡು ಸಾವಿರ ಷಟ್‌ಸ್ಥಲ ಬ್ರಹ್ಮಿಗಳು ಪ್ರಸಾದವೇ ಮೂರ್ತಿಯಾದ ಚನ್ನ ಬಸವರಾಜ ದೇವರು ಮುಂತಾದ ಶಿವಗಣಂಗಳು ಆರೋಗಿಸಿ ಒಕ್ಕು ಮಿಕ್ಕ ಪ್ರಸಾದವಂ ಕಾಯ್ದು ಕೊಂಡಿರ್ಪಂತೆ ಮಾಡಯ್ಯ ಗುರುವೆ ಸಿದ್ಧರಾಮಯ್ಯ ಲಿಂಗವೆ ಎನಲಾಗಿ, ಇಂತಹ ಸದಾಚಾರ ಸಂಪನ್ನರೇಳ್ನೂರೆಪ್ಪತ್ತಮರಗಣಂಗಳು ಅಸಂಖ್ಯಾತ ಮಹಾಪುರಾತನರು ಪ್ರಮಥ ಗಣಂಗಳಂ ನೆನೆನೆನೆದು ಬದಕುವಂತೆ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೇ ಎಂದು ವಿಭೂತಿಯಂ ಧರಿಸಲು, ಆ ಸಮಯದಲ್ಲಿ ಚನ್ನಬಸವೇಶ್ವರ ದೇವರು ಸಿದ್ಧರಾಮೇಶ್ವರಂಗೆ ನಮಸ್ಕಾರವಂ ಮಾಡಿ ಎಲ್ಲರು ಹಿಂದಣ ಜನ್ಮ ಹರಿಯದೆಂದು ಮುಂದಕ್ಕೆ ಬೇಡಿಕೊಂಬರಲ್ಲದೆ ಎನಗೆ ಮುಂದೊಂದು ಜನ್ಮ ಬೇಡ ಈ ಜನ್ಮ ಸಾಕು ಈ ಜನ್ಮದಲ್ಲಿ ಗುರು ಲಿಂಗ ಜಂಗಮವ ಕಂಡೆ ಎನ್ನ ಕಾಯ ಸುಕಾಯವಾಯಿತ್ತು ಎನಗಿನ್ನು ಜನ್ಮವಿಲ್ಲ ಇಂತಹ ಶಿವಗಣಂಗಳ ಅಸಂಖ್ಯಾತ ಪುರಾತನರ ಶ್ರೀಪಾದ ರಕ್ಷೆಯ ಕಾಯ್ದುಕೊಂಡಿರ್ಪಂತೆ ಮಾಡಿರಿಸಯ್ಯ, ಕೂಡಲ ಚನ್ನ ಸಂಗಯ್ಯನ ಶರಣರು ಸಾಕ್ಷಿಯಾಗಿ ಸಿದ್ಧರಾಮಯ್ಯ ಲಿಂಗವೇ ಎನಲು ಆವಾವ ಭವಭವಾಂತರದಲ್ಲಿಯೂ ಚನ್ನಬಸವೇಶ್ವರನೆನಗೆ ಗುರುವಾಗಿ ನಾನೆ ಶಿಷ್ಯನಾಗಿ ಪ್ರಭುದೇವರೇ ಪರಮಾರಾಧ್ಯರಾಗಿ ಪ್ರಮಥ ಗಣಂಗಳೇ ಬಂಧುಗಳಾಗಿ ನಮ್ಮ ಗುರುವು ಚನ್ನಬಸವಣ್ಣನ ಜ್ಞಾನ ಪ್ರಸಾದವ ಸವಿದು ಬದುಕುವಂತೆ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೆ ಎಂದು ವಿಭೂತಿಯಂ ಧರಿಸಲು, ಕೇಳಯ್ಯ ಸಿದ್ಧರಾಮಯ್ಯಲಿಂಗವೇ ನಿಮ್ಮ

ಶರಣರಿಗೆ ಭವ ಉಂಟೆ? ಭವನೆಂಬುದು ಬಂಧನ. ಬಂಧನವೆಂಬುದು ಪೂರ್ವದ ಕರ್ಮ. ನಿಮ್ಮ ಶ್ರೀಪಾದ ಪದ್ಮವ ನೆರೆನಂಬಿದ ಶರಣರಿಗೆ ಭವಭಯವೆಂದಿಗೂ ಇಲ್ಲ. ಪರಶಿವ ಮೂರ್ತಿಯು ತಾನಾದರು ಇಪ್ಪತ್ತೈದು ಲೀಲೆಯನಾಡುವಲ್ಲಿ ಭಕ್ತಿ ಲೀಲೆಯ ತೊಟ್ಟಾಡಿದನಾಗಿ ಈ ಮರ್ತ್ಯಲೋಕದಲ್ಲಿ ಮಹಾಗಣಂಗಳುದಯಿಸದಿರ್ದರೆ ಪರಶಿವ ಲೀಲೆ ಮೆರೆಯದಾಗಿ, ಈ ಮರ್ತ್ಯಲೋಕದ ಭಕ್ತರಿಗೆ ತವರ್ಮನೆ ಈ ಭಕ್ತ್ಯಾಂಗನೆಯುರ ಬಸಿರಲ್ಲಿ ಪುಟ್ಟಿದ ಶಿವಗಣಂಗಳೆಲ್ಲರು ಶಿವನ ನೆನೆವ ಕಾರಣ ಭಕ್ತರಿಗೆ ಕೈಲಾಸವೆ ಗಂಡನ ಮನೆ. ಮರ್ತ್ಯಲೋಕವೆ ಭಕ್ತ್ಯಾಂಗನೆ ಎಂಬ ತಾಯ ತವರ್ಮನೆ. ಗಂಡನ ಕಳುಹಿಸಿಕೊಂಡು ಬಂದು ಮರ್ತ್ಯಲೋಕದಲ್ಲಿ ಹುಟ್ಟಿದವರಲ್ಲದೆ ಕರ್ಮಕಾಂಡಿ ಜಡಜೀವಿಗಳಾಗಿ ಹುಟ್ಟಿದವರಲ್ಲ. ಆ ಕರ್ಮಕಾಂಡಿ ಜಡಜೀವಿಗಳೆಲ್ಲರು ಹುಟ್ಟಿ ನರಕದಲ್ಲಿ ದುಃಕರ್ಮಗಳನುಂಡು ಬಂದು ಹುಟ್ಟಿ ಹೊಂದಿ ಸಾವುತ್ತಿಪ್ಪರು. ನಮ್ಮ ಶರಣರು ಶಿವಲೀಲಾ ನಿಮಿತ್ಯವಾಗಿ ಜನಿಸಿ ಕರ್ಮಫಲ ಭೋಗಂಗಳೆಂಬವಂ ಹುಡಿಗುಟ್ಟಿ ಸುಜ್ಞಾನದ ಮೇರುಗಿರಿಯ ನೆಲೆಮನೆಯನೆ ಮೆಟ್ಟಿ ಶಿವಪಾದವಂ ಪೂಜಿಸಿದರಾಗಿ ಘಟವೆಂಬ ಕಂಥೆಯ ಧರಿಸಿರ್ದು ಶಿವನ ಚತುರ್ವಿಧ ಪದದಲ್ಲಿರ್ದು ಬಂದು ತಮ್ಮ ಸ್ವೇಚ್ಛಾವಿಹಾರದಿಂದಿರ್ದು ತಮ್ಮ ಲೀಲೆಗಳಿಂದಾಡಿ ಮತ್ತಾ ಪದದೊಳೊಪ್ಪುವರು. ಅದಾಗಿ ಶಿವನ ಲೀಲೆ ನಾಲ್ಕು ಲಕ್ಷದ ಮೇಲೆ ಮೂವತ್ತೆರಡು ಸಾವಿರ ವರುಷ ಕಲಿಯುಗ ಮುಗಿಯದೆ ಅಂದು ತನಕವು ಈ ಶರಣರುಗಳು ಮರ್ತ್ಯದಲ್ಲಿ ಹುಟ್ಟಿ ಹುಟ್ಟಿ ಕೈಲಾಸವ ಮುಟ್ಟಿ ಮುಟ್ಟಿ ಹೋಗುತಂ ಬರುತಂ ಇರುತಿರ್ಪರಾಗಿ ಕೈಲಾಸಕ್ಕು ಕಲ್ಯಾಣಕ್ಕ ಎಡೆತೆರಹಿಲ್ಲವಾಗಿ ನಮಗು ನಮ್ಮೇಳ್ನೂರೆಪ್ಪತ್ತಮರಗಣಂಗಳಿಗು ಅಸಂಖ್ಯಾತ ಮಹಾ ಪ್ರಮಥಗಣಂಗಳಿಗೆಯು ಸ್ವಾಮಿ ಲೀಲೆಯು ಮುಕ್ತವಹ ಪರಿಯಂತರವು ಮರ್ತ್ಯದ ಮಹಾ ಗಣಂಗಳ ಸಂದರ್ಶನ ನಮಗೆಂದಿಗು ಹಿಂಗದಾಗಿ ಮರ್ತ್ಯಲೋಕದಲ್ಲಿ ದೇಹವಿಡಿದು ವಿಭೂತಿ ರುದ್ರಾಕ್ಷಿಧಾರಣ ಪಂಚಾಕ್ಷರಿಯ ಜಪ ಪಂಚಮುದ್ರಾಂಕಿತ ಶರಣರ ಕಂಡು ಶಿವನೆಂದು ನಂಬಿ ನುಡಿಯದೆ ನರನೆಂದು ನುಡಿವನ ಬಾಯಲ್ಲಿ ನಮ್ಮ ಪಡಿಹಾರಿ ಉತ್ತಣ್ಣಗಳ ಎಡದ ಪಾದದ ಪಾದರಕ್ಷೆಯನಿಕ್ಕದೆ ಸುಮ್ಮನಿಪ್ಪರೆ? ನಮ್ಮ ಕೂಡಲಚನ್ನಸಂಗನ ಶರಣರು ಡಂಗುರವ ಹೊಯ್ದು ಸಾರಿದರು. ಕಾಯುವೆರಸಿ ಬಂದರು. ನಮ್ಮ ಶರಣರು ಶಿವನ ಲೀಲೆಯುಳ್ಳಪ್ಪ ಪರಿಯಂತರವು ಈ ವ್ರತ ಈ

ಕಾಯಕ ಈ ಕ್ರಿಯಾಚಾರ ಈ ಸತ್ಯ ನೇಮಂಗಳು ಈ ಶ್ರೀ ವಿಭೂತಿ ರುದ್ರಾ
ಕ್ಷಿಧಾರಣ ಪಂಚಾಕ್ಷರಿಯ ಜಪ ಸದಾಶಿವನ ಸಗುಣ ನಿರ್ಗುಣ ಮೂರ್ತಿ
ಧ್ಯಾನ ಶಿವಗಣಂಗಳ ಸೇವೆಗಳು ತತ್ವಾನುಭಾವದ ಗೋಷ್ಠಿ ಇಂತಹ ಚರಿ
ತ್ರಂಗಳು ಎಂದೂ ತಪ್ಪವು. ಇವು ಮಹಾದೇವನ ಲೀಲೆ ಎಂಬುದನಾರು
ಕಾಣಲರಿಯರು. ನಮ್ಮ ಶರಣರ ಮಹಾಘನವ ನೋಡಿದವರಿಗಲ್ಲದೆ ಭವ
ಬಾಧೆ ಹಿಂಗದು. ಮಿಕ್ಕಿನ ಜಡರುಗಳು ನಿಂದೆ ವಂದನೆಯಿಂದೆ ಮುಂದು
ಗಾಣರು. ವಂದಿಸಿ ನಿಂದಿಸುವ ಮಂದಮತಿಗಳು ನರಕದಲ್ಲಿಪ್ಪರು. ಮುಂದೆ
ನಾವು ನೀವು ಶಿವಲೋಕದಿಂದ ಮರ್ತ್ಯಲೋಕಕ್ಕೆ ಬಾಹ ಕಾಲಕ್ಕೆ ಕಲಿ
ಕಾಲ ದುರ್ವರ್ತನೆ ವೆಗ್ಗಳನಾದೀತು. ಒಂದೆ ಸಂವತ್ಸರದಲ್ಲಿ ತೋರಿ
ಹೋದೀತು. ಮುಂದೆ ನಮ್ಮ ಶರಣರ ಮಹಿಮೆ ಮೆರೆದಾವು. ಸಿದ್ಧರಾ
ಮಯ್ಯಲಿಂಗವೆ ನಾವು ಉಳಿವೆಯ ಮಹಾಮನೆಗೆ ಬಂದುದೆ ಸಾಕ್ಷಿ.
ನಿಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗದ ಮುಂದಣ ಪಂಚಗಂಟೆ
ತಾವೆ ತ್ರಿಕಾಲದಲ್ಲಿ ನುಡಿದುದೆ ಸಾಕ್ಷಿ. ರುದ್ರಮುನಿದೇವರು ಚಂಗಿಣಿಗಿಲ
ಮಂಟಪದ ಬಾಗಿಲ ಕವಾಟ ತೆರೆದುದೇ ಸಾಕ್ಷಿ. ಮರ್ತ್ಯಲೋಕದ ಮಹಾ
ಗಣಂಗಳು ನಿಮ್ಮ ದರ್ಶನವಾದುದೇ ಸಾಕ್ಷಿ. ಅಂದಿಗೆ ನಾವು ಆನಂದ
ನಾಮ ಸಂವತ್ಸರದ ಕಾರ್ತಿಕ ಶುದ್ಧ ಪೌರ್ಣಿಮೆಯಲ್ಲಿಯು ಸೋಮ
ವಾರದ ಅಹೋ ರಾತ್ರಿಯಲ್ಲಿ ಏಳ್ನೂರೆಪ್ಪತ್ತಮರಗಣಂಗಳು ಸಹಿತ
ಪ್ರಸನ್ನವಾದೆವು. ರುದ್ರಮುನಿದೇವರು ನೀವು ಅಂದಿನ ವೇಳೆಗೆ ದೇವರು
ನೀವು ಬಿಜಯಂ ಮಾಡಿ ಎಂದು ನಮಸ್ಕಾರವಂ ಮಾಡಿ ವಿಭೂತಿಯ
ನೀಡಿಸಿಕೊಂಡು ಕಳುಹಿಸಿಕೊಂಡು ಬರುವ ಸಮಯದಲ್ಲಿ,

ಸಿದ್ಧರಾಮಯ್ಯ ದೇವರು ರುದ್ರಮುನಿದೇವರಿಗೆ ಶರಣಾರ್ಥಿಯಂ
ಮಾಡಿ ದೇವರು ಉಳಿವೆಯ ಮಹಾಮನೆಗೆ ಬಿಜಯ ಮಾಡುವಿರೋ
ಇಲ್ಲವೋ, ಉಳಿದಿರೋ ಎಂದು ಕೇಳಲು, ಸಿದ್ಧರಾಮಯ್ಯ ದೇವರೇ ನಾವು
ನಮ್ಮ ಚಂಗಿಣಿಗಿಲಮಂಟಪ ಯೋಗವ ಬಿಟ್ಟು ಎಲ್ಲಿಗೂ ಹೋಗೆವು.
ಚನ್ನಬಸವಣ್ಣನು ಮುಂದಣ ಕದನಕ್ಕೆ ಉಳಿವಿಗೆ ಹೋದಾರು. ಈ ಕಲ್ಯಾ
ಣದಲ್ಲಿ ಶಿವಯೋಗ ಸಮಾಧಿಯಲ್ಲಿರ್ಪ ಹಿರಿಯರುಗಳು ಗವಿಬಿಲದ್ವಾರ
ನೆಲಮಾಳಿಗೆ ಮಂಟಪಗಳಲ್ಲಿ ಯೋಗೀಶ್ವರರು ಶಿವಮೂರ್ತಿ ಸದಾನಂದ
ದಿಂದ ಉಳಿದಾರು. ಕೈಲಾಸಕ್ಕೆ ಹೋಗುವ ಹನ್ನೆರಡು ಸಾವಿರ ಷಟ್
ಸ್ಥಲ ಬ್ರಹ್ಮಿಗಳು ಏಳ್ನೂರೆಪ್ಪತ್ತು ಅಮರಗಣಂಗಳು ಇಷ್ಟಲ್ಲದೆ ಮತ್ತಾರ್ಯ

ಹೋಗರು. ವ.ತ್ತೆಲ್ಲರೂ ಇಲ್ಲಿಯೇ ಉಳಿದಾರು. ಕಲ್ಯಾಣ ನಾಲ್ವತ್ತೆಂಟು ಗಾವುದ ವಿಸ್ತೀರ್ಣದೊಳಗಾಗಿ ಗಾವುದಕೊಬ್ಬ ಶಿವಯೋಗೀಶ್ವರರು ಯತಿಗಳು ಮುನೀಶ್ವರರು ಕಾಣಬಾರದೆ ಇದ್ದಾರು. ಭವಿಗಳ ಕಣ್ಣಿಂಗೆ ಕಾಣಿಸರು. ಅದು ಕಾರಣ ಸಿದ್ಧರಾಮಯ್ಯ ಲಿಂಗವೆ ನೀವು ನಿಮ್ಮ ನಿಜಯೋಗಸಂದ ಸಮಯದಲ್ಲಿ ಸನ್ನರ್ಧರಾಗಿ ನಾವು ನಮ್ಮ ಚಂಗಿಣಿಗಿಲ ಮಂಟಪದಲ್ಲಿ ಶಿವಯೊಗದಿಂದ ನಿಜಸಮಾಧಿಯಲ್ಲಿ ಸನ್ನರ್ಧರಾಗಿಪ್ಪೆವು. ಮುಂದೆ ಗಣಂಗಳುದಯಕ್ಕೆ ನಾವು ನೀವು ಮರ್ತ್ಯದಲ್ಲಿ ಉಳಿದ ಸದ್ಭಾಚಾರ ಸಂಪನ್ನರಪ್ಪ ಗಣಂಗಳು ಸಹಿತ ಉಳಿವೆಯ ಮಹಾಮನೆಗೆ ಚನ್ನದಂಡನಾಯಕರು ಬಂದಾಗ ಹೋಗಿ ಅವರ ಸಂದರ್ಶನವ ಮಾಡುವೆವು ದೇವರನು. ಅಂದು ಪರಿಯಂತರವು ಇದೆ ಕಂಡುದು ಎನಲಾಗಿ, ಸಿದ್ಧರಾಮಯ್ಯ ದೇವರು ರುದ್ರಮುನಿದೇವರು ಒಬ್ಬರಿಗೊಬ್ಬರಿಗೆ ನಮಸ್ಕಾರಂಗಳಂ ಮಾಡಿ ಅಲ್ಲಿಂದ ಕಳುಹಿಸಿಕೊಂಡು ಪ್ರಮಥಗಣಂಗಳಿಂ ಬೀಳ್ಕೊಂಡು ಅಲ್ಲಿಂದ ಚನ್ನಬಸವಣ್ಣ ಮಡಿವಾಳಯ್ಯಗಳಿಂ ಬೀಳ್ಕೊಂಡು ಸಿದ್ಧರಾಮೇಶ್ವರಂ ತಮ್ಮ ಸೊನ್ನಲಾಪುರದತ್ತಲಭಿಮುಖವಾಗಿ ಖೇಚರ ಮಾರ್ಗದಿಂದ ಚಿತ್ತೈಸಿದರು. ರುದ್ರಮುನಿದೇವರು ಚಿತ್ತೈಸಿದರು ತಮ್ಮ ಚಂಗಿಣಿಗಿಲ ಮಂಟಪಕಾಗಿ.

ಇತ್ತ ಚನ್ನಬಸವಣ್ಣನು ಮಡಿವಾಳಯ್ಯಗಳು ಕೂಡಿ ನುಡಿದ ಪ್ರಸ್ತಾವದ ವಚನ. ಇನ್ನೂ ಏಳು ಗಳಿಗೆಗೆ ಉದಯವಾದೀತು. ಈ ವೇಳೆಯಲ್ಲಿ ಅಸಂಖ್ಯಾತ ಪ್ರಮಥ ಗಣಂಗಳು ತೆರಳಬೇಕೆಂದು ನಿರೂಪಮಂ ಕುಡಲು ಆ ಮಡಿವಾಳಯ್ಯಗಳು, ಚನ್ನಬಸವಣ್ಣ ನಾನು ಗಣಂಗಳನು ವಂಚನೆ ಇಲ್ಲದೆ ಆಂಜನೇಯ ಹೊಳೆಯ ದಾಂಟಿಸಿ ಬಂದೆಹೆನು. ನೀವು ಕಿನ್ನರಯ್ಯಗಳು ಶೂಲದ ಬ್ರಹ್ಮ ತಂದೆಗಳು ಸಹವಾಗಿ ನಾನು ಅಮರಗಣಂಗಳ ಕಳುಹ ಹೋದಲ್ಲಿ ನೀವು ನಿಮ್ಮರಮನೆಯ ಬಾಗಿಲಲ್ಲಿ ಅತ್ಯಂತ ಎಚ್ಚರಿಕೆಯಿಂದಿರಿ. ನಾವೀಕ್ಷಣ ಗಣಂಗಳ ದಾಂಟಿಸಿ ಬರುತಿಹೆನು. ನೀವು ನಿಮ್ಮರಮನೆಯ ಬಾಗಿಲ ಕವಾಟಗಳ ಬಗ್ಗನೆ ತೆರೆಯದಿರಿ. ನಾನು ಬಂದಲ್ಲದೆ ತೆರೆಯದಿರಿ ಎಂದು ಹೇಳಿ ಪ್ರಮಥಗಣಂಗಳ ಸಹಿತ ಮುಂದಕ್ಕೆ ತೆರಳಲು,

ನೈಋತ್ಯನಾರಾಯಣನ ಬಾಗಿಲಲಿ ಕಾಯ್ದಿರ್ಪ ತಳವಾರರು ತಡೆದು ಈ ರಾತ್ರೆಯಲ್ಲಿ ಅರಮನೆಯಪ್ಪಣೆ ಇಲ್ಲದೆ ಹೋಗಲೀಯೆನೆಂದು ತಡೆ

ಯಲು, ಆಗ ಮಡಿವಾಳಯ್ಯಗಳು ನಮಗೆ ನಿನ್ನೆ ಅಪ್ಪಣೆಯು ತಳವಾರ ನಾಗರಜನು ಕೊಟ್ಟಿಹನೆಂದು ಎತ್ತಿ ಆಣತಿಯಂ ತೋರಿ ನಾವು ಕೂಡ ಲಸಂಗಮನಾಥ ದೇವರಿಗೆ ಪರ್ವವಂ ಮಾಡಬೇಕು, ಈ ಹೆಣ್ಣು ಗಂಡು ಮಕ್ಕಳು ಸಹಿತ ಹೋಗುತ್ತಿಹೆವು, ನಿಮ್ಮರಮನೆ ಮನುಷ್ಯರು ಒಂದಾಗಿ ಬಂದೈದಾರೆ, ಎಂದು ಶೂಲದ ಬೊಮ್ಮಿ ತಂದೆಗಳಂ ತೋರಿಸಿ ನೈಋತ್ಯ ನಾರಾಯಣನ ಬಾಗಿಲಂ ಕಳೆದು,

ಶೂಲದ ಬೊಮ್ಮಣ್ಣಗಳೇ, ನೀವು ನಮ್ಮ ಕಳುಹಬಂದವರಾಗಿ ತಿರುಗಿ ನಡೆಯಿರಿ. ಚನ್ನಬಸವಣ್ಣನು ಮೇಲುಬುದ್ಧಿಯನರಿದಾತನಲ್ಲ. ಬಗ್ಗನೆಯರಮನೆಯ ಬಾಗಿಲ ಅಗಸಿಗಳ ತಗೆಸಿಹನು. ನೀನೊಬ್ಬನಿದ್ದರೆ ಒಂದು ಕೋಟಿ ಇದ್ದ ಹಾಗೆ ಎಂದು ಕಳುಹಿಸಿ ಮಡಿವಾಳಯ್ಯಗಳು ಗಣಂಗಳು ಸಹಿತ ಮುಂದಕ್ಕೆ ತೆರಳಿ, ಅಂಜನೇಯ ಹೊಳೆಯ ದಾಂಟಿಸಿ, ನಿಮಗಿನ್ನಾವ ಅಂಜಿಕೆ ಇಲ್ಲ. ಇನ್ನು ನಿಲ್ಲದೆ ಬೇಗ ನಡೆಯಿರಿ ಎಂದು ಪೇಳಿ ನಾನು ಚನ್ನಬಸವಣ್ಣನ ಕೂಡಿಕೊಂಡು ಬರುತ್ತೈದೇನೆ, ನಿಮ್ಮನುಳಿವೆಯ ಪರಿಯಂತರವು ತಡೆವರಿಲ್ಲ ನಡೆ ಎಂದು ಕಳುಹಿ,

ಮಡಿವಾಳದೇವರು ಹಿಂದಕ್ಕೆ ತೆರಳಿ ಚನ್ನದಂಡನಾಯಕರರಮನೆಗೆ ಬಂದು ಚನ್ನದಂಡನಾಯಕರಿಗೆ ನಮಿಸಿ ಅಂಜನೇಯ ಹೊಳೆಯದಾಂಟಿಸಿ ಗಣಂಗಳನೆಲ್ಲರ ಕಳುಹಿ ಬಂದೆನು, ನಿಶ್ಚಿಂತರಾಗಿ ಪೋಗುತಿದ್ದಾರೆ, ಎಂದು ಬಿನ್ನವಿಸಲು,

ಆ ಕಾಲದಲ್ಲಿ ಬಿಜ್ಜಳರಾಯನ ಓಲಗ ಪೆರೆಯಲು, ಆ ಸಮಯದ ಭೇರಿ ಹೊಯ್ಯಲು, ಬಹುವಾದ್ಯ ರಭಸದಿಂ ಭೇರಿ ತಮ್ಮಟ ನಿಸ್ಸಾಳ ರವದಿಂ ಧಳಂಧಳ ಎಂದುಲಿಯಲು, ಓಲಗಂ ಪರೆದು ಪೋಗಲು ಬಿಜ್ಜಳಂ ಪಲ್ಲಕ್ಕಿಯನೇರಿ ನಡೆಗೊಳಲು, ಆ ಸಮಯದಲಿ ಪಂಜುಗಳಂ ದೀವಟಿಗೆಗಳಂ ಪಲ್ಲಕ್ಕಿಯನೆಡಬಲದಲ್ಲಿ ಪ್ರಕಾಶದಿಂದೆತ್ತಿ ಹಿಡಿದು ಜಗದೇವ ಮೊಲ್ಲೆ ಬೊಮ್ಮಣ್ಣಗಳು ಭೋ ಎಂದಬ್ಬರಿಸಿ ಪರವಾದಿ ಬಿಜ್ಜಳನಂ ಇರಿದು ಹರಳಯ್ಯ ಮಧುವಯ್ಯಗಳ ಕೊಂದ ಕೊಲೆಗೆ ಬಂದೆವೆಂದು ಅಬ್ಬರಿಸಿ ಸಾರಿ, ತಮ್ಮ ಪೆಸರಂ ಪೊಗಳೆ, ಬಿಜ್ಜಳರಾಯನಂ ಇರಿದು ಒಡಲಂ ಬಗಿದು ಮೈಗಾವಲ ವೀರಭಟರ ತಲೆಗಳಂ ಹೊಯಿದು ಚಂಡಾಡಲು

ಇತ್ತ ಮಡಿವಾಳಯ್ಯಗಳು ಬಂದು ಬೇಗ ಬೆನ್ನಹುಯ್ಯಲಂ ಬಂದು ಆ ವೇಳೆಯೊಳು ಜಗದೇವನೊಲ್ಲೆಬೊಮ್ಮಣ್ಣಗಳಿರಾ ಬಿಜ್ಜಳನ ಕೈ ಕೊಯಿ

# ಶಿವಾನುಭವ.

## ದ್ವೈಮಾಸಿಕವು.



ಸಂಪಾದಕ

**ರಾ|| ಸಾ|| ಫ. ಗು. ಹಳಕಟ್ಟಿ**

ಬಿ. ಎ. ಎಲ್. ಎಲ್. ಬಿ.



**ವಿಜಾಪುರ**

**ಸಂಪುಟ ೮  ಸಂಚಿಕೆ ೩**

**ಸಪ್ಟೆಂಬರ**

**೧೯೩೩**

ವಾ. ವರ್ಗಣಿ ೪-೪-೦ ]  [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

ೋಮೆಕಟ್ಟೆ ಕರಿನೃಪಭಲಿಂಗೇಂದ್ರ ನೀತಿಗಳೆದಿಹ ಜಗ



# ಸೋಮೇಕಟ್ಟೆ ಕರಿನೃಷಭೇಂದ್ರ ಕೈವಲ್ಯ ಪದಗಳು.

೧ ಉತ್ಸವವು ನಮಗೇತಕೋ। ನಮಗಿನ್ನು। ಹುಚ್ಚಾಗಿ ತೊರುತಿದೆ
ಇಚ್ಛೆಯಿಲ್ಲದ ಮನಕೆ ಉತ್ಸವವು ಬೇಕೆಂಬ
ಹುಚ್ಚಣ್ಣಗಳು ಕೇಳಿರೋ ॥ಪ॥

ಕಾಲು ಕೈ ಕಣ್ಣಿಲ್ಲವೋ। ನಮಗಿನ್ನು। ಮೂಗು ಕಿವಿ ಬಾಯಿಲ್ಲವೋ
ವಾಸನೆಯು ಎಂತೆಂಬ ಘಾಸಿ ನಮಗೇನಿಲ್ಲ
ಜೀವದಾಶ್ರಯವು ಇದುವೆ ॥೧॥

ತಪ್ಪು ಇದರೊಳಗಿಲ್ಲವೋ। ಇದ್ದಾಗ್ಯೂ ಒಪ್ಪೈಸಿಕೊಳಲೊಲ್ಲದೆ
ಇಪ್ಪ ಬೀದಿಗಳೊಳಗೆ ಮೆರೆಮೆರೆಸುವಾ ಪ್ರಾರ್ಥನೆಗೆ
ಒಪ್ಪಿಕೊಳ್ಳುವರದಾರೋ ॥೨॥

ಎಷ್ಟು ದಿನವಿಹುದು ಕಷ್ಟ ಭುವಿಯೊಳಗೆ।
ಎಷ್ಟು ದಿನವಿಹುದು ಅದೃಷ್ಟ।
ದಿಟ್ಟ ಸೋಮೇಕಟ್ಟೆ ಕರಿವೃಷಭಲಿಂಗೇಂದ್ರ।
ನಿನ್ನೊಳಿಟ್ಟುಕೊಳ್ಳೈ ತನುವನು ॥೩॥

---

೨ ಜೋ ಜೋ ಜೋ ಎಂದು ಜೋಗುಳ ಪಾಡಿರೆ
ಸತ್ಯ ಸೋಮೇಕಟ್ಟೆ ಕರ್ತೃ ಕರಿವೃಷಭನ ॥ ಜೋ ॥ ಪ ॥

ಚತುರ್ವಿಧ ಭಕ್ತಿಯೆಂಬ ಅತುಳ ಕಂಭದ ಮೇಲೆ
ವಿತರಣೆ ಎಂತೆಂಬ ಚದರ ತೊಲೆಯು ಹೂಡಿ

ಅತಿಶಯ[illegible]
ಮತಿಯ[illegible]

ಅ[illegible]
ಸ್ಥಿರವೆಂಬ ತೊಟ್ಟಿಲೊಳು ಬರುವ ಶಿಶುವಿಗೆ
ವರವಿವೇಕಗಳೆಂಬ ಹಾ[illegible]ಸಿ
ಚಿರತರ ಸುಖವೆಂಬ ಒ[illegible]ಗಳಿಟ್ಟು ॥೫॥

ಆದಿಯನಾದಿಯಿಂದ ಲತ್ತತ್ತಲ ನುಪಮ
ವಾದ ಶಿಶುವ ನೋಡಿ ನಲಿನಲಿದಾಡುತ
ಸಾಧು ಸಜ್ಜನರೆಲ್ಲ ನೆರೆದು ಕೊಂಡಾಡುತ
ಬೋಧಮಯನ ಕರಿವೃಷಭರಾಜೇಂದ್ರನ ॥೬॥

---

## ಜೋಗುಳ.

೩. ಜೋ ಯೆನ್ನಿರವ್ವಗಳಿರಾ ನೀವೀಗ ಜೋ ಯೆನ್ನಿರಕ್ಕಗಳಿರಾ।
ಜೋಯೆಂದು ಕೂಗಿರೆ ಜ್ಯೋತಿಸ್ವರೂಪನ ಜ್ಞಾನಶಕ್ತಿಯರು ನೀವು ॥ಪ॥

ಆನಂದಮಯನು ನೀನು ಸರ್ವರೊಳು ಓಲೈಸಿಕೊಳಲೊಲ್ಲದೆ।
ಹೀನ ನೆರೆಯೊಳು ನೀನು ಬರಬಹುದೆ ಎಂತೆಂದು ಹೊಕ್ಕುಳವ
ಕೊಯ್ಯಿರವ್ವ ॥೧॥

ಸಚ್ಚಿದಾನಂದ ನೀನು ಪ್ರಕೃತಿಯ ಇಚ್ಛೆಗೋಸುಗವಾಗಿಯೆ।
ಅಚ್ಯುತ್ತಿದಂದದಲಿ ಇಚ್ಛೆಯೊಳು ಬಂದುದೇ ತಪ್ಪೆಂದು ಬೆಚ್ಚಗೆಯು
ಮಾಡಿರವ್ವ ॥೨॥

ಹುಚ್ಚು ಮಾಯೆಯ ಸಂಗದಿ ಜಗವಿದುವೆ ಹುಚ್ಚಾಗಿ ಮುಳುಗಿ
ಇಹುದು।
ನೀ ಬೆಚ್ಚಿ ಬೆದರಲಿ ಬೇಡ ನಿನ್ನ ನೀ ತಿಳಿ ಯೆಂದು ಬೆಚ್ಚು ನೀರ್ಹಾಕಿರವ್ವ ॥೩

ಶ್ರೇಷ್ಠವಿದು ಬಂಗಾರವು ಟೆಂಕದಿಂ ನಷ್ಟವಾಗಿರುವುದೆಂದು।
ನೆಟ್ಟಗೆಯ ಮುರಿದು ತೂಪಿರಿದು ದೃಷ್ಟಿಯನಿಟ್ಟು ತಟ್ಟನೆ ॥೪॥

ಮಾತು ಮಾತ್ರದ ಶಿಶುವಿದು ಜಗಕೊಂದು ರೀತಿಯಾಗಿ ತೋರಿತಲ್ಲಾ।
ಪುನೀತ ಸೋಮೊಕಟ್ಟಿ ಕರಿವೃಷಭಲಿಂಗೇಂದ್ರ ನೀತಿಗಳಿದಿಹ ಜಗವನು ॥೫॥

---

೪. ದೂರಿ ದೂರಿಯ ದುರಿತನಾಶಯ।
ಬಾಲೇಂದುಧರ ಈಶ ಭವ ವಿನಾಶಯ ॥ಪ॥

ಎತ್ತಣ ಶಿಶುವಿದು ಎತ್ತ ಪೋಗುತಲಿದೆ
ಹೆತ್ತವಳ ಹೆಸರೇನು ವತ್ತೆ ತಾತನದಾರು
ಗೊತ್ತಿಲ್ಲ ಶಿಶುವಿದು ಅರ್ಥಿಯಿಂದಾಡುತಿದೆ ॥೧॥

ಆರು ಹುಲಿಯನುಂಗಿ ಆರೆರಡಾನೆಯ ಪಿಂಗಿ
ಮೂರು ಗ್ರಾಮವ ಸುಟ್ಟು ಮೂಲಿಗನಾಗಿದೆ।
ಪಂಚಚೈವರ ಕೊಂದು ಸಂಚಿತ ಮೂರ ಮೀರಿ
ಪಂಚಮುಖ ಧ್ಯಾನ ನಿರಂತರದೊಳಗಿದೆ ॥೨॥

ದಕ್ಷಿಣ ಕಾಶಿಯೆಂಬ ಮುಕ್ಷುಕ ಪುರಿಯೊಳು
ಈಕ್ಷಿಸಿ ಭಕ್ತರಿಗೆ ಇಷ್ಟಾರ್ಥ ಮೋಕ್ಷವಿತ್ತು
ಶ್ರೇಷ್ಠ ಸೋಮೋಕಟ್ಟಿ ಕರಿವೃಷಭೇಂದ್ರ ಶಿಶು
ದೃಷ್ಟಿ ಅಂತರವಿಟ್ಟು ನಲಿನಲಿದಾಡುತ ॥೩॥

---

೫. ನಿದ್ರೆಯು ಮಾಡು ನೀ ಭದ್ರಮಂಟಪದೊಳು
ಕ್ಷುದ್ರ ಗುಣಗಳೇನು ತೋರದಂತೆ ॥ಪ॥

ಸ್ಥೂಲ ತನುವಿನ ಜಾಲವ ಕಳೆದು ನೀ
ಆಲಿಗಳೆರಡವೆ ಅಳಚದಂತೆ
ಮೂಲಸ್ಥಾನದ ತುದಿಯೊಳು ತೋರುತಿಹ
ಕಳೆ ಭೇದಿಸಿ ನೋಡಿ ನೀ ಬೆರಗಾಗುತ ॥೧॥

ನಾಸಿಕಾಗ್ರದ ದೃಷ್ಟಿ ಸೂಸಲೀಯದೆ ಮನ
ವಾಸನೆಗಳು ಏನೂ ತೋರದಂತೆ

ಸಾಸಿರ ದಳಪೀಠ ವಾಸವಾಗಿರುತಿಹ
ಭಾಸುರ ಕಳೆಯೊಳು ಲೇಸಿನಿಂದ

ತಳ ಮೇಲು ಚಕ್ರದಿಂದೊಳಹೊರಗಾದ್ಯಂತ
ಥಳಥಳಿಸುವ ಕಳೆ ಬೆಳಗಿನೊಳು
ಹೊಳೆವ ಸೋಮೇಕಟ್ಟಿ ತಿಳಿವೆ ಕರಿವೃಷಭನೆಂಬ
ಉಳಿಮೆಯು ನೊಳಗೊಂಡ ಇರವಿನೊಳು ॥೩॥

---

## ಉದಯರಾಗ.

೬. ಏಳು ಕರಿವೃಷಭೇಂದ್ರ ಏಳು ಯತಿಕುಲಚಂದ್ರ
ಭಾಳಾಕ್ಷ ಶಿವಶರಣರೋಲೈಸಿ ನಿಂದಿಹರು ॥ಪ॥

ದಳನಾಲ್ಕು ದಳವಾರು ದಳಹತ್ತು ಹನ್ನೆರಡು
ದಳ ಹದಿನಾರು ದ್ವಿದಳದೊಳಗಾಡುತ ॥೧॥

ಸಾಸಿರ ದಳ ಪೀಠವಾಸ ತೊಟ್ಟಿಲೊಳು
ಭಾಸುರ ಬೆಳಕನು ಲೇಸಿನಿಂ ನೋಡುತ ॥೨॥

ಮೂರು ದಳದ ಪೀಠ ಮೀರಿ ಪಶ್ಚಿಮದೊಳು
ಸಾರತರದ ಸುಖವ ಸೂರೆಗೊಂಡಾಡುತ ॥೩॥

ನವಚಕ್ರ ನವಲಿಂಗ ನವಶಕ್ತಿ ನವಭಕ್ತಿ
ನವವಿಧ ಕಳೆಯೊಳು ನಲಿನಲಿದಾಡುತ ॥೪॥

ಆದಿಮಧ್ಯಾವಸಾನ ಭೇದರಹಿತನು ನೀ
ನಾದ ಸೋಮೆಕಟ್ಟಿ ಅನಾದಿ ಕರಿವೃಷಭೇಂದ್ರ ॥೫॥

---

೭. ಲಹರಿಗೊಂಡಿದೆ ಮನವು ಐವೊಗನ ಧ್ಯಾನದೊಳು
ಸಹಿ ಸಹಿ ಸಹಿ ಎಂಬ ಸಹಜಾನಂದದೊಳು ॥ಪ॥

ಎಷ್ಟು ಜನ್ಮದ ಜಾಡ್ಯ ಕಷ್ಟ ಹರಿಯಿತು ಇಲ್ಲಿ
ಇನ್ನೆಷ್ಟು ಜನ್ಮದ ಸುಕೃತ ಗಟ್ಟ್ಯಯ್ತೊ ಶಿವನೆ
ಸತಿಯು ಮರೆದಿಹ ಪುರುಷನತಿಬೇಗ ಬಂದಂತೆ
ಗತಿಯು ತಪ್ಪಿದ ನರನು ಪಥವ ಕಂಡಂತೆ ॥೧॥

ಅರಿವು ಮರವೆಗೆ ಸಾಕ್ಷಿ ಇರುವ ವಸ್ತುವಿನೊಳಗೆ
ಪರವಶಾನಂದಪರನಾಗಿ ನಿಂದು
ಚಿರತರಾನಂದ ಸುಖರಸದೊಳಗೆ ಮುಳುಗುತ್ತ
ಪರಮಾನಂದ ಪೂರ್ಣನಾಗಿ ॥೨॥

ಅರಿವು ಮರವೆಗೆ ಆದಿ ಇರವು ತಾನೆ ತನ್ನ
ಕುರುಹನರಿಯದೆ ಪರನ ಮರೆದು
ಇರುವ ಸೋಮೆಕಟ್ಟಿ ಕರಿವೃಷಭಲಿಂಗ
ದಿರವೆ ತಾನಾಗಿ ಈ ಪರಿಯೊಳಿರುತ ॥೩॥

---

ಲ ಯಾಕೆ ಮರೆದಿಹೆ ಮನವೆ ನೀನಾರು ಪೆಸರೇನು
ರೂಪಿಸಿದ ಠಾವೆಲ್ಲಿ ನೀ ಲಯುಪುದೆಲ್ಲಿ ॥ಪ॥

ಪಿತ್ತ ಹತ್ತಿದ ನರನು ಮತ್ತೆ ಈ ಮನೆಯೆಲ್ಲ
ಸುತ್ತ ತಿರುಗುತಿದೆ ಎಂತೆಂಬೋಲು
ಗೊತ್ತು ತಿಳಿಯದೆ ನೀನು ಮರ್ತ್ಯಲೋಕವು ಎಂಬ
ಕತ್ತಲೆಯೆ ನಾನೆಂಬೆ ನಿರರ್ಥ ಮನವೆ ॥೧॥

ತೃಷೆಯಾದ ಮನುಜ ತಾ ಹಸಿದು ಬಿಸಿಲೊಳು ಬಂದು
ಎಸೆವ ಚೌಳು ಭೂಮಿಯೊಳು ಜಲವಿರ್ಪುದೆಂದು
ದೆಸೆದೆಸೆಯು ತಿರುಗಿ ತಾ ಬಸವಳಿದು ಬಿದ್ದಂತೆ
ಹಸನಾಯಿತಲ್ಲ ನೀ ಪುಸಿಯು ಪಿಡಿದಿಹುದು ॥೨॥

ಎಲ್ಲ ಮರವೆಯು ಬಿಟ್ಟು ನಿನ್ನ ನಿಜವಳವಟ್ಟು
ಘುಲ್ಲ ಶರನನು ಸುಟ್ಟು ಭಸಿತವಿಟ್ಟು

ಬಲ್ಲ ಸೋಮೇಕಟ್ಟಿ ಕರಿವೃಷಭಲಿಂಗೇಂದ್ರ
ನಲ್ಲದೇ ನಿಲ್ಲವೆನೆ ಮನ ಮುಕ್ತಿವಟ್ಟು ॥೩॥

---

೯. ಸುಖವುಗೊಂಡಿದೆ ಮನವು ನಿಖಿಳ ಕೃತಿಗಳ ಮರೆದು
ಅಕಳಂಕ ಪರಬ್ರಹ್ಮದರಿವಿನೊಳಗೆ ॥ಪ॥

ಹಸಿದ ಪಶು ತಾ ಪೋಗಿ ಎಸೆವ ಗರುಕೆಯ ಮೇದು
ಹೊಸ ಪರಿಯ ಸುಖದಲ್ಲಿ ಮುಳುಗಿ ಮಲಗಿ
ಪಸರಿಸುತ ಮೆಲುಕಿಡುತ ಮುಂದೆಸೆಯು ಕಾಣದೆ ಇರುವ
ಪಶುವಿನಂದದೊಳು ಮನ ನಸಿದು ಸುಖದೊಳಗೆ ॥೧॥

ನಿದ್ರೆಯೊಳಗಿಹ ಮನುಜ ಎದ್ದು ಉಪಾಧಿಯೊಳು ತನ್ನನುವ
ತಿದ್ದಿಕೊಳ್ಳದಲೆ ತಾನಿರುವೆಡೆಯೊಳು
ಅದ್ದಿತೋರುವ ಸುಖದ ಮುದ್ದೆಯಾಗಿರುವಂತೆ
ಬದ್ಧವಾಗಿ ಮನವು ಬ್ರಹ್ಮಸುಖದಿ ॥೨॥

ಇಷ್ಟವಾಗಿಹ ವಸ್ತು ನೆಟ್ಟಗೆಯು ತಾನಿರ್ದ
ಬಟ್ಟೆಯನೆ ಪಿಡಿದು ತನ್ನಲ್ಲಿ ಗೃದಿದೊಲು
ನೆಟ್ಟಗೆಯು ಈ ಮನವು ದೃಷ್ಟಿಯನು ಚದರಿಸದೆ
ಮುಟ್ಟಿ ಸೋಮೆಕಟ್ಟಿ ಕರಿವೃಷಭಲಿಂಗದೊಳು ॥೩॥

---

೧೦. ನೋಡಿ ತಿಳಿವುದು ನೀನೆ ನಿಜವೆಂದು ತತ್ವಗೂಢದಿ ನಿಂದ
ಸಾಕ್ಷಿಕನೆಂದು ।
ಪಂಚವಿಂಶತಿ ತತ್ವಗಳಿವು ಎಲ್ಲಾ ನನ್ನ ಅಂಶದಿ ಆದುವು ಅವು ಎಲ್ಲಾ ॥ಪ॥

ತ್ರಿಂಶತಿ ಕೋಟಿದೇವತೆಯೆಲ್ಲಾ ಪರಾಂಶದಿ ಆದುವು ತಾವೆಲ್ಲಾ।
ಹಂಸೋ ಹಂಸೋ ಹಂಸೆಂದು ಜೀವಾಂಶೆಯು ಮೀರಿದ ನಿಜವೆಂದು ॥೧॥

ತೋರುವ ಜಗವದು ಮೃಷೆ ಯೆಂದು ಈ ಭಾರಕತ್ವವು ತನಗೆ ಪುಸಿ ಯೆಂದು।
ತೋರುವ ಕಲ್ಪಿತ ಇದು ಎಂದು ನಾ ಮೀರಿದ ವಸ್ತುವು ದಿಟವೆಂದು ॥೨।

ಸೋಮೆಕಟ್ಟೆಯ ಕರಿವೃಷಭನೆಂದು। ಭೂಮಿಯೊಳವತಾರದಂತೆ ಕಂಡು।
ಸಾಮಿಪ್ಯ ಫಲಗಳ ಮೀರಿ ನಿಂದು ಪ್ರೇಮಾಸ್ತಿ ಭಾತಿಗತೀತವೆಂದು ॥೨॥

---

೧೧. ನೋಡೋಣ ಬಾರೆ ಸಖಿ ಪ್ರಾಣಕಾಂತನ। ಕೂಡೋಣ ಬಾರೆ ಕರಿವೃಷಭೇಂದ್ರನ। ಮುಕ್ತಿಸಾಂದ್ರನ ಯತಿ ಕುಲಚಂದ್ರನ ॥ಪ॥

ಆಗಮಾತೀತನಭೇದ್ಯನ ನಿಗಮಾಗಮಂಗಳಿಗೆ ಸಿಲುಕದಾತನ।
ಭೋಗರಹಿತಸ್ವಪ್ರಕಾಶನ ಜನನದಾಗುಹೋಗುಗಳಿಲ್ಲದಾತನ ॥೧॥

ಮೂರು ಮೂರ್ತಿಗೆ ಮೂಲದಾತನ ಮೂರಾರು ಲಿಂಗದಿ ಬೆರೆದಾತನ।
ವಾರಿಜಭವತಾತ ಪ್ರೀತನ ಗುರು ಈರೇಳು ಲೋಕಕತೀತನ ॥೨॥

ನಾಮರೂಪಗಳಿಲ್ಲದಾತನ ಪ್ರೇಮಾಸ್ತಿ ಭಾತಿಗತೀತನ
ಸಾಮಗಾನ ಸಂಪ್ರೀತನ ಶ್ರೀಮತ್ಸೋಮೆಕಟ್ಟೆ ಕರಿವೃಷಭೇಂದ್ರನ ॥೩॥

---

೧೨. ಕಾಣದಿರಲಾರೆನೆ, ಶ್ರೀಗುರುವನು ಕಾಣದಿರಲಾರೆನೆ
ಕಾಣದೆ ನಿಲಲಾರೆ ಪ್ರಾಣಕಾಂತನ ನೀರೆ
ಜಾಣತನದಿ ಫಣಿವೇಣಿ ನೀ ಕರೆತಾರೆ ॥ಪ॥

ಮಾಯ ಸಂಸಾರವೆಂಬ ಮೋಹಕೆ ಸಿಲ್ಕಿ ಆಯಾಸಪಡುತಲಿರೆ
ಕಾಯಜನನು ಸುಟ್ಟು ಬೂದಿಯ ಫಣೆಗಿಟ್ಟ
ಮಾಯರಹಿತ ಗುರುರಾಯನ ಪಾದವ ॥೧॥

ಅಂತರಂಗದಿ ಕರೆದು ಯನ್ನೊಳಗಿರ್ಪ ಚಿಂತೆ ಯೆಲ್ಲವ ಪರಿದು।
ಸಂತೋಷದಿಂದೆನ್ನ ತನುಮನದೊಳು
ನಿಂತು ಸೂರೆಯಗೊಂಡ ಕಾಂತನ ಪಾದವ ॥೨॥

ಕರುಣಾಮೃತ ಹಸ್ತವ ಶಿರದೊಳಿಟ್ಟು ಪರಮಪಂಚಾಕ್ಷರಿಯ।
ಒರೆದೆನ್ನ ಕರ್ಣದಿ ಪರಮ ಲಿಂಗವ ಯನ್ನ
ಕರದೊಳಗಿಂಬಿಟ್ಟ ಗುರುವಿನ ಪಾದವ ॥೩॥

ಹರುಷವೆಂಬ ತೊಡೆಯ ಮೇಲೆ ಕೂಡ್ರಿಸಿ ಸರಸವಾಡುತಲೆನ್ನಯ
ವರ ಜಿಹ್ವೆ ತುದಿಯೊಳಗದರ ಪಾನವ ಹೂಡಿ
ನೆರದೇಕ ಮಯನಾದ ಗುರುವಿನ ಪಾದವ ॥೪॥

ವರನಾದವೆಂಬ ಹಾಲು ಅದಕೆ ತಕ್ಕ ಪರಮ ಚಿತ್ಕಳೆ ಶರ್ಕರೆ
ವರಬಿಂದು ರುಚಿ ಎಂಬ ಹಣ್ಣುಗಳನು ಹೂಡಿ
ಎರೆದೆನ್ನ ಜಿಹ್ವೆಗೆ ಕರೆದು ನೆರೆದು ಪೋಷವ ॥೫॥

ಮರವೆ ಎಂಬುವ ಸೀರೆಯ ಸೆಳೆದು ನಿಜವರಿವೆಂಬ ಅಂಬರವ
ಸರಸದಿಂದುಡಿಸಿ ಪ್ರೇಮದಡಹಿ ಕರೆದು ಯೆನ್ನ
ಉರವನಪ್ಪಿದ ಗುರುವರನ ಬೇಗದಿ ನೀರೆ ॥೬॥

ಭಾವಾಭಾವವ ನೆಲ್ಲವ ತೀವಿದ ಗುರುದೇವ ಸೋಮೊಕಟ್ಟಿಯ
ರಾಯ ಕರಿಬಸವಗುಪಾಯಗಳನು ಹೇಳಿ
ಭಾವಜ ವೈರಿಯ ನೀರೆ ನೀ ಕರತಾರೆ ॥೭॥

---

೧೩. ಧ್ಯಾನವಮಾಡು ನೀನು। ಮಾನಸ ಧ್ಯಾನವಮಾಡು ನೀನು
ಸ್ವಾನುಭವ ಸುಜ್ಞಾನ ನಿರಂತರ ಭಾನುಪ್ರಕಾಶನ ॥ಪ॥

ಅಂಗದ ಗುಣ ಹಿಂಗಿ। ಲಿಂಗದ ಸಂಗದಿ ಮನ ನುಂಗಿ
ಕಂಗಳು ಮೂರುಳ್ಳ ಮಂಗಳ ಮಹಿಮನ
ಗಂಗೆಯ ಧರಿಸಿದ ಘನ ಮುನಿ ವಂದ್ಯನ ॥೧॥

ಅಂತರಂಗದೊಳಗೆ । ಅನುದಿನ ಸಂತತ ನಿನ್ನೊಳಗೆ
ಚಿಂತೆಯು ನೀಗಿ ನಿರಂತರ ಬ್ರಹ್ಮ
ಚಿಂತೆಯೊಳನುದಿನ ಸಂತತವಿರುತಿರು ॥೨॥

ನಾಚಿಕಿಲ್ಲವೇನೋ । ಜನ್ಮದ ರೋಸಿಕಿಲ್ಲವೇನೋ
ಈಶನ ಧ್ಯಾನಕೆ ಬೇಸರ ಮಾಡದೆ
ಭಾಸುರ ಲಿಂಗದ ವಾಸವ ಮಾಡುತ ॥೩॥

ಇನ್ನಾದರು ನಿನ್ನ । ನಾನಾರೆನ್ನುತ ಸಂಪನ್ನ
ಚೆನ್ನಾಗಿ ಗುರುಮುಖದಿಂದ ತಿಳಿದು
ನೀ ನಿನ್ನನೆ ನಿಜವೆಂದೆನ್ನುತ ಮನದೊಳು ॥೪॥

ಧರೆಯೊಳಧಿಕವಾದ । ಮೂರುಸಾವಿರದೊಳಗಾದ
ಪರಮ ಸೋಮೆಕಟ್ಟಿ ಕರಿವೃಷಭಾರ್ಯನ
ಚರಣಕಮಲವನ್ನು ಮರೆಯದೆ ನಿನ್ನೊಳು ॥೫॥

---

## ಪುಷ್ಪಾಂಜಲಿ.

೧೪. ಪುಷ್ಪದ ವೃಷ್ಟಿಕರೆವೆನೋ ಭಾವನಿಷ್ಠೆಯೊಳಿರುವಂಥ
ಶ್ರೀಷ್ಠರ ಪಾದಕ್ಕೆ ಪುಷ್ಪದ ವೃಷ್ಟಿ ಕರೆವೆನೋ ॥ಪ॥

ನಾಲ್ಕು ದಳದ ಚೌಕ ಮಧ್ಯ ನಕಾರದಿ। ಭೇದಿಸಿ ಇರುವಂಥ ಭಕ್ತನೊಳು
ಪೀತವರ್ಣದ ಪುಷ್ಪವ ಬ್ರಹ್ಮ ಪಿಡಿದು ಬೇಕಾಗಿ ಚೆಲ್ಲಿದ
ಆಧಾರದೊಳು ನಿಂದು ॥೧॥

ಆರೆಸಳಿನ ಮಧ್ಯ ಮಕಾರದಿ । ಜೋಕೆಯೊಳಿರುವ ಮಹೇಶನೊಳು
ಶ್ವೇತ ವರ್ಣದ ಪುಷ್ಪ ವಿಷ್ಣು ಪಿಡಿದು ಪ್ರೀತಿಯಿಂ ಚೆಲ್ಲಿದ
ಸ್ವಾಧಿಷ್ಠದೊಳು ನಿಂದು ॥೨॥

ದಶದಳಕಮಲದವಶದಶಿಕಾರದಿ। ಮಿಸುನಿಯಂತಿರುವ ಪ್ರಸಾದಿಯೊಳು
ಹರೀತ ಪುಷ್ಪದ ರುದ್ರ ಪಿಡಿದು ಶೀಘ್ರದಿ ಚೆಲ್ಲಿದ
ಮಣಿಪೂರಕದಿ ನಿಂದು ॥೩॥

ಹತ್ತೆರಡೆಸಳೊಳು ಒತ್ತಿ ವಕಾರವ। ಅರ್ಥಿಯಿಂ ಪ್ರಾಣಲಿಂಗಿಯೊಳು
ಈಶ್ವರ ಕರದೊಳು ಮೂಂಜಿಷ್ಟವ ಪಿಡಿದು
ಅನಾಹತ ಚಕ್ರದ ಚರಲಿಂಗಮೂರ್ತಿಗೆ ॥೪॥

ಹದಿನಾರುದಳಮಧ್ಯ ವಿಧಿಸಿ ಯಕಾರವ ಪರಮಶ್ರೀಶರಣಸಹಿತ ನಿಂದು
ಕಪೋತ ಪುಷ್ಪವ ಸದಾಶಿವನು ಬೇಕಾಗಿ ಕಳಿದನು
ವಿಶುದ್ಧಿಯೊಳು ನಿಂದು ॥೫॥

ದ್ವಿದಳಕಮಲಮಧ್ಯ ಝೇಂಕಾರವ ಹರುಷದಿಂದೈಕ್ಯಸಹಿತನಿಂದು
ಷಡ್ವಿಧ ಪುಷ್ಪವ ಮಹಾಲಿಂಗಕ್ಕೆ
ಆಜ್ಞಾಚಕ್ರದಿ ನಿಂದು ॥೬॥

ಆರು ಲಿಂಗಂಗಳ ಮೂರು ಪಾಲನೆ ಮಾಡಿ
ಗುರುಲಿಂಗಜಂಗಮದೊಳು ತಿಳಿದು
ಪರಮ ಸೋಮೋಕಟ್ಟಿ ರುದ್ರರಾಚಯ್ಯಗೆ
ಅರ್ಥಿಯಿಂ ಭಕ್ತರೆಲ್ಲರು ನಿಂದು ॥೭॥

---

೧೫. ಕಾಂತೆ ಪೋಗಿ ಕರೆದು ತಾರೆ ಕಾಂತ ಕರಿವೃಷಭೇಂದ್ರನ
ಮಮ ಚಿಂತಾ ಮುಕ್ತಿ ಕಾಂತನ। ಏಕಾಂತ ಕರಿವೃಷಭೇಂದ್ರನ ॥ಪ॥

ರಿಪುಗಳೆಲ್ಲರ ಗೆದ್ದು ತಪದೊಳಪರಿಮಿತ ಸ್ವರೂಪನ
ಗುಪಿತ ಮುಕ್ತಾಂಗನೆಯ ಕೂಡಿ ಸಫಲ ಬ್ರಹ್ಮ ಸ್ವರೂಪನ ॥೧॥

ಹೃದಯ ಮಣಿ ಮಂಚದೊಳು ಕುಳಿತು ಚದುರೆ ಬಾರೆಂದು ಕರೆದನ
ಒದಗಿ ಬಂದು ಕುಚವ ಪಿಡಿದು ಅಧರಾಮೃತವನು ಸವಿದನ ॥೨॥

ಷಣ್ಮುಖಿಯು ಶಾಂಭವಿಯು ಖೇಚರಿ। ಸನ್ನುತದಿ ಗುರು ತೋರಿದ
ಚಿನ್ಮಯಾತ್ಮಕ ಸನ್ನೆವರಸುತ ಉನ್ಮನೆಯೊಳೋಲಾಡಿದ ॥೩॥

ಭೇದಿಸೆನ್ನವಗುಣಗಳಳಿದು। ಬಾಧೆಯೆಲ್ಲವ ಬಿಡಿಸಿದ
ಓದು ಶಿವನ ನಾಮವೆಂದು ಬೋಧರೂಪನು ಪೇಳಿದ ॥೪॥

ದ್ರವಿಸುವಂಥ ಮನಕೆ ಬುದ್ಧಿಯು ಧರ್ಮರೂಪನು ಪೇಳಿದ
ಚಿನುಮಯಾತ್ಮಕ ಚಿತ್ತು ಆಗಿ ಘನವ ಎನ್ನೊಳು ತೋರಿದ ॥೫॥

ಸ್ವಾನುಭವದ ಸುಖವ ತೋರೆನ್ನ ಸಸ್ವರೂಪಳ ಮಾಡಿದ
ತಾನು ತಾನು ತಾನೆಯಾಗೆ ನೀನೆ ನಾನೆಂದರುಪಿದ ॥೬॥

ಮೀರಿದಾನಂದಾಬ್ಧಿ ಸುಧೆಯೊಳು ನೀರೆ ಮುಳುಗೆಂದರುಹಿದ
ಕಾರಣಿಕದ ಗುರುವು ತನ್ನಯ ಕರುಣ ರಸದೊಳು ಕೂಡಿದ ॥೭॥

ನಷ್ಟ ಮಾಡಿದ ಅಷ್ಟ ಮದಗಳ ದುಷ್ಟರೆದೆಯನು ಮೆಟ್ಟಿದ
ಸೃಷ್ಟಿಗಧಿಕ ಸೋಮೆಕಟ್ಟೆ ಪಟ್ಟದ ಕರಿವೃಷಭನ ॥೮॥

---

೧೬. ಮಂಗಳಂ ಮಂಗಳಂ ಮದ್ಗುರು ಮೂರ್ತಿ ಮಂಗಳಂ ಮಂಗಳಂ
ಮಂಗಳಂ ಮಹಿಮಾತ್ಮ ಲಿಂಗ ಸನ್ಮುನಿ ಸಂಗ
ಶೃಂಗ ರಂಗ ವಿರಹಿತ ಆನಂದ ॥ಪ॥

ಶಿವರೂಪ ಶಿವಲೇಪ ಶಿವಪೂಜ ನಿಷ್ಪಂತೆ
ಪ್ರವಿಮಲ ರೂಪ ಪ್ರಕಾಶತೆ ಲಸತೆ
ಅವಿರಳ ಜ್ಯೋತಿ ನಿರಾಕಾರಮಯ ಶಿವ
ಭವರಹಿತಾಂಶು ಸುಧಾಂಶುತೆ ಸುಮನಂ ॥೧॥

ಚಾರು ನಿರಾಕಾರ ನಾಕರ ವಂದಿತ
ಸಾರಸದಾರ ಸಮುದಾರ ಧೀರಂ
ಪಾರಾವಾರ ಗಂಭೀರ ಸನ್ಮುನಿಗಣ
ಕಾರಣ ಪುರುಷ ನಿದಾನ ಸಂಧಾನಂ ॥೨॥

ಶರಣು ಜಂಗಮ ಲಿಂಗ ಶರಣು ಸದ್ಭಾವಾಂಗ
ಶರಣು ವಿಷಕಂಠ ಕವಿಮನಾಬ್ಜಭೃಂಗ
ಶರಣು ಕರಿವೃಷಭಾರ್ಯ ಷಟ್ಸ್ಥಲದೀಶ್ವರ
ಪರಮ ಸೋಮೆಕಟ್ಟೆ ವರದಗ್ರಗಣ್ಯಂ ॥೩॥

---

೧೭ ಮುನ್ನ ನಾನೇನು ಸುಕೃತವ ಮಾಡಿದ್ದೆನು
ಚನ್ನಕರಿಬಸವ ದೇಶಿಕ ಬಂದ ಮನೆಗೆ ॥ಪ॥

ಈಡ ಪಿಂಗಳವೆಂಬ ಜೋಡು ಪಾವುಗೆ ಮೆಟ್ಟಿ
ನಾಡೊಳಗೆಲ್ಲಾ ಸಂಚಾರ ಮಾಡುತಲಿ
ಬೇಡಿದ ಭಕ್ತರ್ಗೆ ನೀಡುತ ಕರುಣವ
ರೂಢಿಗಧಿಕವಾದ ಗುರು ಬಂದ ಮನೆಗೆ ॥೧॥

ಜ್ಞಾನವೆಂಬುವ ದಂಡ ನೇಮವೆಂಬುವ ಪಾತ್ರೆ
ಸ್ವಾನುಭವದ ಕಾವಿಯುಂಬರವ ಪೊದೆದು
ತಾನು ತನ್ನೊಳಗೆ ವಿನೋದದಿಂದಾಡುತ
ಭಾವ ಭಜಕರ ಬಾಂಧವ ಬಂದ ಮನೆಗೆ ॥೨॥

ತನುಲಿಂಗವಳಿದು ತಾ ಘನಲಿಂಗ ಕಳೆಯನೆ
ವಿನಯದಿಂ ತೋಳಿಗಾಧಾರ ಮಾಡಿ ಧರಿಸಿ
ಅಂಗವೆ ಗುರುವಿಷ್ಟಲಿಂಗವಧರಿಸಿ
ಜಂಗಮ ರೂಪಿನ ಲಿಂಗ ಬಂದ ಮನೆಗೆ ॥೩॥

ಅನುಪಮ ಚಿತ್ತ ಚಿನುಮಯ ಭೂತಿಯ
ವಿನಯದಿಂದಂಗದೊಳನುದಿನ ಧರಿಸಿ
ಪರತತ್ವಮಯನಾದ ಪರಲೋಕದರಸಾಗಿ
ಸ್ಥಿರ ಮುಕ್ತಿ ನೆಲೆಯಾಗಿ ಪರವೇ ತಾನಾಗಿ ॥೪॥

ಬಿಂದುವೆ ರೂಪಾದ ಆನಂದ ರುದ್ರಾಕ್ಷಿಯ
ಚಂದದಿಂದಂಗ ಮುಖಂಗಳೋಳ್ ಧರಿಸಿ
ಇಂದು ಈ ಜಗದೊಳು ನಿಂದು ಚರಿಸಾಡುತ
ಬಂದ ಎಮ್ಮಯ ಗುರು ತಂದೆ ನಮ್ಮ ಮನೆಗೆ ॥೫॥

ಕರುಣಾರಸವೇ ತೀರ್ಥ ಪರವೆಂಬ ಪ್ರಸಾದ
ನಿರುತ ಪಂಚಾಕ್ಷರಿ ಯಿರವೆ ತಾನಾಗಿ
ಧರಣಿಯೊಳಿರುವಂಥ ಶರಣ ಜನಂಗಳ
ಪೊರೆದು ರಕ್ಷಿಸ ಶ್ರೀ ಗುರು ಬಂದ ಮನೆಗೆ ॥೬॥

ಪರಿಪೂರ್ಣಮಯನಾಗಿ ಪರಬ್ರಹ್ಮದಿರವಾಗಿ
ಸ್ಥಿರ ಮುಕ್ತಿ ನೆಲೆಯಾಗಿ ಪರವೇ ತಾನಾಗಿ
ಪರಮ ಸೋಮೋಕಟ್ಟಿ ಕರಿವೃಷಭಾರ್ಯ
ತಾ ಪೊರೆದು ರಕ್ಷಿಸುವ ಶ್ರೀ ಗುರು ಬಂದ ಮನೆಗೆ ||೭||

---

೧೮. ಸಚ್ಚಿದಾನಂದದೊಳ್ ಸದಾ ಬೆರೆಯುವ| ವಿಧವ ತಿಳಿಯದೊಡೆ
ಒದವಿದ ಯೌವನ ವಿಧವೆಗೆ ಆದರೆ ಅದರಂತಿಹುದು ||ಪ||

ಎಷ್ಟು ಓದಿದರೇನು ಶಾಸ್ತ್ರದ ಗುಟ್ಟು ತಿಳಿಯದಿರೆ
ಕಷ್ಟವಲ್ಲದೆ ಪರಿಭವ ಕೆಡಿಸುವ ಎಷ್ಟು ಮಾತ್ರವಿಲ್ಲ ||೧||

ಮುದ್ರೆ ಮೂರನು ಪಿಡಿದು ನವದ್ವಾರವ ಭದ್ರಮಾಡಿದರಿಲ್ಲ|
ಸಿದ್ಧದಿ ಯಮ ಮೊದಲಾದಷ್ಟಾಂಗಯೋಗ ನಿದ್ರೆ ಮಾಡಿದರಿಲ್ಲ ||೨||

ದೇಶ ದೇಶವ ತಿರುಗಿ ಕಾಶೀವಾಸ ಮಾಡಿದರಿಲ್ಲ|
ಬೇಸರವಿಲ್ಲದೆ ನೆಲ ಬಿಲಸಮಾಧಿಯೊಳುಪವಾಸ ಮಾಡಿದರಿಲ್ಲ ||೩||

ಇಂದೇ ಸುಜನ್ಮದ ಸುಕೃತದ ಬೆಳಸು ರಾಶಿಯಾಗಬೇಕು|
ಭಾಸುರ ಗುರುವಿನ ಕರುಣ ಕಟಾಕ್ಷವು ಈಸು ಮಾಡಬೇಕು ||೪||

ದಿಟ್ಟ ಸೋಮೋಕಟ್ಟಿ ಕರಿವೃಷಭಾರ್ಯನ|
ದೃಷ್ಟಿ ಪಡೆಯಬೇಕು ||೫||

---

೧೯. ಜ್ಯೋತಿ ಬೆಳಗುತಿದೆ ಜ್ಯೋತಿ| ಅತ್ಯತಿಷ್ಠತಿದ್ವಾದಶಾಂಗು
ಲದಿಸ ಭಾತಿ| ಜ್ಯೋತಿ ಬೆಳಗುತಿದೆ ||ಪ||

ತಾಲು ಮೂಲ ಫಣೆಯಲ್ಲಿ| ತತುನೀಲ ತೋಯದ ಮಧ್ಯದಲ್ಲಿ
ಬಾಲಾರ್ಕಕಳೆ ಬೆಳಕಲ್ಲಿ| ತ್ವಂ ಮೂಲ ಜ್ಯೋತಿಯೋಳ್ ನೀ ಬೆರೆದಲ್ಲಿ||೧||

ಇಂದ್ರಿಯ ಪ್ರದಾನದಲ್ಲಿ ಅಸಿ ಚಂದ್ರನ ಕಳೆ ಕಪ್ಪಿನಲ್ಲಿ।
ರಂಧ್ರಮಾಣಿಕ ಮುತ್ತಿನಲ್ಲಿ ನವರಂಧ್ರ ಜ್ಯೋತಿ ಮಾದಿದಿಲ್ಲಿ ॥೨॥
ಕುಂಡಲಿಯ ನಾಳದಲಿ ತುದಿ ಪುಂಡರೀಕದ ಪತ್ರದಲ್ಲಿ।
ದಂಡಿಕೋಲಿನ ನಾಳದಲ್ಲಿ ಕರಿವೃಷಭಿರ್ದನು ಆಪಜ್ಯೋತಿಯಲ್ಲಿ ॥೩॥

---

೨೦. ಮರೆಯ ಬೇಡವೆ ರಮಣಿ ಗುರುವಿನರಿವನು
ಮರೆಯಬೇಡ ಗುರುವಿನರಿವ
ಕರಿವೃಷಭರಾಜನೆನಗೆ ವರ ಕುರುಹ ತಿಳುಹಿದ ನೀನು
ಸರಿಯಾಳಾಗು ಸುಗುಣೆ ಎಂದ ॥ಪ॥

ಸ್ವಾಮಿ ಕಂಡೆನು ಎನ್ನ ಸಲಹು ಎಂದೆನು
ಸ್ವಾನುಭವದ ಸುಖವ ತೋರಿ ಸನ್ನೆವೇಸಿ ಪೋದ ಸಖಿಯೆ ॥೧॥

ಹಂಸರೂಪನು ಎನ್ನ ಸಂಶಯವಳಿದನು
ವಂಶ ವಂಶ ಎತ್ತಿ ಬಂದ ಸಂಸಾರವನು ಕೆಡಿಸಿದವನ ॥೨॥

ಸತ್ತು ಚಿತ್ತು ನಿತ್ಯಾನಂದವು ಗೊತ್ತ ತೋರಿಯನ್ನತನ್ನ
ಭೃತ್ಯಳನ್ನು ಮಾಡಿಕೊಂಡ ಕರ್ತೃ ಸೋಮೆಕಟ್ಟಿಗುರುವ
ನಿತ್ಯದಲ್ಲಿ ಪಾಡು ಕಂಡೆಯ ॥೩॥

---

೨೧. ನಮೋ ನಮೋಯೆನುತಲಿ ನಮಿಸುತಲಿರ್ಪೆನು ಶಿವಶರಣ
ಪಾದಾಂಬುಜಕೆ ॥ಪ॥

ಕುರುವಿನುಪಾಧಿಯ ಪರಿದೆನ್ನ ಸಲಹಿದ। ಗುರುಶಾಂತವೀರ ನಡಿಗಳಿಗೆ
ಗುರುವಿನಗುರು ಪರಮಗುರುವು ತಾನುರುತರ ಗುರುಶಾಂತವೀರನಿಗೆ
ಮರೆವೆ ಒಲ್ಲರಿ ಮೂಲ ಕುರುಹು ಇಲ್ಲವೆ ಕಿತ್ತೂರು ಬೆತ್ತಲೆ ಆದಿವಾಳಾ
ರೂಢರಿಗೆ ॥೧॥

ಹೂಸವೆಂಟಿಸಳಿನ ಬಿಸರುಹದೊಳು ತಾ
ನೊಸೆದು ರಾಜಿಸ ಕರಿಯಾಖ್ಯನಿಗೆ
ಹಸುಳೆಯು ಶಿರದೊಳು ವಸುಧೆ ಭಾರವನಿಟ್ಟ ಸಮತಪೋರಾಜೇಂದ್ರನಿಗೆ
ಪಶುಪತಿಯುವತಾರ ಮಿಸುನಿವರ್ಣದಹಾಂಗೆ ಸರ್ವೋತಪೋಭಿಧಾನನಿಗೆ ॥೨॥

ಗೊಲ್ಲರ ಹಳ್ಳಿಯೊಳುದಿಸಿದೆ ಶಿವಶರಣರ।
ಮೆಲ್ಲಡಿಗಳಿಗೆಯೆ ನಮಿಸುವೆನು
ಕನ್ನಡವಲ್ಲದೆ ಇನ್ನೇನರಿಯೆನು ಸೊಲ್ಲಿಸಿದೆನು ತೊದಳ್ನುಡಿಯೊಳಗೆ
ಬಲ್ಲ ಮಹಾತ್ಮರು ಇನ್ನೊಂದೆಣಿಸದೆ ಎಲ್ಲಾ ಸೋಮೆಕಟ್ಟೆ ಸ್ತುತಿಯೆ
ನುತ ॥೩॥

---

೨೨. ಸಾರಿ ಶಪಿಸುವೆ ನಿನ್ನನು ।ತಪೋರಾಜ। ದೂರಮಾಡಿದೆಯು
ನ್ನನು ॥ಪ॥

ಪೊಡವಿಯೊಳಗೆ ನಾನು ಬಡವರ ಹುಡುಗನಂತೆ
ಗೊಡವೆಯಲ್ಲಡಗಿರೆ ಆಡವಿಗಿಕ್ಕಿದೆಯಾಗಿ ॥೧॥

ಮನವು ಮಹದೊಳಗಾಗಿ ತನುವು ಸೂರೋಗಲಿ
ಕುಲಛಲಮುಳುಗಲಿ ಕುತ್ಸಿತ ಹಾಳಾಗಲಿ ॥೨॥

ಮದಗಳು ಮುಳುಗಲಿ ಅರಿಗಳು ಹಾರಲಿ ಕರಣೇಂದ್ರಿಯಗಳು ಎಲ್ಲಾ
ಕಾಡಸೇರಲಿ ಗುರುವೆ ಆಳಲುತೀರದು ಎನ್ನಬಾಯಮಾತಿಂದೇನು ॥೩॥

ಹೋದ ಬಟ್ಟೆಯು ಬಳಿಕ ಬಾರದಂತಾಗಲಿ ನಾಮರೂಪಗಳಳಿದು
ಸೀಮೆ ಬಿಟ್ಹೋಗಲಿ
ಸೀಮೆ ಭೂಮಿಯು ಬಿಟ್ಟು ನಿಸ್ಸೀಮನಾಗಲಿ ಎಂದು ಸಾರಿ ಶಪಿಸುವೇ ॥೪॥

ಧೂಪವಗ್ನಿಯು ಕೂಡಿ ರೂಪಳಿದು ಹೋದಂತೆ ವಿರೂಪಸೋಮೆಕಟ್ಟೆ
ಪಾಪನಾಶನಪಾಡು ದೀಪಿಸಿರಲಿ ನಿನಗೆಂದೀಪರಿ ಶಪಿಸುವೆ ॥೫॥

---

೨೩. ಶಂಕರೆನ್ನನುಭವದ ಶಂಕೆ ಹರಿಸುವೆನೆಂದು।
ಕಿಂಕರನ ಮೇಲೆ ದಯೆ ಬಂದೀಗಳು॥
ಝೇಂಕರಿಸಿ ಮುಸುಕಿರ್ದ ತನುಮನಂಗಳ ಗುಣದ।
ಬಿಂಕಗಳ ಬಿಡಿಸಿದನು ವಚನ ಮಾತ್ರದಲಿ ॥ಪ॥

ತಪವಿದ್ಯೆ ವಿರತಿಸುಖ ಅಪರೋಕ್ಷಜ್ಞಾನ ಬಲು ಗು।
ಪಿತ ರಹಸ್ಯಗಳ ನರುಪಲೆಂದು॥
ಜಪಮೂರ್ತಿ ಜಗದೊಡೆಯುರಾಕಾರದಲಿ
ತಪಸ್ಸಿದ್ಧಿಯಾಂತ ಶಿಷ್ಯರ ಮೇಳದಿ ॥೧॥

ವಿಘ್ನಂಗಳೇನಿರದೆ ಭಗ್ನವಾಗಲಿ ಮನವು।
ಮಗ್ನವಾಗಿರಲಿ ಮನ ತನ್ನೊಳೊಂದಿ॥
ಸುಜ್ಞಾನವಿಂತಿರಲಿ ಎಂಬ ಕರುಣದ ಪದ್ಯ।
ಪ್ರಜ್ಞೆಗೊಳಿಸಿತು ಯೆನಗೆ ಕರ್ತನಹುದೆಂದು ॥೨॥

ರಮ್ಯತರವಾದ ನಿಗಮಾಂತ್ಯ ಮಾರ್ಗಂಗಳೊಳು।
ಸೌಮ್ಯ ಸದ್ಗುಣ ಗಣ ಶಿವಾನುಭವದ॥
ಪೇರ್ಮೆಯಿಂತೆಂದೆನ್ನ ನಿರ್ಮಲನ ಮಾಡಿದರು।
ನಿಮ್ಮ ಬರವ ಹಾರೈಪ ತವಕವೆಡೆಬಿಡದು ॥೩॥

ದೇವ ನೀ ಕೃಪೆಯಿಂದ ಪಾವನನ ಮಾಡಿದರೂ।
ಯಾವಾಗ ದರುಶನವು ಎಂತೆಲ್ಲಿ ತನಕ ॥
ಭೂವಳಯ ಜಂಜಡದ ದೇಹ ಬೇರಿರಲೆನಗೆ ।
ಧಾವತಿಯು ತೋರುತಿದೆ ಪಾವನಾತ್ಮಕನೆ ॥೪॥

ಸಿಲುಕಿಹೆನು ತಪ್ಪದದ ತ್ವಂಪದದ ಸಾಧ್ಯದಲಿ।
ಬಲು ಸುಖದ ಸುಗ್ಗಿ ಚಿತ್ಸುಖವರಿಯದೆ ॥
ನೆಲೆಯಾದ ಭಾವದೊಳು ಬೆರಸಿ ಬೇರಾಗದ।
ಉಳುಮೆ ಲೀನಂಗೊಳಿಸಿ ಪೊರೆವನೆಂದು ॥೫॥

ಕೇಳಿ ನೋಡುವ ತನಕ ಮೀರಿ ಗೀಳಿನೊಳಿರ್ಪ।
ದೇಳಿಗೆಯುದೆಂತುಟೈ ನಿಮ್ಮ ಕರುಣ॥

ಮೇಳನದ ಮೇಲೆ ಮತ್ತೇನುಂಟು ತಿಳಿವನದ ಅದ।
ರೊಳಗವದೇನಿಹುದೊ ಕೇಳುವೆನು ನಾನು ॥೬॥

ದ್ರಾವಿಡ ಮಂಡೂಕ ನ್ಯಾಯದಂತಿರ್ದ।
ಕಾಲಗತಿಗಳಿಗೆನ್ನ ಬೇರಿರಿಸಿ ಕವಿವ ಕರ್ಮಗಳ॥
ಭವಣೆಯೊಳು ಸಿಲ್ಕಿಸದೆ ಸವೆಯದಾನಂದ ಸುಧೆಯ।
ಸವಿದೆನಗೊಲಿದಿತ್ತೆ ವಚನಾನುಭವದಿ ॥೭॥

ಸ್ವಾನುಭವ ಸುಜ್ಞಾನ ಮೌನ ಮುದ್ರೆಲಿ ನಿಂದು।
ತಾನು ನೀನೆಂಬ ಭಾವವು ತೋರದೆ॥
ಭಾನುಕೋಟಿಯ ತೇಜ ಪೂರ್ಣದೊಡವೆರಸುವೊಡೆ।
ನೀನಲ್ಲದಾರುಂಟು ಸೂನುಮೋಹದಲಿ ॥೮॥

ಮಿಕ್ಕ ಬಹುಸಾಧನವ ಮೆಕ್ಕಸಗಳಲಬಿರಲಿ
ತಕ್ಕ ಈ ಪದ್ಯದ ಮೊದಲಾಗುವ
ಅಕ್ಕರದ ಮೂರುತಿಯೊಳಿಕ್ಕಿ ತನುಮನವೆಲ್ಲ
ಗಕ್ಕನೊಡೆವೆರೆಯುವುದು ಕಕ್ಕುಲಿಂದೆನಗೆ ॥೯॥

ನಂಬಿಹೆನು ಸತತ ನಿನ್ನ ಹಂಬಲೆಡೆಬಿಡದೆನಗೆ
ಕುಂಭಿನಿಯೊಳು ಸೋಮೆಕಟ್ಟಿಚರದ
ಸಂಭ್ರಮವದಂತಿರಲಿ ಶಂಭುರೂಪನೆ ತವ
ಪದಾಂಬುಜವ ಎನ್ನ ಹೃದಯಾಂಬುಜದಿ ನಿಲಿಸೈ

---

೨೪. ನುತಿಸುವೆನನುದಿನ ಶಶಿಕಂಠನ ಸಮವೆಸೆವ ಜ್ವಲಕಂಠಾಗ್ರಣಿಯ
ಅತಿಶಯ ಪಾದದ ಬಿಸರುಹಕ್ಪೊಂದಿಸೆ ಗತಿಗೊಡುವಗಣಿತನಾದವನ ॥ಪ॥
ಸತ್ತು ಚಿತ್ತು ಆನಂದದ ಬೋಧವು ನಿತ್ಯವಾಗಿ ಶಾಂತಿಯನೈದಿ
ವ್ಯತ್ಯಯವಾಯೆ ಜಗವೆಲ್ಲವ ಗೆಲಿದುರೆ ನಿತ್ಯವಾದ ವೀರತ್ವದಲ್ಲಿ
ಆರ್ತರಾದ ಸದ್ಭಕ್ತರ ಪಾಲಿಸುತಿತ್ತುವವರ ತಾನರ್ಥಿಯಲಿ
ಕರ್ತನಾದವೀ ಪೃಥ್ವಿಯಲ್ಲಿ ಒಪ್ಪಿತ್ತು ಮತ್ತೆಯು ಶಾಂತವೀರಾಖ್ಯನಲ್ಲಿ ।೧।

ಕೋಪರಹಿತ ತಪಸ್ಸಿದ್ಧಿಯೊಳಗೆ ಜಗಪಾಪಗಳ್ಹರಿಸುವ ಶಕ್ತಿಯಲಿ
ಓಪ ಗುರುವಿನಾಜ್ಞೆಯನೆಡಬಿಡದಲಿ ಈ ತಪೋರಾಜಭಿಧಾನದಲಿ
ಈಪರಿಯಿಂದಲಿ ರೂಪು ದಳೆದು ಜಗದೀಪಕನೆಸೆವ ಭೂವಳಯದಲಿ
ಪಾಪವ ಹರಿಸುವ ತುಂಗಭದ್ರ ತಟದಾಪುರಹರಿ ಹರನಾಮದಲಿ ॥೨॥

ಬಸವನ ಭಕ್ತಿಯ ಬಿಸರುಹ ಜಾಂಡದಿ ಹೊಸದಾಗಿಯೆ ತೋರಲಿಕ್ಕೆಂದು
ಪಶುಪತಿ ರೂಪಿನ ಪರಸೇವೆಯೊಳಗೆ ಬಹು ಕುಶಲತ್ವವ ತಾ ಕೈಕೊಂಡು
ಮುಸುಳಿಸಿದಂಥ ಸುಖವು ಸಾಧ್ಯವಿರೆ ಘಸಣಿಜಗ ಕರೆಕರೆ ಯೆಂದು
ಅಸಮವಾಗಿಯೆ ಭಕ್ತರೊಳಗೆ ಬಹು ಜಸವೆತ್ತೆಸೆವ ಕರಿವರನೆಂದು ॥೩॥

ಈ ಮಹಾಗುರುಶಿಷ್ಯರ ಈ ಪದ್ಯದಿ ಪ್ರೇಮದಿ ಪೊಗಳಿದೆವಾವಿಂದು
ತಾಮಸ ಗುಣಗಣವಳಿದುರೆ ಸತ್ವನಿರಾಮಯನೊಳು ಬೆರಸುವರೆಂದು
ಸೋಮೆಕಟ್ಟೆ ಚರವರನಿಗೆ ನಿಸ್ಸೀಮ ಭಕ್ತಿ ಇದು ಬೇಕೆಂದು
ಕಾಮಿಸಿ ನಿಮ್ಮನು ಬೇಡುವೆ ಭವವ ವಿರಾಮವ ಮಾಡಿರಿ ನಮಗೆಂದು ॥೪॥

---

೨೫. ಸೋಮೆಕಟ್ಟೆ ಈಶ ತಾಮಸದ ಮನ ನಾಶ
ಸ್ವಾಮಿ ಭಜಿಸುವ ಶರಣ ಹೃದಯವಾಸ ॥ಪ॥

ಕಾಮಕಾಲರ ಪುರವ ಕಾಯಿಸಿದೆ ಕಾಯವನು
ವ್ಯೋಮ ಅಂತರದಲ್ಲಿ ಇರ್ಪೆಯಲ್ಲಾ
ಆ ಮಹಾ ಸೋಮಸೂರ್ಯಂ ಮನ್ಮನೆಯೊಳಿರುತಿರ್ದ ಕಾರಣದಿ
ಸೋಮೆಕಟ್ಟೆಯ ಈಶನಾದೆ ॥೧॥

ಅಷ್ಟತನು ಪಟ್ಟಣದಿ ಅಷ್ಟ ಚಕ್ರವ ಮಾಡಿ।
ಅಷ್ಟ ಮೂರ್ತಿಯು ನೀನೆ ಆಗಿ ಇರ್ದು॥
ಶಿಷ್ಯ ಭಕ್ತರ ನೋಡಿ ಭ್ರಷ್ಟ ಮನವನು ಕೆಡಿಸಿ।
ಇಷ್ಟಾರ್ಥಗಳನಿತ್ತೆ ಶ್ರೇಷ್ಠ ಗುರುವರನೆ ॥೨॥

ನವವಿಧದ ಭಕ್ತಿಯನು ಸವಿಸವಿದು ನೋಡುತ್ತ
ಭವವ ಕೆಡಿಸುವೆನೆಂದು ತವೆ ಹರುಷದಿ॥
ನವಿಲಗರಿ ತೆರದೊಳಿಹ ತ್ರಿವಿಧ ಮಂಡಲದಲ್ಲಿ
ಭುವಿಗೆ ಸಾಕ್ಷಿಗನಾದ ಪರಮಹಂಸ ॥೩॥

---

೨೬. ಶರಣು ಸೋಮೆಕಟ್ಟೆಯೀಶ ಆನು ಪರಿಭವಯುತನೆಲೆ
ಕರಿವೃಷಭೇಶ ಶರಣು ಸೋಮೇಕಟ್ಟೆಯೀಶ ॥ಪ॥

ಬರಲಾರೆ ಸರ್ವಯೋನಿಯೊಳು ಬಂದು ತಿರುಗಲಾರೆನು
ಯಮಪುರದ ದಾರಿಯೊಳು।
ಕೊರಗಲಾರೆನು ಸಂಸ್ಕೃತಿಯೊಳು ಮೂರು ತೆರನಾದ ಮಲ
ದೊಳಗೆ ಇರಲಾರೆ ನಿನ್ನ ॥೧॥

ಆರು ಮೂರರೊಳಾಡಲಾರೆ ಮತ್ತೀರೈದು ಇಂದ್ರಿಯದೋ
ಳ್ತನಿಸಿಕೊಳಲಾರೆ॥
ಮೂರು ತಾಪದೋಳ್ ಬೇಯಲಾರೆ ತೋರುವೆರಡು ಕರಿಯೊ
ಳು ಮುರಿಸಿಕೊಳಲಾರೆ ॥೨॥

ಮೂರಾರು ಭಕ್ತಿಯ ಮಾಡಿ ಆದ ಮೀರಿ ಮೂರರೊಳಿನ್ನು।
ಮೇಲಕ್ಕೆ ಹಾರಿ।
ಸಾರಿ ಉನ್ಮನೆಯೊಳು ತೂರಿ ನಿನ್ನ ಸೇರಿ ಪೂಜೆಯ ಮಾಳ್ಪ ಧೀರತ್ವತೋರಿ॥೩॥

---

೨೭ ಆವ ಮೃಗವೋ ಕಾಣೆ ಹಾರಿತು ಗಗನಕ್ಕೆ ಮೀರಿದ ಶಬ್ದವಲಾ
ಗುತಿದೆ
ಸಾರಿನೋಡಲು ಸರ್ವ ಜಗಯೆಲ್ಲವೊಳಕೊಂಡ ಧೀರತ್ವವನು ತಾನೆ ಬೀರು
ತಿದೆ ॥ಪ॥

ಎಂಟು ಆನೆಯು ನುಂಗಿ ಬಂಟರೈವರ ಕೊಂದು
ಕುಂಟರ ಮೂವರ ಮುರಿಯುತಿದೆ ಟಿಂಟಣಿಸಿಯೆ ನಾ
ನೀಂಟಿಸಿ ನೋಡಲು ಉಂಟಾದ ಗವಿಯೊಳಗಿರುತಲಿದೆ ॥೧॥

ಮೂರು ಕಾಲುಗಳುಂಟು ಆರು ಬಣ್ಣದ ವೃಗ ಹಾರಿ ನಿಂದಿತು
ಆರು ಚಕ್ರವನ್ನು ಬೇರೆ ಈರೈದು ತೆರದ ಧ್ವನಿಯನ್ನು ಮಾಡಿ
ಸಾರಿ ಪ್ರಣವ ನಾದವ ತೋರುತ ॥೨॥

ತ್ರಿಪುಟಿ ಸ್ಥಾನಕೆ ಹಾರು ತಾಪಹರ ಅಂಶನ ಜಪವ ಮಾಡೆಂದು
ತಾ ಝೇಂಕರಿಸಿ ಗುಪಿತ ಸೋಮೆಕಟ್ಟಿ ಕರಿವೃಷಭಾರ್ಯನು
ಸಫಲ ಮಾಡುವೆನೆಂದು ಸಾರುತಲಿ ॥೩॥

---

೨೮. ಎಂಥ ಯಂತ್ರವ ಮಾಡಿದ ಶ್ರೀಗುರುರಾಯ ಎಂಥ ಯಂತ್ರವ ಮಾಡಿದ
ಎಂಥ ಯಂತ್ರವ ಮಾಡಿ ಭ್ರಾಂತು ಬಿಡಿಸಿದನೆ
ಚಿಂತಾಯತಾಕ್ಷಿ ನೀ ಚಿತ್ತದಿ ಲಾಲಿಸು ॥ಪ॥

ಮರೆಯೆಂಬ ಸೆಜ್ಜೆ ಮನೆಯ ಕಿರಿಯ ಬಾಗಿಲೊಳೆರಗಿ ನಾನಿರುತಲಿರ್ದೆ
ಕರೆದು ಕುಳ್ಳಿರು ಎಂದು ಕರವನೆತ್ತಿಯೊಳಿಟ್ಟು
ಅರುಹಿದ ಕರ್ಣದಿ ಒರಲಿದೋ ತನುಗುಣ ॥೧॥

ಆರುಮೂರಳಿದ್ಹೋದವೆ ಧಾರಣದಿಂದ ಮೂರು ತಾಪವು ಬೆಂದವೆ
ಅರಿವಿಕೆದೋರಲು ಕರಣಾದಿಗಳು ಎಲ್ಲಾ
ಕರನಿಧಾತ್ರಿಯೊಳಿನ್ನು ಒರೆದವಲ್ಲ ॥೨॥

ಸಂಸೃತಿ ಹರಿದ್ಹೋಗಲು ಹಸುಳೆಯೆಂದು ಹಂಸನ ತೋರಿದನು
ಸಂಶಯಗೊಳ್ಳದೆ ಹಂಸನ ಹಾರಿಸೆ
ವಂಶಬೀಜದ ನಾದ ವಶವಾಯಿತಲ್ಲಾ ॥೩॥

ಆಸನ ಬಲಿಯುತಲಿ ಸೂಸುವ ವಾಯು ಲೇಸಿನಿಂದ ನಿಲಿಸುತಲಿ
ಈಶೆ ಷಣ್ಮುಖಿಯೊಳು ಬೇಸರಿಸದೆ ಕೂಡೆ
ಭಾಸುರ ಪ್ರಭೆ ಬಂದು ಬಲಗೊಂಡಿತಲ್ಲಾ ॥೪॥

ಮಿಸುನಿಯ ಪಟ್ಟಣದ ಹಸುಳೆಯೆಂದು ಕುಶಲದಿಂ ಬೋಳೈಸುತ
ಪಶುಪನ ಭಕ್ತಿಯು ವಶವಾಗಲಿ ಎಂದು
ಬೆಸನ ಕೊಟ್ಟವ ಕರಿವೃಷಭನು ಕಾಣೆ ॥೫॥

---

೨೯. ಸದ್ಗುರು ಬೋಧೆಯನು ನಿರ್ಧರಿಸಿ ಪಡೆದವಗೆ
ಬದ್ಧ ಸಂಸಾರವಳಿದು ಸಿದ್ಧ ಮುಕ್ತಿ ॥ಪ॥

ಆರ ಜರಿಯಲುಃ ಬೇಡ ಆರರೊಳು ನಿಲಬೇಡ।
ಆರು ಮೂರರೊಳಾಡಿ ಕೆಡಲುಬೇಡ॥
ಜೇರೆ ದಾರಿಯು ನೋಡಿ ಮೂರರೊಳು ಹಾರುತ್ತ।
ಈರೈದು ನಾದವನು ಕೇಳು ಎಂಬ ॥೧॥

ಮೂರು ಮಲಗಳ ಬಿಟ್ಟು ಮೂರು ತಾಪವ ಸುಟ್ಟು।
ಮೂರಾರು ಭಕ್ತಿಯೊಳು ಮನವು ನೆಟ್ಟು॥
ಮೂರು ಸಾವಿರದ ವಸನ ಸೇರಿ ಪೂಜೆಯ ಮಾಡಿ।
ಮೂರು ಮೂರು ಮುದ್ರೆಯ ಪಿಡಿದು ಧೀರನಾಗೆಂಬ ॥೨॥

ಅಷ್ಟ ಮದಗಳ ಮೆಟ್ಟಿ ಭ್ರಷ್ಟರೈವರ ಕೊಂದು
ಶ್ರೇಷ್ಠ ಸೋಮೆಕಟ್ಟಿ ಗುರುವರೇಣ್ಯ
ಅಷ್ಟದಳಕಮಲದೊಳು ದೃಷ್ಟಿಗೆಯು ಕಾಣಿಸುವ
ನಿಷ್ಠೆಯಿಂದಲಿ ಪೂಜಿಸಿ ಸುಖಿಯಾಗು ಎಂಬ ॥೩॥

---

೩೦. ಕೂಡಿದೆನು ನಿಮ್ಮ ಕರುಣಾಮೃತದ ಪಾತ್ರದೊಳು।
ಮಾಡುವೆನು ತವ ಚರಣ ಸ್ಮರಣೆ ಭಜನೆಯನು ॥ಪ॥

ಮಲ ಮೂರರೊಳು ಸಿಲ್ಕಿ ಹಲವು ಜನ್ಮಂಗಳೊಳು।
ತೊಳಲಿ ಬಳಲಿದೆನೆಂದು ಕರವ ಪಿಡಿದು॥

ಮಲವ ಸಂಕೋಚವನು ಕಳೆದು ಲಿಂಗತ್ರಯವ ।
ನೆಲೆಗೊಳಿಸಿ ನಿರ್ಮಲನ ಮಾಡಿದುದರಿಂದ ॥೧॥

ಪಶುವಿನಂಗದ ಘೃತವು ಪಶುವಿನಿಂ ಪೊರಮಟ್ಟು ।
ಪಶುವಿನಂಗದ ರುಜೆಯ ಕೆಡಿಸುವಂತೆ ॥
ದಶವಿಧದ ಕಲೆಬಿಂದುನಾದ ವೊಂದಾಗಿರ್ದ ।
ಅಸಮ ಪ್ರಸಾದವೆಂತೆಂಬ ಮುಖದಿಂದ ॥೨॥

ಧರೆಯ ಪಾವನವ ಮಾಡುವರೆ ಸೋಮೆಕಟ್ಟಿ ।
ಕರಿವೃಷಭಯೋಗೀಂದ್ರನವತಾರದಿಂ ॥
ಪರಶಿವನೆ ತಾ ಬಂದು ಶಾಂತವೀರನ ಮೇಲೆ ।
ಪರಿಪೂರ್ಣ ಭಾವದೊಳು ಪಾಲಿಸಿದ್ದರಿಂದ ॥೩॥

---

೩೧. ಹಾದರವ ನಾನರಿಯದಿದ್ದೆ ।
ಸಿದ್ಧಪುರುಷರ ಕಣ್ಣಲ್ಲಿ ನೋಡದಿದ್ದೆ ॥ಪ॥

ಒಡಲೆ ನಾನೆಂತೆಂದು ನಂಬಿಕೊಂಡಿದ್ದೆ ।
ನೋಡದೆ ಮೂರು ಮುದ್ದೆಯುಂಡುಕೊಂಡಿದ್ದೆ ॥೧॥

ಏಳು ಬಗೆಯ ಅಕ್ಕಿಯನ್ನ ಉಣ್ಣುತಿದ್ದೆ ।
ಏಳೊಂದು ಬಗೆಯೂರಗಾಯ ನಂಬಿದ್ದೆ ॥
ಮೇಲಾದ ದಶಭಕ್ಷ್ಯ ಸವಿಯುತಲಿದ್ದೆ
ಒಳ್ಳೆ ತ್ರಿಬಗೆ ತುಪ್ಪ ಉಂಡುಕೊಂಡಿದ್ದೆ ॥೨॥

ಮಾರಿಯ ತೆರದೊಳು ಮಲೆತುಕೊಂಡಿದ್ದೆ ।
ನಾರಿಯರೊಳಗೆಲ್ಲ ನಲಿಯದೆ ಇದ್ದೆ ॥
ಚಾರು ಪುರುಷರ ಬಳಿಗೆ ಚರಿಸದೆ ಇದ್ದೆ ।
ಧಾರುಣಿಯೊಳು ನಾನೆ ಧೀರಳೆನುತಿದ್ದೆ ॥೩॥

ಗಂಡುಳ್ಳ ಮಹಾದೇವಿ ಸಂಗವ ಮಾಡಿ ।
ಕಂಡಿಯಿಲ್ಲದ ಮಾನಭಂಗವ ಮಾಡಿ ॥

ಚಂಡಪ್ರಕಾಶನ ಮನೆಯನ್ನು ಕೂಡಿ।
ತಂಡ ವಿಕ್ರಮವಾದ ವ್ರತಭಂಗ ಮಾಡಿ ॥೪॥

ಆರೂ ಇಲ್ಲದ ಮನೆಗೆ ಕರೆದ।
ಬೇರೆ ಮುಸುಕಿರ್ದ ಕುಪ್ಪಸವ ತಾನಳಿದ॥
ಗುರು ಕುಚವೆರಡನು ಜಾಗ್ರದಿ ಪಿಡಿದ।
ಭರದಿಂದ ಕುಚಮಧ್ಯದೊಳು ತಾ ನಲಿದ ॥೫॥

ಆಗ ಮೋಹವು ತನಗೆ ಹೆಚ್ಚಿ।
ಬೇಗ ತಾ ಬಂದು ಉಟ್ಟಿದ್ದ ಸೀರೆಯ ಬಿಚ್ಚಿ॥
ಹಿಗ್ಗುತ ಮುದದೊಳು ಅಧರವ ಕಚ್ಚಿ।
ತಗ್ಗದೆನ್ನಯ ರತಿಗೆ ವಿಟನಾಗ ಮೆಚ್ಚಿ ॥೬॥

ಆರು ವರಹದ ಓಲೆ ಕೊಟ್ಟ ಬೇರೆ।
ಮೂರು ವರಹ ತೂಕದ ಮೂಗುತಿ ಇಟ್ಟ॥
ಪರಂಜ್ಯೋತಿಯಂಥ ರತ್ನ ಮಡಗೆಂದು ಕೊಟ್ಟ।
ಗುರು ಸೋಮೆಕಟ್ಟೇಶ ಭಜಿಸೆಂದು ಬಿಟ್ಟ ॥೭॥

---

೩೨ ಯಾಕೆ ನಿನಗಕಟ ವೈರಾಗ್ಯ ಜನಿಸದು ಮುನ್ನ
ಶೋಕ ಜನ್ಮಗಳಿನ್ನು ಸಾಕಿಲ್ಲವೆ ॥ಪ॥

ಹಿಂದೆ ಜನ್ಮಗಳೊಳಗೆ ಹೊಂದಿರ್ದ ಸತಿ ಸುತರು
ಬಂಧು ಬಳಗಗಳು ಏನಾದರು
ತಂದೆ ತಾಯಿಗಳೆಲ್ಲ ಹೊಂದಿ ಕಳುಹಿದರಿಂತು
ಚಂದದಲಿ ನಿನ ಹಿಂದೆ ಬಂದಿರ್ಪರೆ ॥೧॥

ನಾಳೆಗಿರಬೇಕೆಂದು ಮೋಹದಲಿ ಮಡಗುತ್ತ
ಬಾಳುವೆಯ ನೀ ಮಾಡುತಿರ್ಪೆ
ಮೂಳನಂದದಿ ಹಿಂದೆ ಹೂಳಿರ್ದ ಧನ ಕನಕ
ಮೇಳನದಿ ನಿನ ಹಿಂದೆ ಬಂದಿರ್ಪುದೆ ॥೨॥

ಶರೀರ ನಾನೆನ್ನುತಲಿ ಪರಿಪರಿಯು ತೊಳೆದು
ಪರಿಮಳಾಂಬರವನ್ನು ಧರಿಸುತ್ತಲಿರುವೆ
ಮರುಳುತನದಿಂ ಮೊದಲು ಪೋಷಿಸಿದ ದೇಹಗಳು
ತೆರಳಿ ನಿನ್ನ ಹಿಂಡೆ ಬಂದಿರ್ಪುವೆ ॥೩॥

ಮತ ದೇವರೆಂದೆಂಬು ಪ್ರತಿಮೆಗಳ ಪೂಜಿಸುತ
ಗತಿಯು ನೀನೆಂತೆಂದು ನಂಬಿ ಇರುವೆ
ಗತವಾದ ಜನ್ಮಗಳ ತಿಮ್ಮಬೊಮ್ಮಪ್ಪಗಳು
ಹಿತದಿಂದ ನಿನ್ನೊಡನೆ ಬಂದಿರ್ಪುವೆ ॥೪॥

ಜಾತಿಘನವೆಂತೆಂಬ ನೀತಿಯುಲಿ ನೀನಿರುತ
ಸೂತಕಾದಿಗಳಿಂಗೆ ಬೆದರುತಿರುವೆ
ಮಾತೆ ರಜೆದೊಳು ನೀನು ಸೂತಕದಿ ಬೆಳೆವಾಗ
ಜಾತಿಸೂತಕಗಳೆಲ್ಲಿದ್ದುವು ॥೫॥

ಸಂತ ಸಂದಲಿ ಅನಿತು ಸಂಸಾರವ ನೀ ಮಾಡಿ
ಇಂತು ಸುಖ ಕಿಂಚಿತ್ತು ದೊರೆಯುಲಿಲ್ಲ
ಮುಂದೆ ಭ್ರಾಂತನು ಬಿಟ್ಟು ಚಿಂತೆಯನು ನೀನರಿದು।
ಅಂತಕಾಂತಕನ ನೀ ಹೊಂದಿ ಸುಖಿಸದಲೆ ॥೬॥

ಸಾಧುಗುಣವನು ಧರಿಸಿ ಕ್ರೋಧವನು ನೀ ಮುರಿದು।
ವೇದಾಂತದರ್ಥವನು ಬೇಗನರಿತು ॥
ಆದಿ ಅಂತ್ಯವ ತಿಳಿದು ಭೇದವನು ನೀ ಮರೆದು।
ಬೋಧೆಯನು ಸಮನಿಸಲು ಮೋಕ್ಷವಹುದು ॥೭॥

ಆರು ನಾನೆಂದೆಂಬ ವಿಚಾರವನು ಮಾಡಿ!
ಚಾರು ಸಖರೊಡನೆ ಕೂಡುತಿರಲು ॥
ಮೀರಿದಾ ಗುರುವಿಂದಲನುಭವವ ನೀ ತಿಳಿದು।
ಘೋರೆಂಬ ನಾದದೊಳು ಬೆರೆಯೆ ಸುಖವಹುದು ॥೮॥

ಜಂಗಮಾರ್ಚನೆ ಮಾಡಿ ಲಿಂಗದೊಳು ಒಡಗೂಡಿ
ಮಂಗ ಮನವನು ಬೇಗ ಹಿಡಿದು ನಿಲಿಸಿ ॥

ತುಂಗ ಸೋಮೆಕಟ್ಟೆ ಕರಿವೃಷಭನಡಿವಿಡಿದು ।
ಭಂಗವನು ಕಳೆಯೆ ಸುಖವಹುದು ಮನುಜ ॥೯॥

---

೩೩. ಯಾಕಿನ್ನು ಬಳಲಿಸುವೆ ಭವದ ಶರಧಿಯೊಳಿನ್ನ।
ಸಾಕು ಮಾಡಿನ್ನ ಭವ ನೂಕಲಾರೆ ॥ಪ॥

ನಾನಾ ಜನ್ಮದಿ ಬಂದು ನಾನಾವಸ್ಥೆಯಲಿ ಬೆಂದು।
ನಾನಾ ಆಹಾರಗಳ ನಲಿದುಂಡೆನು॥
ಹೀನ ಕರ್ಮಗಳಿಂದ "ನಾನತ್ವ" ವೆಡೆಗೊಂಡು।
ಶುನಿಯ ತಲೆ ಹುಳಿತಂತೆ ತಿರುಗುತಿರ್ಪೆ ॥೧॥

ಸ್ವರ್ಗ ಸುಖವನು ಪಡೆದು ಭರ್ಗನನು ನಾ ಮರೆದು।
ದುರ್ಗುಣದ ಸಂಕುಳದಿ ಎಡೆಯಾಡುತ॥
ಆಗ ಪಿತ ಮಲದಿಂದ ಬೇಗ ಮಾಯ್ಮಲದೊಳು ಕೂಡಿ।
ಬೇಗೆಯನು ಪಡಲಾರೆನೋ ಶಿವನೆ ॥೨॥

ಮಾತೆ ಸೂತಕ ಬಲಿತು ರೋತೆ ಮಲದೊಳು ಹೊರಳಿ।
ಜಾತಕೀಟಕಗಳಿಂದ ನರಳುತಿರಲು॥
ಖತಿಯಿಂದಲಿ ಸೂತಿ ವಾಯುವುಪಟಳದಿಂದ।
ಮಾತೆ ಭಗದೊಳು ನಾನು ಬರಲಾರೆನೋ ಶಿವನೆ ॥೩॥

ಧರಣಿಯೊಳು ಉದ್ಭವಿಸಿ ಸ್ಮರಣೆ ಯೆಂಬುದು ಪೋಗಿ।
ತರುಣಿಯರು ಸೂಡೆನ್ನ ಹಾಕುತಿಹರು॥
ಮರವೆ ಗಾಳಿಯು ಬೀಸಿ ಭರದಿ ರೋಗಗಳ್ ಬಂದು।
ಶರೀರ ಬಾಧೆಗಳಿಂದ ನರಳಲಾರೆ ॥೪॥

ಬಾಲಾವಸ್ಥೆಯು ಎಂಬ ಹದಿನಾರು ವತ್ಸರವು।
ಕಾಲವನು ಕಳೆಯುತ್ತ ತಿರುಗುತಿರಲು॥
ಮೇಲೆ ಯೌವನ ಬಂದು ಸಲ್ಲೀಲೆ ಸತಿಗೂಡಿ।
ಬಲು ಮೋಹದಲಿ ನಾ ಬಳಲಲಾರೆ ॥೫॥

ವರುಷ ನಾಲ್ವತ್ತರಲಿ ವೃದ್ಧಾಪ್ಯ ತೋರಿ।
ಸಿರಿ ಪೋಗಿ ಬಡತನವು ಒದಗುತಿರೆ॥
ಕರದಿ ದಂಡವ ಪಿಡಿದು ಜ್ವರ ಕೆಮ್ಮು ಉಬ್ಬಸವು।
ಭರವಾದ ರೋಗದಲಿ ಬಳಲಲಾರೆ ॥೬॥

ಈ ಮೇರೆ ಇರುವಾಗ ಯಮ ಭಟರು ತಾ ಬಂದು।
ಭಾಮೆಗೆ ಹೇಳದ ತೆರದಿ ಎಳೆಯುತಿರಲು॥
ಕಾಮಹರ ನಿಮ್ಮಡಿಯ ಪ್ರೇಮ ಮರೆಯುಹುದೆಂದು।
ಸೋಮೆಕಟ್ಟಿ ಈಶನ ಮರೆಹೊಕ್ಕೆನು ॥೭॥

---

೩೪. ಏತರ ಭಯವಣ್ಣ ನಮಗಿ ।
ಆತ ಶ್ರೀಗುರು ಕರುಣದಿ ಕರೆದು ॥
ನ್ನೇತರ ಭಯವಣ್ಣ ।
ಜ್ಯೋತಿ ಲಿಂಗವ ಕರದೊಳಗಿಟ್ಟನು ॥ಪ॥

ಕಾಮನ ಗೆದ್ದವ ಕರದೊಳಗಿರುತಿರೆ ।
ಕಾಮಿನಿ ಭಯಗಳು ನಮಗೇಕೆ ॥
ಸೋಮಧರನು ಎನ್ನ ಪ್ರೇಮದಿ ನೋಡಲು
ಆ ಮಹಾಕಾಲನ ಭಯವೇಕೆ ॥೧॥

ಧರೆಯ ಜನರು ಎಲ್ಲಾ ಪೂಜಿಪ ।
ಪರಿಪರಿ ಕಲ್ಲಲ್ಲ ಗುಮಥದಿಂದಲಿ ॥
ಕರತಳಾಮಲಕದ ಪರಿಯಂತೆ ।
ಕರದೊಳು ಕಾಣಿಸಿತಲ್ಲಾ ॥೨॥

ಜಾತಿಧರ್ಮದಿಂದ ಪೂಜಿಸ ।
ಪ್ರೀತಿಯ ಲಿಂಗಲ್ಲಾ ॥
ಜೋತಿಮಯನು ಜಗದೊಳಹೊರಗಿರುತಿಹ ।
ಆತ ಬ್ರಹ್ಮವೇ ತಾನಿರ್ದಬಳಿಕ ॥೩॥

ದೊಡ್ಡ ಗುರುವೆ ಸೇರಿ ಅವಗುಣ ।
ಗೊಡ್ಡು ಗುರಿಯ ಮಾಡಿ ॥
ಅಡ್ಡಗುಡ್ಡದ ನಟ್ಟನಡುವೆಯು ।
ದೊಡ್ಡ ಗುಹೆಯೊಳು ಸೇರಿದ ಮೇಲೆ ॥೪॥

ದ್ವಾರ ನಾಲ್ಕು ಕೂಡಿ ಇರುತಿಹ।
ದ್ವಾರದ ಮಧ್ಯದೊಳು॥
ಧೀರ ಸೋಮೆಕಟ್ಟೆ ಗುರುಯತಿರಾಜನು।
ಪಾರಮಾರ್ಥನ ಮಾಡಿದ ಮೇಲೆ ॥೫॥

---

೩೫. ಶ್ರೀಗುರು ಪೂಜೆಯ ಮಾಡಿದೆ ತಾಗುವ ಭವವನು ನೀಗಿದೆ।
ಯೋಗವು ಆಗಿ ಭೋಗಲಿಂಗದೊಳ್ ಕೂಡಿದ ॥ಪ॥

ಮೂರಾರು ಭಕ್ತಿಯ ಮಾಡಿದೆ। ಸಾರಿ ಉನ್ಮನೆಯೊಳು ತೂರಿದೆ॥
ಮೂರು ನದಿಯ ಸ್ನಾನ ಮಾಡಿದೆ। ಈರೈದು ನಾದವ ಕೇಳಿದೆ ॥೧॥

ಆರು ಬಾಗಿಲ ಮುಚ್ಚಿ ನೋಡಿದೆ। ತೋರುವ ಕಳೆಯೊಳು ಕೂಡಿದೆ॥
ಮೂರು ಮುದ್ರೆಗಳೊಳಾಡುತ ಬೇಗದಿ। ಮೂರೊಂದು ಯೋಗವ ಮಾಡಿದೆ॥೨॥

ಸಾಸಿರದಳ ಪೀಠವೇರಿದೆ। ನಾಸಿಕ ತುದಿಯನು ಸೇರಿದೆ॥
ಸೂಸುವ ವಾಯು ಮನ ದೃಷ್ಟಿಯು ಕೂಡಿ। ಭಾಸುರ ಲಿಂಗವ ಕೂಡಿದೆ ॥೩॥

ತಳಮೇಲು ಚಕ್ರವ ನೋಡಿದೆ। ದಳಗಳು ಎಂಟನು ಕೂಡಿದೆ॥
ಥಳ ಥಳಿಸುವ ನಾಗ ನೇರಿದೆ। ಕಳೆಯುಳ್ಳ ಜ್ಯೋತಿಯ ಸೇರಿದೆ ॥೪॥

ನಾಲ್ಕು ಹಾದಿಯ ಮಧ್ಯೆ ತೂರಿದೆ। ನಾಲ್ಕೊಂದು ತತ್ವವ ನೀಗಿದೆ॥
ಸಿಲುಕನಳಿದ ಸೋಮೆಕಟ್ಟೆ ಗುರುವ ಸೇರಿ। ನಾಲ್ಕೊಂದು ಮುಖದೊಳು ನಲಿದಾಡಿದೆ ॥೫॥

---

೩೬. ಬ್ರಹ್ಮವಾಗುವೆವೆಂದು ಬಳಲುವರು ಜಗವೆಲ್ಲ।
ಬ್ರಹ್ಮವಿಲ್ಲದೆ ಜಗದೊಳನ್ಯವಿಲ್ಲ ॥ಪ॥

ವಾರಿಯೊಳು ವಾರಿ ತಾ ಕೂಡುವಂತೆ।
ಪರಮನೊಳು ಜೀವ ತಾ ಲಯಿಪನೆನಲು ॥
ವಾರಿ ವಾರಿಗೆ ಭೇದವಿಲ್ಲವಾ ಪರಿಯಂತೆ॥
ಪರಮನಿಗೂ ಜೀವನಿಗೂ ಭೇದ ಮುನ್ನಿಲ್ಲಾ ॥೧॥

ಘಟ ಮಠದ ಬಯಲಿಲ್ಲ ಒಟ್ಟು ಗೂಡುವೆನೆಂದು।
ಥಟ್ಟನೆ ಬಳ್ಳವನು ತಾ ಯೆಂಬೋಲು॥
ಸೃಷ್ಟಿ ಹೊರಗೊಳಗೆಲ್ಲ ಒಟ್ಟಾದ ಬಳಿಕಿನ್ನು।
ದಿಟ್ಟ ಮುಕ್ತಿಯ ಎಡೆಗಳಿಲ್ಲದುಂಟೆ ॥೨॥

ತನ್ನ ತಾನೇ ಪಿಡಿದು ಸುರಲೋಕಕ್ಕಾರೆಂದು।
ಬನ್ನಬಡುತಿರ್ಪ ಮಾನವನಂದದಿ ॥
ಅನ್ಯವಿಲ್ಲದೆ ಪೂರ್ಣದಿರವೆ ನೀನಾಗಿನ್ನು।
ನಿನ್ನ ಬೇರೆಲ್ಲಿ ತರುತಿಹೆ ಇದನು ಪೇಳ್ಳೈ ॥೩॥

ಜಗಭರಿತ ಬಂದ ಜಾಗ್ರತೆ ಕದವ ತೆಗೆ ಯೆನಲು।
ಜಗಭರಿತ ನಾದವನು ಒಳಗಿಲ್ಲವೆ॥
ಜಗದೇಕ ಬ್ರಹ್ಮವಾಗುವೆನೆನಲು।
ನೀನೀಗ ಜಗದ ಏಕತ್ವದೊಳೆ ಜನಿಸಿರ್ಪೆ ತಿಳಿಯೈ ॥೪॥

ಕಪ್ಪು ಹಚ್ಚಿ ದರ್ಪಣವ ನೋಡಲು ।
ಕಪ್ಪು ಬಿಳುಪದು ಮುಖವು ಕಾಣಲಿಲ್ಲ॥
ಒಪ್ಪದಿಂ ಬೆಳಗಲಲಿರ್ಪ ಜೀವನ ಗುಣವು।
ಸೊಪ್ಪಳಿದು ಸೋಮೆಕಟ್ಟಿ ಈಶನಾದೆ ॥೫॥

---

೩೭. ಗುರುಪುತ್ರರನು ಕಂಡು ನರರ ಮಾತುಗಳನು ಆಡಬಾರದು।
ಧರೆಯೊಳಗಿರುತಿಹ ತರು ಗುಲ್ಮ ಕಲ್ಲಿಗೆ ಎರಗಬಾರದು ॥ಪ॥

ನರನಾಗಿ ಜನಿಸಲು ಗುರುವನು ಸೇರದೆ ಇರಲು ಬಾರದು ॥
ಗುರುಕರುಣವಿಲ್ಲದೆ ಬರಿಯ ತಪಗಳ ಮಾಡಬಾರದು ॥೧॥

ಮೋಕ್ಷದಪೇಕ್ಷೆಯುಲಿ ಮರಳುತ್ತ ಹಿಮ್ಮೆಟ್ಟಿ ನಿಲ್ಲಬಾರದು ।
ರಾಕ್ಷಸನಂದದಿ ಭಕ್ಷ್ಯಾದಿಗಳ ನೋಡಿ ಬಯಸಬಾರದು ॥೨॥

ಹೆಣ್ಣು ಹೊನ್ನು ಮಣ್ಣು ಮೂರನ್ನು ಮನದೊಳು ಕಚ್ಚಬಾರದು ।
ಹುಣ್ಣಿಮೆ ಚಂದ್ರನ ಹಾಂಗೆ ಹೊಳೆಯುವ ಹೆಣ್ಣನು ನೋಡಬಾರದು ॥೩॥

ಅರಿಷಡ್ವರ್ಗಂಗಳ ಉರುಳಿನೊಳಗೆ ಸಿಕ್ಕಿ ಸಾಯಬಾರದು ।
ದುರುಳ ಪಂಚೇಂದ್ರಿಯದಿರವಿನೊಳಗೆ ಮನ ವಿಕ್ಕಬಾರದು ॥೪॥

ಬೋಧವು ಇಲ್ಲದೆ ವೇದವನೋದಬಾರದು ।
ನೋದದಿ ದಶನಾದ ಕಿವಿಯೊಳು ಕೇಳದಿರಬಾರದು ॥೫॥

ಸಾಧಿಸಿ ಗುರುವನು ಮನದೊಳು ಸ್ಮರಿಸದೆ ಇರಲು ಬಾರದು ।
ಗಾಡೆಯು ಮಾತಿಲಿ ವೇದಾಂತಿಗಳ ಕೂಡೆ ವಾದಿಸಬಾರದು ॥೬॥

ಸಾಧನೆಯಿಲ್ಲದೆ ಬರಿಯ ವೈರಾಗ್ಯವನಾಡಬಾರದು ।
ಓದಿದ ಅರ್ಥವು ತಿಳಿಯದೆ ಬಾಯೊಳು ಬೊಗಳಬಾರದು ॥೭॥

ಬರಿಯ ಸತ್ಕರ್ಮಾದಿ ಮನವನು ಇಕ್ಕುತ ಸಾಯಬಾರದು ।
ತಿರುಗಿ ತಿರುಗಿ ಯಮಪುರದೊಳು ಕೊರಗುತ ಇರಲಿ ಬಾರದು ॥೮॥

ಸೋವೊಕಟ್ಟೆ ಈಶ ಸ್ವಾಮಿಯ ಪಾದವ ಮರೆಯಬಾರದು ।
ನಾಮ ವಿದೂರ ನೀನೆಂದು ನಂಬದೆ ಇರಲು ಬಾರದು ॥೯॥

---

೩೮. ಗಾಢ ತಿಳಿಯೊ ನೀನು ಇರುತಿಹ ಗೂಢ ಬ್ರಹ್ಮವನ್ನು
ಕಾಡುವ ಮಾಯೆಯ ಝಾಡಿಸಿ ಒದೆದು। ರೂಢಿ ಸೋವೋ
ಗುರುವನು ಹಿಡಿದು ॥ಪ॥

ಆರು ಮೂರು ಮೀರಿ ಇರುತಿಹ ಮೂರು ದಾರಿ ಯೇರಿ ।
ಸಾರಿ ಉನ್ಮನೆಯೊಳು ತೂರುತ ಬೇಗದಿ ಈರೈದು ನಾದವ ಸೇರಿ ॥೧॥

ಆರು ನಾನು ಎಂದು ಬೇಗದಿ ಚಾರು ಗುರುವನಂದು ।
ಸೇರುತ ಷಣ್ಮುಖಿ ತೋರುವ ಕಳೆಯೊಳು ಸಾರಿಯು ಮನವದು ನಿಂದು ॥೨॥

ಅಷ್ಟ ಮದಗಳಟ್ಟಿ ಇರುತಿಹ ಷಷ್ಠಿ ಚಕ್ರ ಮೆಟ್ಟಿ ।
ಭ್ರಷ್ಟ ಇಹ ಪರವೆರಡನು ಬಿಟ್ಟು ಅಷ್ಟ ದಳದ ಮಧ್ಯೆ ಮನವದು ನೆಟ್ಟು ॥೩॥

ಪಂಚ ಪಂಚಕವಳಿದು ಇರುತಿಹ ಪ್ರಪಂಚವೆಲ್ಲವನಳಿದು ।
ಪಂಚತತ್ವದ ಗೊಂಚಲಿನಲ್ಲಿ ಮಿಂಚಿನ ಮನೆಯೊಳು ಕಂಚಿನ ತೆರದಿ ॥೪॥

ತತ್ವವೆಲ್ಲ ಕಳೆದು ಉಳಿವೆಯ ತತ್ವವಾವುದೆನಲು ।
ಕರ್ತೃ ಸೋಮೆಕಟ್ಟೆ ಕರಿವೃಷಭಾರ್ಯನೆ ತತ್ವಸಾಕ್ಷಿ ತತ್ವವು ತಿಳಿಯೈ ॥೫॥

---

೩೯. ತಿಳಿದು ನೋಡಿರಣ್ಣ ತತ್ವದ ಇರವ ಕೂಡಿರಣ್ಣ ॥ಪ॥

ಕಪ್ಪುರಾಗ್ರದಲ್ಲಿ ಇರುತಿಹ ಮುಪ್ಪುರದೊಡೆಯನನು ॥
ಒಪ್ಪದಿಂದ ಗುರುಕರುಣವ ಪಡೆದು ಇಷ್ಪ ಸ್ನಾನವ ಮಾಡುತ ಬೇಗದಿ ॥೧॥

ಅಷ್ಟದಳದ ಮಧ್ಯೆ ಇರುತಿಹ ಸೃಷ್ಟಿಗೊಡೆಯನನ್ನು ।
ಅಷ್ಟ ತನುವು ಕೂಡಿ ಪಟ್ಟಣವಾಗಿಹ ಅಷ್ಟ ವರ್ಣದ ದ್ವಾರಕಿ ಪುರದಿ ॥೨॥

ಮೂರು ಮುದ್ರೆಯಲ್ಲಿ ತೋರುವ ಸೂರ್ಯಚಂದ್ರರಲ್ಲಿ ।
ನಾರಿಯರಿಬ್ಬರುತೋರುವಸ್ಥಲದೊಳು ಮೀರಿದಜ್ಯೋತಿಯ ಸೇರುತನೀವು॥೩॥

ನೀರಿನ ಕೊಳದಲ್ಲಿ ಇರುತಿಹ ಪೂರ್ಣ ಜ್ಯೋತಿಯಲ್ಲಿ
ಸೇರುತ ಮನವದು ಓರೆ ಆಗದಿರೆ ನಾರಿ ರತ್ನದ ಹಾಂಗೆ ತೋರುವುದು ॥೪॥

ಮರವೆ ಕಳೆದು ಅರಿವೆ ಆಗುತ ಪರಮ ಸೋಮೆಕಟ್ಟೆ ಕರಿವೃಷಭಾರ್ಯನ ।
ಚರಣಕಮಲವ ಬರಿಯ ಬಯಲೊಳು ಬೆರೆಯುತ ನೀವು ॥೫॥

---

೪೦. ಏತಕಿನಿತು ರೋತೆ ಬಾಳು । ಪ್ರೀತಿಯಿಂದ ಆತ ಗುರುವ
ನೀತಿವಿಡಿದು ತಿಳಿದು ನೋಡು ಖ್ಯಾತನಾಗುವೆ ॥ಪ॥

ಕಾಶಿಯಾತ್ರೆ ಮಾಡಬೇಡ ವೇಷವನ್ನು ಧರಿಸಬೇಡ।
ದಾಸಿಯಂದದಿ ಕಾಸಿಗೆಲ್ಲ ದೇಶ ದೇಶ ತಿರುಗಬೇಡ ॥೧॥

ನೀರ ಮುಳುಗಿ ಗಾರು ಆಗಿ ಧಾರುಣಿಯೊಳ್ ಪ್ರತಿಮೆ ಪೂಜೆ।
ಸೇರಿ ಯಮನ ಪುರದಿ ನೀನು ಸಾರಿ ಸಾರಿ ತಿರುಗಬೇಡ ॥೨॥

ಯಜ್ಞ ಕರ್ತೃ ನೀನೆಯಾಗಿ ಭಗ್ನ ಭವದ ಯಾಗ ಮಾಡಿ।
ಸ್ವರ್ಗದಲ್ಲಿ ಸುಖವ ಪಡೆದು ಮಗ್ನವಾಗಿ ಕೆಡುವೆ ಮೂಢ ॥೩॥

ಮೂರು ಮಲಗಳೊಳಗೆ ಸಿಲ್ಕಿ । ನಾರಿಯೊಡನೆ ಕೂಡಿ ಇರ್ದು।
ಧಾರುಣಿಯನೆಲ್ಲ ತಿರುಗಿ । ಧೀರ ರೋಗದಿ ಕೆಡಲುಬೇಡ ॥೪॥

ಮೋಕೆಯಂದದಿ ಗಿಡವ ಹತ್ತಿ ಆಕೆವಾಳ ಪತ್ರಿಯೆತ್ತಿ।
ಏಕೋನಾಥನ ಮರೆದು ನೀನು ಈಕೆ ಮಾಯೆಯೊಡನೆ ಕೂಡಿ ॥೫॥

ಮತ್ತೆ ಮೂರು ವೇಳೆಯುಂಡು ಅಸ್ತಮಯದಿ ಪೂಜೆ ಮಾಡಿ।
ಕತ್ತೆಯಂತೆ ಇಹಕೆ ಪರಕೆ ಸುತ್ತಿ ಸುತ್ತಿ ಕೆಡಲಿಬೇಡ ॥೬॥

ಕರ್ಮವನ್ನು ಕಳೆಯಲಿಲ್ಲ ಮರ್ಮವನ್ನು ತಿಳಿಯಲಿಲ್ಲ।
ಕರ್ಮಿ ನೀನು ಕೂರ್ಮನಂದದಿ ಉರ್ವಿಗಾತ್ರ ಪಡೆದೆ ಗಾಢ ॥೭॥

ನಾಡ ಮಾತನೆಲ್ಲ ಕಲಿತು ಗೂಢ ಬ್ರಹ್ಮವ ಮರತೆ ನೀನು।
ಖೋಡಿ ಭವದಿ ಬರುವೆಯಲ್ಲ ಮಾಡು ಆತ್ಮ ಪೂಜೆ ಗಾಢ ॥೮॥

ವೇದವನ್ನು ಓದಿ ಪಾಡಿ ಬಾಧೆ ಭವವ ನೀಗಿ ನೋಡಿ।
ಆದಿ ಸೋಮೆಕಟ್ಟೆ ಗುರುವ ಬೋಧವನ್ನು ಬೇಡಿ ಬೇಡಿ ॥೯॥

---

೪೧. ಕಂಡೆನು ಗುರುವರನ ।ಎನ್ನಭವ ದಂಡಲೆ ಪರಿಹರನ ॥ಪ॥

ಹರಿಯಜ ಸುರರೆಲ್ಲರು ಕಾಣದ ಗುರುಪರಮಪಾವನಮೂರ್ತಿಯ ।
ಪರಮವೈರಾಗ್ಯವೆನ್ನೊಳು ನೆಲೆಗೊಂಡುಗುರುವರನಡಿಯನ್ನು ಕಂಡೆಕಂಡೆ॥೧॥

ಭಕ್ತಿಮೂರಾರ ಮೀರಿ ತೋರುವಮಹಾಯುಕ್ತಿ ಮರ್ಮವನು ತೋರಿ।
ಮುಕ್ತಾಮುಕ್ತಿ ಮುಕ್ತನಾದ ವಿರಕ್ತನ ಚರಣವ ಶಕ್ತಿರಹಿತ
ಮುಮುಕ್ಷುತ್ವದಿ ಕಂಡೆ ॥೨॥

ಜ್ಞಾನಪಾವುಗೆಮೆಟ್ಟಿದ ಸುಜ್ಞಾನದ ಸ್ವಾನುಭವವ ತೋರಿದ
ಜ್ಞಾನಾಜ್ಞಾನ ನಾನು ನೀನೆಂಬುವ ಭಾವವು ತೋರದೆ
ತಾನುತಾನು ತಾನಾದ ಗುರುವ ॥೩॥

ಕಂಡೆಕಂಡೆನು ಉದ್ದಂಡಗುರುವನ ಖಂಡ ಬ್ರಹ್ಮವೆ
ನಿಜಗೊಂಡಮೂರುತಿಯು ।
ಮಂಡಲ ಮೂರರ ಮಧ್ಯದಿ ತೋರುವ ಕೆಂಡಗಣ್ಣೊ
ಡೆಯನು ಕಂಡೆ ನಾ ಕಂಡೆ ॥೪॥

ಮನ್ನಿಸಿ ಕರೆದೆನ್ನನು "ನಿನ್ನ ನೀನೆ ಚನ್ನಾಗಿ ತಿಳಿ" ಎಂದನು ।
ಉನ್ನತ ಸೋಮೆಕಟ್ಟೆ ಈಶನ ಎನ್ನೊಳು ಭಿನ್ನವಿಲ್ಲದೆ
ಕಂಡು ನಿಬ್ಬೆರಗಾದೆನು ॥೫॥

---

೪೨. ಹೋಗಿ ನೋಡುವ ಬನ್ನಿರಿ ಶ್ರೀಗುರುವರನ
ಹೋಗಿ ನೋಡುವ ಬನ್ನಿರಿ ॥ಪ॥

ಹೋಗಿ ನೋಡುವ ಬನ್ನಿರಿ ಯೋಗಿಚರಣವ ।
ರಾಗರಹಿತ ಗುರು ನಾಗಭೂಷಣನನ್ನು ॥೧॥

ಪಾದ ಬಾಹ್ಯದಿ ಪವಳ ವೇದಾದಿ ಬ್ರಹ್ಮವು ।
ಬೋಧಮಯನು ಗುರು ಆದಿಯ ರುದ್ರನ ॥೨॥

ಗುರು ಎಂಬ ವಾಕ್ಯವು ಹರನ ಮಂತ್ರದ ಮೂಲ
ಗುರುಪಾದ ಧ್ಯಾನವೆ ಪರಮಪದವಿ ಮೂಲ ॥೩॥

ಗುರುಪಾದವನು ಕಂಡು ಅರಿವಿನಿಂ ಕೂಡಲು ।
ಸ್ಥಿರಮುಕ್ತಿ ಪದವಿ ಬೆರೆದು ನೋಡುವ ಬನ್ನಿರಿ ॥೪॥

ಧ್ಯಾನಧಾರಣವೆಂಬ ಮೌನ ಸೋಮೆಕಟ್ಟೆ ।
ಜ್ಞಾನಿಯ ಕೂಡಲು ನೂನದಿ ಸ್ವಾಮದಿ ॥೫॥

---

೪೩. ಕುಶಲ ಕೈಲಾಸ ಈಶನೆ । ಎನ್ನಸುವಿನೊಳು ವಾಸ ॥ಪ॥

ಅಸಮ ಭಕ್ತರ ಮನದ ವಾಸನೆ । ಕುಶಲ ಭಕ್ತಿಯ ತೋರಿ ಎನ್ನನು।
ವಸುಮತಿಯೊಳು ಸುವರ್ಣಪುರದಿ ಜಸವಡೆದಿಹ ಈಶಾಧೀಶ ॥೧॥

ಅಷ್ಟ ತನುವದು ಕೂಡಿದ ಮಹಾ ಪಟ್ಟಣದಿ ನೀನಿರ್ಪೆ ದೇವ।
ಅಷ್ಟ ಮದಗಳ ನಷ್ಟ ಮಾಡಿದ ಶ್ರೇಷ್ಠ ಗುರುವರ ಶೇಷ ವಾಸ ॥೨॥

ಅಜಹರಿಯು ಸುರಪ ವಿವಿಜರು ಗಜಮುಖನು ನರನಾಗ ಕಿನ್ನರ॥
ಭಜಿಸಿ ಕಾಪಾಡುತ ವರವ ಬೇಡುತ ಅಜಗಣಾದಿಗಳೆಲ್ಲ ಭಜಿಪರು ॥೩॥

ಮೂರು ಮಂಡಲ ಮಧ್ಯೆ ತೋರುವ ಮೂರು ಕಣ್ಣ ದೇವ ನಿಮ್ಮಯ॥
ಮೂರು ಆತ್ಮರ ಮೂಲ ಕರ್ತನೆ ಮೂರು ರೂಪು ತೋರು ತೋರು ॥೪॥

ಆ ಮಹಾ ಉನ್ಮನೆಯ ವಾಸನೆ ಸೋಮಶೇಖರ ಸಲಹು ಈಶನೆ।
ಸೋಮೆಕಟ್ಟೆ ವಾಸ ವಾಸಪ್ರೇಮ ಸದ್ಗುರು ಸಲಹು ಸಲಹು ॥೫॥

---

೪೪. ಶ್ರೀಗುರು ಬಸವಲಿಂಗ। ಧಾಮ ನುತ ಜನಸಂಗ।
ಸ್ವಾಮಿ ನೀ ಎನ್ನ ವಾಙ್ಮನದಿ ನಿಂದು
ಪ್ರೇರಣೆಯ ಮಾಡಿ ನೀಂ। ಬಾಲಕರ ತೊದಲ್ನುಡಿ।
ಯ ಲಾಲಿಸಿ ಪಾಲಿಪುದು ಶರಣು ಶರಣು ॥ಪ॥

ತಂದೆ ಗುರು ರಾಚಪ್ಪ ಇಂದುಧರ ರುದ್ರೇಶ।
ಹೊಂದಿದಾ ಜಂಗಮವು ಪ್ರಭು ಚನ್ನಬಸವ॥
ಇಂದಿವರ ಬಲವಿರಲು ಮುಂದೆನಗೆ ಜನ್ಮದ।
ದಂದುಗಗಳೇನಿಲ್ಲವೆಂದಿರ್ಪೆನು ॥೧॥

ಬಲ್ಲವರು ಬಾಲ್ನುಡಿಗಳಲ್ಲೇ ತಪ್ಪಿರ್ದೊಡಂ।
ತಳ್ಳಿಹಾಕದೆ ಮತ್ತೆ ಒಳ್ಳೆನಿಸಿ।

ಮೆಲ್ಲಡಿಯ ಕರುಣವನು ನಿಲ್ಲದೆ ಪಾಲಿಪುದು।
ಎಂದೆಲ್ಲ ಶಿವಶರಣರಿಗೆ ಎರಗಿ ಬಾಳ್ವೆ ॥೨॥

ಹಿಂದಣ ಭವಗಳು ಸಂದು ಹೋದುವು ಬಹಳ ಮುಂದೆ।
ನಿಮ್ಮಯ ಕಂದನೆಂದು ತಿಳಿದು॥
ಇಂದು ಸೋಮೇಕಟ್ಟೆ ಕರಿವೃಷಭ ಲಿಂಗದೊಳ್।
ಹೊಂದಿದ ಪದವಿತ್ತುಸಲಹುದೆನ್ನ ॥೩॥

---

೪೫. ಆಶ್ಚರ್ಯವಾಯಿತಲ್ಲ। ನಮಗೊಂದು ನಿಶ್ಚಯವು ತೋರಿತಲ್ಲ।
ಸಚ್ಚಿದಾನಂದೈಕರಸವೆ ವಿಗ್ರಹವಾಗಿ ಎಚ್ಚರವ ಕೊಟ್ಟಿತಲ್ಲ ॥ಪ॥

ಯಾಕಿನ್ನು ಮರವೆ ನಿಮಗೆ ವ್ಯವಹಾರ ಲೋಕದಂತಾಯಿತೆಂದು।
ಈ ಶುಕ್ಲವತ್ಸರದ ಪುಷ್ಯೋತ್ತರ ನಾಲ್ಕನೆಯ ಶುಕ್ರವಾರದ ರಾತ್ರಿಲಿ ॥೧॥

ರಾಚೋಟಿದೇವ ಬಂದು ವಾಚಕ್ಕೆ ಗೋಚರವಾಗಿಸೂಚಿಸಿದಕಥದಿಂದ।
ನಮಗಾಯಿತೀ ಹುಚ್ಚು ಈಚೆ ಜನ ಬಲ್ಲರೇನೊ ॥೨॥

ಪರಮ ಪ್ರಕೃತಿಯ ಸ್ಪರ್ಶದಿ ಅಂಧಕನು ಕುರುಹು ತೋರಿದ ತೆರದಲಿ।
ಅರಿವು ಮರವೆಯ ಸಂಗದಿಂದೊಗೆದ ಶರೀರವಿದನರಿದ ಮಾತ್ರವೆ ನಾಶವು ॥೩॥

ಮರವೆ ಮೋಡಗಳಿಲ್ಲವು ತಾವ್ಮುಡಿ ಅರಿವು ರವಿ ಕಾಣಗೊಡದಾ
ತೆರನಂತೆ।
ಪರಿಪರಿಯ ವಿಧವಾದ ಸಂಸಾರ ಪರಿಹರವ ಮಾಡೆನುತಲಿ ॥೪॥

ಯಾಕಿನ್ನು ಸಾವಕಾಶವು। ಲೌಕಿಕದ ಬಾಕಿ ಇನ್ನೇನು ನಮಗೆ।
ಸ್ವೀಕರಿಸಿ ನೀ ಸೋಮೆಕಟ್ಟೆ ಕರಿವೃಷಭೇಂದ್ರ ಲಿಂಗದೊಳೇಕವಾಗೆಂ
ದೊರೆದನು ॥೫॥

---

೪೬ ಏಕಾಂತ ಸೇರಲಿಬೇಕು ನಾವಿನ್ನು ಮೂಕರಾಗಲಿಬೇಕು।
ಏಕಾತ್ಮ ಧ್ಯಾನದೊಳು ಬಾಲಲೀಲೆಯು ಧರಿಸಿ ಭವಾರಣ್ಯ ದಹಿಸಬೇಕು ॥ಪ॥

ಇಷ್ಟವನು ಪೂರೈಸಿರೋ ಲೌಕಿಕದ ಗೋಷ್ಠಿಯನು ಬಿಡಿಸಿರಯ್ಯ।
ಶ್ರೇಷ್ಠ ಪರಶಿವ ನಿಮಗೆ ಭಕ್ತಿ ಜ್ಞಾನೈಶ್ವರ್ಯ ಎಷ್ಟು ಬೇಡಿದರೀವನು ॥೧॥

ನಿಮ್ಮ ಭಕ್ತಿಯು ಪಾಶವು ಚರಣಗಳ ಚನ್ನಾಗಿ ಬಿಗಿದಿರ್ಪುದು।
ಇನ್ನೆಲ್ಲೂ ಅತ್ತಿತ್ತ ಚರಿಸದಂತೆ ನಿಮಗೆ ಸಂಚಿತ ರೂಪಾದವು ॥೨॥

ಮುಕ್ತ ಬಂದಲ್ಲಿ ನಿಮಗೆ ಪೇಳುವೊಡೆ ವಿರಕ್ತಿ ಮುಂದರಿವುದೆಮಗೆ।
ನೋಡುವೊಡೆ ಬಾಲ್ಯದಲಿ ಬಹಳ ಭ್ರಮೆಯಿರುವಂತೆ ತೋರದೇಹವು ಕಾಣ್ಬದು ॥೩॥

ಕಾಯ ವಾಚವು ಮಾನಸ ಮೂರರೊಳು ತಾನೇ ಶಿವನಿರ್ಪನಾಗಿ।
ಬಾಯ ಮನ್ನಣೆಯಲ್ಲ ಲೋಕಸ್ಥಂಗಿಗನಲ್ಲ ಪರಶಿವನು ತಾನೆ ಬಲ್ಲ ॥೪॥

ಒಂದು ತಿಂಗಳು ವಾಯಿದೆ ನಮಗೆ ನಿಮಗೆ ಎರಡು ತಿಂಗಳು ಆಗಲು।
ಬಂಧರಹಿತನು ಸೋಮೇಕಟ್ಟೆಕರಿವೃಷಭೇಂದ್ರ ಎಂದಿಗೂದೊರೆಯು ನೋಡಿ ॥೫॥

---

೪೭. ನಾವಾದರೊ ಹೋಗುತೇವೆ ನೀವಾದರೀದೇ
ಹವೇನಾದರೂ ಮಾಡಿಕೊಳ್ಳಿ ನಮಗೇತಕಿದರ ಸಂಗ ॥ಪ॥

ದೇಹಬಿಟ್ಟು ಹೋದರೆಂಬ ಭಾವವ ಮಾಡಬೇಡಿ
ದೇಹಗೇಹವು ಬ್ರಹ್ಮಾಂಡದೊಳಹೊರಗೆಲ್ಲ ॥೧॥

ಎಲ್ಲವೂ ನಾವೆಯಾಗಿ ಎಲ್ಲಕ್ಕೂ ಸಾಕ್ಷಿಯಾಗಿ।
ಎಲ್ಲೆಲ್ಲಿ ನೋಡಿದರಲ್ಲಲ್ಲಿ ನಾವೆಯಾಗಿ ॥೨॥

ಸ್ವರ್ಗ ಮರ್ತ್ಯವು ಭರ್ಗ ಲೋಕಾಪೇಕ್ಷಿತರಲ್ಲ
ಭರ್ಗೋದೇವನೆ ಸಾಕ್ಷಿ ನಿರ್ಗುಣಾನಂದದೊಳು ॥೩॥

ಧರೆಯೊಳು ಮುಕ್ಷುಕಪುರಿ ಪರಮ ಸದ್ಭಕ್ತರಿಷ್ಟ ।
ಇರುವ ನಿಮಿತ್ತದಿಂದ ಪರಶಿವ ಸಮಾಧಿಯೊಳು ॥೪॥

---

೪೮. ತಿರುಗಲಾರೆವೋ ನಾವು ಸೊರಗಲಾರೆವೊ ॥ಪ॥

ತಿರುಗಿ ತಿರುಗಿ ಪರರ ಬೇಡಿ ಕರಗಿ ಕೊರಗಿ ಸಾಯಲಾರೆ ।
ಪರಮ ಗುರುವೆ ನಿಮ್ಮ ಕರುಣದಿರವಿನೊಳಗೆ ಇರಿಸಿ ಸಲಹೊ ॥೧॥

ಎಷ್ಟು ಜನ್ಮವಾಯ್ತೊ ಹುಟ್ಟಿ ಸೃಷ್ಟಿಯೆಲ್ಲವನ್ನು ತಿರುಗಿ ।
ಹೊಟ್ಟೆಹೊರೆದುದಲ್ಲದಿಹದೊಳಿಷ್ಟು ಸುಖವು ಕಾಣಲಿಲ್ಲ ॥೨॥

ಧರೆಯೊಳೀ ಮುಕ್ಷುಕಪುರದಲಿರುವ ಸೋಮೆ ಕಟ್ಟೆ
ಕರಿವೃಷಭಲಿಂಗದಲ್ಲಿ ಬೆರಸಿ ಹೋಗುತೇವೆ ॥೩॥

---

೪೯. ತಿಳಿದುದನು ಪೇಳ್ವೆ ಬಲ್ಲವರು ಲಾಲಿಸಿ ನೀವು ।
ಇಳೆಯೊಳಾದಿಗೆ ಆಧಾರವಾದುದನು ॥ಪ॥

ಸತಿಪತಿಗಳಿಲ್ಲದೆಯೆ ಉತ್ಪತ್ತಿಯೊಂದಾಯ್ತು ।
ಮತಿಗಶಕ್ಯವು ಅದರೊಳ್ಮೊಳಕೆ ಮೂರಾಯ್ತು ।
ಅತಿಯಾಗಿ ಬೆಳೆದಂಥ ಮೊಳಕೆ ವಿವರವ ಪೇಳ್ವೆ ।
ಗತಿಯ ಬಯಸುವರೆಲ್ಲ ಲಾಲಿಸಿ ತಿಳಿದು ನೋಡಿ ॥೧॥

ಮೊದಲ ಮೊಳಕೆಗೆ ಐದು ವಿಧವಾದ ಕೊನೆಯಾಯ್ತು ।
ಅದರೊಳಗೆ ಹುಸಿ ಕಾಯಿ ವಿಧಿಸಿದರೆ ದಿಟವಾಯ್ತು ॥

ಮುದವಲರಿ ಮೋಕ್ಷಪಡೆಯುವರೆಲ್ಲ ಇದನರಿತು ।
ಒಡೆದು ಕಳೆಯಿರಿ ಭವದ ಬಂಧವನು ॥೨॥

ನಡುವಣ ಮೊಳಕೆಗೆ ಬುಡದಂತೆ ಎಲೆ ನಾಲ್ಕು ।
ಕಡೆಯ ಮೊಳಕೆಗೆ ನಾಲ್ಕು ಬುಡವಾಗಿ ಇರುತಿಹುದು ॥
ನಡುವಣ ಮೊಳಕೆಯೆ ಕಡೆದಿಹುದು ಇವು ಮೂರ
ಒಡೆನಾದವ ಸೋಮೆಕಟ್ಟೆ ಕರಿವೃಷಭ ॥೩॥

---

೫೦. ತರಳೆ ಬೇಗದಿ ತಂದು ತೋರೆ । ತಾರಕವ ಬೋಧಿಸಿದನ ।
ತಾರಕವ ಬೋಧಿಸಿದನ । ಶೃತಿಸಾರದಮೃತವ ಎರೆದನಾ ॥ಪ॥

"ಪರಮ ಅನುಭವಬೋಧೆ" ಬೋಧಿಸಿ ಕರಣದೊಳಹೊರಗಿರ್ಪನ ।
ಶರಣ ಜನರ ಹೃದಯಕಮಲದಿ ನಿರುತ ಗೀತವ ಪಾಡುವನ ॥೧॥

"ಅನುಭವದ ಸಾರ" ವನು ಎರೆದು ಮನದ ಮಲಿನವ ತೊಳೆದನಾ ।
ಅನವರತ "ವಿವೇಕಚಿಂತಾಮಣಿ" ಯನ್ನೊಳಗಿಟ್ಟನ ॥೨॥

"ಪಾರಮಾರ್ಥ ಪ್ರಕಾಶಿಕೆ" ಯೊಳೆನ್ನ ಪರಮಜೀವರ ಕೂಡಿದನ ।
ಧೀರ ಕೈವಲ್ಯವನು ಪಡೆಯುವ ಸಾರ ಪದ್ಧತಿ ಪೇಳ್ದನ ॥೩॥

ಶಂಭುರೂಪವನಿಂಬುಗೊಂಡು ಕುಂಭಿಣಿಯೊಳ್ ನಿಂದಿರುವನ ।
ಹಂಬಲಿಸುತಿಹ ಯೋಗಿಜನಕೆ ಚಿದಂಬರವೆ ತಾನಾದನ ॥೪॥

ಸೋಮೆಕಟ್ಟೆಯ ನೇಮಸ್ಥಲದೊಳು ಕಾಮಿಸೆ ನಗೆಯು ಒಲಿದನ ।
ನಾಮರೂಪು ಕ್ರಿಯೆಗಳಿಲ್ಲದ ನಿಸ್ಸೀಮ "ನಿಜಗುಣ" ಧಾಮನ ॥೫॥

---

# ಪುರಾಣ ಪ್ರವಚನ

(ಲೇಖಕ:— ಸಮಾಜ ಸೇವಕ)

---

ಭರತಖಂಡದ ಜನಸಾಮಾನ್ಯರನ್ನೆಲ್ಲ ಅಕ್ಷರಜ್ಞರನ್ನಾಗಿ ಮಾಡು ವದು ಸುಲಭಸಾಧ್ಯವಾದ ಮಾತಲ್ಲ. ಯುಗಯುಗಾಂತರಗಳಿಂದಲೂ ಇಂಥ ಸಾಹಸದ ಕಾರ್ಯಕ್ಕೆ ಯಾರೂ ಕೈಹಾಕಿಲ್ಲ. ಅಕ್ಷರ ಜ್ಞಾನವು ಯಾವಾಗ್ಯೂ ಅಲ್ಪ ಸಂಖ್ಯಾಕ ಜನರ ಸೊತ್ತಾಗಿರುವದು. ಬಹು ಜನರು ಅಕ್ಷರ ಶತ್ರುಗಳಾಗಿದ್ದರೂ ಧರ್ಮ, ನೀತಿ, ಕಲಾಕೌಶಲ್ಯ, ವ್ಯವಹಾರ ಜ್ಞಾನ, ಉದ್ಯೋಗ, ಸಾಹಿತ್ಯ ಮೊದಲಾದ ವಿಷಯುಗಳ ಬಗ್ಗೆ ಅವರಿಗೆ ನಾನಾಮುಖಗಳಿಂದ ಶಿಕ್ಷಣವು ದೊರೆಯುತ್ತಿದ್ದಿತು. ಈಗಿನಂತೆ ಶಾಲೆಗಳ ಲ್ಲಿಯೇ ಅವುಗಳನ್ನು ಕಲಿಸಬೇಕೆಂಬ ನೇಮವೇನೂ ಇದ್ದಿದ್ದಿಲ್ಲ. ವ್ಯವ ಹಾರೋದ್ಯೋಗ ಕಲಾಕೌಶಲ್ಯಗಳಂತೂ ಸಂತಾನಪರಂಪರಾಗತವಾಗಿ ನಡೆಯುತ್ತ ಬಂದಂಥವುಗಳಾಗಿರುತ್ತವೆ. ಧರ್ಮ ನೀತಿ ಸಾಹಿತ್ಯ ವಿಷಯು ಗಳು ಗುಡಿ, ಮಠ, ತೀರ್ಥಕ್ಷೇತ್ರ ಮುಂತಾದ ಪವಿತ್ರ ಸ್ಥಳಗಳಲ್ಲಿ ಪ್ರಚಾ ರಕರಿಂದ ಪದೇಪದೇ ಸಾಗಿಸಲ್ಪಡುತ್ತಲಿವೆ. ಜನರು ಅಕ್ಷರಜ್ಞರಾಗಿ ಗ್ರಂಥ ಗಳನ್ನೋದಿ ವಿವಿಧ ವಿಷಯು ಜ್ಞಾನವನ್ನು ಮಾಡಿಕೊಳ್ಳದೆ ಶ್ರವಣ ಮಾತ್ರ ದಿಂದಲೇ ಅನೇಕ ವಿಷಯುಗಳನ್ನು ತಿಳಿದುಕೊಳ್ಳುತ್ತಿದ್ದರು. ಈ ಮೇರಿಗೆ ಲಾವಣಿ, ಹಾಡಿಕೆ, ದಾಸರ ಪದ, ತತ್ವಪದ (ಏಕದಾರಿ), ಗೊಂದಲಿಗರ ಕಥೆ, ಬೈಲಾಟ, ಪುರಾಣಪುಣ್ಯಕಥೆ, ಕೀರ್ತನಪ್ರವಚನ ಮುಂತಾದವು ಗಳು ನಿರಕ್ಷರ ಕುಕ್ಷಿಗಳಾದ ಜನರಿಗೆ ಪ್ರಾಪಂಚಿಕ ಪಾರಮಾರ್ಥದ ಜ್ಞಾನ ವನ್ನೊದಗಿಸಿಕೊಟ್ಟು ಅವರಿಗೆ ಮನೋರಂಜನೆಯನ್ನುಂಟು ಮಾಡುವದಲ್ಲದೆ ಅವರನ್ನು ಸನ್ಮಾರ್ಗಕ್ಕೆ ಹಚ್ಚುತ್ತಿದ್ದವು. ಕೇವಲ ಶ್ರವಣ ಮಾತ್ರದಿಂದ ಸಾಮಾನ್ಯ ಜನರು ರಾಮಾಯಣ ಮಹಾಭಾರತ ಕಥೆಗಳನ್ನೆಲ್ಲ ಅರಿತು ಕೊಂಡಿರುವರು. ಎಷ್ಟೋ ಜನರು ನೆನಪಿನ ಶಕ್ತಿಯಿಂದ ಬಹು ಉದ್ದುದ್ದ ವಾದ ಹಾಡುಗಳನ್ನು ಕಂಠೋಕ್ತವಾಗಿ ಹಾಡಿ ಜನರನ್ನು ಮನರಂಜಿಸುತ್ತಿ ರುವರು. ಆದರೆ ಸುಶಿಕ್ಷಿತರ ಜ್ಞಾನವು ಪುಸ್ತಕಗಳಲ್ಲಿರುವದಷ್ಟೇ ಅಲ್ಲದೆ ತಲೆಯುಲ್ಲಿಲ್ಲ. ಅಕ್ಷರಜ್ಞರಾಗಿ ಸ್ಮರಣಶಕ್ತಿಯನ್ನೂ, ಶರೀರ ಸಾಮರ್ಥ್ಯ ವನ್ನೂ, ಆಧ್ಯಾತ್ಮಕೋನ್ನತಿಯನ್ನೂ ಪಡೆಯದಿದ್ದರೇನು ಪ್ರಯೋಜನ?

ನಿರಕ್ಷರಿಯಾಗಿ ರೂಢಿಯಂತೆ ಪುರಾಣ ಪ್ರವಚನಾದಿಗಳ ಮೂಲಕ ಇಹಪರ ಸುಖವನ್ನೀವ ವಿಷಯಗಳನ್ನು ತಿಳಿದುಕೊಂಡು ಸುಖಿಸುವದು ಲೇಸಲ್ಲವೇ ?

ಆದರೆ ಕಾಲಗತಿಯು ವಿಚಿತ್ರವಾದುದು! ಪುರಾಣ ಕೀರ್ತನಗಳೇನೋ ಜನ ಸಾಮಾನ್ಯರಲ್ಲಿ ಭಕ್ತಿ ಭಾವನೆಗಳನ್ನುಂಟು ಮಾಡಲಿಕ್ಕೆ ಏರ್ಪಟ್ಟ ಸಾಧಗನಳು ನಿಜ. ಆದರೆ ಈಗಿನ ಕಾಲದಲ್ಲಿ ಅವು ಸ್ವಾರ್ಥಕಲಹ, ವ್ಯಾಜ್ಯ, ಕೋರ್ಟ ಕಚೇರಿ, ಒಡಕು, ಬಣಗಳು ಇವೇ ಮೊದಲಾದ ಕ್ಷುದ್ರ ವೃತ್ತಿಯ ಕೆಲಸಗಳಿಗೆ ಇಂಬುಗೊಟ್ಟಿರುವವು. ನಿಸ್ವಾರ್ಥದಿಂದ ಮಾಡುವ ಕೆಲಸಗಳೆಲ್ಲವೂ ಸುಸೂತ್ರವಾಗಿಯೇ ಸಾಗುವವು. ಆದರೆ ಸ್ವಾರ್ಥದ ಅಂಶವು ಅವುಗಳಲ್ಲಿ ಒಡಮೂಡಿದರೆ ಸರ್ವಸ್ವಿ ಘಾತವಾಯಿತೆಂದೇ ತಿಳಿಯಬೇಕು. ಅರ್ಧಮರ್ಧ ಅರಣ್ಯ ಪಂಡಿತರು ಈಗ ಪುರಾಣ ಹೇಳಿ ತಮ್ಮ ಹೊಟ್ಟೆ ಹೊರಕೊಳ್ಳುತ್ತಿದ್ದಾರೆ. ಹೊಟ್ಟೆಗಾಗಿ ಪುರಾಣ ಹೇಳುವದು ನಿಸ್ವಾರ್ಥ ಬುದ್ಧಿಯ ಕಾರ್ಯವಲ್ಲ. ಹೊಟ್ಟೆಯ ದಶೆಯಿಂದ ಇಂತಿಷ್ಟು ರೂಪಾಯಿಗಳನ್ನು ಕೊಟ್ಟರೆ ಪುರಾಣ ಹೇಳುತ್ತೇವೆಂದು ಮಾತು ಮುಗಿಸುವ ಸ್ವಾರ್ಥಿಗಳು ಬರೇ ರೂಪಾಯಿಗಳ ಮೋರೆಯನ್ನು ನೋಡುವರಲ್ಲದೆ ಜನರ ಆತ್ಮೋನ್ನತಿಯ ಕಡೆಗೆ ಲಕ್ಷಕೊಡುವದಂತೂ ದೂರೇ ಉಳಿಯಿತು. ತಮ್ಮಲ್ಲಿ ಸ್ವಾರ್ಥದ ಮೊಟ್ಟೆಯನ್ನು ತುಂಬಿಕೊಂಡು ಅನ್ಯರಿಗೆ ಉದಾರಿಗಳಾಗಿರೆಂದು ಹೇಳುವ ಪುರಾಣಿಕರ ಮಾತುಗಳು ಯಾರ ಮನಸ್ಸಿನ ಮೇಲೆಯೂ ಸ್ವಲ್ಪೂ ಪ್ರೇರಣೆಯನ್ನುಂಟುಮಾಡಲಾರವು.

ಭಿಕ್ಷುಕರನ್ನು ನೋಡಿ ಭಿಕ್ಷುಕರು ಶ್ವಾನಗಳಂತೆ ಬೊಗಳುವ ಹಾಗೆ ಪುರಾಣ ಹೇಳುವವರು ಪರಸ್ಪರ ಅಸೂಯೆಯಿಂದ ಮಾತು ಬೆಳಿಸಿ ಊರಲ್ಲಿ ಪಂಗಡಗಳನ್ನು ಬೆಳಿಸಿ ವ್ಯಾಜ್ಯವಾಡಹಚ್ಚುವರು. ಬೇರೆ ಬೇರೆ ಪಂಗಡದವರು ಪಕ್ಷಾಭಿಮಾನದಿಂದ ಪುರಾಣಕ್ಕಾಗಿ ದುಡ್ಡು ಸೂರೆ ಮಾಡುವರು. ನ್ಯಾಯಕ್ಕೂ ತಮ್ಮ ಶಕ್ತ್ಯಾನುಸಾರ ಸಲ್ಲಿಸುವರು. ಪುರಾಣ ಪುರುಷರ ಸಂಬಂಧವಾಗಿ ಜನರಲ್ಲಿ ಭಕ್ತಿಯುಂಟಾಗದೆ ಪಕ್ಷಪಾತ ವಿರೋಧಗಳು ಬೆಳೆಯಲಾರಂಭಿಸುವವು. ಒತ್ತಟ್ಟಿಗೆ ಶಿವಪುರಾಣ ಮತ್ತೊತ್ತಟ್ಟಿಗೆ ಶಂಕರ ಪುರಾಣ ಹಚ್ಚಿರುವರೆಂದು ಕಲ್ಪಿಸುವಾ. ಶಿವನ ಪಕ್ಷದವರು ಶಂಕರನ ಮೇಲೆ ಹಲ್ಲು ಕಡೆಯುವರು. ಶಂಕರನ ಪಕ್ಷದವರು ಶಿವನ ಮೇಲೆ ವಿಷ ಕಾರುವರು. ಶಿವನೂ ಶಂಕರನೂ ಒಂದೆಂಬ ಅರಿವು ಸಹ ಅವರಿಗಿರುವದಿಲ್ಲ. ಈ ಸಂದರ್ಭದಲ್ಲಿ ಒಂದು ದೃಷ್ಟಾಂತವು ನೆನಪಾಗುತ್ತದೆ. ಒಬ್ಬ

ಗಂಡನಿಗೆ ಇಬ್ಬರು ಹೆಂಡಂದಿರಿದ್ದರಂತೆ. ಒಬ್ಬಳು ಗಂಡನ ಬಲಗಾಲ ನ್ನೂ ಮತ್ತೊಬ್ಬಳು ಎಡಗಾಲನ್ನೂ ಸೇವೆಮಾಡುತ್ತಿದ್ದರಂತೆ. ಬರಬ ರುತ್ತ ಸವತಿ ಮತ್ಸರದಿಂದ ಎಡಗಾಲನ್ನು ಸೇವಿಸುವವಳು ಗಂಡನ ಬಲಗಾ ಲನ್ನೂ ಬಲಗಾಲಿನ ಒಡತಿಯು ಎಡಗಾಲನ್ನೂ ಮುರಿದಿಟ್ಟು ಗಂಡನನ್ನು ಮೂಲೆಗುಂಪು ಮಾಡಿದರಂತೆ! ಇದೇ ಸ್ಥಿತಿಯು ನಮ್ಮ ಸಮಾಜಕ್ಕೂ ಉಂಟಾಗಿರುವವು. ಸುಶಿಕ್ಷಿತರೆನಿಸಿಕೊಳ್ಳುವವರು ಅಶಿಕ್ಷಿತರಲ್ಲಿ ಅಸೂಯೆ ಹುಟ್ಟಿಸಿ ನಮ್ಮ ಸಮಾಜ ಪುರುಷನ ಕಾಲು ಮುರಿದು ಬಿಟ್ಟಿದ್ದಾರೆ ಪುರಾಣ ಪುಣ್ಯಕಥೆಗಳು ಜನರನ್ನುದ್ಧಾರ ಮಾಡುವದರ ಬದಲು ಅವರನ್ನು ಅಧೋಗತಿಗೆಳೆಸುತ್ತಿರುವವು. ಹೀಗಿರಲು ಜನಗಳು ಪುರಾಣ ಪ್ರವಚನ ಗಳನ್ನು ಹಚ್ಚಿ ಪರಸ್ಪರ ವಿರೋಧ ಬೆಳಿಸಿ ಮನಸ್ತಾಪ ಮಾಡಿಕೊಳ್ಳುವದ ಕ್ಕಿಂತಲೂ ಸ್ವಸ್ಥವಾಗಿ ತಮ್ಮ ವ್ಯವಹಾರ ಉದ್ಯೋಗಗಳನ್ನು ಮಾಡಿ ಕೊಂಡು ಸುಮ್ಮನೆ ಸುಖಿಸಬಾರದೇ?

ಪುರಾಣಪ್ರವಚನ ಕೀರ್ತನೆಗಳು ಜನಜಾಗ್ರತಿಗೆ ಅವಶ್ಯವಾಗಿ ಬೇಕು. ಜನರಲ್ಲಿ ಒಡಕನ್ನು ಹೆಚ್ಚಿಸುವ ಸ್ವಾರ್ಥಬುದ್ಧಿಯವರ ಪುರಾ ಣವು ಸಾಕು. ಹೊಟ್ಟೆ ಹರಿದುಕೊಳ್ಳುವ ಈಗಿನ ಹೋರಾಟದ ದಿನಗಳಲ್ಲಿ ನಿಸ್ವಾರ್ಥ ಬುದ್ಧಿಯಿಂದ ಪುರಾಣ ಹೇಳುವವರು ಸಿಗುವದು ಅಪರೂಪ. ಇಂಥ ಪ್ರಸಂಗದಲ್ಲಿ ಹೇಗೆ ನಡೆಯಬೇಕು? ಜನ ಹಿತಕಾರಿಗಳಾದ ಪುರಾಣ ಕೀರ್ತನ, ವ್ಯಾಖ್ಯಾನ, ಮ್ಯಾಜಿಕ್ ಲ್ಯಾಂಟರ್ನ ಮುಂತಾದ ಕಾರ್ಯಗ ಳನ್ನು ಸುಸಂಘಟಿತ ರೀತಿಯಿಂದ ಸಾಗಿಸಬೇಕು. ಮುನಿಸಿಪಾಲ್ಟಿ, ಲೋ ಕಲ್‌ಬೋರ್ಡ, ವಿದ್ಯಾಸಂಸ್ಥೆ, ಆಶ್ರಮ, ತರುಣಸಂಘ, ಮಹಾಸಭೆ ಮುಂತಾದ ಸಂಘಗಳ ಪರವಾಗಿ ಈ ಕೆಲಸಗಳು ಕ್ರಮಬದ್ಧವಾಗಿ ನಡೆಯ ಬೇಕು. ಯೋಗ್ಯರಾದ ಪುರಾಣಿಕರು, ಕೀರ್ತನಕಾರರು, ವ್ಯಾಖ್ಯಾನಕ ರ್ತರು ಮೊದಲಾದವರಿಗೆ ಯೋಗ್ಯ ವೇತನ ಕೊಟ್ಟು ಊರೂರಿಗೆ ಕಳು ಹಿಸಿ ಅವರಿಂದ ಪ್ರಚಾರಕಾರ್ಯವನ್ನು ಮಾಡಿಸಬೇಕು. ಇದರಿಂದ ಸಮಾಜದಲ್ಲಿ ಇಂಥ ಪವಿತ್ರ ಕಾರ್ಯಗಳು ನಿರಂತರವಾಗಿಯೂ ಕ್ರಮ ಬದ್ಧವಾಗಿಯೂ ನಡೆಯುವವು. ಕಂಡಕಂಡವರು ಕಂಡಕಂಡಲ್ಲಿ ಕಂಡ ಕಂಡಂತೆ ಪುರಾಣ ಹೇಳಲುಪಕ್ರಮಿಸಿದರೆ ಸಮಾಜದಲ್ಲಿ ಬಂಡಾಟವೇ ಬಂಡಾಟವಾಗುವದು.

ಜನತಾ ಶಿಕ್ಷಣವು ಶಿಕ್ಷಣದ ಮುಖ್ಯಾಂಗವಾಗಿದೆ. ವಿದ್ಯಾರ್ಥಿ ಗಳಿಗೆ ಕೊಡುವ ಶಿಕ್ಷಣವು ಶಿಕ್ಷಣ ಸಂಸ್ಥೆಗಳಿಂದ ಕ್ರಮಬದ್ಧವಾಗಿರಲು ಜನ

ತೆಗೆ ಕೊಡುವ ಶಿಕ್ಷಣವಾದರೂ ಏಕೆ ಕ್ರಮಬದ್ಧವಾಗಿರಬಾರದು ? ಅಸಂಬದ್ಧವಾದ ಗೊಳ್ಳು ಮಾತುಗಳನ್ನು ಸಾರಿಸಿ ಜನರಿಂದ ದುಡ್ಡು ಸೆಳೆಯುವ ಅಶಿಕ್ಷಿತ ಪುರಾಣಿಕರಿಂದೇನು ಪ್ರಯೋಜನ ? ಸುಶಿಕ್ಷಿತರೂ ಸುಸ್ವಭಾವದವರೂ ಆದ ಸಜ್ಜನರಿಂದ ಪುರಾಣ ಶ್ರವಣವಾದರೆ ನಿಜವಾದ ಹಿತವು ಜನಗಳಿಗೆ ಆಗುವದು. ಕೆಲವೆಡೆಯಲ್ಲಿ ಶೃಂಗಾರ ರಸೋದ್ದೀಪಕವಾದ ವರ್ಣನೆಗಳಿಂದ ಜನರನ್ನು ವಿನೋದಗೊಳಿಸುವದುಂಟು. ಅಂಥ ಪುರಾಣಗಳನ್ನು ಕೇಳಲಿಕ್ಕೆ ಸ್ತ್ರೀಪುರುಷರು ಉತ್ಸುಕರಾಗಿ ಬರುವರು. ಇಂಥ ಪುರಾಣ ಶ್ರವಣದಿಂದ ಹಿತವಾಗುವದರ ಬದಲು ಅಹಿತವೇ ಹೆಚ್ಚಾಗುತ್ತದೆ. ಸಮಾಜ ಹಿತವನ್ನು ಚಿಂತಿಸುವವರು ಆದಷ್ಟು ಅಂಥ ಕೆಡಕು ಪುರಾಣಗಳನ್ನು ಪ್ರತಿಬಂಧಿಸುವದು ವಿಹಿತ.

ನಮ್ಮ ವೀರಶೈವ ಕವಿಗಳು ಕನ್ನಡ ಭಾಷೆಯಲ್ಲಿ ಬಹು ರಮ್ಯವಾದ ಎಷ್ಟೋ ಪುರಾಣಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಉತ್ಕೃಷ್ಟವಾದವುಗಳನ್ನು ಸಮಾಜದ ಮುಂದಾಳುಗಳು ಆರಿಸಿ ವಿದ್ವಾಂಸರಿಂದ ಪರಿಶೋಧಿಸಿ ಅಭ್ಯಾಸಕ್ಕಿಡಬೇಕು. ಅವುಗಳನ್ನು ಚನ್ನಾಗಿ ಅಭ್ಯಾಸ ಮಾಡಿ ಪರೀಕ್ಷೆಯಲ್ಲಿ ಪಾಸಾದವರಿಗೆ ಆಯಾಯ ಸಂಸ್ಥೆಯವರು ನೇಮಿಸಿಕೊಂಡು ಜನಜಾಗ್ರತಿಯ ಕೆಲಸವನ್ನು ಮಾಡಿಸಬೇಕು. ಅಂದರೆ ಒಂದು ವಿಶಿಷ್ಟ ತರದ ಕ್ರಮವು ನೆಲೆಗೊಳ್ಳುವದು. ಈ ಮೇರೆಗೆ ಜನತಾ ಶಿಕ್ಷಣಕ್ಕೆ ಸಾಧನೀಭೂತವಾದ ಪುರಾಣ, ಪ್ರವಚನ, ಕೀರ್ತನ ಮುಂತಾದ ಕಾರ್ಯಗಳು ಅತಂತ್ರವಾಗಿ ನಡೆಯದೆ ಸಂಸ್ಥೆಗಳ ಮುಖಾಂತರವಾಗಿ ಜರಗುವದು ಹೆಚ್ಚು ಶ್ರೇಯಸ್ಕರವು.



# ಮಾನಸ ಸಮುದ್ರ.

ಲೇಖಕ:— ಮಾನಸರಾಜಹಂಸ.

ಸಮುದ್ರದಮೇಲೆ ತರಂಗಗಳು ಅಲೆದಾಡುವಂತೆಯೂ, ಮೀನಗಳು ಸಂಚರಿಸುವಂತೆಯೂ, ನೌಕೆಗಳು ವಿಹರಿಸುವಂತೆಯೂ ನಮ್ಮ ಮಾನಸ ಸಮುದ್ರದಲ್ಲಿ ವಿಚಾರ, ಭಾವನೆ, ಅನುಭವ, ಕಲ್ಪನೆ ಮುಂತಾದ ತರಂಗ ಮೀನ ನೌಕಾದಿಗಳು ಸುಳಿದಾಡುತ್ತಿರುತ್ತವೆ. ಅಗಾಧವಾದ ಸಮುದ್ರದ ತಳದಲ್ಲಿ ಅಮೌಲ್ಯವಾದ ಮುತ್ತುರತ್ನಗಳೂ ಜಲಸಮಾಧಿಯನ್ನು ಹೊಂದಿದ ಜೀವಿಗಳೂ ಮತ್ತು ಹಡಗಗಳೂ ನೆಲಿಸಿರುವಂತೆ ನಮ್ಮ ಮನಸ್ಸಿನ ತಳದಲ್ಲಿ ಅನಾದಿಕಾಲದಿಂದ ಬಂದ ವಿಚಾರಗಳೂ, ಸಂಸ್ಕೃತಿಯೂ, ವ್ಯಸನಗಳೂ, ಹುಟ್ಟುಗುಣಗಳೂ ನಾವು ಕಲಿತು ಮರೆತ ಸರ್ವ ವಿಷಯಗಳೂ ಅಂಟಿಕೊಂಡಿರುವವು. ಸಮುದ್ರದಲ್ಲಿ ಅನಾದಿಕಾಲದ ಜಲವೂ ಉಂಟು. ಈಗಿನ ಕಾಲಕ್ಕೆ ವರುವರುಷ ಕೂಡುವ ನದಿಗಳ ಜಲವೂ ಉಂಟು. ಅದರಂತೆಯೇ ನಮ್ಮ ಮನಸ್ಸಿನಲ್ಲಿ ಅನಾದಿ ಕಾಲದ ವಿಚಾರಗಳೂ ಈಗಿನ ಕಾಲದ ವಿಚಾರಗಳೂ ಇರುತ್ತವೆ. ಸಮುದ್ರದ ತಳದಲ್ಲಿದ್ದ ಮೀನಗಳು ಮೇಲಕ್ಕೇಳುತ್ತೇಳುತ್ತ ಸಮುದ್ರದ ಪಾತಳಿಯ ಮೇಲೆ ಬಂದು ಕೂಡ್ರುವಂತೆ ಜನ್ಮಜನ್ಮಾಂತರದಲ್ಲಿಯೂ, ನಮ್ಮ ಬಾಲ್ಯದಲ್ಲಿಯೂ ಮನಸ್ಸಮುದ್ರದಲ್ಲಿ ಮುಳುಗಿಹೋಗಿದ್ದ ವಿಚಾರಗಳು ಸ್ವಪ್ನಾವಸ್ಥೆಯಲ್ಲಿ ಬಂದು ನಮ್ಮ ಮನಸ್ಸಿನ ಮೇಲ್ಭಾಗದಲ್ಲಿ ತೇಲಾಡುತ್ತವೆ. ನಾವು ಕನಸಿನಲ್ಲಿ ಈಗಿನ ಜನ್ಮದ ಸಂಗತಿಗಳನ್ನಷ್ಟೇ ಕಾಣುವದಿಲ್ಲ. ಹಿಂದಿನ ಜನ್ಮಗಳ ವಿಷಯಗಳೂ ಕನಸ್ಸಿನಲ್ಲಿ ಬಂದು ಹೋಗುತ್ತವೆ. ಸಮುದ್ರದ ಮೀನಗಳು ಮಂದಿಯ ಸುಳುವನ್ನು ನೋಡಿ ಫಕ್ಕನೆ ಮುಳುಗುವಂತೆ ಆತ್ಮನು ಎಚ್ಚತ್ತಕೂಡಲೆ ಸ್ವಪ್ನ ಸೃಷ್ಟಿಯ ವ್ಯವಹಾರಗಳೆಲ್ಲ ಗಕ್ಕನೆ ಮಾನಸ ಸಮುದ್ರದಲ್ಲಿ ಮುಳುಗಿಬಿಡುವವು. ಶೇಷಶಾಯಿಯಾದ ವಿಷ್ಣುವು ಮಹಾಸಾಗರದ ಮೇಲೆ ಮಲಗಿಕೊಂಡು ಸಮುದ್ರನಾಥನ ಮಗಳಾದ ಲಕ್ಷ್ಮಿಯೊಡನೆ ಬೆರೆತು ಮೋದದಿಂದ ವಿಹರಿಸುವಂತೆ ಆತ್ಮನು ಮನಸ್ಸಿನ ಮಗಳಾದ ಮಹಾಮಾಯೆಯನ್ನೊಡಗೂಡಿ ಮನಸ್ಸಿನಲ್ಲಿಯೇ ರಮಿಸುವನು.

ಸಮುದ್ರದ ನೀರು ಹೊಸದಲ್ಲ. ಅದರಂತೆ ನಮ್ಮ ಮನಸ್ಸಿನ ವಿಚಾರಗಳಾದರೂ ಇವತ್ತಿನವಲ್ಲ. ಸಮುದ್ರವು ಎಂದು ಹುಟ್ಟಿತೋ ಯಾರಿಗೂ ಗೊತ್ತಿಲ್ಲ. ಅದರಂತೆ ನಮ್ಮ ಮನಸ್ಸಾದರೂ ಯಾವ ಕಾಲ ದಿಂದ ಬಂದುದೋ ತಿಳಿಯದು. ನಮ್ಮ ಶರೀರವು ಕೇವಲ ನಮ್ಮ ತಾಯಿ ತಂದೆಗಳ ರಜೋರೇತಸ್ಸಿನಿಂದಷ್ಟೇ ಉಂಟಾಗಿಲ್ಲ. ನಮ್ಮ ದೇಹದಲ್ಲಿರುವ ಕಣಗಳು ಎಲವು ರಕ್ತಗಳು ಮೊದಲಾದ ಪಂಚಭೂತಾದಿಗಳು ಅನಾ ದಿಕಾಲದಿಂದಲೂ ವಂಶಪರಂಪರಾಗತವಾಗಿ ಬಂದಂಥವುಗಳಾಗಿವೆ. ಅದ ರಂತೆ ಮನಸ್ಸಾದರೂ ಇವತ್ತಿನ ವಿಚಾರಗಳಿಂದ ಕೂಡಿಕೊಂಡಿರುವ ದಿಲ್ಲ. ಮನಸ್ಸಿನಲ್ಲಿ ಅನಾದಿಕಾಲದ ವಿಚಾರಗಳೂ ಹಿಂದಿನ ಕಾಲದ ವರ ಅನುಭವಗಳೂ ಇರುವವಲ್ಲದೆ ನಮ್ಮ ಚಿಕ್ಕಂದಿನಲ್ಲಿ ಸಂಘಟಿಸಿದ ವಿಚಾರಗಳು ಸಹ ನೆಲಿಸಿರುತ್ತವೆ. ಹಿಂದಿನ ಸಂಗತಿಗಳೆಲ್ಲ ಮರೆತು ನಷ್ಟವಾಗಿ ಹೋಗಿರಬೇಕೆಂದು ನಾವು ತಿಳಿದಿದ್ದೇವೆ. ಆದರೆ ಅವು ನಾಶವಾಗಿಲ್ಲ. ನಮ್ಮ ಮನಸ್ಸಿನಲ್ಲಿಯೇ ಮುಳುಗಿಹೋಗಿರುವವು. ಪ್ರಸಂ ಗವಶಾತ್ ತೇಲುತ್ತ ಮೇಲಕ್ಕೆ ಬರುವವು. ದೈವಜ್ಞನಾದ ಆತ್ಮನು ಜನ್ಮಜನ್ಮಾಂತರಗಳ ಸಂಗತಿಗಳನ್ನು ಸ್ಮರಿಸಿಕೊಳ್ಳುವನು. ದೃಷ್ಟಾ ಎಂದೆ ನಿಸುವ ಋಷಿವರೇಣ್ಯರು ಯುಗಯುಗಾಂತರದಲ್ಲಿ ಸಂಘಟಿಸಿದ ಮಹಾ ವೇದವಾಕ್ಯಗಳನ್ನು ಸ್ಮರಿಸಿಕೊಂಡರು.

ಜಗತ್ತಿನ ಇತಿಹಾಸವೇ ನಮ್ಮ ಮನದಲ್ಲಿ ಮನೆ ಮಾಡಿಕೊಂಡಿದೆ. ಯಾವ ಕಾಲಕ್ಕೆ ಪರಮಾತ್ಮನು ಲೀಲಾ ಮಾತ್ರದಿಂದ ಈ ಜಗತ್ತನ್ನು ನಿರ್ಮಾಣ ಮಾಡಿದನೋ ಅದೇ ಕಾಲಕ್ಕೆ ನಮ್ಮ ಶರೀರ ಮನಸ್ಸುಗಳ ಅಸ್ತಿ ತ್ವವುಂಟಾಯಿತು. ಪರವಸ್ತುವಿನ ಅಂಶೀಭೂತರಾದ ಜೀವರುಗಳು ಪರ ಮಾತ್ಮನ ಬಾಹ್ಯ ಸ್ವರೂಪವಾದ ಸೃಷ್ಟಿಯನ್ನೇನು ಅರಿಯರೇ? ಆದರೆ ನಮ್ಮ ಅರಿವು ಕಿರಿದಾಗಿದ್ದು ಮರವು ಹಿರಿದಾಗಿದ್ದದರಿಂದ ಹಿಂದಿನದನ್ನೆಲ್ಲ ನಾವು ಮರೆತು ಬಿಟ್ಟಿದ್ದೇವೆ. ಜ್ಞಾನಿಗಳು ಅರಿವಿನ ಬೆನ್ನು ಹತ್ತಿ ಹೋಗು ವದರಿಂದ ಪರಮಾತ್ಮನ ಅರಿವೂ ಅವರಿಗೆ ಸುಲಭವಾಗಿ ಆಗುವದು. ದುರ್ಬಲಾತ್ಮರುಗಳಾದ ನಾವುಗಳು ಮರವೆಯೆಂಬ ಮಾಯೆಯ ಬಲಿಗೆ ಬಿದ್ದುದರಿಂದ ಪರಮಾತ್ಮನ ಅರಿವು ನಮಗಾಗದು. ನಿನ್ನಿನ ದಿವಸ ನಾವು ಏನನ್ನು ಉಂಡಿರುವೆವೋ ಏನೋ ಎಂಬದು ತಿಳಿಯದಂಥ ನಮ್ಮಗಳಿಗೆ ಜನ್ಮಜನ್ಮಾಂತರಗಳ ನೆನಪೂ ಆ ಪರವಸ್ತುವಿನ ಕುರುಹೂ ಹೇಗೆ ತಿಳಿದಾವು?

ಸಮುದ್ರದಲ್ಲಿ ಒಂದು ಬರ್ಫದ ಬಂಡೆಯು ಪೂರಾ ಮುಳುಗಿ, ಮೇಲೆ ಮಾತ್ರ ಏನೋ ಸ್ವಲ್ಪ ಭಾಗವು ಕಣ್ಣಿಗೆ ಬೀಳುವಂತೆ, ನಮ್ಮ ಮನಸ್ಸಿನಲ್ಲಿ ಅರುವಿನ ಭಾಗವು ೧೦ಂಕ್ಕೆ ೧ ರಂತೆ ಇದ್ದರೆ ಮರವೆಯ ಅಂಶವು ೧೦ಂಕ್ಕೆ ೯೯ ರಂತೆ ಇದೆ. ಅರುವಿನಿಂದ ನಾವು ಉಣ್ಣುತ್ತೇವೆ, ಮಾತನಾಡುತ್ತೇವೆ, ವಸ್ತುಗಳ ಅನುಭವ ಪಡೆಯುತ್ತೇವೆ. ದಿನಕ್ಕೆ ಎಷ್ಟು ಅರುವಿನ ಕೆಲಸ ಗಳನ್ನು ಮಾಡುತ್ತೇವೆಯೋ ಅವೆಲ್ಲವುಗಳನ್ನು ನಾವು ನೆನಪಿನಲ್ಲಿಟ್ಟಿರುವದಿಲ್ಲ. ಯಾರಾದರೂ ನಮಗೆ ಇವತ್ತಿನ ದಿವಸ ಮಾಡಿದ ವಿಚಾರ ಮತ್ತು ಕೃತಿ ಗಳನ್ನೆಲ್ಲ ಒಂದೂ ಬಿಡದಂತೆ ಡಾಯರಿಯಲ್ಲಿ ಬರೆಯಿರೆಂದು ಹೇಳಿದರೆ ಮುಖ್ಯವಾದ ಕೆಲವು ಸಂಗತಿಗಳನ್ನು ಮಾತ್ರ ನಾವು ಬರೆಯುವೆವಲ್ಲದೆ ಅನೇಕ ಸಣ್ಣಪುಟ್ಟ ಮಾತುಗಳನ್ನು ನಾವು ಮರೆತು ಬಿಡುತ್ತೇವೆ. ಅದೇ ಡಾಯರಿಯಲ್ಲಿ ಇವತ್ತು ಬರೆದ ಸಂಗತಿಗಳ ನೆನಪು ನಮಗೆ ನಾಳಿಗೆ ಆಗು ವದಿಲ್ಲ. ಯಾಕಂದರೆ ಮರವೆಯು ಘನವಾದುದಿರುವದರಿಂದ ಅರಿವು ಮಾಡುವ ಪ್ರಯತ್ನಗಳೆಲ್ಲ ಮರವೆಗೇ ಶರಣು ಹೋಗುತ್ತವೆ.

ಮಹಾಜ್ಞಾನಿಗಳೂ, ತತ್ವವೇತ್ತರೂ, ಮಹಾ ಯೋಗಿಗಳೂ ಅರಿ ವನ್ನೇ ಜಾಗ್ರತಗೊಳಿಸಿ ಮರವೆಯನ್ನು ಕ್ರಮೇಣ ನಾಶಮಾಡುತ್ತ ಹೋಗು ತ್ತಾರೆ. ಮರವೆಯು ಸಹಜ ಸ್ವಭಾವವು. ಅದನ್ನು ಜಯಿಸುವದು ಸಾಮಾನ್ಯರಿಗೆ ಸಾಧ್ಯವಲ್ಲ. ಮಹಾ ತಪಸ್ವಿಗಳು ಅರುವಿನ ಶಕ್ತಿಯ ನ್ನೆಲ್ಲ ಒತ್ತಟ್ಟಿಗೆ ಏಕಾಗ್ರಗೊಳಿಸಿ ಮರವೆಯೆಂಬ ಮಾಯೆಯನ್ನು ಸದೆ ಬಡೆಯುತ್ತಾರೆ. ಮರವೆಯೆಂಬ ಅಂಧಕಾರವು ನಾಶವಾಗುತ್ತ ಹೋದಂತೆ ಅರಿವೆಂಬ ಪ್ರಕಾಶವು ಹೆಚ್ಚಿ ಅದರಲ್ಲಿ ಪರಮಾತ್ಮನ ಸ್ವರೂಪವು ವಿರಾ ಜಮಾನವಾಗಿ ಬೆಳಗುವದು. ಅಂತೆಯೇ ಬಸವಣ್ಣನವರು "ಮರವು ಘನ ನಿಮ್ಮ ನೆನೆವ ಅರಿವು ಕಿರಿದೆನ್ನಬಹುದೇ? ಬಾರದಯ್ಯಾ ಕೂಡಲ ಸಂಗಮದೇವಾ" ಎಂದು ನುಡಿದಿರುವರು.

ಸಮುದ್ರಕ್ಕೆ ಆಕಾರ ಪ್ರಮಾಣಗಳಿರುವಂತೆ ಮನಸ್ಸಿಗೆ ಆಕಾರ ಪ್ರಮಾಣಗಳಿಲ್ಲ. ಮನಸ್ಸಂದರೇನೆಂಬುದೇ ಯಾರಿಗೂ ಗೊತ್ತಿಲ್ಲ. ಮನ ಸ್ಸೆಂದರೇನೋ ಒಂದು ಇದೆಯೆಂಬ ಸಿದ್ಧಾಂತದ ಮೇಲಿಂದಲೇ ನಾವು ಅನೇಕ ವಿಚಾರಗಳ ತಳಹದಿಯನ್ನು ಕಟ್ಟಲಾರಂಭಿಸಿದ್ದೇವೆ. ಇದೇ ಮೇರೆಗೆ ಜೀವವೆಂದರೇನು? ವಿದ್ಯುತ್ ಎಂದರೇನು? ಎಂಬ ವಿಷಯ ಗಳು ಯಾರಿಗೂ ಹೇಳಲಿಕ್ಕೆ ಬಾರದಂಥವುಗಳು. ಆದರೆ ಇಂಥಲ್ಲಿ ಜೀವ

ವಿದೆ, ಇಂಥಲ್ಲಿಲ್ಲ. ವಿದ್ಯುತ್ತು ಇಂತಿಂಥ ಕೆಲಸವಮಾಡುತ್ತದೆ, ಇಂತಿಂಥ ಕೆಲಸವಮಾಡುವದಿಲ್ಲ. ಈ ಮೊದಲಾದ ವಿಷಯುಗಳು ಮಾತ್ರ ನಮಗೆ ತಿಳಿಯುತ್ತವೆ. ಅವುಗಳ ಉಪಯೋಗದ ಮೇಲಿಂದ ಅವೇನೋ ಅವೆ ಯೆಂದು ನಾವು ಸಿದ್ಧಾಂತವಮಾಡಿಕೊಂಡು ಮುಂದೆ ಸಾಗುತ್ತಿದ್ದೇವೆ. ಅದೇ ಪ್ರಕಾರ ಮನಸ್ಸಿನ ಗುಣಧರ್ಮಗಳ ಮೇಲಿಂದ ಮನಸ್ಸಿನ ಅಸ್ತಿತ್ವ ವನ್ನು ನಾವು ಕಲ್ಪಿಸುತ್ತೇವೆ.

ಮನಸ್ಸಿನ ಗುಣಧರ್ಮಗಳು ಎರಡು ಇರುತ್ತವೆ. ಅವು ಯಾವ ವೆಂಬರೆ (೧) ಸಂಗ್ರಹಣಶಕ್ತಿ, (೨) ಉತ್ಪಾದಕಶಕ್ತಿ ನಾವು ಕಲಿತದ್ದನ್ನೂ ಕೇಳಿದ್ದನ್ನೂ ಓದಿದ್ದನ್ನೂ ಅನುಭವಿಸಿದ್ದುದನ್ನೂ ಮನಸ್ಸು ಒತ್ತಟ್ಟಿಗೆ ಸಂಗ್ರಹಿಸಿಟ್ಟಿರುತ್ತದೆ. ಈ ಜನ್ಮದಾರಭ್ಯ ವರ್ತಿಸಿದ ಸಂಗತಿಗಳನ್ನಷ್ಟೇ ನಮ್ಮ ಮನಸ್ಸು ಸಂಗ್ರಹಿಸಿರುವದೆಂತಲ್ಲ. ಅನಾದಿಕಾಲದಿಂದಲೂ ಜನ್ಮ ಜನ್ಮಾಂತರಗಳಲ್ಲಿ ಸಂಭವಿಸಿದ ಸಂಗತಿಗಳನ್ನೂ ಆಚಾರ ವಿಚಾರಗಳನ್ನೂ ಸಹ ಸಂಗ್ರಹಿಸಿಟ್ಟಿರುವದು ಈಗ ನಾವು ನಮ್ಮ ತಾಯಿತಂದೆಗಳ ಗುಣ ಧರ್ಮಗಳನ್ನಷ್ಟೇ ನಮ್ಮ ಮನಸ್ಸಿನಲ್ಲಿಟ್ಟಿರುವದಿಲ್ಲ. ಆದರೆ ನೆರೆಹೊರೆ ಯುವರ, ಬಂಧುಬಳಗದವರ, ಸಮಾಜದ ಮತ್ತು ನಾವು ಸುಳಿದಾ ಡುವ ವಾತಾವರಣದ ಎಲ್ಲ ಗುಣಗಳು ನಮ್ಮ ಮನಸ್ಸಿನಲ್ಲಿ ಕೇಂದ್ರೀ ಕೃತವಾಗಿರುತ್ತವೆ. ಇದೇ ಮೇರೆಗೆ ಅತಿ ಪೂರ್ವಕಾಲದಲ್ಲಿ ಅತ್ಯಂತ ಕಾಡಸ್ಥಿತಿಯಲ್ಲಿದ್ದ ನಮ್ಮ ಪೂರ್ವಜರ ಗುಣಗಳೂ ಆಗಿನ ಕಾಲದ ಸಂಸ್ಕೃತಿ ಲೋಕವ್ಯವಹಾರಗಳೂ ಸಹ ನಮ್ಮ ಮನಸ್ಸಿನಲ್ಲಿ ಅಂಟಿಕೊಂ ಡಿರುತ್ತವೆ. ಸಣ್ಣ ಕನ್ನಡಿಯಲ್ಲಿ ದೊಡ್ಡದೊಂದು ಆನೆಯೇ ಪ್ರತಿಬಿಂಬ ರೂಪದಿಂದ ಕಾಣುವಂತೆ ವರ್ತಮಾನ ಭೂತಕಾಲದ ಸಂಗತಿಗಳೆಲ್ಲ ನಮ್ಮ ಅಲ್ಪ ಮನೋದರ್ಪಣದಲ್ಲಿ ತುಂಬಿಕೊಂಡಿರುತ್ತವೆ. ನಮ್ಮೀ ಮನ ಸ್ಸಮುದ್ರದಲ್ಲಿ ಯಾವ ಯಾವ ಕಾಲದಿಂದ ಎಷ್ಟೆಷ್ಟು ಸಂಪತ್ತು ಕೂಡಿ ಬಿದ್ದಿರುವವೋ ನಾವರಿಯೆವು. ಇಷ್ಟೆಲ್ಲ ಸಂಗತಿಗಳನ್ನೊಳಕೊಂಡ ಮನಸ್ಸು ಸಣ್ಣದೆನ್ನಬೇಕೇ? ಬಾರದು. ಅದು ಅಪಾರವಾದದ್ದಿರಲೇಬೇಕು. ಹಾಗಾ ದರೆ ಈ ಮೂರೂವರೆ ಮೊಳದ ಸಣ್ಣ ಶರೀರದಲ್ಲಿ ಅದೆಷ್ಟು ದೊಡ್ಡ ದಾಗಿದೆಯೋ ತಿಳಿಯದು.

ನಮ್ಮ ಅರುವಿನಲ್ಲಿ ಕೆಲವು ವ್ಯವಹಾರಗಳು ನಡೆಯುವಂತೆ ನಮಗೆ ತಿಳಿಯದಲೇ ಕೆಲವು ಕ್ರಿಯೆಗಳು ನಡೆದಿರುತ್ತವೆ. ಉದಾಹರಣಾರ್ಥ

ವಾಗಿ ಪಚನಕ್ರಿಯೆ, ರಕ್ತಾಭಿಸರಣ, ಕೂದಲುಗಳ ಬೆಳವಣಿಗೆ ಮುಂತಾ ದವುಗಳು ನಮಗೆ ಗೊತ್ತಾಗದೆ ಸಾಗಿರುತ್ತವೆ. ಅವರಂತೆಯೇ ಮರ ವೆಯ ಮರೆಯಲ್ಲಿ ಅಡಗಿರುವ ಜನ್ಮಜನ್ಮಾಂತರದ ಸಂಗತಿಗಳು ನಮಗೆ ಗೊತ್ತಾಗದೆ ಯಂತ್ರಗಳಂತೆ ತಮ್ಮ ಕ್ರಿಯೆಗಳನ್ನು ಸಾಗಿಸುತ್ತಲೇ ಇರು ವವು. ಚಿತ್ರಗಾರನು ಮನಸ್ಸಿನ ಪ್ರೇರಣೆಯಿಂದ ಒಳ್ಳೆ ಚಿತ್ರವನ್ನು ಚಿತ್ರಿಸು ವನು. ಮೂರ್ತಿಕಾರನು ಮನಸ್ಸಿನ ಉತ್ಸುಕತೆಯಿಂದಲೇ ಕಲ್ಲಿನಲ್ಲಿ ಸುಂದ ರವಾದ ಮೂರ್ತಿಯನ್ನು ಕೊರೆಯುವನು. ವ್ಯಾಖ್ಯಾನಕರ್ತನು ಮನ ಸ್ಸಿನ ಆವೇಶದಿಂದ ಸೊಗಸಾದ ವ್ಯಾಖ್ಯಾನವನ್ನು ಕೊಡುವನು. ಕವಿಯು ಪ್ರತಿಭಾ ಶಕ್ತಿಯಿಂದ ಕಾವ್ಯ ಸೃಷ್ಟಿಯನ್ನೇ ನಿರ್ಮಿಸುವನು. ಇಂತಿಂಥ ಕೆಲಸಗಳನ್ನು ಮಾಡಹಚ್ಚಿಸುವಂಥ ಸಂಸ್ಫುರಣ ಶಕ್ತಿಯೊಂದು ನಮ ಲ್ಲುಂಟು. ಅದಕ್ಕೇನೇ ಉತ್ಪಾದಕ ಶಕ್ತಿಯೆಂದೆನ್ನುವರು. ಕೃತ್ರಿಮರೂಪ ದಲ್ಲಿ ತೋರುವ ಜಗತ್ತೂ ಆ ಜಗತ್ತಿನಲ್ಲಿ ತೋರುವ ವಿವಿಧ ಸಂಸ್ಕೃತಿ ಯೂ ಮಾನವನ ಉತ್ಪಾದಕ ಶಕ್ತಿಯ ಹೆಗ್ಗುರುತುಗಳು. ಈಗಿನ ಭೌತಿಕ ಶಾಸ್ತ್ರೋನ್ನತಿಯೂ ಹಿಂದಿನ ಆಧ್ಯಾತ್ಮಿಕ ವಿಕಾಸವೂ ಮನುಷ್ಯ ಪ್ರಾಣಿಯ ಪ್ರಚೋದನ ಶಕ್ತಿಯ ಕಾರ್ಯಗಳು. ಮನಸ್ಸಿನಲ್ಲಿ ಯಾವದಾದರೊಂದು ಹೊಸದಾದ ದೃಶ್ಯಾದೃಶ್ಯ ಸೃಷ್ಟಿಯನ್ನು ಹುಟ್ಟಿಸಬೇಕೆಂದು ವಿಚಾರ ತರಂ ಗಗಳುದ್ಭವಿಸಲು ಅವು ಕೆಲವು ಕಾಲದ ವರೆಗೆ ಕೂಡಿ ಬೀಳುತ್ತ ಹೋಗಿ ಕೊನೆಗೆ ಪರಿಪಕ್ವ ದಿಶೆಯನ್ನು ಹೊಂದುವವು. ಆಗ್ಗೆಯೇ ಆ ವಿಚಾರ ಗಳು ಕಾರ್ಯರೂಪದಲ್ಲಿ ಬಾಹ್ಯ ಸೃಷ್ಟಿಯೊಳಗೆ ಪಸರಿಸುವವು.

ಇಂಥ ಮಾನಸ ಸಮುದ್ರದ ಮೇಲೆ ಆತ್ಮವೆಂಬ ನೌಕೆಯು ಸದಾ ಸಂಚರಿಸುತ್ತ ಸಮುದ್ರದಾಚೆಗಿರುವ ಪರಮಾತ್ಮನ ಸಾನ್ನಿಧ್ಯವನ್ನು ಹೊಂ ದಲು ಪ್ರಯತ್ನಿಸುತ್ತಿರುವದು.



# ಪಂಚಾಚಾರ ಮತ್ತು ಸಪ್ತಾಚಾರಗಳು.

ಲೇಖಕ— ರಾ|| ಸಾ|| ಫ ಗು. ಹಳಕಟ್ಟಿ ವಿಜಾಪುರ.

ವಚನಕಾರರು ವರ್ತನೆಗೆ ಬಹಳ ಮಹತ್ವ ಕೊಟ್ಟಿರುವರು. ಮನು ಷ್ಯನು ಜಗತ್ತಿನಲ್ಲಿ ಹ್ಯಾಗೆ ವರ್ತಿಸಬೇಕು, ಮತ್ತು ಆತ್ಮಸುಧಾರಣೆಯನ್ನು ಹ್ಯಾಗೆ ಮಾಡಿಕೊಳ್ಳಬೇಕು ಎಂಬ ವಿಷಯಗಳನ್ನು ಅವರು ಸವಿಸ್ತಾರ ವಾಗಿ ತಮ್ಮ ಗ್ರಂಥಗಳಲ್ಲಿ ನಿರೂಪಿಸಿರುವರು. ಹಿಂದುಸ್ತಾನದಲ್ಲಿ ಶಂಕ ರಾಚಾರ್ಯ, ಮಧ್ವಾಚಾರ್ಯ, ಮೊದಲಾದ ಅನೇಕ ತತ್ವವೇತ್ತಿಗಳು ಆಗಿಹೋಗಿದ್ದಾರೆ. ಅವರು ಪ್ರಕಟಿಸಿದ ವಿಚಾರಗಳು ಅತ್ಯಂತ ಗಹನ ವಾಗಿರಬಹುದು. ಆದರೆ ಜನಸುಧಾರಣೆ, ಸಮಾಜಸುಧಾರಣೆ ಈ ಬಗೆಯ ವಿಷಯಗಳಿಗೆ ಮಾತ್ರ ಅವರು ಮಹತ್ವದ ಸ್ಥಾನವನ್ನು ಕೊಟ್ಟಿಲ್ಲ. ಅವು ಗಳನ್ನು ಅವರು ಅತ್ಯಲ್ಪ ರೀತಿಯಿಂದ ವಿವರಿಸಿರುವರು. ಆದರೆ ವೀರ ಶೈವ ಧರ್ಮವು ಇಂಥ ವಿಷಯಗಳಿಗೆ ಮಹತ್ವದ ಸ್ಥಾನವನ್ನು ಕೊಟ್ಟಿದೆ. ವಚನಕಾರರ ವಚನಗಳಲ್ಲಿಯಂತೂ ಈ ವಿಷಯಗಳೇ ತುಂಬಿಹೋಗಿವೆ. ಯಾಕಂದರೆ ವಚನಕಾರರು ಸಮಾಜಸುಧಾರಕರಿದ್ದಾರೆ ಆದ್ದರಿಂದ ಅವರು ಆಚಾರ, ನೀತಿ, ನಡತೆ, ವರ್ತನೆ ಇವುಗಳನ್ನು ಹೆಚ್ಚಾಗಿ ವಿವ ರಿಸಿ ಅವುಗಳಂತೆ ನಡೆಯಲು ಬಹು ಬಲವಾಗಿ ಹೇಳುತ್ತ ಬಂದಿದ್ದಾರೆ.

ವಚನಕಾರರು ಸಮಾಜದಲ್ಲಿದ್ದುಕೊಂಡು ಸಮಾಜದ ಅಭಿವೃದ್ಧಿ ಗಾಗಿ ಪ್ರಯತ್ನಿಸಿದವರಾಗಿದ್ದಾರೆ. ಅವರಲ್ಲಿ ಬಹುಜನ ಶಿವಶರಣರೆನಿಸಿ ಕೊಂಡಿರುವರು. ಆದರೆ ಶಿವಶರಣರೆಂದರೆ ಸಮಾಜವನ್ನು ಬಿಟ್ಟುಕೊಟ್ಟ ಅರಣ್ಯವಾಸಿಗಳಲ್ಲ. ಬಸವೇಶ್ವರನ ಕಾಲದಲ್ಲಿ ಇಂಥ ಅಸಂಖ್ಯ ಶಿವಶರಣರು ಆಗಿಹೋಗಿರುವರು. ಆದರೆ ಅವರ ಚರಿತ್ರೆಗಳನ್ನು ನೋಡಿದರೆ ಅವರು ತಮ್ಮ ಉಪಜೀವನಕ್ಕೋಸ್ಕರ ಒಂದು ಹೋರೆಯನ್ನು ಕಲ್ಪಿಸಿಕೊಂಡು ಲೋಕಸಂಗ್ರಹಕ್ಕಾಗಿ ಪ್ರಯತ್ನಿಸುತ್ತ ಬಂದಿದ್ದು ಕಂಡುಬರುತ್ತದೆ. ಅವರು ಜನಸಮುದಾಯದಲ್ಲಿ ಬೆರೆದುಕೊಂಡು ಅವರಲ್ಲಿರುವ ದುರ್ವರ್ತನೆ ಮತ್ತು ತಪ್ಪು ತಿಳುವಳಿಕೆಗಳನ್ನು ದೂರಮಾಡಲು ಯತ್ನಿಸುತ್ತ ಬಂದಿರುವರು. ಈ ಸಂಗತಿಗೆ ಅವರು ರಚಿಸಿದ ವಚನಗಳೇ ಸಾಕ್ಷಿಯಾಗಿವೆ. ಇವುಗ ಳಲ್ಲಿ ಅವರು ಮನುಷ್ಯನು ಹ್ಯಾಗೆ ನಡೆಯಬೇಕೆಂಬುದನ್ನು ಬಹು ವಿಸ್ತಾ ರವಾಗಿ ನಿರೂಪಿಸಿದ್ದಾರೆ. ದುರ್ವರ್ತನೆ ದುರಾಚಾರಗಳನ್ನು ಬಹು ಕಟು ವಾದ ಶಬ್ದಗಳಿಂದ ದೂರಿರುವರು. ಮಡಿವಾಳ ಮಾಚಿದೇವ, ಅಂಬಿ

ಗರ ಚೌಡಯ್ಯ, ಚನ್ನಬಸವ, ಕಾಡಸಿದ್ಧೇಶ್ವರ ಇವರ ವಚನಗಳನ್ನು ನೋಡಿದರೆ ನಾವು ಹೇಳುವದರ ಸತ್ಯತೆಯು ಕಂಡುಬರುವದು. ಶಿವಶರಣರು ಜಗತ್ತು ಮಾಯಾಮಯವಾದದ್ದು, ಪಾಪಮಯವಾದದ್ದು ಎಂದು ತಿಳಿದು ಅದನ್ನು ತಿರಸ್ಕರಿಸಿಲ್ಲ. ಹಿಂದೂ ಸಾಧುಗಳಲ್ಲಿ ಬಹುಜನರು ಅನೇಕ ಪದ್ಯಗ್ರಂಥಗಳನ್ನೂ ಕಾವ್ಯಗಳನ್ನೂ ರಚಿಸಿರುವರು. ಅವು ಭಕ್ತಿಯಿಂದ ತುಂಬಿತುಳುಕುತ್ತಿರಬಹುದು. ಆದರೆ ಅವುಗಳಲ್ಲಿ ಅವರು ಸಂಸಾರವನ್ನು ಅಳಿದು ಅದನ್ನು ಬಿಟ್ಟುಕೊಟ್ಟು ಹೋಗಬೇಕೆಂದು ಯಾವಾಗಲೂ ಉಪದೇಶಿಸಿರುವದು ಕಂಡುಬರುತ್ತದೆ. ಆದರೆ ವೀರಶೈವ ವಚನಕಾರರು ಹೀಗೆ ಬೋಧಿಸಿರುವದಿಲ್ಲ. ಅವರು ಸಂಸಾರವನ್ನು ದೂಷಿಸುತ್ತ ಬಂದರೂ ಅವರು ಅದನ್ನು ಬಿಟ್ಟುಕೊಡದೆ ಅದನ್ನು ಉಚ್ಚತರದ ಸ್ಥಿತಿಗೆ ತರಲು ಪ್ರಯತ್ನಿಸುತ್ತ ಬಂದಿರುತ್ತಾರೆ.

ಇಂಥ ಸಮಾಜಸುಧಾರಕರ ಯೋಗ್ಯತೆಯು ಕೇವಲ ಜ್ಞಾನಿಗಳಿಗಿಂತ ಕಡಿಮೆಯಾದದ್ದಲ್ಲ. ಇಷ್ಟೇ ಅಲ್ಲ, ಅವರು ಹೆಚ್ಚಿನ ತರಗತಿಯವರೆಂತಲೇ ನಾವು ಒಪ್ಪಬೇಕು. ಇವರು ತಮ್ಮ ಪ್ರಯತ್ನಗಳಲ್ಲಿ ಸಮಾಜದವರ ರೋಷಕ್ಕೆ ಪಾತ್ರರಾಗಿ ಅತ್ಯಂತ ಕಷ್ಟಗಳಿಗೆ ಗುರಿಯಾಗಬೇಕಾಗುತ್ತದೆ. ಜೀಜಸ್ ಕ್ರೈಸ್ತನು ತನ್ನ ಸಮಾಜಸೇವಾ ಕಾರ್ಯದಲ್ಲಿ ಘಾತಿಸಲ್ಪಡುವ ಪ್ರಸಂಗವು ಬಂದೊದಗಿತು. ಮಹಮ್ಮದ ಪೈಗಂಬರನು ದೇಶತ್ಯಾಗವನ್ನು ಮಾಡಬೇಕಾಯಿತು. ಬಸವೇಶ್ವರನ ಕಾಲದಲ್ಲಿ ಶಿವಶರಣರು ಉಳಿವೆಯ ಭಯಾನಕ ಅರಣ್ಯವನ್ನು ಸೇರಬೇಕಾಯಿತು. ಈ ಬಗೆಯ ಉದಾಹರಣೆಗಳು ಇತಿಹಾಸದಲ್ಲಿ ಆಗಿಂದಾಗ್ಗೆ ದೊರಕುತ್ತವೆ. ಆದರೆ ತತ್ವವೇತ್ತಿಯು ಈ ಬಗೆಯ ಸಮಾಜದ ಹಿಂಸೆಗಳಿಗೆ ಒಳಪಡುವ ಪ್ರಸಂಗಗಳು ಬಹು ಕಡಿಮೆ. ಅವನು ತನ್ನ ವಿಚಾರಗಳನ್ನು ಬರೇ ಬರೆಯುತ್ತ ಸಾಗುವನು. ಆದರೆ ಇಂಥವರಿಂದ ಮಹತ್ವದ ರಾಷ್ಟ್ರೀಯ ಆಂದೋಲನಗಳು ಉದ್ಭವಿಸಲಾರವು.

ವೀರಶೈವರು ತಮ್ಮ ಆಚಾರ ವಿಚಾರಗಳಲ್ಲಿ ಕೆಲವು ಕ್ರಮಗಳನ್ನು ಗೊತ್ತುಪಡಿಸಿರುವರು. ಮತ್ತು ಅವುಗಳಲ್ಲಿ ಕೆಲವು ಭೇದಗಳನ್ನು ಮಾಡಿರುವರು. ಅವುಗಳಲ್ಲಿ ಮುಖ್ಯವಾದವುಗಳು, ಪಂಚಾಚಾರ, ಸಪ್ತಾಚಾರ ಇವುಗಳೇ ಇರುತ್ತವೆ. ಲಿಂಗಾಚಾರ ಸದಾಚಾರ, ಶಿವಾಚಾರ, ಗಣಾಚಾರ, ಮತ್ತು ಭೃತ್ಯಾಚಾರ ಇವು ಪಂಚಾಚಾರಗಳಲ್ಲಿ ಬರುತ್ತವೆ.

ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ, ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ, ಸರ್ವಾಚಾರ ಸಂಪತ್ತು ಇವುಗಳು ಸಪ್ತಾಚಾರಗಳಲ್ಲಿ ಬರುತ್ತವೆ.

ಈ ಆಚಾರಗಳಲ್ಲಿ ಪಂಚಾಚಾರ ಸ್ವರೂಪು ಜನರ ಪರಿಚಯಕ್ಕೆ ಬಹಳವಾಗಿ ಬಂದಿರುತ್ತದೆ. ಈ ಬಗ್ಗೆ ಲೇಖಗಳು ಆಗಿಂದಾಗ್ಗೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಶಿವಾನುಭವ ಪತ್ರಿಕೆಯಲ್ಲಿಯೂ ಇವು ಅನೇಕ ಸಾರೆ ವಿವೇಚಿಸಲ್ಪಟ್ಟಿವೆ. ಈ ಆಚಾರಗಳು ಮನುಷ್ಯನು ಜನತೆಯಲ್ಲಿ ಇದ್ದು ಕೊಂಡು ಹ್ಯಾಗೆ ವರ್ತಿಸಬೇಕು ಎಂಬದನ್ನು ಮುಖ್ಯವಾಗಿ ವಿವರಿಸುತ್ತವೆ.

ಆದರೆ ಸಪ್ತಾಚಾರಗಳು ಮನುಷ್ಯನು ತನ್ನ ಆತ್ಮವಿಕಾಸವನ್ನು ಹ್ಯಾಗೆ ಮಾಡಬೇಕೆಂಬುದನ್ನು ವಿವರಿಸುತ್ತವೆ.

ಈ ಸಪ್ತಾಚಾರಗಳಲ್ಲಿ ನಾವು ಮೂರು ಭಾಗಗಳನ್ನು ಕಲ್ಪಿಸಬಹುದು. ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ ಇವುಗಳನ್ನು ಮೊದಲನೇ ಭಾಗದಲ್ಲಿ, ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ ಇವುಗಳನ್ನು ಎರಡನೇ, ಭಾಗದಲ್ಲಿ ಮತ್ತು ಸರ್ವಾಚಾರ ಸಂಪತ್ತು ಇದನ್ನು ಮೂರನೇ ಭಾಗದಲ್ಲಿ ಸೇರಿಸಬಹುದು.

ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಮೂರು ಶರೀರಗಳಿದ್ದು ಅವುಗಳ ಮೇಲೆ ಪರಿಣಾಮಗಳಾದಂತೆ ಅನುಕ್ರಮವಾಗಿ ಆಯಾಆಚಾರಗಳಿಗೆ ಕ್ರಿಯಾಚಾರ, ಜ್ಞಾನಾಚಾರ ಮತ್ತು ಭಾವಾಚಾರಗಳೆಂದು ಹೇಳಬಹುದು. ವಚನಕಾರರು ಇವುಗಳ ವ್ಯಾಖ್ಯೆಗಳನ್ನು ಕೆಲವು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ. ಕ್ರಿಯಾಚಾರವು ಪಾದೋದಕ ಮತ್ತು ಪ್ರಸಾದ ಇವುಗಳ ಸೇವನೆಯನ್ನು ಮಾಡುವದೇ ಇರುತ್ತದೆ. ಇವು ಬಾಹ್ಯ ಆಚಾರಗಳಾಗಿವೆ. ಇವುಗಳ ಜ್ಞಾನವನ್ನು ಉಂಟು ಮಾಡಿಕೊಳ್ಳುವದಕ್ಕೋಸ್ಕರ ವಚನಾನುಭಾವವನ್ನು ಮಾಡಿಕೊಳ್ಳುವದೇ ಜ್ಞಾನಾಚಾರವೆನಿಸಿಕೊಳ್ಳುವದು. ಹೀಗೆ ಜ್ಞಾನಕ್ರಿಯೆಗಳಿಂದ ಸ್ವಾತ್ಮಾನು ಭಾವವನ್ನು ಹೊಂದಿ ಸದ್ಗುಣಿಯಾಗಿ ವರ್ತಿಸುವದೇ ಭಾವಾಚಾರವೆನಿಸಿಕೊಳ್ಳುದು. ಇವು ಮೊದಲನೇ ಭಾಗದಲ್ಲಿಯ, ಆಚಾರಗಳು.

ಎರಡನೇ ಭಾಗದಲ್ಲಿ ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ, ಇವುಗಳು ಬರುತ್ತವೆ. ಮೊದಲನೇ ಭಾಗದಲ್ಲಿಯ ಆಚಾರಗಳು ದೃಢ

ಪಡಬೇಕಾದರೆ ಈ ಎರಡನೇ ಭಾಗದಲ್ಲಿಯ ಆಚಾರಗಳಂತೆ ವರ್ತಿಸು ವದು ಅವಶ್ಯವು

ಸತ್ಯಾಚಾರವು ಕೈಕೊಂಡ ಕಾರ್ಯಗಳಲ್ಲಿ ವಿಶ್ವಾಸವನ್ನಿಟ್ಟುಕೊಂಡು ನುಡಿದಂತೆ ನಡೆಯಬೇಕು. ಹೀಗೆ ನಡೆಯುವದನ್ನು ಸ್ವಲ್ಪಾದರೂ ಬಿಟ್ಟು ಕೊಡದೆ ಗಟ್ಟಿ ಮನಸ್ಸಿನಿಂದ ವರ್ತಿಸಬೇಕು. ಇದು ನಿತ್ಯಾಚಾರವೆನಿಸು ವದು. ಈ ಪ್ರಕಾರ ವರ್ತಿಸಿ ಆಯಾ ಆಚಾರಗಳನ್ನು ತನ್ನಲ್ಲಿ ಒಳಪ ಡಿಸಿಕೊಳ್ಳತಕ್ಕದ್ದು. ಇದು ಧರ್ಮಾಚಾರವೆನಿಸುವದು. ಹೀಗೆಇವು ಎರಡನೇ ಭಾಗದಲ್ಲಿಯ ಆಚಾರಗಳಿವೆ.

ಪಿಂಡಾದಿ ಜ್ಞಾನಶೂನ್ಯಾಂತವಾದ ಏಕೋತ್ತರ ಶತಸ್ಥಲದ ಮಾರ್ಗ ವನ್ನು ಅನುಸರಿಸುವದು ಸರ್ವಾಚಾರ ಸಂಪತ್ತೆನಿಸಿಕೊಳ್ಳುದು. ಈ ೧೦೧ ಸ್ಥಲಗಳ ವಿಸ್ತಾರವಾದ ನಿರೂಪಣೆಯು ವೀರಶೈವ ಗ್ರಂಥಗಳಲ್ಲಿ ವಿಶೇ ಷವಾಗಿ ಬಂದಿರುತ್ತದೆ.

ಹೀಗೆ ವೀರಶೈವ ವಚನಕಾರರು ಆಚಾರ ವಿಷಯುವನ್ನು ಕುರಿತು ಬಹು ದೀರ್ಘವಾದ ವಿಚಾರವನ್ನು ಹೊರಗೆಡವಿರುವರು. ಅವುಗಳ ಮರ್ಮ ಗಳನ್ನು ನಾವು ಕಂಡುಹಿಡಿದು ಅವುಗಳನ್ನು ಪ್ರಚಾರಪಡಿಸುವದು ಈ ಕಾಲಕ್ಕೆ ಬಹಳೇ ಅವಶ್ಯವಿದೆ.

ಚನ್ನಬಸವೇಶ್ವರನು ಈ ಪಂಚಾಚಾರ ಮತ್ತು ಸಪ್ತಾಚಾರಗಳ ಸ್ವರೂಪವನ್ನು ವಿವರಿಸಿ ಅವುಗಳಲ್ಲಿಯ ಪರಸ್ಪರ ಸಂಬಂಧವನ್ನು ಕೆಳಗೆ ಬರೆದ ಮೇರೆಗೆ ತನ್ನ ಒಂದು ವಚನದಲ್ಲಿ ಹೇಳಿರುವನು.

## ಪಂಚಾಚಾರಗಳು.

### ವಚನ

ಅಯ್ಯಾ ಶ್ರೀಗುರು ಕರುಣಿಸಿಕೊಟ್ಟ ಲಿಂಗಜಂಗಮವಲ್ಲದೆ ಅನ್ಯ ದೈವಂಗಳ ತ್ರಿಕರಣದಲ್ಲಿ ಅರ್ಚಿಸದಿಪ್ಪುದೇ ಲಿಂಗಾಚಾರವೆಂಬೆನಯ್ಯಾ. ಭಕ್ತನಾದಡೆ ಸತ್ಯ ಶುದ್ಧಕಾಯಕ, ಮಹೇಶನಾದಡೆ ಸತ್ಯಶುದ್ಧ ಭಿಕ್ಷಕವ ಬೇಡಿ ಸಮಸ್ತ ಪ್ರಾಣಿಗಳಲ್ಲಿ ಪಾತ್ರಾಪಾತ್ರವ ತಿಳಿದು ಹಸಿವು ತೃಷೆ ಸೀತಕ್ಕೆ ಪರಹಿತಾರ್ಥಿಯಾಗಿರ್ಪುದೇ ಸದಾಚಾರವೆಂಬೆನಯ್ಯ.

ಗುರುಮಾರ್ಗಾಚಾರದಲ್ಲಿ ನಿಂದ ಶಿವಲಾಂಛನಧಾರಿಗಳೆಲ್ಲ ಪರಶಿವ ಲಿಂಗವೆಂದು ಭಾವಿಸಿ ಅರ್ಥಪ್ರಾಣಾಭಿಮಾನವನೊಪ್ಪಿಸುವದೇ ಶಿವಾಚಾರ. ವೆಂಬೆನಯ್ಯಾ.

ಅಷ್ಟಾವರಣಂಗಳ ಮೇಲೆ ನಿಂದೆ ಕುಂದುಗಳು ಬಂದು ತಟ್ಟಿದಲ್ಲಿ ಗಣಸಮೂಹವನೊಡಗೂಡಿ ಆ ಸ್ಥಲವ ತ್ಯಜಿಸುವದೇ ಗಣಾಚಾರವೆಂಬೆನಯ್ಯ.

ಜಾತ್ಯಾಶ್ರಮ ಕುಲಗೋತ್ರ ನಾಮರೂಪ ಕ್ರಿಯಾರಹಿತವಾಗಿ ಗುರೂಪಾವಸ್ಥೆಯಿಂದ ಗುರುಪ್ರತ್ಯಕ್ಷವ ಮಾಡಿ, ಆ ಗುರುವಿನಿಂದ ಚಿದ್ಘನ ಮಹಾಲಿಂಗವ ಪಡೆದು, ಆ ಲಿಂಗಸಹಿತವಾಗಿ ಭಕ್ತಿ ಜ್ಞಾನ ವೈರಾಗ್ಯ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರ ಮೊದಲಾದ ಷಟ್‌ಸ್ಥಲ ಮಾರ್ಗದಲ್ಲಿ ನಿಂದ ಭಕ್ತಗಣಂಗಳಲ್ಲಿ ಪಂಚಸೂತಕಂಗಳ ಕಲ್ಪಿಸದೆ, ಅವರಿದ್ದ ಸ್ಥಲಕ್ಕೆ ಹೋಗಿ ತನು ಮನ ಧನಂಗಳ ಸಮರ್ಪಿಸಿ ಅವರೊಕ್ಕು ಮಿಕ್ಕುದ ಹಾರೈಸಿ ಹಸ್ತಾಂಜಲಿತರಾಗಿ ಪ್ರತಿ ಉತ್ತರವ ಕೊಡದಿರ್ಪುದೆ ಭೃತ್ಯಾಚಾರವೆಂಬೆನಯ್ಯ.

## ಸಪ್ತಾಚಾರಗಳು.

ಮಲಮಾಯಾ ಪಾತಕ ಸೂತಕ ರಹಿತನಾದ ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರುವಿಂದ ವೇಧಾಮಂತ್ರ ಕ್ರಿಯಾದೀಕ್ಷೆಯ ಪಡೆದು ದ್ವಾದಶ ಮಲಪಾಶ ಕರ್ಮವ ತ್ಯಜಿಸಿ ಮನಮಾರತ ಮೊದಲಾದ ದ್ವಾದಶ ಇಂದ್ರಿಯಂಗಳ ಗುರುಪಾದಜಲದಿಂದ ಪ್ರಕ್ಷಾಲಿಸಿ ದಂತ ಪಂಕ್ತಿ ಕ್ರಿಯೆಗಳ ಮಾಡಿ ಕಟಿಸ್ನಾನ ಕಂಠಸ್ನಾನ ಮಂಡೆಸ್ನಾನ ಸರ್ವಾಂಗ ಸ್ನಾನವ ಮಾಡಿ ಕ್ರಿಯಾಭಸಿತದಿಂದ ಸ್ನಾನ ಧೂಳನ ಧಾರಣ ಮರ್ಮಂಗಳ ತಿಳಿದಾಚರಿಸಿ ಸಾಕಾರ ನಿರಾಕಾರ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಲಿಂಗ ಜಂಗಮರ ನರ್ಚಿಸಿ, ನಿರ್ವಂಚಕತ್ವದಿಂದ ಘನ ಪಾದ ತೀರ್ಥ ಪ್ರಸಾದ ಮಂತ್ರದಲ್ಲಿ ನಿಂದ ನಿಜಾವಸ್ಥೆಯೇ ಕ್ರಿಯಾಚಾರವೆಂಬೆನಯ್ಯಾ.

ಅಂತರಂಗದಲ್ಲಿ ಕರಣ ವಿಷ ಕರ್ಕಶದಿಂದಹಂಕರಿಸಿ ಗುರುಹಿರಿಯರಲ್ಲಿ ಸಂಕಲ್ಪ ವಿಕಲ್ಪಂಗಳಿಂದ ಕುಂದು ನಿಂದೆ ಹಾಸ್ಯರೋಷವೆಂಬ ಜ್ಞಾನವ ಬಳಿಸದೆ ಪರಮಪಾತಕರ ದರ್ಶನ ಸ್ಪರ್ಶನ ಸಂಭಾಷಣೆ ಸಮಪಂಕ್ತಿಪಾಕವ ಕೊಳ್ಳದೆ, ಸತ್ಯ ನಡೆನುಡಿಯುಳ್ಳ ಶಿವಶರಣ ಗಣಂಗಳಲ್ಲಿ ಷಡ್ವಿಧಭಕ್ತಿ ಮುಂದುಗೊಂಡು, ಎರಡೆಂಬತ್ತುಕೋಟಿ ವಚನಾನುಭಾವದಲ್ಲಿ ನಿಂದ ನಿಲುಕಡೆಯೇ ಜ್ಞಾನಾಚಾರವೆಂಬೆನಯ್ಯ.

ತನುವಿನ ವಿಕಾರದಿಂದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ ಬಳಕೆಯ ಮಾಡದೆ ಲೋಕದಂತೆ ನಡೆನುಡಿಗಳ ಬಳಸದೆ ತನ್ನ ಗುಣಾವಗುಣಂಗಳ ಸ್ವಾತ್ಮಾನುಭವದಿಂದ ಅರಿದು ದುರ್ಗುಣವ ತ್ಯಜಿಸಿ ಸದ್ಗುಣವ ಹಿಡಿದು ಬಿಡದಿರ್ಪುದೇ ಭಾವಾಚಾರವೆಂಬೆನಯ್ಯ.

ಕೊಡುವಲ್ಲಿ ಕೊಂಬಲ್ಲಿ ಅತಿ ಆಶೆಯಿಂದ ಹುಸಿ ನುಡಿಯ ನುಡಿಯದೆ ಕೊಟ್ಟ ಭಾಷೆಗಳ ಪ್ರಾಣಾಂತ ಬಂದರೂ ನುಡಿಯಂತೆ ನಡೆವುದೇ ಸತ್ಯಾಚಾರವೆಂಬೆ ನೋಡಾ.

ಕಾಲಕಾಮದ ಬಾಧೆಗೊಳಗಾದ ಹಠಯೋಗದ ಕಟ್ಟು ಮುಟ್ಟು ಸೋಂಕುಗಳಿಲ್ಲದೆ ಲಿಂಗಾಣತಿಯಿಂ ಬಂದೊದಗಿದ ಪರಿಣಾಮ ಪ್ರಸಾದದಲ್ಲಿ ಲೋಲುಪ್ತನಾಗಿರ್ಪುದೇ ನಿತ್ಯಾಚಾರವೆಂಬೆ ನೋಡಾ.

ಸರ್ವಾವಸ್ಥೆಯಲ್ಲಿ ದಶವಿಧ ಪಾದೋದಕ ಏಕಾದಶ ಪ್ರಸಾದ ಮೂವತ್ತಾರು ಪ್ರಣವ ಮೊದಲಾದ ಮಹಾ ಮಂತ್ರಂಗಳಲ್ಲಿ ಎರಕತ್ವವನುಳ್ಳದೇ ಧರ್ಮಾಚಾರವೆಂಬೆ ನೋಡಾ.

ಇಂತೀ ಮರ್ಮವ ಗುರುಕೃಪೆಯಿಂದರಿದು ಆಚಾರವೇ ಅಂಗ ಮನ ಪ್ರಾಣ ಭಾವಂಗಳಾಗಿ ಇಹಪರಂಗಳ ಮೀರಿ, ಪಿಂಡಾದಿ ಜ್ಞಾನ ಶೂನ್ಯಾಂತವಾದ ಏಕೋತ್ತರ ಮಾರ್ಗದಲ್ಲಿ ನಿಂದು ಬಯಲೊಳಗೆ ಬಚ್ಚಬರಿಯ ನಿರವಯವ ಸಾಧಿಸುವದೇ ಸರ್ವಾಚಾರ ಸಂಪತ್ತಿನಾಚಾರದ ನಿಲುಕಡೆ ನೋಡಾ.

ಇಂತು ಆಚಾರದ ಕುರುಹು ತಿಳಿದು ಪಂಚಾಚಾರವ ಬಹಿಷ್ಕರಿಸಿ ಸಪ್ತಾಚಾರವ ಗೋಪ್ಯವ ಮಾಡಿ ದರಿದ್ರಗೆ ನಿಧಿನಿಧಾನ ದೊರೆತಂತೆ ರೋಗಿಗೆ ವೈದ್ಯಲತೆ ದೊರೆತಂತೆ, ಮೂಕ ಫಲ ಸವಿದಂತೆ ಕಳ್ಳಗೆ ಚೇಳೂರಿದಂತೆ ತಮ್ಮ ಚಿದಂಗಸ್ವರೂಪವಾದ ಶರಣ ಗಣಂಗಳಲ್ಲಿ ಉಸುರಿ ದುರ್ಜನರಲ್ಲಿ ಬಳಸದೆ ನಿಂದ ಪರಮಸುಖಿ ನಿಮ್ಮ ಶರಣರಲ್ಲದೆ ಉಳಿದ ಕಣ್ಣುಗೆಟ್ಟಣ್ಣಗಳೆತ್ತ ಬಲ್ಲರಯ್ಯ ಕೂಡಲ ಚನ್ನಸಂಗಮದೇವಾ.



# ಲಿಂಗಾಯತರು ಮತ್ತು ಆರಾಧ್ಯರು

( "*Mysore Tribes and Castes*" ಎಂಬ ಪುಸ್ತಕದಲ್ಲಿನ
ಪ್ರಕರಣಗಳ ಮೇಲೆ ವಿಚಾರ)

[ಲೇಖಕ:--- ಜೀರಗೆ ಬಸವಲಿಂಗಪ್ಪ]

(ಹಿಂದಣಿಂದ ಮುಂದುವರಿದದ್ದು)

ಈಗಿನ ಕಾಲದ ಪದ್ಧತಿಯು ಯಾವ ವಿಷಯವನ್ನಾದರೂ ಬರೆಯು ಬೇಕಾದರೂ ಬರೀ ಕೇಳಿಕೆಗಳ ಮೇಲೆ ಅಥವ ಇತರರ ಉಕ್ತಿಗಳ ಮೇಲೆ ಬರೆಯತಕ್ಕದ್ದಾಗಿರುತ್ತದೆ. ವೀರಶೈವ ಮತದ ವಿಚಾರವಾಗಿ ಸತ್ಯ ವಿಚಾರವನ್ನು ಕಂಡುಹಿಡಿಯಬೇಕಾದರೆ, ದೊರೆಯತಕ್ಕ ಆಗಮ ಗಳನ್ನೂ, ವಿಸ್ತಾರವಾದ ವಚನಗಳನ್ನೂ ಮತ್ತು ಈ ವರೆಗಿನ ಸ್ವತಂತ್ರ ಗ್ರಂಥಗಳನ್ನೂ ಅಧ್ಯಯನ ಮಾಡಬೇಕು. ಬರೀ ಊಹೆಗಳು ಪ್ರಯೋ ಜನವಿಲ್ಲ. ಈಗಿನ ಕಾಲದಲ್ಲಿ ಪುಸ್ತಕಗಳು ತುಡಕಲ್ಪಡುತ್ತವೆ. ನಿರ್ದೋಷ ವಾದ ಅಧ್ಯಯನವನ್ನು ಮಾಡಬೇಕು. ಎರಡು ವಿಧವಾದ ವೀರಶೈವ ಗಳಿಲ್ಲವು. ವೀರಶೈವದ ಅತ್ಯಂತ ಮುಖ್ಯವಾದ ತತ್ವಗಳಲ್ಲೊಂದಾದದ್ದು ಜಾತಿಪದ್ಧತಿಯನ್ನು ದೂರ ಮಾಡತಕ್ಕದ್ದು. ನಾವು ಸ್ಪಷ್ಟವಾಗಿರೋಣ.

ಆರಾಧ್ಯರು ಹತ್ತು ದಿವಸಗಳ ವರೆಗೂ ಮೃತಿ ಸೂತಕವನ್ನು ಆಚರಿಸುತ್ತಾರೆಂತಲೂ, ಏಕೋದ್ದಿಷ್ಟ ಮೊದಲಾದ ಸಂಸ್ಕಾರಗಳನ್ನು ನಡೆಸುತ್ತಾರೆಂತಲೂ ಹೇಳಲ್ಪಟ್ಟಿದೆ. ಆಗಮಗಳಲ್ಲೂ, ವಚನಗಳಲ್ಲೂ, ಇತರ ಗ್ರಂಥಗಳಲ್ಲೂ ವೀರಶೈವರಿಗೆ ಪಂಚಸೂತಕಗಳಿಲ್ಲವೆಂದು ಹೇಳ ಲ್ಪಟ್ಟಿಲ್ಲವೆ ? ವಿವೇಕ ಚಿಂತಾಮಣಿಯಲ್ಲಿ ವೀರಶೈವ ಲಕ್ಷಣವನ್ನು ಹೇಳುವೆಡೆಯಲ್ಲಿ, ವೀರಶೈವರಿಗೆ ಪಂಚಸೂತಕಗಳಿಲ್ಲವೆಂದು ಹೇಳಿಲ್ಲವೆ ? ಮೃತಿಸೂತಕವನ್ನು ಆಚರಿಸತಕ್ಕದ್ದು ಪಂಚಸೂತಕಗಳಲ್ಲೊಂದಾಗಿರು ತ್ತದೆ. ಅದಾವುದೆಂದರೆ—ಪ್ರೇತಸೂತಕವು. ಆರಾಧ್ಯರು ತಾವು ಯಾರ ವಂಶಕ್ಕೆ ಸೇರಿದವರೆಂದು ಹೇಳುತ್ತಾರೋ, ಅಂತಹ ರಾಘವಾಂಕರು ಪ್ರೇತಸೂತಕವನ್ನು ಉಚ್ಚಾಟಿಸಲಿಲ್ಲವೇ ? ಆತನು ತನ್ನ ಮರಣ ಸಮಯದಲ್ಲಿ ಗಣಾರಾಧನೆ ಮೊದಲಾದವುಗಳನ್ನು ನಡಿಸಲಿಲ್ಲವೇ ? ಪ್ರಸಕ್ತ ಪುರಾಣದಲ್ಲಿ ಆರಾಧ್ಯರು ಹತ್ತು ದಿವಸಗಳ ವರೆಗೂ ಮೃತಿ ಸೂತಕವನ್ನು ಆಚರಿಸುತ್ತಾರೆಂದು ಏತಕ್ಕೆ ಹೇಳಿದೆ ?

ಲಿಂಗಾಯತರಿಗೆ ಸಂಬಂಧಪಟ್ಟ ಪ್ರಕರಣದಲ್ಲಿ, ಲಿಂಗಾಯತರಿಗೆ ಪಂಚಾಚಾರ ಷಟ್‌ಸ್ಥಲಗಳು ಹೇಳಲ್ಪಡದೇ ಬಿಟ್ಟಿರುತ್ತದೆ. ಆರಾಧ್ಯರಿಗೆ ಸಂಬಂಧಪಟ್ಟ ಪ್ರಕರಣದಲ್ಲಾದರೋ, ಆರಾಧ್ಯರಿಗೆ ಅವು ಜೀವಕಳೆಯಿಂದ ವರ್ಣಿಸಲ್ಪಟ್ಟಿರುತ್ತದೆ. ಹೀಗೇಕೆ ಮಾಡಿದೆಯೋ ನನಗೆ ಗೊತ್ತಾಗುವದಿಲ್ಲ. ಸಾಧಾರಣ ಲಿಂಗಾಯತರು ಅವುಗಳಿಗೆ ಬಾಧ್ಯರಲ್ಲವೆಂದು ಅರ್ಥ ಮಾಡಬೇಕೆಂದೋ ? ವೀರಶೈವದ ಸಾರವೇ ಷಟ್‌ಸ್ಥಲ ಪಂಚಾಚಾರಗಳಾಗಿರುತ್ತವೆ. ಅದರ ಬುಡವೇ ಜಾತಿ ಪದ್ಧತಿ ನಿರಾಕರಣೆಯಾಗಿಯೂ ಮತ್ತು ಎಲ್ಲ ಶಿವಭಕ್ತರನ್ನು ಸಮಭಾವದಿಂದ ಕಾಣತಕ್ಕದ್ದಾಗಿಯೂ ಇರುತ್ತದೆ. ಈ ಕ್ರಮದಿಂದ, ಷಟ್‌ಸ್ಥಲ ಪಂಚಾಚಾರಗಳು ನಿಜ ವೀರಶೈವರ ಆಸ್ತಿಯಾಗಿರುತ್ತದೆ. ಆರಾಧ್ಯರುಗಳು, ಈ ವರೆಗೂ ವಿಚಾರಿಸಲ್ಪಟ್ಟ ಪ್ರಕರಣದಲ್ಲಿ ಕಾಣುವಂತೆ ತಾವು ಬ್ರಾಹ್ಮಣ್ಯಕ್ಕೆ ಹಿಂದಕ್ಕೆ ಹೆಜ್ಜೆ ಇಟ್ಟ ಮೇಲೆ, ಅವುಗಳನ್ನು (ಷಟ್‌ಸ್ಥಲ ಪಂಚಾಚಾರಗಳನ್ನು) ಹೊಂದಿರುವದಕ್ಕೆ ಅರ್ಹರಾಗಿರುತ್ತಾರೆಯೋ ?

ಲಿಂಗ ಜನಿವಾರಗಳೆರಡನ್ನೂ ಧರಿಸತಕ್ಕ ಕೆಲವು ವೀರಶೈವ ತತ್ವಗಳನ್ನೂ ಕೆಲವು ಬ್ರಾಹ್ಮಣ ತತ್ವಗಳನ್ನೂ ಆಚರಿಸತಕ್ಕ ವಿಧಾನಗಳು ಬ್ರಾಹ್ಮಣ್ಯಕ್ಕೂ ವೀರಶೈವಕ್ಕೂ ಮಧ್ಯಸ್ಥವಾದ ಒಂದು ವಿಧಾನವೆಂದು ತಿಳಿಯಬೇಕು. ಅಂತಹ ವಿಧಾನವು ಶುದ್ಧ ವೀರಶೈವವೆಂದಾಗಲೀ ಶುದ್ಧ ಬ್ರಾಹ್ಮಣ್ಯವೆಂದಾಗಲೀ ಗಣಿಸತಕ್ಕದ್ದಲ್ಲ. ಈ ಕಾರಣದಿಂದ ಮೈಸೂರ ದೇಶದ ಆರಾಧ್ಯರು ಈಗ ನಾವು ವಿಚಾರಿಸುತ್ತಿರುವ ಮೇಲ್ಕಂಡ ಪ್ರಕರಣಗಳಲ್ಲಿ ಹೇಳಿದ ಪ್ರಕಾರ ಲಿಂಗಧಾರಣೆಯ ಜತೆಗೆ ಜನಿವಾರವನ್ನು ಧರಿಸಿಕೊಂಡು ಬ್ರಾಹ್ಮಣ ಕರ್ಮಗಳನ್ನು ಆಚರಿಸುತ್ತಿರುವ ಪಕ್ಷದಲ್ಲಿ ಅವರು ಒಂದು ಮಾಧ್ಯಮಿಕವಾದ ಮತದವರೆಂದು ಊಹಿಸಬೇಕಾಗುತ್ತದೆ. ಆದರೆ ಒಂದು ಪ್ರತ್ಯೇಕ ಮತದವರೆಂದು ಊಹಿಸುವದಕ್ಕಾಗುವದಿಲ್ಲ. ಅದೇ ನಿಜ ಸ್ಥಿತಿ ಎಂದು ನಾನು ಹೇಳಲಾರೆ.

ಈ ಮಧ್ಯಸ್ಥವಾದ ಧರ್ಮವು ತೆಲುಗುದೇಶದ ಆರಾಧ್ಯ ಬ್ರಾಹ್ಮಣರಿಂದ ಅವಲಂಬಿಸಲ್ಪಟ್ಟದ್ದು. ಮಲ್ಲಿಕಾರ್ಜುನ ಪಂಡಿತಾರಾಧ್ಯನ ಕಾಲದಷ್ಟು ದೂರಕಾಲದಲ್ಲಿ ನಡೆದದ್ದಾಗಿ ಕಾಣುತ್ತದೆ. ಆತನು ಬಸವನಿಗೆ ಬಸವನ ವೀರಶೈವವನ್ನು ಅಂಗೀಕರಿಸುವ ವಿಚಾರದಲ್ಲಾಗಲೀ ಅಥವಾ ಅನಂಗೀಕಾರ ಮಾಡುವ ವಿಚಾರದಲ್ಲಾಗಲೀ ತನ್ನ ಅಭಿಪ್ರಾಯವನ್ನು

ಕೊಡುವದರಲ್ಲಿ ತನ್ನ ಮನಸ್ಸು ವೀರಶೈವಕ್ಕೂ ಬ್ರಾಹ್ಮಣ್ಯಕ್ಕೂ ಮಧ್ಯೆ ಚಲಿಸುತ್ತದೆ ಎಂದು ಹೇಳಿರುತ್ತಾನೆ. ಇದು ತೆಲುಗಿನಲ್ಲಿರುವ ಪಂಡಿತಾರಾಧ್ಯ ಚರಿತ್ರೆಯ ಒಂದು ಪದ್ಯದಿಂದ ತಿಳಿಯಬರುತ್ತದೆ. ಆ ಪದ್ಯಭಾಗವಾವುದೆಂದರೆ—

" ಭಕ್ತಿ ಮೀದಿ ನಲವು ಬ್ರಾಹ್ಮ್ಯಂಬುತೋ ಬೊತ್ತು ಬಾಯಲೇಸು
ನೇನು ಬಸವಲಿಂಗ "

ಅದರ ಅರ್ಥವೇನೆಂದರೆ:— " ಭಕ್ತಿಯಲ್ಲಿರುವ ಲಾಲಸವನ್ನೂ, ಬ್ರಾಹ್ಮ್ಯದಲ್ಲಿರುವ ಭಾಗವನ್ನೂ ನಾನು ಬಿಡಲಾರೆ "— ಪಂಡಿತಾರಾಧ್ಯನು ದೀರ್ಘಾಲೋಚನೆಯ ಮೇಲೆ ಬಸವನ ವೀರಶೈವವನ್ನು ಕಡೆಯಲ್ಲಿ ಅಂಗೀಕರಿಸಿದಾಗ್ಯೂ ಅವನ ಜತೆಯ ಲಿಂಗವಿಲ್ಲದ ಇತರ ಶಿವಾರಾಧ್ಯಬ್ರಾಹ್ಮಣರು ವೀರಶೈವವನ್ನು ಸಂಪೂರ್ತಿಯಾಗಿ ಅಂಗೀಕರಿಸುವದಕ್ಕೆ ಒಪ್ಪಲಿಲ್ಲ. ಅವರು ಲಿಂಗಧಾರಣವನ್ನು ಅಂಗೀಕರಿಸಿ ಜನಿವಾರವನ್ನು ಉಳಿಸಿಕೊಂಡರು. ಅವರು ಕೆಲವು ವೀರಶೈವ ತತ್ವಗಳನ್ನೂ ಕೆಲವು ಬ್ರಾಹ್ಮಣ ತತ್ವಗಳನ್ನೂ ಆಚರಿಸಿದರು. ತೆಲುಗುದೇಶದಲ್ಲಿನ ಈಗಿನ ತೆಲುಗು ಆರಾಧ್ಯ ಬ್ರಾಹ್ಮಣರು ಮೇಲ್ಕಂಡವರ ವಂಶದವರಾಗಿರುತ್ತಾರೆ. ಮೇಲೆ ಹೇಳಿದ ಕೆಲವು ಶಿವಾರಾಧ್ಯ ಬ್ರಾಹ್ಮಣರು ವೀರಶೈವವನ್ನು ಅಂಗೀಕರಿಸುವದೇನೇ ಉಳಿದುಬಿಟ್ಟರು. ತೆಲುಗು ದೇಶದಲ್ಲಿ ಅವರ ವಂಶದವರೂ ಇರುತ್ತಾರೆ. ಎರಡು ಪ್ರಭೇದದವರಿಗೂ ವಿವಾಹ ಸಂಬಂಧವಿರುತ್ತದೆ.

ಬಸವೇಶನೂ ಕೂಡ ಹಠದ ಕೆಲವು ಬ್ರಾಹ್ಮಣರನ್ನು ದರ್ಶಿಸಿದಂತೆ ಕಾಣುತ್ತದೆ. ಅವರು ಒಂದು ಕಡೆ ವೀರಶೈವವನ್ನು ಅಂಗೀಕರಿಸಿ ಮತ್ತೊಂದು ಕಡೆ ಬ್ರಾಹ್ಮಣಮತದ ಜನ್ನಿವಾರವನ್ನು ಬಿಡಲಾರದೇ ಹೋದರು. ತನ್ನ ವಚನವೊಂದರಲ್ಲಿ ಹೀಗೆ ಪೇಚಾಡಿರುತ್ತಾನೆ.

" ಬಡಹಾರುವನೇಸು ಭಕ್ತನಾದಡೆಯು ನೇಣಿನ
ಹಂಗ ಬಿಡ "

ಕೆಲವು ಶೈವ ಬ್ರಾಹ್ಮಣರು ಬಸವನ ವೀರಶೈವವನ್ನು ಅರ್ಧವಾಗಿ ಅಂಗೀಕಾರ ಮಾಡಿದರೂ ಮತ್ತೆ ಕೆಲವರು ವೀರಶೈವವನ್ನು ಸಂಪೂರ್ತಿಯಾಗಿ ಅಂಗೀಕರಿಸಿ ಬ್ರಾಹ್ಮಣ್ಯವನ್ನು ಮೂರ್ತಿಯಾಗಿ ಬಿಟ್ಟುಬಿಟ್ಟರು.

ಅಂತಹವರೆ ಸೋಮನಾರಾಧ್ಯ ಹಂಪೆ ಹರೀಶ್ವರ ದೇವರು ರಾಘವಾಂಕರು ಕೆರೆಪದ್ಮರಸರು ಮತ್ತು ಇನ್ನೂ ಅನೇಕರು ಅವರ ವಂಶಸ್ಥರು ಈಗಿನ ಕಾಲಪವರಿಗೂ ಶುದ್ಧ ವೀರಶೈವರಾಗಿಯೇ ನಡೆದುಬಂದರು. ಮತ್ತು ಆರಾಧ್ಯ ಎಂಬ ಹೆಸರಿನಿಂದ ಕರೆಯಲ್ಪಡುತ್ತ ಲಿಂಗಾಯತ ಸಮಾಜಕ್ಕೆ ಒಂದು ಆಭರಣವಾಗಿದ್ದರು. ಅಂತಹ ಮುಖ್ಯವಾದ ಒಂದು ಪ್ರಭೇದದವರು ನಮ್ಮ ವೀರಶೈವದ ಎಲ್ಲೆಯಿಂದ ಬಿಟ್ಟುಹೋದಂತೆ ಕಾಣುವದು. ಲಿಂಗಾಯುತ ಸಮಾಜಕ್ಕೆ ಒಂದು ದೊಡ್ಡ ನಷ್ಟವಾಗಿರುತ್ತದೆ. ಅವರ ವಿಷಯವಾಗಿ ಮೇಲ್ಕಂಡ ಪ್ರಕರಣಗಳಲ್ಲಿ ಹೇಳಿರುವ ಸಂಗತಿಯಿಂದ ಸೂಚಿತವಾಗುತ್ತದೆ.

ಬಸವೇಶನಿಗೆ ಮೊದಲು ಆರಾಧ್ಯ ಎಂಬ ಅಂಕಿತವು ಕಾಳಾಮುಖ ಶೈವ ಪಂಡಿತರಿಗೆ ಗೌರವಾಭಿಧಾನವಾಗಿ ಉಪಯೋಗಿಸಲ್ಪಡುತ್ತಿದ್ದಂತೆ ಕಾಣುತ್ತದೆ. ಇದನ್ನು ಆಗಿನ ಕಾಲದ ಕೆಲವು ಶಿಲಾಲೇಖಗಳಿಂದ ನೋಡಬಹುದು. ಕ್ರಿ. ಶ ೧೦೮೪ ರಲ್ಲಿ ಕರ್ಪರಸನಿಂದ ಬರೆಯಲ್ಪಟ್ಟ ಒಂದು ಶಿಲಾಲೇಖವಿರುತ್ತದೆ. ಅದರಲ್ಲಿ ಚಾಳುಕ್ಯ ವಿಕ್ರಮಾದಿತ್ಯನ ಕಾಲದಲ್ಲಿ ದೇವಶಕ್ತಿ ಶಿಷ್ಯಜ್ಞಾನ ಪಂಡಿತನು ಹದಳಿಯ ೪೦೦ ಬ್ರಾಹ್ಮಣರ ಮುಂದೆ ಗೌರೀಶ್ವರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಕೆಳಗೆ ಕೊಟ್ಟಿರುವ ಆ ಶಿಲಾಲೇಖದ ಪದ್ಯದಲ್ಲಿ ಗೌರವಾರ್ಥದ ಆರಾಧ್ಯ ಎಂಬ ಹೆಸರು ಕರ್ಪರಸನಿಗೆ ಉಪಯೋಗಿಸಲ್ಪಟ್ಟಿದೆ. ಶಿಲಾಲೇಖದ ಪದ್ಯವು ಈ ರೀತಿಯಾಗಿದೆ—

“ ಜನಕಂ ವಿಪ್ರಕುಲಾಂಬರದ್ಯುಮಣಿ ಚಂದ್ರ ಕಾರ್ಯ ಸದಾಚಾರವ ॥
ರ್ತಿನಿ ಚಾಮಾಂಬಿಕೇರ್ಮಲೋರ್ಜಿತ ಯಶಂ ಶ್ರೀ ಕಾಳಿದಾಸಂ ಧರಾ ॥
ವಿನುತಂ ಮಾವನುಮಾವರಂ ಸಕಲಲೋಕಕ್ಕಾರಾಧ್ಯನಾರಾಧ್ಯನೆಂ ॥
ದುನಿತಾಂತಕುಧರೆ ಬಣ್ಣಿಸುಂ ಬುಧಸಮೂಹ ಕರ್ಪನಂ ಕರ್ಪನಂ ॥

ಈ ಪದ್ಯದಲ್ಲಿ “ ಸಕಲಲೋಕಕ್ಕಾರಾಧ್ಯನಾರಾಧ್ಯ ” ಎಂಬ ಶಬ್ದವನ್ನು ನೋಡಬಹುದು.

ಆದೇ ಪ್ರಕರಣದಲ್ಲಿ ಆರಾಧ್ಯರು ಲಿಂಗಾಯತರಿಂದ ನೀರು ಮಿಶ್ರವಾಗಿ ಪಾಕಮಾಡಲ್ಪಟ್ಟ ಅಡಿಗೆಯನ್ನು ಸ್ವೀಕರಿಸುವದಿಲ್ಲವೆಂದು ಬರೆಯಲ್ಪಟ್ಟಿರುತ್ತದೆ. ಐವತ್ತು ವರ್ಷಗಳ ನನ್ನ ಅನುಭವದಿಂದ, ಆರಾಧ್ಯರು

ಲಿಂಗಾಯತ ಸಮಾಜದ ಭಾಗ ಮತ್ತು ಒಂದು ಅಂಗವಾಗಿರುತ್ತದೆಂದು ನಾನು ಹೇಳುತ್ತೇನೆ. ಹಿಂದಣ ಸೆನಸಸ್ಸುಗಳಲ್ಲಿ ಅವರು ಲಿಂಗಾಯತರೊಳಗೆ ಬರೆಯಲ್ಪಟ್ಟಿರುತ್ತದೆ. ಅವರು ಜಂಗಮರಾಗಿ ಎಲ್ಲಾ ಲಿಂಗಾಯತರ ಮನೆಗಳಿಗೆ ಬಂದು ಊಟಮಾಡುತ್ತಾರೆ. ಮತ್ತು ಎಲ್ಲಾ ಲಿಂಗಾಯತರು ಅವರ ಮನೆಗಳಿಗೆ ಹೋಗಿ ಊಟಮಾಡುತ್ತಾರೆ.

ಅದೇ ಆರಾಧ್ಯರಿಗೆ ಸಂಬಂಧಪಟ್ಟ ಪ್ರಕರಣದಲ್ಲಿ ಮತ್ತು ಹೇಳುವದೇನಂದರೆಃ— ಪ್ರಕೃತಕಾಲದಲ್ಲಿ ಆರಾಧ್ಯರಿಗೂ ಇತರ ಸಾಧಾರಣ ಲಿಂಗಾಯತರಿಗೂ ಪರಸ್ಪರ ವ್ಯವಹಾರಗಳೇನೂ ಇರುವದಿಲ್ಲವೆಂದು ಹೇಳಿವೆ. ಇದರಿಂದ ಊಹೆಮಾಡಬಹುದಾದುದೇನಂದರೆ— ಆರಾಧ್ಯರು ಬಸವೇಶನ ಕಾಲದಿಂದಲೂ ನಡೆದುಬಂದ ಮಿಕ್ಕ ಲಿಂಗಾಯತರ ಸಂಬಂಧವನ್ನು ತಪ್ಪಿಸಿಬಿಡುವದಕ್ಕೆ ಪ್ರಯತ್ನಮಾಡುತ್ತಿರುವದಾಗಿ ಕಾಣುತ್ತದೆ.

ಆರಾಧ್ಯರ ವಿಷಯವಾಗಿ ನಾನು ಕಡೆ ಮಾತನ್ನು ಆಡಬೇಕಾಗಿರುತ್ತದೆ. ಪದ್ಮರಾಜ ಪುರಾಣಕ್ಕೆ ಮಲ್ಲಾರಾಧ್ಯರು ಬರೆದಿರುವ ಉಪೋದ್ಘಾತದ ಪ್ರಕಾರ ಆರಾಧ್ಯರು ತಾವು ಪ್ರಸಿದ್ಧನಾದ ಕೆರೆಪದ್ಮರಸರ ವಂಶೀಯರೆಂದು ಹೇಳುತ್ತಾರೆ. ಹಂಪೆ ಹರೀಶ್ವರ ರಾಘವಾಂಕ ಕೆರೆಪದ್ಮರಸ ಇವರುಗಳ ಕೃತಿಗಳಿಂದ ಅವರೆಲ್ಲರೂ ವೀರಶೈವರಾಗಿದ್ದರೆಂದೂ ಅವರು ವರ್ಣಭೇದವನ್ನು ಖಂಡಿತವಾಗಿ ನಿರಾಕರಿಸಿದರೆಂದೂ ಅವರು ಜನ್ನಿವಾರವನ್ನು ಹಾಕುತ್ತಿರಲಿಲ್ಲವೆಂದೂ ಅವರು ಬ್ರಾಹ್ಮಣ ಕರ್ಮಗಳನ್ನು ನಡೆಸುತ್ತಿದ್ದಿಲ್ಲವೆಂದೂ ಚನ್ನಾಗಿ ಗೊತ್ತಿದೆ. ಇದರ ನಿದರ್ಶನಕ್ಕೆ ಹಂಪೆ ಹರೀಶ್ವರನ ಬಸವರಾಜ ರಗಳೆಯನ್ನು ನೋಡಬಹುದು. ರಾಘವಾಂಕನ ಸಿದ್ಧರಾಮ ಪುರಾಣವನ್ನು ನೋಡಬಹುದು. ಕೆರೆಪದ್ಮರಸನ ದೀಕ್ಷಾಬೋಧೆಯನ್ನು ನೋಡಬಹುದು. ಈಗ ನಾನು ವಿಚಾರವಾಡುತ್ತಿರುವ ಆರಾಧ್ಯರಿಗೆ ಸಂಬಂಧಪಟ್ಟ ಪ್ರಕರಣದಲ್ಲಿ ಹೇಳಿರುವ ಮೇರೆಗೆ, ಆರಾಧ್ಯರಿಗೆ ಬಸವಜಯಂತಿಯ ಹಬ್ಬವು ಬರೆಯಲ್ಪಡದೆ ಬಿಟ್ಟಿರುತ್ತದೆ. ಮೇಲೆ ಹೇಳಿದ ಮಹಾಪುರುಷ ಬಸವನ ಕೇವಲ ಹತ್ತಿರದ ಹಿಂಬಾಲಕರಾಗಿರುತ್ತಾರೆ. ಪದ್ಮರಾಜಪುರಾಣದಲ್ಲಿ ಈ ಕೆಳಗಣ ವಿಷಯವನ್ನು ನೋಡಬಹುದು. ಕೆರೆಪದ್ಮರಸನು ನರಸಿಂಹ ಬಲ್ಲಾಳನ ಆಸ್ಥಾನಕ್ಕೆ ತ್ರಿಭುವನತಾತಾಚಾರ್ಯನ ಜತೆಗೆ ವಾದಮಾಡುವದಕ್ಕೆ ಹೊರಟಾಗ ಬಸವೇಶ್ವರನ ಗೀತೆಗಳು (ವಚನಗಳು) ಹಾಡಲ್ಪಟ್ಟವೆ. ಮೊನ್ನೆ ತಾನೆ ಕಾಲ

ವಾದ ಆರಾಧ್ಯರು ಅಧಿಕಾರಿಗಳಲ್ಲಿ ಒಬ್ಬರು ಬಸವಾರಾಧ್ಯ ಎಂಬ ಹೆಸರನ್ನು ಧರಿಸಿದ್ದರು. ಕೆರೆಪದ್ಮರಸರ ವಂಶಸ್ಥರಿಗೆ ಅವರ ವೀರಶೈವವು ಬಸವನ ವೀರಶೈವಕ್ಕೆ ವ್ಯತಿರಿಕ್ತವಾದ ಬೇರೆ ವಿಧದ ವೀರಶೈವವೆಂದು ಹೇಳುವದು ಸತ್ಯಕ್ಕೂ ಚಾರಿತ್ರ್ಯಕ್ಕೂ ವಿರೋಧವಾದ ಮಾತಾಗಿರುತ್ತದೆ. ಆರಾಧ್ಯರು ತಾವು ಗುರುಸಂಪ್ರದಾಯದ ವೀರಶೈವರೆಂದು ಹೇಳಿದರೂ ಹೇಳಿಕೊಳ್ಳಲಿ, ಬಸವೇಶ್ವರನ ಕಾಲದಿಂದಲೂ ತಾವು ಯಾವ ಮತಕ್ಕೆ ಅಂಟಿಕೊಂಡು ಬಂದಿದ್ದರೋ ಆ ಮತದ ಎಲ್ಲೆಯನ್ನು ಬಿಟ್ಟು ಹೋಗದಿರುವವರಾಗಲಿ. (*Census*) ಜನಪರಿಗಣಿತಿಯಲ್ಲಿ ಲಿಂಗಾಯತರು ಅಥವಾ ವೀರಶೈವರು ಎಂಬ ಪಂಕ್ತಿಯಲ್ಲಿ ಈ ವರೆಗೂ ತಾವು ಬರೆಯಿಸುತ್ತಿದಂತೆ ಬರೆಯಿಸುವವರಾಗಲಿ. (*Census*) ಜನಪರಿಗಣಿತಿಯಲ್ಲಿ ಒಂದು ಪ್ರತ್ಯೇಕ ಪಂಙ್ತಿಗೆ ಅಪೇಕ್ಷೆಪಟ್ಟು ಅದರಿಂದ ಚಾರಿತ್ರಪ್ರಸಿದ್ಧವಾದ ದೊಡ್ಡ ವೀರಶೈವ ಸಮಾಜದಲ್ಲಿ ಒಂದು ಕೊರತೆಯನ್ನು ಉಂಟುಮಾಡದಿರುವವರಾಗಲಿ.

ಲಿಂಗಾಯತರಿಗೆ ಸಂಬಂಧಪಟ್ಟ ಪ್ರಕರಣದಲ್ಲಿ ಲಿಂಗಾಯತರ ಒಳಭೇದಗಳನ್ನು ಇಂಡಿಯಾದಲ್ಲಿರುವ ಕ್ರೈಸ್ತ ಮತಾಂತರದವರಿಗೆ ಹೋಲಿಕೆ ಮಾಡಿ ಬರೆದಿರುತ್ತದೆ. ಈ ಹೋಲಿಕೆಯನ್ನು ಮಾಡುವ ಅವಶ್ಯಕವಿದ್ದಿಲ್ಲ. ಇದನ್ನು ನೋಡಿದರೆ ವಿವೇಕಾನಂದರವರ ಕೆಲವು ವಾಕ್ಯಗಳಿಂದ ಬ್ರಾಹ್ಮಣಮತಕ್ಕೂ ಮತಾಂತರಗಳಾಗಿರುತ್ತವೆಂಬುದನ್ನು ನೋಡಬಹುದು ಮೆ॥ ಕಾಂಸನರವರು ಆರ್ಯರು ದಕ್ಷಿಣದೇಶಕ್ಕೆ ಬಂದಾಗ್ಯೆ ಅನೇಕ ದ್ರಾವಿಡರು ಬ್ರಾಹ್ಮಣರು ಮಾಡಲ್ಪಟ್ಟರೆಂದು ತಮ್ಮ ಇಂಡಿಯಾ ದೇಶದ ಚರಿತ್ರೆಯಲ್ಲಿ ಹೇಳುತ್ತಾರೆ.

ಕಡೇ ಮಾತಾಗಿ ನಾನು ಹೇಳುವದೇನೆಂದರೆ, ಹಿಂದೆ ನಡೆದ (*Census*) ಜನಪರಿಗಣಿತಿಗಳಿಂದ ಸಮಾಜದಲ್ಲಿ ವಿಭಾಗಗಳುಂಟಾಗುವ ಪರಿಣಾಮವು ಅತ್ಯಧಿಕ ಆಗಿರುತ್ತದೆ. (*Census*) ಜನಪರಿಗಣಿತಿಗಳು ಲಿಂಗಾಯತ ಸಮಾಜದ ಅನೇಕ ಒಳಪಂಗಡಗಳಲ್ಲಿ ಒಬ್ಬರಿಗಿಂತ ಒಬ್ಬರು ಹೆಚ್ಚಿನ ಕುಲದವರು ಎನ್ನಿಸಿಕೊಳ್ಳಬೇಕೆಂಬ ಆಶೆಯನ್ನು ಎಬ್ಬಿಸಿರುತ್ತದೆ. ವೀರಶೈವ ಮತತತ್ವದ ಮುಖ್ಯ ತಿರುಳಾದ ಶಿವಭಕ್ತರೆಲ್ಲರೂ ಒಂದೇ ಸಮರೆಂಬ ಸಮತಾಭಾವವು ಕೇವಲ ಹಿಂದಕ್ಕೆ ತಳ್ಳಲ್ಪಟ್ಟಿರುತ್ತದೆ. ಇದರ ಫಲಿತಾಂಶವಾಗಿ ಅಹಂಕಾರಗಳೂ ಅತೃಪ್ತಿಗಳೂ ಬೆಳೆದುಹೋಗಿರುತ್ತದೆ.

ಮತ್ತು ಸಮಾಜವು ಕ್ರಮೇಣ ವಿಭಜನೆಯನ್ನು ಹೊಂದುತ್ತಾ ಹೋಗು ತ್ತಿದೆ. ಈ ಸ್ಥಿತಿಯು ಮುಂದೆಯೂ ನಡೆಯುತ್ತಾ ಹೋಗುವದಕ್ಕೆ ಅವ ಕಾಶಕೊಟ್ಟರೆ ಸಮಾಜವು ಇನ್ನು ಒಂದು ಶತಮಾನದಷ್ಟರಲ್ಲಿ ನಿಶ್ಚಯ ವಾಗಿಯೂ ಅಂತ್ಯವನ್ನು ಹೊಂದುವದಾಗಿರುತ್ತದೆ. ಸಮಾಜದ ಒಳ ಪಂಗಡಗಳವರು ಶ್ರೇಷ್ಠತ್ವ ನಿಕೃಷ್ಟತ್ವವೆಂಬ ಸುಳ್ಳು ಭಾವಗಳನ್ನು ಬಿಡ ಬೇಕು. ಎಲ್ಲರೂ ಸರಿಸಮಾನರೆಂದು ತಿಳಿಯಬೇಕು. ಅವರು ಸಾರ್ವ ತ್ರಿಕವಾದ ಲಿಂಗಾಯತ ಅಥವಾ ವೀರಶೈವ ಎಂಬ ಹೆಸರಿಗೆ ಪ್ರಾಮು ಖ್ಯತೆಯನ್ನು ಕೊಡಬೇಕು. ಮತ್ತು ವಿಭಿನ್ನತಾ ಭಾವೋತ್ಪತ್ತಿಗಳಿಗೆ ಕಾರಣಗಳಾದ ಒಳಪಂಗಡಗಳ ಹೆಸರುಗಳನ್ನು ಅಧೀನವನ್ನಾಗಿ ಮಾಡ ಬೇಕು. ಅಥವಾ ಬಿಟ್ಟುಬಿಡಬೇಕು. ಲಿಂಗಾಯತರು ತಮ್ಮ ಮತವು ಒಂದು ಸಂಪೂರ್ಣ ಸ್ವತಂತ್ರ ಮತವೆಂಬುದನ್ನು ತಿಳಿಯುಬೇಕು. (*Census*) ಜನ ಪರಿಗಣತಿಯಲ್ಲಿ ಲಿಂಗಾಯತ ಸಮಾಜವನ್ನು ಬ್ರಾಹ್ಮಣರ ನಾಲ್ಕು ಜಾತಿ ಗಳಲ್ಲಿ ಸೇರಿಸುವದು ತಪ್ಪಾಗಿರುತ್ತದೆ. ಲಿಂಗಾಯತವು ಜಾತಿಪದ್ಧತಿ ಯನ್ನು ನಿರಾಕರಿಸಿ ಬ್ರಾಹ್ಮಣ ಕರ್ಮಗಳನ್ನು ದೂರಮಾಡಿರುವಷ್ಟರಮ ಟ್ಟಿಗೂ ಮತ್ತು ಲಿಂಗಾಯತರೆಲ್ಲರೂ ಭಕ್ತರೆಂತಲೂ ಅಲಿಂಗಿಗಳೆಲ್ಲರೂ ಭವಿಗಳೆಂತಲೂ ಭಾವಿಸುವಷ್ಟರ ಮಟ್ಟಿಗೂ ಬ್ರಾಹ್ಮಣ ಮತಕ್ಕೆ ವಿರುದ್ಧ ವಾದುದಾಗಿರುತ್ತದೆ. ಮದ್ರಾಸಿನ ಟಾಗೋರ್ ಲಾ ಪ್ರೊಫೆಸರ್ ಆದ ಕೆ. ಸುಬ್ರ ಮಣ್ಯರವರು ಹೀಗೆ ಹೇಳುತ್ತಾರೆ.

"ಈ ಮತವು ಸ್ಮೃತಿಗಳ ಜಾತಿಪದ್ಧತಿಯನ್ನು ಒಪ್ಪುವದಿಲ್ಲ ಇದ ರಿಂದ ಇದು ಪ್ರತ್ಯೇಕ ನ್ಯಾಯವಿಧಿಗೆ ಅರ್ಹತೆಯುಳ್ಳ ಒಂದು ಸ್ವಾತಂತ್ರ್ಯ ಸಮಾಜಸ್ಥಿತಿಯನ್ನುಂಟಾಗಿರುತ್ತದೆ.

ಪ್ರಸಿದ್ಧನಾದ ಸೋಮನಾರಾಧ್ಯನು ತನ್ನ ಭಾಷಣದಲ್ಲಿ ಯಾವಾಗ್ಯು ವೀರಶೈವರನ್ನು ಬ್ರಾಹ್ಮಣರ ನಾಲ್ಕು ಜಾತಿಗಳಿಂದ ಅಂದರೆ ಬ್ರಾಹ್ಮಣ, ಕ್ಷತ್ರಿಯ ಶೂದ್ರ ಎಂಬ ಜಾತಿಗಳಿಂದ ವಿಭಿನ್ನಿಸಿ ಪ್ರತ್ಯೇಕವಾಗಿ ಬರೆಯು ತ್ತಾನೆ. ಶರಣ ಸಿದ್ಧರಾಮನು ತನ್ನ ವಚನದಲ್ಲಿ ಅದೇರೀತಿ ಮಾಡಿರು ತ್ತಾನೆ. ಕನ್ನಡ ಮಹಾಭಾರತದಲ್ಲಿ ಸ್ವಯಂವರ ಸಂಧಿಯಲ್ಲಿ ಲಿಂಗಾ ಯತರನ್ನು ಬೌದ್ಧರಂತೆ ಪ್ರತ್ಯೇಕಿಸಿ ಹೇಳುತ್ತಾನೆ. "ಬುದ್ಧ, ಲಿಂಗಿ ಗಳು" ಎಂಬ ಶಬ್ದವನ್ನು ಉಪಯೋಗಿಸಿರುತ್ತಾನೆ. ಈಚಿನ (*Census*) ಜನಪರಿಗಣತಿಯಲ್ಲಿ ಹಿಂದೂಗಳಲ್ಲಿ ಮೂರು ಭಾಗಗಳನ್ನು ಮಾಡಿರುವ

ದನ್ನು ನೋಡಿದೆನು. ಬ್ರಾಹ್ಮಣ ಹಿಂದೂಗಳೆಂತಲೂ ಆರ್ಯ ಹಿಂದೂಗಳೆಂತಲೂ ಬ್ರಾಹ್ಮೋ ಹಿಂದೂಗಳೆಂತಲೂ ವಿಭಾಗಮಾಡಿರುವದನ್ನು ನೋಡಿದೆನು. ಲಿಂಗಾಯತರನ್ನು ಬ್ರಾಹ್ಮಣ ಹಿಂದುಗಳಿಂದ ಪ್ರತ್ಯೇಕವಾಗಿ ಲಿಂಗಾಯತ ಹಿಂದೂಗಳೆಂದು ಸೇರಿಸುವುದು ಬಹಳ ಅನುಕೂಲವಾಗಿರುತ್ತದೆ. ಹೆಚ್ಚು ಅನುಭವವುಳ್ಳ ಲಿಂಗಾಯತ ವಿದ್ಯಾವಂತರು ಈ ವಿಚಾರವನ್ನು ಆಲೋಚಿಸಬಹುದು. ಮತ್ತು ಯೋಗ್ಯವಾದದ್ದಾಗಿ ಯಾವದು ಕಾಣಿಸುತ್ತದೆಯೋ ಅದನ್ನು ಮಾಡಬಹುದು. ಲಿಂಗಾಯತರು ಐಕ್ಯಮತ್ಯವುಳ್ಳವರಾಗಬೇಕು ಮತ್ತು ಲಿಂಗಧಾರಿಗಳೆಲ್ಲರೂ ಒಂದೇ ವೀರಶೈವದ ಕಟ್ಟಿನ ವಿಧಿಯನ್ನು ನಡೆಸಬೇಕು.

ಶಿವಾಗಮಗಳನ್ನು ಉಚ್ಚರಿಸಿದ ಪರಶಿವನು ಮತ್ತು ವಚನಗಳನ್ನು ಹಾಡಿದ ಬಸವಾದಿ ಪ್ರಮಥರು ವೀರಶೈವ ಸಮಾಜವನ್ನು ರಕ್ಷಿಸಲಿ ಮತ್ತು ಸುತ್ತಲಿನ ಪ್ರಪಂಚವನ್ನು ಉದ್ಧರಿಸಲಿ.

---

## ಸ್ಫುಟವಿಷಯಗಳು.

---

**ಕಾಲಜ್ಞಾನದ ವಚನಗಳು:**— ಕರ್ನಾಟಕ ಇತಿಹಾಸವು ಇನ್ನೂ ಅಜ್ಞಾತಾವಸ್ಥೆಯಲ್ಲಿಯೇ ಇರುತ್ತದೆ. ಇಲ್ಲಿ ಅನೇಕ ಪ್ರಸಿದ್ಧ ರಾಜಮನೆತನಗಳು ಆಗಿಹೋಗಿದ್ದರೂ ಅವು ಮಾಡಿದ ಮಹತ್ಕೃತ್ಯಗಳ ವೃತ್ತಾಂತಗಳು ಪ್ರಕಾಶಕ್ಕೆ ಬಂದಿರುವದಿಲ್ಲ. ಅದೇ ಪ್ರಕಾರ ವೀರಶೈವ ಸಮಾಜದ ಸ್ಥಿತಿಯೂ ಇರುತ್ತದೆ. ಇದು ಕರ್ನಾಟಕದ ರಾಜಕೀಯ ಮತ್ತು ವಾಙ್ಮಯಾತ್ಮಕ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನಲಂಕರಿಸಿದೆ. ಆದರೆ ಈ ಇತಿಹಾಸದ ಪೂರ್ಣ ಪರಿಚಯವು ಇನ್ನೂ ನಮಗೆ ಆಗಿರುವದಿಲ್ಲ. ಬಸವೇಶ್ವರನ ಕಾಲದಲ್ಲಿ ಉಂಟಾದ ಮಹತ್ಕ್ರಾಂತಿಯು ಹ್ಯಾಗೆ ಉದ್ಭವಿಸಿತು, ಇದಕ್ಕೆ ನಿಜವಾದ ಕಾರಣಗಳು ಯಾವವು ಉಂಟಾದವು, ಮುಂದೆ ವೀರಶೈವ ಸಮಾಜವು ಹ್ಯಾಗೆ ಪ್ರಸಾರವಾಗುತ್ತ ಹೋಯಿತು, ಹೀಗೆ ಪ್ರಸಾರವಾಗಲು ಎಷ್ಟು ಕಾಲವು ಹತ್ತಿತು, ಯಾವುದರ ಮೂಲಕ ಈ ಪ್ರಸಾರವು ಹೆಚ್ಚಲು ಕಾರಣವಾಯಿತು, ಇವಾವೂ ನಮಗೆ ತಿಳಿದಿರುವದಿಲ್ಲ. ಈ ವರೆಗೆ ಪ್ರಕಟವಾದ ಶಿಲಾಶಾಸನಗಳನ್ನು ನೋಡಿದರೆ ಅವುಗಳಲ್ಲಿ ಈ ಸಂಗತಿಗಳ

ಉಲ್ಲೇಖಗಳಿರುವದಿಲ್ಲ. ವೀರಶೈವ ಪುರಾಣಗಳನ್ನು ನೋಡಿದರೆ, ಅವುಗಳಲ್ಲಿ ಈ ವಿಷಯಗಳ ಸಂಬಂಧವಾಗಿ ವಿವರಣೆಗಳು ಅಲ್ಲಲ್ಲಿ ಕಂಡುಬರುತ್ತಿದ್ದರೂ ಅವುಗಳಲ್ಲಿ ನಿಜಾಂಶವು ಎಷ್ಟು ಇದೆ ಎಂಬದನ್ನು ಕಂಡುಹಿಡಿಯಲು ಸಾಧನಗಳಿಲ್ಲ. ಇವುಗಳಲ್ಲಿ ಅತಿಶಯೋಕ್ತಿಯುಳ್ಳ ದಂತಕಥೆಗಳು ವಿಶೇಷ ವಾಗಿ ತುಂಬಿಹೋಗಿರುವದು ಸ್ಪಷ್ಟವದೆ. ವಚನಗ್ರಂಥಗಳನ್ನು ಬರೆದವ ರಲ್ಲಿ ಅನೇಕರು ವೀರಶೈವ ಧರ್ಮವನ್ನು ಪ್ರಸಾರಪಡಿಸಿದವರು ಇರುವ ರೆಂಬದು ನಿಜವು. ಆದರೆ ಅವರು ತಮ್ಮ ವಚನಗಳಲ್ಲಿ ಆತ್ಮವೃತ್ತವನ್ನು ಬರೆದುಕೊಂಡಿರುವದಿಲ್ಲ. ಈ ಸ್ಥಿತಿಯ ಮೂಲಕ ವೀರಶೈವರ ರಾಜ ಕೀಯ ಮತ್ತು ಧಾರ್ಮಿಕ ಇತಿಹಾಸವನ್ನು ಕಂಡುಹಿಡಿಯುವದು ಬಹಳ ದುಸ್ತರವಾಗಿವೆ.

ಆದರೆ ವೀರಶೈವ ಸಮಾಜದ ಇತಿಹಾಸವನ್ನು ತಿಳಿಯಲು ಕೆಲವು ಸಾಧನಗಳಿವೆ. ಅವುಗಳಲ್ಲಿ ಕಾಲಜ್ಞಾನದ ವಚನಗಳು ಮತ್ತು ಶಿವಶರ ಣರ ಚರಿತ್ರೆಗಳು ಇವುಗಳು ಸಹಾಯಕಾರಿಯಾಗಿವೆ. ಇವುಗಳಲ್ಲಿ ಕಾಲಜ್ಞಾ ನದ ವಚನಗಳು ಬಹು ಮಹತ್ವದವೆಂದು ನಾವು ತಿಳಿಯಬಹುದಾಗಿದೆ. ಇವುಗಳಲ್ಲಿ ಅನೇಕ ನಂಬಲಾರದಂಥ ವಿಷಯಗಳು ಇರುವದು ತೋರಿ ಬರುತ್ತಿದ್ದರೂ ಇವುಗಳು ಅದ್ಭುತವಾದಂಥ ಸಂಗತಿಗಳಿಗೆ ವಿಶೇಷ ಮಹ ತ್ವವನ್ನು ಕೊಡದೆ ನಿಜವಾಗಿ ವರ್ತಿಸಿದ ಸಂಗತಿಗಳಿಗೆ ಮಹತ್ವಕೊ ಟ್ಟಿರುವದು ವಾಚಕರಿಗೆ ಕೂಡಲೆ ತಿಳಿದುಬರದೆ ಇರಲಾರದು. ಈ ಕಾಲಜ್ಞಾ ನದ ವಚನಗಳನ್ನು ಅನೇಕ ಜನರು ಬೇರೆ ಬೇರೆ ಕಾಲದಲ್ಲಿ ರಚಿಸಿದ ಹಾಗೆ ತೋರುತ್ತದೆ. ಇವುಗಳೆಲ್ಲವನ್ನು ನಾವು ಒತ್ತಟ್ಟಿಗೆ ಕ್ರೋಢೀಕರಿಸಿ ಅವುಗಳಲ್ಲಿ ನಿರ್ದಿಷ್ಟವಾದ ಸಂಗತಿಗಳನ್ನು ಪರೀಕ್ಷಿಸಿದಲ್ಲಿ ವೀರಶೈವ ಸಮಾಜದ ಇತಿಹಾಸದ ಮೇಲೆ ಪ್ರಕಾಶವು ಬೀಳದೆ ಇರಲಾರದೆಂದು ನಾವು ಭಾವಿಸಿರುತ್ತೇವೆ. ಈ ಉದ್ದೇಶದಿಂದ ನಾವು ಈ ಕಾಲಜ್ಞಾನದ ವಚನಗಳನ್ನು ಶಿವಾನುಭವದಲ್ಲಿ ಈಚೆಗೆ ಪ್ರಕಟಿಸಹತ್ತಿರುತ್ತೇವೆ. ವಾಚ ಕರು ಅವುಗಳನ್ನು ಬರೇ ಸ್ಥೂಲದೃಷ್ಟಿಯಿಂದ ನೋಡಿ ಅವುಗಳಲ್ಲಿ ಏನೂ ಮಹತ್ವವಿಲ್ಲೆಂದು ತಿಳಿಯಬಾರದೆಂದು ನಮ್ಮ ವಿನಂತಿ ಇದೆ. ಅವುಗಳ ಲ್ಲಿಯ ವಿಷಯಗಳನ್ನೂ ನಿರೂಪಿಸಿದ ಸಂಗತಿಗಳನ್ನೂ ತುಲನಾತ್ಮಕ ದೃಷ್ಟಿಯಿಂದ ಪರೀಕ್ಷಿಸಿ ಅವುಗಳ ಮೂಲಕ ಈಗ ಹೊರಪಟ್ಟ ಐತಿಹಾ ಸಿಕ ಸಂಗತಿಗಳಿಗೂ ಇತರ ಸ್ಥಳಿಕ ಕುರುಹುಗಳಿಗೂ ವೃತ್ತಾಂತಗಳಿಗೂ ಹೋಲಿಸಿ ನೋಡಬೇಕು. ಅಂದರೆ ವೀರಶೈವ ಸಮಾಜದ ಇತಿಹಾಸದ

ಮೇಲೆ ವಿಶೇಷ ಪ್ರಕಾಶವು ಬೀಳದೆ ಇರಲಾರದು. ಶಿವಾನುಭವ ಪತ್ರಿಕೆಯ ಉದ್ದೇಶಗಳಲ್ಲಿ ಶೋಧಕರಿಗೆ ವಿಚಾರವಾಡಲು ಸಾಮುಗ್ರಿಗಳನ್ನು ಒದಗಿಸಿಕೊಡುವದು ಒಂದಾಗಿರುತ್ತದೆ. ಈ ಉದ್ದೇಶಕ್ಕನುಸರಿಸಿ ನಾವು ಕಾಲಜ್ಞಾನದ ವಚನಗಳನ್ನು ಈ ಪತ್ರಿಕೆಯಲ್ಲಿ ಈಚೆಗೆ ಪ್ರಕಟಿಸುತ್ತಲಿದ್ದೇವೆ. ಈ ದೃಷ್ಟಿಯಿಂದಲೇ ಈ ವಚನಗಳನ್ನು ಪರೀಕ್ಷಿಸಬೇಕೆಂದು ವಾಚಕರಿಗೆ ನಮ್ಮ ಸವಿನಯ ವಿನಂತಿ ಇದೆ.

**ವೀರಶೈವ ಮತತತ್ವ ಸಂಶೋಧನಃ—** ವೀರಶೈವ ವಚನಗ್ರಂಥಗಳನ್ನು ನಾವು ಹೊರಪಡಿಸಿದಂದಿನಿಂದ ಅನೇಕ ಮಹನೀಯರು ಇವುಗಳನ್ನು ಓದಿ ಅವುಗಳ ಬಗ್ಗೆ ತಮ್ಮ ವಿಚಾರಗಳನ್ನು ಲೇಖ ಮತ್ತು ಗ್ರಂಥ ಮೂಲಕವಾಗಿ ಈಗ ಪ್ರಕಟಿಸಹತ್ತಿರುವದು ಅತ್ಯಂತ ಅಭಿನಂದನೀಯವಾಗಿರುತ್ತದೆ. ಹೀಗೆ ಪ್ರಯತ್ನಿಸುವವರಲ್ಲಿ ಮಿ. ಶ್ರೀನಿವಾಸ ಮೂರ್ತಿಗಳು, ಮಿ. ಬಿ. ಎಮ್. ಶ್ರೀಕಂಠಯ್ಯನವರು ಮುಖ್ಯರಾಗಿದ್ದು ಈ ವಿಷಯವಾಗಿ ಅವರು ಮಹತ್ವದ ಗ್ರಂಥಗಳನ್ನು ಬರೆದಿರುವರು, ಮತ್ತು ಈಗಲೂ ಬರೆಯುತ್ತಲಿರುವರು. ಇದಕ್ಕೋಸ್ಕರ ವೀರಶೈವ ಸಮಾಜದವರು ಅವರಿಗೆ ಅತ್ಯಂತ ಋಣಿಯಾಗಿರತಕ್ಕದ್ದು. ಅದೇ ಮೇರೆಗೆ ಈಚೆಗೆ ಮಿ॥ ರಂಗರಾವ ದಿವಾಕರ ಇವರು ಜೇಲಿನಲ್ಲಿದ್ದರೂ ಕೂಡ ವಚನಗ್ರಂಥಗಳನ್ನು ಅಭ್ಯಾಸಿಸಿ ತಮಗೆ ಕಂಡುಬಂದ ವಿಚಾರಗಳನ್ನು ಗ್ರಂಥರೂಪಾಗಿ ಬರೆಯಲು ಪ್ರಾರಂಭಿಸಿ ಅದರಲ್ಲಿ ಬಹು ಭಾಗವನ್ನು ಇಷ್ಟರಲ್ಲಿಯೇ ಬರೆದಿರುವದಾಗಿ ತಿಳಿಯುತ್ತಿದೆ. ಹೀಗೆ ಬೇರೆ ಮತದವರು ವೀರಶೈವ ಧರ್ಮತತ್ವಗಳನ್ನು ಪರೀಕ್ಷಿಸಿ ಬರೆದಲ್ಲಿ ಅದಕ್ಕೆ ಒಂದು ವಿಧದ ನಾವೀನ್ಯತ್ವವು ಪ್ರಾಪ್ತವಾಗದೆ ಇರದು. ಇದು ಸಮಾಜಸುಧಾರಣೆಗೆ ಪೋಷಕವೇ ಸರಿ. ಆದ್ದರಿಂದ ವೀರಶೈವ ಸಮಾಜದವರು ಈ ಮಹನೀಯರಿಗೋಸ್ಕರ ವಿಶೇಷ ಮನ್ನಣೆಯನ್ನು ತಾಳಿ ಅವರ ಕಾರ್ಯದಲ್ಲಿ ಸಹಾಯಮಾಡುವದು ಕರ್ತವ್ಯವಾಗಿರುವದು. ಆದರೆ ಈ ವರಗೆ ಹೊರಪಟ್ಟ ವಚನವಾಙ್ಮಯದಲ್ಲಿ ಷಟ್‌ಸ್ಥಲಗಳ ಸಾಮಾನ್ಯ ಸ್ವರೂಪವು ಮಾತ್ರ ಹೊರಪಟ್ಟಿರುತ್ತದೆ. ಇವುಗಳಲ್ಲಿರುವ ಅನೇಕ ವಿಧ ಗೂಢ ವಿಷಯಗಳು ಇನ್ನೂ ಪ್ರಕಟವಾಗಿಲ್ಲ. ಅಂದರೆ ಷಟ್‌ಸ್ಥಲದ ಮರ್ಮಗಳು, ಅವುಗಳಲ್ಲಿರುವ ಅನೇಕ ವಿಧ ವಿಶೇಷ ಭಾಗಗಳು, ಈ ಭಾಗಗಳ ಪರಸ್ಪರ ಸಂಬಂಧ, ಅಷ್ಟಾವರಣಗಳ ಮರ್ಮ ಇವಾವೂ ಹೊರಪಟ್ಟಿಲ್ಲ. ಈ ಬಗ್ಗೆ ಮಹತ್ವದ ವಾಙ್ಮ

ಯುವಿದ್ದು ಅದು ಪ್ರಸಿದ್ಧವಾದಾಗಳೇ ವೀರಶೈವ ಧರ್ಮದ ವಿಶಿಷ್ಟತೆಯು ಹೊರಪಡುವದು. ಆದರೆ ವೀರಶೈವ ಸಮಾಜದವರು ಅಚ್ಚಾಗದೆ ಇರುವ ತಮ್ಮ ಗ್ರಂಥಗಳನ್ನು ತೀವ್ರವಾಗಿ ಪ್ರಕಟಿಸಿದಾಗಳೇ ಇದನ್ನು ತಿಳಿಯಲು ಶಕ್ಯವಿದೆ.

**ಅರ್ಜುನವಾಡದ ಶಿಲಾಶಾಸನ:—** ಬಸವೇಶ್ವರನ ಉಲ್ಲೇಖ ವಿದ್ದ ಯಾವ ಶಿಲಾಶಾಸನವೂ ಈ ವರೆಗೆ ಪ್ರಕಾಶಿತವಾಗಿರಲಿಲ್ಲ ಬಿಜ್ಜಳನ ಕಾಲದಲ್ಲಿಯ ಅನೇಕ ಶಿಲಾಶಾಸನಗಳು ದೊರೆತಿದ್ದರೂ ಅವುಗಳಲ್ಲಿ ಬಸವೇಶ್ವರನ ಉಲ್ಲೇಖವು ಕಂಡುಬರದೆ ಇದ್ದದ್ದು ಎಲ್ಲರಿಗೂ ಆಶ್ಚರ್ಯ ವೆನಿಸುವಂತಹ ಸಂಗತಿಯಾಗಿರುತ್ತದೆ. ಆದರೆ ಬೆಳಗಾವ ಜಿಲ್ಲಾ ಹುಕ್ಕೇರಿ ಸಮೀಪದಲ್ಲಿರುವ ಅರ್ಜುನವಾಡ ಎಂಬ ಗ್ರಾಮದಲ್ಲಿ ಒಂದು ಶಿಲಾಲೇ ಖವು ದೊರೆತಿದ್ದು ಅದರಲ್ಲಿ ಬಸವೇಶ್ವರನ ಉಲ್ಲೇಖವಿರುತ್ತದೆ. ಇದರ ಬಗ್ಗೆ ಒಂದು ಸವಿಸ್ತಾರವಾದ ಲೇಖವು ಶಿವಾನುಭವ ಪತ್ರಿಕೆಯಲ್ಲಿ ಈ ಮೊದಲಿಗೇ ಪ್ರಕಟವಾಗಿದೆ. ಇದು ವಾಚಕರ ಸ್ಮರಣೆಯಲ್ಲಿ ಇರಬ ಹುದು. ಆದರೆ ಇದನ್ನು ಈಗ ಮಿ॥ ಎಸ್. ಶ್ರೀಕಂಠಶಾಸ್ತ್ರಿ ಎಮ್. ಏ. ಮೈಸೂರು ಇವರು ಎಫಿಗ್ರಾಫಿಕಾ ಇಂಡಿಕಾ ಎಂಬ ಪತ್ರಿಕೆಯಲ್ಲಿ, ವಾಲ್ಯೂಮ ೨೧ ಸಂಚಿಕೆ ೨ ಇದರಲ್ಲಿ ಪ್ರಸಿದ್ಧಿಸಿರುವರು. ಇದಕ್ಕೋ ಸ್ಕರ ನಾವು ಅವರಿಗೆ ತುಂಬಾ ಆಭಾರಿಯಾಗಿದ್ದೇವೆ.

**ಶಿವಾನುಭವಕ್ಕೆ ಸಹಾಯ:—** ಶಿವಾನುಭವದ ಪತ್ರಿಕೆಯ ಉದ್ದೇ ಶಗಳಲ್ಲಿ ವೀರಶೈವ ಮತಗ್ರಂಥಗಳ ಪ್ರಕಟನೆ ಮತ್ತು ಸಂಶೋಧನಾತ್ಮ ಕವಾಗಿ ಬರೆದ ಲೇಖಗಳ ಪ್ರಕಾಶನ ಇವುಗಳೇ ಮುಖ್ಯವಾಗಿರುತ್ತವೆ. ಆದರೆ ಜನಸಾಮಾನ್ಯರಲ್ಲಿ ಈಬಗೆಯ ಪತ್ರಿಕೆಯನ್ನು ಗ್ರಹಣ ಮಾಡು ವವರು ಅಥವಾ ಓದುವವರು ಸ್ವಾಭಾವಿಕವಾಗಿ ಬಹಳ ಸ್ವಲ್ಪ ಜನರು. ಇಂಥ ಪತ್ರಿಕೆಗಳು ನಡೆಯಬೇಕಾದರೆ ಅಲ್ಲಲ್ಲಿಯ ಪ್ರಮುಖರು ಸಹಾ ನುಭೂತಿಯುಳ್ಳವರಾಗಿ ಸಹಾಯಮಾಡುವದು ಅವಶ್ಯವು. ಈ ಪ್ರಕಾರ ಮಿ॥ ಎಚ್. ಆರ್. ಮಹಾಂತಯ್ಯಾ ಬಿ. ಏ. ಮು. ಹೊನ್ನುಡಿಕೆ ಜಿ॥ ತುಮಕೂರು ಈ ಮಹನೀಯರು ಸಹಾಯ ಮಾಡಿದ್ದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ. ಇವರು ಸೋಮೇಕಟ್ಟೆ ಕರಿವೃ ಷಭೇಂದ್ರರು ರಚಿಸಿದ ಪದ್ಯಗಳನ್ನು ವಿಶೇಷ ಪರಿಶ್ರಮದಿಂದ ಸಂಗ್ರಹಿ ಸಿದ್ದು ಇವುಗಳು ಇದೇ ಸಂಚಿಕೆಯುಲ್ಲಿ ಪ್ರಸಿದ್ಧಿಸಲ್ಪಟ್ಟವೆ. ಅಲ್ಲದೆ ಅವರು

ತಮ್ಮ ದೃಷ್ಟಿಗೆ ಬಿದ್ದ ಪುರಾತನ ಗ್ರಂಥಗಳನ್ನು ಶೋಧಿಸಿ ಅವುಗಳ ಪಟ್ಟಿಯೊಂದನ್ನು ಸಿದ್ಧಪಡಿಸಿ ನಮ್ಮ ಕಡೆಗೆ ಕಳಿಸಿರುವರು. ಇದರಲ್ಲಿ ಅನೇಕ ಮಹತ್ವದ ಕಾವ್ಯಗಳೂ ಗದ್ಯಗ್ರಂಥಗಳೂ ಇದ್ದದ್ದು ಕಂಡುಬರುತ್ತದೆ. ಇಷ್ಟೇ ಅಲ್ಲ, ಅವರು ಶಿವಾನುಭವ ಪತ್ರಿಕೆಯ ಮಹತ್ವವನ್ನು ಜನರಿಗೆ ಬೋಧಿಸಿ ೧೦ ಜನ ವರ್ಗಣೀದಾರರನ್ನು ಗೊತ್ತುಪಡಿಸಿ ಅವರಿಂದ ವರ್ಗಣೀ ಹಣವನ್ನು ಸಹ ಕೂಡಿಸಿ ನಮ್ಮ ಕಡೆಗೆ ಹಣವನ್ನು ರೋಖಾಗಿ ಕಳಿಸಿಕೊಟ್ಟಿರುವರು. ಮತ್ತು ವರ್ಗಣೀದಾರರಾಗಬಹುದಾದ ಇನ್ನು ಬೇರೆ ೧೦ ಜನರ ಹೆಸರುಗಳನ್ನು ತಿಳಿಸಿರುವರು. ಹೀಗೆ ಇವರು ಸಕ್ರಿಯ ಸಹಾನುಭೂತಿಯನ್ನು ತೋರಿಸಿದ್ದಕ್ಕೆ ನಾವು ಅವರಿಗೆ ಅತ್ಯಂತ ಋಣಿಯಾಗಿದ್ದೇವೆ.

**ಸಮಾಜದಲ್ಲಿಯ ದೋಷಗಳು:—** ಮ॥ ಜೀರಗೆ ಬಸಲಿಂಗಪ್ಪನವರು ಈ ಬಗ್ಗೆ ಬರೆದ ಒಂದು ಲೇಖವು ಇದೇ ಸಂಚಿಕೆಯಲ್ಲಿ ಪ್ರಸಿದ್ಧವಾಗಿರುತ್ತದೆ. ಆಧಾರ ಗ್ರಂಥಗಳೆಂದು ತಿಳಿಯಲ್ಪಡುವ ಸರಕಾರೀ ವರದಿಗಳಲ್ಲಿ ತಪ್ಪು ವೃತ್ತಾಂತಗಳಿರುವದು ಸಮಾಜಕ್ಕೆ ಬಾಧಕವಾಗಿರುತ್ತದೆ. ಆದ್ದರಿಂದ ಇವುಗಳನ್ನು ಹೊರಪಡಿಸಿ ನಿಜಸ್ಥಿತಿಯನ್ನು ಅರುಹುವದು ಸಮಾಜದ ಕರ್ತವ್ಯವಾಗಿರುತ್ತದೆ. ಆದರೆ ಮ॥ ಬಸಲಿಂಗಪ್ಪನವರು ನಿರ್ದೇಶಿಸುವ ದೋಷಗಳು ಈಚೆಗೆ ಸಮಾಜದಲ್ಲಿ ಅಲ್ಲಲ್ಲಿ ಹೆಚ್ಚಾಗಿ ಕಂಡುಬರುತ್ತಲಿವೆ. ಇವುಗಳನ್ನು ದೂರ ಮಾಡಬೇಕಾದರೆ ಆಯಾ ಸಮಾಜಗಳನ್ನು ದೂರುವದಕ್ಕಿಂತ ವೀರಶೈವ ಮತತತ್ವಗಳನ್ನು ಹೊರಪಡಿಸುವದು ಯೋಗ್ಯ ಉಪಾಯವೆಂದು ನಮಗೆ ತೋರುತ್ತದೆ ಮತತತ್ವಗಳ ಪೂರ್ಣ ಪ್ರಕಾಶವು ಸಮಾಜದಲ್ಲಿ ಇನ್ನೂ ಬಹಿರಂಗಗೊಳಿಸಲ್ಪಟ್ಟಿಲ್ಲ. ಇವು ಚನ್ನಾಗಿ ಚರ್ಚಿಸಲ್ಪಟ್ಟು ಅವುಗಳ ತಿಳುವಳಿಕೆಯು ಸಮಾಜದಲ್ಲಿ ಇನ್ನೂ ಹಬ್ಬಿರುವದಿಲ್ಲ. ಆದ್ದರಿಂದಲೇ ಸಮಾಜದಲ್ಲಿ ಅನೇಕ ಅಕ್ರಮಗಳು ಉಂಟಾಗಲು ಕಾರಣವಾಗಿದೆ. ಸರಕಾರೀ ಅಧಿಕಾರಿಗಳಾದರೋ, ಅವರು ಇತರ ಮತಾನುಯಾಯಿಗಳಿರುವದರಿಂದ ಮತದ ನಿಜಸ್ಥಿತಿಯು ಅವರಿಗೆ ತಿಳಿಯದೆ ಇರುವದು ಆಶ್ಚರ್ಯವಲ್ಲ. ಅವರು ಆಯಾ ಸಂಗಡದವರು ಮತ್ತು ಮತದವರು ತಿಳಿಯಪಡಿಸಿದ ಸಂಗತಿಗಳನ್ನೇ ಯಥಾವತ್ತಾಗಿ ತಮ್ಮ ವರದಿಗಳಲ್ಲಿ ಪ್ರಸಿದ್ಧಿಸುವದು ಅವರ ಕರ್ತವ್ಯವಾಗಿದೆ. ಈ ಸ್ಥಿತಿಯಲ್ಲಿ ಸಮಾಜದವರೇ ಎಚ್ಚತ್ತು ತಮ್ಮ ಮತಗ್ರಂಥಗಳನ್ನು ಪ್ರಸಿದ್ಧಿಸಬೇಕು, ಅವು

ಗಳನ್ನು ಅಭ್ಯಾಸಿಸಿ ಅವುಗಳ ತತ್ವಗಳನ್ನು ಜನತೆಯು ನಿದರ್ಶನಕ್ಕೆ ತರಬೇಕು. ಇದೇ ಈ ದೋಷಗಳನ್ನು ನಿವಾರಣೆ ಮಾಡಲು ಉತ್ತಮ ಉಪಾಯವಾಗಿದೆ. ಆದರೆ ಆಯಾ ಸಮಾಜಗಳನ್ನು ಬರೇ ದೂರುತ್ತಲಿರುವದು ಫಲಪ್ರದವಾಗಲಾರದೆಂದು ನಮಗೆ ತೋರುತ್ತದೆ.



# ಕಾರಿಕಾಲಮ್ಮೆಯ ರಗಳೆ.

**ಕಂದ**— ಸಕಲ ಜನಂ ಕಾಣುತೆ।
ಕೌತುಕವೆನಸಲಾ ಕಾರಿಕಾಲೊಳಿಪ್ಪಮ್ಮೆಯುರಂ।
ಸುಕರವೆನೆ ಮೆರೆದನಾನಂ।
ದಕರಂ ಕರುಣಾಬ್ಧಿ ಹಂಪೆಯ ವಿರೂಪಾಕ್ಷಂ॥

## ರಗಳೆ.

ಧರೆಗೆಸೆವ ಚೋಳದೇಶದೊಳೊಂದು ಸುಖಕರಂ
ಕರವೊಪ್ಪುವುದು ಕಾರಿಕಾಲೆಂಬ ಶಿವಪುರಂ
ಅಲ್ಲಿರ್ಪಳೋರ್ವಳ್ಶಿವಜ್ಞಾನಸಂಪನ್ನೆ
ಸಲ್ಲಲಿತ ಸತ್ಯ ಭಕ್ತ್ಯಾಗಮ ಪ್ರತಿಪನ್ನೆ
ತನ್ನ ನಾಮಂ ಕಾರಿಕಾಲಮ್ಮೆ ಎಂಬುದದು
ಪನ್ನಗಾಭರಣಂಗತಿ ಪ್ರೇಮ ಹರ್ಷವದು
ತನಗೆ ಪತಿಯಾಗಿರ್ಪನಲ್ಲಿ ವಾಣಿಕಶೆಟ್ಟಿ
ಧನದಂಗೆ ಪುರುಡಿಪ ಸದರ್ಥತ್ವಮಂ ಮುಟ್ಟಿ
ಆತಂಗೆ ಸತಿಯಾಗಿ ಸಮ ಸುಖದೊಳೊಪ್ಪುತುಂ
ನೂತನ ಶಿವಭಕ್ತಿಯುಂ ಮನದೊಳಪ್ಪುತುಂ
ಗುಪ್ತಮಾಹೇಶ್ವರಿ ಪರಾಧೀನೆ ಪತಿಭಕ್ತೆ
ಆಪ್ತೆ ಶರ್ವಂಗೆ ಭಕ್ತ್ಯಾವಲೋಕನಯುಕ್ತೆ

ಇರ್ಪಳಾರುಂ ಭಕ್ತೆ ಎಂದರಿಯುರಾಕೆಯುಂ
ಸರ್ಪಭೂಷಣ ಚರಿತ ಭರಿತಾವಲೋಕೆಯುಂ
ಅತ್ತೆ ಮಾವಂ ಗಂಡರರಿಯುರಾ ಭಕ್ತಿಯುಂ
ಮತ್ತೆ ಮನೆಯೊಳಗುಳ್ಳರರಿಯುರಾ ಭಕ್ತಿಯುಂ
ಬೋನವಂ ಮಾಡುವೆಡೆ ದೇವಾರ್ಚನಾಸ್ಥಳಂ
ಏನೆಂಬೆನಲ್ಲಿ ಸಿಂಹಾಸನಂ ಕರತಳಂ
ನೆನೆವ ಘನ ಚಿಂತೆ ಸಕಲ ಸ್ತೋತ್ರನಭವಂಗೆ

ಗಳನ್ನು ಅಭ್ಯಾಸಿಸಿ ಅವುಗಳ ತತ್ವಗಳನ್ನು ಜನತೆಯು ನಿದರ್ಶನಕ್ಕೆ ತರ
ಬೇಕು. ಇದೇ ಈ ದೋಷಗಳನ್ನು ನಿವಾರಣೆ ಮಾಡಲು ಉತ್ತಮ ಉಪಾ
ಯವಾಗಿದೆ. ಆದರೆ ಆಯಾ ಸಮಾಜಗಳನ್ನು ಬರೇ ದೂರುತ್ತಲಿರು
ವದು ಫಲಪ್ರದವಾಗಲಾರದೆಂದು ನಮಗೆ ತೋರುತ್ತದೆ.

# ಕಾರಿಕಾಲಮ್ಮೆಯ ರಗಳೆ.

**ಕಂದ—** ಸಕಲ ಜನಂ ಕಾಣುತೆ ।
ಕೌತುಕಮೆನಲಾ ಕಾರಿಕಾಲೊಳಿಪ್ಪಮ್ಮೆಯಾರಂ ।
ಸುಕರಮೆನೆ ಮೆರೆದನಾನಂ ।
ದಕರಂ ಕರುಣಾಬ್ಧಿ ಹಂಪೆಯ ವಿರೂಪಾಕ್ಷಂ ॥

## ರಗಳೆ.

ಧರೆಗೆಸೆವ ಚೋಳದೇಶದೊಳೊಂದು ಸುಖಕರಂ
ಕರವೊಪ್ಪುವುದು ಕಾರಿಕಾಲೆಂಬ ಶಿವಪುರಂ
ಅಲ್ಲಿರ್ಪಳೋರ್ವಳ್ಶಿವಜ್ಞಾನಸಂಪನ್ನೆ
ಸಲ್ಲಲಿತ ಸತ್ಯ ಭಕ್ತ್ಯಾಗಮ ಪ್ರತಿಪನ್ನೆ
ತನ್ನ ನಾಮಂ ಕಾರಿಕಾಲಮ್ಮೆ ಎಂಬುದದು
ಪನ್ನಗಾಭರಣಂಗತಿ ಪ್ರೇಮ ಹರ್ಷವದು
ತನಗೆ ಪತಿಯಾಗಿರ್ಪನಲ್ಲಿ ಮಾಣಿಕಶೆಟ್ಟಿ
ಧನದಂಗೆ ಪುರುಡಿಪ ಸದರ್ಥತ್ವಮಂ ಮುಟ್ಟಿ
ಆತಂಗೆ ಸತಿಯಾಗಿ ಸಮ ಸುಖದೊಳೊಪ್ಪುತುಂ
ನೂತನ ಶಿವಭಕ್ತಿಯುಂ ಮನದೊಳಪ್ಪುತುಂ
ಗುಪ್ತಮಾಹೇಶ್ವರಿ ಪರಾಧೀನೆ ಪತಿಭಕ್ತೆ
ಆಪ್ತೆ ಶರ್ವಂಗೆ ಭಕ್ತ್ಯಾವಲೋಕನಯುಕ್ತೆ

ಇರ್ಪಳಾರುಂ ಭಕ್ತೆ ಎಂದರಿಯರಾಕೆಯಂ
ಸರ್ಪಭೂಷಣ ಚರಿತ ಭರಿತಾವಲೋಕೆಯುಂ
ಅತ್ತೆ ಮಾವಂ ಗಂಡರರಿಯರಾ ಭಕ್ತಿಯುಂ
ಮತ್ತೆ ಮನೆಯೊಳಗುಳ್ಳರರಿಯರಾ ಭಕ್ತಿಯಂ
ಬೋನವಂ ಮಾಡುವೆಡೆ ದೇವಾರ್ಚನಾಸ್ಥಳಂ
ಏನೆಂಬೆನಲ್ಲಿ ಸಿಂಹಾಸನಂ ಕರತಳಂ
ನೆನೆವ ಘನ ಚಿಂತೆ ಸಕಲ ಸ್ತೋತ್ರವಭವಂಗೆ

ಮನದ ನಿರ್ಮಳವಗ್ಗವಣಿ ಮಹಾದೇವಂಗೆ
ಕೆಯ್ಯ ಕೀರೆಯೆ ಪರಿಮಳದ ಪುಷ್ಪವಭವಂಗೆ
ಸುಯ್ಯ ಕಂಪೆ ಗುಗ್ಗುಳ ಧೂಪವಾ ಮಹಿಮಂಗೆ
ನೋಟವೇ ಬೆಳಗಿನಾರತಿ ಶಂಕರಂಗಲ್ಲಿ
ಊಟವಲ್ಲಿಯೆ ಸವೆದ ಬೋನದೋಗರವಲ್ಲಿ
ಇಂತಾರುವರಿಯದಂತಿರೆ ಶಿವನನರ್ಚಿಪಳು
ಇಂತು ಶಿವಭಕ್ತಿಯಂ ಮನದೊಳಗೆ ಪೆರ್ಚಿಪಳು
ಓವಿ ಸಾಧಿಸಿ ಬೆಳೆಯಿಸುವಳಲ್ಲಿ ಭಕ್ತಿಯಂ
ತೀವಿ ತುಳ್ಕಾಡಿ ಮುಚ್ಚುವಳಂಜಿ ಭಕ್ತಿಯಂ
ರುದ್ರಲೋಕವೆ ಪುಟ್ಟಿದೂರೆಂದು ಭಾವಿಪಳು
ರುದ್ರನೇ ತಂದೆಯುಂ ತಾಯೆಂದು ಭಾವಿಪಳು
ಕೈಲಾಸವೇ ತವರ್ಮನೆ ಯೆಂದು ಭಾವಿಪಳು
ಶೂಲಿಯಣುಗರ್ಸಹೋದರರೆಂದು ಭಾವಿಪಳು
ಆಸುರದ ಸಂಸಾರವುಂ ಗಿರಿಜೆಗರಿಪುವಳು
ಆಸರಂ ಬೇಸರಂ ಶಂಕರಂಗರಿಪುವಳು
ಮನದೊಳಗೆ ಮನ್ನಿಸುವಳರ್ಚಿಸುವಳಾಡುವಳ್
ಮನದೊಳಗೆ ನೋಡುವಳ್ ಮನದೊಳಗೆ ಪಾಡುವಳ್
ಮನದೊಳಗೆ ದೇವಂಗೆ ಬಿನ್ನಪಂ ಮಾಡುವಳ್
ಮನದೊಳಗೆ ಸಂಸಾರದಿರವಿಂಗೆ ಪೇಸುವಳ್
ಅನವರತ ಪರಮ ಶಿವಚಿನ್ಮೂರ್ತಿ ಚಿಂತಾಮೌನಿ
ಅನಸೂಯೆ ಭಕ್ತಿಯಭಿಮಾನಿ ಲಿಂಗಧ್ಯಾನಿ
ಮಾಡುವುದು ಕೆಲಸವದು ಪೂಜೆ ಸರ್ವೇಶಂಗೆ
ನೋಡುವುದು ಮನವಾರ್ತೆದರ್ಶನವದೀಶಂಗೆ
ತಾನರಿವಳಿಂದುಧರನರಿವನರಿವವರಿಲ್ಲ
ಏನೆಂಬಿನೀ ಪೂಜೆಯಂ ಶಂಭುವೇ ಬಲ್ಲ

ಇಂತು ಗುಪ್ತಾರಾಧನಾನಂದೆ ಇಪ್ಪುದಂ
ಕಂತುಹರನೆಂತು ಲೆಕ್ಕಿಸಲಾರನಿಂತಿದಂ
ಪ್ರಕಟಿಸುವೆನೆಂಬ ಭರದಿಂ ಚಂದ್ರಶೇಖರಂ
ಸಕಳ ಲೋಕಕ್ಕರುಪಲೆಂದು ಸರ್ವೇಶ್ವರಂ

ಸಾಧು ಭಕ್ತನ ವೇಷವುಂ ತಳೆದನೊಲ್ದಿತ್ತ
ವೇಧೆಯೊಳಗಿರ್ದನಾ ಕಾರಿಕಾಲೆಯೊಳತ್ತ

ಒಂದು ದಿನವಿರುತಲಲ್ಲಿ ಮಾಣಿಕಶೆಟ್ಟಿ
ಗೆಂದೆಂದು ಕಾಣ್ಕೆಯುಂ ತಂದಂ ಮನಂ ಮುಟ್ಟಿ
ಈಳೆಯಿಂದಂ ಕೆಲವು ಕಾಲದ ಫಲಂಗಳಂ
ಬಾಳ ಚೂತವು ಪೂತ ಕಲ್ಪಫಲತತಿಗಳಂ
ಅಮ್ಮೆಗೆ ರಜತಗಿರಿಯ ಪಯಣಮುಂ ತರ್ಪಂತೆ
ಅಮ್ಮೆಗಿದಿರಂ ದೃಷ್ಟಫಳಮುಮಂ ತೋರ್ಪಂತೆ
ತಂದು ಕಾಣ್ಕೆಯುನೀಯೆ ಕಂಡು ನೆರೆ ಕೊಂಡಾಡಿ
ತಂದವರ್ಗುಡಕೊಟ್ಟು ಕಳುಪಿ ಹಣ್ಣಂ ನೋಡಿ
ಹಾರೈಸಿ ಹೊಸ ಫಲವಿದೆಂದು ಹರುಷಂಬಟ್ಟು
ಕಾರಿಕಾಲಮ್ಮೆಯರ ಕೆಯ್ಯೊಳೊಲವಿಂ ಕೊಟ್ಟು
ಅತಿ ಸುರಕ್ಷಿತದಿಂದ ಬಯ್ತಿಡೆನುತುಂ ಪೇಳ್ದು
ಪತಿ ಹೋದನತ್ತ ವ್ಯವಹಾರವಮುಂ ತಾಳ್ದು

ಹೋಗೆ ಕಂಡಳು ಫಲಂಗಳನಪೂರ್ವಂಗಳಂ
ರಾಗದಿಂ ಕೊಂಡು ಬಂಪಳ್ನೂತನಂಗಳಂ
ಆಹಾ ಶಿವಂಗೆ ಶಿವಭಕ್ತರ್ಗೆ ಯೋಗ್ಯವಿವು
ಆಹಾ ಮಹಾದೇವ ಮರ್ತ್ಯರ್ಗಯೋಗ್ಯವಿವು
ಎಂದವಂ ಬೈತಿಟ್ಟು ಕೆಲಸದ ಶಿವಾರ್ಚನೆಗೆ
ಬಂದಳಾ ಗುಪ್ತ ಮಾಹೇಶ್ವರಿಯಡುವ ಮನೆಗೆ
ಎಂದಿನಂದದೆ ನಿತ್ಯ ನೇಮಂಗಳಂ ಮಾಡಿ
ತಂದು ಬೋನಕ್ಕೆ ಮೇಲೋಗರಮುಮಂ ಕೂಡಿ
ಆರೋಗಿಸಲ್ಕಿಕ್ಕಲನುವಾಗುತಿರಲಲ್ಲಿ

ಹಾರೈಸಿ ಶಂಕರಂ ರೂಪುದೋರಿದನಲ್ಲಿ
ಏಕಮುಖವೆಳೆಯು ಜಡೆ ಪುಲಿದೊವಲ್ವಿಸ್ತರಂ
ಲೋಕದೊಳ್ಸುಳಿವ ತಪಸಿಗಳಂತಿರಲ್ಕರಂ
ಇರ್ದಿರ್ದು ಈ ಎಡೆಗೆ ಬಂದ ಪರಿ ಎಂತಯ್ಯ

ಇರ್ದಿರ್ದುದೇಕೆ ಭವಿಗಳ ಮನೆಗೆ ಬಂದಯ್ಯ
ಏಕೆ ಬಂದ್ಯೆ ಮನೆಯವರ್ಕ್ಕರಂ ಪೊಲ್ಲೆನಲ್
ಏಕೆ ಬಂದ್ಯೆ ಭಕ್ತಿ ಇಲ್ಲಿಯುಂಟೇ ಎನಲ್
ಭಕ್ತೆ ಎನಲಮ್ಮನರಿದೊಡೆ ಕಂದಿದಪಳೆಂದು
ಯುಕ್ತಿಯಿಂ ಸುಮ್ಮನಿರಲಮ್ಮ ಯನುಚಿತವೆಂದು
ಭಕ್ತರೆಂದರಿಯೆವಾರೆಂದರಿಯೆವೆಲೆಯಮ್ಮ
ಭಕ್ತಿಗಟ್ಟೋಗರವನಿಕ್ಕು ಪೋದಪೆವಮ್ಮ
ಎನೆ ಗುಪ್ತತನದೊಳಿರಲಾರದುಕ್ಕಲ್ಭಕ್ತಿ
ಮನದೊಳಕ್ಕಾಡಿ ನಾಲಿಗೆಗೆ ಬರುತಿರೆ ಭಕ್ತಿ
ಮನದ ಗರ್ಭಿಣಿ ಜಿಹ್ವೆಯಿಂ ಬೆಸಲೆಯಪ್ಪಂತೆ
ತನುವಿಡಿದ ಭಕ್ತಿಯಿಂ ಕಾಣ್ಬತುಸುರುದಳಿಂತೆ
ಆರುವುಂ ಕಾಣ್ಬದಕೆ ಮುನ್ನವಾರೋಗಿಪುದು
ಆರುವರಿಯದ ತೆರದಿ ತ್ವರಿತದಿಂ ಕರುಣಿಪುದು
ದೇವ ಕಂಡೊಡೆ ಭಕ್ತಿಯಿಂತರುಪಿದಂತಕ್ಕು
ದೇವ ಬಳಿಕಾಂ ಬದುಕೆನರಿದೊಡಿರಿದಂತಕ್ಕು
ಎನುತಲ್ಲಿ ಯಾರೋಗಣೆಗೆ ಕೊಟ್ಟು ಬೇಗದಿಂ
ಘನ ಮಹಿಮ ಹದುಳನಾರೈಸೆಂದು ರಾಗದಿಂ
ಮನೆಯವರ್ಕಂಡೊಡಂ ಕೊಲುಗೆನ್ನನೆನುತಲ್ಲಿ
ತನಿವಣ್ಣನೆರಡರೊಳಗೊಂದನಿಕ್ಕಿದಳಲ್ಲಿ
ಇಕ್ಕೆ ನಲಿದಾರೋಗಿಸುತಿರ್ಪ ಸಮಯದೋಳ್

ದಿಕ್ಕನೇ ಮನೆಯ ಸೆಟ್ಟಿ ಬಂದನಾ ಪೊಳ್ತಿನೊಳ್
ಬರಲವಂ ನಸುಗಾಣದಂತೆಯೆ ಭವಂ ಪೋದ
ಉರವಣಿಸುತಾ ಸೆಟ್ಟಿ ಸಂದೇಹಿಸಲ್ಪೋದ
ಇತ್ತಲಾ ಸೆಟ್ಟಿಗೆಡೆಮಾಡಿದಳ್ ಶಿವಭಕ್ತೆ
ಚಿತ್ತದೊಳಗಂಜುತ್ತಲಂಜೆನೆನುತುಂ ಭಕ್ತೆ
ಎಡೆ ಮಾಡಿ ಯಗಲಕ್ಕೆ ಹೆರೆ ಸಾರ್ದು ನಿಂದಿರಲು
ಕಡು ಹಸಿದು ಶೆಟ್ಟಿ ಹಣ್ಣೆಲ್ಲಿ ತಾರೆಂದೆನಲು
ಇಕ್ಕಿದಳು ಪಣ್ಣೊಂದು ತಂದು ಎಡೆಯೊತ್ತಿಂಗೆ
ಮಿಕ್ಕ ಸಂದೇಹದಿಂ ಶಂಕಿಸುತೆ ಗಂಡಂಗೆ
ತಂದಿಕ್ಕಲಿನ್ನೊಂದು ಹಣ್ಣೆಲ್ಲಿ ತಾರೆನಲ್

ಬಂದಳ್ಪರಿಚ್ಛೇದಿಸಿದಳಲ್ಲಿ ಭೋಂಕೆನಲ್
ಕೆಯ್ಯೊಡನೆ ಹರಣಮುಂ ಬೆರಸಿ ಕೆಯ್ಯಿಕ್ಕಿದಳ್
ಕೆಯ್ಯ ಮೇಲೇ ತೋರ್ಪೆನೆನ್ನನೆನುತಿರಿಸಿದಳ್
ಇಂದುಧರನಲ್ಲಿಂದೆ ಮುನ್ನವಂಜುತ್ತೊಂದು
ತಂದಮೃತ ಫಲವನೊಲ್ದಿರಿಸೆ ನೇಹದೊಳಂದು
ಕಂಡಾಗಳಾ ಹಣ್ಣ ಬಸಿರೊಳಗೆ ಬಂದಂತೆ
ಕಂಡು ಪರಮನ ಪರಮ ಹರ್ಷದೊಳಗಿದ್ದಂತೆ
ಭಾವಿಸಲ್ತೆಗೆದಳಾನಂದಮುಂ ತೆಗೆವಂತೆ
ದೇವಲೋಕದ ಪರಸ್ಥಾನಮುಂ ತೆಗೆವಂತೆ
ತೆಗೆದು ತಂದಿಕ್ಕಿದಳ್ನಲಿದು ಪತಿಯುಗಲಲ್ಲಿ

ಬಗೆಯೊಳಂ ಕೌತುಕಂ ಬಟ್ಟು ನೋಡುತ್ತಲ್ಲಿ
ಸೆಟ್ಟಿ ಕೈಮುಟ್ಟಿ ಮೈರೋಮಾಂಚಮಾಗುತಿರೆ
ದಿಟ್ಟಿಸಲ್ಕಣ್ಗಳ್ಗೆ ಸವಿಗಳಂ ಸವಿಸುತಿರೆ
ಎಲ್ಲಿಯದು ಪೇಳೆನಗೆ ಕಾರಣಿಕೆ ಈ ಫಲಂ
ಎಲ್ಲಿಯದು ಪೇಳೆಲೆ ಮಹಾ ಪುರುಷೆ ಈ ಫಲಂ
ಎಂದು ನಡನಡುಗಿ ಯಾತಂ ಮುಟ್ಟಲಂಜುತ್ತೆ
ಇಂದುಮುಖಿ ಯರಿದನೆಂದಿತ್ತ ನಡನಡಗುತ್ತೆ
ಇರೆ ಸುಮ್ಮಸಿರದೆ ಪೇಳೆನಗಿದೆಲ್ಲಿಯ ಫಳಂ
ಹರಕರುಣವಲ್ಲದೀ ನೆಲದೊಳಿಲ್ಲೀ ಫಳಂ
ಎನೆ ಪೇಳಲುಂ ಪೇಳದಿರಬಾರದಿನ್ನೆಂದು
ಮನದೊಳಗೆ ಸಿಡಿಮಿಡಿಗೊಳುತ್ತಲುಸುರ್ದಳು ನಿಂದು
ಹರಭಕ್ತನೋರ್ವನಾನಂದದಿಂದಂ ಬರಲ್
ಹರುಷದಿಂದೊಂದು ಹಣ್ಣಂ ಕೊಟ್ಟೆನಿಂತಿರಲ್
ನೀವೀಗಳಾ ಹಣ್ಣನಾರ್ತದಿಂದ ಬೇಡೆ
ದೇವನಿರಿಸಿದನಮೃತಫಲವನೊಂದಂ ನೋಡೆ
ಆ ಹಣ್ಣಿದೆಂದು ಪೇಳ್ದೊಡೆ ಸೆಟ್ಟಿ ನಡುಗಿದಂ

ಆ ಹೊತ್ತೆ ಸತಿ ಯೆಂಬ ಭಾವ ಮುನ್ನುಡುಗಿದಂ
ಮುನ್ನವೇ ಸಂದೇಹಿಸುತ್ತಿರ್ದನೆಲೆ ತಾಯೆ
ಇನ್ನೆನ್ನ ಸತಿ ಯೆಂದು ನುಡಿಯೆಂ ಮಹಾಮಾಯೆ

ಇಂತು ಕರುಣಿಸಿ ಹರಂ ಪ್ರತ್ಯಕ್ಷವಪ್ಪನೇ
ಇಂತಪ್ಪ ಸತಿಯರುಂಟೇ ಶಿವಂ ಬರ್ಪನೇ
ತಾಯೆ ನೀವೇ ಕೊಳ್ವುದೀ ಹಣ್ಣಿದೆನಗರಿದು
ತಾಯೆ ನಿಮ್ಮಂ ಮರೆಯಿಸಿರ್ದ ಪರಿ ಧರೆಗರಿದು
ಇನಿತು ದಿವಸಂ ನಿಮ್ಮನಂತಿಂತು ನುಡಿದುದಕೆ
ಇನಿತು ಕಾಲಂ ಉದಾಸೀನವಂ ಮಾಡಿದಕೆ
ಕರುಣಿಪುದು ಕಾವುದೆನ್ನಂ ಕಾರಿಕಾಲಮ್ಮ
ಉರವಣಿಪ ಮಾಯೆಯಿಂ ತೆಗೆವುದೆನ್ನಮ್ಮಮ್ಮ
ಇನ್ನೆನಗೆ ನೀವೇ ಗುರುಸ್ಥಾನವೆಲೆ ತಾಯೆ
ಇನ್ನೆನ್ನ ಭವ ಬಂಧನವನುಡುಗಿಸೆಲೆ ತಾಯೆ
ಕರುಣಿಪುದುಪದೇಶವನು ಮಾಳ್ಪುದಿನ್ನೆನಗೆ
ಪರಮಾರ್ಥ ಮೂರ್ತಿ ಕಾರುಣ್ಯದಿಂ ನೀವೆನಗೆ
ಎಂದು ಕಣ್ಣಂ ಕೊಟ್ಟು ಮೆಯ್ಯಿಕ್ಕಿ ಪಟ್ಟಿರಲ್
ಮಂದಯಿಪ ಪರವಶದ ಬೆಮರಿಂದೆ ಬಿಳ್ದಿರಲ್

ಕಂಡು ಶಿವಭಕ್ತೆಯಭಿಮಾನಿ ನೆರೆ ಕಂದಿದಳ್
ಗಂಡನಿಂತರಿದನಿನ್ನೇನೆಂದು ಕೊರಗಿದಳ್
ದೇವಭಕ್ತಿಯನಿಂತು ಗಾರುಮಾಡಿದೆ ತಂದೆ
ದೇವ ಮೀಸಲ ಮೋಹಮಂ ಸೂಸಿದೈ ತಂದೆ
ಭಕ್ತಿ ಬೀಸರವಾಯಿತಿನ್ನೆಂತು ಸೈರಿಪೆಂ
ಭಕ್ತಿ ಹುರಿಹಂಚಾಯ್ತು ಇನ್ನೆಂತು ಜೀವಿಪೆಂ
ಕೆಲರರಿಯೆ ಭಕ್ತಿಯಂ ತೋರಿ ಬೀರಿದರುಂಟೆ
ಪಲರರಿಯೆ ಭಕ್ತಿಯಂ ಸಾರಿ ಮಾಡಿದರುಂಟೆ
ಎಂದಲ್ಲಿ ಬಾಡುತುಂ ಕೋಡುತುಂ ನಡೆ ನೋಡಿ

ಮುಂದಿರ್ದ ಸೆಟ್ಟಿಯರ್ಗುಪದೇಶಮಂ ಮಾಡಿ
ದೇವನಿತ್ತ ಪ್ರಸಾದದ ಫಳಮುಮಂ ಕೊಟ್ಟು
ದೇವ ಭಾಮಿನಿ ಮನದ ನಿಷ್ಠೆಗಂದೆಡೆಗೊಟ್ಟು
ಇರೆನಿನ್ನಿರೇ ಜಗಕ್ಕೆನ್ನುಮಂ ತೋರಿದಂ
ಹರಭಕ್ತೆ ಎಂದರುಹಿ ಹುರಿಹಂಚು ಮಾಡಿದಂ

ಇನ್ನಂಜಲೇಕೆಂದು ಭಸಿತವಮಂ ಪೂಸಿದಳ್
ಇನ್ನರಿಯವೇಳ್ಕೆಂದು ರುದ್ರಾಕ್ಷಿ ಯಿಕ್ಕಿದಳ್

ನಡೆವೆನಾನಿಲ್ಲಿರೆಂ ಕೈಲಾಸಪುರದತ್ತ
ವ್ಯಡನೆ ಶರಣೆಂದೆನುತೆ ಕಲಿಯೇರಿ ಮೀರುತ್ತ
ಪೊರಮಟ್ಟಳವ್ಮಮ್ಮ ಪುರಜನಂ ನೋಡುತಿರೆ
ಪೊರಮಟ್ಟಳಲ್ಲಲ್ಲಿ ಬಂಧುಜನ ಮರುಗುತಿರೆ
ಪುರದ ಪುಣ್ಯಪ್ರಜಂ ನೆರೆದು ಪೊರಮಡುವಂತೆ
ಪುರದ ಪರಮಾಯುಷ್ಯವಿರದೆ ಪೊರಮಡುವಂತೆ
ಬಿಸಿಲನರಿಯದ ರಮಣಿ ಬಿಸಿಲಿಂಗೆ ಮೆಯ್ಯಾಂತು
ಮಿಸುಕಲರಿಯದ ಮಾನಿಯಡಿಯ ಮೇಲಡಿಯಾಂತು
ಉತ್ತರ ದಿಶಾಭಿಮುಖಿಯಾದಳಾ ಶಿವಭಕ್ತೆ
ಚಿತ್ತದೊಳ್ ಪುರಹರನನಿರಿಸುತಂ ಶಿವಭಕ್ತೆ
ಬಂದಳ್ಪರಿಚ್ಛೇದದಿಂ ಕಾರಿಕಾಲಮ್ಮೆ
ಬಂದಳಾನಂದಭರದಿಂ ಕಾರಿಕಾಲಮ್ಮೆ
ಸಕಲ ಸುಖಮಂ ಬಿಸುಡುತುಂ ಕಾರಿಕಾಲಮ್ಮೆ
ಸಕಳಮಂ ಲೆಕ್ಕಿಸದ ಕಲಿ ಕಾರಿಕಾಲಮ್ಮೆ
ಬರೆ ನಿಂದುದಲ್ಲಿ ಬಾಂಧವ ಜನಂ ಪುರಜನಂ
ಬರೆವರಲ್ಬಂದುದಲ್ಲಲ್ಲಿರ್ದ ಪರಿಜನಂ
ಕಾಣಲ್ಕೆ ಬರುತಿರ್ದರೇನೆಂಬೆನಮ್ಮೆಯಂ
ಜಾಣರರಿವಾ ರೂಪ ಯೌವ್ವನದ ಪೇರ್ಮೆಯಂ

ಪಾಪವುಳ್ಳರ್ಗೆ ಸಿಂಗರದಂತೆ ತೋರುತುಂ
ಪಾಪವಿಲ್ಲದವರ್ಗೆ ತಾಯಂತೆ ತೋರುತುಂ
ಮಲ್ಲಿಕಾಲತೆಗೆ ಶಿವಭಕ್ತಿ ಯೊದವಿದ ತೆರದೆ
ಸಲ್ಲಲಿತ ಶಶಿಕಳೆಗೆ ನಿಷ್ಠೆಯೊದವಿದ ತೆರದೆ
ಭಕ್ತಿಲತೆ ನಡೆವಂತೆ ನಡೆಯುತಿರ್ದಳ್ನೋಡ
ಭಕ್ತಿವನಿತಾಗಮನದಂತೆ ನಡೆದಳ್ ನೋಡ
ಲಂಬಿಸುವ ಪಾವನತೆಯಂ ರೂಪುದೋರುತಿರೆ
ಇಂಬಿನಿಂ ನಡೆತಂದಳೊಡನೆ ಜನವೆಯ್ದುತಿರೆ

ಇಂತು ಕರುಣಿಸಿ ಹರಂ ಪ್ರತ್ಯಕ್ಷವಪ್ಪನೇ
ಇಂತಪ್ಪ ಸತಿಯರುಂಟೇ ಶಿವಂ ಬರ್ಪನೇ
ತಾಯೆ ನೀವೇ ಕೊಳ್ವುದೀ ಹಣ್ಣಿದೆನಗರಿದು
ತಾಯೆ ನಿಮ್ಮಂ ಮರೆಯಿಸಿರ್ದ ಪರಿ ಧರೆಗರಿದು
ಇನಿತು ದಿವಸಂ ನಿಮ್ಮನಂತಿಂತು ನುಡಿದುದಕೆ
ಇನಿತು ಕಾಲಂ ಉದಾಸೀನವಂ ಮಾಡಿದಕೆ
ಕರುಣಿಪುದು ಕಾವುದೆನ್ನಂ ಕಾರಿಕಾಲಮ್ಮ
ಉರವಣಿಪ ಮಾಯೆಯಿಂ ತೆಗೆವುದೆನ್ನಮ್ಮಮ್ಮ
ಇನ್ನೆನಗೆ ನೀವೇ ಗುರುಸ್ಥಾನವೆಲೆ ತಾಯೆ
ಇನ್ನೆನ್ನ ಭವ ಬಂಧನವನುಡುಗಿಸೆಲೆ ತಾಯೆ
ಕರುಣಿಪುದುಪದೇಶವನು ಮಾಳ್ಪುದಿನ್ನೆನಗೆ
ಪರಮಾರ್ಥ ಮೂರ್ತಿ ಕಾರುಣ್ಯದಿಂ ನೀವೆನಗೆ
ಎಂದು ಕಣ್ಣಂ ಕೊಟ್ಟು ಮೆಯ್ಯಿಕ್ಕಿ ಪಟ್ಟಿರಲ್
ಮಂದಯಿಪ ಪರವಶದ ಬೆಮರಿಂದೆ ಬಿಳ್ದಿರಲ್

ಕಂಡು ಶಿವಭಕ್ತೆಯಭಿಮಾನಿ ನೆರೆ ಕಂದಿದಳ್
ಗಂಡನಿಂತರಿದನಿನ್ನೇನೆಂದು ಕೊರಗಿದಳ್
ದೇವಭಕ್ತಿಯನಿಂತು ಗಾರುಮಾಡಿದೆ ತಂದೆ
ದೇವ ಮೀಸಲ ಮೋಹಮಂ ಸೂಸಿದೈ ತಂದೆ
ಭಕ್ತಿ ಬೀಸರವಾಯಿತಿನ್ನೆಂತು ಸೈರಿಪೆಂ
ಭಕ್ತಿ ಹುರಿಹಂಚಾಯ್ತು ಇನ್ನೆಂತು ಜೀವಿಪೆಂ
ಕೆಲರರಿಯೆ ಭಕ್ತಿಯಂ ತೋರಿ ಬೀರಿದರುಂಟೆ
ಪಲರರಿಯೆ ಭಕ್ತಿಯಂ ಸಾರಿ ಮಾಡಿದರುಂಟೆ
ಎಂದಲ್ಲಿ ಬಾಡುತುಂ ಕೋಡುತುಂ ನಡೆ ನೋಡಿ

ಮುಂದಿರ್ದ ಸೆಟ್ಟಿಯರ್ಗುಪದೇಶಮಂ ಮಾಡಿ
ದೇವನಿತ್ತ ಪ್ರಸಾದದ ಫಳಮುಮಂ ಕೊಟ್ಟು
ದೇವ ಭಾಮಿನಿ ಮನದ ನಿಷ್ಠೆಗಂದೆಡೆಗೊಟ್ಟು
ಇರೆನಿನ್ನಿರೇ ಜಗಕ್ಕೆನ್ನುಮಂ ತೋರಿದಂ
ಹರಭಕ್ತೆ ಎಂದರುಹಿ ಹುರಿಹಂಚು ಮಾಡಿದಂ

ಇನ್ನಂಜಲೇಕೆಂದು ಭಸಿತಮಂ ಪೂಸಿದಳ್
ಇನ್ನರಿಯವೇಳ್ಕೆಂದು ರುದ್ರಾಕ್ಷಿ ಯಿಕ್ಕಿದಳ್

ನಡೆವೆನಾನಿಲ್ಲಿರೆಂ ಕೈಲಾಸಪುರದತ್ತ
ಮೃಡನೆ ಶರಣೆಂದೆನುತೆ ಕಲಿಯೇರಿ ಮೀರುತ್ತ
ಪೊರಮಟ್ಟಳಮ್ಮಮ್ಮ ಪುರಜನಂ ನೋಡುತಿರೆ
ಪೊರಮಟ್ಟಳಲ್ಲಲ್ಲಿ ಬಂಧುಜನ ಮರುಗುತಿರೆ
ಪುರದ ಪುಣ್ಯಪ್ರಜಂ ನೆರೆದು ಪೊಗಮಡುವಂತೆ
ಪುರದ ಪರಮಾಯುಷ್ಯವಿರದೆ ಪೊರಮಡುವಂತೆ
ಬಿಸಿಲನರಿಯದ ರಮಣಿ ಬಿಸಿಲಿಂಗೆ ಮೈಯ್ಯಾಂತು
ಮಿಸುಕಲರಿಯದ ಮಾನಿಯಡಿಯ ಮೇಲಡಿಯಾಂತು
ಉತ್ತರ ದಿಶಾಭಿಮುಖಿಯಾದಳಾ ಶಿವಭಕ್ತೆ
ಚಿತ್ತದೊಳ್ ಪುರಹರನನಿರಿಸುತಂ ಶಿವಭಕ್ತೆ
ಬಂದಳ್ಪರಿಚ್ಛೇದದಿಂ ಕಾರಿಕಾಲಮ್ಮೆ
ಬಂದಳಾನಂದಭರದಿಂ ಕಾರಿಕಾಲಮ್ಮೆ
ಸಕಲ ಸುಖಮಂ ಬಿಸುಡುತುಂ ಕಾರಿಕಾಲಮ್ಮೆ
ಸಕಳಮಂ ಲೆಕ್ಕಿಸದ ಕಲಿ ಕಾರಿಕಾಲಮ್ಮೆ
ಬರೆ ನಿಂದುದಲ್ಲಿ ಬಾಂಧವ ಜನಂ ಪುರಜನಂ
ಬರೆವರಲ್ಪಂದುದಲ್ಲಲ್ಲಿರ್ದ ಪರಿಜನಂ
ಕಾಣಲ್ಕೆ ಬರುತಿರ್ದರೇನೆಂಬೆನಮ್ಮೆಯುಂ
ಜಾಣರರಿವಾ ರೂಪ ಯೌವ್ವನದ ಪೇರ್ಮೆಯುಂ

ಪಾಪವುಳ್ಳರ್ಗೆ ಸಿಂಗರದಂತೆ ತೋರುತುಂ
ಪಾಪವಿಲ್ಲದವರ್ಗೆ ತಾಯಂತೆ ತೋರುತುಂ
ಮಲ್ಲಿಕಾಲತೆಗೆ ಶಿವಭಕ್ತಿ ಯೊದವಿದ ತೆರದೆ
ಸಲ್ಲಲಿತ ಶಶಿಕಳೆಗೆ ನಿಷ್ಠೆಯೊದವಿದ ತೆರದೆ
ಭಕ್ತಿಲತೆ ನಡೆವಂತೆ ನಡೆಯುತಿರ್ದಳ್ನೋಡ
ಭಕ್ತಿವನಿತಾಗಮನದಂತೆ ನಡೆದಳ್ ನೋಡ
ಲಂಬಿಸುವ ಪಾವನತೆಯುಂ ರೂಪುದೋರುತಿರೆ
ಇಂಬಿನಿಂ ನಡೆತಂದಳೊಡನೆ ಜನವೆಯ್ದುತಿರೆ

ಎಳೆಯಶೋಕೆದಳಿರಸುಗುಳ್ವ ಪದತಳದೊಳಗೆ
ಬಳೆದು ಪ್ರದಕ್ಷಿಣಂ ನಳನಳಿಸಿ ತೊಳತೊಳಗೆ
ಕಾಮನೊಡ್ಡಣೆಗೆ ತೊಣೆ ಯೆನಿಪ ಕಿರಿದೊಡೆ ಕರಂ
ಸೋಮಧರನಲ್ಲಿಗೊಯ್ಯುವದಕೆ ನೆರೆವನೆ ಕರಂ
ಕದಳಿಯಂ ಪಳಿವುತಿರ್ಪೂರು ದಂಡಂ ನೋಡ
ಮದನವೈರಿಯ ನಮಸ್ಕಾರ ದಂಡಂ ನೋಡ
ಮದನ ಕೃತಕಾಚಲ ನಿತಂಬ ಬಿಂಬಂ ನೋಡ
ಒದವಿ ಪದ್ಮಾಸನದ ತಳವೃತ್ತವುಂ ನೋಡ
ಸರಸಿಯಂ ಪಳಿಕೆಯ್ವ ನಾಭಿಮಂಡಲವಲ್ಲಿ
ಹರಭಕ್ತಿ ಸಾರ ಮಡುವಿನ ತೆರದೊಳಿರಲಲ್ಲಿ
ಮುಗಿದ ಸರಸಿಜವನೇಳಿಸುವ ಕುಚ ಒಪ್ಪಿರಲ್
ಮಿಗೆ ಭಕ್ತಿ ರಸದ ಕಳಶದ ಮುಚ್ಚಳಂತಿರಲ್
ಪಂಚಶರಮಂ ಪಳಿವ ನುಣ್ಪೆರಲ ಚಿತ್ರರಂ
ಪಂಚಮುಖ ಪರಿಭಾವಕರ ತೆರವೊಳಿರೆ ಕರಂ
ಪದಕೊರಳ್ಕೇಳಿಸುವ ಕಂಬುವಿನ ತೆರದೊಳಿರೆ
ಕದಪು ಶರ್ವಂ ನೋಳ್ಪ ದರ್ಪಣದ ತೆರದೊಳಿರೆ
ಕಣ್ಣೆರಡು ಚೆಲ್ವಿಂಗೆ ಕಣ್ಮಾಡಿದಂತೆ ಇರೆ
ತಿಣ್ಣವೆನಿಸುವ ಭಕ್ತಿ ಕಣ್ದೆರೆದ ಪರಿಯೊಳಿರೆ
ಅಳಿಕುಲದ ಬಣ್ಣಮಂ ಬರಿಕೆಯ್ವ ಕುಂತಳಂ
ತಲೆಯೂರಿ ನಡೆವಲ್ಲಿಗಾದರದ ವರ್ತುಳಂ
ಇಂತು ಸೌದರ್ಯವಂ ಪಾವನತ್ವವನೀವ
ಸಂತತಂ ಶೃಂಗಾರ ರಸದ ಲಹರಿಯನೀವ

ಕಾರಿಕಾಲಮ್ಮೆಯರ ರೂಪಿಂಗೆ ಬಹು ಜನಂ
ಸಾರುತಂ ಬೆಂಬಿಡದೆ ಬರೆ ಕಷ್ಟತರ ಜನಂ
ಕಂಡಲ್ಲಿ ಕಾರಿಕಾಲಮ್ಮೆ ಮನದೊಳ್ನೊಂದು
ಬಂಡ ದಿಂಡೆಗೆ ಮರುಳ್ಗೊಂಡಿರಯ್ಯೋ ಎಂದು
ಅವಿಚಾರ ಮತಿಯರೇನೆಂದರಿಯರಕ್ಕಟಾ
ಸುವಿಚಾರವೆಳ್ಳನಿತಿಲ್ಲ ನಿಮಗಕ್ಕಟಾ
ಒಳಗು ಹೊರಗಾಗಿ ನೋಡಿರೆ ಎನ್ನ ದೇಹಮಂ

ಮುಳುಮುಳುಗೆದ್ದರೆ, ಛೀ ಛೀ ನಿನ್ನ ದೇಹದ ಮೇಲಣ ಮಣ್ಣು ಹೋಯಿತ್ತಲ್ಲದೆ, ನಿನ್ನ ಪಾಪವು ಹೋಗಲಿಲ್ಲವು. ಅಲ್ಲಿಂದ ಕಡೆಗೆ ಬಂದು ಕೆಟ್ಟ ಕತ್ತಿಯ ಕೊಂಡು ಕೆರವಿನಟ್ಟೆಯ ಮೇಲೆ ಮಸೆದು ಮಸ್ತಕವ ತೋಯಿಸಿ ತಲೆಯ ಬೋಳಿಸಿಕೊಂಡರೆ, ನಿನ್ನ ತಲೆಯ ತಿಂಡಿ ಹೋಯಿತ್ತಲ್ಲದೆ ನಿನ್ನ ಪಾಪವು ಬಿಡಲಿಲ್ಲವಯ್ಯ! ಅಲ್ಲಿಂದ ಕೋಲು ಬುಟ್ಟಿಯ ತೆಗೆದುಕೊಂಡು ಬರುವಂತಹ ದಿಂಡೆತೊತ್ತಿನ ಮಕ್ಕಳ ಕಣ್ಣಲಿ ಕಂಡು ಪಡಿಹಾರಿ ಉತ್ತಣ್ಣನ ಎಡದ ಪಾದ ಎಕ್ಕಡದಿಂದೆ ಪಟಪಟನೆ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.

**ಭಾವ**— ಹಿಂದಿನ ವಚನದ ಭಾವವನ್ನೇ ವಚನಕಾರನು ಪುನಃ ಇಲ್ಲಿ ಹೇಳಿರುವನು. ಇದರಲ್ಲಿ ಅವನು ಲಿಂಗ ಮತ್ತು ಭಕ್ತ ಇವರು ಪರಸ್ಪರ ಹ್ಯಾಗೆ ವರ್ತಿಸಬೇಕೆಂಬುದನ್ನು ಹೇಳಿರುವನು. ಅವರು ಸತಿಪತಿ ಭಾವದಿಂದಲೇ ವರ್ತಿಸಬೇಕು. ಆದ್ದರಿಂದ ಅವರ ಮನಸ್ಸು ಒಂದಾಗಿರಬೇಕು. ಹೀಗೆ ಇದ್ದರೆ ದೇವರ ಮುಂದೆ ಎಂದೆಂದಿಗೂ ನಂದದ ದೀಪವನ್ನು ಅವರು ಹಚ್ಚಿದ ಹಾಗೆ ಅವರ ಪ್ರಕಾಶವು ಜಗತ್ತಿನಲ್ಲೆಲ್ಲ ತುಂಬುವದು. ಆದರೆ ಅವರ ಮನಸ್ಸು ಒಂದಾಗಿರದಿದ್ದರೆ ಹ್ಯಾಗೆ ಹಂದಿಗಳು ಹೊಲಸಿನಲ್ಲಿ ಹೊರಳಾಡಿ ಪರಸ್ಪರ ಮೂಸಿ ನೋಡುತ್ತವೋ ಹಾಗೇಯೇ ಇವರ ಸ್ಥಿತಿಯು ಭಕ್ತನು ತನ್ನ ಇಷ್ಟಲಿಂಗದ ಮೇಲಿನ ಭಕ್ತಿಯನ್ನು ಬಿಟ್ಟು ಪರದೈವಗಳ ಮೇಲೆ ಮನಸ್ಸು ಇಡುವದೆಂದರೆ ಇಂಥ ಹಂದಿಗಳು ನಡೆದಂತೆಯೇ ಸರಿ. ಇದು ನಿಜವಾದ ಭಕ್ತಿಯಲ್ಲ. ಆದ್ದರಿಂದ ಕಾಶೀ, ರಾಮೇಶ್ವರ, ಮೈಲಾರ, ಶ್ರೀಶೈಲ, ಹಂಪೆ, ರಾಚೋಟಿ ಮೊದಲಾದ ತೀರ್ಥಗಳಿಗೆ ಭಕ್ತನು ಹೋಗಬಾರದು. ಅವನಿಗೆ ಪಂಚಾಕ್ಷರಿಯುಪದೇಶವಾದ ಬಳಿಕ ಅವನು ವಿಶ್ವಾಸವಿಡತಕ್ಕ ಕ್ಷೇತ್ರ ತೀರ್ಥಗಳು ಅವನಲ್ಲಿಯೇ ಇವೆ ಎಂದು ಅಂಬಿಗರ ಚೌಡಯ್ಯನು ಇಲ್ಲಿ ಹೇಳಿರುವನು.

**ವಚನಃ**— ೭೦. ಪರಧನ, ಪರಸತಿ, ಪರನಿಂದೆಗಳಿರೆ, ಮುಂದೆ ನರಕವು ಎಂದು ಗುರುವಾಕ್ಯ ಸಾರುತ್ತಿವೆ. ಪರಧನ, ಪರಸತಿ, ಪರಭೂಮಿಗಳುಪಿ ಹತವಾಗಿ ಹೋದ ದುರ್ಯೋಧನ. ಹರಿವ ನದಿಯ ಮಿಂದು ಗೋದಾನ ಮಾಡುವ ನರಕಿಗಳ ನುಡಿಯ ಕೇಳಲಾಗದು. ಹದಿನಾಲ್ಕು ಲೋಕಕ್ಕೆ ಕರ್ತು ಶಿವನೊಬ್ಬನೆ ಎಂದು ಶೃತಿಗಳು ಪೊಗಳುತ್ತಿಹವು.

ಅರತ ದೇವರ ಪೂಜೆಯ ಮಾಡಿ ಇಷ್ಟಲಿಂಗವ ಮರೆವ ಮೂಳ ಹೊಲೆಯರಿಗೆ ಮುಕ್ತಿ ಆಗದೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ:**— ಭಕ್ತನು ಪರಧನ, ಪರಸತಿ, ಪರನಿಂದೆ ಇವುಗಳಿಂದ ದೂರಿರತಕ್ಕದ್ದು. ಇಲ್ಲದಿದ್ದರೆ ದುರ್ಯೋಧನನಂತೆ ಅವನು ನಾಶವಾಗುವನು. ಹಾಗೆಯೇ ಹರಿಯುವ ನದಿಗಳ ಮೇಲೆ ಅವನು ವಿಶ್ವಾಸವಿಟ್ಟು ಸ್ನಾನಮಾಡಿ ಗೊದಾನ ಮಾಡುವದಾದರೂ ವ್ಯರ್ಥವು. ಇಂಥ ನದಿಗಳಲ್ಲಿ ಒಣಗಿಹೋಗುವ ನೀರು ಮಾತ್ರ ಇರುತ್ತದೆ. ಆದರೆ ಹದಿನಾಲ್ಕು ಲೋಕಕ್ಕೆ ಒಡೆಯನಾದ ಶಿವನೊಬ್ಬನೇ ಇದ್ದಾನೆಂದು ವೇದಗಳು ಹೇಳುತ್ತಿದ್ದು ಆತನ ಚಿನ್ಹವಾದ ಇಷ್ಟಲಿಂಗ ಒಂದನ್ನೇ ಭಕ್ತನು ನಂಬಬೇಕು.

**ವಚನ** ೭೧. ಬರಿದು ಬಯಸುವ ಸೂಕರರೆಲ್ಲ ನೀವು ಕೇಳಿರೋ. ತರ್ಕ ವ್ಯಾಕರಣ, ಛಂದಸ್ಸು, ನಿಘಂಟು, ವೇದ, ಶಾಸ್ತ್ರವ ಕೇಳಿಯೋದಿ ಗಂಗೆಗೆ ಹರಿವರನೇನೆಂಬೆ? ಪರವಧುವೆಂಬುವದನರಿಯರಲ್ಲಾ! ಬೆರೆದಿರ್ದ ಪಾಪವ ಹೊನಲಲ್ಲಿ ಕಳೆವೆನೆಂಬ ಅಣ್ಣಗಳ ಬೆಡಗು ಬೇಡೆಂದಾತನಂಬಿಗ ಚೌಡಯ್ಯ.

**ಭಾವ**— ಅಂಬಿಗರ ಚೌಡಯ್ಯನು ತಾನು ಹೇಳುವ ಈ ಮಾತುಗಳೆಲ್ಲ ನಿರಾಧಾರವಾದವುಗಳಲ್ಲ. ಅವುಗಳಿಗೆ ತರ್ಕ ವ್ಯಾಕರಣ, ಛಂದಸ್ಸು, ನಿಘಂಟು, ವೇದ, ಶಾಸ್ತ್ರಗಳಲ್ಲಿ ಆಧಾರಗಳಿವೆ. ಇವೆಲ್ಲವೂ ಪರಮಾತ್ಮನೊಬ್ಬನನ್ನೇ ನಂಬಬೇಕೆಂದು ಹೇಳುತ್ತಿವೆ ಎಂದು ಇಲ್ಲಿ ಹೇಳುತ್ತಾನೆ. ಆದ್ದರಿಂದ ಇವುಗಳ ಜ್ಞಾನ ಮಾಡಿಕೊಂಡಿದ್ದಾದರೂ ನದಿಯಲ್ಲಿ ಜಳಕ ಮಾಡಿ ಪಾಪವನ್ನು ದೂರಮಾಡಬೇಕೆನ್ನುವವರ ಬೆಡಗು ತನಗೆ ಬೇಡೆಂದು ಇಲ್ಲಿ ಅವನು ಅನ್ನುತ್ತಾನೆ.

**ವಚನ:**— ೭೨. ಸತ್ತಡೆ ಸಂಗಡ ಹೊಳಿಸಿಕೊಂಬ ಲಿಂಗವು, ತನ್ನ ಕೊರಳಲ್ಲಿ ಹತ್ತೆಯಾಗಿ ಕಟ್ಟಿರಲು, ನಾನು ಸತ್ಯ ಶುದ್ಧ ಭಕ್ತನೆಂದರಿಯದೆ, ಮತ್ತನ್ಯ ದೈವಕ್ಕೆರಗುವ ಕತ್ತೆ ಮೂಳರು ನೀವು ಕೇಳಿರೋ. ಗಂಡನ ಕೂಡ ಸಮಾಧಿಯ ಕೊಂಬ ಹೆಂಡತಿ ಅನಂತ. ಹೆಂಡರ ಕೂಡ ಸಮಾಧಿಯ ಕೊಂಬ ಗಂಡರುಂಟೇ ಲೋಕದೊಳು? ಛೀ ಛೀ ಹಂದೆ ಮೂಳ

ರಿರಾ, ಈ ದೃಷ್ಟವ ಕಂಡು ನಾಚಲಿಲ್ಲವೆ? ಭವಬಂಧನಂಗಳನಳಿಯಬೇ
ಕೆಂದು ಬಹು ದೈವಕ್ಕೆರಗಿದರೆ ಅವು ನಿಮ್ಮ ಸಂಗತ ಒಂದಾದರೂ ಹೊಳಿಸಿ
ಕೊಂಡವೇ? ನೀವು ಗಳಿಸಿದ ಅರ್ಥವನುಂಡುಂಡು ನಿಮ್ಮ ಭವದೊಳಗೆ
ನೂಂಕಿದ ಪಿಶಾಚಿಗಳ ನೋಡಿಕೊಂಡು ಪ್ರಮಾಣಿಸಿ ಮರಳಿ ಲಿಂಗಭಕ್ತಿಯ
ಮರೆದು ಬರಿದೆ ಶಿವಭಕ್ತರೆಂದು ಬೊಗಳುವ ಕುನ್ನಿಗಳು ಪರಿಭವಕ್ಕೆ ಒಳಗಾದ
ರೆಂದಾತ ನಮ್ಮ ಅಂಬಿಗರ ಚೌಡಯ್ಯ.

ಭಾವಃ— ಪರಮಾತ್ಮನು ತನ್ನ ಸಮೀಪದಲ್ಲಿಯೇ ಇದ್ದಾನೆ. ನೀವು
ಮರಣ ಹೊಂದುವ ವರೆಗೂ ಅವನು ನಿಮ್ಮಲ್ಲಿಯೇ ಇರುವನು. ಸತ್ತರೂ
ಕೂಡ ನಿಮ್ಮೊಡನೆ ಬರುವನು. ಇಂಥ ಮಹಾವಸ್ತುವು ನಿಮ್ಮಲ್ಲಿರಲು
ಬೇರೆ ಬಹು ದೈವಕ್ಕೆರಗಿದರೆ, ಈ ದೈವಗಳು ನಿಮಗೆ ಏನೂ ಸಹಾ
ಯಮಾಡಲಾರವು. ಇಷ್ಟೇ ಅಲ್ಲ, ಅವು ನಿಮ್ಮ ದ್ರವ್ಯವನ್ನು ಹರಣ
ಮಾಡಿ, ನಿಮ್ಮನ್ನು ಭವದಲ್ಲಿ ನೂಂಕಿ ಪರಿಭವಕ್ಕೆ ಗುರಿಮಾಡುವವೆಂದು
ಹೇಳುತ್ತಾನೆ.

---

# ಮನುಷ್ಯನ ವರ್ತನೆ.

**ವಿವರಣೆ:**— ವೀರಶೈವ ವಚನಕಾರರು ವ್ಯವಹಾರದಲ್ಲಿ ಮನುಷ್ಯನು ಹ್ಯಾಗೆ ಆಚರಿಸಬೇಕೆಂಬುದಕ್ಕೆ ಬಹಳ ಮಹತ್ವಕೊಡುತ್ತಾರೆ. ಆದ್ದರಿಂದ ಅವರು ಈ ವಿಷಯವನ್ನು ತಮ್ಮ ವಚನಗಳಲ್ಲಿ ವಿಶೇಷವಾಗಿ ವಿವರಿಸುವದುಂಟು. ಅವರು ಪ್ರಪಂಚವು ಅಥವಾ ಜಗತ್ತು ಮಿಥ್ಯವಾದುದೆಂದು ತಿಳಿಯುವದಿಲ್ಲ. ಇಲ್ಲಿ ನಡೆಯುತ್ತಲಿರುವ ಕಾರ್ಯಗಳೆಲ್ಲವೂ ಸತ್ಯವೆಂತಲೇ ಅವರು ನಂಬುತ್ತಾರೆ. ಆದ್ದರಿಂದ ಮನುಷ್ಯನು ತನ್ನ ಕಾರ್ಯಗಳನ್ನು ಹ್ಯಾಗೆ ನಿರ್ವಹಿಸಬೇಕೆಂಬದಕ್ಕೆ ಬಹಳ ಮಹತ್ವಕೊಡುತ್ತಾರೆ. ಮತ್ತು ಈ ವಿಷಯವನ್ನು ಕುರಿತು ಅವರು ಆಗಿಂದಾಗ್ಗೆ ವಿವೇಚಿಸುವದುಂಟು. ಕಾರ್ಯಗಳನ್ನು ಹೀಗೆ ಯೋಗ್ಯರೀತಿಯಿಂದ ಮಾಡುವದರಿಂದಲೇ ಆತ್ಮವಿಕಾಸಕ್ಕೆ ಕಾರಣವೆಂದು ಅವರು ಭಾವಿಸುತ್ತಾರೆ. ಆತ್ಮವಿಕಾಸವೆಂದರೆ ತಮ್ಮಲ್ಲಿ ಲಿಂಗದ ಗುಣಗಳನ್ನು ಬರಮಾಡಿಕೊಳ್ಳುವದೇ ಇರುತ್ತದೆ. ಲಿಂಗದ ಗುಣಗಳನ್ನು ಬರಮಾಡಿಕೊಳ್ಳುವದು, ವ್ಯವಹಾರವನ್ನು ಸರಿಯಾಗಿ ನಿರ್ವರ್ತಿಸುವದು, ಮತ್ತು ನೈತಿಕಾಚರಣೆ ಇವುಗಳಲ್ಲಿ ವಚನಕಾರರು ಭಿನ್ನತ್ವವನ್ನು ಎಣಿಸುವದಿಲ್ಲ. ಇವೆಲ್ಲವೂ ಒಂದೇ ಎಂದು ಅವರ ಅಭಿಪ್ರಾಯವು. ಪ್ರತಿಯೊಬ್ಬ ವಚನಕಾರನ ವಚನಗಳಲ್ಲಿ ಈ ಬಗೆಯ ವಿಚಾರಗಳು ತುಂಬಿಹೋಗಿರುತ್ತವೆ. ಆದರೆ ಅವುಗಳನ್ನು ವಿವರಿಸುವ ರೀತಿಗಳು ಮಾತ್ರ ಅವರವರ ಬಗೆಯ ಪ್ರಕಾರ ಭಿನ್ನ ಭಿನ್ನತೆರನಾಗಿರುತ್ತವೆ. ಅವರಲ್ಲಿ ಅಂಬಿಗರಚೌಡಯ್ಯನು ಈ ವಿಷಯವನ್ನು ಅತ್ಯಂತ ಸ್ಪಷ್ಟರೀತಿಯಿಂದ ಹೇಳುವದುಂಟು. ಅವನು ಬಹು ಗಂಭೀರವಾಗಿಯೂ, ಹಾಗೆಯೇ ಅತ್ಯಂತ ಸ್ಫುಟವಾಗಿಯೂ ಹೇಳುವ ಅವನ ತರವು ಅಪ್ರತಿಮವಾಗಿರುತ್ತದೆ.

## ಯಾವಾಗಲೂ ದೇವರನ್ನು ಧ್ಯಾನಿಸು

**ವಚನ**:— ೭೩. ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ, ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ, ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ, ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ, ಇಂತೀ ಹಲವು ಚಿಂತೆಯಲ್ಲಿ ಇಪ್ಪವರನು ಕಂಡೆನು. ಶಿವನ ಚಿಂತೆಯಲ್ಲಿದ್ದವರೊಬ್ಬರನು ಕಾಣೆನೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ**:— ಅಂಬಿಗರ ಚೌಡಯ್ಯನು ಮನುಷ್ಯನು ಯಾವಾಗಲೂ ಪರಮಾತ್ಮನ ಚಿಂತೆಯಲ್ಲಿರಬೇಕೆಂದು ಇದರಲ್ಲಿ ಹೇಳಿರುವನು. ಆದರೆ ಈ ಚಿಂತೆಯನ್ನು ಯಾರೂ ಮಾಡುವದಿಲ್ಲ. ಎಲ್ಲರೂ ತಮ್ಮ ಊಟ, ಹೊದೆಯುವ ವಸ್ತ್ರ, ಆಭರಣ, ಹೆಂಡಿರು, ಮಕ್ಕಳು, ದ್ರವ್ಯ, ಮೃತ್ಯು ಇಂಥವುಗಳ ಸಲುವಾಗಿ ಅನೇಕ ರೀತಿಯಿಂದ ಯಾವಾಗಲೂ ಚಿಂತೆ ಮಾಡುವದುಂಟು. ಆದರೆ ಈ ಚಿಂತೆಯನ್ನು ನಿವಾರಣೆ ಮಾಡಬಲ್ಲ ಪರಮಾತ್ಮನ ನೆನಪನ್ನು ಯಾರೂ ಮಾಡುವದಿಲ್ಲೆಂದು ಅವನ ಭಾವವು. ಮೇಲ್ಕಂಡ ಚಿಂತೆಗಳು ಹೊಸಹೊಸ ಚಿಂತೆಗಳನ್ನುಂಟುಮಾಡುವವು. ಅವುಗಳಿಗೆ ಮೇರೆ ಇಲ್ಲ. ಆದರೆ ಪರಮಾತ್ಮನ ಚಿಂತೆಯು ಈ ತರದ್ದಲ್ಲ. ಆದು ಹೊಸ ಚಿಂತೆಗಳನ್ನು ಹುಟ್ಟಿಸುವದಿಲ್ಲ. ಕಡೆಗೂ ಅದು ಸುಖವನ್ನು ಕೊಡುವದಾಗಿದೆ.

---

## ಆತ್ಮಸಂಯಮನ ಮಾಡು

**ವಚನ**:— ೭೪. ಕುಡಿವ ನೀರೆನ್ನಬಹುದೆ ನೀರಲದ್ದುವಾಗ? ಅಡುವ ಕಿಚ್ಚೆನ್ನಬಹುದೆ ಮನೆಯ ಸುಡುವಾಗ? ಒಡಲು ತನ್ನದೆನ್ನಬಹುದೆ ಪುಣ್ಯಪಾಪವನುಂಬಾಗ? ಜೀವ ತನ್ನದೆನ್ನಬಹುದೆ ಮಿಕ್ಕು ಹೋಗುವಾಗ? ಇವನೊಡೆಬಿಡದು ಕಳೆ ಎಂದಾತ ಅಂಬಿಗರ ಚೌಡಯ್ಯ

**ಭಾವ:—** ಜಗತ್ತಿನಲ್ಲಿ ನಮ್ಮ ಕಣ್ಣೆದುರಿಗೆ ಅನೇಕ ವಸ್ತುಗಳು ತೋರುತ್ತವೆ. ಆದರೆ ಅವುಗಳಿಂದ ಹಿತವಾಗುವದು ಅಥವಾ ಅಹಿತ ವಾಗುವದು ಅವುಗಳ ಉಪಯೋಗದ ಮೇಲೆ ಅವಲಂಬಿಸಿದೆ. ಆದ್ದರಿಂದ ಯಾವಾಗಲೂ ಅವುಗಳ ಸದುಪಯೋಗ ಮಾಡಬೇಕೆಂದು ವಚನಕಾರನ ಭಾವವು. ಉದಾಹರಣಾರ್ಥವಾಗಿ ನೀರು ಉಪಯುಕ್ತ ವಸ್ತುವು. ಆದರೆ ಅದರಲ್ಲಿ ಒಬ್ಬನು ಮುಳುಗಿ ಸಾಯಬಹುದು. ಬೆಂಕಿಯು ಉಪ ಯುಕ್ತ ವಸ್ತುವು. ಆದರೆ ಅದು ಮನೆಯನ್ನು ಸುಡಬಹುದು. ಹೀಗೆ ಈ ಉಪಯುಕ್ತ ವಸ್ತುಗಳ ದುರುಪಯೋಗವಾಗಬಹುದು. ಹಾಗೆಯೇ ಶರೀರವು ಹಿತಕರ ವಸ್ತುವು. ಆದರೆ ಪುಣ್ಯಪಾಪಗಳ ಮೂಲಕ ಅದು ನಾನಾ ತರದ ಯಾತನೆಗಳಿಗೊಳಗಾಗಿ ಮನಸ್ಸಿಗೆ ಕ್ಲೇಶವನ್ನುಂಟುಮಾಡುವದು. ಹಾಗೆಯೇ ಜೀವನ ಸ್ಥಿತಿಯೂ ಇದೆ. ಇದು ಸರಿಯಾಗಿ ವರ್ತಿಸಿದರೆ ಸುಖವು. ಮೀರಿ ನಡೆದರೆ ದುಃಖವು. ಅದು ಹೊಸ ಜನ್ಮಗಳನ್ನು ಪಡೆ ಯುವಂತೆ ಮಾಡುವದು. ಆದ್ದರಿಂದ ಇವುಗಳನ್ನು ಅಂಕಿತದಲ್ಲಿಟ್ಟುಕೊಂಡು ಸರಿಯಾಗಿ ನಡೆಯಬೇಕು. ಇದರಿಂದ ಮೋಕ್ಷವಾಗುವದೆಂದು ವಚನ ಕಾರನ ಅಭಿಪ್ರಾಯವು.

---

## ವೇಳೆಯನ್ನು ಸಾಧಿಸಿ ಕೆಲಸ ಮಾಡು.

**ವಚನ—** ೭೫. ಗಾಳಿ ಬಿಟ್ಟಲ್ಲಿ ತೂರಿಕೊಳ್ಳಿರಯ್ಯಾ! ಗಾಳಿ ನಿನ್ನ ಧೀನವಲ್ಲಯ್ಯಾ! ನಾಳೆ ತೂರಿಹೆನೆಂದಡೆ ಇಲ್ಲವಯ್ಯಾ! ಶಿವಶರಣ ಎಂಬು ದೊಂದು ಗಾಳಿ ಬಿಟ್ಟಲ್ಲಿ ಬೇಗ ತೂರೆಂದ ಅಂಬಿಗರ ಚೌಡಯ್ಯ.

**ಭಾವ—** ವೇಳೆಯು ಮನುಷ್ಯನ ಕೈಯ್ಯಲ್ಲಿಲ್ಲ. ವೇಳೆಯನ್ನು ಸಾಧಿಸಿ ಕಾರ್ಯಮಾಡಬೇಕು. ಗಾಳಿ ಬಿಟ್ಟಾಗ ತೂರಿಕೊಳ್ಳಬೇಕೆಂದು ನಾಣ್ಣುಡಿ ಇದೆ. ಹಾಗೆಯೇ "ಶಿವಶರಣು" ಎಂಬ ಭಾವವು ಮನಸ್ಸಿನಲ್ಲಿ ಉಂಟಾದ ಕಾಲಕ್ಕೆ ಸತ್ಕಾರ್ಯಗಳನ್ನು ಮಾಡಲೇಬೇಕು. ಈ ವೇಳೆಯು ತಪ್ಪಿಹೋದ ಬಳಿಕ ಸತ್ಕಾರ್ಯಗಳು ಜರಗಲಿಕ್ಕಿಲ್ಲೆಂದು ವಚನಕಾರನ ಭಾವವಿದ್ದ ಹಾಗೆ ತೋರುತ್ತದೆ.

---

## ಮಾಯೆಯನ್ನು ದೂರಮಾಡು.

**ವಚನ:**— ೭೬. ಅಡವಿಯ ಹೊಗಿಸಿತ್ತು; ನೀರಲದ್ದಿತ್ತು; ಜಡೆಗಟ್ಟಿ ಭಸ್ಮವ ತೊಡಿಸಿತ್ತು; ಹಿಡಿದೊತ್ತಿ-ಕೇಶವ ಕೀಳಿಸಿತ್ತು; ಹುಡಿ ಹುಚ್ಚು ಗೊಳಿಸಿತ್ತು ಊರೊಳಗೆಲ್ಲ. ಬೆಡಗಿನ ಮಾಯೆಗೆ ನಾಚುವೆನೆಂದನಂಬಿ ಗರಚೌಡಯ್ಯ.

**ಭಾವ:**— ಮನುಷ್ಯನು ಮಾಯಾವಶನಾಗಿದ್ದಾನೆ ಈ ಮಾಯೆಯು ಅವನ ಮನಸ್ಸನ್ನು ಚಂಚಲಮಾಡಿಬಿಡುತ್ತದೆ. ಅದು ಅವನನ್ನು ಲಿಂಗ ನಿಷ್ಠೆಯಲ್ಲಿ ಇರಿಸುವದಿಲ್ಲ. ಒಮ್ಮೆ ಅದು ಪರ್ವತಗಳಿಗೆ ಹೋಗುವಂತೆ ಮಾಡಿ ಏಕಾಂತವಾಸಕ್ಕೆ ಗುರಿಮಾಡುವದು. ಅಥವಾ ಕ್ಷೇತ್ರಯಾತ್ರೆಗಳಿಗೆ ಹೊರಡಿಸುವದು. ಮತ್ತೊಮ್ಮೆ ತಪಸ್ಸನ್ನು ಆಚರಿಸಲಿಕ್ಕೆ ಹಚ್ಚುವದು. ಇನ್ನೊಮ್ಮೆ ಜೈನಸನ್ಯಾಸಿಯನ್ನಾಗಿಮಾಡಿ ಕೇಶವನ್ನು ಕೀಳಿಸಿಕೊಳ್ಳು ವಂತೆ ಮಾಡುವದು. ಈ ಪ್ರಕಾರ ಅದು ಮನುಷ್ಯನನ್ನು ಹುಡಿಹೊ ಯ್ದುಕೊಳ್ಳುವ ತಿಳಿಗೇಡಿ ಹುಚ್ಚನಂತೆ ಮಾಡಿಬಿಡುತ್ತದೆ. ಹೀಗೆ ಮಾಡಿ ಸುವ ಇಂಥ ಮಾಯೆಯನ್ನು ಕಳೆಯಬೇಕೆಂದು ವಚನಕಾರನು ಇದರಲ್ಲಿ ಅನ್ನುತ್ತಾನೆ.

---

## ಭಕ್ತನ ಆಚರಣೆಗಳು.

**ವಚನ** ೭೭. ಹಿಂದಣ ಜನ್ಮದಲ್ಲಿ ಹಲವು ಸುಕೃತಂಗಳ ಮಾಡಿ ಬೇಡಿಕೊಂಡಿದ್ದರ ದೆಸೆಯಿಂದ ಬಂದು ಹುಟ್ಟಿದರಯ್ಯಾ ಶಿವಭಕ್ತರ ಬಸಿ ರಲ್ಲಿ. ಮುಂದೆ ಶಿವಭಕ್ತರ ಭಕ್ತಿ ದೊಡ್ಡಿತ್ತೆಂದು ನಂಬಲರಿಯದೆ ಭ್ರಮಿತ ರಾಗಿ ಘನ ಸುಖವ ನೀಗಿ ಭಕ್ತಿಯ ಪದಸೇವೆಯೊಳು ಇರಲೊಲ್ಲದೆ ಹಿಂ ದಿನ ಬಯಕೆಯ ಮರೆದು ಕಂಜ ಹಂದಿಯೊಳಾಡಿ ನರಕವ ತಿಂದಂದೆ, ಸಂಸಾರ ಹೃದಯದೊಳು ಬಂದು ಮುಂದುಗೆಟ್ಟು ಮುಳುಗಿ ಈಸಾಡುವ ಲೋಗರಂತೆ ಹೊನ್ನು ನನ್ನದೆಂದು ಹೆಣ್ಣು ನನ್ನದೆಂದು ಮಣ್ಣು ನನ್ನ ದೆಂದು ಭಿನ್ನ ಭಾವದೊಳು ಮನ ಸಂದು, ಹೆಂಡತಿಗಾಗಬೇಕು, ಮಕ್ಕಳಿ ಗಾಗಬೇಕೆಂಬ ಭಂಡ ಮುಕೊರೆಯ ಮೂಳರಿರಾ, ನೀವು ಶಿವಭಕ್ತರಾಗಿ

ಹುಟ್ಟಿದ್ದು ಫಲವೋ? ಹೋತಿಂಗೆಂಬಂತೆ ಲಿಂಗವ ಕಟ್ಟಿಕೊಂಬಿರಿ. ವರ್ತನೆಗೊಬ್ಬ ಗುರುವಾದವಂಗೆ ಹರಕೆಗೆ ನೀಡುವಿರಿ. ಚರಲಿಂಗಕ್ಕೆ ಬೋನವಿಲ್ಲೆಂಬಿರಿ ಅರಿಕೆಯಲ್ಲಿ ಆಚಾರವಿಲ್ಲ. ಕಿರುಕುಳ ದೈವದ ಬೆನ್ನ ಬಿಡದೆ ಹರಿಕೆಯ ಹರಣವೆಂದು ಹರಿಹರಿದು ಹೋಗಿ ಕೊಲ್ವ ನರಕಿಗಳ ಕೊಂಡೊಯ್ದು ಯಮನು ಇವರ ನಡುವಿಂಗೆ ಗಿರಿಕಿಯ ಕಟ್ಟಿ ಮೆಟ್ಟಿ ಮೆಟ್ಟಿ ಬಿಗಿವಾಗ ತಿಗದಲ್ಲಿ ಹಾಯ್ದು ಗೂದಿಯ ಕಂಡು ಜಗವರಿಕೆಯಲ್ಲಿ ನಗುತಿರ್ದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:—** ಈ ವಚನದಲ್ಲಿ ಭಕ್ತನು ಹ್ಯಾಗೆ ಆಚರಿಸಬೇಕೆಂಬದನ್ನು ವಚನಕಾರನು ಸಾಮಾನ್ಯವಾಗಿ ವಿವರಿಸಿದ್ದಾನೆ. ಮನುಷ್ಯನು ಹುಟ್ಟಿ ಹುಟ್ಟಿ ಬರಲಿಕ್ಕೆ ಆವನು ಮಾಡುವ ಕರ್ಮಗಳೇ ಕಾರಣವು. ಅವನು ಸತ್ಕರ್ಮಗಳನ್ನು ಮಾಡಿದರೆ ಉತ್ತಮ ಜನ್ಮದಲ್ಲಿ ಹುಟ್ಟುವನು. ದುಷ್ಕರ್ಮಗಳನ್ನು ಮಾಡಿದರೆ ಕೆಡಕು ಜನ್ಮದಲ್ಲಿ ಹುಟ್ಟುವನು. ಆದರೆ ಶ್ರೇಷ್ಠರಾದ ಶಿವಭಕ್ತರ ಜನ್ಮದಲ್ಲಿ ಹುಟ್ಟಬೇಕಾದರೆ ಹಿಂದಿನ ಜನ್ಮದಲ್ಲಿ ಆವನ ಸುಕೃತವನ್ನು ಮಾಡಿರಬೇಕು. ಇಂಥ ಜನ್ಮದಲ್ಲಿ ಹುಟ್ಟಿದ ಬಳಿಕ ದೇವರಲ್ಲಿ ಭಕ್ತಿಯನ್ನು ತಾಳದೆ ಭಕ್ತಿಯಿಂದೆ ಉತ್ಪನ್ನವಾಗುವ ಘನಸುಖವನ್ನು ಹೊಂದುವದನ್ನು ಬಿಟ್ಟುಕೊಟ್ಟು ಭಕ್ತಿಪದದ ಸೇವೆಯನ್ನು ಮಾಡದೆ ಕೀಳ ಜನರ ಸಂಗತಿಯನ್ನು ಹಿಡಿಯುವವನು ನರಕವನ್ನು ತಿಂಬುವ ಹಂದಿಯಂತೆಯೇ ಸರಿ. ಹೀಗೆ ವರ್ತಿಸುವ ಜನರು ಲೌಕಿಕರ ಹಾಗೆ ಹೊನ್ನು ಹೆಣ್ಣು, ಮಣ್ಣು ಇವುಗಳಲ್ಲಿ ಆಶೆಯನ್ನು ತಾಳಿ ಅವುಗಳ ಸದುಪಯೋಗವನ್ನು ಮಾಡುವದಿಲ್ಲ. ಇದು ಶಿವಭಕ್ತರಾಗಿ ಹುಟ್ಟಿದ್ದಕ್ಕೆ ಸಾರ್ಥಕವಾದುದಲ್ಲ. ಹೋತಿಗೆ ಗಡ್ಡವಿದ್ದಂತೆ ಲಿಂಗವನ್ನು ಮಾತ್ರ ಕಟ್ಟಿಕೊಂಡರು. ಆ ಲಿಂಗ ಅವರಿಗೆ ಪ್ರಯೋಜನಕರವಾದುದಲ್ಲ. ಅವರು ಗುರುವನ್ನು ವರ್ತನೆಗಾಗಿ ಮಾತ್ರ ಇಟ್ಟುಕೊಳ್ಳುತ್ತಾರೆ. ಅವನಿಗೆ ಏನಾದರೂ ಹರಿಕೆ ಹೊತ್ತು ಆ ಹರಿಕೆ ತೀರಿಸಲು ದಾನಮಾಡುವರು. ಆದರೆ ಯಾರಾದರೂ ಪುಣ್ಯಪುರುಷರು ಬಂದರೆ ಅವರಿಗೆ ಏನೂ ದಾನ ಧರ್ಮ ಮಾಡುವದಿಲ್ಲ. ಇಂಥವರಿಗೆ ತಿಳುವಳಿಕೆ ಇಲ್ಲ, ಆಚಾರವೆಂಬುದಿಲ್ಲ. ಹಾಗೆಯೇ ಕಿರುಕುಳ ದೈವಗಳಲ್ಲಿ ನಂಬಿಗೆ ಇಟ್ಟು ಅವುಗಳಿಗೆ ಬಲಿಕೊಟ್ಟು ಜೀವ ಹಿಂಸೆಮಾಡುವರು. ಇಂಥವರನ್ನು ಪರಮಾತ್ಮನು ನಿಶ್ಚಯವಾಗಿ ಶಿಕ್ಷಿಸುವನೆಂದು ಅಂಬಿಗರಚೌಡಯ್ಯನು ಬಹು ರೋಷದಿಂದ ಇವರನ್ನು ಬೈದಿರುವನು.

## ವ್ರತನಿಯಮಗಳನ್ನು ಬಿಡಬೇಡ.

**ವಚನ**:— ೭೮. ಮಕ್ಕಳು ಮರಿಗಳು ಸತ್ತು ನಷ್ಟವಾಗಿ ಕಷ್ಟ ದುಃಖ ನೆಲೆಗೊಂಡಿತ್ತೆಂದು ತನ್ನಿಷ್ಟಲಿಂಗಪೂಜೆಯನಗಲಿಸಿ ಬಿಟ್ಟಿಯ ಮಾಡಬಹುದೇನಯ್ಯ? ಜಂಗಮವು ಬಂದು ತನ್ನ ವ್ರತನೇಮಕ್ಕೆ ಬೇಡಿದರೆ ನಿಮ್ಮ ಉಪದ್ರವೇನೆಂದು ಭಕ್ತಿಯ ಮಾಡದಿರಬಹುದೇನಯ್ಯಾ? ಸಕಲ ದುಃಖವೆಲ್ಲ ತಮ್ಮಿಂದ ತಾವೇ ಬರಲರಿಯವು. ಭಕ್ತಿಯನ್ನು ಮರೆದು ಮರವೆಯಲ್ಲಿ ಬೆರೆದು ಭವಭವದಲ್ಲಿ ಬರುವುದು ಅದೇ ದುಃಖವು ನಿಶ್ಚಯವೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

ಭಾವಃ— ಮನುಷ್ಯನಿಗೆ ಜಗತ್ತಿನಲ್ಲಿ ಅನೇಕ ಕಷ್ಟನಷ್ಟಗಳೂ ನಾನಾ ಬಗೆಯ ದುಃಖಗಳೂ ಉತ್ಪನ್ನವಾಗುತ್ತವೆ. ಇಂಥ ಕಾಲದಲ್ಲಿ ಅವನು ನಿರಾಶೆಯುಳ್ಳವನಾಗಿ ಪರಮಾತ್ಮನ ಮೇಲೆ ಕೋಪಿಸಿಕೊಂಡು ತಾನು ಮಾಡತಕ್ಕ ಆಚರಣೆಗಳನ್ನು ಬಿಟ್ಟುಕೊಡುತ್ತಾನೆ. ಹೀಗೆ ಮಾಡಬಾರದೆಂದು ವಚನಕಾರನ ಅಭಿಪ್ರಾಯವು. ಆಗ ಅವನು ತಾನು ಮಾಡತಕ್ಕ ಇಷ್ಟಲಿಂಗಪೂಜೆಯನ್ನು ಮಾಡಲೇಬೇಕು. ಒಂದುವೇಳೆ ನಿನ್ನೆಡೆಗೆ ಶಿವಶರಣರು ಬಂದರೆ ಅವರನ್ನು ಭಕ್ತಿಯಿಂದ ಕಾಣಲೇಬೇಕು. ಯಾಕಂದರೆ ಐಹಿಕ ಕ್ಲೇಶಗಳು ತಮ್ಮಿಂದ ತಾವೇ ಬರುವದಿಲ್ಲ. ಅವು ತನ್ನ ಕರ್ಮವಶದಿಂದ ಬರುತ್ತವೆ. ಅವುಗಳಿಗೆ ತಾನೇ ಹೊಣೆಗಾರನು. ಈ ಪ್ರಕಾರ ವಚನಕಾರನು ಹೇಳಿ ಕಡೆಗೆ ಅನ್ನುವದೇನೆಂದರೆ, ಹೀಗೆ ಅನುಭವಿಸತಕ್ಕವುಗಳು ನಿಜವಾಗಿ ದುಃಖಗಳಲ್ಲ. ನಿಜವಾದ ದುಃಖವು ಮತ್ತು ಕ್ಲೇಶಪಡತಕ್ಕ ಸಂಗತಿಯು ಯಾವದೆಂದರೆ, ಭಕ್ತಿಯನ್ನು ಮರೆದು ಅಜ್ಞಾನದಲ್ಲಿ ಮುಳುಗಿ, ನಾನಾ ತೆರದ ದುಷ್ಟಕೃತ್ಯಗಳನ್ನು ಮಾಡಿ ಪ್ರಪಂಚದಲ್ಲಿ ತಿರುತಿರುಗಿ ಬರುವದೇ ನಿಜವಾದ ದುಃಖವು, ಇದನ್ನು ಕಳೆ ಎಂದು ವಚನಕಾರನು ಹೇಳಿದ್ದಾನೆ.

---

## ದುರ್ಗುಣಗಳನ್ನು ಬಿಡು

**ವಚನ:**— ೭೯. ವೃಡನ ನೊಲಿಸಿಹೆನೆಂದು ನುಡಿವ ನಾಲಿಗೆ ಎಡ ಹಿದಲ್ಲಿ, ಅದು ಕಲ್ಲು ಕೊರಡೆ? ಒಡಲಿಂಗೆ ಹೊನ್ನು ಹೆಣ್ಣು ಮಣ್ಣು ಅಡ್ಡ ಬಿದ್ದ ಕೊಲುವಾಗ ನಡೆವ ಗಂಡರುಂಟೆ? ತನ್ನೊಡಲೊಳಗಣ ಅನ್ನ ಮರಳಿ ದೊಡೆ ಹೇಸುವಂತೆ, ಹೇಸಿ ಬಿಟ್ಟಡೆ ನಡೆದು ಶಿವನ ಕೂಡುವನೆಂದಾತ ನಂಬಿಗ ಚೌಡಯ್ಯ

**ಭಾವ:**— ಮನುಷ್ಯನು ತನ್ನ ಪ್ರಪಂಚದಲ್ಲಿ ಹುಟ್ಟಿ ಹುಟ್ಟಿ ಬರ ಲಿಕ್ಕೆ ಅವನು ಮಾಡುವ ಕೃತ್ಯಗಳೇ ಕಾರಣವು. ಈ ಹುಟ್ಟನ್ನು ತೊಲ ಗಿಸಿ ಮೋಕ್ಷವನ್ನು ಹೊಂದಬೇಕಾದರೆ ವೃದು ನುಡಿಗಳನ್ನು ಯಾವಾ ಗಲೂ ನುಡಿಯಬೇಕು. ಧನಲೋಭ ದುರಾಚಾರಗಳನ್ನು ಬಿಡಬೇಕು. ಅನ್ನವನ್ನು ಉಂಡ ಬಳಿಕ ಕಾರಿಕೊಂಡಲ್ಲಿ ಈ ಕಾರಿಕೆಯು ಹ್ಯಾಗೆ ತ್ಯಾಜ್ಯವೂ ಅಸಹ್ಯವೂ ಎನಿಸುತ್ತದೋ ಹಾಗೆಯೇ ಮನುಷ್ಯನು ತನ್ನೊಳಗಿಂದ ಹೊರಗೆ ಬರುವ ದುರ್ಗುಣಗಳು ತ್ಯಾಜ್ಯವೆಂದು ತಿಳಿಯಬೇಕು. ಹೀಗೆ ವರ್ತಿಸಿ ಆಚರಿಸಿದರೆ ಅವನು ಮೋಕ್ಷವನ್ನು ಹೊಂದುವನು.

**ವಚನ:**— ೮೦. ನುಡಿವ ನುಡಿ ಶಬ್ದವೆ? ಕಾಯದ ಕಳವಳಕ್ಕೆ ಒಡಲಗೂಡುವರೆಲ್ಲ ಕೇಳಿರಯ್ಯ. ಸಂಧ್ಯಾ, ನೇಮ, ನಿತ್ಯ, ಜಪ, ತಪ, ಸಮಾಧಿಯೊನೆಂದಳಿಂದು ಬರವಂತೆ, ಬರವ ನುಡಿಯೊಳಗಿರ್ದು ನುಡಿದು ತಪ್ಪಿದೆನೆಂಬ ಈ ನುಡಿಗೆ ನಾಚುವೆನೆಂದ ನಂಬಿಗಚೌಡಯ್ಯ.

**ಭಾವ:**— ವಚನವು ಅಶುದ್ಧವಿರುವದರಿಂದ ಭಾವವು ಚನ್ನಾಗಿ ಆಗುವದಿಲ್ಲ.

ಮಾತಾಡಿದ ಬಳಿಕ ಅದು ಕೇವಲ ಶಬ್ದವಲ್ಲ. ನುಡಿದಂತೆ ನಡೆ ಯಬೇಕೆಂದು ಇವರ ಮುಖ್ಯಾರ್ಥವಿದ್ದಂತೆ ತೋರುತ್ತದೆ.

---

## ಚಂಚಲತೆಯನ್ನು ಬಿಡು.

**ವಚನ:**— ೮೧. ಭಕ್ತ ನಂಬಿದರೆ ಕೊಸ್ಪದ ರಾಮಯ್ಯನಂತೆ ನಂಬಬೇಕಯ್ಯಾ. ಭಕ್ತ ನಂಬಿದರೆ ಕೆಂಭಾವಿ ಭೋಗಣ್ಣನಂತೆ ನಂಬಬೇಕಯ್ಯಾ. ಭಕ್ತ ನಂಬಿದರೆ ಚೇದಿರಾಜನಂತೆ ನಂಬಬೇಕಯ್ಯಾ. ಭಕ್ತ ನಂಬಿದರೆ ಏಣಾದಿನಾಥನಂತೆ ನಂಬಬೇಕಯ್ಯಾ. ಇಂತಪ್ಪ ನಂಬಿಗೆಗೆ ತಾನು ಸರಿ ಎಂದು ಬೀದಿಯ ಪೋರನಂತೆ, ತನ್ನಯ ಮನದೊಳಗೊಂದು ಮಾತು ಹೊರಗೊಂದು ಮಾತು. ತುದಿನಾಲಿಗೆಯಲ್ಲಿ ಭಕ್ತರ ನಂಬಿದೆನೆಂದು ಗಳಹುವ ಗೊಡ್ಡ ಹೊಲೆಯನ ಕಂಡೊಡೆ, ಎದೆ ಎದೆಯನು ಒದ್ದೊದ್ದು ತುಳಿ ಎಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವ:**— ಅನೇಕರು ಶಿವಶರಣರ ಚರಿತ್ರೆಗಳನ್ನು ಕೇಳುವರು. ಆದರೆ ಹೀಗೆ ಕೇಳಿದ್ದನ್ನು ಆಚರಣೆಯಲ್ಲಿ ತರುವದಿಲ್ಲ. ಹೀಗೆ ಮಾಡಿದರೆ ಕೇಳಿದ್ದು ಏನು ಪ್ರಯೋಜನ? ಹಿಂದಿನವರು ಭಕ್ತಿಯನ್ನು ಮಾಡುವಲ್ಲಿ ಅನೇಕ ಕಷ್ಟಗಳನ್ನು ಸಹಿಸಬೇಕಾಯಿತು. ನಾನಾ ಬಗೆಯ ಜನಾಪವಾದಗಳನ್ನು ಹೊರಬೇಕಾಯಿತು. ಈ ಬಗೆಯ ಅವಹೇಲನೆ, ನಿಂದೆ, ಕಷ್ಟನಷ್ಟಗಳನ್ನು ಸಹಿಸಲು ಮನುಷ್ಯನು ಸಿದ್ಧನಾಗಿರಬೇಕು. ಹೀಗೆ ಸಿದ್ಧನಾಗದೆ ಸಣ್ಣ ಹುಡುಗನಂತೆ ಚಂಚಲ ಮನಸ್ಸಿನವನಾಗಿ ಒಳಗೊಂದು ಹೊರಗೊಂದು ಮಾಡುತ್ತ ಹೋದರೆ ಅಂಥವನನ್ನು ಚನ್ನಾಗಿ ಶಿಕ್ಷಿಸಬೇಕೆಂದು ವಚನಕಾರನು ನುಡಿದಿರುವನು.

**ವಚನ:**— ೮೨. ನಿಂಬೆಣ್ಣ ಮಾಡುವ ಭಕ್ತಿ ನಾಡೆಲ್ಲ ಮಾಡಬಹುದಯ್ಯಾ, ಕುಂಬಾರ ಗುಂಡಯ್ಯ ಮಾಡುವ ಭಕ್ತಿ ಊರೆಲ್ಲ ಮಾಡಬಹುದಯ್ಯಾ, ಬಸವಣ್ಣ ಮಾಡುವ ಭಕ್ತಿ ಶಿಶುವೆಲ್ಲ ಮಾಡಬಹುದಯ್ಯಾ, ಇದೇನು ದೊಡ್ಡಿತ್ತೆಂಬರು. ಸರ್ವರಿಗೆ ವಶವಾಗದ ಭಕ್ತಿ ಅವರ ಮನಜ್ಞಾನದಂತೆ ಇರಲಿ. ಶರಣಾರ್ಥಿ. ಈ ವಸುಧೆಯೊಳಗೆ ಶುದ್ಧ ಭಕ್ತಿಯನರಿತು ನಡೆದುದು ಸಿದ್ಧಿಯಾಗದೆ? ನುಡಿದುದು ಬಟ್ಟೆಯಾಗದೆ? ದೇಹಕ್ಕೆ ಕಷ್ಟ, ನಷ್ಟ ರೋಗರುಜಂಗಳು ಬಂದು, ಅಟ್ಟಿ ಮುಟ್ಟಿದವಾಗಿ ದೃಢವಾಗಿದ್ದು ಶರಣನ ಮನವು ನಿಶ್ಚಯಿಸಿ, ದೃಢಶೀಲಂಗಳಂ ಬಿಡದೆ ನಡೆವಾತ ದೊಡ್ಡ ಭಕ್ತನೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಭಾವಃ— ಈ ವಚನದಲ್ಲಿ ಭಕ್ತನು ಹ್ಯಾಗೆ ದೃಢ ಮನಸ್ಸಿನಿಂದ ನಡೆಯುಬೇಕೆಂಬುದನ್ನು ಹೇಳಿರುವನು. ಅನೇಕರು ಹಿಂದಿನವರು ಮಾಡಿದ ಭಕ್ತಿಯನ್ನು ಕೇಳಿ ಅದೇನು ದೊಡ್ಡದೆಂದು ಹೀಯಾಳಿಸುವರು. ಇಂಥ ವರಿಗೆ ಶರಣಾರ್ಥಿ ಎಂದು ವಚನಕಾರನು ಚೇಷ್ಟೆಮಾಡಿ, ಅವರ ಭಕ್ತಿಯು ಅವರ ಜ್ಞಾನ ಮತ್ತು ಮನಸ್ಸಿನಂತೆ ಇರಲಿ, ಅವರ ಗೊಡವೆ ನಮಗೆ ಬೇಡ ಎಂದು ನುಡಿದಿರುವನು. ಆದರೆ ಜಗತ್ತಿನಲ್ಲಿ ಶುದ್ಧ ಭಕ್ತಿಯಾವುದೆಂಬುದನ್ನು ತಿಳಿದು ಹಾಗೆ ಆಚರಿಸಿದಲ್ಲಿ ಅವನಿಗೆ ಇಷ್ಟ ಕಾರ್ಯಗಳು ಸಿದ್ಧಿಯಾಗದೆ ಇರವು. ಇಷ್ಟೇ ಅಲ್ಲ, ಅವನು ನುಡಿದುದೇ ದಾರಿಯಾಗುವದು. ಒಂದುವೇಳೆ ಅವನ ದೇಹಕ್ಕೆ ಕಷ್ಟನಷ್ಟ ರೋಗ ರುಜೆಗಳು ಪ್ರಾಪ್ತವಾಗಿ ಅತ್ಯಂತ ಕ್ಲೇಶಪಟ್ಟರೂ ಅವನ ಮನಸ್ಸು ದೃಢ ವಾಗಿರಬೇಕು. ತನ್ನ ನಿಶ್ಚಯ ಭಾವವನ್ನು ಬಿಡಬಾರದು. ತನ್ನ ಶೀಲ ದಂತೆಯೇ ನಡೆಯುಬೇಕು. ಹೀಗೆ ಇದ್ದಲ್ಲಿ ಅವನೇ ದೊಡ್ಡ ಭಕ್ತನು.

---

## ದೃಢಮನಸ್ಸಿನಿಂದ ನಿರಂತರ ಶ್ರಮಮಾಡು.

**ವಚನಃ—** ೮೩. ವೀರಂಗೆ ರಣಾಗ್ರ ಕದನ ಘೋರೆಂದು ತಟ್ಟಿ ದಲ್ಲಿ, ದೂರಲಿಂದೆಸೆವ ಒಂದಂಬಿನಲ್ಲಿ, ಸೇರಿಬಂದಲ್ಲಿ ಹೊಯ್ವ ಬಿಲ್ಲಿ ನಲ್ಲಿ, ಅವು ಮೀರಿಬಂದಲ್ಲಿ, ಇರಿವ ಕಠಾರಿಯಲ್ಲಿ, ಅದು ತಪ್ಪಿದ್ದಕ್ಕೆ ತೆಕ್ಕೆಯಲ್ಲಿ ಪಿಡಿವ ಯುದ್ಧದಲ್ಲಿ, ಬಿದ್ದಲ್ಲಿ ಕಡಿವ ಬಾಯಲ್ಲಿ, ಇಂತಿವು ತನ್ನ ಪ್ರಾಣಕ್ಕೆ ಬಂದಲ್ಲಿ ತನ್ನ ಧೈರ್ಯವ ಮರೆಯಲಿಲ್ಲ. ಹೀಗಿರಲಿ ಲ್ಲವೇ ಭಕ್ತನ ಗುಣ? ಹೊನ್ನು, ಹೆಣ್ಣು, ಮಣ್ಣಿಳ್ಳ ಕಾಲಕ್ಕೆ ಪನ್ನಗ ಧರನ ಶರಣರಿಗೆ ಅನ್ನೋದಕ ವಸ್ತ್ರಗಳ ಉಪಚಾರವ ಮಾಡುವುದು. ಅದು ತಪ್ಪಿದ್ದಕ್ಕೆ ನೀಡಿ ಮಾಡುವ ಭಕ್ತರ ಮನೆಯನೊಡಗೊಂಡು ಹೋಗಿ ತೋರುವುದು. ಅದಾಗದಿದ್ದೊಡೆ ಹರಶರಣರ ಕಮಂಡಲವ ಕೊಂಡು ಹೋಗಿ ಮಡುವಿನ ಅಗ್ಗಣಿಯ ತಂದು ಪಾದಾರ್ಚನೆಯ ಮಾಡುವುದು. ಅದಾಗದಿದ್ದೊಡೆ ಹರಶರಣರಿಗೆ ಇದಿರೆದ್ದು ಹೋಗಿ ನಮ

ಸ್ಕರಿಸುವುದು. ಇಷ್ಟರೊಳಗೊಂದು ಗುಣವಿಲ್ಲದಿರ್ದೊಡೆ ಅವ ಭಕ್ತನಲ್ಲ. ಅವ ಹೊಲೆಯನೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಭಾವ:— ಭಕ್ತನು ಹ್ಯಾಗೆ ಇರಬೇಕೆಂಬುದನ್ನು ವಚನಕಾರನು ಇಲ್ಲಿ ಒಂದು ಉದಾಹರಣೆಯನ್ನು ಕೊಟ್ಟು ಇಲ್ಲಿ ಅತಿ ಸ್ಪಷ್ಟ ರೀತಿಯಿಂದ ವಿವರಿಸಿರುವನು. ಅವನು ಒಬ್ಬ ಶೂರ ಪುರುಷನಂತೆ ಇರಬೇಕೆಂದು ಹೇಳಿರುವನು. ಈ ಶೂರ ಪುರುಷನು ರಣಾಂಗಣದಲ್ಲಿ ವೈರಿಗಳು ಇದಿರಾದರೆ ಅವರು ದೂರದಲ್ಲಿರುವ ವರೆಗೆ ಬಾಣವನ್ನು ಎಸೆಯುವನು. ಅವರು ಸಮೀಪಕ್ಕೆ ಬಂದರೆ ಬಿಲ್ಲಿನಿಂದ ಅವರನ್ನು ಹೊಡೆಯುವನು. ಅದಕ್ಕೂ ಮೀರಿದರೆ, ಕಠಾರಿಯಿಂದ ತಿವಿಯುವನು. ಇದಕ್ಕೂ ಮೀರಿದಲ್ಲಿ ತೆಕ್ಕೆಯಲ್ಲಿ ಹಿಡಿದು ಅವರ ಕೂಡ ಹೋರಾಡುವನು. ನೆಲಕ್ಕೆ ಬಿದ್ದಲ್ಲಿ ಹಲ್ಲಿನಿಂದ ಕಡಿಯುವನು. ಈ ಪ್ರಕಾರ ಅವನು ಧೈರ್ಯಬಿಡದೆ, ತಾನು ಸಾಯುವ ವರೆಗೂ ಕಾದಾಡುವನು. ಭಕ್ತನಾದವನು ಹೀಗೆಯೇ ವರ್ತಿಸಬೇಕು. ಇದಕ್ಕೆ ಮತ್ತೊಂದು ಉದಾಹರಣೆಯನ್ನು ಕೊಟ್ಟು ವಿವರಿಸಿರುವನು. ಭಕ್ತನು ತನಗೆ ಶ್ರೀಮಂತಿಕೆಯು ಇರುವ ವರೆಗೆ ದಾನ ಧರ್ಮ ಮಾಡಬೇಕು. ಶ್ರೀಮಂತಿಕೆಯು ತಪ್ಪಿ ಹೋದರೆ, ನೀಡಿ ಮಾಡುವ ಭಕ್ತರ ಮನೆಯನ್ನು ತೋರಿಸಬೇಕು. ಇದೂ ಆಗದಿದ್ದರೆ ಶಿವಶರಣರ ಕಮಂಡಲವನ್ನು ತೆಗೆದುಕೊಂಡು ಹೋಗಿ ಅವರ ಪಾದಾರ್ಚನೆಗೆ ನೀರು ತಂದು ಕೊಡಬೇಕು. ಇದೂ ಆಗದಿದ್ದರೆ ಅವರಿಗೆ ಎದ್ದು ನಮಸ್ಕರಿಸಬೇಕು. ಇಂಥ ಗುಣವು ಭಕ್ತನಲ್ಲಿ ಇರಬೇಕು. ಈ ಗುಣವಿಲ್ಲದಿದ್ದರೆ ಅವನು ಹೊಲೆಯನೆಂದು ವಚನಕಾರನು ಅಂದಿರುವನು.

---

## ನೇಮ ಶೀಲ ಹರಿಕೆಗಳನ್ನು ಹೊರಬೇಡ.

**ವಚನಃ**— ೮೪. ನೇಮಸ್ಥನೆಂಬುವ ಕ್ರೂರ ಕರ್ಮಿ. ಶೀಲವಂತನೆಂಬುವ ಸಂದೇಹಿ. ಭಾಷೆವಂತನೆಂಬುವ ಬ್ರಹ್ಮೇತಿಕಾರ. ಇವರು ಮೂವರು ಕುಳ್ಳಿರ್ದಲ್ಲಿ ಕುಳ್ಳಿರಲಾಗದು. ಇವರು ಹೋದ ಬಟ್ಟೆಯು ಹೋಗಲಾಗದು. ಇವರು ಮೂವರಿಗು ಗುರುವಿಲ್ಲ, ಲಿಂಗವಿಲ್ಲೆಂದಾತ ನಂಬಿಗ ಚೌಡಯ್ಯ.

**ಭಾವಃ**— ಅನೇಕರು ಅನೇಕ ಬಗೆಯ ನೇಮಗಳನ್ನೂ ಶೀಲಗಳನ್ನೂ ಹರಿಕೆಗಳನ್ನೂ ಹೊತ್ತುಕೊಂಡು ಕಷ್ಟಪಡುವರು. ಆದರೆ ಇವೆಲ್ಲವೂ ಷಟ್‌ಸ್ಥಲ ಮಾರ್ಗಕ್ಕೆ ಹೊರತು. ಇವುಗಳನ್ನು ಮಾಡಬಾರದೆಂದು ವಚನಕಾರನು ಅಂದಿರುವನು. ಈ ವಚನದಲ್ಲಿ ಅಂಬಿಗರ ಚೌಡಯ್ಯನು ಅನ್ನುವದೇನಂದರೆ ಹೀಗೆ ನೇಮ ಮಾಡುವವರು ಕ್ರೂರಕರ್ಮಿಗಳು, ಶೀಲ ಮಾಡುವವರು ಸಂದೇಹಿಗಳು, ಹರಿಕೆ ಹೊರುವವರು ಬ್ರಹ್ಮಹತ್ಯ ಮಾಡುವವರು, ಎಂದು ಅಂದು ಇವರು ಮೂವರು ಕುಳಿತಲ್ಲಿ ಕುಳ್ಳಿರಬಾರದು. ಹೋದಲ್ಲಿ ಹೋಗಬಾರದು. ಇವರಿಗೆ ಗುರುವಿಲ್ಲ ಲಿಂಗವಿಲ್ಲ ಎಂದು ಹೇಳಿರುವನು.

---

## ಮನಸ್ಸಾಕ್ಷಿಯಾಗಿ ಕೆಲಸ ಮಾಡು.

**ವಚನ** ೮೫. ಮಾಡುವ ಭಕ್ತಂಗೆ ಮನವೆ ಸಾಕ್ಷಿ. ಹೊರಹೊಮ್ಮಿ ಬಯಲ ಹೊರಲೇನು? ಹಮ್ಮಿಲ್ಲದೆ ಮಾಡಿ ಮನದಲ್ಲಿ ಮಾರುಗದಿರ್ದಡೆ ಅಲ್ಲಿ ತಾ ಹೆರೆಹಿಂಗದಿರ್ದ ಅಂಬಿಗರ ಚೌಡಯ್ಯ.

**ಭಾವಃ**— ಜನರಿಗೆ ಕಾಣಬೇಕೆಂದು ಭಕ್ತಿಯನ್ನು ಮಾಡಬಾರದು. ಗುಪ್ತ ಭಕ್ತಿಯನ್ನು ಮಾಡಬೇಕು. ಮಾಡುವ ಭಕ್ತಿಗೆ ತನ್ನ ಮನವೇ ಸಾಕ್ಷಿಯಾಗಿರಬೇಕು. ತನ್ನನ್ನು ತಾನು ಹೊಗಳಿಕೊಳ್ಳಬಾರದು. ಅದರಿಂದ ಯಾವ ಪ್ರಯೋಜನವಿಲ್ಲ. ಅದು ಬಯಲು. ಮತ್ತು ಮನಸ್ಸಿನಲ್ಲಿ ಅಹಂಕಾರವಿಲ್ಲದೆ ಮಾಡಬೇಕು. ಮತ್ತು ಮಾಡಿ ಆನಂದಪಡಬೇಕು. ಹೀಗೆ ವರ್ತಿಸುವವನಲ್ಲಿ ಪರಮಾತ್ಮನು ವಾಸಿಸುವನು.

---

## ತ್ರಿವಿಧಾಂಗ ರೀತಿಯಾಗಿ ಕಾರ್ಯ ಮಾಡು.

**ವಚನ**:— ೮೭. ಆವಾವ ತ್ರಿಗುಣ ಭೇದದಲ್ಲಿ ವಿಶ್ವಾಸವ ಮಾಡಿದಡೂ ಭಾವ ಶುದ್ಧವಾಗಿರಬೇಕು. ಯೋಗಿಯಾದಲ್ಲಿ ದೇಹಧರ್ಮವ ಮರೆದು ಭೋಗಿಯಾದಲ್ಲಿ ಸಂಚಿತವ ಮರೆದು ತ್ಯಾಗಿಯಾದಲ್ಲಿ ನೆನಹು ಹಿಂಚುಗೊಡುವುದು ಮುಂಚಾಗಿರಬೇಕು. ಇಂತೀ ಯೋಗಿ ಭೋಗಿ ತ್ಯಾಗಿ ಇಂತೀ ತ್ರಿವಿಧವನೊಳಕೊಂಡು ವಿರಕ್ತನಾದಲ್ಲಿ ಆತನಡಿಗೆರಗುವೆನೆಂದ ಅಂಬಿಗರ ಚೌಡಯ್ಯ.

ಭಾವಃ— ಷಟ್‌ಸ್ಥಲವಿದರು ತ್ಯಾಗಾಂಗ ಭೋಗಾಂಗ ಯೋಗಾಂಗವೆಂದು ಮನುಷ್ಯನ ಕ್ರಿಯೆಗಳಲ್ಲಿ ಭೇದ ಮಾಡಿರುವರು. ಇವುಗಳಿಗನುಸರಿಸಿ ಯಾವನು ನಡೆಯುವನೋ ಅವನೇ ನಿಜವಾದ ವಿರಕ್ತನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ. ಮನುಷ್ಯನ ಆರಂಭ ದಿಶೆಯಲ್ಲಿ ಅನೇಕ ವಿಕಾರಗಳು ಅವನಲ್ಲಿ ಎಡೆಗೊಂಡು ಅವನ ಮನಸ್ಸನ್ನು ಚಂಚಲ ಮಾಡುತ್ತವೆ. ಈ ಚಂಚಲತೆಯನ್ನು ಹೋಗಲಾಡಿಸುವದೇ ಮನುಷ್ಯನು ಮೊದಲು ಮಾಡತಕ್ಕ ಕರ್ತವ್ಯವು. ಇದು ಭಕ್ತಿಯನ್ನು ತಾಳಿ ಪರಮಾತ್ಮನ ಧ್ಯಾನದಲ್ಲಿ ಇದ್ದರೆ ಶಕ್ಯವು. ಇದರಿಂದ ಮನುಷ್ಯನ ಚಂಚಲತೆಯು ಹೋಗುವದು. ಭಕ್ತ ಮಹೇಶ್ವರ ಸ್ಥಲಗಳಲ್ಲಿ ಈ ವಿವರಣೆಯು ಹೇಳಲ್ಪಡುವದುಂಟು. ಇದು ತ್ಯಾಗಾಂಗವು. ಈ ಪ್ರಕಾರ ಮನುಷ್ಯನು ವರ್ತಿಸಿ ಮುಂದೆ ತನ್ನ ಕಾರ್ಯಗಳನ್ನು ಸರಿಯಾಗಿ ಮಾಡುತ್ತ ಅವುಗಳ ಪರಿಣಾಮವನ್ನು ಶಿವಾರ್ಪಣೆಯಿಂದ ಸೇವಿಸುತ್ತ ಹೋಗಬೇಕು. ಹೀಗೆ ಭೋಗಿಸುವಲ್ಲಿ ತಾನು ಮಾಡಿದ ಅಥವಾ ಮಾಡುವ ಕರ್ಮಗಳ ಕ್ಷಯವನ್ನು ಮಾಡುತ್ತ ತನ್ನ ಕಾರ್ಯಗಳನ್ನು ಮಾಡಬೇಕು. ಹೀಗೆ ಹ್ಯಾಗೆ ವ್ಯವಹರಿಸಬೇಕೆಂಬುದು ಪ್ರಸಾದಿ ಮತ್ತು ಪ್ರಾಣಲಿಂಗಿ ಸ್ಥಳಗಳಲ್ಲಿ ಹೇಳಲ್ಪಡುವದು. ಇದು ಭೋಗಾಂಗವು. ಹೀಗೆ ಭಕ್ತನು ನಡೆದರೆ ಅವನು ಯಾವ ಕರ್ಮಗಳನ್ನು ಮಾಡಿದರೂ ಕೂಡ ಅವುಗಳ ಪರಿಣಾಮವು ಅವನ ಮೇಲೆ ಏನೂ ಆಗುವದಿಲ್ಲ. ಇದರಿಂದ ಮಾಡಿದ ಕರ್ಮಗಳು ಅಡಗಿ ಹೋಗಿ ಪುನರ್ಜನ್ಮವಾಗುವದು ನಿಲ್ಲುತ್ತದೆ. ಈ ಸ್ಥಿತಿಯುಂಟಾದ ಬಳಿಕ ಅವನು ಯೋಗಾಂಗ ಸ್ಥಿತಿಯನ್ನು ಹೊಂದುವನು. ಅಂದರೆ ಅವನಲ್ಲಿ ಲಿಂಗದ ಕಳೆಯು ಪ್ರಜ್ವಲಿತವಾಗಿ ಜಗತ್ತಿನಲ್ಲಿ ವ್ಯವಹರಿಸುವನು. ಆಗ

ಅವನು ತನ್ನ ದೇಹ ಧರ್ಮವನ್ನು ಮರೆಯುಹತ್ತುವನು. ಹೀಗೆ ಈ ಮೂರೂ ಸ್ಥಿತಿಯಲ್ಲಿ ಭಾವ ಶುದ್ಧವಾಗಿ ಆಚರಿಸಬೇಕು. ಹೀಗೆ ಆಚರಿಸುವವನೇ ನಿಜವಾದ ವಿರಕ್ತನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

---

## ಶುದ್ಧ ಮನಸ್ಸಿನವರಲ್ಲಿ ಪರಮಾತ್ಮನಿರುವನು.

**ವಚನಃ—** ೮೭. ತನ್ನ ತನ್ನಿಚ್ಛೆಗೆ ಬಾಹಲ್ಲಿ ಪಿನಾಕಿ ಬೊಸರಗಿತ್ತಿಯ ಹಾಸೆ. ಮನವ ಕಟ್ಟಿ ಐದು ಭೂತವ ಸುಟ್ಟಡೆ ಎನ್ನ ದೇವನುಂಟಿಲ್ಲೆನಬೇಡ. ಮನಗಾಯುಲಾರದೆ ತನು ಗಾಯುಹೊಂದದೆ, ಎನ್ನ ದೇವ ಸೆರೆಯಲ್ಲೆಂದಾತ ನಂಬಿಗ ಚೌಡಯ್ಯ.

**ಭಾವಃ—** ವಚನವು ಅಶುದ್ಧವಿದೆ. ಇದರ ಅರ್ಥವು ಕೆಳಗೆ ಕಾಣಿಸಿದಂತೆ ಇರಬಹುದು. ಮನಸ್ಸನ್ನು ಗಟ್ಟಿಪಡಿಸಿದರೆ, ಪಂಚಭೂತದಿಂದಾದ ದೇಹದ ಧರ್ಮಗಳು ನಾಶಹೊಂದುವವು. ಹೀಗೆ ನಾಶಹೊಂದಿದ ಸ್ಥಿತಿಯು ಉಂಟಾದ ಕೂಡಲೆ, ದೇವನು ಇದ್ದಾನೋ ಇಲ್ಲವೋ ಎಂಬ ಸಂಶಯವು ಅವನಲ್ಲಿ ಹೊರಟುಹೋಗುವದು. ಆಗ ಅವನಿಗೆ ಪರಮಾತ್ಮನನ್ನು ಕೈಸೆರೆ ಸಿಕ್ಕ ಹಾಗೆಯೇ ಆಗುವದು. ಮನಸ್ಸನ್ನು ಶುದ್ಧಪಡಿಸಿದರೆ ಪಿನಾಕಿಯನ್ನು ತನ್ನಲ್ಲಿಯೇ ಕಾಣಬಹುದೆಂಬ ಭಾವವು.

**ವಚನಃ—** ೮೮. ವೇದದಲುಳ್ಳೊಡೆ ಪ್ರಾಣವಧೆಯುಪ್ಪುದೆ? ಶಾಸ್ತ್ರದಲುಳ್ಳೊಡೆ ಸಮವಾಗದಿಪ್ಪುದೆ? ಪರ್ವತದಲ್ಲಿ ಉಳ್ಳೊಡೆ ಹೋದವರು ಮರಳಿ ಬಪ್ಪರೇ? ನಿರ್ಬುದ್ಧಿ ಮಾನವರನೇನೆಂಬೆನು? ಮನವಚನಕಾಯ ಶುದ್ಧರಾಗಿಪ್ಪಾತನ ಹೃದಯದಲ್ಲಿ ನಿಮ್ಮ ಕಂಡೆನೆಂದ ಅಂಬಿಗರ ಚೌಡಯ್ಯ.

**ಭಾವಃ—** ಪರಮಾತ್ಮನು ಮತ್ತೆಲ್ಲೆಲ್ಲಿಯೂ ಇಲ್ಲ. ಯಾವನ ಮನಸ್ಸು ವಚನ ಮತ್ತು ಕಾಯ ಇವುಗಳು ಶುದ್ಧವಾಗಿರುತ್ತವೋ ಅವನ ಹೃದಯದಲ್ಲಿಯೇ ಆವನು ಯಾವಾಗಲೂ ವಾಸಿಸುತ್ತಾನೆ. ಅನೇಕರು ಪರಮಾತ್ಮನು ವೇದದಲ್ಲಿ ಇರುತ್ತಾನೆಂದು ಹೇಳುತ್ತಾರೆ. ಇದು ತಪ್ಪು. ಒಂದು ವೇಳೆ ಹೀಗೆ ಇದ್ದರೆ, ಆ ವೇದವು ಪ್ರಾಣವಧೆಯನ್ನು ಹೇಳುತ್ತಿದ್ದಿಲ್ಲ. ಬೇರೆ ಅನೇಕರು ಪರಮಾತ್ಮನು ಶಾಸ್ತ್ರಗಳಲ್ಲಿ ಇದ್ದಾನೆಂದು ಹೇಳುತ್ತಾರೆ.

ಇದೂ ತಪ್ಪು. ಒಂದು ವೇಳೆ ಅವುಗಳಲ್ಲಿ ಇದ್ದಿದ್ದಾದರೆ, ಅವುಗಳಲ್ಲಿ ವಿರೋಧ ಅಭಿಪ್ರಾಯಗಳು ಎಂದೂ ಇರುತ್ತಿದ್ದಿಲ್ಲ. ಅವು ಒಂದೇ ಮಾತನ್ನು ಹೇಳುತ್ತಿದ್ದವು. ಬೇರೆ ಕೆಲವರು ಪರಮಾತ್ಮನು ಶ್ರೀ ಪರ್ವತದಲ್ಲಿ ಇದ್ದಾನೆಂದು ಅನ್ನುತ್ತಾರೆ. ಇದೂ ತಪ್ಪು. ಯಾಕಂದರೆ ಪರ್ವತಕ್ಕೆ ಹೋದವರು ಮೋಕ್ಷವನ್ನು ಹೊಂದಿ ಅಲ್ಲಿಯೇ ಉಳಿಯತಕ್ಕದ್ದು. ಅವರು ತಿರುಗಿ ತಮ್ಮ ಮನೆಗೆ ಬರತಕ್ಕದ್ದಲ್ಲ. ಆದ್ದರಿಂದ ಇವಾವುಗಳಲ್ಲಿ ಪರಮಾತ್ಮನು ಇರುವದಿಲ್ಲ. ಆದರೆ ಅವನು ಶುದ್ಧಮನಸ್ಸಿನವರಲ್ಲಿ ಇರುತ್ತಾನೆ. ಪರಮಾತ್ಮನನ್ನು ಕಾಣಲು ಇದೇ ಹಾದಿಯು ಎಂದು ವಚನಕಾರನ ಭಾವವು.

---

## ನೈತಿಕ ವಚನಗಳು.

**ವಚನ:**— ೮೯. ಐಶ್ವರ್ಯ ದುಃಖದಲ್ಲಿ ಬೇಯುವ ಹೊಲೆ ಸಂಸಾರವನೆ ಕಟ್ಟಿ, ಕೊಲೆಗೇಡಾಗದೆ ಸಲೆ ಸತ್ಯ ಸದಾಚಾರದಲ್ಲಿ ನಡೆ. ಸಟೆಯನೆ ಬಿಡು. ದಿಟವನೆ ಹಿಡಿ. ಈ ಘಟವುಳ್ಳನಕ ಕಾಲದಲ್ಲಿ ಶಿವಭಕ್ತಿಯ ನಟಿಸಿ ನಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಮನುಷ್ಯನು ಐಶ್ವರ್ಯಬಂದರೆ ಸುಖವೆಂದು ಭಾವಿಸುವನು. ಆದರೆ ಅದು ದುಃಖವೆಂದು ಅಂಬಿಗರ ಚೌಡಯ್ಯನು ಅಂದಿರುವನು. ಯಾಕಂದರೆ ಅದು ಸಂಸಾರಕ್ಕೆ ಒಳಗುಮಾಡಿ, ಕೊಲೆಮಾಡಿಸುವದು, ಸುಳ್ಳುಹೇಳಿಸುವದು, ದುರಾಚಾರಕ್ಕೆ ಹಚ್ಚುವದು. ಇಂಥ ಸಂಸಾರವನ್ನು ಬಿಟ್ಟುಕೊಟ್ಟು, ಶಿವಭಕ್ತಿಯಿಂದ ನಡೆ ಎಂದು ವಚನಕಾರನು ಉಪದೇಶಿಸಿರುವನು.

**ವಚನ:**—೯೦. ಹೊಡೆವಟ್ಟು ದೇವರ ತಲೆಯು ತಾಟಿಸಿಕೊಂಬರು. ನೆಲಕೆಯೂ ತಲೆಗೆಯೂ ನಂಟುತನವೇ? ಕೊಲಬೇಡ ಪ್ರಾಣಿಗಳ. ಗೆಲಬೇಡ ನಂಬಿದರ. ಛಲವ ಸಾಧಿಸಬೇಡ ಗೋತ್ರದಲ್ಲಿ. ಕೊಲುವವ, ಗೆಲುವವ, ಛಲವ ಸಾಧಿಸುವವ ಹೊಲೆಯರ ಮಾದಿಗನೆಂದ ನಂಬಿಗಚೌಡಯ್ಯ.

**ಭಾವಃ—** ಅನೇಕರು ಶಿವಭಕ್ತಿಯನ್ನು ಮಾಡಬೇಕೆಂದು ದೇವರ ಮುಂದೆ ಸಾಷ್ಟಾಂಗಹಾಕಿ ತಲೆಯನ್ನು ನೆಲಕ್ಕೆ ಹಚ್ಚುವರು. ಹೀಗೆ ಮಾಡಬೇಕಾದರೆ ನೆಲಕ್ಕೂ ತಲೆಗೂ ಏನಾದರೂ ನೆಂಟಸ್ತನವಿರುತ್ತ ದೆಂದು ತಿಳಿದು ಹೀಗೆ ಮಾಡುವಿರೋ ಹ್ಯಾಗೆ ಎಂದು ಅಂಬಿಗರ ಚೌಡ ಯ್ಯನು ಕೇಳಿರುವನು. ಆದರೆ ಹೀಗೆ ಬಹಿರಂಗ ಕ್ರಿಯೆಗಳನ್ನು ಮಾಡು ವದಕ್ಕಿಂತ ಪ್ರಾಣಿಗಳಲ್ಲಿ ದಯವಿರಬೇಕು ನಂಬಿದವರ ವಿಶ್ವಾಸದ ದುರು ಪಯೋಗ ಮಾಡಬಾರದು, ಬಂಧು ಬಳಗದವರೊಡನೆ ಛಲವನ್ನು ಸಾಧಿ ಸಬಾರದು. ಹೀಗೆ ಯಾವನು ನಡೆಯುವದಿಲ್ಲವೋ ಅವನು ಮಾದಿಗ ನೆಂದು ವಚನಕಾರನು ಅಂದಿರುವನು.

**ವಚನ:—** ೯೧. ಎತ್ತ ಸುತ್ತಿ ಬಂದಡೂ ಊರಿಗೆ ಬಪ್ಪುದು ತಪ್ಪದು. ಹಲವು ಮಾತನಾಡಿದಡೇನು? ಮೂರು ಮಲವ ಮರೆದಿರಬೇಕು. ಹೊಲಬು ದಪ್ಪಿದ ಮೃಗ ಬಲೆಯೊಳಗೆ ಬಿದ್ದಂತಾಗಬೇಡ ಇದನರಿತು ಬದುಕೆಂದ ಅಂಬಿಗಚೌಡಯ್ಯ.

ಭಾವಃ— ಊರಿಗೆ ಬರಲಿಕ್ಕೆ ಅನೇಕ ಹಾದಿಗಳು ಉಂಟು. ಆದರೆ ಊರಿಗೆ ಮುಟ್ಟಬೇಕೆಂಬ ಧ್ಯೇಯವು ಇರುವದರಿಂದ ಯಾವ ಹಾದಿ ಯಿಂದ ಬಂದರೂ ಮನುಷ್ಯನು ಅಲ್ಲಿಗೆ ಬಂದು ಮುಟ್ಟುವನು. ಹಾಗೆಯೇ ನಾನಾ ವಿಧ ವಿಚಾರಗಳು ಮನಸ್ಸಿನಲ್ಲಿ ಬರಬಹುದು. ಆದರೆ ದೇಹ ಸಂಬಂಧದ ಮಾಯಾ ಸಂಬಂಧದ ಮತ್ತು ಕರ್ಮ ಸಂಬಂಧದ ಮೂರೂ ಮಲಗಳನ್ನು ಬಿಟ್ಟುಕೊಟ್ಟು ಯಾವನು ವ್ಯವಹರಿಸುತ್ತಾನೋ ಅವನು ಪರಮಾತ್ಮನನ್ನು ನಿಶ್ಚಯವಾಗಿ ಮುಟ್ಟುವನು. ಏನು ಮಾಡಬೇಕೆಂಬದನ್ನು ತಿಳಿಯದೆ ಚಿಗರಿಯು ಹ್ಯಾಗೆ ಬಲೆಯೊಳಗೆ ಬಿದ್ದು ಒದ್ದಾಡಿ ಸಾಯು ವದೋ ಹಾಗೆ ಮಾತ್ರ ವರ್ತಿಸಬಾರದು. ಪರಮಾತ್ಮನೊಬ್ಬನ ಕಡೆಗೆ ಧ್ಯೇಹವಿಟ್ಟು ವರ್ತಿಸಿದರೆ ಬದುಕುವಿ ಎಂದು ವಚನಕಾರನು ಹೇಳಿರು ವನು.

**ವಚನಃ—** ೯೨. ತಿಂಬ ಜಾತಿಗೆ ಮೇವ ಹಾಕಿ ಕರುಳು ಕಂಡವ ಕೊಯ್ದು ತಿಂಬುವನಂತೆ ದಾತರಿಗೆ ಚಂದದ ಮಾತನಾಡಿ ಮೂರು ಮಲ ಸಂಧಿಸಿಕೊಂಬುವಂಗೆ ಲಿಂಗವಿಲ್ಲೆಂದನಂಬಿಗ ಚೌಡಯ್ಯ.

**ಭಾವಃ—** ಮಾಂಸಭಕ್ಷಕನು ತಿನ್ನುವದರ ಹೊರ್ತು ಏನೂ ಗೊತ್ತಿಲ್ಲದ ದನಗಳಿಗೆ ಹ್ಯಾಗೆ ಮೇವನ್ನು ಹಾಕಿ ಅವುಗಳನ್ನು ಪುಷ್ಟ ಮಾಡಿ ಕಡೆಗೆ ಅವನ್ನು ಕೊಂದು ತಿಂದು ಬಿಡುತ್ತಾನೋ, ಹಾಗೆ ದಾನ ಮಾಡುವಂಥ ಜನರಿಗೆ ಚಂದದ ಮಾತುಗಳನ್ನು ಹೇಳಿ ಅವರನ್ನು ಮೋಸ ಗೊಳಿಸಿ ಅವರ ಧನದ ಅಪವ್ಯಯ ಮಾಡಿ ಮಲದಲ್ಲಿ ಬಿದ್ದು ಯಾವನು ಗಾಸಿ ಯಾಗುತ್ತಾನೋ ಅವನಿಗೆ ಲಿಂಗವಿಲ್ಲೆಂದು ಇಲ್ಲಿ ವಚನಕಾರನು ಹೇಳಿರುವನು.

**ವಚನಃ—** ೯೩. ಮೂರುವ ಮುಟ್ಟದೆ, ನಾಲ್ಕುವನಂಟದೆ, ಐದುವ ನೆಚ್ಚಲು ಬೇಡ ಕಂಡಾ. ಆರುವ ಜಾರದೆ, ಏಳುವ ಹಿಡಿಯದೆ, ಎಂಟುವ ಗಂಟಿಕ್ಕಬೇಡ ಕಂಡಾ. ಒಂಬತ್ತು ಬಾಗಿಲು ಹಿಂದಿಕ್ಕಿ ಹೋದರೆ ಅಂಬಿಗ ಚೌಡಯ್ಯನ ಉಪದೇಶವಯ್ಯ.

**ಭಾವಃ—** ಮನುಷ್ಯನಲ್ಲಿ ಕಿವಿ, ಕಣ್ಣು, ಮೂಗು ಇತ್ಯಾದಿ ನವ ರಂಧ್ರಗಳಿವೆ. ಇವುಗಳ ಮೂಲಕ ಅವನಲ್ಲಿ ಅನೇಕ ಬಗೆಯ ವಿಕಾರ ಗಳು ಉತ್ಪನ್ನವಾಗುತ್ತವೆ. ಇವುಗಳೇ ಮನುಷ್ಯನನ್ನು ದುಃಖಕ್ಕೆ ಒಳ ಗುಮಾಡುತ್ತವೆ. ಮತ್ತು ನರಕದಲ್ಲಿ ಹಾಕುತ್ತವೆ. ಈ ಸ್ಥಿತಿಯು ಉಂಟಾಗದಿರಲು ಮನುಷ್ಯನು ಮೂರು ಮಲಗಳನ್ನು ಬಿಟ್ಟುಕೊಡ ಬೇಕು. ಅಂಗಚತುಷ್ಟಯಗಳಿಗೆ ಅಂಟಿಕೊಳ್ಳಬಾರದು. ಪೃಥಿವ್ಯಾದಿ ಪಂಚಭೂತಗಳನ್ನು ನಂಬಬಾರದು. ಜಾತಿ, ವರ್ಣ, ಆಶ್ರಮ, ಕುಲ, ಗೋತ್ರ, ನಾಮ ಇವುಗಳಿಗೆ ಸಂಬಂಧಿಸಿದ ಷಡ್ಭ್ರಮೆಗಳನ್ನು ದೂರಮಾಡ ಬೇಕು. ತನುವ್ಯಸನ, ಮನೋವ್ಯಸನ, ಧನವ್ಯಸನ, ರಾಜ್ಯವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನ, ವಿಶ್ವವ್ಯಸನವೆಂಬ ಸಪ್ತ ವ್ಯಸನಗ ಳನ್ನು ಬಿಡಬೇಕು. ಕುಲಮದ, ಛಲಮದ, ಧನಮದ, ರೂಪಮದ, ಯೌವ್ವನಮದ, ವಿದ್ಯಾಮದ, ರಾಜ್ಯಮದ, ತಪೋಮದ ಎಂಬ ಅಷ್ಟ ಮದಗಳನ್ನು ಕಟ್ಟಿಕೊಳ್ಳಬಾರದು. ಹೀಗೆ ವರ್ತಿಸಿದಲ್ಲಿ ಮೇಲೆ ಹೇಳಿದ ಒಂಬತ್ತು ಬಾಗಿಲುಗಳನ್ನು ದಾಟಿ ಪರಮಾತ್ಮನ ಸಮೀಪಕ್ಕೆ ಹೋಗುವನು.

**ವಚನ** ೯೪- ಲಿಂಗತನುವಿಂಗೆ ಶೃಂಗಾರವಪ್ಪತೆರ ನಾವು ದೆಂದೊಡೆ ಕಾಮ, ಕ್ರೋಧ, ಲೋಭ, ಮೋಹಾದಿಗಳಲ್ಲಿ ತೆರಪುಗೊಡದಿಪ್ಪುದು. ಲಿಂ ಗವೇ ಅಂಗವಾಗಿ ಧ್ಯಾನ ಧಾರಣ ನಿಜ ಸಮಾಧಿ ನಿವಾಸವಾಗಿ ನಿಶ್ಚಯ ನಿಜ ತತ್ವವಾಗಿ ನಿಂದುದೆ ಆಭರಣವೆಂದನಂಬಿಗ ಚೌಡಯ್ಯ.

**ಭಾವಃ—** ಎಲ್ಲರೂ ತಾವು ಜನರಲ್ಲಿ ಸೌಂದರ್ಯವುಳ್ಳವರಾಗಿ ಕಾಣ ಬೇಕೆಂದು ಅಪೇಕ್ಷಿಸುತ್ತಾರೆ. ಆದ್ದರಿಂದ ಅವರು ಆಭರಣಾದಿಗಳನ್ನು ಅನೇಕ ಬಗೆಯ ವಸ್ತ್ರಗಳನ್ನು ತೊಟ್ಟುಕೊಂಡು ಜನರ ದೃಷ್ಟಿಯಲ್ಲಿ ಹೊಳ ಪುಳ್ಳವರಾಗಿ ಕಾಣಲು ಬಗೆಯುತ್ತಾರೆ. ಆದರೆ ಲಿಂಗಾಂಗಿಗಳಿಗೆ ಪಂಚ ಭೂತದಿಂದಾದ ತನುವಿಲ್ಲ. ಅವರಿಗೆ ಲಿಂಗವೇ ತನುವಾಗಿರುತ್ತದೆ. ಆದ್ದ ರಿಂದ ಇಂಥವರ ಶರೀರಗಳು ಸೌಂದರ್ಯಯುಕ್ತವಾಗಿ ತೋರಬೇಕಾದರೆ ಕಾಮ ಕ್ರೋಧಾದಿಗಳಿಗೆ ಅವರು ಸ್ಥಾನ ಕೊಡಬಾರದು. ಹೀಗೆ ವರ್ತಿ ಸುವದೇ ನಿಜವಾದ ಆಭರಣಗಳನ್ನು ತೊಟ್ಟಂತೆ ಎಂದು ವಚನಕಾರನ ಭಾವವು. ಹೀಗೆ ಲಿಂಗವೇ ಅಂಗವಾಗಿದ್ದು, ಲಿಂಗಧ್ಯಾನ ಲಿಂಗಧಾರಣ ಲಿಂಗ ಸಮಾಧಿ ಇವುಗಳಲ್ಲಿಯೇ ವಾಸಸ್ಥಳವುಳ್ಳವರಾಗಿ ವ್ಯವಹರಿಸುತ್ತಿ ದ್ದರೆ ಪರಮಾತ್ಮನ ನಿಜತತ್ವ ಮಾತ್ರ ಅವರಲ್ಲಿ ಉಳಿಯುವದು. ಹೀಗೆ ವರ್ತಿಸುವವರು ಎಲ್ಲರಿಗೂ ದರ್ಶನಿಯರಾಗುವರು.

**ವಚನಃ—** ೯೫. ಶಿವಭಕ್ತನಾದ ಬಳಿಕ ಅನ್ಯ ಭಜನೆಯ ಮಾಡ ದಿರಬೇಕು. ಶಿವಭಕ್ತನಾದ ಬಳಿಕ ಪರಸತಿ, ಪರನಿಂದೆ, ಪರಧನವ ಹಿಡಿ ಯದಿರಬೇಕು. ಶಿವಭಕ್ತನಾದ ಬಳಿಕ ಲಿಂಗಕ್ಕೆ ತೋರದೆ ಪ್ರಸಾದವ ಮುಟ್ಟದಿರಬೇಕು. ಅಂಗಲಿಂಗವು ಸಮರಸವಾಗಿರಬೇಕು. ದಾರಿದ್ರ್ಯವು ಬಂದರೆ ಅಂಗವೆ ನಿನ್ನದೆಂದರಿಯಬೇಕು. ಸಂಪತ್ತು ಬಂದರೆ ನಿನ್ನ ದೆಂದು ಭಾವಿಸಬೇಕು. ಲಿಂಗಬಾಹ್ಯರಿಗೆ ನರಕ ತಪ್ಪದು. ಇಷ್ಟಲಿಂಗೇ ವಿಶ್ವಾಸಂ ಅನ್ಯಲಿಂಗ ಶ್ವಾನಯೋನಿ ಶತಂ ಗತ್ವಾ ಚಾಂಡಾಲಗೃಹಮಾ ಚರೇತ್. ಇದು ಕಾರಣ ಪ್ರಾಣಲಿಂಗದ ಭಕ್ತಿಯ ಮರೆದು ಯಮಪ ಟ್ಟಣಕ್ಕೆ ಹೋಹರೆಂದಾತ ನಮ್ಮ ಅಂಬಿಗರಚೌಡಯ್ಯ ನಿಜಶರಣನು.

**ಭಾವಃ—** ಲಿಂಗವೇ ಅಂಗವಾಗಿರುವವನು ಹ್ಯಾಗೆ ವರ್ತಿಸಬೇಕೆಂ ಬುದನ್ನು ಇಲ್ಲಿ ವಚನಕಾರನು ವಿವರಿಸಿದ್ದಾನೆ. ಲಿಂಗದಲ್ಲಿ ವಿಶ್ವಾಸವು ಳ್ಳವರು ಇತರ ದೇವತೆಗಳನ್ನು ನಂಬಬಾರದು. ಲಿಂಗಾರ್ಪಣಭಾವದಿಂ ದಲೇ ವರ್ತಿಸಬೇಕು. ಹೀಗೆ ವರ್ತಿಸುವದೇ ಅಂಗಲಿಂಗ ಸಮರಸವೆನಿ ಸುವದು. ಸಂಪತ್ತು ಅಥವಾ ದಾರಿದ್ರ್ಯ ಯಾವವು ಬಂದರೂ ಎಲ್ಲವೂ ಪರಮಾತ್ಮನವೆಂದು ಭಾವಿಸಿ ವರ್ತಿಸಬೇಕು. ಇದೇ ಪ್ರಾಣಲಿಂಗದ ಭಕ್ತಿಯು. ಈ ತೆರದ ಭಕ್ತಿಯನ್ನು ಮಾಡದಿದ್ದರೆ ಯಮಪಟ್ಟಣಕ್ಕೆ ಮಾತ್ರ ಹೋಗುವರು, ಮತ್ತು ಭವಾಂತರಗಳಲ್ಲಿ ಬರುವರು ಎಂದು ವಚನಕಾರನು ಹೇಳಿದ್ದಾನೆ.

ವಚನಃ— ೯೬. ಆಶೆಯುಳ್ಳಾತ ಒಬ್ಬರಧೀನದಲ್ಲಿಪ್ಪನು. ಆಶೆಯು ಮನದ ಕೊನೆಯನರಿದಾತ ಕೈಲಾಸದಾಚೆಯಲ್ಲಿಪ್ಪನೆಂದಾತ ಅಂಬಿಗರ ಚೌಡಯ್ಯ.

**ಭಾವಃ—** ನಿರಾಶೆಯುಳ್ಳವನೇ ನಿಜವಾದ ಸ್ವತಂತ್ರತೆಯುಳ್ಳವನೆಂದು ವಚನಕಾರನ ಅಭಿಪ್ರಾಯವು. ಮನವು ಯಾವಾಗಲೂ ಆಶಾಯುಕ್ತ ವಾಗಿರುತ್ತದೆ. ಇಂಥ ಮನದ ನಿಜಸ್ಥಿತಿಯನ್ನು ಯಾವನು ತಿಳಿದಿರುತ್ತಾನೊ ಆತನು ಕೈಲಾಸದಾಚೆಗೆ ಹೋಗುವನು. ಅಂದರೆ ಅವನನ್ನು ಬಂಧಿಸಲಿಕ್ಕೆ ಪರಮಾತ್ಮನಿಗೆ ಸಹ ಆಗದೆಂದು ವಚನಕಾರನ ಭಾವವು.

**ವಚನ ೯೭.** ಮಾತುಗಂಟುಕತನದಿಂದೆಷ್ಟು ಮಾತನಾಡದಡೇನು? ಕಾಮಿನಿಯರ ಕಾಲ ದೆಸೆಯಲ್ಲಿ ಸಿಕ್ಕಿ ಕ್ರೋಧದ ದಳ್ಳುರಿಯಲ್ಲಿ ಬೆಂದು ಆಶೆ ಎಂಬ ಪಾಶ ಕೊರಳಲ್ಲಿ ಸುತ್ತಿ ಅದೇಕೊ ಅದೇತರ ಮಾತೆಂದನಂಬಿಗರ ಚೌಡಯ್ಯ.

**ಭಾವಃ—** ಬರೇ ವಾಚಾಳನಾಗಿದ್ದರೆ ಏನು ಪ್ರಯೋಜನ? ಅನೇಕ ದುರ್ಗುಣಗಳು ತನ್ನಲ್ಲಿರಲು ಬರೇ ಮಾತನಾಡುವದು ಏಕೆ ಎಂದು ವಚಕಾರನು ನುಡಿದಿರುವನು.

**ವಚನಃ—** ೯೮. ನಿಲ್ಲಿಸಬಹುದಯ್ಯಾ ಒಂದೇ ಮಂತ್ರದಲ್ಲಿ ಕಾಳೋರಗನ. ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಹಾರುವ ಪಕ್ಷಿಯನು. ನಿಲ್ಲಿಸಬಹುದಯ್ಯ ಒಂದೇ ಮಂತ್ರದಲ್ಲಿ ಹೆಬ್ಬುಲಿಯ. ನಿಲ್ಲಿಸಬಹುದಯ್ಯಾ ಒಂದೇ ಮಂತ್ರದಿಂದ ಹೊಯ್ವ ಹೆಮ್ಮಾರಿಯ. ನಿಲ್ಲಿಸಬಹುದಯ್ಯಾ ಒಂದೇ ಮಂತ್ರದಲ್ಲಿ ಬರುವ ಉರಿಬಾಣವನು. ಇಂತಿವೆಲ್ಲವನು ಒಂದೇ ಮಂತ್ರದಲ್ಲಿ ನಿಲ್ಲಿಸಬಹುದು. ಲೋಭವೆಂಬ ಗ್ರಹಣವ ಹಿಡಿದವರ ಏತರಿಂದ ನಿಲ್ಲಿಸಲಾಗದು. ಈ ಲೋಭಕ್ಕೆ ದಾರಿದ್ರ್ಯವೇ ಔಷಧವು. ಹೇಳಿದರೆ ಕೇಳರು. ತಾವು ತಿಳಿಯರು. ಶಾಸ್ತ್ರವ ನೋಡರು. ಭಕ್ತಿಯ ಹಿಡಿಯರು. ಇಂತಹ ಗೊಡ್ಡ ಮೂಳ ಹೊಲೆಯರಿಗೆ ಕರ್ಮವೆಂಬ ಶರಧಿಯಲ್ಲಿ ಬಿದ್ದು ಉರುಳಾಡುವುದೆ ಸತ್ಯವೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

ಭಾವಃ— ಲೋಭವು ಹೆಬ್ಬಾವು, ಹುಲಿ, ಹೆಮ್ಮಾರಿ, ಉರಿಯುವ ಬಾಣ ಇವುಗಳಿಗಿಂತಲೂ ಘಾತುಕವಾದದ್ದೆಂದು ವಚನಕಾರನು ಇಲ್ಲಿ

ಅನ್ನುತ್ತಾನೆ. ಲೋಭಕ್ಕೆ ಒಳಗಾದವನು ಬೇಕಾದ ದುಷ್ಟ ಕೃತ್ಯಗಳನ್ನು ಮಾಡಲು ಹೇಸುವದಿಲ್ಲ. ಯಾವ ಮಂತ್ರತಂತ್ರಗಳು ಅವನಮೇಲೆ ನಡಿಯಲಾರವು. ಇವನ ಲೋಭವನ್ನು ಹೋಗಲಾಡಿಸಬೇಕಾದರೆ ದಾರಿದ್ರವೇ ಮದ್ದು. ಇಂಥವನು ಏನು ಹೇಳಿದರೂ ಕೇಳುವದಿಲ್ಲ. ತನಗೂ ತಿಳಿಯದು. ಶಾಸ್ತ್ರಗಳನ್ನೂ ನಂಬುವದಿಲ್ಲ. ಭಕ್ತಿಯನ್ನು ಎಂದೂ ಹಿಡಿಯುವದಿಲ್ಲ. ಇಂಥವನು ಕರ್ಮವೆಂಬ ಸಂಸಾರದಲ್ಲಿ ಬಿದ್ದು ಕಡೆಗೆ ನಷ್ಟಹೊಂದುವದೇ ಸತ್ಯವೆಂದು ವಚನಕಾರನು ಹೇಳಿರುವನು.

**ವಚನ**:— ೯೯. ಕೂಡಿದ ಧನವನೆಲ್ಲವನು ಗುರುಲಿಂಗಜಂಗಮಕ್ಕೆ ವಂಚನೆಯ ಮಾಡಿ ಒಳಗಿಟ್ಟುಕೊಂಡು, ನೆಲನ ತೋಡಿ ಬಚ್ಚಿಟ್ಟುಕೊಂಡು, ಹಲವು ತೆರದ ಆಭರಣಂಗಳ ಮಾಡಿಸಿ, ಕರ ಚರಣ ಉರ ಕರ್ಣಂಗಳೊಳಗಿಟ್ಟು, ಮತ್ತಿಷ್ಟು ಬದುಕಾಗಲೆಂದು ತನ್ನ ಕೈಯ್ಯೊಳಗಿನ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆಯಂ ಮಾಡುವ ಲಿಂಗಪೂಜಕನ ಪರಿ ಎಂತೆಂದೊಡೆ, ಆ ಭಕ್ತನು ಪಂಚಾಭಿಷೇಕದಿಂದ ಲಿಂಗಕ್ಕೆ ಮಜ್ಜನವ ನೀಡಿದರೆ ಲಿಂಗದ ಚಿತ್ತದಲ್ಲಿ ಸುಣ್ಣ ನೀರನೆತ್ತಿ ಬಾಜಿಸಿದಂತಾಯಿತ್ತಯ್ಯಾ! ಆ ಭಕ್ತನು ಪನ್ನೀರಿನಿಂದ ಮಜ್ಜನವ ನೀಡಿದರೆ ಲಿಂಗದ ಚಿತ್ತದಲ್ಲಿ ತಣ್ಣೀರೊಳಗದ್ದಿ ಬಾಜಿಸಿದಂತಾಯಿತ್ತಯ್ಯಾ! ಆ ಭಕ್ತನು ವಿಭೂತಿಯ ಧರಿಸಿದರೆ ಲಿಂಗದ ಚಿತ್ತದಲ್ಲಿ ಬೂದಿಯ ಬೊಕ್ಕಣವ ಕಟ್ಟಿ ಬಾಜಿಸಿದಂತಾಯಿತ್ತಯ್ಯಾ! ಆ ಭಕ್ತನು ಗಂಧವ ಧರಿಸಿದರೆ ಲಿಂಗದ ಚಿತ್ತದಲ್ಲಿ ಚಂಡಿಟ್ಟು ಬಾಜಿಸಿದಂತಾಯಿತ್ತಯ್ಯಾ! ಆ ಭಕ್ತನು ಅಕ್ಷತೆಯನೇರಿಸಿದರೆ ಲಿಂಗದ ಚಿತ್ತದಲ್ಲಿ ಕಲ್ಲು ಹೊರಿಸಿ ಬಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ಪುಷ್ಪವ ಧರಿಸಿದರೆ ಲಿಂಗದ ಚಿತ್ತದಲ್ಲಿ ಬೆನ್ನಮೇಲೆ ಹೇರು ಹೊರಿಸಿದಂತಾಯಿತ್ತಯ್ಯಾ! ಆ ಭಕ್ತನು ಧೂಪವ ಬೀಸಿದರೆ ಲಿಂಗದ ಚಿತ್ತದಲ್ಲಿ ಅರವನಿಕ್ಕಿ ಬಾಧಿಸಿದಂತಾಯಿತ್ತಯ್ಯಾ! ಆ ಭಕ್ತನು ದೀಪಾರತಿಯನೆತ್ತಿದರೆ ಲಿಂಗದ ಚಿತ್ತದಲ್ಲಿ ಪಂಜುಗಳ್ಳರು ಬಂದು ಮೋರೆಯ ಸುಟ್ಟು ಬಾಜಿಸಿದಂತಾಯಿತ್ತಯ್ಯಾ! ಆ ಭಕ್ತನು ಸ್ತೋತ್ರಮಂತ್ರವ ನುಡಿದರೆ ಲಿಂಗದ ಚಿತ್ತದಲ್ಲಿ ಕರ್ಣದೊಳಗೆ ತೊನಸಿ ಹೊಕ್ಕು ಗೋಳಿಟ್ಟು ಬಾಧಿಸಿದಂತಾಯಿತ್ತಯ್ಯಾ! ಇಂತಪ್ಪ ಲಿಂಗಬಾಧಕರನು ಲಿಂಗಪೂಜಕರೆನಬಹುದೆ? ಆತನ ಅಂಗಳವ ಮೆಟ್ಟಬಹುದೆ? ಇದರ ಇಂಗಿತವ ನಿಜಭಾವವುಳ್ಳ ಶರಣರು ನೀವೇ ತಿಳಿದು ನೋಡಿರೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ—** ಅನೇಕ ಲೋಭಿಗಳು ಲಿಂಗಪೂಜೆಯನ್ನು ವಿಶೇಷವಾಗಿ ಮಾಡುವದುಂಟು. ಇದರಲ್ಲಿ ಅವರ ಉದ್ದೇಶವು ಇನ್ನಿಷ್ಟು ಬದುಕಾಗ ಬೇಕೆಂದು ಮಾತ್ರ ಇರುತ್ತದೆ. ಇಂಥವರ ಪೂಜೆಯು ಯಾವ ತರದ್ದಿ ರುತ್ತದೆಂಬದನ್ನು ವಚನಕಾರನು ಇಲ್ಲಿ ಚನ್ನಾಗಿ ವರ್ಣಿಸಿರುವನು. ಇಂಥ ವರು ಪೂಜಾ ಕಾಲದಲ್ಲಿ ಮಾಡುವ ಅಷ್ಟವಿಧಾರ್ಚನೆ ಷೋಡಶೋಪ ಚಾರಗಳೆಲ್ಲವೂ ಪರಮಾತ್ಮನನ್ನು ಪೀಡಿಸಿದಂತೆ ಆಗುತ್ತದೆ. ಅವನಿಗೆ ಇವರ ಪೂಜೆಯು ಕಷ್ಟಕರವಾದದ್ದು. ಅವನಿಗೆ ಅತ್ಯಂತ ನೋವ ನ್ನುಂಟು ಮಾಡುವಂಥಾದ್ದು. ಹೀಗೆ ಪರಮಾತ್ಮನನ್ನು ನೋಯಿಸಿದವ ನನ್ನು ಆತನು ಪ್ರೀತಿಸುವ ಬಗೆ ಹ್ಯಾಗೆ?

**ವಚನಃ—** ೧೦೦. ಉಂಡರೆ ಭೂತನೆಂಬರು. ಉಣದಿದ್ದರೆ ಚಕೋ ರನೆಂಬರು. ಭೋಗಿಸಿದರೆ ಕಾಮಿ ಎಂಬರು. ಭೋಗಿಸದಿದ್ದರೆ ಮುನ್ನ ಮಾಡಿದ ಕರ್ಮಿ ಎಂಬರು. ಊರೊಳಗಿದ್ದರೆ ಸಂಸಾರಿ ಎಂಬರು. ಅಡವಿ ಯೊಳಗಿದ್ದರೆ ಮೃಗಜಾತಿ ಎಂಬರು. ನಿದ್ರೆಗೈದರೆ ಜಡದೇಹಿ ಎಂಬರು. ಎದ್ದಿದ್ದರೆ ಚಕೋರನೆಂಬರು. ಇಂತೀ ಜನ ಮೆಚ್ಚಿ ನಡೆದವರ ಎಡದ ಪಾದ ಕಿರಿ ಕಿರುಗುಣಿಯಲ್ಲಿ ಮನೆ ಮಾಡು, ಮನೆ ಮಾಡು ಎಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವಃ—** ಯಾವದು ತನ್ನ ಸದಸದ್ವಿಚಾರಕ್ಕೆ ಯೋಗ್ಯವೆಂದು ತೋರುತ್ತದೋ ಅದನ್ನೇ ಯಾವಾಗಲೂ ಮನುಷ್ಯನು ಮಾಡಬೇಕೆಂದು ವಚನಕಾರನ ಭಾವವು. ಜನರು ಅಂದಂತೆ ಮತ್ತು ಜನರ ಅಭಿಪ್ರಾ ಯದಂತೆ ನಡೆಯಬಾರದೆಂದು ಆವನು ಅನ್ನುತ್ತಾನೆ. ಯಾಕಂದರೆ ಜನರು ಯಾವಾಗ್ಗೆ ಏನು ಅನ್ನುವರು ಇದನ್ನು ಹೇಳಲಿಕ್ಕಾಗದು. ಅವರು ಈಗ ಒಂದು ಅಭಿಪ್ರಾಯವುಳ್ಳವರಿದ್ದರೆ ಮುಂದೆ ಮತ್ತೊಂದು ಅಭಿಪ್ರಾ ಯವುಳ್ಳವರಾಗುವರು. ಹೀಗೆ ಜನ ಮೆಚ್ಚಿ ನಡೆಯುವವರ ಸ್ಥಿತಿ ಎಂತ ಹದೆಂದರೆ ಎಡ ಪಾದದ ಕಿರುಗುಣಿಯಲ್ಲಿ ಮನೆ ಕಟ್ಟಿದಂತೆ ಎಂದು ಅಂದಿದ್ದಾನೆ. ವಚನಕಾರನು ಒಂದು ಅಶಕ್ಯ ಮತ್ತು ಅಸಂಬದ್ಧ ಉದಾ ಹರಣೆಯನ್ನು ಕೊಟ್ಟು ಇದರಂತೆಯೇ ಇವರ ನಡತೆ ಎಂದು ಅಂದಿ ದ್ದಾನೆ. ಇಂಥವರಿಂದ ಯಾವ ಕಾರ್ಯವೂ ಆಗಲಾರದೆಂದು ಅವನ ಮುಖ್ಯ ಭಾವ.

೧೦೧ ಮನ ಮಗ್ನವಾಗಿ ಅರಿವನು ಘನ ಪ್ರಾಣಲಿಂಗದಲ್ಲಿ ಸವೆದು ತನುವನು ಕ್ರಿಯಾಚಾರವಿಡಿದು ಇಷ್ಟಲಿಂಗದಲ್ಲಿ ಸವೆದು ಮಹಾನುಭಾವವನರಿತಂತಹ ವೀರಶೈವ ಸಂಪನ್ನರಾದ ಶಿವಶರಣರಿಗೆ ಸಂಸಾರಿಗಳೆನ ಬಹುದೇ ಅಯ್ಯ? ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧ ಪದಾರ್ಥಂಗಳ ವಿವರಿಸಿ ಇಷ್ಟ ಪ್ರಾಣ ಭಾವವೆಂಬ ಮೂರು ಲಿಂಗದ ಮುಖವನರಿದರ್ಪಿಸಿ ಆರು ಲಿಂಗದನುವಿನಲ್ಲಿ ಕೈಕೊಂಡು ಬಂದ ಬಂದ ಸಕಲ ಪದಾರ್ಥವನು ಅದರ ಪೂರ್ವಾಶ್ರಯುವನಳಿದು ಶಿವಪ್ರಸಾದವೆಂದು ಅನುಭವಿಸುತಿರ್ಪರು. ಅಂತಪ್ಪ ನಿರುಪಮ, ನಿರ್ಭೇದ್ಯ, ನಿರಾಳ, ನಿಶ್ಶೂನ್ಯ ಪರಮ ಪ್ರಸಾದಿಗಳಿಗೆ ಸಂಸಾರಿಗಳೆಂದು ನುಡಿವರು ಅಜ್ಞಾನಿ ಸಂದೇಹಿಗಳು. ಅಘೋರ ನರಕದಲ್ಲಿ ಮುಳುಗುವರೆಂದಾತನಂಬಿಗ ಚೌಡಯ್ಯ.

ಭಾವಃ— ಈ ವಚನದಲ್ಲಿ ಅಂಬಿಗರ ಚೌಡಯ್ಯನು ಶರಣನು ಜಗತ್ತಿನಲ್ಲಿ ಹ್ಯಾಗೆ ವ್ಯವಹರಿಸಬೇಕೆಂಬುದನ್ನು ಹೇಳಿದ್ದಾನೆ. ಶಿವಶರಣರು ನಿಜವಾಗಿ ಸಂಸಾರಿಗಳಲ್ಲ. ಯಾಕಂದರೆ ಅವರ ವರ್ತನೆಯು ಪ್ರಸಾದಮಯುವಾಗಿರುತ್ತದೆ. ಅವರು ಪ್ರಸಾದವನ್ನೇ ಭೋಗಿಸುವರು. ಮತ್ತು ಅದಕ್ಕನುಸಾರವಾಗಿಯೇ ಆಚರಿಸುವರು. ಅವರ ಆಚರಣೆಯು ಸಂಸಾರಿಗಳಂತಹದಲ್ಲ. ಇದರ ತರಹವನ್ನು ವಚನಕಾರನು ಇಲ್ಲಿ ನಿರ್ದೇಶಿಸಿರುವನು.

ಪ್ರಸಾದವೆಂದರೆ ಭೋಗಿಸುವ ವಸ್ತುವನ್ನು ಮೊದಲು ಪರಮಾತ್ಮನಿಗೆ ಅರ್ಪಿಸಿ ಆ ಮೇಲೆ ಅದನ್ನು ಸ್ವೀಕರಿಸುವದೇ ಇರುತ್ತದೆ. ಪರಮಾತ್ಮನಿಗೆ ಅರ್ಪಿಸುವದೆಂದರೆ ತನ್ನಲ್ಲಿ ಇರುವಂತಹ ಲಿಂಗಗಳಿಗೆ ಅರ್ಪಿಸುವದೆಂದು ಷಟ್‌ಸ್ಥಲವು ಹೇಳುತ್ತದೆ. ಪರಮಾತ್ಮನು ತನ್ನಲ್ಲಿಯೇ ಇರುತ್ತಾನೆ. ಆದ್ದರಿಂದ ಅರ್ಪಿಸಲ್ಪಡತಕ್ಕ ಯಾವ ವಸ್ತುವು ಇದೆಯೋ ಅದು ತನ್ನಲ್ಲಿಯೇ ಇದೆ. ಪರಬ್ರಹ್ಮ ವಸ್ತುವು ಶರೀರದಲ್ಲಿಯ ಚೈತನ್ಯದಲ್ಲಿ ಮೂಡಿ ವ್ಯವಹರಿಸುತ್ತದೆ. ಎಂದರೆ ಶರೀರದಲ್ಲೆಲ್ಲ ಚೈತನ್ಯವು ತುಂಬಿದ್ದು ಈ ಚೈತನ್ಯವೇಉಚ್ಚಭಾವದಿಂದ ಲಿಂಗರೂಪಾಗಿ ಹೊರಪಡುತ್ತದೆ. ಈ ಲಿಂಗಕ್ಕೆಯೇ ಮನುಷ್ಯನು ತನ್ನ ಭೋಗ್ಯ ವಸ್ತುಗಳನ್ನುಅರ್ಪಿಸಿ ಸೇವಿಸತಕ್ಕದ್ದು. ಇದೇ ಅವನಿಗೆ ಯೋಗ್ಯ ಮಾರ್ಗವಾಗಿರುವದು. ಇದೇ ಪ್ರಸಾದ ಭೋಗವು.

ದಿರೋ ಎಂದು ಕೇಳಲು ನಾವಿರಿದುದೇ ಸೈ ಎಂದಾ ವೀರರು ನುಡಿ
ಯಲು ಆ ವೇಳೆಯೊಳು ವೈಗಾವಲದ ತಳವಾರರು ಹರಿಗೆಕಾರರು
ನಾಲ್ಕು ಸಾವಿರ ಮಂದಿಯೊದಗಿ ಬೇರೆ ತಗುಳಿಬಿದ್ದು ಕಾದುತ್ತ ಬಂದಿವೆ
ನಲು ಆ ಜಗದೇವ ಮೇಲೆ ಬೊಮ್ಮಣ್ಣಗಳ ಅವರ ಬಿಡಾರಕ್ಕೆ ಕಳು
ಹಲು ಅವರಿಗಾಗ ಕೈಲಾಸದಿಂದ ಪುಷ್ಪಕಂ ಬರಲು ಆ ಪುಷ್ಪಕಂಗಳ
ನೇರಿ ಅವರು ಕೈಲಾಸವನೆಯ್ದಿದರು. ಆ ಶರಣರ ಕಯ್ಯಲಳಿದ ಬಿಜ್ಜ
ಳನು ತನ್ನ ಮುನ್ನಿನ ದಿವ್ಯ ಶರೀರದಿಂ ಕೈಲಾಸ ದ್ವಾರಪಾಲಕತ್ವದ
ಪದವನೆಯ್ದಿದನು.

ಇತ್ತ ಮಡಿವಾಳಯ್ಯ ದೇವರು ಇದಿರಾದ ಬಲ ಸೇನೆಯಂ ಕಂಡು
ನಸುನಗುತ ನಲಿದು ಇದಿರಾಗಿ ಮುರಿಗಿಯಂ ಹೊಯ್ದು ಸುರಿಗೆಯಿಂದಿ
ರಿದು ಅಡ್ಡ ಬಂದವರ ನೆಲಕ್ಕಪ್ಪಳಿಸಿ ಆಕಾಶಕ್ಕೆಟ್ಟು ಸೇನೆಯನೆಲ್ಲವಂ
ಬಯಲಮಾಡಿ ಕಾದುತಿರಲು ಅಳಿಯ ಬಿಜ್ಜಳನು ಆಗ ತನ್ನರಮನೆಯಿಂ
ಪೊರಮಟ್ಟು ಚನ್ನಬಸವೇಶ್ವರ ದೇವರ ಅರಮನೆಯ ಮುತ್ತಲು ಚನ್ನ
ದಂಡನಾಯಕನು ಅರಮನೆಯಿಂದ ಶೂಲದ ಬೊಮ್ಮಣ್ಣಗಳು ಕಿನ್ನರಯ್ಯ
ಗಳು ಮುಂತಾದವರು ಅಳಿಯ ಬಿಜ್ಜಳನ ಸೇನೆಯಂ ಕಂಡು ಆ ಮುಂತಾದ
ವೀರ ಮಾಹೇಶ್ವರರು ಬಾಗಿಲಂ ತೆರೆದು ಹೊರಹೊರಟು ಬಂದು ಕಾದುತ್ತ
ಆ ವೀರ ಭಟರುಗಳ ತಲೆಯಂ ಕೊಯ್ದು ಚಂಡಾಡುತ್ತಿರಲು ಅತ್ತ ಮಡಿ
ವಾಳದೇವರು ಸಕಲ ಸೇನೆಯಂ ಬಯಲ ಮಾಡಿ ಇದರಾದಂತಹ ವೀರರಂ
ಕಡಿದು ಕತ್ತರಿಸಿ ಇರಿದು ಮದಸೊಕ್ಕಿದಾನೆಗಳ ಸುಂಡಿಲಾಗ್ರಮಂ ತುಂಡ
ರಿಸುತ್ತಂ ಅಳಿಂದಾಳುಗಳ ಹೊಯ್ದು, ಕುದುರೆಗೆ ಕುಮರೆಯನಪ್ಪಳಿಸಿ
ತೇರಿಂ ತೇರ ಹಾಯ್ದು ಆ ಬಿಜ್ಜಳರಾಯನ ಬಿದ್ದ ಶವದ ಕೇಶವ ಕೆಯ್ಯ
ಕೊಯ್ದುಕೊಂಡು ತಿರಿಗಿ ಬಂದು ಚನ್ನಬಸವೇಶ್ವರದೇವರರಮನೆಗೆಯ್ದಿ
ತಲೆಗಳಂ ಚಂಡಾಡುತಿರಲು ಅಳಿಯ ಬಿಜ್ಜಳಂ ಕಂಡು ಕಂಗೆಟ್ಟು ಮುರಿ
ದೋಡಿ ಹೋಗಿ ತನ್ನರಮನೆಯಂ ಪೊಕ್ಕು ಬಾಗಿಲವನಿಕ್ಕಿಸಿಕೊಂಡಿ
ರಲು ಇತ್ತ ತಿರುಗಿ ಚನ್ನದಂಡನಾಯಕರರಮನೆಗೆ ಬಂದು ಆ ಪರವಾದಿ
ಬಿಜ್ಜಳನ ಕೆಯ್ಯತೋರಿಸಿ ಆ ಕೆಯ್ಯ ಬೀದಿಗೆ ಹಾಯ್ಕಿಸಿ ಮಡಿವಾಳ
ದೇವರು ಚನ್ನಬಸವಣ್ಣ ಮುಂತಾದ ಎಲ್ಲ ಗಣಂಗಳನು ಅರಮನೆಯಿಂ
ಹೊರಹೊರಡಿಸಿಕೊಂಡು ಎಲ್ಲರನು ತೆರಳಿಸುವ ಸಮಯದಲ್ಲಿ ಸೂರ್ಯ
ನುದಯವಾಗಲು,

ಅಳಿಯ ಬಿಜ್ಜಳನು ಚನ್ನದಂಡನಾಯಕರು ಹೊರಹೊರಟು ಹೋಹ ಸುದ್ದಿಯಂ ಕೇಳಿ ಮತ್ತಂ ತನ್ನ ಮಂದಿ ಕುದುರೆ ಆನೆ ರಥ ಮುಂತಾದ ಚತುರಂಗ ಬಲಮಂ ಕೂಡಿಕೊಂಡು ತನ್ನ ಸರ್ವ ಶಕ್ತಿಯಲ್ಲಿ ಬಂದು ಬೆನ್ನ ಬಿಡದೆ ಹಿಂದಟ್ಟಿ ಕಾದುತ್ತ ನಾಲ್ಕಾರು ಗಾವುದ ಪರಿಯಂತ ತಗುಳು ಮುಗುಳಾಗಿ ಕಾದುತ್ತ ಬರಲು ಮಡಿವಾಳಯ್ಯಗಳು ಕಂಡು ಚನ್ನಬಸವ ರಾಜದೇವರೇ ನೋಡಯ್ಯ ನಿನ್ನ ಭೃತ್ಯನ ಸಾಹಸವನೆಂದು ನಿಲಲಾಗಿ ಅಳಿಯ ಬಿಜ್ಜಳನಂ ಮೂದಲಿಸಿ ಕಾದರವಳ್ಳಿಯಲ್ಲಿ ಕಾಳಗದ ಕಣವಾಗಲು, ಅಳಿಯ ಬಿಜ್ಜಳಂ ಬಂದು ಮುತ್ತಲು, ಇನ್ನೆಲ್ಲಿ ನುಸುಳುವಿರಿ, ನಿಮ್ಮೆಲ್ಲರನು ಈ ಪೊಡವಿಗೆ ಬಲಿಯನಿಕ್ಕುವೆನೆಂದು ತನ್ನ ಚತುರಂಗ ಸೇನಾಬಲ ಸಹಿತಂ ಮುತ್ತಿ ಗಣಂಗಳಂ ಮುತ್ತಿ ಕೋಟಾನುಕೋಟಿ ಬಾಣಗಳಂದೆಸೆಯಲು ಬಿಲ್ಲುಗಾರರ ಬಾಣಂಗಳೆಲ್ಲವು ಸೋಂಕದೆ ಬಯಲೊಳು ಹಾರುತಿರಲು, ನಸುನಗುತೆ ಮಡಿವಾಳಯ್ಯಗಳು ನೋಡು ನೋಡು ಚನ್ನ ಬಸವಣ್ಣ, ಶರಭವೀರ ನಾನೆಂದು ಭುಜಾಸ್ಫಾಳನಂ ಗೈದು, ಮುರಿಗೆಯನೂರ್ಧ್ವಕೆತ್ತಿ ಜಡಿದು ತೂಗಾಡಿ, ಬಸವಲಿಂಗಾ ಎಂದಬ್ಬರಿಸಿ ಗರ್ಜಿಸಲು ಊರ ಕಂಗಳ ಹಿಂಡಿಂಗೆ ಬರಸಿಡಲು ಎರಗಿದಂತಾಯಿತ್ತು. ಮರೆದು ಮುಂಕಾದ ಸೇನೆಯಂ ಕಂಡು ರಾಯನ ಮದದಾನೆಯ ಹಿಂಡುಗಳಂ ನುಗ್ಗಿ ವೀರ ಮಾವುತರು ಜಯ ಜಯ ಎಂದು ಬರಲು ನಿಸ್ಸಾಳಂ ಸೂಳೈಸಿ ಧಳಂ ಧಳಂ ಧುಂ ಧುಂ ಎಂದು ಕೋಟಾನುಕೋಟಿ ರಭಸಂಗಳು ಒಂದು ಲಕ್ಷ ಕರಿಘಟಾವಳಿ ಏರಲು, ಹತ್ತೆಂಟು ಲಕ್ಷ ಕುದುರೆಗಳು ದುವ್ವಾಳಿ ಏರಲು, ಹನ್ನೆರಡು ಲಕ್ಷ ಕಾಲಾಳು ಕವಿದು ಮುತ್ತಲು, ಆಗ ಮಡಿವಾಳಯ್ಯಗಳು ವೀರಗಂಟೆಯಂ ನುಡಿಸಿ ತಾನಾಕಾಶಕ್ಕೆ ಬೆಳೆದು ಖಂಡೆಯ ಹಲಿಗೆ ಬಿಲ್ಲು ನಾಲ್ಕು ಹಸ್ತಂಗಳಿದಿರಿಸಿ ವೀರಗಾಸೆಯನುಟ್ಟು ಉರಿಯನುಗುಳುತ್ತೆ ನೊಸಲ ಕಣ್ಣಾಗ್ನಿಯಂ ಕೆದರುತ್ತೆ ಪರಿದು ಮುರಿಗೆಯನೊಗೆದು ಒಂದೆರಡು ಲಕ್ಷಮಂ ಕೊಂದು ಮತ್ತಮಾ ಸಮರಾಂಗಣದಲ್ಲಿ ಮತ್ತೊಂದು ದಿಕ್ಕಿನಲ್ಲಿ ಕೂಡಿದ ಮಾರಿ ತಂದೆಗಳು ಕುಗಿದ ರಭಸದಿಂದ ಮಡಿದುದು ಎರಡು ಲಕ್ಷವು. ಆ ಕಾಳಗದ ಕಣ ಮೂಗಾವುದ ಮಧ್ಯವೆಲ್ಲ ಪೆಣಮಯವಾಯಿತ್ತು. ಅರಣ್ಯ ಭೂಮಿಯೊಳು ವೀರಭದ್ರಾವತಾರ ಮಡಿವಾಳಯ್ಯನು ಹಲಗೆಯಿಂದ ಭುಜಾಸ್ಫಾಳನಂ ಗೈಯ್ದು ಖಂಡೆಯವ ಜಳಪಿಸಿ ಬಿಲ್ಲನೇರಿಸಿಕೊಂಡು ಸರಳುಸರಳಿಂದೆಚ್ಚು ಯೆಚ್ಚು ಪರಿಪರಿದು ವೀರ ಭಟರ ತಲೆಗಳಂ ಹೊಯಿಹೊಯಿದು ಉರುಳಿಸಿ ಆನೆ ಕುದುರೆ ಸೇನೆಗಳಂ ಸಂಗ್ರಾಮದಲ್ಲಿ ಭಂಗಿಸಿ ಸಂಹಾ

ರಮಂ ಮಾಡಿ ನೊಸಲ ಕಣ್ದೆರೆದು ಅಗ್ನಿಯಿಂದೆಲ್ಲ ಫೌಜುಗಳಂ ಸುಟ್ಟು ಅನಂತ ಮುಕುಟವರ್ಧನರಂ ಬಲಮಂ ಸುಟ್ಟುರುಹಿ ಮತ್ತೊಂದು ದಿಕ್ಕಿನಲ್ಲಿ ಶೂಲದ ಬೊಮ್ಮಣ್ಣಗಳು ತ್ರಿಶೂಲದಿಂದಿರಿದು ನಾಲ್ಕು ಎಂಟು ಲಕ್ಷ ವೀರಭಟರಂ ಸಂಹರಿಸಲು ಅದ್ಭುತ ರಣಮಯವಾಗಿ ಮುರಿದೋಡಿ ಹೋಗಲು ಬಯಲ ಬಸವಣ್ಣನಲ್ಲಿ ಕೂಗಿನ ಮಾರಿತಂದೆಗಳು ಮತ್ತೆ ಕೂಗಲು ಅಳಿಯ ಬಿಜ್ಜಳ ಮುರಿದೋಡಿ ಹೋಗಿ ಮೂರ್ಛಿತನಾಗಿ ತಾನಾಪ್ತ ಬಲ ಸಹಿತ ರಣಭೂಮಿಯಲ್ಲಿ ಎರಡು ಜಾವ ಮೂರ್ಛಿತನಾಗಿರ್ದು ಎಚ್ಚತ್ತು ಬಾಯ ಬಿಡುತ್ತ ಮುರಿದು ತಿರುಗಲು,

ಇತ್ತ ಮಡಿವಾಳಯ್ಯಗಳು ಶೂಲದ ಬೊಮ್ಮಣ್ಣಗಳು ಮುರಗೋಡ ತಟಾಕದಲ್ಲಿ ಖಂಡೆಯಂ ತ್ರಿಶೂಲಂಗಳಂ ತೊಳೆದುಕೊಂಡು ಚನ್ನಬಸವ ರಾಜದೇವರಿಗೆರಗಿ ನೀವಿನ್ನು ಮುಂದಕ್ಕೆ ಚಿತ್ತೈಸಿ, ನಾವು ನಮ್ಮ ಕಲಿದೇವರಲ್ಲಿಗೆ ಪೋದಪೆವು. ಅಲ್ಲಿ ನಮ್ಮ ಸಮಯಾಚಾರದ ಮೂರ್ತಿ ಮಲ್ಲಿಕಾರ್ಜುನದೇವರಿದ್ದಾರೆ ಅವರಿಗೆ ನಾನು ಬರುತಿಹೆನೆಂದು ಬಿನ್ನಹಂ ಮಾಡಿ ಬಂದಿದ್ದೇನೆ. ನಾವಲ್ಲಿಗೆ ಹೋಗಿ ಲಿಂಗದಲ್ಲಿ ಐಕ್ಯವಾಗಿಹೆವು. ಎಲ್ಲ ನಾಲ್ಕೆಂಟು ಗಳಿಗೆ ಹಿಂಚುಮುಂಚು ಅಲ್ಲಿ ಇಲ್ಲಿ ಎಂಬ ಸಂದೇಹಬೇಡ ನಾವು ಕೈಲಾಸದಲ್ಲಿ ಕಲಿದೇವರ ಮುಂದೆ ಸಂದಿಸಿಹೆವು. ಇದು ಗೂಡಿ ನಾವು ಲಿಂಗದಲ್ಲಿ ಎರಡು ಬಾರೆ ಅಡಕವಾದೆವು. ಎಂದು ಶರಣಾರ್ಥಿಯಂ ಮಾಡಿ ಚನ್ನಬಸವರಾಜದೇವರಿಗೆ ಎಲ್ಲ ಪ್ರಮಥರಿಗೆ ಬೀಳ್ಕೊಂಡು ಕಲಿದೇವರ ಶಿವಾಲಯಕ್ಕೆ ಬಂದು ತಮ್ಮ ಸಮಯಾಚಾರದ ಮಲ್ಲಿಕಾರ್ಜುನ ದೇವರಿಗೆ ನಮಸ್ಕಾರಮಂ ಮಾಡಿ ಶ್ರೀಪಾದಂಗಳಂ ತೊಳೆದು ಪಾದ ತೀರ್ಥ ಪ್ರಸಾದಮಂ ತಳೆದು, ನೀವು ಕೈಲಾಸಕ್ಕೆ ಚಿತ್ತೈಸಿ ಎಂದು ಬಿನ್ನಹಂ ಮಾಡಲು, ಕೇಳಯ್ಯ ಮಡಿವಾಳಯ್ಯಗಳೆ ಚನ್ನಬಸವಣ್ಣನ ಕೂಡಿ ನೀವು ಬಾಹ ಪರಿಯಂತರವು ನಾವೀ ಮರ್ತ್ಯದಲ್ಲಿ ಇದ್ದೆವು ಎಂದು ಮಲ್ಲಿಕಾರ್ಜುನ ದೇವರು ನಿರೂಪಮಂ ಕೊಡಲು, ಹಾಗಾದರೆ ದೇವರುಗಳು ಉಳಿವೆಗೆ ಚಿತ್ತೈಸಿ, ಗಣಪರ್ವಮಂ ನೋಡಿ ಅಸಂಖ್ಯಾತ ಮಹಾಗಣಂಗಳು ಉಯ್ಯಾಲೆಯನೇರಿ ತೂಗಿ ಕೈಲಾಸಕ್ಕೆ ಕಳುಹುತಿರ್ಪ ಆನಂದಮಂ ನೋಡಿ ದೇವರು ಚಿತ್ತೈಸಿ ನಿಮ್ಮಿಚ್ಛೆಯಿಂದ ಬರಬಹುದು, ಅಲ್ಲಿಗೆ ರುದ್ರಮುನಿ ದೇವರು ಚಿತ್ತೈಸಿದ್ದಾರೆ, ಅವರ ಕೂಡಿಕೊಂಡು ಸೊನ್ನಲಾಪುರಕ್ಕೆ ಬಂದು ಸಿದ್ಧರಾಮಯ್ಯ ದೇವರ ಸಂದರ್ಶನವಾಗಿ ನಿಮ್ಮ ನಿಮ್ಮ ಪ್ರಾಣ

ಸಂಧಾನವ ಮಾಡಿ ಶಿವಯೋಗ ಮುದ್ರೆಯಲ್ಲಿ ಸನ್ನದ್ಧರಾಗಿ ನಿಮ್ಮ ಸತ್ಯ ಶರಣರ ನೆನವುತ್ತಲಿರಿ ಸ್ವಾಮಿ ಎಂದು ಹೇಳಿ ತಾವು ತಮ್ಮ ಕರಸ್ಥ ಲದ ಲಿಂಗವಂ ನೋಡಿ ಆನಂದಾಮೃತರಸದಲ್ಲಿ ಮುಳುಗಿ ಲಿಂಗ ದಲ್ಲಿ ಐಕ್ಯವಾಗಲು,

ಇತ್ತ ಮುಂದೆ ಏಳ್ನೂರೆಪ್ಪತ್ತು ಅಮರ ಗಣಂಗಳು ಹಿಂದಣಿಂದೆ ಚನ್ನಬಸವೇಶ್ವರ ದೇವರು ಸಕಲ ಗಣಂಗಳು ದಾರಿಯಲ್ಲಿ ಬಂದು ಕೂಡಿ ಕೊಂಡು ನಡೆಗೊಂಡು ಉಳಿವೆಯ ಮಹಾಮನೆಗೆ ಬಂದು ಅಸಂಖ್ಯಾತ ಮಹಾಗಣಂಗಳ ತಿಂಥಿಣಿಯೊಳು ಮೂರ್ತಗೊಂಡು ಒಡ್ಡೋಲಗಂಗೊಟ್ಟು ಇರಲು,

ಆ ವೇಳೆಯಲ್ಲಿ ಗಂಗಾಂಬಿಕೆಯು ಸಮಸ್ತ ಶಿವಗಣಂಗಳ ರಾಣಿ ವಾಸಂಗಳು ಎಲ್ಲ ಮಹೇಶ್ವರರಿಗೆ ಬಂದು ನಮಸ್ಕಾರಂಗಳಂ ಮಾಡಿ ಎಲ್ಲ ದೇವರುಗಳಿಗೆ ನೈವೇದ್ಯವಾಯಿತ್ತೆಂದು ಬಿನ್ನಹಂ ಮಾಡಲು, ಆ ವೇಳೆಯಲ್ಲಿ ಮಡಿವಾಳ ದೇವರ ಸಮಯಾಚಾರದ ಮಲ್ಲಿಕಾರ್ಜುನ ದೇವರು ರುದ್ರಮುನಿ ದೇವರು ಬಿಜಯಂ ಮಾಡಲು, ಎಲ್ಲ ಗಣಂಗಳು ಇದಿರೆದ್ದು ಚನ್ನಬಸವೇಶ್ವರ ದೇವರು ನಮಸ್ಕಾರವಂ ಮಾಡಿ ಗದ್ದುಗೆಯಲ್ಲಿ ಮೂರ್ತಗೊಳಿಸಿ ಅರ್ಘ್ಯ ಪಾದ್ಯಾಚಮನಂಗಳಂ ಕೊಟ್ಟು ಸತ್ಕರಿಸಲು ಚನ್ನ ದಂಡನಾಯಕರು ಎಲ್ಲ ಪ್ರಮಥರಿಗು ನಿಮಗು ನಾವು ನಮಸ್ಕಾರಂಗಳಂ ಮಾಡಿದೆವೆಂದು ಮಡಿವಾಳದೇವರು ನೀವು ನಿರೂಪಿಸುವುದೆಂದು ನಿರೂ ಪಮಂ ಕೊಡಲು ನಮಗೆ ಹಿಪ್ಪರಿಗೆಗೆ ತಿರುಗಿ ಬನ್ನಿಯೆಂದು ಹೇಳಿ ತಾವು ಹಿಪ್ಪರಿಗೆಯ ಕಲಿ ದೇವರಲ್ಲಿ ತಮ್ಮ ಕರಸ್ಥಲದ ಇಷ್ಟಲಿಂಗವಂ ನಿರೀಕ್ಷಿಸುತ್ತ ಐಕ್ಯವಾದರು ಎಂದು ನಿರೂಪಮಂ ಕೊಡಲು, ಎಲ್ಲ ಗಣಂಗಳು ಪುಷ್ಪಾಂ ಜಲಿಯಂ ಮಾಡಿ ವಿಭೂತಿಯಂ ಸಕಲ ಗಣಂಗಳಿಗೆ ಕೊಟ್ಟು ಉಘೆ ಚಾಂಗು ಭಲಾ ಎಂದು ಘೋಷಿಸಿ ಸಂತೋಷವಾಗಿ ಆ ವೇಳೆಯಲಿ ಚನ್ನ ಬಸವರಾಜ ದೇವರೇ ಸಮಸ್ತ ಗಣಂಗಳಿಗೆ ಗಣಪರ್ವ ನೈವೇದ್ಯವಾಗಿ ಸಕಲ ಗಣಂಗಳಿಗೆ ಪಾದಾರ್ಚನೆಯಂ ಮಾಡಿ. ಗದ್ದುಗೆಯೊಳಗೆ ಸೇರುವೆ ಯಾಗಿ ಮೂರ್ತಂಗೊಳಿಸಿ ಶಿವಾರ್ಚನೆಗಳಂ ಮಾಡಿಸಿ ರಂಭಾಪತ್ರಂಗಳಂ ಎಡೆ ಮಾಡಿಸಿ ಸಮಸ್ತ ಶಾಕಪಾಕಂಗಳಂ ಅನೇಕ ಪ್ರಕಾರದಿಂದೆ ರಚಿ ಸಿದ ಪರಮಾನ್ನಗಳಂ ಸಕಲ ಬೋನಂಗಳಂ ಅನೇಕ ತರದ ಕಜ್ಜಾಯಂ

ಗಳಂ ಅನೇಕವಾದ ಲೇಹ್ಯ ಚೋಷ್ಯ ಪಾನ್ಯಂಗಳಂ ಹಲತೆರದ ಉಪ್ಪ ಕಾಯಿಗಳಂ ಸಂಡಿಗೆ ಹಪ್ಪಳ ಹಿಂಡೆ ಪಚ್ಚಡಿ ಘೃತ ಪಾಯಸ ದಧಿ ಮುಂತಾದ ಸಕಲ ಕೈಕರಣಂಗಳಂ ಕಮ್ಮಾನ ಕಳವೆಯಕ್ಕಿಯ ನೈವೇದ್ಯಮಂ ಎಡೆ ಮಾಡಿ ನಮಸ್ಕರಿಸಿ ಎಲ್ಲ ಗಣಂಗಳು ಲಿಂಗಾರ್ಪಿತ ಮಾಡಿ ಆರೋಗಣೆಯಂ ಮಾಡಿ ತೃಪ್ತಿಯನೈಯ್ದಿ ನಂದಿಸುತಿರ್ಪ ಸಮಯದಲ್ಲಿ ಚನ್ನಬಸವೇಶ್ವರ ದೇವರು ವಿಭೂತಿ ವೀಳೆಯುವನಿರಿಸಿ ಅಡ್ಡ ಬಿದ್ದು ನಮಸ್ಕಾರಮಂ ಮಾಡಿ ಪ್ರಭುದೇವರು ಸಿದ್ಧರಾಮಯ್ಯ ದೇವರು ಬಸವೇಶ್ವರ ದೇವರು ಹನ್ನೆರಡು ಸಾವಿರ ಷಟ್‌ಸ್ಥಲದ ಬ್ರಹ್ಮಿಗಳು ಏಳ್ನೂರೆಪ್ಪತ್ತು ಅಮರ ಗಣಂಗಳು ಅಸಂಖ್ಯಾತ ಪ್ರಮಥ ಗಣಂಗಳು ಮುಖ್ಯವಾದ ಸಮಸ್ತ ಶಿವಭಕ್ತ ಮಹೇಶ್ವರ ಕಾರುಣ್ಯ ಪ್ರಸಾದ ಬಲದಿಂದೆ ನಾನು ಬಿನ್ನಹಂ ಮಾಡಿಹೆನು, ನಮ್ಮ ಬಿಜ್ಜಳರಾಯಂಗೆ ಕೈಲಾಸದಲ್ಲಿ ದ್ವಾರಪಾಲಕ ಮಣಿಹವಾಯಿತ್ತು, ಮುಂದೆ ಏಳ್ನೂರೆಪ್ಪತ್ತು ವರುಷಕ್ಕೆ ಬಿಜ್ಜಳನ ವಂಶದಲ್ಲಿ ಹುಟ್ಟಿದ ವೀರಬಸವಂತಂಗೆ ಕಲ್ಯಾಣದ ರಾಜಪಟ್ಟವಾದಿತ್ತು, ನಮ್ಮ ಕಲ್ಯಾಣದಲ್ಲಿರ್ದ ಯತಿಗಳು ಆಂದಿಂಗೆ ನಮ್ಮ ಕಂಡಾರು ಎಂದು ನಿರೂಪಿಸಿ, ಚನ್ನಬಸವರಾಜದೇವರು ಹಡಪದ ರೇಚಣ್ಣಗಳ ಕರೆದು ಮುಖಮಂ ನೋಡಿ, ಬಾರೈ ಎಲೆ ಚನ್ನಬಯಲ ಬಸವಣ್ಣನಲ್ಲಿ ನಾವು ಮಜ್ಜನಮಂ ಮಾಡಿ ಬಾಹಾಗ ಹಾವುಗೆಯಂ ಮರೆದು ಬಂದೆವು. ಆ ಹಾವುಗೆಯಂ ಕೊಂಡು ಬಾ ಹೋಗು ಎಂದು ಕಳುಪಿ ಸೊಡ್ಡಳ ಬಾಚರಸರಂ ಕರೆದು ಈ ಸಿದ್ಧಗಿರಿಯ ಮೇಲಣ ವಟವೃಕ್ಷಾಗ್ರದ ಉತ್ತರ ಮುಖವಾಗಿರ್ದ ಶಾಖೆಗೆ ವಿಭೂತಿಯ ತೊಟ್ಟಿಲ ಮಹದುಯ್ಯಾಲೆಯಂ ಚಿನ್ನದ ಸರಪಳಿಗಳ ಕಟ್ಟಿ ಸಮಸ್ತ ಗಣಂಗಳ ತೂಗಿ ಬಿಡಿರಯ್ಯ ಎಂದು ನಿರೂಪಿಸಲು ಹಡಪದ ರೇಚಣ್ಣಗಳು ಮರೆಯಲ್ಲಿ ನಿಂದು ಎಲ್ಲರಂ ತೂಗಿ ಬಿಡುವ ವಾರ್ತೆಯಂ ಕಂಗಳು ತುಂಬಿ ನೋಡಿ ಕಡೆಯಲ್ಲಿ ಚನ್ನಬಸವದಂಡನಾಯಕರು ಸೊಡ್ಡಳ ಬಾಚರಸರು ಮೋಳಿಗೆಯ ಮಾರಯ್ಯಗಳು ರುದ್ರಮುನಿದೇವರು ಮಲ್ಲಿಕಾರ್ಜುನ ದೇವರು ಈ ಐವರು ಇಹಲ್ಲಿ ಹಡಪದ ರೇಚಣ್ಣ ಹಾವುಗೆಯಂ ತರಹೋಗಲು ಇತ್ತ ರುದ್ರಮುನಿ ದೇವರಿಗೆ ನಮಸ್ಕರಿಸಿ ಓಲೆಯಂ ಬರೆದು ರೇಚಣ್ಣನಂ ಪಾಲಿಸು ಎಂದು ರುದ್ರಮುನಿ ದೇವರ ಪಾದದಲ್ಲಿರಿಸಿ ಉಯ್ಯಾಲೆಯ ತೊಟ್ಟಿಲಂ ತಾವು ಮೂವರು ಏರಿ ಜಾಗಿಸಿ ತೂಗಿಕೊಂಡು ಚಿತ್ತೈಸಿದರು.

ಇತ್ತ ರುದ್ರಮುನಿ ದೇವರು ಮಲ್ಲಿಕಾರ್ಜುನ ದೇವರು ಈರ್ವರೆ ಉಳಿದು ಮೂರ್ತಗೊಂಡಿಹ ಸಮಯದಲ್ಲಿ ಹಡಪದ ರೇಚಣ್ಣಗಳು ಬಂದು ನೋಡುವಾಗಳೆ ಎಲ್ಲ ಗಣಂಗಳು ಸಹಿತ ಚನ್ನಬಸವರಾಜ ದೇವರು ಕೈಲಾಸಕ್ಕೆ ತಮ್ಮ ಕಾಯ ಸಹಿತ ಶಿವನಿರೂಪದಿಂ ಬಂದು ಅನೇಕ ಪುಷ್ಪಂಕಗಳನೇರಿ ಚಿತ್ತೈಸಿದುದಂ ಕಂಡು ರುದ್ರಮುನಿದೇವರು ದುಃಖದಿಂದಿರೆ, ರೇಚಣ್ಣಗಳು ಎಲೆ ಗುರುವೆ ಎನ್ನೊಡೆಯ ಚನ್ನಬಸವಣ್ಣನು ನಮ್ಮ ಬಿಟ್ಟು ಹೋದರೆಂದು ಬಿನ್ನಹಂ ಮಾಡಲು ಬಾರಯ್ಯ ರೇಚಣ್ಣಗಳೆ ನೀವು ಗಣಂಗಳಿಗೆ ವೀಳೆಯವಂ ಕೊಡುವಾಗ ಎಲ್ಲರಿಗೆ ಬಿಳಿ ಎಲೆಯಂ ಕೊಟ್ಟು ಒಬ್ಬ ಮಹೇಶ್ವರಗೆ ಕರಿಯ ಎಲೆಯ ವೀಳೆಯ ಕೊಡಲಾಗಿ ಚನ್ನಬಸವಣ್ಣನು ತನ್ನ ಬಿಳಿ ಎಲೆಯ ವೀಳೆಯವನವರಿಗೆ ತಾವು ಕೊಟ್ಟು, ಲಿಂಗಾರ್ಪಿತವ ಮಾಡಿದರಂತೆ. ಅದು ಕಾರಣ ಕೈಲಾಸಕ್ಕೆ ಹೋದಲ್ಲಿ ಎಲ್ಲರನು ಬೇರೆ ಬೇರೆ ವಿಚಾರಿಸುವಾಗಲು ತಾಕು ಸೋಕು ತಪ್ಪು ತಡೆಗಳು ಕಪ್ಪು ಕಿಲ್ಮಿಷವಿದ್ದರೆ ಮರ್ತ್ಯಕ್ಕೆ ತಿರುಗಿ ಕಳುಹಿಸಿ ಕೊಂಡು ಬರುವರು. ಆ ತಪ್ಪ ಕಳೆದುಕೊಂಡು ಬಂದಲ್ಲದೆ ಒಪ್ಪರು. ಅದು ಕಾರಣ ಚನ್ನಬಸವಣ್ಣನು ನಿಮ್ಮನು ಇಲ್ಲಿರಿಸಿ ನಿಮಗೆ ತಮ್ಮ ನಿರೂಪವನು ರಹಸ್ಯದಿ ಬರೆದು ಕರಿ ಎಲಿಯ ಗಳಿಗೆಯನು ನಮ್ಮಲಿರಿಸಿ ತಾವು ಚಿತ್ತೈಸಿದರೆಂದು ಆ ನಿರೂಪದ ಓಲೆಯನು ಕರಿ ಎಲೆಯ ಗಳಿಗೆಯನು ಕೊಡಲಾಗಿ ನೋಡಿಕೊಂಡರು. ಆ ಓಲೆಯ ನಿರೂಪವೆಂತೆಂದೊಡೆ, ಚನ್ನದಂಡನಾಯಕರು ರೇಚಣ್ಣಗಳಿಗೆ ಹೇಳುವ ನಿರೂಪವು—ನೀನು ಮಹೇಶ್ವರರಿಗೆ ವೀಳೆಯ ಕೊಡುವಾಗ ಪ್ರಪಂಚ ಬಂದಿತ್ತಾಗಿ ಅದು ಕಾರಣ ಇನ್ನು ಮರ್ತ್ಯದಲ್ಲಿ ನಾ ಬಾಹ ಪರಿಯಂತರವು ಉಳಿವೆಯ ಸಂಗಮನಾಥನ ರಂಗಮಂಟಪದಲ್ಲಿ ನೀನು ಶಿವಯೋಗೆ ಸಮಾಧಿಯಲ್ಲಿರೆ, ನಾವು ತಿರಿಗಿ ಮರ್ತ್ಯಕ್ಕೆ ಏಳ್ನೂರೆಪ್ಪತ್ತು ವರುಷದ ಮೇಲೆ ಆನಂದನಾಮ ಸಂವತ್ಸರಕ್ಕೆ ಉಳಿವೆಗೆ ಬಂದು ನಿನ್ನ ಕೂಡಿಕೊಂಡು ನಾವು ಕಲ್ಯಾಣಕ್ಕೆ ಬಂದೆವು. ಉಳಿವೆಯಲ್ಲಿ ನಾವು ಗಣ ಪರ್ವಮಂ ಮಾಡಿ ಮಿಕ್ಕ ಪದಾರ್ಥಂಗಳಂ ಸಕಲ ನಮಸ್ಕಾರಂಗಳಂ ಮರ್ತ್ಯಲೋಕದ ಮಹಾಗಣಂಗಳಿಗೆ ಪರ್ವಮಂ ಮಾಡಿ ಸ್ವರೂಪು ರೂಪು ಕೊಪ್ಪರಿಗೆ ಕೊಡಪಾನ ತಾಮ್ರ ಭಾಜನಂಗಳನು ಆ ಚರಲಿಂಗಕ್ಕೆ ಶಿವಾರ್ಪಣಂಗೈದು ಸುಖದಿಂದಿಹುದು, ನಮ್ಮ ಗಣಂಗಳು ಆರೋಗಿಸಿದ ಪತ್ರ ಭಾಜನಂಗಳನೆಲ್ಲವನು ದಾನ ಮಾಡಿ ಕೊಳ್ಳದಲ್ಲಿ ನಿಕ್ಷಪಮಂ ಮಾಡುವುದು, ನೀನು ನಮ್ಮ ಪ್ರಮಥ

ಗಣಂಗಳನು ಹೃದಯುದಲ್ಲಿ ನೆನೆವುತ್ತಿರಲು ಕೂಡಲ ಚನ್ನಸಂಗಮನಾಥ ಸಾಕ್ಷಿಯಾಗಿ ನಿನ್ನನು ನಾವು ಕಲ್ಯಾಣಕ್ಕೆ ಕರಕೊಂಡು ಹೋದೆವು ಹಡ ಪದ ರೇಚಣ್ಣ, ಎಂದು ಇರಿಸಿ ಹೋದ ನಿರೂಪಮಂ ನೋಡಿಕೊಂಡು ರುದ್ರಮುನಿದೇವರೇ ನಾನೊಬ್ಬರಿಗೆ ಕರೆ ಎಲೆ ವೀಳೆಯ ಕೊಟ್ಟುದುಂಟು. ಅದು ಕಾರಣ ನನ್ನನಿಲ್ಲಿರಿಸಿದರೈಯ್ಯಾ, ಎಂದು ಹೇಳುವ ಸಮಯ ದಲ್ಲಿ ಮರ್ತ್ಯಲೋಕದ ಮಹಾಗಣಂಗಳು ಹಂಚುಕಂಥೆ ಚರಲಿಂಗವು ವಿರಕ್ತ ಮಹೇಶ್ವರರು ಅತೀತ ದೇವರು ಸಹವಾಗಿ ಒಂದೆರಡು ಲಕ್ಷ ಚಿತ್ತೈಸಲು ಆ ರೇಚಣ್ಣಗಳು ಇದಿರೆದ್ದು ನಮಸ್ಕಾರಂಗಳಂ ಮಾಡಿ ಆ ಮಹೇಶ್ವರರಿಗೆಲ್ಲ ಗಣ ಪರ್ವಮಂ ಮಾಡಿ ಆ ದೇವರುಗಳೆಲ್ಲರಿಗೆ ಆ ರೋಗಣೆಯುಂ ಮಾಡಿಸಿ ಎಲ್ಲ ತೃಪ್ತಿಯಾಗಿ ಮೂರ್ತಂಗೊಂಡಿರಲು ಆ ಮಹಾ ಮಹಂತಿಂಗೆ ನಮಸ್ಕಾರಮಂ ಮಾಡಿ ಚಿನ್ನ ಬೆಳ್ಳಿಯ ಕೊಪ್ಪರಿಗೆ ಕೊಡಪಾನಂಗಳಂ ಚಿನ್ನ ತಾಮ್ರ ಭಾಜನಂಗಳಂ ಉಳಿದ ಹೊನ್ನ ಜಾಳಿಗೆಗಳಂ ಚಿನ್ನದ ಚೀನಾಂಬರದ ವಸ್ತ್ರಂಗಳಂ ಬಂದ ಮಹೇಶ್ವರ ರಿಗೆಲ್ಲ ಶಿವಾರ್ಚನೆಯುಂ ಉಪಕರಣಂಗಳಂ ರುದ್ರಮುನಿದೇವರು ಮಲ್ಲಿಕಾ ರ್ಜುನ ದೇವರ ಮುಂದೆ ಅವರ ನಿರೂಪವಿಡಿದು ಎಲ್ಲ ದ್ರವ್ಯಂಗಳಂ ಕೊಟ್ಟು ಶರಣೆಂದು ಆ ಮಹಾಗಣಂಗಳನೆಲ್ಲರನು ಕಳುಹಿ ಮತ್ತೆ ಪ್ರಸಾ ದಾಪರ್ಣಂಗಳೆಲ್ಲವನು ಒಂದು ಕೊಳ್ಳದೊಳಗಿಂಬಿಟ್ಟು ದಹನಮಂ ಮಾಡಿ ಆ ದಹನವಾದ ಭಸ್ಮವಂ ನಿಕ್ಷೇಪಿಸಿ ಆ ಉಯ್ಯಾಲೆಯ ತೊಟ್ಟಿಲ ಸರ ಪಳಿಗಳಂ ತೆಗೆದು ನಿಕ್ಷೇಪದಿಂದಿರಿಸಿ ಹಡಪದ ರೇಚಣ್ಣಗಳು ನುಡಿದ ಪ್ರಸ್ಥಾವದ ವಚನ,

ಈ ವಚನವ ನಾನು ನಿಮ್ಮ ಶರಣರ ಕೃಪೆಯಿಂದೆ ಪೇಳ್ವೆನು. ಒಂದು ಕರೆ ಎಲೆಯ ಪ್ರಪಂಚಿನಿಂದ ನಾ ಮರ್ತ್ಯದಲ್ಲಿರಬೇಕಾಯಿತ್ತು ಗುರು ಲಿಂಗ ಜಂಗಮಕ್ಕೆ ಪ್ರಪಂಚವ ಮಾಡಿ ಇಕ್ಕಿದರೆ ಎಕ್ಕಲ ನರಕ ತಪ್ಪದು. ಅದು ಕಾರಣ ಶಿವಗಣಂಗಳಿಗೆ ಪ್ರಪಂಚಿಲ್ಲದೆ ನೀಡಿರಯ್ಯ. ನಮ್ಮ ಶರಣರ ಶ್ರೀಪಾದ ಪದ್ಮಂಗಳ ಕಾಣಬೇಕಾದರೆ ಗುರುಲಿಂಗ ಜಂಗಮಕ್ಕೆ ತನು ಮನ ಧನಂಗಳಂ ಸಮರ್ಪಿಸಿ ನಿತ್ಯ ಲಿಂಗಾರ್ಚನೆಯುಂ ಮಾಡಿ ಶುದ್ಧಾ ತ್ಮರಾಗಿರಯ್ಯ. ನಮ್ಮ ಪುರಾತರು ತಿರಿಗಿ ಮರ್ತ್ಯಲೋಕಕ್ಕೆ ಬಾಹ ಕಾಲಕ್ಕೆ ಕಲ್ಯಾಣ ಹಾಳಾದಿತ್ತು. ಮಧುವಯ್ಯಗಳ ಬಾಗಿಲ ಮುಂದಣ ಗರುಡ ಗಂಭ ಪೂರ್ವ ಮುಖವಾಗಿರ್ದುದು. ತಿರುಗಿ ಈಶಾನ್ಯ ಮುಖವಾದುದೇ

ಸಾಕ್ಷಿ. ಮರ್ತ್ಯದಲ್ಲಿ ಕರುಳಿಲ್ಲದ ಕಲಿಗಳಾದ ನಮ್ಮ ಶಿವಭಕ್ತರು ದಾಸೋಹಂಗಳಂ ಮಾಡುವದೇ ಸಾಕ್ಷಿ. ಎನ್ನೊಡೆಯ ಚನ್ನಬಸವರಾಜದೇವರು ನಿರೂಪಿಸಿದ ವಚನ ಹನ್ನೆರಡು ಸಾವಿರ. ಅವಷ್ಟು ನನ್ನ ಬರಹ. ನಾನೇ ಹೇಳಿದ ವಚನ ಹನ್ನೊಂದಕ್ಕೆ ಕಡೆ ಇಲ್ಲವು. ಉಳಿವೆಯ ಮಹಾಮನೆಯಲ್ಲಿ ಎನ್ನೊಡೆಯ ಮಹೇಶ್ವರನು ರುದ್ರಮುನಿದೇವರ ಮುಂದೆ ಓದಿ ಹೇಳಿದ ಕಾಲಜ್ಞಾನದ ವಚನ. ರಾಕ್ಷಸ ನಾಮ ಸಂವತ್ಸರದ ಕಾರ್ತೀಕ ಶುದ್ಧ ಪೌರ್ಣಿಮೆಯ ಮಂಗಳವಾರದ ರಾತ್ರೆಯಲ್ಲಿ ಜಗದೇವ ಮೊಲ್ಲೆ ಬೊಮ್ಮಣ್ಣಂಗಳು ಪಂಜುಗಾರರಾಗಿ ಶರಣರ ನೋಯಿಸಿದ ಪರವಾದಿ ಬಿಜ್ಜಳನ ಇರಿದು ಕೊಂದು ಕೈಲಾಸಕ್ಕೆ ಹೋದರು. ಬುಧವಾರ ರಾತ್ರೆಯಲ್ಲಿ ಮಡಿವಾಳಯ್ಯಗಳು ಕಾದಿ ಸೇನೆಯಂ ಸಂಹರಿಸಿ, ಉದಯದಲ್ಲಿ ಚನ್ನದಂಡನಾಯಕರು ಉಳಿವೆಗೆ ಹೋಹಲ್ಲಿ, ಅಳಿಯ ಬಿಜ್ಜಳನ ಸಕಲ ಸೇನೆಯನೆಲ್ಲ ಮಡಿವಾಳಯ್ಯಗಳು ಕೂಗಿನ ಮಾರಿತಂದೆಗಳು ಶೂಲದ ಬೊಮ್ಮಣ್ಣಗಳು ಸಮಸ್ತ ವೀರಗಣಂಗಳು ಕಾದಿ ಸಂಹಾರವಂ ಮಾಡಿ ಉಳಿವೆಯ ಮಹಾಮನೆಗೆ ಬಂದರು. ಬಂದ ರಾತ್ರಿಯಲ್ಲಿಯೆ ಕೈಲಾಸಕ್ಕೆ ಬಿಜಯಂ ಗೆಯ್ದರು. ಅವರು ಹೋದ ನಾಲ್ಕು ಗಳಿಗೆಗೆ ಚನ್ನಬಸವರಾಜದೇವರು ಚಿತ್ತೈಸಿದರು. ಆ ಕಾಲದಲ್ಲಿ ನಾನು ಬಯಲ ಬಸವಣ್ಣನಲ್ಲಿರ್ದು ಎನ್ನೊಡೆಯ ಚನ್ನಬಸವಣ್ಣನಲ್ಲಿ ಹಾವುಗೆಯನರಸಿ ತೆಗೆದುಕೊಂಡು ಶಿರದಲ್ಲಿ ಹೊತ್ತುಕೊಂಡು ಬಂದೆನು. ಬಂದು ರುದ್ರಮುನಿದೇವರು ಮಲ್ಲಿಕಾರ್ಜುನ ದೇವರ ಶ್ರೀಪಾದ ಪದ್ಮಂಗಳಲ್ಲಿ ಚನ್ನದಂಡನಾಯಕರ ನಿರೂಪಮಂ ಇಸಿದುಕೊಂಡು ಓದಿ ಆ ಮರುದಿವಸದಲ್ಲಿ ಮರ್ತ್ಯಲೋಕದಲ್ಲಿ ಮಹಾಗಣಂಗಳಿಗೆ ಗಣಪರ್ವಮಂ ಮಾಡಿ ಉಳಿದ ದ್ರವ್ಯಂಗಳಂ ಶಿವಗಣಂಗಳಿಗೆ ಶಿವಾರ್ಪಣಮಂ ಮಾಡಿ ಆ ಪತ್ರ ಭಾಜನಂಗಳಂ ವಹಿಸಿ ನಿಕ್ಷೇಪಿಸಿದೆನು. ಇನ್ನು ರುದ್ರಮುನಿದೇವರೆ ನನಗೆ ನೀವು ಕೃಪೆಯಿಂದೆ ಸಂಗಮನಾಥನ ರಂಗಮಂಟಪದ ಮಧ್ಯದಲ್ಲಿ ಶಿವಯೋಗ ಸಮಾಧಿಯಂ ತೋರಿದಿರಿ. ಚನ್ನಬಸವಣ್ಣ ಪ್ರಿಯ ಕೂಡಲ ಚನ್ನಸಂಗನ ಶರಣರು ಸಾಕ್ಷಿಯಾಗಿ ಎನ್ನೊಡೆಯನ ಹಾವುಗೆಗಳು ಸಹಿತ ಏಳ್ನೂರೆಪ್ಪತ್ತು ಅಮರಗಣಂಗಳಂ ನೆನೆವುತ್ತ ಅಸಂಖ್ಯಾತ ಪುರಾತನರ ನೆನವುತ್ತ ನಾನು ಶಿವಯೋಗ ಸಮಾಧಿಯಲ್ಲಿ ಸನ್ನದ್ಧನಾದೆನು.

ಚನ್ನಬಸವಾದಿ ಪ್ರಮಥರೈಕ್ಯಸ್ಥಲದ ವಚನ ಸಮಾಪ್ತ.

## ಪ್ರಭುದೇವರು
## ನಿರೂಪಿಸಿದ ಕಾಲಜ್ಞಾನದ ವಚನ.

ಕಲ್ಯಾಣದ ಮಹಿಮೆಯನ್ನು ಎಲ್ಲ ಪ್ರಮಥಗಣಂಗಳ ಮುಂದೆ ಬಿನ್ನಹ ಮಾಡಿಹೆನು. ಸುಚಿತ್ತದಿ ಕೇಳಿ ಕೃತಾರ್ಥರಾಗಿರಯ್ಯ.

ಕೈಲಾಸವಪ್ಪ ಶ್ರೀ ಕಲ್ಯಾಣದಲ್ಲಿ ಲಕ್ಷದ ಮೇಲೆ ತೊಂಭತ್ತಾರು ಸಾವಿರ ದೇವಾಲಯ, ಅವಕ್ಕೆ ಮುಖ್ಯವಾದ ತ್ರಿಪುರಾಂತಕ ದೇವಾಲಯ, ಅದರ ಮುಂದಣ ಅನುಭಾವ ಮಂಟಪದಲ್ಲಿ ಪ್ರಭುದೇವರು ಸಿದ್ಧರಾಮಯ್ಯ ದೇವರು ಮೋಳಿಗೆಯ ಮಾರಯ್ಯಗಳು ಮುಸಡಿಯ ಚೌಡಯ್ಯಗಳು ವೀರ ಮಡಿವಾಳ ಮಾಚಯ್ಯಗಳು ಏಳ್ನೂರೆಪ್ಪತ್ತು ಅಮರಗಣಂಗಳು ಎಲ್ಲ ಅಸಂಖ್ಯಾತ ಮಹಾ ಗಣಂಗಳು ಸಹ ಕೂಡಿದಲ್ಲಿ ನಿರೂಪಿಸಿದ ಪ್ರಸ್ತಾವದ ವಚನ.

ಏನಯ್ಯ ಚನ್ನಬಸವಣ್ಣಾ, ನೀನು ಬಂದ ಸಂವತ್ಸರ ಹತ್ತು ಹತ್ತು ಸಾರೆ ಮರಳಿ ಮರಳಿ ಬಂದಿತ್ತು. ಇಂದಿಗೆ ರಾಕ್ಷಸ ನಾಮ ಸಂವತ್ಸರ ದಲ್ಲಿ ನಿಂದಿತ್ತು ನಿನಗಾದ ಕಡೆ ಎಂದು ನಿರೂಪಿಸಲು, ಆನಂದಿಸಿ ಆಕ್ಕರಿಂ ಕೇಳುತಿರಲು, ಅಂದಿಂಗೆ ಆಷಾಢ ಶುದ್ಧ ಪಾಡ್ಯ ಸೋಮವಾರದ ರಾತ್ರಿ ಯಲು ನಿಮ್ಮ ಗಣಂಗಳು ಉದಯವಾದ ಇಪ್ಪತ್ತೈದು ಗಳಿಗೆಗೆ ನಮ್ಮ ಗುಹೇಶ್ವರ ಲಿಂಗದಲ್ಲಿ ಐಕ್ಯವಾದೆವು. ನಾವು ಹೋದ ತಿಂಗಳಿಗೆ ನಿಮ್ಮ ಸಂಗಮೇಶ್ವರನಲ್ಲಿ ಐಕ್ಯವಾಗೆಂದು ನಿರೂಪಿಸಲು, ಎರಡು ಕರಗಳಂ ಮುಗಿದು ಬಸವೇಶ್ವರ ದೇವರು ಬಿನ್ನವಿಸುವ ಪ್ರಸ್ತಾವದ ವಚನ.

ಶರಣು ಶರಣಾರ್ಥಿ, ಪ್ರಭುದೇವರಿಗೆ ಶರಣಾರ್ಥಿ ಎಂಬ ಸಮ ಯದಲ್ಲಿ ಉದಯವಾಗಲು, ಎಲ್ಲ ಅಮರಗಣಂಗಳಿಗೆ ಗಣಪರ್ವಮಂ ಮಾಡಿ, ಪ್ರಭುದೇವರು ತಮ್ಮ ಕಾರುಣ್ಯ ಪ್ರಸಾದಮಂ ಬಸವೇಶ್ವರ ದೇವರು ಮೊದಲಾದ ಆಸಂಖ್ಯಾತ ಮಹಾಗಣಂಗಳಿಗೆ ಕೊಟ್ಟು ತಮ್ಮ ಲಿಂಗ ದಲ್ಲಿ ಪ್ರಭುದೇವರು ಬಯಲಾಗಲು,

ಇತ್ತ ಬಸವೇಶ್ವರ ದೇವರು, ಎಲ್ಲ ಅಸಂಖ್ಯಾತ ಮಹಾಗಣಂಗಳು ಸಹವಾಗಿ ಸುಖ ಸಂತೋಷ ವಿನೋದದಿಂದ ಇರುತ್ತಿರಲು ಶ್ರಾವಣ ಶುದ್ಧ ಪಾಡ್ಯ ಮಂಗಳವಾರ ರಾತ್ರಿಯಲ್ಲಿ ನಿಮ್ಮ ಗಣಂಗಳ ಸಮೂಹವು ಉದ ಯವಾದ ಇಪ್ಪತ್ತೈದು ಗಳಿಗೆಗೆ ನಾವು ನಮ್ಮ ಸಂಗಮೇಶ್ವರನಲ್ಲಿ ಐಕ್ಯ

ವಾದೆವು. ಎನ್ನ ಮನದ ಘನವೇ ಸೊಡ್ಡಳ ಬಾಚಿರಾಜಯ್ಯಾ. ನಮ್ಮ ಗಣಂಗಳ ಹಸ್ತದಲ್ಲಿ ಚಿಕ್ಕದಂಡನಾಯಕರ ಕೆಯ್ಯ ಎಡೆಗೊಟ್ಟು ಬಿನ್ನಹಂ ಮಾಡಿಹೆನು. ನಾನು ಹೋದ ಮೂರುವರೆ ತಿಂಗಳಿಗೆ ತಾಯಿ ಸೋಮಾಯಕ್ಕನು ಜಗದೇವ ಮೊಲ್ಲೆಬೊಮ್ಮಯ್ಯಗಳ ಕೆಯ್ಯ ಪರವಾದಿ ಕೊಲಿಸಿ ಪವಾಡಗಳ ಮೆರೆದಾಳು. ಕಲ್ಯಾಣಕ್ಕೆ ಅಳಿಯ ಬಿಜ್ಜಳಂಗೆ ರಾಯಪಟ್ಟ ವಾದಿತ್ತು. ಚಿಕ್ಕದಂಡನಾಯಕರು ತಮ್ಮ ಹನ್ನೆರಡು ಸಾವಿರ ಜಂಗಮವು ಸಹಿತ ಏಳ್ನೂರೆಪ್ಪತ್ತು ಗಣಂಗಳು ಸಹಿತ ಉಳಿವೆಯ ಮಹಾಮನೆಗೆ ಬಿಜಯ ಮಾಡಿಹರು. ಹಾದಿಯಲ್ಲಿ ಅದ್ಭುತ ರಣವಾಯಿತ್ತು. ಮಡಿವಾಳಯ್ಯಗಳು ಬಿಜ್ಜಳನ ಕರತಳವಂ ಕೊಯಿದಾರು. ಮೆರೆದಾರು. ಕಡಿದಾಡುತ್ತ ನಡೆದಾರು. ಉಳಿವೆಯ ಮಹಾಮನೆಯಲ್ಲಿ ನಿಂದಾರು. ಅಲ್ಲಿ ಚನ್ನ ಉಯ್ಯಾಲೆಯನೇರಿ ಕೈಲಾಸಕ್ಕೆ ಬಿಜಯ ಮಾಡಿಯಾರು. ನೀಲಲೋಚನೆಯಮ್ಮನವರು ತಮ್ಮ ಲಿಂಗದಲ್ಲಿ ಐಕ್ಯವಾದಾಳು. ಮಿಕ್ಕಿನ ಪುರಾತನರು ತಮ್ಮ ಹಿಡಿದ ಕ್ರಿಯೆ ಹೋದಲ್ಲಿ ಬಯಲಾದಾರು. ಎಂದು ನಿರೂಪಿಸುತಿರಲು ಉದಯವಾಗಲು ಅತ್ತ ಬಸವೇಶ್ವರ ದೇವರು ತಮ್ಮ ಸಂಗಮೇಶ್ವರ ದೇವರಲ್ಲಿ ಐಕ್ಯವಾದರು.

ಇತ್ತ ಚನ್ನಬಸವೇಶ್ವರ ದೇವರು ಎಲ್ಲ ಗಣಂಗಳ ಸಮೂಹದಲ್ಲಿ ಬಿನ್ನೈಸುವ ಪ್ರಸ್ಥಾವದ ವಚನ. ಆ ವೇಳೆಯಲ್ಲಿ ಸಿದ್ಧರಾಮಯ್ಯ ದೇವರು ಬಿಜಯ ಮಾಡಲು ನೀಲಲೋಚನೆಯಮ್ಮನವರು ಬಸವಣ್ಣನು ಸಂಗಮೇಶ್ವರ ದೇವರಲ್ಲಿಗೆ ಓಡಿ ಹೋದನೆಂದು ನಿರೂಪಿಸಲು, ಆಗ ಷಡ್ರಸವನೇ ನೀಡಿ ಆರೋಗಣೆಯಂ ಮಾಡಿಸಿ ಎನ್ನ ದೇವರದೇವ ಎಂದು ಕರಗಳಂ ಮುಗಿದು ನಿಂದಿರಲು, ಸಿದ್ಧರಾಮಯ್ಯ ದೇವರಾರೋಗಣೆಯ ಮಾಡಿ ನೀಲಲೋಚನೆಯಮ್ಮನವರ ಮುಖಮಂ ನೋಡಿ, ಬಸವಣ್ಣ ನಿಮ್ಮ ನಿಲಿಸಿ ಹೋದನೇ ಎಂದು ತಲೆದೂಗುತಿರಲು ಆ ನೀಲಲೋಚನೆಯಮ್ಮನವರು ಆ ಸಿದ್ಧರಾಮಯ್ಯದೇವರ ಪ್ರಸಾದಮಂ ಕೊಂಡು ಸಲಿಸಿ ಆ ಸಿದ್ಧರಾಮಯ್ಯನವರಿಗೆ ಬಿನ್ನೈಸುವ ಪ್ರಸ್ಥಾವದ ವಚನ.

ಬಸವಯ್ಯ ನಿಮ್ಮ ತೊತ್ತಿನ ಮಗಳನು ಕರೆಯಲಮ್ಮದೆ ಇರಿಸಿ ಹೋದರು. ಬಸವಗೆ ಸತಿ ಇಲ್ಲ, ನನಗೆ ಪತಿ ಇಲ್ಲ. ನೀವೆನ್ನ ಕರಸ್ಥಲದಲ್ಲಿ ಮೂರ್ತಗೊಂಡ ಕಾರಣ ಆ ಬೆಳಗಿನಲ್ಲಿ ಐಕ್ಯವಾದೆವು ಕಾಣಾ ಸಿದ್ಧ

ರಾಮಯ್ಯ ಪ್ರಭುವೇ, ಸಂಗನಬಸವಯ್ಯ ಎಂದು ನೀಲಲೋಚನೆಯಮ್ಮನ ವರು ಬಯಲಾಗಲು,

ಅತ್ತ ಚನ್ನಬಸವೇಶ್ವರ ದೇವರ ಸಮೂಹದಲ್ಲಿಗೆ ಸಿದ್ಧರಾಮಯ್ಯ ದೇವರು ಬಿಜಯಂಗೈಯ್ಯಲು ಅಮರಗಣಂಗಳೆಲ್ಲ ಎದ್ದರೆಂದು ಸಿದ್ಧರಾ ಮಯ್ಯ ದೇವರಿಗೆ ಶರಣಾರ್ಥಿ ಎಂದು ಕರಗಳಂ ಮುಗಿದು ಚನ್ನಬಸ ವೇಶ್ವರ ದೇವರು ಬಿನ್ನೈಸುವ ಪ್ರಸ್ಥಾವದ ವಚನ.

ಮುಂದಣ ಕಲಿಯುಗದ ಮಹಿಮೆಯು ಮರ್ತ್ಯಲೋಕದ ಮಹಾ ಗಣಂಗಳೇ ಕೇಳಿ ಕೂಡಲ ಚನ್ನಸಂಗಮೇಶ್ವರ ದೇವರು ಕೊಟ್ಟ ನಿರೂಪಮಂ ಹೇಳಿಹೆನು. ಪಂಚಾಶತ್ ಕೋಟಿ ಭೂಮಂಡಲದ ಮಧ್ಯದಲ್ಲಿ ಪೃಥ್ವಿಗೆ ಕೈಲಾಸಮಪ್ಪ ಶ್ರೀಶೈಲದ ಮಲ್ಲಿಕಾರ್ಜುನ ದೇವರ ಮೂಡಲ ಬಾಗಿಲ ಮುಚ್ಚಿತ್ತು. ಮನುಷ್ಯ ರಕ್ತ ಬಿದ್ದಿತ್ತು. ಸುರೆಯ ಗಡಿಗೆ ಮಾರಿತ್ತು. ವೇಶಿಯರ ಗುಡಿಸಲು ಕಟ್ಟಿಹವು. ಅಲ್ಲಿ ನಾನಾ ವಿಕಾರಂಗಳಾದಾವು. ಇಪ್ಪತ್ತೇಳು ದುರ್ಗದವರು ಅಪವರ್ಗವಾದಾವು. ವಿರೂಪಾಕ್ಷ ಕೆಟ್ಟ ಮೂವತ್ತೆರಡು ಕೊಟ್ಟವಾದಾವು. ಮನ್ಮಥ ಕೊಂಡ ಹೂಳಿತ್ತು. ತುರುಕರ ಪಡೆ ಎದ್ದಿತ್ತು. ತ್ರಿಪುರಾಂತಕ ದೇವರಲ್ಲಿ ಕಪಿಲೆಯ ಬಾಣಸ ಮಾಡಿಯಾರು. ನಂದಿಯ ಕಂಭವ ಮುರಿದಾರು. ಲಕ್ಷದ ಮೇಲೆ ತೊಂಬ ತ್ತಾರು ಸಾವಿರ ಗೋರಿಯನಿಕ್ಕಿಹರು ಬಲವಾರಾದೀತು. ಆರು ಮೂರಾ ದೀತು. ಮೂರು ಎರಡು, ಎರಡು ಒಂದಾದೀತು. ಮಿಕ್ಕದು ಉಳಿದೀತು. ಒಂದು ರಾಮೇಶ್ವರಕ್ಕೆ ನಡೆದೀತು. ಆ ಬಲ ಉತ್ತರ ಮಧ್ಯದಲ್ಲಿ ಅಳಿ ದೀತು. ಮಿಕ್ಕದುಳಿದೀತು.

ಶಿವನ ಸಮಯ ಕೆಟ್ಟೀತು. ಹಿರಿಯರ ಹಿರಿತನವಳಿದೀತು. ಭಕ್ತರು ಜಂಗಮದ ಕೆಯ್ಯ ಸೇವೆಯ ಮಾಡಿಸಿಹರು. ಕ್ರಿಯಂಗಳ ಬಿಟ್ಟಾರು. ಅನೇಕ ನೇಮಂಗಳ ಮಾಡಿಯಾರು. ಪ್ರಸಾದಮಂ ಮರೆದಾರು. ವಂಚನೆ ಪಂಙ್ತಿ ಭೇದಮಂ ಮಾಡಿಯಾರು. ಪ್ರಸಾದಮಂ ಮರೆದಾರು. ವಂಚನೆ ಪಙ್ತಿ ಭೇದಮಂ ಮಾಡಿಯಾರು. ಮನೆಯ ಹಿರಿಯರಂ ಮರೆದಾರು. ಕುಲದ ಹಿರಿ ಯರುಂ ಪೂಜೆಯ ಮಾಡಿಯಾರು. ವಿಷಯಂಗಳೊಳಗೆ ಮುಳುಗಾಡಾರು. ಹಂದಿನೆಂಟು ಜಾತಿ ಒಂದಾಗಿ ಒಂದು ಕುಲಕ್ಕೆ ಹಾರಿಯಾಡಿಯಾರು. ಅನೃತವಂ ನುಡಿದಾರು. ನಮ್ಮ ಪುರಾತನರ ವಚನವ ಓದಿ ರಚನೆಯ ಮಾಡಿಯಾರು. ಅದ್ವೈತಕ್ಕೆ ಗುದ್ದ್ಯಾಡಾರು. ನಮ್ಮ ಶರಣರು ಹೀಗೆ ಗುದ್ಯಾ

ಡರು. ಅವರ ಕೊಲ್ಲ ಹೋದಾರು. ನಮ್ಮ ಶರಣರು ಬೀಜಕೊಬ್ಬರಾಗಿ ಉಳಿದಾರು. ಷಡುದರುಶನ ಕೆಟ್ಟು ಏಕ ದರುಶನದಲ್ಲಿ ಅಡಗೀತು. ಮತ್ತಾ ಷಡುದರ್ಶನವೆದ್ದೀತು.

ಕಲ್ಯಾಣಕ್ಕೆ ತೆಂಕಲು ತೊಂಭತ್ತೈದು ಗಾವುದ ದಾರಿಯಲ್ಲಿ ಇಬ್ಬರು ಪುರಾತನರು ಕಾಯುವೆರಸಿ ಕೈಲಾಸಕ್ಕೆ ಬಿಜಯು ಮಾಡಿಯಾರು. ಆ ದಿಕ್ಕಿನಲ್ಲಿ ಒಂದು ಕೆರೆಯಲ್ಲಿ ಕೆಂಡದ ಮಳೆ ಸುರಿದೀತು. ಅಡಗೀತು. ಆ ಕೆಂಡದ ಮಳೆ ಹೊಡೆದ ಗಾವುದ ಮಧ್ಯದಲ್ಲಿ ಕಲ್ಯಾಣದ ಬಿಜ್ಜಳನ ವಂಶಿಕದವ ವೀರಬಸವಂತರಾಯ ಹುಟ್ಟಿಯಾನು. ಆ ದಿಕ್ಕಿನಲ್ಲಿ ನರಸಿಂಹ ನವತಾರ ಹೊಕ್ಕು ಹೊಡಕರಿಸಿತ್ತು. ಮತ್ತೆ ಈಶಾನ್ಯ ಮುಖವಾದೀತು. ಮತ್ತೆ ದಕ್ಷಿಣಕ್ಕೆ ಬಂದೀತು. ಮತ್ತೆ ಪಶ್ಚಿಮಕ್ಕೆ ಹೋದೀತು. ಮತ್ತೆ ದಕ್ಷಿಣಕ್ಕೆ ಮುಖವಾದೀತು. ಮತ್ತೆ ತುರುಕರ ಬಲವೆದ್ದೀತು. ಆ ಬಲ ಒಂದು ಬಂಡೆಯಲ್ಲಿ ಅಳಿದೀತು. ಆ ನರಸಿಂಹಾವತಾರ ಪಶ್ಚಿಮ ಮುಖದಲ್ಲಿ ನಿಂದಿತ್ತು. ದಕ್ಷಿಣ ಭಾಗದಲ್ಲಿ ಆಯಿದು ಕೊಟ್ಟೆ ಉಳಿದಾವು. ಒಂದು ಕೊಟ್ಟೆ ತನ್ನಿಂದ ತಾನೆ ಅಳಿದಿತ್ತು. ಕಾವೇರಿಯ ಮಧ್ಯದಲ್ಲಿ ಎರಡು ಕೊಟ್ಟೆ ಉಳಿದಾವು. ಒಂದು ಕೊಟ್ಟೆ ವಿಷ್ಣು ಸಂಪ್ರದಾಯುವಾದೀತು. ಒಂದು ಕೊಟ್ಟೆ ಈಶ್ವರ ಸಂಪ್ರದಾಯುವಾದೀತು. ವಿಷ್ಣು ಕೊಟ್ಟೆ ವಿರೋಧಿಕೃತ ನಾಮ ಸಂವತ್ಸರದಲ್ಲಿ ಬಯಲಾದೀತು. ಆ ಈಶ್ವರ ಕೊಟ್ಟೆಲ್ಲಿ ಹನ್ನೊಂದು ಖಂಡೆ ಇದ್ದಾವು. ಆ ಹನ್ನೊಂದು ಖಂಡೆಯೊಳಗೆ ಮೂರು ಖಂಡೆ ಉಳಿದಾವು. ಮತ್ತೊಂದು ಖಂಡೆಯು ತಿರುವಲೂರು ಸಮ್ಮುಖವಾದೀತು. ಅಲ್ಲಿಂದ ಕುಂಜೇಶ್ವರ ದೇವರಿಗೆ ಬಂದೀತು. ಅಲ್ಲಿಂದ ಕಪಿಲೆಯ ತೀರಕ್ಕೆ ಬಂದೀತು.

ನಾಲ್ಕು ಪಟ್ಟದ ರಾಯರು ಹುಟ್ಟಿಯಾರು. ಆ ರಾಯರಿಂದ ಮುಂದೆ ಮೂವತ್ತೆರಡು ಕೊಟ್ಟೆ ಹುಟ್ಟಿಯಾವು. ದಕ್ಷಿಣ ಭಾಗದಲ್ಲಿ ಒಂದು ಈಶ್ವರ ಕೊಟ್ಟೆ ಉಳಿದೀತು ಮಿಕ್ಕಿನ ಕೊಟ್ಟೆವಳಿದಾವು. ಉತ್ತರದಲ್ಲಿ ಇಪ್ಪತ್ತೇಳು ಮಾನ್ಯರು ಹುಟ್ಟಿಯಾರು. ದಕ್ಷಿಣದಲ್ಲಿ ಮೂರು ಮಾನ್ಯರು ಹುಟ್ಟಿಯಾರು.

ತಿಲಕ ನಾಮ ಸಂವತ್ಸರದಲ್ಲಿ ದುರ್ಗಿ ಹುಟ್ಟಿಯಾಳು. ಅವಳು ಮೂರಂಗದ ಜಟಿಯನಾಡ್ಯಾಳು. ತಿಲಕನಾಮ ಸಂವತ್ಸರದಲ್ಲಿ ಮುರಿಗಿಯಾಗಿ

ತೋರಿಯಾಳು. ಸೌಮ್ಯನಾಮ ಸಂವತ್ಸರದಲ್ಲಿ ಕನ್ಯೆಯಾಗಿ ತೋರಿಯಾಳು. ಸಾಧಾರಣನಾಮ ಸಂವತ್ಸರದಲ್ಲಿ ಉಡಚಿಯಾಗಿ ತೋರಿಯಾಳು. ಈ ಮೂರು ಸಂವತ್ಸರದಲ್ಲಿ ಮೂರು ಭಾಗವಾಗಿ ತೋರಿಯಾಳು. ಒಂದು ಭಾಗ ಉಳಿದೀತು. ಅಂದಿಗೆ ನಮ್ಮ ಪುರಾತನರು ಬೀಜಕೊಬ್ಬರು ಉಳಿದಾರು. ಅಂದಿಗೆ ನಮ್ಮ ಪುರಾತನರು ಸುಳುಹು ದೋರಿಯಾರು. ಅಂದು ಪರಿಯಂತರ ಬೂದಿ ಮುಚ್ಚಿದ ಕೆಂಡದಂತೆ ಇದ್ದಾರು.

ಅಲ್ಲಿಂದ ಮೇಲೆ ನಾಲ್ಕುಸಾವಿರದ ಏಳ್ನೂರೆಪ್ಪತ್ತಾದೀತು. ಕಲಿಯುಗದ ಕಳೆ ಕೆಟ್ಟಿತ್ತು. ಭಕ್ತಿಯ ಬೆಳೆ ಬೆಳೆದೀತು. ಉತ್ತರದಿಂದೆ ಏಳನೂರೆಪ್ಪತ್ತು ಚರಲಿಂಗ ಹನ್ನೆರಡುಸಾವಿರದ ಲಿಂಗದ ಕಂಥೆ ನೆಲ್ಲಿಕಾಯುಷ್ಟು ಬಟ್ಟಲು ಬೇವಿನಕಾಯುಷ್ಟು ಮಂಡಲು ಸಹಿತ ಶ್ರೀಶೈಲಕ್ಕೆ ಬಿಜಯಂ ಮಾಡಿಯಾರು. ಅಲ್ಲಿಂದ ಕಲ್ಯಾಣಕ್ಕೆ ನಡೆದಾರು. ಅಲ್ಲಿ ತಳಿರು ಚಪ್ಪರವನಿಕ್ಕಿ ಮೂರ್ತಗೈದಾರು. ಕಲ್ಯಾಣ ಕೆಟ್ಟಿತ್ತು ಉತ್ತರ ದಕ್ಷಿಣ ಭಾಗದ ನೈಋತ್ಯದಿಂದ ವೀರಬಸವಂತರಾಯ ಕಲ್ಯಾಣಕ್ಕೆ ಬಂದಾನು. ಗುಡಿ ತೋರಣವ ಕಟ್ಟಿಯಾರು. ಆಳಿಯ ಬಿಜ್ಜಳನ ಅರಮನೆ ಶೃಂಗಾರವಾದೀತು. ಪಟ್ಟಾಭಿಷೇಕವ ಮಾಡಿಯಾರು. ಚಾಳುಕ್ಯರಾಯನ ಕಾಲದ ಮುತ್ತಿನ ಗದ್ದುಗೆಯ ತೆಗೆದು ಸಿಂಹಾಸನವನಿಕ್ಕಿಯಾರು. ಆ ಗದ್ದುಗೆಯ ನೇರುತ ಒಂದು ಪವಾಡಮಂ ಗೆಲಿದಾರು. ಆ ರಾಯಗದ್ದುಗೆಯ ಮೇಲೆ ಕುಳ್ಳಿರ್ದು ರಾಜ್ಯಂಗೆಯ್ಯುತಿರಲು ಏಳುನೂರೆಪ್ಪತ್ತು ಅಮರಗಣಂಗಳು ಸಹಿತ ಪ್ರಭುದೇವರು ಸಹಿತ ನಾವು ಉಳಿವೆಯ ಮಹಾ ಮನೆಗೆ ಬಂದೇವು. ಅಲ್ಲಿ ಎಲ್ಲ ಗಣಂಗಳು ಸಹಿತ ಗಣಪರ್ವಮಂ ಮಾಡೇವು. ಅಲ್ಲಿಂದ ಮೇಲೆ ಕಲ್ಯಾಣಕ್ಕೆ ಬಂದೇವು. ಮುಂದೆ ಬಾಚಿ ಕಾಯಕದ ಬಸವಯ್ಯ ಬಂದು ನಮಗೆ ನಮ್ಮ ಅರಮನೆಯ ಶೃಂಗಾರವ ಮಾಡಿಯಾನು. ಉಪ್ಪರಗುಡಿ ಉಭಯನಂದಿಯ ಕಂಭ ಮುನ್ನೂರರವತ್ತು ಹೊನ್ನ ಕಳಸವೆದ್ದಾವು. ನಾವು ನಮ್ಮ ಅರಮನೆಗೆ ಹನ್ನೆರಡುಸಾವಿರ ಜಂಗಮ ಸಹಿತ ಬಂದೇವು. ಲಕ್ಷದ ಮೇಲೆ ತೊಂಬತ್ತಾರುಸಾವಿರ ಜಂಗಮಕ್ಕೆ ವಿಶ್ರಾಮವಾಯಿತ್ತು. ತ್ರಿಪುರಾಂತಕ ದೇವರ ಶಿವಾಲಯ ಕಟ್ಟಿತ್ತು. ಏಳುನೂರೆಪ್ಪತ್ತು ಹೊನ್ನ ಕಳಸವೆದ್ದಾವು. ಪದ್ಮಪತ್ರ ತೀವಿರ್ದ ಸರೋವರಂಗಳು ಮುನ್ನೂರರುವತ್ತಾದಾವು. ನಿಮ್ಮಾಣೆ ನಿಮ್ಮ ಪ್ರಮಥರಾಣೆ ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ ಬಂದೇವು.

ಆ ಪ್ರಸ್ತಾವದಲ್ಲಿ ಸಿದ್ಧರಾಮಯ್ಯದೇವರ ವಚನಃ— ನಾನಾ ವ್ರತನೇಮಂಗಳಾದಾವು. ಸತ್ಯಶುದ್ಧಕಾಯಕ ನಿತ್ಯ ನೇಮಂಗಳಾದಾವು. ಖಂಡಿತ ಕಾಯಕದ ಅಖಂಡಿತರ ಕಂಡೇವು. ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಅಂದಿಗೆ ನೂರು ತುಂಬಿತ್ತೆಂಬ ಸಂದ ಪುರಾತನರ ಕಂಡೇವು.

ಆ ಪ್ರಸ್ತಾವದಲ್ಲಿ ಸೊಡ್ಡಳ ಬಾಚರಸರ ವಚನ. ಸಿದ್ಧರಾಮಯ್ಯದೇವರು ಸೊನ್ನಲಪುರಕೆ ಬಿಜಯಂಗೆಯ್ವಂದಿಗೆ ಸೋಸಲ ಸೋಮೇಶ್ವರ ದೇವರಿಗೆ ನೊಸಲ ಕಣ್ಣು ನೆತ್ತಿಯಲ್ಲಿ ಅಮೃತವ ಕರೆದೀತೆಂಬ ಸುದ್ದಿ ಹುಟ್ಟಿತು. ಕಲ್ಲಕೋಳಿ ಕೂಗಿತೆಂಬ ಸುದ್ದಿಯ ಕೇಳಿ ನುಡಿದಾರು. ಬಿದಿರಿಯ ಕೋಟೆಯಲ್ಲಿ ಒಬ್ಬ ಶಿವಶರಣೆಯ ಗರ್ಭದಲ್ಲಿ ಒಂಬತ್ತು ವರುಷವಿರ್ದು ಒಬ್ಬ ಪುರಾತನ ಹುಟ್ಟಿಯಾನು. ಆ ಶರಣ ನಿಮ್ಮ ಪಾದವ ಕಂಡಾನು. ಹುಲ್ಲೀಕೇರಿಯ ಸೋಮೇಶ್ವರದೇವರ ಬಲಭಾಗದಲ್ಲಿ ಅಭಯಹಸ್ತ ತೋರಿತ್ತೆಂದು ನುಡಿದಾರು. ನಮ್ಮ ಸೊಡ್ಡಳ ದೇವರು ಸಾಕ್ಷಿಯಾಗಿ ಚನ್ನಯ್ಯಗಳು ಮರ್ತ್ಯಕ್ಕೆ ಬಂದುದೆ ಸಾಕ್ಷಿ ಕುರುಹು.

ಈ ವಾಕ್ಯಕ್ಕೆ ಮಡಿವಾಳಯ್ಯಗಳು ಹೇಳಿದ ವಚನ. ಎಲ್ಲ ಗಣಂಗಳಿಗೆ ಬಿನ್ನಹಂ ಮಾಡಿಹೆನು. ಅನೇಕ ಲಿಂಗ ನಿಷ್ಠೆಗಳಾದಾವು. ಮಹಾಪವಾಡ ಪುರುಷರು ಹುಟ್ಟಿಯಾರು. ಅವರ ಮುಂದೆ ನಿಂದೆಯ ನುಡಿದಾರು. ನಿಂದೆಯ ನುಡಿದವರಿಗೆ ನಿಮ್ಮ ಪುರಾತನ ಪವಾಡಗಳ ತೋರಿ ಮೆರೆದಾರು. ನಮ್ಮ ಕಲಿದೇವರು ಸಾಕ್ಷಿಯಾಗಿ ನಿಮ್ಮ ಪುರಾತನರು ಮರ್ತ್ಯದ ಕಲಿ ತೀರದಲ್ಲದೆ ಬಾರರು.

ಇದಕ್ಕೆ ಉರಿಲಿಂಗದೇವರು ಹೇಳಿದ ವಚನ—ನಮ್ಮ ಪುರಾತನರು ಬರುವಂದಿಗೆ ಮುಚ್ಚಿದ ಕಣ್ಣ ತೆರೆಯಯ್ಯ. ಕಿಚ್ಚಿನ ಮಳೆ ಸುರಿಯಯ್ಯಾ. ಕಲಿಯುಗದ ಬೆಳಸ ಕೂಡಿಸಯ್ಯಾ. ಭಕ್ತಿಯ ಬೆಳಸು ಬೆಳಿಸಯ್ಯಾ. ನಮ್ಮ ಉರಿಲಿಂಗದೇವರ ಶರಣರ ಮರ್ತ್ಯಕ್ಕೆ ತರಿಸಯ್ಯ.

ಹಡಪದ ಅಪ್ಪಣ್ಣಗಳು ನಿರೂಪಿಸಿದ ವಚನ— ನಿಮ್ಮ ಕೃಪೆಯಿಂದ ಎಲ್ಲ ಗಣಂಗಳಿಗೆ ಬಿನ್ನಹ ಮಾಡಿಹೆನು. ನೀವು ಮರ್ತ್ಯಕ್ಕೆ ಬಾಹ ಕಾಲಕ್ಕೆ ರಾಕ್ಷಸನಾಮ ಸಂವತ್ಸರ ಹತ್ತೊಂಬತ್ತು ಬಾರೆ ಮರಳಿ ಬಂದಲ್ಲದೆ ಬಾರೆವು. ಇಂದಿಗೆ ಏಳ್ನೂರೆಪ್ಪತ್ತು ವರುಷವಿದ್ದಿತು. ಏಳ್ನೂರೆಪ್ಪತ್ತು ವರುಷದೊಳಗೆ ಮೂರು ವರುಷ ಮಿಕ್ಕಿತ್ತು. ರಾಕ್ಷಸನಾಮ ಸಂವ

ತ್ಸರ ಮಿಕ್ಕು ಆನಂದನಾಮ ಸಂವತ್ಸರಕ್ಕೆ ಬಿಜಯ ಮಾಡೇವು. ಈ
ಒಂಬತ್ತು ವಚನ ಬಸವೇಶ್ವರ ದೇವರ ಅರಮನೆಯ ಪ್ರಸಾದ ಕೋಣೆ
ಯಲ್ಲಿ ನಿಕ್ಷೇಪ ಮಾಡಿದೆವು. ಪ್ಲವಂಗ ನಾಮಸಂವತ್ಸರದಲ್ಲಿ ಒಬ್ಬ ಶರ
ಣನು ಕಂಡನು ಈ ವಚನ ಸಂಶಯವಿಲ್ಲ. ನಮ್ಮ ಪುರಾತನರು
ಮರ್ತ್ಯಕ್ಕೆ ಬಾಹಂದಿಗೆ ಈ ಒಂಬತ್ತು ವಚನವ ಬಚ್ಚಿಟ್ಟುಕೊಂಡು ಇರ
ಲಿಕ್ಕೆ ಕಂಡುದುದೆ ಕುರುಹು. ನಾವು ನಮ್ಮ ಬಸವೇಶ್ವರ ದೇವರು
ಕೂಡಲ್ಲದೆ ಬಾರೆವು ಬಸವಪ್ರಿಯ ಕೂಡಲಸಂಗಮದೇವಾ.



# ಎಲ್ಲ ಪುರಾತನರು ನಿರೂಪಿಸಿದ ಕಾಲಜ್ಞಾನದ ವಚನ.

ಉತ್ತರದಿಕ್ಕಿನ ಮಹಾಮೇರುವೆಂಬ ರಜತಾದ್ರಿ ಪರ್ವತದಲ್ಲಿ ರತ್ನ ಖಚಿತ ಸಿಂಹಾಸನದಲ್ಲಿ ಪರಮೇಶ್ವರನ ಓಲಗದಲ್ಲಿ ಅಸಂಖ್ಯಾತ ಮಹಾ ಗಣಂಗಳು ರುದ್ರಗಣಂಗಳು ಅಮರಗಣಂಗಳು ಪ್ರಮಥಗಣಂಗಳು ಎಂಬ ತ್ರೆಂಟುಕೋಟಿ ಮುನಿಗಳು ಬ್ರಹ್ಮ, ವಿಷ್ಣು, ಜಂಭಾರಿಗಳು ಅರುವತ್ತಾರು ಕೋಟಿ ರಾಕ್ಷಸರು ಮೂವತ್ತುಮೂರುಕೋಟಿ ದೇವತೆಗಳು ನಂದೀಶ, ಭೃಂಗೀಶ, ಷಣ್ಮುಖ, ವೀರಭದ್ರದೇವರು, ವಿಘ್ನೇಶ್ವರ ದೇವಿಯರು ಸಹ ವಾಗಿ ಓಲಗಂಗೊಟ್ಟು ಮೂರ್ತವಂ ಮಾಡಿರ್ಪ ಸಮಯದಲ್ಲಿ ನಾರದ ಮುನಿ ಬಂದು ಪರಮೇಶ್ವರಂಗೆ ಬಿನ್ನಹಂ ಮಾಡಿದನದಂತೆನೆ,

ಮರ್ತ್ಯಲೋಕದಲ್ಲಿ ಶಿವಮತ ಮಸಣಿಸಿ ಜೈನಮತವನುದ್ಧಾರವಮಾ ಡಿಕೊಂಡಿಹನು. ಕಲ್ಯಾಣ ಚಾಳುಕ್ಯರಾಯನ ಮಗನಾದ ಬಿಜ್ಜಳರಾಯನು ತನ್ನ ಪ್ರಾಬಲ್ಯವನೆ ಮಾಡಿಕೊಂಡಿಹನು. ನೀವು ಬಾಗವಾಡಿಯಲ್ಲಿ ಮಂಡಿ ಗೆಯ ಮಾದಿರಾಜ ಮಾದಲಾಂಬಿಕೆಯರ ಗರ್ಭದಲ್ಲಿ ಬಸವರಾಜನ ಕಳ ಹುವಂತೆ ಮಾಡಿರಿ. ಆತನ ವಾಕ್ಯವ ಕೇಳಿ ವಿಕ್ರಮನಾಮ ಸಂವತ್ಸ ರದ ಶ್ರಾವಣಶುದ್ಧ ಪಂಚಮಿಯ ಸೋಮವಾರ ಅರುಣೋದಯ ಕಾಲ ದಲ್ಲಿ ಕಂಥೆಯ ಧರಿಸಿಕೊಂಡು ಕಲ್ಯಾಣಕ್ಕೆ ಬಂದು ತಮ್ಮ ಸೋದರ ಮಾವನಾದ ಬಲದೇವ ಮಂತ್ರಿಯ ಮಗಳು ಗಂಗಾಂಬಿಕೆಯರ ಮದು ವೆಯಾಗಿ ಲಿಪಿಯ ಪವಾಡವ ಮೆರೆದ ಬಳಿಕ ಸಿದ್ಧಣ್ಣನಾಯಕರ ಮಗ ಳಾದ ನೀಲಲೋಚನೆಯರ ವಿವಾಹವಾಗಿ ಪ್ರಧಾನಿಪಟ್ಟವ ಸಮನಿಸಿಕೊಂ ಡಿರುವಾಗ ನಿಚ್ಚ ಮುನ್ನೂರರುವತ್ತು ಪವಾಡಂಗಳಂ ಗೆಲಿದು ಅಕ್ಕನಾಗ ಲೆಯ ಗರ್ಭದಲ್ಲಿ ಕಕ್ಕಯ್ಯನವರ ಪ್ರಸಾದ ಪಿಂಡವೆ ಚನ್ನಬಸವಣ್ಣನಾಗಿ ಮರ್ತ್ಯದಲ್ಲಿ ನಂದನ ಸಂವತ್ಸರದ ವೈಶಾಖ ಶುದ್ಧ ಪಾಡ್ಯ ಮಂಗಳವಾ ರದ ಕೃತ್ತಿಕಾ ನಕ್ಷತ್ರದ ಪ್ರಾತಃಕಾಲದಲ್ಲಿ ಕಂಥೆಯ ಧರಿಸಿ ಬಂದು ಇಪ್ಪತ್ತುನಾಲ್ಕು ವರುಷವಿದ್ದರು.

ಇತ್ತ ಹರಳಯ್ಯ ಮಧುವಯ್ಯನವರ ಎಳೆಹೂಟೆಯ ಮಾಡಿದರು. ಹಿಂದಕ್ಕೆ ಪ್ರಭುಸ್ವಾಮಿಗಳಿಗೆ ರುದ್ರಮುನಿಸ್ವಾಮಿಗಳಿಗೆ ಸಂಗನಬಸವರಾ

ಜದೇವರು ನಮಸ್ಕಾರವಮಂ ಮಾಡಿ ಮರ್ತ್ಯಲೋಕ ಕಥಾಂತರವ ಪೇಳಿ, ಇತ್ತ ಪ್ರಭುಸ್ವಾಮಿಗಳು ರಾಕ್ಷಸನಾಮ ಸಂವತ್ಸರದಲ್ಲಿ ಆಷಾಢ ಶುದ್ಧ ಪಾಡ್ಯವು ಸೋಮವಾರದ ಉದಯವಾದ ಇಪ್ಪತ್ತೈದು ಗಳಿಗೆಗೆ ತಮ್ಮ ಗುಹೇಶ್ವರ ಲಿಂಗದಲ್ಲಿ ಬಯಲಾದರು.

ಇತ್ತ ಬಸವರಾಜದೇವರು ರಾಕ್ಷಸನಾಮ ಸಂವತ್ಸರದ ಶ್ರಾವಣ ಶುದ್ಧ ಪಾಡ್ಯ ಮಂಗಳವಾರದ ಉದಯವಾದ ಇಪ್ಪತ್ತೈದು ಗಳಿಗೆಗೆ ಕೂಡಲ ಸಂಗಮೇಶ್ವರನೊಳಗೆ ಬಯಲಾದರು. ೩೬ ವರುಷ ಮರ್ತ್ಯವಲ್ಲಿದ್ದರು.

ಇತ್ತ ಚನ್ನಬಸವರಾಜದೇವರು ೨೪ ವರುಷವಿರ್ದರು. ತಾವು ಮರ್ತ್ಯಕ್ಕೆ ಬರುವ ತನಕ ಆಗುವ ಆಗಮಂಗಳ ಹೇಳಿ ಮುಂದೆ ರಾಕ್ಷಸ ನಾಮ ಸಂವತ್ಸರದ ಕಾರ್ತಿಕ ಶುದ್ಧ ಪೌರ್ಣಿಮೆಯು ಮಂಗಳವಾರದ ರಾತ್ರಿಯಲ್ಲಿಯು ಜಗದೇವ ಮೊಲ್ಲೆಬೊಮ್ಮಣ್ಣಗಳು ಬಿಜ್ಜಳರಾಯನನು ಇರಿದುಕೊಂದು ಬುಧವಾರ ರಣಾಂಗಣವ ಮಾಡುತ್ತ ಬಂದು ಗೊಡಚಿಯ ಗಿಡದ ಹುತ್ತಿನಲ್ಲಿ ಚಿಕ್ಕ ಗುಡಿಯ ಕಟ್ಟಿ ಅಲ್ಲಿ ಮಡಿವಾ ಳಯ್ಯಗಳ ಇಟ್ಟು ಸತ್ತಿಗೇರಿಯಲ್ಲಿ ಸತ್ತಿಗೆಯ ಕಳಸಗಳ ತೆಗೆದುಕೊಂಡು ಕಡಕೋಳದಲ್ಲಿ ಶಿವಪೂಜೆಯಂ ಮಾಡಿ ಪಾದೋದಕ ಪ್ರಸಾದವ ಸಲಿಸಿ ಮತ್ತೆ ಮುಂದೆ ಅಳಿಯಬಿಜ್ಜಳನಿಗು ಶರಣರಿಗು ಮೊದಲೂರಲ್ಲಿ ಮೊದ ಲಾಗಿ ತಲವೂರಲ್ಲಿ ತಲೆಯ ಕಡಿದು ಮುರುಗೋಡಿನಲ್ಲಿ ಮುರಿಯಕಡಿದು ಮೂಗಬಸ್ತಿಯಲ್ಲಿ ಕೌಡಿ ಜಾಗಟೆಯ ಹೊಯಿಸಿ ಕಾದರವಳ್ಳಿಯಲ್ಲಿ ಕಾದಾಡಿ ಸಾಂಬರಾಣಿಯಲ್ಲಿ ಸತ್ತಿತ್ತು. ಮತ್ತೆ ಜೈನಬಲ ಬೆಂಬತ್ತಿತ್ತು. ಮೇಲುಗೈ ಯಲ್ಲಾಪುರಕ್ಕೆ ಹೋಗಿ ಕೂಗಿನ ಮಾರಯ್ಯಗಳು ಎಲ್ಲ ಗಣಂ ಗಳೆಲ್ಲ ಕೂಗಿದರು. ಆ ಸಮಯದಲ್ಲಿ ಎಲ್ಲ ಗಣಂಗಳು ಕೂಡಿ ಕರಿಯ ಹೊಳೆಯ ಕಿನ್ನರಯ್ಯಗಳು ದಾಂಟಿ ಉಳಿವೆಗೆ ಚಿತ್ತೈಸಿದರು. ಅಲ್ಲಿಗೆ ಜೈನಬಲ ಬೆಂಬತ್ತಲು ಮಹಾಮನೆಯ ಹೊಕ್ಕು ಗವಿಯ ಬಾಗಿ ಲಿಗೆ ನದಿಯ ತಿರುವಿ ಜೈನಬಲವೆಲ್ಲ ಕ್ಷಯವಾಗಿ ಹೋಯಿತ್ತು. ಹೋದ ರಾತ್ರೆಯಲ್ಲಿ ಗಣಪರ್ವಮಂ ಮಾಡಿ ಬೃಹಸ್ಪತಿವಾರ ಹನ್ನೊಂದು ಗಳಿ ಗೆಗೆ ಹೊನ್ನರಳಿಯ ಫುರಕ್ಕೆ ಮಹದಯ್ಯಾಲೆಯ ಕಟ್ಟಿ ಕೈಲಾಸಕ್ಕೆ ಬಿಜ ಯಂಗೈದರು. ಅಲ್ಲಿಗೆ ಶಾಲಿವಾಹನ ಶಕೆಯ ೮೫೧ ವರುಷಕ್ಕೆ ಬಸವರಾ ಜದೇವರು ಮುಂತಾದೆಲ್ಲ ಗಣಂಗಳು ಕಲ್ಯಾಣಪಟ್ಟಣವ ಬಿಟ್ಟರು. ಶರ ಣರಿಗೆ ಕೈಲಾಸವೆ ಗಂಡನ ಮನೆ ಮರ್ತ್ಯಲೋಕವೆ ತವರುಮನೆ.

ಮುಂದೆ ೯೯೫ ವರುಷಕ್ಕೆ ಕಲ್ಯಾಣವ ಡಿಳ್ಳಿಯ ತುರುಕ ಪಾಚ್ಛಾ
ನವರು ಬಂದು ಕೆಡಿಸಿಹರು. ೭೭೭ ವರುಷ ತನಕ ಕೈಲಾಸದಲ್ಲಿ ಇದ್ದೆವು.
ಹದಿಮೂರಾನಂದ ತುಂಬಲು ಆನಂದನಾಮ ಸಂವತ್ಸರಕ್ಕೆ ಬಂದೆವು. ಉಳಿ
ವೆಯ ಮಹಾಮನೆಗೆ ಬಂದೆವು. ಮುಂದೆ ೧೨ ಆನಂದದ ಮುಂದೆ ಕ್ಷಯ
ನಾಮ ಸಂವತ್ಸರದ ಮಹಾನವಮಿ ಸೋಮವಾರದ ಮೂರು ತಾಸು
ಹೊತ್ತಿಗೆ ವಿಜಯಪುರ ಹೋದಿತ್ತು. ಅದು ಹಿಂದಾದ ಒಂದು ವರುಷ
ದೊಳಗೆ ಭಾಗಾನಗರ ಹೋದಿತ್ತು. ಅಲ್ಲಿಗೆ ಕಲಿ ಶಕೆ ೪೯೩೬೭ ವರು
ಷಕ್ಕೆ ಆನಂನಾಮ ಸಂವತ್ಸರಕ್ಕೆ ಶಾಲಿವಾಹನ ಶಕೆ ೧೬೫೭ ವರುಷಕ್ಕೆ
ಆನಂದ ಬರುತ್ತಿದೆ.

ಆಗ ಚನ್ನಬಸವೇಶ್ವರ ದೇವರಿಗೆ ಹಂಪೆಯ ವಿರೂಪಾಕ್ಷನ ರಂಗ
ಮಂಟಪದ ಮಧ್ಯದಲ್ಲಿ ಎಲ್ಲ ಗಣಂಗಳು ಕೂಡಿ ಪಟ್ಟಾಭಿಷೇಕಮಂ ಮಾಡಿ
ಮುಂದೆ ನಳನಾಮ ಸಂವತ್ಸರದ ಕಾರ್ತಿಕ ಮಾಸದಲ್ಲಿ ವೀರಬಸವಂತನು
ಚನ್ನಬಸವಣ್ಣನು ಪಾತಾಳಗಂಗೆಯಲ್ಲಿ ಸ್ನಾನಮಂ ಮಾಡಿ ಶ್ರೀಶೈಲ ಚನ್ನ
ಮಲ್ಲಿಕಾರ್ಜುನನ ದರುಶನವಾಗಿ ವೀರಬಸವಂತಂಗೆ ಪಟ್ಟವ ನೇಮಿಸಿ
ಗುಡಿಗೋಪುರವ ಕಟ್ಟಿಸಿ ವೈಷ್ಣವ ಮತವ ಗೆಲಿದು ಹಂಪೆಗೆ ಬಂದು ವಿರೂ
ಪಾಕ್ಷನ ದರುಶನವಾಗಿ ವೀರಬಸವಂತಂಗೆ ಪಟ್ಟಾಭಿಷೇಕಮಂ ಮಾಡಿ
ಚನ್ನಬಸವಣ್ಣಂಗೆ ಪ್ರಧಾನಿ ಪಟ್ಟವಾಗಿ ಶ್ರೀರಂಗಪಟ್ಟಣ ವಿದ್ಯಾನಗರ ವಿಜ
ಯಪುರ ಸಹ ದಕ್ಷಿಣದ ಸೀಮೆಯ ಗುಡಿಗೋಪುರಂಗಳ ಮುಕ್ಕುತುಕ್ಕು
ಶುದ್ಧ ಮಾಡಿ ಕಟ್ಟಿಸಿ ಕಟ್ಟೆ ಕಾವುಲೆಯಂ ಕಟ್ಟಿಸಿ ಮಠ ಮಾನ್ಯ ಪುರವ
ಗ್ರಹಾರ ಮೊದಲಾದ ದಾನಂಗಳಂ ಕೊಟ್ಟು ರಾಜ್ಯಕ್ಕೆ ಕೌಲು ಕೊಟ್ಟು
ತುಂಬಿಸಿ ಮುಂದೆ ಶ್ರೀಮುಖನಾಮ ಸಂವತ್ಸರಕ್ಕೆ ಬಿದಿಗೆ ಮಂಗಳವಾರ
ದಿವಸದಲ್ಲಿ ವೀರಬಸವಂತನು ಚನ್ನಬಸವಣ್ಣನು ಎಲ್ಲ ಗಣಂಗಳು ಸಹ
ಕಲ್ಯಾಣಕ್ಕೆ ಬಂದು ರಾಜ್ಯವ ಧರ್ಮದಲ್ಲಿ ಆಳಿಯಾರು. ಕೂಡಲ ಸಂಗಮ
ದೇವರು ಸಾಕ್ಷಿಯಾಗಿ.

# ಬಸವರಾಜದೇವರು
# ನಿರೂಪಿಸಿದ ಕಾಲಜ್ಞಾನದ ವಚನವು.

ಮೃತ್ಯುಲೋಕದ ಮಹಾ ಗಣಂಗಳಿಗೆ ಹೇಳಿಹೆನು. ರಾಕ್ಷಸನಾಮ ಸಂವತ್ಸರದ ಫಾಲ್ಗುಣ ಶುದ್ಧ ಏಕಾದಶಿಯು ಮಂಗಳವಾರದ ೨೫ ಗಳಿಗೆಗೆ ಪಾನಿವಾಳ ೩ ಅಶ್ವಿನೀನಕ್ಷತ್ರದ ೬ ಗಳಿಗೆಗೆ ಅಹೋರಾತ್ರಿಯಲ್ಲಿ ನಾನು ನಿಮ್ಮ ಪುರಾತನರಿಗೆ ಬಿನ್ನಹಂ ಮಾಡುವೆನು. ಕೃತಯುಗದ ೩೨೦೦೦೦ ವರುಷದಲ್ಲಿ ದೇವಾಂಗನೆಂಬ ಭಕ್ತನ ಮಾಡಿ ಹೆಸರಿಟ್ಟು ಕರೆದು ದಾಸೋಹವಂ ಮಾಡುವಲ್ಲಿ ಕಾಯಶೂನ್ಯನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡುವ ಭೇದವ ನೀವು ಬಲ್ಲಿರಲ್ಲದೆ ಉಳಿದವರಾರು ಅರಿಯರು. ತ್ರೇತಾಯುಗದ ೧೬ ಲಕ್ಷ ವರುಷದಲ್ಲಿ ಘಂಟಾಕರ್ಣನೆಂಬ ಭಕ್ತನ ಮಾಡಿ ಹೆಸರಿಟ್ಟು ಕರೆದು ದಾಸೋಹವಂ ಮಾಡುವಲ್ಲಿ ನೀಲಕಂಠನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡುವ ಭೇದವ ನೀವು ಬಲ್ಲಿರಲ್ಲದೆ ಮತ್ತಾರು ಅರಿಯರು. ದ್ವಾಪರಯುಗದ ೮ ಲಕ್ಷದ ವರುಷದಲ್ಲಿ ವೃಷಭನೆಂಬ ಭಕ್ತನಮಾಡಿ ದಾಸೋಹವಂ ಮಾಡುವಲ್ಲಿ ಅನುಮಿಷನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯಂ ಮಾಡುವ ಭೇದವ ನೀವು ಬಲ್ಲಿರಲ್ಲದೆ ಉಳಿದವರಾರು ಅರಿಯರು. ಕಲಿಯುಗದ ೪ ಲಕ್ಷದ ವರುಷದಲ್ಲಿ ಎನ್ನ ಹೊಯ್ದು ನಿಲಿಸಿದ ಕಾರಣ ದ್ವಾರಪಾಲಕ ಚಾಲುಕ್ಯರಾಯನ ಗರ್ಭದಲ್ಲಿ ಜನಿಸಿದವಗೆ ಬಿಜ್ಜಳನೆಂಬ ನಾಮವಾಯಿತ್ತು. ಇಂಗುಳೇಶ್ವರ ಬಾಗವಾಡಿಯ ಮಂಡಿಗೆಯ ಮಾದರಸ ಮಾದಲಾಂಬಿಕೆಯರ ಗರ್ಭದಲ್ಲಿ ಜನಿಸಿದ ಕಾರಣ ಬಸವನೆಂಬ ನಾಮವಾಯಿತ್ತು.

ನಾನು ಬಂದ ಕಾರ್ಯಕ್ಕೆ ನೀವು ಬಂದಿರಿ. ನೀವು ಬಂದ ಕಾರ್ಯಕ್ಕೆ ನಾನು ಬಂದೆನು. ನಾನು ನೀವು ಬಂದ ಕಾರ್ಯಕ್ಕೆ ಬಂದಾತ ನಲ್ಲಮಪ್ರಭ ದೇವರು. ಮುಂದೆ ಕೆಲವು ದಿವಸಕ್ಕೆ ಕಲ್ಯಾಣವೆಂಬ ಪ್ರಣತಿಯಾದಿತ್ತು ನಾನೇ ತೈಲವಾದೆನು. ಚಿಕ್ಕದಂಡನಾಯಕರೆ ಬತ್ತಿಯಾದಾರು. ಪ್ರಭುವೇವರೇ ಜ್ಯೋತಿಯಾದಾರು. ಪ್ರಣತಿ ಒಡೆಯಿತ್ತು. ತೈಲ ವರತಿತ್ತು. ಬತ್ತಿ ಸವೆಯಿತ್ತು. ಜ್ಯೋತಿ ಬಯಲಾಯಿತ್ತು. ಸೊಡ್ಡಳ ಬಾಚ

ರಸಯ್ಯ ಸುಂಕದ ಬಂಕಯ್ಯ ಹಡಪದಪ್ಪಣ್ಣ ಕೋಡುಗುಳಿ ಕೇಶಿರಾ
ಜಯ್ಯ ಕಲಿಕೇತ ಬ್ರಹ್ಮಯ್ಯ ಮಡಿವಾಳ ಮಾಚಿದೇವಯ್ಯ ಮೊದಲಾದ
ಏಳ್ನೂರೆಪ್ಪತ್ತು ಅಮರಗಣಂಗಳು ನಿಮ್ಮ ಕೈಯ್ಯೆಡೆಗೆ ಚಿಕ್ಕದಂಡನಾಯ
ಕರ ಕೊಟ್ಟು ನಾವು ಕಪ್ಪಡಿಯ ಸಂಗಮೇಶ್ವರಕೆ ಹೋದಿಹೆವು. ನಾವು
ಹೋದ ಮೂರುವರೆ ತಿಂಗಳಿಂದೆ ಮೇಲೆ ಹರಳಯ್ಯ ಮಧುವಯ್ಯಗ
ಳಿಂದ ಕದನ ಹುಟ್ಟಿತ್ತು. ಜಗದೇವ ಮೊಲ್ಲೆಬೊಮ್ಮಣ್ಣಗಳೀರ್ವರು ಪಂಜು
ಗಾರರಾಗಿ ಹೋಗಿ ಬಿಜ್ಜಳರಾಯನ ಕ್ಷಯವ ಮಾಡಿಯಾರು. ಅಳಿಯ
ಬಿಜ್ಜಳಂಗೆ ಪಟ್ಟವಾಗಿ ದಾಳಿಯ ಬಂದಾನು. ಕಾದರ ಹೊಳೆಯಲ್ಲಿ ಕಾದಾ
ಡಿಯಾರು. ಮುರುಗೋಡದಲ್ಲಿ ಮುರಿದಾರು. ಬಯಲ ಬಸವಣ್ಣನಲ್ಲಿ
ಕೂಗಿನ ಮಾರಿತಂದೆಗಳು ಬೊಬ್ಬಿಟ್ಟಾರು. ಅಸಂಖ್ಯಾತ ಮಹಾ ಗಣಂ
ಗಳು ಆಸನವನಿಕ್ಕಿ ಮಾತಾಡರು. ಅಲ್ಲಿಂದ ಉಳಿವೆಗೆ ನಡೆದಾರು.

ಕಲ್ಯಾಣ ಕೆಟ್ಟು ಕಲಬುರಿಗೆ ಎನಿಸಿತ್ತು. ಮಹಾ ದುಸ್ಸಂಗನೆಂಬ ಸುರಿ
ತಾಣನೆಂಬವ ಬಿರಿದಿಕ್ಕಿಯಾಳಿಯಾನು. ಅಲಾಹಿಲ್ಲಾ ಎಂಬ ಮುಸಲ್ಮಾನ
ರಾಕ್ಷಸರು ಏಕಚ್ಛತ್ರವೆನಿಸಿ ಆಳಿಯಾರು. ಚಪ್ಪಟಗತ್ತಿಯವರು ಘನ
ವಾದಾರು. ಡೊಂಕ ಬಿಲ್ಲಿನವರು ಎದ್ದಾಡಿಯಾರು. ಇಷ್ಟರಿಂದ ಮೇಲೆ
ಶಂಭು ತ್ರಿಪುರಾಂತಕದೇವರ ಶಿಖರವನಳಿದಾರು. ಆ ತ್ರಿಪುರಾಂತಕದೇವರ
ಪಶ್ಚಿಮ ಬೋದಿಗೆಯ ಚೇಳು ಬಯಲಾದೀತು. ಆ ತ್ರಿಪುರಾಂತಕದೇ
ವರ ಗರುಡಗಂಬವ ಕಿತ್ತೀಡಾಡ್ಯಾರು. ಆ ತ್ರಿಪುರಾಂತಕದೇವರ ಶಿವಾ
ಲಯ ಪಳಿದು ಮಸೂತಿಯ ಕಟ್ಟ್ಯಾರು. ಆ ತ್ರಿಪುರಾಂತಕದೇವರ ಮುಂದೆ
ಕಪಿಲೆಯ ಕೊಂದು ಬಾಣಸವ ಮಾಡಿಯಾರು. ಒತ್ತಿ ಒರಲಿತ್ತು.
ಮಂಗಳವಾಡದ ಬಸ್ತಿಯನಳಿದಾರು. ಕೊಲ್ಲಾಪುರದ ದೇವತೆಯ ಬೀಸಾ
ಟ್ಯಾರು. ಲಕ್ಷದಮೇಲೆ ತೊಂಬತ್ತಾರುಸಾವಿರ ಲಿಂಗದ ಗುಡಿಯಲ್ಲಿ
ಕುದುರೆಯ ಆಲಯವ ಕಟ್ಟಿಯಾರು.

ಕಲಿಯುಗದಲ್ಲಿ ಭಕ್ತಿ ಬರನಾದೀತು. ಆರು ದರುಶನ ಹದಿನೆಂಟು
ಸಮಯಕ್ಕೆ ವಿರೋಧವಾದೀತು. ಕುಂಜರ ಅಜನ ಮರಿ ಹೊಕ್ಕಿತ್ತು.
ಕುಂಜರನೊಂದು ಹದ್ದು ನಟ್ಟಿತ್ತು. ಆ ಹದ್ದನೊಂದು ಕಪ್ಪೆ ನುಂಗಿತ್ತು.
ಆ ಕಪ್ಪೆಯ ಮರಿಯ ಜಂಬುಕ ನುಂಗಿತ್ತು. ಬ್ರಹ್ಮವ ಹಾರೈಸಿ ನುಡಿ
ದಿತ್ತು. ದುರಿಗಿ ಮುರಿಗಿಗಳೆಂಬ ದೇವತೆಯರು ಬಂದು ಮರ್ತ್ಯಲೋಕವ

ಹೊಕ್ಕಾರು. ಪುಣ್ಯ ಸ್ತ್ರೀಯರೆಲ್ಲ ಜಾರಸ್ತ್ರೀಯರಾದರು. ಅನಂತ ಹಿರಿಯರೆಲ್ಲ ಮುಖಭಂಗಿತರಾದಾರು.

ಪರ್ವತದ ಮೇಲೆ ಸೂಳೆಯರು ಗುಡಿಸಲು ಕಟ್ಟಿಯಾರು. ಸುರೆಯು ಮಾರೀತು. ಪಶುಹತ್ಯ ಗೋಹತ್ಯವ ಮಾಡಿಯಾರು. ಪರ್ವತದ ಮೇಲೆ ಜಂಗಮರೆಲ್ಲ ಅನಾಚಾರಿಗಳಾದಾರು. ಭಕ್ತರೆಲ್ಲ ಹೊಲೆಯರಾದಾರು. ಆ ಪರ್ವತದ ಮೇಲೆ ಠಕ್ಕುಟವುಳಿ ಘನವಾದೀತು. ಪುಣ್ಯವೆಲ್ಲ ಸೂಕ್ಷ್ಮವಾದೀತು. ಆ ಪರ್ವತದ ಮೇಲೆ ಜಂಗಮದ ರೋಹಿತ ಭೂಮಿಯ ಮೇಲೆ ಬಿದ್ದಿತ್ತು. ಆ ಪರ್ವತ ಕೆಟ್ಟು ಅರಣ್ಯವಾದಿತ್ತು. ಅಲ್ಲಿ ಹುಲಿ ಕರಡಿಯಾಡಿಯಾವು.

ನೈಋತ್ಯ ವಿರೂಪಾಕ್ಷ ಕೆಟ್ಟು ಏಳನೂರೆಪ್ಪತ್ತು ಕೊಟ್ಟವಾದೀತು. ಆ ವಿರೂಪಾಕ್ಷ ದೇವರ ಮುಂದಣ ಮನ್ಮಥ ಕೊಂಡ ಹೂಳೀತು. ಕಾಜಿನ ಕಳಸವಿಟ್ಟಾವು. ಲಕ್ಷದ ಮೇಲೆ ತೊಂಬತ್ತಾರು ಸಾವಿರ ಕುದುರೆ ರಣದಲ್ಲಿ ಮಡಿದೀತು. ಮಾತಂಗ ಪರ್ವತದಲ್ಲಿ ಮಸೂತಿಯ ಕಟ್ಟಿಯಾರು.

ನಾವು ಹೋದೇಳು ನೂರೆಪ್ಪತ್ತು ವರುಷದ ಮೇಲೆ ಕಲಬುರಿಗೆ ಎಂಬುದು ಕೆಟ್ಟು ಬೆಟ್ಟದ ಕೋಟೆ ಬಿದಿರಿಯೆಂಬ ಪಟ್ಟಣವಾದೀತು. ಆ ಪಟ್ಟಣದಲ್ಲಿ ಏಳು ಛತ್ರವನ್ನೆತ್ತಿ ರಾಜಕುಲವನೆನಿಸಿ ಆಳಿಯಾರು. ಆ ಬಿದಿರಿಯ ಹುಲಿ ಮುಖದ ಮುಂದೆ ನೆಮಥಬಾದ ಎಂಬ ನಗರ ಹುಟ್ಟಿತ್ತು.

ಶತ್ರು ಮಿತ್ರರು ಸಮಾಧಾನಿಯಾಗಿ ಎಪ್ಪತ್ತುಮೂರುವರೆ ವರುಷದ ಮೇಲೆ ಪಶ್ಚಿಮ ದಿಕ್ಕಿನಿಂದ ದೊಡ್ಡ ತಲೆಯ ರಾಕ್ಷಸರು ಬಂದಾರು. ಖರನಾಮ ಸಂವತ್ಸರಕ್ಕೆ ಉತ್ತರದ ರಾಕ್ಷಸಿ ದಕ್ಷಿಣಕ್ಕೆ ನಡೆದಾಳು. ಆ ದಕ್ಷಿಣ ಭಾಗದಲ್ಲಿ ಕೃಷ್ಣಾವತಾರವಾದೀತು. ಅದಕ್ಕೆ ರೋಹಿತದ ಕಡಲು ಹರಿದೀತು. ಖರನಾಮ ಸಂವತ್ಸರದ ಕಡೆಯ ಪಾದದಲ್ಲಿ ಆ ರಾಕ್ಷಸಿ ಮಡಿದಾಳು.

ನಂದನನಾಮ ಸಂವತ್ಸರಕ್ಕೆ ಮುಟ್ಟುಕಿತ್ತು ಉರುಳೀತು. ಹನ್ನೊಂದು ಕೊಳಗ ಜೋಳ ಹರಿದೀತು. ಐಗಳು ಬೀಜ ಉಳಿದೀತು. ಅಂದಿಂಗೆ ನಮ್ಮ ಪುರಾತನರು ಬಂದಾರೆಂದು ಲೋಕ ಕೇಳಿತ್ತು. ವಿಜಯನಾಮ ಸಂವತ್ಸರದಲ್ಲಿ ರೋಹಿತದ ಕಡಲು ಹರಿದೀತು. ಹರಿಯಲಿಕ್ಕೆ ವಿಳಂಬಿನಾಮ ಸಂವತ್ಸರದಲ್ಲಿ ಅನಂತ ಹಿರಿಯರೆಲ್ಲ ವ್ರತ ನೇಮಂಗಳಂ ಬಿಟ್ಟು ಸಂಸಾರಿಗಳಾದಾರು. ವಿಕಾರಿ ಘನವಾದೀತು. ಪ್ಲವಂಗನಾಮ ಸಂವತ್ಸರದಲ್ಲಿ ರಾಕ್ಷ

ಸರು ಸೂಕ್ಷ್ಮವಾದಾರು. ಶುಭಕ್ರತುನಾಮ ಸಂವತ್ಸರದಲ್ಲಿ ಇಪ್ಪತ್ತುಮೂರು ವರೆ ವರೂಷದ ಛತ್ರ ಬಯಲಾದೀತು. ಶುಭಕ್ರತುನಾಮ ಸಂವತ್ಸರದಲ್ಲಿ ರಾಕ್ಷಸರಿಗೆ ಕದನ ಹುಟ್ಟೀತು. ಕ್ರೋಧಿನಾಮ ಸಂವತ್ಸರದಲ್ಲಿ ಮುಂದು ಹಿಂದಾದೀತು. ಹಿಂದು ಮುಂದಾದೀತು.

ಪಶ್ಚಿಮದಿಂದ ರಾಕ್ಷಸರು ಬಂದಾರು. ಬಿದಿರಿಯಲ್ಲಿ ಮಹಾಮದು ತ್ರಿಯಂಕಟರು ಅಮದಾರಸಿಗೆ ಹಿಮಸೇತು ಮಧ್ಯದ ಶಿಲೆಗಳು ಬಂದಾವು. ಲೋಹದ ಕೀಲು ಕಂಭವನಿಕ್ಕಿ ಜಡಿದಾರು. ಬಹು ಮಾಣಿಕ್ಯದ ನವಮಾಜದ ಕಲ್ಲು ಕಿತ್ತುಯಾಳಲಿಕ್ಕೆ ಪರ್ವತದಲ್ಲಿ ರಚಿಸಿದಾತನ ಶಿರ ದಕ್ಷಿಣದಲ್ಲಿ ಕ್ಷಯುವಾದಿತ್ತು. ಹಿರಿದು ಕಿರಿದಾದೀತು. ಕಿರಿದೆ ಹಿರಿದಾದೀತು. ಆಗಲಿಕ್ಕೆ ಅಜನ ಮರೆಯ ಕುಂಜರನೆದ್ದಿತ್ತು. ಹಣೆಯ ಹನ್ನೆರಡು ಗಾವುದ ಬೆನ್ನವಂ ಬೈನೂರು ಗಾವುದು ಬಾಲ ಬೀಸೀತು. ಆ ಬಿದಿರಿಯ ಹುಲಿ ಮುಖದ ಹುಲಿಗು ಆ ಅಜನ ಮರೆಯ ಕುಂಜರಗು ತರ್ಕ ಹುಟ್ಟೀತು. ಹುಟ್ಟಲಿಕ್ಕೆ ರಕ್ತದ ಕಡಲು ಹರಿದೀತು. ಹರಿಯಲಿಕ್ಕೆ ರಾಕ್ಷರಿಗೆ ಅದೆ ಕಡೆಯಾದೀತು.

ನವಖಂಡ ಪೃಥ್ವಿಗೆ ಆರು ಮುಖವಾದೀತು. ಮಹಾ ಸೋಜಿಗ ಹುಟ್ಟೀತು. ವಿಷದ ಗಾಳಿ ಬೀಸೀತು. ನಂಜಿನ ಮಳೆ ಸುರಿದೀತು. ಹನ್ನೆರಡು ಗಾವುದಕೊಂದು ಪಟ್ಟಣ, ಮೂಗಾವುದಕೊಂದು ಸಂತೆಯಾದೀತು. ಹೊಟ್ಟೆ ಹಾರೀತು. ಘಟ್ಟ ಉಳಿದೀತು. ಮಿಕ್ಕಿನದು ಪಲ್ಲಟಿಸಿ ನಿಂದಂದಿಂಗೆ ನೂರೊಂದಕೊಬ್ಬರಾದಾರು.

ನಾವು ಹೋದ ೭೭೭ ವರುಷಕ್ಕೆ ಬಿದಿರಿ ಎಂಬ ಪಟ್ಟಣ ಹುಲಿಕರಡಿಯಾಡಿಯಾವು. ಕಲ್ಯಾಣ ಮುನ್ನಿನಂತೆ ಪಟ್ಟಣವಾದೀತು. ೭ ಕ್ಷದ ಮೇಲೆ ತೊಂಬತ್ತಾರುಸಾವಿರ ಗೋರೆ ಗುಮ್ಮಟವಳಿದಾವು. ನವನಾಥಸಿದ್ಧರಿಗೆ ಬಿಡಾರವಾದೀತು. ಶೂನ್ಯಸಿಂಹಾಸನಕ್ಕೆ ಲಿಂಗಮುದ್ರೆ ಪ್ರತಿಷ್ಠೆಯಾದೀತು. ಗುಡಿಯವರು ಗುಡಿಗೆ ಬಂದಾರು. ಮನೆಯವರು ಮನೆಗೆ ಬಂದಾರು. ಬರಲಿಕ್ಕೆ ಮರ್ತ್ಯಲೋಕದ ಶಾಪವಳಿದೀತು. ಅಳಿಯಲಿಕ್ಕೆ ಕಲ್ಯಾಣದ ನಾಲ್ವತ್ತೆಂಟು ಗಾವುದ ವಿಸ್ತೀರ್ಣವೆಲ್ಲ ಲಿಂಗಮಯವಾದೀತು. ಅಂದಿಂಗೆ ನಮ್ಮ ಪುರಾತನರು ಬಂದಾರು. ಎಂಬತ್ತಾರು ಲಕ್ಷ ತೊಂಬತ್ತಾರು ಸಾವಿರ ಅಮರಗಣಂಗಳು ಭೂಮಿಯ ಮೇಲೆ ಉದ್ಭವಿಸಾರು. ಆನಂದನಾಮ ಸಂವತ್ಸರದ ಆಹೊ ರಾತ್ರಿಯಲ್ಲಿ ಕಲ್ಯಾಣದ ತ್ರಿಪು

ರಾಂತಕ ದೇವರ ಅನುಭಾವ ಮಂಟಪದಲ್ಲಿ ವೀರಬಸವಂತರಾಯಗೆ ಪಟ್ಟಾಭಿಷೇಕವಾದೀತು. ಚಿಕ್ಕದಣ್ಣಾಯಕರಿಗೆ ಪ್ರಧಾನಿ ಪಟ್ಟಾಭಿಷೇಕವಾದೀತು. ನಾನು ಬಾರೆನು. ವೀರಬಸವಂತರಾಯನು ಚಿಕ್ಕದಣ್ಣಾಯಕರು ಅಲ್ಲಮಪ್ರಭುದೇವರು ಮುಖ್ಯವಾಗಿ ಅಸಂಖ್ಯಾತ ಮಹಾಗಣಂಗಳು ಕಲ್ಯಾಣಕ್ಕೆ ಬಂದಾರು. ಕಲ್ಯಾಣ ಪಟ್ಟಣವಾದೀತು ಹಿಂದಕ್ಕೆ ಹತ್ತು ಮುಂದಕ್ಕೆ ಹನ್ನೊಂದಕ್ಕೆ ಬಾರರು ಇದು ತಪ್ಪದು ನಿಮ್ಮಾಣೆ ನಿಮ್ಮ ಪ್ರಮಥರಾಣೆ ನಿಮ್ಮ ರಾಣಿವಾಸದಾಣೆ. ಕೂಡಲಸಂಗಮದೇವಾ.

ಬಸವೇಶ್ವರದೇವರು ನಿರೂಪಿಸಿದ ಕಾಲಜ್ಞಾನದ ವಚನ ಸಮಾಪ್ತ.



# ಕಲ್ಯಾಣಿಯಮ್ಮನವರ ಕಾಲಜ್ಞಾನದ ವಚನ.

ಪಾಲಿಯ ಭಾಂಡಾರಕ್ಕೆ ಅಶ್ವಪತಿ ಗಜಪತಿ ನರಪತಿ ಮೂವರು ಮುಖ್ಯವಾಗಿ ಹದಿನೆಂಟು ನೆಜವು ಬರುವುದಕ್ಕೆ ಪೂರಾಯಿತು. ಇನ್ನು ಕಂದ ತಂದೆಯ ಕೊಂದಂದಿಗೆ ಕಲಿಶಕೆ ೪೬೬೮ ವರುಷ ಸುಣ್ಣದ ಮೂಗಿನ ಅಣ್ಣಗಳು ಅಳಿದ ಮುಂಬಿಸಿಗೆ ವೀರವಸಂತನ ದಂಡು ಬಾಹುದು.

ಈಶ್ವರನಾಮ ಸಂವತ್ಸರದಲ್ಲಿ ಧೂಮಕೇತು ಮೂಡೀತು. ಆರ ಡಿಯುರಾಯ ಬಂದಾನು. ದಾರಾಯಿ ಭೂರಾಮ ಬಂದಾನು. ದಾರಾಯಿ ಭೂರಾಮ ೩೬ ವರುಷ ದಾರಾವಿಭುರಾಮನವತಾರ ೧೧ ಕಡೆಯಲ್ಲಿ ರಾಮರಾಜನೆಂಬ ಹೆಸರಿನಿಂದ ದಕ್ಷಿಣ ನಗರದಲ್ಲಿ ಕಟ್ಟಿ ೭ ವರುಷ ಬಲ ವಂತ ನೃಪನು ದಟ್ಟಿಲಾಳುವನು. ಸಮರಾಜ್ಯವೆನಿಸಿ ಮುಟ್ಟಿ ನಡೆದಾನು. ಉತ್ತರದ ಕಾಶಿಯ ಸೃಷ್ಟಿಯ ನೆಲ್ಲವನು ಒಳಹೊಕ್ಕು ರಾಮನ ಶೇಷ ಕರ್ಮಂಗಳಂ ಮಾಡಿ ವಿಶ್ವೇಶ್ವರನ ಕಂಡು ಬಂದಲ್ಲಿ ತುರುಗ ಮೀಸಲ ಳಿಯದೆ ವಿರೂಪಾಕ್ಷನ ಕರುಣದಿಂದೆ ಅಳಿಯರಾಮನು ತಂದ ಕಿಲಾಪದ ತಂಡವನೆ ತೆಗೆಯಲು ಮರಣ ರೂಪಿಟ್ಟು ತೋರುವುದು. ನಾಲ್ಕು ದಿಕ್ಕಿಗೆ ಕಿಲಾಪವ ೭ ವರುಷಕ್ಕೆ ಭೂಪ ಕ್ಷತ್ರಿಯ ಅಳಿವ. ಕಾಗದಲ್ಲಿ ಆಪತ್ತು ತೋರಿ ಜಗದಲ್ಲಿ ಹುರುಮಂಜಿಯ ದೇಶವನಾಳ್ವ ಹಬ್ಬಿಸಿ ಕೊಳ್ಳಿ ಯರು ಸೂಚಿಸಿ ಅವರ ನೆಜೆಗಳ ಪಿಡಿದುಕೊಂಡು ಆ ಸೇನೆ ಬಲವು ಗಜ ಪತಿಯ ಬಲಗೊಂಡು ಮೀಸಲಳಿಯದೆ ಭಾಂಡಾರವ ತೆಗೆವೆನೆಂದು ಮಾನು ಷನ ಕೊಂದು ಗಜಪತಿಯು ಹೊಯಿದಾಡಿ ರೋಷದಲ್ಲಿ ಮಡಿದಾರು. ಎರಡೊಂದು ಮಾಸಕ್ಕೆ ಲೇಸ ತೋರುವದು. ಕುಂಬದ ಕಡೆಯಾಟವು ಶಿವನಿಂದೆಯ ಮಾಡುವ ತಾಟಕರಳಿದಾರು. ಹರನಿಂದೆ ಗುರುನಿಂದೆ ಪರ ನಿಂದೆಯ ಮಾಡುವರೆಲ್ಲ ಶ್ವಾನಸೂಕರ ಗರ್ಭದಲ್ಲಿ ಬಪ್ಪದು ತಪ್ಪದು. ಇದು ಸಿದ್ಧಾಂತವು.

ಶರಣರ ಸಂತತಿಯ ಬಯಸುವರೆಲ್ಲರು ಅರಿತುಕೊಂಡಿರಿ. ಶಿವಸಾ ಕ್ಷಿಯಾಗಿ ಕಲಿ ೪೭೭೭ ವರುಷಕ್ಕೆ ಚೆಲುವ ಚನ್ನಬಸವಣ್ಣನು ವೀರವ ವಂತರಾಯನು ಬಂದಾರೆಂದು ಬಲುಕಾಲ ಕೂಗೋ ಕೂಗೋ ಕೂಗಿನ ಮಾರಿ ತಂದೆ. ಜಗವೊಳಗೆ ಶರಣರ ನಾಮವ ಅವರವರ ಪೆಸರುಗಳರಿದು

# ಸಟೀಕಾ ಷಟ್‌ಸ್ಥಲ ಬ್ರಹ್ಮದೀಪಿಕಾ.

## ಪ್ರಥಮೋಪದೇಶ-ತತ್ವಜ್ಞಾನವಿಚಾರ.

**ಶ್ರೀ ರೇಣುಕ ಕುಲಖ್ಯಾತಾನ್ ಪಂಚಲಿಂಗಾತ್ಮಕಾನ್ ಕ್ರಮಾತ್। ವಿಶ್ವನಾಥಾರ್ಯ ವಾರಣಾಸೀಶ ಸರ್ವೇಶ ದೇಶಿಕಾನ್॥ ಸೋಸಲೆ ವೀರಣಾರಾಧ್ಯ ರೇವಣಸಿದ್ಧಯೋಗಿನೌ। ನತ್ವಾಕುರ್ವೇ ರೇವಣಾರ್ಯಃ ಷಟ್ಸ್ಥಲಬ್ರಹ್ಮದೀಪಿಕಾಂ ॥೧॥**

**ಟೀಕು**— ಶ್ರೀ ರೇಣುಕ ಕುಲಖ್ಯಾತಾನ್=ರೇವಣಸಿದ್ದೇಶ್ವರನ ವಂಶದಲ್ಲಿ ಪುತ್ರ ಪರಂಪರೆಯಿಂದ ಪ್ರಸಿದ್ಧರಾದ ಕ್ರಮಾತ್=ಕ್ರಮದಿಂದೆ ಪಂಚಲಿಂಗಾತ್ಮಕಾನ್=ಪಂಚಬ್ರಹ್ಮ ಪಂಚಸಾದಾಖ್ಯವೆಂಬ ಪರ್ಯಾಯನಾಮವುಳ್ಳ ಪಂಚಲಿಂಗಸ್ವರೂಪರಾದ ವಿಶ್ವನಾಥದೇವರು ವಾರಣಾಸಿದೇವರು, ಸರ್ವೇಶ್ವರದೇವರು, ಸೋಸಲೆ ವೀರಣ್ಣೊಡೆಯರು ರೇವಣಸಿದ್ಧಯ್ಯದೇವರೆಂಬ ಶಿವಯೋಗೀಶ್ವರರನು ನತ್ವಾ=ನಮಸ್ಕರಿಸಿ ರೇವಣಾರ್ಯಃ=ರೇವಣಸಿದ್ಧದೇವರ ಪುತ್ರನಾದ ರೇವಣಾರಾಧ್ಯರೆಂಬ ನಾನು ಷಟ್ಸ್ಥಲಬ್ರಹ್ಮದೀಪಿಕಾಂ=ಷಟ್ಸ್ಥಲಬ್ರಹ್ಮದೀಪಿಕೆ ಎಂಬ ಸಂಗ್ರಹವನು ಕುರ್ವೆ=ಮಾಡುತ್ತಿದ್ದೇನೆ.

ಅನಂತರದಲ್ಲಿ ಬೃಹದಾರಣ್ಯಕೋಪನಿಷನ್ಮಂತ್ರ ಸೂತ್ರದಿಂದೆ ಸಮಸ್ತ ಶಾಸ್ತ್ರಂಗಳಿಗುತ್ತರವಾದ ವೇದೋತ್ಪತ್ತಿಯನು ತೋರಿಸುತಿರ್ದಪಂ.

**ಅಸ್ಯಮಹತೋ ಭೂತಸ್ಯ ನಿಶ್ವಸಿತಮೇತದ್ರು ಗ್ವೇದೋ ಯಜುರ್ವೇದಸ್ಸಾಮವೇದ ಇತಿ ॥೨॥**

**ಟೀಕು**— ಅಸ್ಯ ಮಹತೋ ಭೂತಸ್ಯ=" ಈಶಾನಸ್ಸರ್ವ ವಿದ್ಯಾನಾಮೀಶ್ವರಃ ಸರ್ವಭೂತಾನಾಂ " ಎಂಬ ಮಂತ್ರದಿಂದೆ ಮಹಾಭೂತ ಸಂಜ್ಞೆಯುಳ್ಳ ಈ ಪರಮೇಶ್ವರನ ಏತತ್ ನಿಶ್ವಸಿತಂ=ಈ ನಿಶ್ವಾಸಮಾರುತನು ಋಗ್ವೇದಃ=ಋಗ್ವೇದವು ಯಜುರ್ವೇದಃ=ಯಜುರ್ವೇದವು ಸಾಮವೇ

ದಃ=ಸಾಮವೇದವು ಇತಿ=ಈ ಶ್ರುತಿಪ್ರಮಾಣದಿಂದೆ ಮಹಾದೇವನ ನಿಶ್ವಾಸ ಮಾರುತದಿಂದೆ ಅಪ್ರಯತ್ನವಾಗಿ ಅವತರಿಸಿದವು

ವೇದತ್ರಯಂಗಳು ಇನ್ನು ಅಜಿತಾಗಮ ಸೂತ್ರಾರ್ಥದಿಂದೆ ವೇದೋತ್ಪತ್ತಿಯನು ತೋರಿಸುತಿರ್ದಪಂ

**ವೇದಾಃ ಸಾಂಗಾಶ್ಚ ಚತ್ವಾರಃ ಶಿವಸ್ಯೋರ್ಧ್ವ ಮುಖೋದ್ಭವಾಃ ॥೩॥**

**ಟೀಕು**— ಸಾಂಗಾಃ=ಛಂದೋವ್ಯಾಕರಣ ಕಲ್ಪನಿರುಕ್ತ ಶಿಕ್ಷಾಜ್ಯೋತಿಷ್ಯವೆಂಬ ಷಡಂಗಗಳೊಡನೆ ಕೂಡಿ ವರ್ತಿಸುತಿರ್ದ ಚತ್ವಾರೋವೇದಾಃ=ಋಗ್ಯಜುಃ ಸಾಮಾಥರ್ವಣವೆಂಬ ನಾಲ್ಕು ವೇದಂಗಳು ಶಿವಸ್ಯ=ಸದಾಶಿವನ ಊರ್ಧ್ವಮುಖೋದ್ಭವಾಃ=ಈಶಾನ್ಯಮುಖದೊಳುತ್ಪನ್ನವಾದವು ಈ ಶಿವಾಗಮ ಪ್ರಮಾಣದಿಂದೆ ವೇದವು ಶಿವಪ್ರಣೀತವೆಂಬರು.

ಹಾಗೆಯೇ ಚತುರ್ವೇದ ತಾತ್ಪರ್ಯಸಂಗ್ರಹದ ಸೂತ್ರಾರ್ಥದಿಂದೆ ವೇದೋತ್ಪತ್ತಿಯನು ತತ್ಪ್ರಾಮಾಣ್ಯವನು ತೋರಿಸುತಿರ್ದಪಂ॥

**ವೇದಃ ಸ್ವಯಂ ಭವತು ವಾಯು ದಿವಾಪ್ರಣೀತಿಃ।**
**ಸರ್ವಂ ಪ್ರಮಾಣ ಮವಿಹಾಯ ಗೃಹ್ಣಾತಿಲೋಕಃ ॥೪॥**

**ಟೀಕು**— ವೇದಃ=ವೇದವು ಸ್ವಯಂ ಭವತು ವಾ=ಸ್ವಯಂಭುವಾದರೂ ಆಗಲಿ ಸರ್ವಂ=ಸಮಸ್ತವಾದ ಸಾಂಗೋಪನಿಷತ್ತಿನೊಡನೆ ಕೂಡಿದ ವೇದ ಸಮೂಹವನು ಲೋಕಃ=ವಿದ್ವಜ್ಜನವು ಅವಿಹಾಯ = ಬಿಡದೆ ಪ್ರಮಾಣಂ= ಪ್ರಮಾಣ್ಯವನಾಗಿ ಗೃಹ್ಣಾತಿ=ಸ್ವೀಕರಿಸುತ್ತಿರ್ದಪುದು

ಇನ್ನು ವೃದ್ಧ ಜಾಬಾಲೋಪನಿಷನ್ಮಂತ್ರಸೂತ್ರದಿಂದೆ ಸಮಸ್ತ ಸಮಯ ಶಾಸ್ತ್ರಂಗಳಿಗುತ್ತರವಾದ ಶಿವಾಗಮೋತ್ಪತ್ತಿಯಂ ತೋರಿಸುತಿರ್ದಪಂ

**ಅವಿದ್ಯಾದಿ ಪಂಚಕ್ಲೇಶಾನಾಕುಲಃ ಸರ್ವಾಗಮಪ್ರಣೀತಾ ಸಕಲ ಜಗತ್ಕರ್ತಾ ನಿತ್ಯೋ ನಿರಂಜನಇತಿ ॥೫॥**

**ಟೀಕು**— ಅವಿದ್ಯಾದಿ ಪಂಚಕ್ಲೇಶಾನಾಕುಲಃ=ಅವಿದ್ಯೆ ಅಸ್ಮಿತೆ ರಾಗ-ದ್ವೇಷ-ಅಭಿನಿವೇಶನ ಮೊದಲಾದ ಪಂಚಕ್ಲೇಶಂಗಳಿಂದ ಮುಸುಕಲ್ಪ

ಡದೆ ಇರ್ದ ನಿತ್ಯಃ=ಕೇಡಿಲ್ಲದಿರ್ದ ನಿರಂಜನಃ=ಮಲರಹಿತನಾಗಿರ್ದ ಸಕಲಜಗತ್ಕರ್ತಾ=ಸಮಸ್ತ ಜಗತ್ತಿಗೊಡೆಯನಾದ ಸರ್ವೇಶ್ವರನು ಸರ್ವಾಗಮಪ್ರಣೀತಾ = ಕಾಮಿಕಾದಿವಾತುಲಾಂತರವಾದ ಸಕಲಾಗಮಂಗಳನು ಹೇಳುತ್ತಿರ್ದಾತನು.

ಹಾಗೆಯೇ ಮೃಗೇಂದ್ರಸೂತ್ರದಿಂದೆ ಶಿವಾಗಮೋತ್ಪತ್ತಿಯಂ ತೋರಿಸುತಿರ್ದಪಂ

**ತ್ರಿಪದಾರ್ಥಂ ಚತುಷ್ಪಾದಂ ಮಹಾತಂತ್ರಂ ಜಗತ್ಪತಿಃ।**
**ಸೂತ್ರೇಣೈಕೇನ ಸಂಗೃಹ್ಯ ಪ್ರಾಹ ವಿಸ್ತರಶಃ ಪುನಃ ॥೬॥**

**ಟೀಕು**— ಜಗತ್ಪತಿಃ=ಸಕಲ ಜಗತ್ಕರ್ತೃವಾದ ಸರ್ವೇಶ್ವರನು ತ್ರಿಪದಾರ್ಥಂ=ಪತಿ, ಪಶು, ಪಾಶವೆಂಬ ತ್ರಿಪದಾರ್ಥಜ್ಞಾನಮುಳ್ಳ, ಚತುಷ್ಪಾದಂ=ಜ್ಞಾನ, ಕ್ರಿಯಾ, ಚರ್ಯಾ, ಯೋಗವೆಂಬ ನಾಲ್ಕುಪಾದಂಗಳುಳ್ಳ ಮಹಾತಂತ್ರಂ=ಸಿದ್ಧಾಂತಶಾಸ್ತ್ರವನು ಏಕೇನಸೂತ್ರೇಣ=ಒಂದು ಸೂತ್ರದಿಂದಲೇ ಸಂಗೃಹ್ಯ=ಸಂಗ್ರಹಿಸಿ ಪುನಃ=ಮರಳಿ ವಿಸ್ತರಶಃ=ವಿಶಾಲವಾಗಿ ಪ್ರಾಹ=ಹೇಳುತ್ತಿರ್ದಪನು.

ಇನ್ನು ಚತುರ್ವೇದ ತಾತ್ಪರ್ಯ ಸಂಗ್ರಹ ಸೂತ್ರಾರ್ಥದಿಂದೆ ವೇದಾಗಮ ಪ್ರಾಮಾಣ್ಯವನು ತೋರಿಸುತಿರ್ದಪಂ.

**ವೇದಾಃ ಪ್ರಮಾಣ ಮಿತಿಸಂಗಿರ ಮಾಣ ಏವ।**
**ದಿವ್ಯಂತವಾಗಮಮಮನ್ವೈತಿಜನಃ ಪ್ರಮಾಣಂ ॥೭॥**

**ಟೀಕು**— ಭೋ ಹರ = ಎಲೈ ಪರಮೇಶ್ವರನೆ ವೇದಾಃಪ್ರಮಾಣಮಿತಿ = ವೇದಂಗಳು ಪ್ರಮಾಣವೆಂದು ಸಂಗಿರಮಾಣಃ = ಪ್ರತಿಜ್ಞೆಯನ್ನು ಮಾಡುತ್ತಿರ್ದ ಜನಃ = ವಿದ್ವಜ್ಜನವು ದಿವ್ಯ = ಮನೋಹರವಾದ ತವ = ನಿನ್ನ ಆಗಮಂ = ಆಗಮವನು ಪ್ರಮಾಣಮೇವ = ಪ್ರಮಾಣ್ಯವನ್ನಾಗಿಯೆ ಅನ್ವೈತಿ = ತಿಳಿಯುತ್ತಿರ್ದಪುದು.

ಹಾಗೆಯೇ ವೀರತಂತ್ರ ಸೂತ್ರಾರ್ಥದಿಂದೆ ತೋರಿಸುತಿರ್ದಪಂ.

**ಸರ್ವವೇದೇಷು ಯದ್ದೃಷ್ಟಂ ತತ್ಸರ್ವಂಕು ಶಿವಾ**
**ಗಮೇ ॥೮॥**

**ಟೀಕು**— ಸರ್ವವೇದೇಷು = ಸಮಸ್ತವೇದಂಗಳಲ್ಲಿ ಯತ್ = ಆವು ದಾನೊಂದು ಪ್ರಮಾಣವು ದೃಷ್ಟಂ = ಕಾಣಲ್ಪಟ್ಟಿತ್ತು. ತತ್ಸರ್ವಂ = ಆ ಸಮಸ್ತ ಪ್ರಮಾಣವು ಶಿವಾಗಮ = ಶಿವಾಗಮದಲ್ಲಿ ದೃಷ್ಟ = ಕಾಣಲ್ಪಟ್ಟಿತ್ತು ಇತಿ ವೇದಾಗಮ ಪ್ರಾಮಾಣ್ಯಂ

ಇನ್ನು ಕಾಮಿಕ ಸೂತ್ರದಿಂದೆ ವೇದಾಗಮೈಕ್ಯವನು ತೋರಿಸುತ್ತಿರ್ದಪಂ

**ಸಿದ್ಧಾಂತೋ ವೇದಸಾರಃ ಸ್ಯಾದನ್ಯಚ್ಚೇತ್ತು ಬಹಿಷ್ಕೃತಂ**
**ಸಿದ್ಧಾಂತವಿಹಿತಾಚಾರೊ ವೈದಿಕಾಚಾರ ಉಚ್ಯತೆ ॥೯॥**

**ಟೀಕುಃ**— ಸಿದ್ಧಾಂತಃ = ಶಿವಾಗಮವು ವೇದಸಾರಃ = ವೇದಸಾರವು ಸ್ಯಾತ್ = ಅಹುದು ಅನ್ಯಚ್ಚೇತ್ತು = ಉಳಿದ ಶಾಸ್ತ್ರನಾದೊಡೆ ಬಹಿಷ್ಕೃತಂ = ಬಹಿಷ್ಕರಿಸಲ್ಪಟ್ಟಿತು ಸಿದ್ಧಾಂತವಿಹಿತಾಚಾರಃ = ಶಿವಾಗಮದಲ್ಲಿ ವಿಧಿಸಲ್ಪಟ್ಟ ಸದಾಚಾರವು ವೈದಿಕಾಚಾರಃ = ವೇದೋಕ್ತಾಚಾರವೆಂದು ಉಚ್ಯತೆ = ಹೇಳಲ್ಪಡುತ್ತಿರ್ದಪುದು.

ಹಾಗೆಯೆ ಸಿದ್ಧಾಂತಶಿಖಾಮಣಿ ಸೂತ್ರದಿಂ ತೋರಿಸುತ್ತಿರ್ದಪಂ

**ವೇದಸಿದ್ಧಾಂತಯೋರೈಕ್ಯ ಮೇಕಾರ್ಥ ಪ್ರತಿಪಾದನಾತ್। ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಸ್ಸದಾ. ॥೧೦॥**

**ಟೀಕು**— ವೇದಸಿದ್ಧಾಂತಯೋಃ = ವೇದಾಗಮಂಗಳಿಗೆ ಏಕಾರ್ಥ ಪ್ರತಿಪಾದನಾತ್ = ಒಂದೆಯರ್ಥವನೆ ಪ್ರತಿಪಾದಿಸುವದರ ದೆಸೆಯಿಂದೆ ಐಕ್ಯಂ = ಏಕತ್ವವು ಏತಯೋಃ = ಈ ವೇದಾಗಮಂಗಳ ಪ್ರಾಮಾಣ್ಯಂ= ಪ್ರಮಾಣವು ಸದೃಶಂ = ಸಮಾನವಾಗಿ ಪಂಡಿತೈಃ = ವೇದಾಗಮ ಪಾರಂಗತರಾದ ವಿದ್ವಾಂಸರಿಂದೆ ಸದಾ = ಎಲ್ಲಾಕಾಲದಲ್ಲಿಯೂ ಜ್ಞೇಯಂ = ಅರಿಯಲು ಯೋಗ್ಯವು ಇತಿವೇದಾಗಮೈಕ್ಯಂ.

**ಶಿವಶಕ್ತಿಃ ಸದಾಶಿವ ಈಶ್ವರಃ ಶುದ್ಧವಿದ್ಯೇತಿ। ಮಾಯಾ ಕಾಲೊನಿಯತಿಃ ಕಲಾವಿದ್ಯಾರಾಗಃ ಪುರುಷ ಇತಿ ತತಃ ಪ್ರಕೃತಿಃ ಪ್ರಕೃತೇರ್ಮಹಾನ್ ಮಹತೋ ಗುಣತ್ರಯಂ**

ವರ್ಷ 8 ನವೆಂಬರ 1933 [ಸಂಚಿಕೆ 4.

ವಿಷಯಾನುಕ್ರಮಣಿಕೆ

# ಶಿವಾನುಭವ

ವರ್ಷ ೮] ನವ್ಹಂಬರ ೧೯೩೪ [ಸಂಚಿಕೆ ೪

## ಅಂತರಷ್ಟಾವರಣಗಳು.

(ಲೇಖಕಃ—ಕಲ್ಯಾಣಪ್ಪ ಬ್ಯಾಳಿ. ಬಿ. ಎ. ಸಿದ್ದೇಶ್ವರ ಹಾಯಸ್ಕೂಲ ವಿಜಾಪುರ.)

ಅಷ್ಟಾವರಣಗಳಲ್ಲಿ ಅಂತರಷ್ಟಾವರಣಗಳೆಂದೂ ಬಾಹ್ಯ ಅಷ್ಟಾವರಣಗಳೆಂದೂ ಎರಡು ವಿಧಗಳುಂಟು. ಬಾಹ್ಯಅಷ್ಟಾವರಣಗಳು ವೀರಶೈವರಿಗೆ ಮಾತ್ರ ಸಂಬಂಧಪಟ್ಟಂಥವುಗಳಾಗಿವೆ. ಆದರೆ ಅಂತರಷ್ಟಾವರಣಗಳು ಇಡೀ ಮಾನವ ಜಾತಿಗೊಳಪಟ್ಟಿರುತ್ತವೆ. ಬಾಹ್ಯಅಷ್ಟಾವರಣಗಳಾವವೆಂದರೆ ೧ ಗುರು ೨ ಲಿಂಗ ೩ ಜಂಗಮ ೪ ಪಾದೋದಕ ೫ ಪ್ರಸಾದ ೬ ವಿಭೂತಿ ೭ ರುದ್ರಾಕ್ಷಿ ೮ ಮಂತ್ರ ಇವು. ಬಾಹ್ಯದಲ್ಲಿ ದೃಶ್ಯರೂಪವಾಗಿ ಕಾಣುವ ವಸ್ತುಗಳು ಇವುಗಳನ್ನೇ ಅಂತರ್ಮುಖಗೊಳಿಸಿ ನಮ್ಮವರು ಅವಕ್ಕೆ ಬೇರೆ ಹೆಸರುಗಳನ್ನು ಕೊಟ್ಟಿದ್ದಾರೆ ಅರಿವೇ ಗುರುವು, ಪ್ರಾಣವೇ ಲಿಂಗ, ಸುಜ್ಞಾನವೇ ಜಂಗಮ, ಜಿಹ್ವೆಯೇ ಪಾದೋದಕ, ಘ್ರಾಣವೇ ಪ್ರಸಾದ, ತ್ವಚವೇ ವಿಭೂತಿ, ನೇತ್ರವೇ ರುದ್ರಾಕ್ಷಿ, ಕರ್ಣವೇ ಮಂತ್ರ, ಈ ಪ್ರಕಾರ ನಮ್ಮ ಹಿರಿಯರು ಪ್ರಕೃತಿ ವಿಶಿಷ್ಟವಾದ ಪಂಚೇಂದ್ರಿಯ, ಮನಸ್ಸು, ಆತ್ಮಗಳನ್ನು ತಮ್ಮ ಪರಿಶುದ್ಧಾಚರಣೆಯಿಂದ ಶಿವಮಯವಾಗಿ ಮಾಡಿ ತೋರಿಸಿ ನಮ್ಮಗಳಿಗೆ ಒಳ್ಳೆ ಉದಾಹರಣೆಯನ್ನು ಹಾಕಿಕೊಟ್ಟಿದ್ದಾರೆ.

ಅಂತರಷ್ಟಾವರಣಗಳ ಮುಖ್ಯೋದ್ದೇಶವು ಅಂತರಿಂದ್ರಿಯ ನಿಗ್ರಹವನ್ನು ಮಾಡುವದಾಗಿರುತ್ತದೆ. ಅಂತರಿಂದ್ರಿಯವೆಂದರೆ ಮನಸ್ಸು. ಮನೋನಿಗ್ರಹವೆಂದರೆ ಮನಸ್ಸನ್ನು ಪವಿತ್ರವಾಗಿಯೂ ಪರಿಶುದ್ಧವಾಗಿಯೂ ಸುಖಶಾಂತಿಯುತವಾಗಿಯೂ ಇಟ್ಟುಕೊಳ್ಳುವದು. ಅರಿವು ಮರೆತರೆ, ಆತ್ಮವು ಅಧೋಗತಿಗೆಳಿಸಿದರೆ, ಸುಜ್ಞಾನವು ಮುಸಣಿಸಿದರೆ, ಪಂಚೇಂದ್ರಿಯಂಗಳ ಉರವಣಿಗೆಯು ಹೆಚ್ಚಾದರೆ ನಮ್ಮ ಮನಸ್ಸಿಗೆ ಸುಖವೆಲ್ಲಿ? ಶಾಂತಿ

ಯೆಲ್ಲಿ? ಮನಸ್ಸು ಸುಖಶಾಂತಿಯಲ್ಲಿರದಿದ್ದರೆ ನಾವು ಜೀವಿಸಿದ್ದುದು ವ್ಯರ್ಥ ವಲ್ಲವೇ? ಅಂತೆಯೇ ಈ ದುಃಖಮಯ ಪ್ರಪಂಚದಲ್ಲಿ ಸುಖಶಾಂತಿಗಳನ್ನು ಹೇಗೆ ಪಡೆಯಬೇಕೆಂಬುವದನ್ನರಹುವದಕ್ಕಾಗಿಯೇ ಅಂತರಪ್ಪಾವರಣಗಳ ಯೋಜನೆಯಾಗಿದೆ.

## ೧ ಅರಿವು.

ಮನೋವೃಕ್ಷಕ್ಕೆ ಅರಿವು ಮರವುಗಳೆಂಬೆರಡು ಶಾಖೆಗಳಿರುವವು. ಮನಸ್ಸು ಅಮರವನ್ನಾಶ್ರಯಿಸಿದರೆ ಅಜ್ಞಾನಾಂಧಕಾರದಲ್ಲಿಯೂ ದುಃಖ ಸಾಗರದಲ್ಲಿಯೂ ಮುಳುಗುವದು. ಅರಿವನ್ನಾಶ್ರಯಿಸಿದರೆ ದಿವ್ಯಜ್ಯೋತಿ ಯನ್ನು ಪಡೆದು ಆನಂದಸಾಗರದಲ್ಲಿ ತೇಲಾಡುವದು. ನಮ್ಮ ಅರಿವು ಮರವುಗಳಲ್ಲಿ ಒಂದೇಸವನೆ ಹೋರಾಟವು ನಡೆದಿರುತ್ತವೆ, ಸಾಮಾನ್ಯ ರಲ್ಲಿ ಮರವಿನ ಬಲವು ಹೆಚ್ಚಾಗಿರುತ್ತದೆ. ಮಹಾತ್ಮರಲ್ಲಿ ಅರುವಿನ ಶಕ್ತಿಯು ಅಧಿಕವಾಗಿರುತ್ತದೆ. ದಿನಾಲು ತಿಕ್ಕಿ ತಿಕ್ಕಿ ಸ್ವಚ್ಛವಾಡದ ತಂಬಿಗೆಗೆ ಕಪ್ಪು ಹತ್ತಿ ಅದು ಕರ್ರಗಾಗುವಂತೆ ನಮ್ಮ ಅರಿವು ಸ್ವಲ್ಪ ಒರಗಿದರೆ ಮರವು ನವ್ಮನ್ನು ಸಂಪೂರ್ಣವಾಗಿ ಆವರಿಸಿ ಬಿಡುವದು. ಒಳ್ಳೆ ಆಚಾರಶೀಲನಾದವನು ತಂಬಿಗೆಯನ್ನು ದಿನಾಲು ಲಕಲಕ ಬೆಳ ಗಿಟ್ಟುಕೊಂಬಂತೆ ಜಾಣನಾದವನು ಅರಿವೆಂಬ ಜ್ಯೋತಿಯನ್ನು ಯಾವಾ ಗಲೂ ಪ್ರಜ್ವಲಿಸುವಂತೆ ಮಾಡಿಕೊಳ್ಳುವನು. ನಮ್ಮ ಅರಿವು ಜಾಗ್ರತ ವಾಗಿ ಅದೇ ಸ್ಥಿತಿಯು ಕೊನೆಯವರೆಗಿದ್ದರೆ ನಮ್ಮಿಂದ ಮಹತ್ತರವಾದ ಕೆಲಸಗಳು ಜರಗಬಹುದಾಗಿತ್ತು. ಆದರೆ ಮರವೆಯು ಮಧ್ಯದಲ್ಲಿ ಬಂದು ಅರುವಿನ ಕಾರ್ಯಗಳನ್ನು ಮೂಲಿಗೊತ್ತುವದು.

ಅರಿವು ಆತ್ಮನ ಜಾಗ್ರತಾವಸ್ಥೆಯಲ್ಲಿ ಪ್ರಬುದ್ಧವಾಗಿರುತ್ತದೆ. ಸ್ವಪ್ನಾ ವಸ್ಥೆಯಲ್ಲಿ ಕನಸಿನ ಸೃಷ್ಟಿಯಲ್ಲಿ ರಮಿಸುತ್ತದೆ, ಸುಷುಪ್ತಿಯ ಅವಸ್ಥೆ ಯಲ್ಲಿ ವಿಶ್ರಾಂತಿ ಸುಖವನ್ನು ಹೊಂದುತ್ತಿರುತ್ತದೆ. ಅರಿವು ಅನಾದಿ ಸಂಸಿ ದ್ಧವಾದುದು. ಪರಮಾತ್ಮನು ಜೀವಿಗಳನ್ನು ನಿರ್ಮಿಸಿದ ಕಾಲಕ್ಕೆ ಅರಿವು ಮರವುಗಳೆರಡನ್ನು ಮನಸ್ಸಿನಲ್ಲಿರಿಸಿ ಕಳಿಸಿಕೊಟ್ಟನು. ಅದನ್ನೇ ಆಜೀವಿಗಳು ತಮ್ಮ ಸಂತಾನ ಪರಂಪರಾಗತವಾಗಿ ಸಾಗಿಸುತ್ತಾ ಬಂದಿರುತ್ತವೆ. ಅರಿವು ಕಾಲಕಾಲದ ಅನುಭವದಿಂದ ಸುಸಂಸ್ಕೃತವಾಗುತ್ತ ನಡೆದಿರುತ್ತದೆ. ನಮ್ಮ ಪೂರ್ವಜರ ಅರಿವು ಮಂದವಾಗಿದ್ದರೆ ನಮ್ಮ ಅರಿವು ಉತ್ಕ್ರಾಂತಿ ಹೊಂದಿ ತೀಕ್ಷ್ಣವಾಗಿರುತ್ತದೆ.

ಪಶುಪಕ್ಷಿಗಳ ಹಾಗೂ ಕ್ರಿಮಿಕೀಟಕಗಳ ಅರಿವಿಗಿಂತಲೂ ಮನುಷ್ಯನ ಅರಿವು ಹೆಚ್ಚು ಉದಾತ್ತ ಸ್ಥಿತಿಯಲ್ಲಿರುವದು. ಕೀಳು ಜೀವ ಜಂತುಗಳಲ್ಲಿ ಅರುವಿದ್ದರೂ ಅದು ಪ್ರಕೃತಿರೂಪದಲ್ಲಿರುವದು. ಆ ಅರುವಿನ ಸಹಾಯದಿಂದ ಆತ್ಮಾನಾತ್ಮ ವಿವೇಚನ ಮಾಡುವ ಶಕ್ತಿಯು ಅವುಗಳಿಗಿರುವದಿಲ್ಲ. ಪುಣ್ಯ ಪಾಪಗಳ ವಿಚಾರವು ಅವುಗಳಿಗೆ ಹೊಳೆಯುವದಿಲ್ಲ. ಜಗತ್ತಿನಲ್ಲಿ ಶೋಧ, ಸುಧಾರಣೆ, ಶಾಸ್ತ್ರ ರಚನಾದಿ ಕಾರ್ಯಗಳನ್ನು ಮಾಡಲು ಅವು ಸಮರ್ಥವಲ್ಲ. ಮನುಷ್ಯನ ಸುಧಾರಣಾ ಕಾರ್ಯಗಳು ಕಾಲಕಾಲಕ್ಕೆ ವ್ಯತ್ಯಾಸ ಹೊಂದುತ್ತ ಹೋದಂತೆ ಕೀಳು ಜಂತುಗಳ ನಿತ್ಯ ವ್ಯವಹಾರಗಳೇನೂ ವ್ಯತ್ಯಾಸವಾಗದೆ ಯಥಾ ಪ್ರಕಾರವಾಗಿಯೇ ಇರುತ್ತವೆ. ಅರುವಿನಿಂದಲೇ ಮನುಷ್ಯನು ಕೀಳು ಜಂತುಗಳಿಗಿಂತ ಮಿಗಿಲೆನಿಸಿಕೊಳ್ಳುವನು.

ಅರಿವಿನಿಂದಲೇ ನಮ್ಮಲ್ಲಿ ಕಾಮಕ್ರೋಧಾದಿ ವಿಕಾರಗಳು, ಆನಂದ, ಕ್ರೋಧ, ಸುಖ, ದುಃಖ ಮೊದಲಾದ ಭಾವನೆಗಳು ಉತ್ಪನ್ನವಾಗುವವು. ಅರುವಿನಿಂದಲೇ ನಾವು ಉಣ್ಣುವದು, ಮಾತಾಡುವದು, ವಿಚಾರಿಸುವದು ಮೊದಲಾದ ಕೆಲಸಗಳನ್ನು ಮಾಡುತ್ತೇವೆ. ಶಿಶುಗಳಲ್ಲಾಗಲಿ, ಹುಚ್ಚರಲ್ಲಾಗಲಿ, ಕಾಡು ಜನರಲ್ಲಾಗಲಿ ಅರಿವು ಅಷ್ಟು ಜಾಗ್ರತಾವಸ್ಥೆಯಲ್ಲಿರುವದಿಲ್ಲ; ಮಂದವಾಗಿರುತ್ತದೆ. ಜಗತ್ತಿನ ಅನುಭವವು ಹೆಚ್ಚಾದಂತೆ ಅರುವಿನ ವಿಕಾಸವೂ ಆಗುವದು. ಅರಿವುಳ್ಳ ಮಹಾತ್ಮರಿಗೆ ಇಹಜನ್ಮದ ಸಂಗತಿಗಳ ಸ್ಮರಣವಷ್ಟೇ ಅಲ್ಲ, ಪೂರ್ವಜನ್ಮಗಳ ಸಂಗತಿಗಳು ಸಹ ಜ್ಞಾಪಕದಲ್ಲಿರುತ್ತವೆ. ಅಂತೆಯೇ ಕಾಳಿದಾಸ ಕವಿಯು "ಮನೋಹಿ ಜನ್ಮಾಂತರ ಸಂಗತಿಜ್ಞಂ" ಎಂದು ಹೇಳಿದ್ದಾರೆ. ಶ್ರೀಬಸವಣ್ಣನವರು ತಮ್ಮ ಹಿಂದಿನ ೭ ಜನ್ಮಗಳ ಸಂಗತಿಗಳನ್ನರಿತಿದ್ದರೆಂದು ತಿಳಿಯಬರುತ್ತದೆ.

ಅರಿವು ಹೆಚ್ಚಾಗಿದ್ದಲ್ಲಿ ನೆನಪಿನ ಶಕ್ತಿಯು ವೃದ್ಧಿಸುತ್ತದೆ. ಅರುವಿಗೆ ಮರವಿನ ಕಲಂಕ ಹತ್ತಿದರೆ ಸ್ಮರಣ ಶಕ್ತಿಯು ಮಸಮಸಕಾಗುತ್ತದೆ. ಅರುವಿನಿಂದ ಮಾಡುವ ಕೆಲಸಗಳು ಇಹದಲ್ಲಿ ಸುವ್ಯವಸ್ಥೆ ಭದ್ರತೆಗಳನ್ನುಂಟುಮಾಡುವಂತೆ ಪಾರಮಾರ್ಥದ ವಿಷಯದಲ್ಲಿಯೂ ಸುಖಶಾಂತಿಯನ್ನೀಯುವವು. ಆದುದರಿಂದ ಮನಶ್ಶಾಂತಿಯನ್ನು ಹಾರೈಸುವ ಪ್ರತಿಯೊಬ್ಬ ಮನುಷ್ಯನು ಪ್ರತಿನಿತ್ಯಕ್ರಮದಲ್ಲಿ ಅರಿವೆಂಬ ಜ್ಯೋತಿಯನ್ನರಿಸಿ

ಮರವೆಂಬ ತಮಂಧ ಘನವನ್ನು ಹೊಡೆದೋಡಿಸಬೇಕು. ಸದ್ಗುರುವು ನಮಗೆ ಅಲ್ಲದ ಹಾದಿಯನ್ನು ಬಿಡಿಸಿ ಸನ್ಮಾರ್ಗಕ್ಕೆ ಹಚ್ಚುವಂತೆ ಸದಸದ್ವಿವೇಕಿಯಾದ ಅರಿವು ನಮ್ಮನ್ನು ಒಳ್ಳೆ ದಿಶೆಗೆ ಒಯ್ಯುವದು.

## ೨ ಆತ್ಮ (ಪ್ರಾಣ).

ಪ್ರಾಣವೇ ಲಿಂಗವು. ದೇವರು ಹೊರಗೆ ಗುಡಿಗುಂಡಾರಗಳಲ್ಲಿರುವನೆಂದು ಹೇಳವ ನಾವುಗಳು ಆತನು ನಮ್ಮೊಳಗೇ ಇರುವನೆಂಬದನ್ನು ಮರೆತುಬಿಟ್ಟಿದ್ದೇವೆ. ಮಾತಾಡುವವರೂ, ಉಣ್ಣುವವರೂ, ನಗುವವರೂ ಯಾರು? ಆ ಪರವಸ್ತುವಲ್ಲವೇ? ಆತನು ನಮ್ಮ ಪಂಚಕರ್ಮೇಂದ್ರಿಯಗಳಿಂದಲೂ ಪಂಚಜ್ಞಾನೇಂದ್ರಿಯುಗಳಿಂದಲೂ ಪ್ರತಿನಿತ್ಯದ ಕೆಲಸವನ್ನು ಮಾಡುತ್ತಿದ್ದಾನೆ. "ನಾನು ಮಾಡಿದೆನು" ಎಂದು ಹೇಳಿಕೊಳ್ಳುವ "ನಾನೇ" ಆ ಆತ್ಮನು. ನಾನೇ ಆತ್ಮನಾಗಿದ್ದರೂ ನನ್ನರಿವೇ ನನಗಿಲ್ಲ, ಹೀಗಾಗಲಿಕ್ಕೆ ಕಾರಣವೇನು? ಆತನಿಗೆ ಮಾಯೆಯು ಆವರಿಸಿಬಿಟ್ಟಿದೆ. ಆತ್ಮನ ಗುಣಗಳು ಜೀವಗುಣ, ಶಿವಗುಣಗಳೆಂದು ಎರಡು ತೆರನಾಗಿರುವವು. ಈ ದೇಹವೇ ನಾನೆಂದು ತಿಳಿದು ಇದರ ರಕ್ಷಣೆ ಪೋಷಣೆ ಸಡಗರ ಮೊದಲಾದ ಕಾರ್ಯಗಳಲ್ಲಿಯೇ ಆತ್ಮನು ನಿರತವಾದರೆ ಅದಕ್ಕೆ ಅಂಗಗುಣ ಅಥವಾ ಜೀವಗುಣವೆನ್ನುವರು. ಆದರೆ ಆ ಪರಶಿವ ವಸ್ತುವೇ ನಾನೆಂದು ಶಿವಾರ್ಪಣ ಬುದ್ಧಿಯಿಂದ ಪ್ರತಿಯೊಂದು ಕಾರ್ಯವನ್ನು ಮಾಡಿದರೆ ಅದಕ್ಕೆ ಲಿಂಗಗುಣ ಅಥವಾ ಶಿವಗುಣವೆನ್ನುವರು

ಸಾಮಾನ್ಯರಲ್ಲಿ ಆತ್ಮನು ಜೀವಗುಣವಿಶಿಷ್ಟನಾಗಿರುವನು. ಮಹಾನುಭಾವರಲ್ಲಿ ಶಿವಗುಣಸಂಪನ್ನನಾಗಿರುವನು. ಜೀವಗುಣವುಳ್ಳಾತನು ಅನ್ಯಜೀವಿಗಳು ತನಗಿಂತ ಭಿನ್ನವಾದವುಗಳೆಂದು ಭಾವಿಸಿ ಅವುಗಳನ್ನು ಪೀಡಿಸಿ ಇಲ್ಲವೆ ನಾಶಮಾಡಿ ತನ್ನ ಜೀವರಕ್ಷಣೆಯನ್ನು ಮಾಡಿಕೊಳ್ಳುವನು. ಈ ಜಗತ್ತಿನ ವ್ಯವಹಾರದಲ್ಲಿ ಜೀವನ ಹೋರಾಟವು ಒಂದೇ ಸವನೆ ನಡೆದಿರುತ್ತದೆ. "ಜೀವೋ ಜೀವಸ್ಯ ಜೀವನಂ" ಎಂಬ ತತ್ತ್ವವನ್ನನುಸರಿಸಿ ಒಂದು ಸಬಲ ಜೀವಿಯು ಅನೇಕ ದುರ್ಬಲ ಜೀವಿಗಳನ್ನು ನಾಶಮಾಡಿ ತಾನು ಜೀವಿಸುತ್ತದೆ. ದುರ್ಬಲರ ನಾಶವೇ ಸಬಲರ ಜೀವಿತವೆಂಬುದೇ ಜೀವಗುಣವು. ವ್ಯಾಪಾರೋದ್ಯೋಗ, ಶಿಕ್ಷಣ, ಯುದ್ಧ ಮುಂತಾದ ವ್ಯವಹಾರಗಳಲ್ಲಿ ಮೇಲಾಟವೆದ್ದು ಹೊಟ್ಟೆ, ಸುಖ, ಗೌರವ, ಅಧಿಕಾರಗಳ ಬಗ್ಗೆ ವ್ಯಕ್ತಿ ವ್ಯಕ್ತಿಗಳಲ್ಲಿಯೂ ದೇಶದೇಶಗಳ

ಲ್ಲಿಯೂ ದ್ವೇಷಾಸೂಯೆಗಳು ನಡೆದಿರುತ್ತವೆ. ಇವಕ್ಕೆ ಜೀವನ ಗುಣಗಳೆನ್ನುವರು. ಆತ್ಮನು ಈ ಸೈತಾನೀ ವೃತ್ತಿಯನ್ನು ಬಿಟ್ಟು ವಿರುದ್ಧ ದಿಕ್ಕಿಗೆ ತನ್ನ ದಿಶೆಯನ್ನು ತಿರುಗಿಸಬೇಕು.

ರುಚಿ ದುರಾಶೆಗಾಗಿ ಊಟಮಾಡದೆ ಅಂಗಪೌಷ್ಟಿಕಕ್ಕಾಗಿ ಉಡಿಗೆ ತೊಡಿಗೆಗಳನ್ನುಟ್ಟುಕೊಳ್ಳದೆ ಹೊನ್ನು, ಹೆಣ್ಣು, ಮಣ್ಣು, ತ್ರಿವಿಧ ದಾಶೆಯನ್ನು ಬಿಟ್ಟು, ಅಹಂಕಾರ ಮಮಕಾರಗಳನ್ನು ಬದಿಗಿಡುವದೇ ಶಿವಗುಣವು. ಒಂದೇ ಮಾತಿನಲ್ಲಿ ಹೇಳಬೇಕಾದರೆ ನಾವು ಮಾಡುವ ಪ್ರತಿಯೊಂದು ಕಾರ್ಯವನ್ನು ಶಿವಾರ್ಪಣ ಬುದ್ಧಿಯಿಂದ ಮಾಡಿದರೆ ಅದೇ ಲಿಂಗಗುಣವಾಗುತ್ತದೆ. ಕಳ್ಳತನ, ವ್ಯಭಿಚಾರ, ಮದ್ಯಪಾನ ಮೊದಲಾದ ನಿಷಿದ್ಧ ಕಾರ್ಯಗಳನ್ನು ಶಿವಾರ್ಪಣ ಬುದ್ಧಿಯಿಂದ ಮಾಡಲಿಕ್ಕೆ ಬರುವದಿಲ್ಲ. ಇಂಥ ಕಾರ್ಯಗಳನ್ನು ಆತ್ಮನು ತನ್ನ ಅಂಗಸುಖಕ್ಕಾಗಿಯೇ ಮಾಡುವನು. ಆದರೆ ಅಂಥ ಕಾರ್ಯಗಳು ಪರಮಾತ್ಮನಿಗೆ ಬೇಡವಾದವುಗಳೆಂದು ಅವನ ವಿವೇಕವು ಪದೇ ಪದೇ ಎಚ್ಚರಗೊಳಿಸುತ್ತಿರುತ್ತದೆ. ವಿಧಿಸಿಷಿದ್ಧ ಕಾರ್ಯಗಳು ಬಹುಕಾಲದಿಂದಲೂ ಶಿಷ್ಟಸಾಂಪ್ರದಾಯದಿಂದ ನಡೆದುಬಂದಂಥವುಗಳಾಗಿರುವದರಿಂದ ಅವು ನಮ್ಮ ಮನಸ್ಸಿನಲ್ಲಿ ಬಂಧುರವಾಗಿ ಹೆಣೆಯಲ್ಪಟ್ಟಿರುತ್ತವೆ. ಅಹಂಕಾರ ಮಮಕಾರಗಳಿಂದ ಮಾಡುವ ಕೃತಿಗಳು ಮೊದಲು ಸುಖಕರವಾಗಿ ತೋರಿದರೂ ಕೊನೆಗೆ ದುಃಖವನ್ನುಂಟುಮಾಡದಿರವು. ಶಿವಾರ್ಪಣ ಬುದ್ಧಿಯಿಂದ ಮಾಡುವ ಕೆಲಸಗಳು ಮೊದಲು ಕಷ್ಟಕರವಾಗಿ ತೋರಿದರೂ ಕೊನೆಗೆ ಸುಖಶಾಂತಿಯನ್ನುಂಟುಮಾಡುವವು. ಕಾರಣ ಮನಸ್ಸಿನ ಸುಖಶಾಂತಿಯನ್ನಪೇಕ್ಷಿಸುವ ಪ್ರತಿಯೊಂದು ವ್ಯಕ್ತಿಯು ಅಂಗಗುಣಕ್ಕೆ ಹಂಬಲಿಸದೆ ಮಂಗಲಕರವಾದ ಲಿಂಗಗುಣವನ್ನಂಗೀಕರಿಸುವದು ವಿಹಿತವು.

## ಸುಜ್ಞಾನ.

ಸುಜ್ಞಾನವೇ ಜಂಗಮವು. ಅಜ್ಞಾನದಿಂದ ಪ್ರಮಾದಗಳು ಹೆಚ್ಚಾಗುತ್ತವೆ. ಸುಜ್ಞಾನದಿಂದ ಅವು ಹಿಂಗಿಹೋಗುತ್ತವೆ. "ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ" ಎಂಬ ಗೀತಾವಾಕ್ಯದಂತೆ ನಾವು ಮಾಡುವ ಪ್ರತಿಯೊಂದು ಕಾರ್ಯವು ಆರಂಭದಲ್ಲಿ ಧೂಮದಿಂದ ಮುಸುಗಿದ ಅಗ್ನಿಯಂತೆ ಅಜ್ಞಾನದಿಂದ ಆವೃತವಾಗಿರುತ್ತದೆ. ಹೊಗೆಯು ಹೋದಮೇಲೆ ಲಕಲಕ ಹೊಳೆಯುವ ನಿಗಿನಿಗಿ ಕೆಂಡದಂತೆ ಅದೇ

ಕಾರ್ಯವು ಜ್ಞಾನೋದಯವಾಗಲು ಪ್ರಕಾಶಮಯವಾಗಿ ಕಂಗೊಳಿಸುತ್ತದೆ. ಅಜ್ಞಾನದಿಂದ ಮಾಡಿದ ಕಾರ್ಯಗಳು ನಮ್ಮನ್ನು ಸಂಕಟಕ್ಕೂ ಪಶ್ಚಾತ್ತಾಪಕ್ಕೂ ಈಡುಮಾಡುತ್ತವೆ. ಸುಜ್ಞಾನದಿಂದ ಮಾಡಿದ ಕೆಲಸಗಳು ಸುಖಶಾಂತಿಯನ್ನೀಯುವವಲ್ಲದೆ ಅನ್ಯರಿಗೆ ಮಾರ್ಗದರ್ಶಿಯಾಗಿರುತ್ತವೆ.

ನಮ್ಮ ಮನಸ್ಸು ಅನೇಕ ಸಲ ವಿವೇಕಿಯಾಗಿರುತ್ತದೆ. ಆದರಂತೆಯೇ ಅನೇಕಾವರ್ತಿ ಅವಿವೇಕಿಯೂ ಆಗಿರುತ್ತದೆ. ವಿವೇಕದಿಂದ ಮಾಡಿದ ಕಾರ್ಯಗಳು ಸುಖಸಮಾಧಾನವನ್ನುಂಟುಮಾಡುವವು. "ಅವಿವೇಕಃ ಪದಮಾಪದಾಂ ಪದಂ ಎಂಬಂತೆ ಅವಿವೇಕವು ಜನರನ್ನು ಅನೇಕ ಆಪತ್ತುಗಳಿಗೆ ಗುರಿಮಾಡುತ್ತದೆ. ಕಾಮ ಕ್ರೋಧಾದಿ ಅರಿಷಡ್ವರ್ಗಗಳು ಅಜ್ಞಾನದ ಕುರುಹುಗಳು. ಜನ್ಮ ಜನ್ಮಾಂತರದಿಂದ ಅವು ನಮ್ಮಲ್ಲಿ ಹುಟ್ಟುಗುಣಗಳಾಗಿಬಿಟ್ಟಿವೆ. ಅವುಗಳನ್ನು ನಿರ್ಮೂಲಮಾಡುವದು ಶಕ್ಯವಿಲ್ಲ. ಅಜ್ಞಾನಿಯಲ್ಲಿ ಅವು ಒಳ್ಳೆ ಪ್ರಬಲಾವಸ್ಥೆಯಲ್ಲಿರುವವು. ಸುಜ್ಞಾನಿಯಾದವನು ಈ ಗುಣಗಳಿಗೆ ಉದಾತ್ತ ಗತಿಯನ್ನು ಕೊಟ್ಟು ವ್ಯವಹರಿಸುತ್ತಾನೆ.

ತಿಳಿಯದೆ ತಪ್ಪು ಮಾಡುವದು ಅಜ್ಞಾನದ ಲಕ್ಷಣವು. ತಿಳಿದೂ ತಪ್ಪು ಮಾಡುವದು ಮೂರ್ಖತನವು. ಸ್ವಾರ್ಥಸಾಧಕರು ಇದು ತಪ್ಪೆಂದು ತಿಳಿದರೂ ಆತ್ಮಲಾಭಕ್ಕಾಗಿ ಅದೇ ತಪ್ಪನ್ನು ಮಾಡಿ ಹೊರಗೆ ಸಂಭಾವಿತರ ಸೋಗು ಹಾಕಿಕೊಂಡು ಮೆರೆಯುವರು. ಈ ಡಂಭಾಚಾರಿಗಳ ಮನಸ್ಸು ತಮ್ಮ ಮೋಸವು ಹೊರಬೀಳುವ ತನಕ ಸಮಾಧಾನವಾಗಿರಬಹುದು. ಆದರೆ ಮೋಸವು ಬೈಲಿಗೆ ಬಿದ್ದ ಬಳಿಕ ಅವರ ಮನಸ್ಸಿಗೆ ಪಶ್ಚಾತ್ತಾಪವುಂಟಾಗುವದು. ನಾವು ನಿತ್ಯ ವ್ಯವಹಾರದಲ್ಲಿ ಕ್ಷುಲ್ಲಕ ಸಂಗತಿಗಳ ಬಗ್ಗೆ ಅನೇಕ ಸುಳ್ಳುಗಳನ್ನು ಹೇಳುತ್ತೇವೆ. ಆ ಸುಳ್ಳನ್ನು ಮಾತಿನ ಜಾಲದಿಂದ ಮರೆಮಾಡಲೆಳಿಸುತ್ತೇವೆ. ಅಸತ್ಯವನ್ನು ಸತ್ಯಮಾಡಲಿಕ್ಕೆ ಹೆಣಗಾಡುತ್ತೇವೆ. ಇವೆಲ್ಲ ಸುಳ್ಳು ಕಪಟಗಳು ಅಜ್ಞಾನದ ಲಕ್ಷಣಗಳೆಂದೇ ತಿಳಿಯಬೇಕು. ಒಮ್ಮೊಮ್ಮೆ ದೊಡ್ಡವರು ಕೂಡ ಅಜ್ಞಾನದ ಬಲಿಗೆ ಸಿಲ್ಕಿ ಅಪರಾಧಗಳನ್ನೆಸಗುತ್ತಾರೆಂದು ಕಾಳಿದಾಸ ಕವಿಯು ಹೇಳಿದ್ದಾನೆ. '' ಅಪದೇ ಪದಮರ್ಪಯಂತಿ ಹಿ ಗುಣವಂತೋಽಪಿ ರಜೋನಿಮೀಲಿತಾಃ " ಒಟ್ಟಿನ ಮೇಲೆ ಅಜ್ಞಾನವೇ ದುಃಖ ಸುಜ್ಞಾನವೇ ಸುಖವೆಂಬದನ್ನು ಮನದಟ್ಟಾಗಿಟ್ಟುಕೊಂಡು ಸುಜ್ಞಾನದ ಬೆನ್ನುಹತ್ತಿದರೆ ನಮಗೆ ಸುಖವಾಗುವದು.

## ೪ ಜಿಹ್ವೆ.

ಜಿಹ್ವೆಯೇ ಪಾದೋದಕವು. ನಾಲಿಗೆಯು ಅನೇಕ ಆಹಾರಗಳಲ್ಲಿಯ ರಸವನ್ನು ಗ್ರಹಿಸುತ್ತದೆ. ಆ ರಸದಿಂದ ರಕ್ತವಾಗಿ ಮುಂದೆ ಅದು ವೀರ್ಯವಾಗುತ್ತದೆ. ರಕ್ತಶುದ್ಧಿ ವೀರ್ಯಶುದ್ಧಿಗಳನ್ನು ಕಾಪಾಡಿಕೊಳ್ಳುವದೇ ಜಿಹ್ವೆಯ ಮುಖ್ಯ ಕರ್ತವ್ಯವು. ವೀರಶೈವರು ರಕ್ತಶುದ್ಧಿ ವೀರ್ಯಶುದ್ಧಿ ಇದ್ದವರೊಡನೆಯೇ ಅನ್ನಪಾನಾದಿಗಳನ್ನು ಲಗ್ನಸಂಬಂಧಗಳನ್ನೂ ಮಾಡುವರು. ಶುದ್ಧ ಶಾಕಾಹಾರ, ಶುಚಿತ್ವ, ಅವ್ಯಭಿಚಾರತ್ವ ಈ ಮೊದಲಾದ ಅಪೌರುಷ್ಯ ಗುಣಗಳನ್ನು ಬಹುಕಾಲದಿಂದಲೂ ನಡೆಯಿಸುತ್ತ ಬಂದಿರುವರು. ಅಂಥ ಶುದ್ಧಾಚಾರಸಂಪನ್ನರಲ್ಲಿಯೇ ಪಾದೋದಕ ಪ್ರಸಾದಗಳು ನಡೆಯುವವು. ಆದುದರಿಂದ ರಕ್ತವೀರ್ಯಶುದ್ಧಿಗಳ ಹೊಣೆಗಾರಿಕೆಯು ತುಂಬಾ ನಾಲಿಗೆಯನ್ನವಲಂಬಿಸಿದೆ.

ನಾಲಿಗೆಯು ಹೇಗಿರುವದೋ ಹಾಗೆಯೇ ವೀರ್ಯವಿರುತ್ತದೆ. ಅಂದರೆ ನಾಲಿಗೆಯ ರಸವೇ ಮುಂದೆ ವೀರ್ಯವಾಗಿ ಪರಿಣಮಿಸುತ್ತದೆ. ವೀರ್ಯಕ್ಕೆ ಅಧೋಮುಖ ಊರ್ಧ್ವಮುಖಗಳೆಂಬೆರೆಡು ಗತಿಗಳುಂಟು. ವೀರ್ಯವು ಅಧೋಮುಖವಾದರೆ ತನ್ನಂಥ ವಸ್ತುವನ್ನು ಹುಟ್ಟಿಸುತ್ತದೆ. ಊರ್ಧ್ವಮುಖವಾದರೆ ಪರವಸ್ತುವಿನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತದೆ. ಈಗ ಜಗತ್ತಿನಲ್ಲಿ ವೀರ್ಯವು ಹೆಚ್ಚಾಗಿ ಅಧೋಮುಖದಿಂದ ಪ್ರವಹಿಸುತ್ತಿರುವದರಿಂದ ಜನಸಂಖ್ಯೆಯು ಅತಿಶಯವಾಗಿ ಬೆಳೆದು ಅಶನಕ್ಕೆ ಅಭಾವವಾದಂತಾಗಿದೆ. ಜಗತ್ತಿಗೆ ಅಹಿತವುಂಟಾದರೆ ವ್ಯಕ್ತಿಗೂ ಅಹಿತವಾಗಲೇಬೇಕು. ಆದುದರಿಂದ ಜಗತ್ತಿನ ಕಲ್ಯಾಣವನ್ನು ಬಯಸುವ ಪ್ರತಿಯೊಂದು ವ್ಯಕ್ತಿಯು ನಾಲಿಗೆಯನ್ನು ಹತೋಟಿಯಲ್ಲಿಟ್ಟುಕೊಳ್ಳುವದಲ್ಲದೆ ಇಂದ್ರಿಯದ ದಬ್ಬಾಳಿಕೆಯನ್ನು ತಡೆಯಬೇಕು. ಅರ್ಥಾತ್ ಸಂತಾನ ನಿರೋಧ ಮಾಡಬೇಕು. ಅಂದರೆ ಸುಖಶಾಂತಿಯಾಗಿ ತನಗೂ ಶಾಂತಿ ದೊರೆಯುವದು.

ನಾಯಿ ಹಂದಿಗಳ ಮರಿಗಳಂತೆ ಮನುಷ್ಯರಿಗೆ ನೂರೆಂಟು ಕುನ್ನಿಗಳಿರುವದರಿಂದ ಜಗತ್ತಿನ ದಾರಿದ್ರ್ಯವು ಹೆಚ್ಚುತ್ತ ನಡೆದು ಯಾರ ಮನಸ್ಸಿಗೂ ಸ್ವಾಸ್ಥ್ಯವಿಲ್ಲದಂತಾಗುತ್ತದೆ. ಆದುದರಿಂದ ಸಂತಾನ ನಿರೋಧವು ಅತಿಮಹತ್ವದ ಕೆಲಸವಲ್ಲದೆ ಬ್ರಹ್ಮಚಾರಿಗಳ ಸಂಖ್ಯೆಯನ್ನು ಬೆಳೆಯಿಸುವದು ಆವಶ್ಯಕವಾಗಿದೆ. "ಬ್ರಹ್ಮಚರ್ಯೇ ಸ್ಥಿತಂ ಪುಣ್ಯಂ ಪಾಪಿ

ತ್ರ್ಯಂಚ ಪರಾಕ್ರಮಃ ಸ್ವಾತಂತ್ರ್ಯಮೀಶ್ವರತ್ವಂ ಚ ಸರ್ವಂ ವೀರ್ಯೇ ಪ್ರತಿಷ್ಠಿತಂ” ಎಂಬ ನೀತಿವಾಕ್ಯವಿದೆ. ರಸನೇಂದ್ರಿಯ ಜನನೇಂದ್ರಿಯಗಳು ನಿಯಂತ್ರಿತವಾಗಿದ್ದರೆ ಮನಸ್ಸು ಶಾಂತವಾಗಿರುವದು. ಯಾಕಂದರೆ ಅವು ಪರಸ್ಪರ ಸಂಬಂಧವುಳ್ಳವುಗಳಾಗಿರುತ್ತವೆ. ನಾಲಿಗೆಯಲ್ಲಿ ರಸವು ಹೆಚ್ಚಾದರೆ ವೀರ್ಯರಸವು ಹೆಚ್ಚಾಗುತ್ತದೆಂಬದು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ನಮ್ಮ ಪೂರ್ವಜರು ಸದಾಚಾರ ನಿಷ್ಠರಾಗಿ ತಮ್ಮ ನಾಲಿಗೆಯನ್ನು ಜನನೇಂದ್ರಿಯವನ್ನು ಒಳ್ಳೆ ಹತೋಟಿಯಲ್ಲಿಟ್ಟುಕೊಂಡಂತೆ ನಾವಾದರೂ ನಡೆದುಕೊಳ್ಳಬೇಕು.

## ೫. ನಾಸಿಕ.

ಘ್ರಾಣೇಂದ್ರಿಯವೇ ಪ್ರಸಾದವು. ನಾಯಿಗಳು ಸಂದಿಗೊಂದಿಗಳಲ್ಲಿ ಅಡ್ಡಾಡಿ ತಮ್ಮ ಆಹಾರವನ್ನು ಮೂಸಿ ನೋಡುವಂತೆಯೂ ಬೆಕ್ಕುಗಳು ಇಲಿಯ ವಾಸನೆಯನ್ನು ಹಿಡಿದು ಚಟಪಡಿಸುವಂತೆಯೂ ನಮ್ಮ ಮೂಗಿಗೆ ಸುವಾಸಿಕ ಒಡವೆಗಳ ನಾತವು ಬಿದ್ದರೆ ಅವುಗಳಲ್ಲಿ ಆಶೆಯುದ್ಭವಿಸುವದು. ನಾಶಿಕವು ಆಚಾರಲಿಂಗವೆಂದು ಕರೆಯಲ್ಪಡುತ್ತಿದೆ. ನಮ್ಮ ವಾಸನೆಯು ಹೇಗಿರುತ್ತದೆಯೋ ಹಾಗೆಯೇ ನಾವಾಗುತ್ತೇವೆ. ಆಹಾರ ವಾಸನೆಗಿಷ್ಟೇ ಅಲ್ಲ, ಎಲ್ಲ ವಿಷಯ ವಾಸನೆಗೆ ಮೂಗೇ ಹೊಣೆಯಾಗಿರುತ್ತದೆ. ಆಚಾರವು ಆಹಾರದಿಂದ ಮೊದಲಾಗುತ್ತದೆ. ಆಹಾರದಿಂದಲೇ ರಕ್ತ ಮಾಂಸ ಮಜ್ಜಾದಿ ಸಪ್ತಧಾತುಗಳುಂಟಾಗುವವಲ್ಲದೆ ಮನಸ್ಸಾದರೂ ಆಹಾರದಿಂದಲೇ ನಿರ್ಮಿತವಾಗಿರುತ್ತದೆಂದು ಹಿರಿಯರು ಹೇಳುವರು. ಕ್ಷೀರದಲ್ಲಿ ಘೃತವು ಅಡಗಿಪ್ಪಂತೆ ನಮ್ಮ ಪಿಂಡದಲ್ಲಿ ಮನಸ್ಸಿರುತ್ತದೆ. ಅಂತು ಶರೀರವು ಹೇಗಿರುವದೋ ಹಾಗೆಯೇ ಮನಸ್ಸಿರುತ್ತದೆ. ನಮ್ಮ ವಾಸನೆಯನ್ನನುಸರಿಸಿಯೇ ನಮ್ಮ ಮನಸ್ಸಿನ ಗುಣಧರ್ಮಗಳು ಹೆಚ್ಚುಕಡಿಮೆಯಾಗುತ್ತವೆ. ಆದುದರಿಂದ ಕೇವಲ ಪ್ರಸಾದ ತತ್ವದಿಂದ ನಮ್ಮ ಶರೀರ ಶುದ್ಧಿಯನ್ನಷ್ಟೇ ಮಾಡಿದರೆ ತೀರಲಿಲ್ಲ. ನಮ್ಮ ವಾಸನೆಯು ಶುದ್ಧವಾಗಿರಬೇಕಾಗುತ್ತದೆ. ಹೆಸರಿಗೆ ಪ್ರಸಾದಿಯಾಗಿ ವ್ಯಭಿಚಾರ ಚೋರತನ ಮಾಡುವ ದುರ್ವಾಸನೆಯುಳ್ಳವನ ಮನಸ್ಸಿಗೆ ನಿಜವಾದ ಸುಖಶಾಂತಿಯು ದೊರೆಯಲಾರದು.

ನಮ್ಮ ಮಾಂಸಪಿಂಡವನ್ನು ಮಂತ್ರಪಿಂಡವನ್ನಾಗಿ ಮಾಡುವದೇ ನಾಶಿಕದ ಮುಖ್ಯತತ್ವವು. ಮಾಂಸವು ಅಪಾನಪೇಯ ಅಭಕ್ಷ್ಯ

ಭಕ್ಷಣದಿಂದ ಪುಷ್ಟವಾಗಿದ್ದರೆ ಮನಸ್ಸು ಕೊಬ್ಬಿದ ಕೋಣದಂತೆ ಮದಾಂಧ ವಾಗುವದು. ನಿಷಿದ್ಧಪದಾರ್ಥಗಳನ್ನು ಸೇವಿಸುವವನು ಅನ್ಯರ ಗೋಣ ಮುರಿದು ಸ್ವಾರ್ಥವನ್ನು ಸಾಧಿಸಿಕೊಳ್ಳುವನು. ಶಿಷ್ಟಸಾಂಪ್ರದಾಯವನ್ನು ಬಿಟ್ಟು ಕಂಡ ಕಂಡಲ್ಲಿ ಮನಬಲ್ಲಂತೆ ಆಹಾರವನ್ನು ಸ್ವೀಕರಿಸುವಂಥ ವನು ಮಾಂಸಪಿಂಡಿಯು. ಆದರೆ ಯಾವಾತನು ಕಾಯಕದ ಕಷ್ಟದಿಂದ ಧನಧಾನ್ಯಗಳನ್ನು ಗಳಿಸಿ ಗುರುಲಿಂಗ ಜಂಗಮ ತೃಪ್ತಿಯನ್ನು ಮಾಡಿ ಮಿಕ್ಕ ಪ್ರಸಾದವನ್ನು ಸೇವಿಸುವನೋ ಆತನು ಮಂತ್ರಪಿಂಡಿಯು. ಇಂದಿನದು ನಾಳಿಗೆ ಬಂದೀತೆಂದು ಕೂಡಿಟ್ಟುಕೊಳ್ಳುವದು ಮಂತ್ರಪಿಂಡಿಯ ಲಕ್ಷಣವಲ್ಲ. ಈ ಜಗತ್ತು ಮಾಂಸಪಿಂಡಿಯಾಗಿರುವದರಿಂದಲೇ ನಾನಾ ಅನಾಹುತಗಳು ಕಾಲಕಾಲಕ್ಕೆ ಸಂಭವಿಸುತ್ತಿವೆ. ಇಡೀ ಜಗತ್ತು ಮಂತ್ರ ಪಿಂಡಿಗಳುಳ್ಳದ್ದಾದರೆ ಸುಖಶಾಂತಿಗೆಂದಿಗೂ ಕೊರತೆಯಾಗಲಾರದು.

## ೬ ತ್ವಚೇಂದ್ರಿಯ.

ತ್ವಚೇಂದ್ರಿಯವೇ ವಿಭೂತಿಯು. ಸ್ಪರ್ಶಸುಖವೇ ತ್ವಗಿಂದ್ರಿಯದ ಗುಣಧರ್ಮವು, ನಮ್ಮ ಮೈಯ್ಯು ಮೆತ್ತನ್ನ ಹಂಸ ತುಪ್ಪಳದ ಗಾದಿ ಯನ್ನು ಬೇಡುತ್ತದೆ. ಜರದ ರೇಶಿಮೆಯ ವಸ್ತ್ರಗಳನ್ನು ಬೇಡುತ್ತದೆ. ಲಟ ಲಟ ಮುದ್ದುಕೊಡಲಿಕ್ಕೆ ಮುದ್ದು ಮಕ್ಕಳನ್ನು ಅಪೇಕ್ಷಿಸುತ್ತದೆ. ಸ್ತ್ರೀಯರ ಆಲಿಂಗನ ಸುಖಕ್ಕೆ ಹಂಬಲಿಸುತ್ತದೆ. ನೋಡುವದರಿಂದ ಕಣ್ಣು ಆನಂದ ಬಡುವಂತೆ, ಕೇಳುವದರಿಂದ ಕಿವಿಗೆ ಸಂತೋಷವಾಗುವಂತೆ, ಸುಗಂಧವು ಮೂಗಿಗೆ ಕಂಪನ್ನು ಬೀರುವಂತೆ ಮೃದುಮನೋಹರವಾದ ವಸ್ತುಗಳನ್ನು ಮನುಷ್ಯನು ಮುಟ್ಟಿ ಮನದಾನಂದವನ್ನು ಹೆಚ್ಚಿಸಿಕೊಳ್ಳುವನು. ಕೈ ಮುಟ್ಟಿ ಮಾಡುವ ಕೆಲಸಗಳೆಲ್ಲವೂ ತ್ವಗಿಂದ್ರಿಯದ ವ್ಯವಹಾರಗಳು ತ್ವಗಿಂದ್ರಿಯದ ಹಸ್ತವೇ ಮುಖ್ಯ ಸಾಧನವು. ಕೈಯಿಂದಲೇ ಕೈಗಾರಿಕೆ ಕಲಾಕೌಶಲ್ಯ, ಒಕ್ಕಲತನ ವ್ಯಾಪಾರ ಶಸ್ತ್ರಾಸ್ತ್ರ ಮುಂತಾದವುಗಳನ್ನು ಮಾಡಲು ಅವಕಾಶವಾಯಿತು. ಮುಂದೆ ಕೈಯ್ಯ ಶ್ರಮವನ್ನಳಿಸಲಿಕ್ಕೆ ಯಂತ್ರ ಗಳ ಶೋಧವುಂಟಾಯಿತು 'ಚಿತ್ರಕಲೆ, ಬಡಿಗತನ, ಮೂರ್ತಿಯನ್ನು ಕಟಿ ಯುವದು ಮುಂತಾದ ಕಾರ್ಯಗಳನ್ನು ಸ್ಪರ್ಶೇಂದ್ರಿಯವು ಹಸ್ತದ ಮುಖಾಂತರವಾಗಿ ಮಾಡಿಸಿ ಮನಸ್ಸಿಗೆ ಆಹ್ಲಾದವನ್ನುಂಟುಮಾಡಲಾ ರಂಭಿಸಿತು.

ಆದರೆ ಕೈಯ್ಯು ಮಾನವೀ ಸುಧಾರಣೆಯ ಮಹತ್ವದ ಕೆಲಸಗಳನ್ನು ಮಾಡುವಂತೆ ವ್ಯಭಿಚಾರ, ಕೊಲೆಸುಲಿಗೆ, ಅಪಾನಪೇಯ, ಅಭಕ್ಷ್ಯಭಕ್ಷಣಗಳಾದರೂ ಮುಂದುವರಿಯಬಹುದು. ಸ್ಪರ್ಶೇಂದ್ರಿಯವು ತನ್ನ ಸುಖಕ್ಕಾಗಿ ಎಂಥ ಅನಿಷ್ಟ ಕಾರ್ಯವನ್ನಾದರೂ ಕೈಯಿಂದ ಮಾಡಿಸಬಹುದು. ಸ್ಪರ್ಶಸುಖಕ್ಕೆ ಮೆಚ್ಚಿಯೇ ರಾವಣ ಕೀಚಕಾದಿಗಳ ವಧೆಯಾಯಿತು. ಆದುದರಿಂದ ಮನಸ್ಸನ್ನು ಅಲ್ಲದ ವಿಷಯಗಳ ಕಡೆಗೆ ಪ್ರವರ್ತಿಸದಂತೆ ನಾವು ಎಚ್ಚರಾಗಿರಬೇಕು.

ವಿಭೂತಿಯು ತ್ಯಾಗಬುದ್ಧಿಯ ಕುರುಹು. ಬೂದಿಬಡಕ ಮನುಷ್ಯನೆಂದರೆ ಸಂಸಾರಸುಖವೇ ತನಗೆ ಬೇಡವೆಂದು ಬೂದಿಹಚ್ಚಿಕೊಂಡು ಹೊರಬಿದ್ದವನು. ಅಂತೆಯೇ ಮಹಾವೈರಾಗ್ಯಶಾಲಿಯಾದ ಶಿವನಿಗೆ ಬೂದಿಬಡಕನೆಂದು ಕರೆಯುವರು. ಆದರೆ ಭೋಗಿಯಾದ ವಿಷ್ಣುವು ಅನೇಕ ವಸ್ತ್ರಾಲಂಕಾರಗಳಿಂದ ಪರಿಶೋಭಿಸುವನು. ಭೋಗಿಯಾದವನು ಪ್ರವೃತ್ತಿಮಾರ್ಗವನ್ನವಲಂಬಿಸಿ ಆಶೆಯು ಶಾಂತವಾಗದ ಸೈತಾನನಂತೆ ತಳಮಳಗೊಳ್ಳುವನು. ತ್ಯಾಗಿಯಾದ ಮನುಷ್ಯನು ನಿವೃತ್ತಿಮಾರ್ಗಾವಲಂಬಿಯಾಗಿ ಸದಾಕಾಲದಲ್ಲಿಯೂ ಆನಂದದಿಂದ ರಮಿಸುವನು. ಕರಕೆ ಅಲಂಕಾರಗಳು ಭೂಷಣವಲ್ಲ. ಆದರೆ ಸತ್ಪಾತ್ರದಾನವೇ ಭೂಷಣವೆಂದು ಸರ್ಪಭೂಷಣ ಶಿವಯೋಗಿಗಳು ಹಾಡಿಕೊಂಡಿದ್ದಾರೆ. ಇದರಲ್ಲಿ ತ್ಯಾಗಗುಣ ತತ್ವವು ಅಡಕವಾಗಿದೆ. ತ್ಯಾಗದಲ್ಲಿಯೇ ನಿಜವಾದ ಸುಖವಿರುತ್ತದೆ. “ ಸ್ವಾರ್ಥೋ ಯಸ್ಯ ಪರಾರ್ಥ ಏವ ಸ ಪುಮಾನ್ ಲೋಕೇ ಸತಾಮಗ್ರಣೀ ” ಎಂದು ಭಾರತದಲ್ಲಿ ಹೇಳಿದೆ.

## ೭ ನೇತ್ರೇಂದ್ರಿಯ.

ನೇತ್ರೇಂದ್ರಿಯವೇ ರುದ್ರಾಕ್ಷಿಯು. ನೇತ್ರದ ಮುಖದಿಂದ ಮನಸ್ಸು ಬಾಹ್ಯವಸ್ತುಗಳನ್ನು ನಿರೀಕ್ಷಿಸಿ ಅನುಭವ ಪಡೆಯುತ್ತದೆ. ಜಗತ್ತಿನಲ್ಲಿ ನೋಡುವಂಥ ವಸ್ತುವು ಒಳ್ಳೆಯದಿರಬಹುದು ಅಥವಾ ಕೆಡಕಾಗಿರಬಹುದು. ಒಳಿತನ್ನು ನೋಡುವದರಿಂದ ನಮಗೆ ಸುಖವಾಗುತ್ತದೆ. ಕೆಡಕನ್ನು ನೋಡುವದರಿಂದ ದುಃಖವಾಗುತ್ತದೆ. ಉಳಿದ ಇಂದ್ರಿಯಗಳಿಂದ ೧೦೦ ಕ್ಕೆ ೨೦ ರಷ್ಟು ಸುಖದುಃಖಗಳೆನಿಸುತ್ತಿದ್ದರೆ ನೇತ್ರೇಂದ್ರಿಯದಿಂದ ೮೦ ರಷ್ಟು ಅನಿಸುತ್ತದೆ. ಸರ್ವೇಂದ್ರಿಯಗಳಿಗಿಂತಲೂ ನೇತ್ರೇಂದ್ರಿಯದ ಕ್ಷೇತ್ರವು ಬಹು ದೊಡ್ಡದು. “ ನಿನ್ನ ಬಲಗಣ್ಣು ನಿನಗೆ ಕೆಡಕು ಮಾಡಿ

ದರೆ ಅದನ್ನು ಕಿತ್ತು ಬಿಸುಟಿಬಿಡು. ನಿನ್ನ ದೇಹವೆಲ್ಲ ಆ ಕೆಟ್ಟಕಣ್ಣಿನಿಂದ ಅಪವಿತ್ರವಾಗಿ ಹೋಗುವದಕ್ಕಿಂತಲೂ ಆ ಕಣ್ಣೇ ಹೋಗಿಬಿಟ್ಟರೆ ಒಳಿತು." ಎಂದು ಸಾಧುವರ್ಯ ಕ್ರೈಸ್ತನು ಹೇಳಿದ್ದಾನೆ. ಆದುದರಿಂದ ನಿರೀಕ್ಷಣದಿಶೆಯನ್ನು ಕೆಡಕಿನಿಂದ ಒಳಿತಿನ ಕಡೆಗೆ ತಿರುಗಿಸುವದೇ ಮನುಷ್ಯನ ಮುಖ್ಯ ಕರ್ತವ್ಯವಾಗಿದೆ.

ನೋಡಬಾರದ್ದನ್ನು ನೋಡುವ ಮನುಷ್ಯನು ಮಾಡಬಾರದ್ದನ್ನು ಮಾಡಲಿಕ್ಕೆ ಹಿಂದೆಮುಂದು ನೋಡುವದಿಲ್ಲ. ಶಿವನಂತೆ ನಮಗಾದರೂ ಮೂರು ಕಣ್ಣುಗಳಿರುತ್ತವೆ. ಎರಡೂ ಕಣ್ಣುಗಳ ದೃಷ್ಟಿಯು ಭ್ರೂಮಧ್ಯದಲ್ಲಿ ಏಕಾಗ್ರವಾದಾಗ ಬೇರೊಂದು ಕಣ್ಣು ಅಲ್ಲಿ ಹುಟ್ಟುತ್ತದೆ. ಮೂರು ಕಣ್ಣುಗಳು ಸತ್ವ-ರಜ-ತಮುಗಳೆಂಬ ತ್ರಿಗುಣಗಳಿಂದ ವಿಶಿಷ್ಟವಾಗಿವೆ. ಎಡಗಣ್ಣು ಸತ್ವಗುಣಶಾಲಿಯು. ಶಾಂತಿ ದಯಾಂತಃಕರಣಗಳಿಂದ ಕೂಡಿಕೊಂಡಿದೆ. ಬಲಗಣ್ಣು ರಜೋಗುಣ ಪ್ರಧಾನವಾದುದು. ಶೃಂಗಾರ ವೀರ ಮಾತ್ಸರ್ಯಾದಿ ಗುಣಗಳಿಂದ ಪರಿಪ್ಲುತವಾಗಿರುತ್ತದೆ. ಭ್ರೂನೇತ್ರವು ಅಜ್ಞಾನ ಸಂತಾಪ ಕ್ರೋಧಾದಿಗುಣಗಳಿಂದ ಕೂಡಿದ್ದಾಗಿದೆ. ಭ್ರೂನೇತ್ರವು ದುಷ್ಟ ವಿಷಯದಲ್ಲಿ ಉಭಯ ನೇತ್ರಗಳ ಏಕೀಕರಣವಾದಾಗ ತಮೋಗುಣ ವಿಶಿಷ್ಟವಾಗಿರುವದು. ಸದ್ವಿಷಯಗಳಲ್ಲಿ ಏಕಾಗ್ರವಾಗಲು ಜ್ಞಾನ ನೇತ್ರವಾಗುವದು. ಸಾಮಾನ್ಯರ ಭ್ರೂನೇತ್ರವು ತಮೋಗುಣವುಳ್ಳದಿದ್ದರೆ ಮಹಾಮಹಿಮರ ಭ್ರೂನಯನವು ಜ್ಞಾನಗುಣ ಸಂಪನ್ನವಾಗಿರುತ್ತದೆ.

ನೇತ್ರವೆಂದರೆ ಕರೆಗುಡ್ಡಿಗಳಿಂದ ತೋರುವ ಚರ್ಮಚಕ್ಷುಸ್ಸಲ್ಲ. ನಿರೀಕ್ಷಣ ಶಕ್ತಿಯುಳ್ಳ ಒಳಗಣ್ಣು ನೋಡುವದೆಂದರೆ ಬರೀ ಕಣ್ಣಿನಿಂದ ನೋಡುವದಲ್ಲ. ಆದರೆ ಮನಸ್ಸಿನಲ್ಲಿ ಆ ವಿಷಯದ ಬಗ್ಗೆ ಚನ್ನಾಗಿ ಆಲೋಚಿಸುವದು. ಯಾವ ದಿಶೆಗೆ ನಾವು ಕಣ್ಣಿನ ಪ್ರವೃತ್ತಿಯನ್ನು ತಿರುಗಿಸುವೆವೋ ಆ ದಿಶೆಯೇ ನಮಗೂ ಪ್ರಾಪ್ತಿಸುತ್ತದೆ. ಅಂತೆಯೇ ಸರ್ವಜ್ಞನು

ಕಣ್ಣು ನಾಲಿಗೆ ಮನವು ತನ್ನವೆಂದೆನಬೇಡ। ಅನ್ಯರು ಕೊಂದರೆನ್ನಬೇಡ। ಇವು ಮೂರು ತನ್ನನೇ ಕೊಲ್ಲುವವು ಸರ್ವಜ್ಞ॥

ವಿಭೂತಿ ರುದ್ರಾಕ್ಷಿಗಳು ಸಾದಾ ತರದ ಚಿಹ್ನಗಳಾಗಿವೆ. ಮೈಗೆ ಬಟ್ಟೆಯಿಲ್ಲದೆ ತಿರುಗುವ ಒಂದಾನೊಂದು ಕಾಲಕ್ಕೆ ನಮ್ಮ ಪೂರ್ವ

ಜನರು ದೇಹರಕ್ಷಣೆಗಾಗಿ ಮೈಗೆ ಬೂದಿಯನ್ನು ಲೇಪಿಸಿಕೊಳ್ಳುತ್ತಿದ್ದರು. ಅದೇ ವಿಭೂತಿಯು ಸಂಸ್ಕೃತಹೊಂದಿ ನಾನಾ ವೇಷಗಳಿಗೆ ಮಾರ್ಗ ಮಾಡಿಕೊಟ್ಟಿತು. ಆದರೆ ಅತ್ಯಂತ ಸಾದಾ ಬಟ್ಟೆಗಳಲ್ಲಿಯೂ ವಿಭೂತಿಯು ಹೆಚ್ಚು ಸಾದಾತನವನ್ನು ವ್ಯಕ್ತಗೊಳಿಸುತ್ತದೆ. ಅದರಂತೆಯೇ ರುದ್ರಾಕ್ಷಿಯನ್ನು ನಮ್ಮ ಪೂರ್ವಜರು ಆಭರಣಗಳಂತೆ ಕೊರಳಲ್ಲಿ ಧರಿಸಿಕೊಂಡು ಬೆಳ್ಳಿ ಬಂಗಾರದ ಆಭರಣಗಳ ಕಡೆಗೆ ಹೋಗುವ ಜನಗಳ ಪ್ರವೃತ್ತಿಯನ್ನು ಬಹುಮಟ್ಟಿಗೆ ತಗ್ಗಿಸಿದರು. ರತ್ನ ಮುತ್ತು ಬಂಗಾರದ ಅಲಂಕಾರಗಳು ಪುರಾತನದ ರುದ್ರಾಕ್ಷಿಯನ್ನು ನೋಡಿಯೇ ಹುಟ್ಟಿರುತ್ತವೆ. ನಿಜವಾಗಿ ವಿಭೂತಿ ರುದ್ರಾಕ್ಷಿಗಳಿಗೆ ಕಿಮ್ಮತ್ತಿಲ್ಲದಿದ್ದರೂ ಅದರಲ್ಲಿ ಅಪಾರವಾದ ಮೂಲ್ಯವನ್ನು ಕಲ್ಪಿಸಿ ಸಾದಾತನದ ಪರಮಾವಧಿಗೆ ಇಂಬುಗೊಟ್ಟಿದ್ದು ಶ್ರೇಯಸ್ಕರವೇ. ಅದು ಕಾರಣ ನಾವು ಸಾದಾತನದಿಂದಿದ್ದಷ್ಟು ಸಂಭಾವಿತತನದ ಕಡೆಗೆ ಗಮನಿಸುತ್ತೇವೆ. ದುಂದುಗಾರರಾದರೆ ದುರ್ಗತಿಗೆ ಹೋಗುತ್ತೇವೆಂಬದನ್ನು ಮನವರಿಕೆ ಮಾಡಿಕೊಳ್ಳಬೇಕು.

## ೮ ಶ್ರವಣೇಂದ್ರಿಯ.

ಶ್ರವಣೇಂದ್ರಿಯುವೇ ಮಂತ್ರವು. ಕೇಳುವದೆಲ್ಲವೂ ಮಂತ್ರವಲ್ಲ. ನಮ್ಮ ಭಾವೀ ಉದ್ಧಾರಕ್ಕೆ ಅನುಕೂಲವಾದದ್ದನ್ನು ಕೇಳುವದೇ ಮಂತ್ರವು. ನಾವು ಕಣ್ಣಿನಿಂದ ನೋಡಿ ಜಗತ್ತಿನ ಜ್ಞಾನವನ್ನು ಪಡೆಯುವಂತೆ ಕಿವಿಯಿಂದ ಕೇಳಿ ಪಡೆಯುತ್ತೇವೆ. ಆದುದರಿಂದ ನಮ್ಮ ಇಂದ್ರಿಯಗಳು ಜ್ಞಾನದ ಮಹಾದ್ವಾರಗಳೆಂದು ಒಬ್ಬ ಆಂಗ್ಲ ಗ್ರಂಥಕರ್ತನು ಹೇಳಿದ್ದಾನೆ. (*The Senses are the gate-ways of knowledge*) ಆತ್ಮನು ಕಣ್ಣಿನಿಂದ ನೋಡಿ, ಕಿವಿಯಿಂದ ಕೇಳಿ, ಮೂಗಿನಿಂದ ಮೂಸಿ ನೋಡಿ, ನಾಲಿಗೆಯಿಂದ ರುಚಿನೋಡಿ, ಕೈಯಿಂದ ಮುಟ್ಟಿ ಜ್ಞಾನವನ್ನು ಪಡೆಯುತ್ತಾನೆ. ನಮ್ಮ ಮನಸ್ಸಿನಲ್ಲಿ ಶೇಖರವಾದ ಸರ್ವ ವಿಷಯ ವಿಚಾರಗಳೆಲ್ಲವೂ ಈ ಪಂಚೇಂದ್ರಿಯಗಳ ಮುಖಾಂತರವಾಗಿಯೇ ಉಂಟಾಗಿರುತ್ತವೆ.

ಕಣ್ಣಿನ ತರುವಾಯ ಕಿವಿಯು ಪ್ರಾಮುಖ್ಯವಾದ ಇಂದ್ರಿಯವು. ಕಣ್ಣಿನಿಂದ ಕೆಡಕನ್ನು ನೋಡದೆ ಒಳಿತನ್ನೇ ನೋಡಬೇಕೆಂಬಂತೆ ಕಿವಿಯಿಂದಲಾದರೂ ಅವಾಚ್ಯ ಶಬ್ದಗಳನ್ನು ಕೇಳದೆ ಸದ್ವಾಕ್ಯಗಳನ್ನು ಕೇಳುತ್ತ ನಡೆಯಬೇಕು. ಸದ್ವಾಕ್ಯಂಗಳೇ ಮಂತ್ರಗಳು. ನಾವು

ಕಿವಿಯಿಂದ ಕೇಳಿದ ಶಬ್ದಗಳು ಮನದಲ್ಲಿ ನಟ್ಟು ಪ್ರಸಂಗಬಂದಾಗ ನಮ್ಮ ನಾಲಿಗೆಯಿಂದ ಹೊರಬೀಳುವವು. ನಮ್ಮ ನಾಲಿಗೆಯ ವ್ಯವಹಾರದಿಂದ ನಮ್ಮ ಸಂಸ್ಕೃತಿಯು ಎಂತಹದಿರುವದೆಂಬದನ್ನು ಕಂಡು ಹಿಡಿಯಲಿಕ್ಕೆ ಬರುತ್ತದೆ. ಕಾಡುಜನರು ಮನೆಯಲ್ಲಿ ಅಸಂಬದ್ಧವಾದ ಅವಾಚ್ಯ ಶಬ್ದಗಳನ್ನಾಡುವದರಿಂದ ಅವರ ಮಕ್ಕಳು ಸಹ ಅವೇ ಶಬ್ದಗಳನ್ನು ಪ್ರಯೋಗಿಸುವರು. ಸುಶಿಕ್ಷಿತರ ಮನೆಯಲ್ಲಾಗಲಿ ಸುಶಿಕ್ಷಿತ ಸಮಾಜದಲ್ಲಾಗಲಿ, ಸದುಪದೇಶವನ್ನೀಯುವ ಗುರುಮಠದಲ್ಲಾಗಲಿ ದುಷ್ಟ ಶಬ್ದಗಳಿಗೆ ಆಸ್ಪದವಿರುವದಿಲ್ಲ.

ಶ್ರವಣಕ್ಕೂ ವಾಕ್ಕಿಗೂ ಪರಸ್ಪರ ಸಂಬಂಧವಿರುತ್ತದೆ. ನಾವು ಕೇಳಿದುದನ್ನೇ ಬಹುಶಃ ನಾವಾಡುತ್ತೇವೆ. ಮೃದುವಚನಂಗಳೇ ಸಕಲಜಪಂಗಳಯ್ಯ, ಮೃದು ವಚನಂಗಳೇ ಸಕಲತಪಂಗಳಯ್ಯ ಎಂದು ಬಸವಣ್ಣನವರು ಹೇಳಿದ್ದಾರೆ. ನಾವು ಒಳಿತನ್ನೂ ಕೇಳುತ್ತೇವೆ, ಕೆಡಕನ್ನೂ ಕೇಳುತ್ತೇವ. ಆದರೆ ಕೆಡಕನ್ನು ಕೇಳಿ ಮರೆಯಬೇಕು ಒಳಿತನ್ನು ಕೇಳಿ ಅದರಂತೆ ನಡೆಯಬೇಕು. ಮತ್ತು ಅದನ್ನು ನುಡಿಯಬೇಕು. ನಮ್ಮ ಕಿವಿಗಳು ಅನೇಕಸಲ ಚಾಡಿ ಪರನಿಂದೆಗಳನ್ನು ಕೇಳಿ ದೂಷಿತವಾಗುವದುಂಟು. ಶೃಂಗಾರ ರಸೋದ್ದೀಪಕವಾದ ಕಥೆ ಕಾದಂಬರಿಗಳನ್ನು ಕೇಳಿ ಮನುಷ್ಯನು ಸ್ವಪ್ನಾವಸ್ಥೆಯಲ್ಲಿ ವೀರ್ಯಪತನವನ್ನು ಮಾಡಿಕೊಳ್ಳುವದುಂಟು. ಹೇಳಿಕೆಯ ಮಾತನ್ನು ಕೇಳಿ ಧರ್ಮರಾಯನು ಮುನಿದನೆಂಬ ಗಾದಿಯಂತೆ ನಾವು ಅವಿವೇಕಿಗಳಾಗಿ ಸಾರಾಸಾರ ವಿಚಾರವಿಲ್ಲದೆ ಅನರ್ಥವನ್ನು ಮಾಡಿ ಸಂಕಟಕ್ಕೆ ಗುರಿಯಾಗಿ ಹಿಂದುಗಡೆ ಪಶ್ಚಾತ್ತಾಪಬಡುವದುಂಟು. ಆದುದರಿಂದ ಕೇಳುವ ವಿಷಯವು ಮಂತ್ರಮಯವಾಗಿಯೂ ಶಿವಮಯವಾಗಿಯೂ, ಬೋಧಪ್ರದವಾಗಿಯೂ, ಶ್ರುತಿಮನೋಹರವಾಗಿಯೂ ಇರಬೇಕು. ಮಧುರಗಾಯನ ಮಹನೀಯರ ವಾಕ್ಯಗಳೇ ಕರ್ಣಕ್ಕೆ ಭೂಷಣವು.

ಜಗತ್ತಿನಲ್ಲಿ ಒಳಿತುಂಟು, ಕೆಡಕುಂಟು ಮನಸ್ಸು ಆಯಾಯ ಇಂದ್ರಿಯಗಳ ಮುಖದಿಂದ ಒಳಿತನ್ನು ಗ್ರಹಿಸವರೆ ಉದ್ಧಾರವಾಗುತ್ತದೆ. ಕೆಡಕಿಗೆ ಳಸಿದರೆ ಪತಿತವಾಗುತ್ತದೆ. ಈ ತರದ ಸಹಾಯದಿಂದ ತಂತಿಯಿಲ್ಲದ ತಾರು ದೂರ ದೇಶಗಳಿಗೆ ಹೋಗುವಂತೆ ಭಕ್ತಿಪರವಶತೆಯಿಂದ ಆತ್ಮವು ಕಳವಳಬಟ್ಟರೆ ಆ ತಾರು ಪರಮಾತ್ಮನಿಗೂ ನಮ್ಮ ಭಕ್ತಿಯ ವ್ಯಕ್ತಿಗ

ಳಿಗೂ ತಲ್ಪುವದು. ನಮ್ಮ ಶಿವಶರಣರು ದೂರದೃಷ್ಟಿಯುಳ್ಳವರು ದೂರಶ್ರವಣವುಳ್ಳವರೂ ಆಗಿದ್ದರು.

ಶ್ರೀ ಚನ್ನಬಸವಣ್ಣನವರು ಈ ಅಂತರಷ್ಟಾವರಣದ ಸಾಮರಸ್ಯವನ್ನು ಷಟ್‌ಸ್ಥಲದೊಡನೆ ಬಹು ಸುಗಮವಾಗಿ ಮಾಡಿದ್ದಾರೆ. ಅವನ್ನು ಕೆಳಗೆ ಕೋಷ್ಟಕರೂಪದಲ್ಲಿ ಕೊಟ್ಟಿದೆ ಅದರಲ್ಲಿ ಇಡೀ ವೀರಶೈವ ತತ್ವವೇ ಅಡಕವಾಗಿದೆ. ಅದು ಅಪಾರವಾದ ಅರ್ಥದಿಂದ ಗರ್ಭಿತವಾಗಿದೆ. ಕಾಮಧೇನುವು ಬೇಡಿದವರಿಗೆ ಬೇಡಿದ್ದನ್ನೀಯುವಂತೆ ಈ ಕೋಷ್ಟಕವು ಬೇಕಾದವರಿಗೆ ಬೇಕಾದ ಅರ್ಥವನ್ನು ಮಾಡಲಿಕ್ಕೆ ಮುಕ್ತದ್ವಾರವಾಗಿದೆ.

## ಸಾಮರಸ್ಯದ ಕೋಷ್ಟಕ.

| ಷಟ್ ಸ್ಥಲ | ಅಷ್ಟಾವರಣ | ಅಂಗ | ಹಸ್ತ | ಲಿಂಗ | ಮುಖ | ಅರ್ಪಿತ | ದ್ವಾರ |
|---|---|---|---|---|---|---|---|
| ಭಕ್ತ | ಪ್ರಸಾದ | ಪೃಥ್ವಿ | ಸುಚಿತ್ತ | ಆಚಾರ ಲಿಂಗ | ಘ್ರಾಣ | ಗಂಧ | ಗುದ |
| ಮಹೇಶ | ಪಾದೋದಕ | ಅಪ್ಪು | ಸುಬುದ್ಧಿ | ಗುರು ಲಿಂಗ | ಜಿಹ್ವೆ | ರುಚಿ | ಗುಹ್ಯ |
| ಪ್ರಸಾದಿ | ರುದ್ರಾಕ್ಷಿ | ತೇಜ | ನಿರಹಂಕಾರ | ಶಿವಲಿಂಗ | ನೇತ್ರ | ರೂಪ | ಪಾದ |
| ಪ್ರಾಣ ಲಿಂಗಿ | ವಿಭೂತಿ | ವಾಯು | ಸುಮನ | ಚರಲಿಂಗ | ತ್ವಚ | ಸ್ಪರ್ಶ | ಪಾಣಿ |
| ಶರಣ | ಮಂತ್ರ | ಆಕಾಶ | ಸುಜ್ಞಾನ | ಪ್ರಸಾದ ಲಿಂಗ | ಶ್ರೋತ್ರ | ಶಬ್ದ | ವಾಕ್ |
| ಐಕ್ಯ | ಗುರು ಲಿಂಗ ಜಂಗಮ | ಆತ್ಮ | ಸದ್ಭಾವ | ಮಹಾ ಲಿಂಗ | ನಿಭಾರ್ವ | ನಿರ್ವಯಲು | ಬ್ರಹ್ಮ |

# ಅಷ್ಟಾವರಣಗಳು.

(ರಾ॥ ರಾ॥ ಅಂಗಡಿ ಕರವೀರಪ್ಪ ಶಾಲಾಶಿಕ್ಷಕ ಗದಗ.)

## ತ್ರಿಪುಡೆ

ಮಿತ್ರರೀಗಲೆ ಬನ್ನಿ ಮುದದಿಂ ನಾವು ಕೋಲನು ಹಾಕುವಾ।
ಶತ್ರುಭಾವವ ನೀಗಿ ಸರ್ವರು ಸುಖದಿ ಕಾಲನು ಕಳೆಯುವಾ ॥೧॥

ವೀರಶೈವದ ಧರ್ಮಮಾರ್ಗವ ಸಾರಿ ಪೇಳಿದ ರೀತಿಯೂ।
ತೋರಿ ನಾವೀ ದಿನದಿ ಮನದೊಳು ಧರಿಸಿಕೊಳ್ಳುವ ಶಾಂತಿಯಾ ॥೨॥

ಗುರುವ ತತ್ವವು ನಮಗೆ ತಾಯಿಯ ತೆರದಿ ಪೊರೆಯುತೆ ಕಾಯ್ವುದೂ।
ಭರದಿ ತಿಳಿಯನು ಪೇಳಿ ಬಾಲಕರಾದ ನಮ್ಮನು ಕಾಯ್ವುದೂ ॥೩॥

ಅಪ್ಪಿ ತಾಯಿಯು ತನ್ನ ಬಾಲಗೆ ಮುದ್ದನೀಯುವ ತೆರದೊಳು।
ತಪ್ಪು ಮಾಡುವ ಬಾಲರೆಲ್ಲರ ತಿದ್ದಿ ರಕ್ಷಿಸ ಮುದದೊಳು ॥೪॥

ತಾಯ ಮೀರಲು ಗಾಯವಾಗದೆ ಪೋಗುವದೇನೈ ಜಗದೊಳು।
ತಾಯ ತೆರದಿಂ ನಮ್ಮ ಗುರುವನು ನೋಡಬೇಕೈ ಮುದದೊಳು ॥೫॥

ಲಿಂಗವೆಂಬುದು ಬೇರೆಯಿಲ್ಲೈ ಮಿತ್ರ ಕೇಳೈ ಪರಿಯನು।
ಲಿಂಗ ರೂಪದಿ ತೋರ್ಪ ನಮ್ಮಯ ಆತ್ಮ ತಾನೇ ಲಿಂಗನು ॥೬॥

ನಾನು ಶಿವನಿಂ ಬೇರಯಲ್ಲವು ನಾನು ಶಿವನೇ ತೋರಲು।
ಹೀನ ಮಾಯೆಯು ತೊರೆದು ನಿಲ್ಲಲು ನಾನು ಶಿವನೇ ತಿಳಿಯಲು ॥೭॥

ಇಂತು ತನ್ನಯ ಪರಿಯ ತಿಳಿಯಲು ದೇಹ ನಮ್ಮದು ಲಿಂಗವು।
ಕಂತು ನಾಶನ ಪದವ ಕಾಣಲು ನಿಜದ ಕುರುಹೇ ಲಿಂಗವು ॥೮॥

ಜಗದಿ ಜಂಗಮ ತತ್ವವೆಂಬುದು ತಂದೆಯಂದದಿ ತೋರ್ಪುದು।
ಸೊಗಸಿನಿಂದಲಿ ನಿನ್ನ ಹಿತಕಂ ಜಗದಿ ನಿತ್ಯಂ ಚರಿಪುದು ॥೯॥

ದುಡಿದು ತಂದೆಯು ತರಲು ಹೊರಗಿಂ ಮನೆಯ ರಕ್ಷಣೆಯಾಗ್ವುದು।
ಒಡನೆ ತಂದೆಯ ಸಂಗದಿಂದಲಿ ಜಗದ ಜ್ಞಾನವು ತೋರ್ಪುದು॥೧೦॥

ಗುರುವು ಪೇಳಿದ ಸ್ಥಾಣು ಶಿಕ್ಷಣದಿಂದ ಬಾಲನು ಬೆಳೆದರೆ।
ಸರಿಸನಾಗಲು ಜಗಕೆ ಜಂಗಮನಿಂದೆ ಜ್ಞಾನವು ತಿಳಿದರೆ ॥೧೧॥

ಲೋಕಶಿಕ್ಷಣದಿಂದ ಮಾನವನೆಷ್ಟು ಬಲ್ಲಿದನಾಗ್ವನು ।
ಲೋಕನಾಯಕನಾದ ಜಂಗಮನಿಂದ ಸಂತಸಗೊಳ್ವನು ॥೧೨॥

ಗೃಹದ ಶಿಕ್ಷಣದಂತೆ ಗುರುವಿನ ತತ್ವವಿರ್ಪುದು ತಿಳಿಯಲು ।
ಗೃಹದ ಭಾರವ ಧರಿಸಿ ಜಗದೊಳು ಕೀರ್ತಿವೆಸರಂ ಪಡೆಯಲು ॥೧೩॥

ತಂದೆಯಂದದಿ ತೋರ್ಪ ಜಂಗಮ ದೇವನಿಂದಲಿ ಮಾರ್ಗವ ।
ಪೊಂದಿ ಸಂಸ್ಕೃತಿ ಭಾರ ನೀಗುತೆ ಕಾಣು ಸಾಂಬನ ಮಾರ್ಗವ ॥೧೪॥

ತಿಳಿಯೆ ಮಾನವರೆಂತು ಸದ್ಗುರು ಲಿಂಗ ಜಂಗಮರೆಂಬುದ
ಬಳಿಕೆಯಲ್ಲಿಹ ತೋರ್ಪ ಮಾತೆಯು ತಾನು ತಂದೆಯರೆಂಬುದ ॥೧೫॥

ಹಿರಿಯರಾಡುವ ಮಾತಿನಂತೆಯೆ ನಡೆಯೆ ಜಗದೊಳು ಕೀರ್ತಿಯು ।
ಹಿರಿಯ ಮೋಹವ ನಾಶ ಮಾಡುವ ನಮ್ಮ ಕಾಯ್ವುದು ಭೂತಿಯು ॥೧೬॥

ಭಸಿತವೆಂದರೆ ಬೇರೆಯಲ್ಲವು ತಿಳಿಯೆ ಹಿರಿಯರ ವಚನವು ।
ಭಸಿತಭೂಷಣ ಕೃಪೆಯ ಪಡೆವೊಡೆ ಭಸಿತಧಾರಣ ಮಾರ್ಗವು ॥೧೭॥

ಗೆಳೆಯರಲ್ಲದೆ ಕಷ್ಟಕಾಲದಿ ನಿಂದು ಹಿತವಂ ಮಾಳ್ಪರೂ ।
ಗೆಳೆಯರಂತೆ ಮಂತ್ರವೆಂಬುದು ನಮಗೆ ಸುಖವಂ ತೋರ್ಪುದು ॥೧೮॥

ಹಿತದ ಮಾತಿಗೆ ಮಂತ್ರವೆಂಬುದು ಅರ್ಥವಿರುವುದು ತಿಳಿಯಲು
ಮತಿಯ ಪೇಳುತ ಮಂತ್ರಿಯಾತನೆ ಗೆಳೆಯನಲ್ಲವೆ ಜಗದೊಳು ॥೧೯॥

ಮಿತ್ರ ತಿಳಿ ರುದ್ರಾಕ್ಷಿಯೆಂಬುದೆ ಅರಸು ನಿಯಮವು ನಮ್ಮಗೆ ।
ಶತ್ರುನಾಶಕೆ ನೃಪನ ನೇತ್ರವು ಬೇಕು ನೋಡಲು ನಮ್ಮಗೆ ॥೨೦॥

ಕಾಮಕ್ರೋಧಗಳೆಂಬ ಶತ್ರುಗಳೆಲ್ಲ ನಾಶಗಳಾಗಲು ।
ಕಾಮವೈರಿಯ ನೇತ್ರಕೃಪೆಯದು ಬೇಕು ನಮ್ಮಗೆ ತಿಳಿಯಲು ॥೨೧॥

ಪರಮಪಾದೋದಕವು ಮನ ಜಗೆ ದುಡಿತದಿಂದಲೆ ಬಪ್ಪದು ।
ಸರಸ ಪಾದೋದಕವು ಜನದುದ್ಯೋಗ ತತ್ವದಿ ತೋರ್ಪುದು ॥೨೨॥

ಹರುಷದಿಂದಲಿ ಪೇಳ್ವೆ ನಾನು ಪ್ರಸಾದ ತತ್ವದ ರೀತಿಯೂ ।
ನರನು ದುಡಿಯಲು ಬರುವ ಭೋಗವು ಸುಪ್ರಸಾದದ ಮಹಿಮೆಯೂ ॥೨೩॥

ನೋಡಿದಷ್ಟಾವರಣವೆಂಬುದು ಲಿಂಗತನುವಿನ ಕವಚವು ।
ಆಡಿದೀಮಾತುಗಳು ವರಕರವೀರ ಗುರುಲಿಂಗುಚಿತವು ॥೨೪॥

# ನೂರೊಂದು ಸ್ಥಲಗಳು.

(ಲೇಖಕ:— ಕಲ್ಯಾಣಪ್ಪ ಬ್ಯಾಳಿ, ಬಿ ಎ. ಸಿದ್ಧೇಶ್ವರ ಹೈಯುಸ್ಕೂಲ ವಿಜಾಪುರ.)

ಜೀವನು ಶಿವನಾಗಬೇಕಾದರೆ ಅರ್ಥಾತ್ ಅಂಗನು ಲಿಂಗವಾಗ ಬೇಕಾದರೆ ಅವನು ನೂರೊಂದು ಸೋಪಾನಗಳನ್ನು ದಾಟಹೋಗಬೇಕೆಂದು ನಮ್ಮ ಪೂರ್ವಜರು ಗೊತ್ತುಪಡಿಸಿದ್ದಾರೆ. ಮೊದಲು ಅಂಗ ಸ್ಥಲ, ಲಿಂಗಸ್ಥಲಗಳೆಂದು ಎರಡು ಪ್ರಾಮುಖ್ಯವಾದ ಭಾಗಗಳನ್ನು ಮಾಡಿದರು. ಅನಂತರ ಇವೆರಡರಲ್ಲಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಅಂತರ್ಭಾಗಗಳನ್ನು ಕಲ್ಪಿಸಿದರು. ಮುಂದೆ ಈ ಭಾಗಗಳನ್ನು ಹೆಚ್ಚು ವಿಸ್ತಾರ ಮಾಡಬೇಕೆಂದು ನೂರೊಂದು ಒಳಭೇದಗಳನ್ನು ಹುಟ್ಟಿಸಿದರು.

ಒಟ್ಟಿನಮೇಲೆ ಈ ಸ್ಥಲಗಳ ಮುಖ್ಯೋದ್ದೇಶವು ಮನುಷ್ಯನಲ್ಲಿರುವ ಸ್ವಾಭಾವಿಕವಾದ ಪಾಶವಿಕ ಗುಣಗಳನ್ನು ಉದಾತ್ತಗೊಳಿಸಿ ಸದ್ಗುಣ ವಿಶಿಷ್ಟನನ್ನಾಗಿ ಮಾಡುವದಾಗಿರುತ್ತದೆ. ಹಸಿವು ನೀರಡಿಕೆಗಳೆಂಬೀ ಹುಟ್ಟು ಗುಣಗಳು ಮನುಷ್ಯನನ್ನು ಕಂಡಕಂಡದ್ದನ್ನು ಕಂಡಕಂಡಲ್ಲಿ ತಿನ್ನಲಿಕ್ಕೂ ಮನಬಲ್ಲಂತೆ ಬೇಕಾದುದನ್ನು ಬೇಕಾದಲ್ಲಿ ಕುಡಿಯಲಿಕ್ಕೂ ಹಚ್ಚಬಹುದೆಂಬ ಅಂಜಿಕೆಯಿಂದ ಪಾದೋದಕ ಪ್ರಸಾದ ತತ್ವಗಳಿಂದ ಹಸಿವು ನೀರಡಿಕೆಗಳ ದಿಶೆಯನ್ನು ಉದಾತ್ತಗೊಳಿಸಿದರು. ತಾನು ಬೇಟೆಯಾಡಿ ಮೃಗಚರ್ಮಗಳನ್ನು ಬೆಚ್ಚಗೆ ಮೈಯಲ್ಲಿ ಧರಿಸಬೇಕೆಂದೂ ಪ್ರತಿಪಕ್ಷಿಗಳಾದ ಮಾನವರ ರುಂಡಗಳನ್ನು ಯುದ್ಧದಲ್ಲಿ ಚಂಡಾಡಿ ರುಂಡಮಾಲೆಯನ್ನು ಚಂದಕಾಣುವಂತೆ ಕೊರಳಲ್ಲಿ ಧರಿಸಬೇಕೆಂದೂ ಕಾಡುಸ್ಥಿತಿಯಲ್ಲಿದ್ದ ನಮ್ಮ ಪೂರ್ವಜರ ಸ್ವಭಾವವಾದ್ದರಿಂದ ಆ ದಿಶೆಯನ್ನು ಉದಾತ್ತಗೊಳಿಸಿ ಚರ್ಮದ ಬದಲು ಭಸ್ಮವನ್ನೂ, ರುಂಡಮಾಲೆಗೆ ಪ್ರತಿಯಾಗಿ ರುದ್ರಾಕ್ಷಿಮಾಲೆಯನ್ನೂ ಕಟ್ಟಿಸಿಕೊಟ್ಟರು. ಭಸ್ಮ ರುದ್ರಾಕ್ಷಿಗಳನ್ನು ಧರಿಸುವ ರೂಢಿಯು ಈ ಸುಧಾರಣೆಯ ಕಾಲದಲ್ಲಿಯೂ ಸಹ ಹಾಗೆಯೇ ಉಳಿದಿದೆ. ಪಶುಗಳನ್ನೂ ಮನುಷ್ಯರನ್ನೂ ಬೇಟೆ ಯುದ್ಧಗಳಲ್ಲಿ ಕೊಂದು ಜೀವಿಸುವ ರೂಢಿಯು ಬಹುಶಃ ಎಲ್ಲ ದೇಶಗಳಲ್ಲಿದ್ದಿತು. ಪಾಶ್ಚಾತ್ಯರು ನಾನಾ ಪ್ರಕಾರದ ಆಟಗಳನ್ನು ಸಂಶೋಧಿಸಿ ನೈಸರ್ಗಿಕವಾದ ಬೇಟೆಯಾ

ಡುವ ಮತ್ತು ಯುದ್ಧಮಾಡುವ ಸ್ವಭಾವವನ್ನು ಆಟಗಳಲ್ಲಿ ನೆಲೆಗೊಳಿಸಿದ್ದಾರೆ. ಸ್ತ್ರೀಲಂಪಟತೆಯು ಹುಟ್ಟುಗುಣವು. ಎಲ್ಲ ಕಡೆಯಲ್ಲಿ ಈ ಪ್ರವೃತ್ತಿಯನ್ನು ವಿವಾಹದ ಕಡೆಗೆ ತಿರುಗಿಸಿ ಅದನ್ನು ಮರ್ಯಾದೆಗೊಳಿಸಿರುವರು. ಲಗ್ನವಾಗಿದ್ದರೂ ಈ ದುಷ್ಟ ಪ್ರವೃತ್ತಿಯ ದಬ್ಬಾಳಿಕೆಯು ಕಡಿಮೆಯಾಗಲಿಕ್ಕಿಲ್ಲೆಂದು ನಮ್ಮವರು ಲಿಂಗಪೂಜಾವಿಧಾನವನ್ನು ಕಲ್ಪಿಸಿದರು. ಕಾಮುಕ ವೃತ್ತಿಯನ್ನು ಪವಿತ್ರಗೊಳಿಸುವದಕ್ಕಾಗಿಯೇ ಲಿಂಗಪೂಜಾವಿಧಾನದ ಸಂಶೋಧನವಾಗಿರುತ್ತದೆ. ನಿದ್ರೆಯು ಹುಟ್ಟುಗುಣವಾದ್ದರಿಂದ ಬೇಕಾದ ವೇಳೆಯಲ್ಲಿ ನಿದ್ರೆ ಮಾಡಬಾರದೆಂದು ನಿತ್ಯಕ್ರಮಗಳನ್ನು ಕ್ಲಪ್ತಗೊಳಿಸಿದರು. ಭಯವೆಂಬುವದು ಸ್ವಭಾವ ಗುಣವು. ಈ ದಿಶೆಯನ್ನು ತಿರುಗಿಸಿ ಮಂತ್ರದಲ್ಲಿ ವಿಶ್ವಾಸವಿಡುವಂತೆ ಮಾಡಿದರು. ಹುಟ್ಟುಗುಣಗಳು ಸುಟ್ಟರೂ ಹೋಗುವದಿಲ್ಲ. ಆದ್ದರಿಂದ ಅವುಗಳ ಪ್ರವೃತ್ತಿಯನ್ನು ಸದ್ವಿಷಯಗಳ ಕಡೆಗೆ ಗಮನಿಸಬೇಕಾಗುವದು. ಹಾಗೆ ಮಾಡುವದೆಂದರೆ ಅಂಗಗುಣ ಪ್ರವೃತ್ತಿಯನ್ನು ಲಿಂಗಗುಣದ ಕಡೆಗೆ ತಿರುಗಿಸಿದಂತೆಯೇ ಸರಿ.

ಅಂಗಲಿಂಗಸ್ಥಳಗಳ ಹಾಗೂ ಷಟ್ಸ್ಥಲ ಸಂಸ್ಥಾಪನೆಯು ಮೊದಲು ಶಿವಾನುಭವ ಮಂಟಪದಲ್ಲಿ ಪ್ರಾದುರ್ಭವಿಸಿತು. ಈ ಆರು ಸ್ಥಲಗಳ ಬಗ್ಗೆ ಪ್ರತ್ಯೇಕವಾಗಿ ಶ್ರೀ ಶಿವಶರಣರ ನಿರ್ಮಲಾಂತಃಕರಣದಿಂದ ಅನೇಕ ವಚನಗಳು ಹೊರಸೂಸಿ ಹರಿದಿರುವವು. ಅವುಗಳನ್ನು ಕ್ರಮಗೊಳಿಸಿ ರಾ॥ ಸಾ॥ ಹಳಕಟ್ಟಿಯವರು ತಮ್ಮ "ವಚನ ಶಾಸ್ತ್ರಸಾರ"ವೆಂಬ ಗ್ರಂಥದಲ್ಲಿ ಮುದ್ರಿಸಿ ಪ್ರಕಟಿಸಿದ್ದು ಎಲ್ಲರಿಗೂ ವಿದಿತವಾಗಿದೆ. ಷಟ್ಸ್ಥಲದ ರಹಸ್ಯವು ವಚನಗಳಲ್ಲಿ ಜೀವಕಳೆಯಿಂದ ತುಂಬಿತುಳುಕುತ್ತದೆ. ಅವುಗಳಲ್ಲಿ ಅಂಗಗುಣವು ಲಿಂಗಮಯವಾಗಲಿಕ್ಕೆ ವಿಶ್ವಾಸ, ನಿಷ್ಠೆ, ಅವಧಾನ, ಅನುಭಾವ, ಸಮರಸ, ಆನಂದಗಳೆಂಬ ಷಡ್ವಿಧ ಭಕ್ತಿಯ ವಿವರಣೆಯು ತೊಡಕಿಗೆಡೆಯಿಲ್ಲದೆ ಸರಳಪ್ರವಾಹದಂತೆ ಹರಿದಿರುತ್ತದೆ. ಈ ಆರು ಸ್ಥಲಗಳನ್ನೇ ಮುಂದೆ ಸೊಲ್ಲಾಪುರದ ಸಿದ್ಧರಾಮೇಶ್ವರನ ವಂಶಜರಾದ ಶ್ರೀ ಶಿವಯೋಗಿ ಶಿವಾಚಾರ್ಯರೆಂಬವರು "ವೀರಶೈವ ಸಿದ್ಧಾಂತ ಶಿಖಾಮಣಿ" ಎಂಬ ಸಂಸ್ಕೃತ ಗ್ರಂಥದಲ್ಲಿ ನೂರೊಂದು ಉಪಸ್ಥಲಗಳನ್ನು ಮಾಡಿ ವಿಸ್ತರಶಃ ಅವುಗಳನ್ನು ಪ್ರತಿಪಾದಿಸಿದ್ದಾರೆ. ಸಿದ್ಧಾಂತ ಶಿಖಾಮಣಿಯು ಪ್ರಾಯಶಃ ವಚನಗ್ರಂಥಗಳ ಆಧಾರದಿಂದ ಬರೆಯಲ್ಪಟ್ಟುದಾದ್ದ

ರಿಂದ ವಚನಗಳಲ್ಲಿ ಕಂಡುಬರುವ ವೈಖರಿಯೂ ಜೀವಕಳೆಯೂ ಅದರಲ್ಲಿ ಅಷ್ಟು ಎದ್ದು ಕಾಣುವದಿಲ್ಲ. ಈ ಗ್ರಂಥದಲ್ಲಿ ಕೆಲವು ಪ್ರಸಂಗಗಳಲ್ಲಿ ಒಂದು ಸ್ಥಲಕ್ಕೂ ಇನ್ನೊಂದು ಸ್ಥಲಕ್ಕೂ ತಾರತಮ್ಯ ವಿಶೇಷವೇನೂ ಇದ್ದಂತೆ ಕಂಡುಬರುವದಿಲ್ಲ. ಕೆಲವು ವಿಷಯುಗಳು ವಿಚಾರ ಸೃಷ್ಟಿಗಷ್ಟೇ ಸಂಬಂಧಿಸಿರುವದರಿಂದ ವ್ಯವಹಾರ ದೃಷ್ಟಿಗೆ ನಿಲುಕಲಾರದಂತಾಗಿವೆ.

ಶಿವಾಚಾರ್ಯರು ಮೊದಲು ಅಂಗಸ್ಥಲ ಲಿಂಗಸ್ಥಲಗಳೆಂಬೆರಡು ಪ್ರಾಮುಖ್ಯ ಭೇದಗಳನ್ನು ಮಾಡಿ ಅವುಗಳಲ್ಲಿ ಪ್ರತ್ಯೇಕವಾಗಿ ಭಕ್ತ, ಮಹೇಶ, ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯವೆಂಬ ಆರು ಅಂತರ್ಭಾಗಗಳನ್ನು ಕಲ್ಪಿಸಿ ಇವುಗಳಲ್ಲಿ ಕೆಳಗೆ ಕಾಣಿಸಿದಂತೆ ೧೦೧ ಸ್ಥಲಗಳನು ಹಂಚಿಹಾಕಿದ್ದಾರೆ.

| (ಅಂಗಸ್ಥಲ ೪೪) | | (ಲಿಂಗಸ್ಥಲ ೫೭) | |
|---|---|---|---|
| ಭಕ್ತ | ೧೫ | ಭಕ್ತ | ೯ |
| ಮಹೇಶ | ೯ | ಮಹೇಶ | ೯ |
| ಪ್ರಸಾದಿ | ೭ | ಪ್ರಸಾದಿ | ೯ |
| ಪ್ರಾಣಲಿಂಗಿ | ೫ | ಪ್ರಾಣಲಿಂಗಿ | ೯ |
| ಶರಣ | ೪ | ಶರಣ | ೧೨ |
| ಐಕ್ಯ | ೪ | ಐಕ್ಯ | ೯ |
| | ೪೪ | | ೫೭ |

ಈ ವಿಷಯುಗಳನ್ನು ಅತಿ ಸಂಕ್ಷೇಪವಾಗಿ ಇದರಡಿಯಲ್ಲಿ ವಿವರಿಸಿದ್ದಾಗಿದೆ.

## ಅಂಗಸ್ಥಲಗಳು.

### ಅಂಗಭಕ್ತ ೧೫

೧ ಬಹು ಜನ್ಮಗಳಲ್ಲಿ ಮಾಡಿದ ಪುಣ್ಯದಿಂದ ಯಾವಾತನ ಪಾಪಗಳೆಲ್ಲ ನಾಶವಾಗಿ ಶುದ್ಧಾಂತಃಕರುಣಿಯಾಗಿರುವನೋ ಆ ಜೀವನೇ ಪಿಂಡ ಎಂಬ ಸಂಜ್ಞೆಯಿಂದ ಕರೆಯಲ್ಪಡುತ್ತಾನೆ. ಆ ಸ್ಥಿತಿಗೆ ಪಿಂಡಸ್ಥಳವೆಂಬ ಹೆಸರು.

೨ ಯಾವನಿಗೆ ತಾನು ಶುದ್ಧಾಂತಃಕರುಣಿಯೆಂಬ ಅರಿವುಂಟೋ ಅವನೇ ಪಿಂಡಜ್ಞಾನಿಯು. ಆ ಅರಿವೇ ಪಿಂಡ ಜ್ಞಾನವು. ಈ ಸ್ಥಿತಿಗೆ ಪಿಂಡಜ್ಞಾನಸ್ಥಳವೆನ್ನುವರು.

೩ ತಾನು ಶುದ್ಧಾಂತಃಕರುಣಿಯೆಂಬ ಅರಿವುಳ್ಳ ಜೀವನಿಗೆ ತಾನು ಜನ್ಮತಾಳಿದ ಈ ಸಂಸಾರದ ಬಗ್ಗೆ ಹ್ಯೇಯುವುಂಟಾಗುವದು. ಇದೇ ಸಂಸಾರ ಹ್ಯೇಯಸ್ಥಳವು.

೪ ಸಂಸಾರದಲ್ಲಿ ಹ್ಯೇಯುವುಂಟಾದ ಜೀವನು ಒಬ್ಬ ಸದ್ಗುರುವನ್ನು ಹುಡುಕಿಕೊಂಡು ಆತನ ಶುಶ್ರೂಷೆ ಮಾಡಿ ತನಗೆ ಮುಂದಿನ ಹಾದಿಯನ್ನು ಹಚ್ಚಿಕೊಡಬೇಕೆಂದು ಭಕ್ತಿಪುರಸ್ಸರವಾಗಿ ಪೊಡಮಡುವನು. ಭಕ್ತನ ಸೇವಾಭಕ್ತಿಗಳಿಗೆ ಮೆಚ್ಚಿ ಆ ಗುರುವಿನಲ್ಲಿ ಭಕ್ತನ ಬಗ್ಗೆ ಕಾರುಣ್ಯವುಂಟಾಗುವದು. ಇದೇ ಗುರುಕಾರುಣ್ಯಸ್ಥಲವು.

೫ ಗುರುಕಾರುಣ್ಯವನ್ನು ಪಡೆದ ಭಕ್ತನಿಗೆ ಆ ಗುರುವು ಲಿಂಗ ಧಾರಣ ಮಾಡಿ ಲಿಂಗಪೂಜಾಮಹತ್ವವನ್ನು ಹೇಳಿಕೊಡುವನು. ಇದಕ್ಕೆ ಲಿಂಗಧಾರಣ ಸ್ಥಲವೆನ್ನುವರು.

೬ ಲಿಂಗಧಾರಿಯಾದ ಭಕ್ತನಿಗೆ ಗುರುವು ದೇಹ ಶುದ್ಧಿಯನ್ನು ಮಾಡಿಕೊಳ್ಳುವದಕ್ಕೋಸ್ಕರ ವಿಭೂತಿ ಧಾರಣೆಯ ಮಹತ್ವವನ್ನು ತಿಳಿಸಿಕೊಡುವನು. ಇದೇ ವಿಭೂತಿ ಧಾರಣಸ್ಥಲವೆನಿಸುತ್ತದೆ.

೭ ಭಕ್ತನು ವಿಭೂತಿಯಂತೆ ರುದ್ರಾಕ್ಷಿಗಳನ್ನು ಧರಿಸಿಕೊಂಡು ರುದ್ರನಂತೆ ಶೋಭಾಯಮಾನನಾಗಿ ಕಾಣಬೇಕೆಂದು ಗುರುವು ಉಪದೇಶಿಸುವನು. ಇದೇ ರುದ್ರಾಕ್ಷಿಧಾರಣ ಸ್ಥಲವು.

೮ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ಸಾಕ್ಷಾತ್ ಶಿವನಂತೆ ಒಪ್ಪುವ ಭಕ್ತನಿಗೆ ಶ್ರೀಗುರುವು ಪಂಚಾಕ್ಷರಿ ಮುಂತಾದ ರಹಸ್ಯವನ್ನರುಹಿ ಅದನ್ನು ಗುಪ್ತವಾಗಿ ಮನದಲ್ಲಿ ಜಪಿಸಬೇಕೆಂದು ಆಜ್ಞಾಪಿಸುವನು. ಭಕ್ತನು ಶ್ರದ್ಧಾಪರನಾಗಿ ಅದನ್ನು ಮನದಲ್ಲಿ ಜಪಿಸುವನು. ಇದೇ ಪಂಚಾಕ್ಷರಿ ಜಪಸ್ಥಲವು.

೯ ಗುರುವು ಈ ಪ್ರಕಾರ ಮಾರ್ಗತೋರಿಸಿದ ಬಳಿಕ ಭಕ್ತನು ಶಿವ ಪರಾಯಣನಾಗಿ ಲಿಂಗಪೂಜಾಕ್ರಿಯೆಗಳನ್ನು ಯಥಾವಿಧಿ ಸಾಂಗಗೊಳಿಸುವನು. ಇದೇ ಭಕ್ತಮಾರ್ಗ ಕ್ರಿಯಾಸ್ಥಳವು.

೧೦ ಈ ಮೇರೆಗೆ ಗುರುವನ್ನು ಬಿಟ್ಟು ಲಿಂಗವನ್ನಾಶ್ರಯಿಸಿದ ಭಕ್ತನು ಗುರುಲಿಂಗಗಳಲ್ಲಿ ಭೇದವನ್ನೆಣಿಸದೆ ಒಂದೇ ಸ್ವರೂಪವಾಗಿ ಕಾಣುವನು. ಇದಕ್ಕೆ ಉಭಯಸ್ಥಳವೆನ್ನುವರು.

೧೧ ಗುರುಲಿಂಗಗಳಲ್ಲಿದ್ದಂತೆಯೇ ಜಂಗಮದಲ್ಲಿಯೂ ಭೇದಭಾವವಿಲ್ಲದೆ ಭಕ್ತನು ಭಕ್ತಿಯನ್ನು ವಹಿಸುವನು. ಗುರುಲಿಂಗ ಜಂಗಮ ಇವು ಮೂರು ತನ್ನ ಸಂಪತ್ತುಗಳೆಂದು ಭಕ್ತನು ಭಾವಿಸುವನು. ಇದಕ್ಕೆ ತ್ರಿವಿಧ ಸಂಪತ್ತಿಸ್ಥಳವೆಂಬ ಹೆಸರು.

೧೨ ಗುರುಲಿಂಗಜಂಗಮಪ್ರಾಣಿಯಾದ ಭಕ್ತನು ಪ್ರತಿನಿತ್ಯ ಗುರುಪಾದೋದಕ ಗುರುಪ್ರಸಾದ, ಜಂಗಮಪಾದೋದಕ ಜಂಗಮಪ್ರಸಾದ ಈ ಪ್ರಕಾರ ೪ ವಿಧದ ಪಾದೋದಕ ಪ್ರಸಾದಗಳನ್ನು ಸೇವಿಸುತ್ತಿದ್ದರೆ ಆ ಸ್ಥಿತಿಗೆ ಚತುರ್ವಿಧ ಸಾರಾಯಸ್ಥಳವೆಂಬ ಹೆಸರು.

೧೩ ಗುರುಜಂಗಮರ ಪಾದೋದಕ ಪ್ರಸಾದವನ್ನು ಸ್ವೀಕರಿಸುವ ಭಕ್ತನು ಅವರಿಗೆ ತನ್ನ ಶಕ್ತ್ಯಾನುಸಾರ ದಾನವನ್ನು ಮಾಡುವನು. ಈ ದಾನವು ಪ್ರತಿಫಲಾಪೇಕ್ಷೆಯಿಂದ ಮಾಡಿಸ್ಪಾದರೆ ಅದಕ್ಕೆ ಉಪಾಧಿ ಮಾಟಸ್ಥಲವೆಂದೆನ್ನುವರು.

೧೪ ಫಲಾಪೇಕ್ಷೆಯಿಲ್ಲದೆ ಶಿವಾರ್ಪಣಬುದ್ಧಿಯಿಂದ ಗುರುಜಂಗಮಕ್ಕೆ ದಾನಮಾಡುವದು ನಿರುಪಾಧಿ ಮಾಟಸ್ಥಲವೆನಿಸುವದು.

೧೫ ಗುರುಜಂಗಮಕ್ಕೆ ನಿಷ್ಕಾಮ ಬುದ್ಧಿಯಿಂದ ದಾನಮಾಡುವ ಗುಣವು ಭಕ್ತನಲ್ಲಿ ಸಹಜಸ್ವಭಾವವಾಗಿ ಅಳವಟ್ಟಿದ್ದಾದರೆ ಆದಕ್ಕೆ ಸಹಜ ಮಾಟಸ್ಥಳವೆನ್ನುವರು.

## ಅಂಗಮಹೇಶ. ೯

೧೬ ಗುರುಲಿಂಗಮರಲ್ಲಿ ಭಕ್ತಿದಾನವನ್ನಾಚರಿಸುವ ಭಕ್ತನೇ ಮಹೇಶನಾಗುವನು. ಮಹೇಶನು ಮೇಲಿನ ತ್ರಿಮೂರ್ತಿಗಳಲ್ಲಿ ನಿಷ್ಠೆಯನ್ನಿಟ್ಟು ವ್ಯವಹಾರದಲ್ಲಿ ಪರದಾರ ಪರದ್ರವ್ಯಗಳಾಶೆಯನ್ನು ತೊರೆದು ಎಲ್ಲ ಪ್ರಾಣಿಗಳ ಹಿತದಲ್ಲಿ ತೊಡಗುವನು. ಇದೇ ಮಹೇಶ್ವರ ಪ್ರಶಂಸಾಸ್ಥಳವು.

೧೭ ಪರಸ್ತ್ರೀ ಪರಧನದಾಶೆಯನ್ನಳಿದು ಲೋಕಸಂಗ್ರಹ ಕಾರ್ಯದಲ್ಲಾಸಕ್ತನಾದ ಮಹೇಶನು ಇಷ್ಟಲಿಂಗದಲ್ಲಿಯೇ ತನ್ನ ನಿಷ್ಠೆಯನ್ನು

ಬಲಿಸುತ್ತ ಹೋಗುವನು. ತನ್ನ ಮೇಲೆ ಮುಗಿಲು ಹರಿದು ಬಿದ್ದರೂ ಲಿಂಗನಿಷ್ಠೆಯನ್ನೆಂದಿಗೂ ಬಿಡುವದಿಲ್ಲ. ಇದಕ್ಕೆ ಲಿಂಗನಿಷ್ಠಾಸ್ಥಳವೆಂಬ ಹೆಸರು.

೧೮ ಲಿಂಗವೇ ಪರವೆಂದು ಅದರಲ್ಲಿ ನಿಷ್ಠೆಯನ್ನಿಟ್ಟ ಮಹೇಶನು ತನ್ನ ಪೂರ್ವಕುಲಜಾತಿಯ ಆಚಾರಗಳನ್ನು ಅರ್ಥಾತ್ ಸ್ಥಾವರಾದಿ ನಾನಾ ದೈವಂಗಳ ಪೂಜೆಯನ್ನೂ ಜ್ಯೋತಿಷ್ಯ ಪಂಚಾಂಗ ಮೊದಲಾದ ಮೂಢ ಭಾವನೆಗಳನ್ನೂ ಬಿಟ್ಟುಬಿಡುವನು. ಇದಕ್ಕೆ ಪೂರ್ವಾಶ್ರಯ ನಿರಸನಸ್ಥಳವೆಂದೆನ್ನುವರು.

೧೯ ಪೂರ್ವಕುಲಾಚಾರವನ್ನು ಬಿಟ್ಟು ಎಲ್ಲವೂ ಕೇವಲ ಶಿವಸ್ವ ರೂಪವೆಂದು ತಿಳಿದು ಆಚರಿಸಬೇಕೆಂಬುವದರ ಮೇಲಿಂದ ದುರುಳ ವೇದಾಂತವನ್ನು ಸಾಧಿಸಬೇಕೆಂತಲ್ಲ. "ಹಾಲಿನೊಳಗೇನಿದೆ? ನೀರಿನೊಳ ಗೇನಿದೆ? ಎಲ್ಲವೂ ಶಿವಪ್ರಸಾದ" ಎಂದು ರುಚಿವ್ಯಸನಗಳನ್ನು ತೃಪ್ತಿಗೊ ಳಿಸುವ ದುರುಳವೇದಾಂತದ ಬಲಿಗೆ ಮಹೇಶನು ಬೀಳಲಾರನು. "ಬಳ ಸದಿರದ್ವೈತವನು ಬಾಹ್ಯದೊಳು ನೀ" ಎಂಬ ದಿವ್ಯ ತತ್ವವನ್ನು ಅವನು ಪಾಲಿಸುವನು. ಇದಕ್ಕೆ ಸರ್ವಾದ್ವೈತನಿರಸನಸ್ಥಳವೆಂಬ ಹೆಸರು.

೨೦ ದುರುಳ ಅದ್ವೈತವನ್ನೇ ಹುರಿದ ಮಹೇಶನಲ್ಲಿ ಶಿವಕಳೆಯು ಸದಾ ವಿರಾಜಿಸುತ್ತಿರುತ್ತದೆ. ಶಿವಕಳೆಯು ಒಮ್ಮೆ ಆಳವಟ್ಟ ಬಳಿಕ ಅದನ್ನು ಮಹೇಶನು ಪೋಷಿಸುತ್ತ ಹೋಗುವನೇ ಹೊರತು ಪುನಃ ದೀಕ್ಷಾದಿ ಸಂಸ್ಕಾರದಿಂದ ಅದನ್ನು ಪ್ರಸ್ಥಾಪಿಸಲಿಕ್ಕೆ ಹೋಗುವದಿಲ್ಲ. ಅಂದರೆ ಒಮ್ಮೆ ದೃಢವಾದ ಸಂಸ್ಕಾರವನ್ನು ಪುನಃ ಆಹ್ವಾನಿಸುವದಿಲ್ಲ. ಇದಕ್ಕೆ ಆಹ್ವಾನ ನಿರಸನಸ್ಥಳವೆಂದೆನ್ನುವರು.

೨೧ ಶಿವಕಲಾಸಂಪನ್ನನಾದ ಮಹೇಶನು ಶಿವನ ಅಷ್ಟತನುಗ ಳೆಂದು ಕರೆಯಲ್ಪಡುವ ಪೃಥ್ವಿ, ಅಪ್, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮ ಇವುಗಳನ್ನು ಶಿವನೆಂದು ತಿಳಿದು ವಂದಿಸ ಲಾರನು. ಯಾಕಂದರೆ ದೇಹದಲ್ಲಿರುವ ಚೇತನಾತ್ಮಕವಾದ ಜೀವನು ಮುಖ್ಯವಲ್ಲದೆ ದೇಹವೇನೂ ಮುಖ್ಯವಲ್ಲ. ಗುಡಿಯಲ್ಲಿರುವ ದೇವರು ಮುಖ್ಯವಲ್ಲದೆ ಗುಡಿಯೇ ಮುಖ್ಯವಲ್ಲ. ಅದರಂತೆಯೇ ಅಷ್ಟತನುಗಳಲ್ಲಿ ಅಡಕವಾಗಿರುವ ಪರಶಿವನೇ ಪೂಜಾರ್ಹನಲ್ಲದೆ ಆ ಅಷ್ಟತನುಗಳೇನೂ ಪೂಜ್ಯವಲ್ಲ. ಇದಕ್ಕೆ ಅಷ್ಟಮೂರ್ತಿ ನಿರಸನ ಸ್ಥಳವೆನ್ನುವರು.

೨೨ ಕಾಣುವದೆಲ್ಲವೂ ಶಿವನಲ್ಲ; ಆದರೆ ದೃಶ್ಯಾದೃಶ್ಯ ವಸ್ತುಗಳಲ್ಲೆಲ್ಲ ಶಿವನು ಅಡಕವಾಗಿದ್ದಾನೆಂದು ತಿಳಿಯುವ ಮಹೇಶನು "ಸರ್ವ ವ್ಯಾಪಕಃ ಶಿವಃ" ಎಂಬ ತತ್ವವನ್ನನುಸರಿಸಿ ಕಂಡಕಂಡ ವಸ್ತುವಿಗೆ ಕೈಮುಗಿಯಲಿಕ್ಕೆ ಹೋಗುವದಿಲ್ಲ. ಆ ವಿಶ್ವವ್ಯಾಪಕ ಭಾವನೆಯನ್ನು ಇಷ್ಟಲಿಂಗದಲ್ಲಿಯೇ ಇರಿಸಿಬಿಡುವನು. ಇದಕ್ಕೆ ಸರ್ವಗತತತ್ವ ಸಿಂಸನಸ್ಥಳವೆನ್ನುವರು.

೨೩ ಶಿವನು ಜಗತ್ತಿನಲ್ಲಿ ತುಂಬಿರುವನೆಂದು ತಿಳಿದು ಬಾಹ್ಯದಲ್ಲಿ ಅದ್ವೈತವನ್ನು ಬಳಿಸಲಿಕ್ಕೆ ಬಾರದಿದ್ದರೂ ಮಹೇಶನು ಆ ತತ್ವವನ್ನು ತನ್ನ ಭಾವದಲ್ಲಿರಿಸಿಕೊಂಡು ಆಚರಿಸುವನು. ಹೀಗೆ ಮಾಡುವದಕ್ಕೆ ಶಿವಜಗನ್ಮಯ ಸ್ಥಳವೆಂಬ ಹೆಸರು.

೨೪ ಪರಶಿವನು ವಿಶ್ವವ್ಯಾಪಕನಾಗಿದ್ದರೂ ತನ್ನ ಭಕ್ತರಾದ ತಪಸ್ವಿಗಳು ಅನುಷ್ಠಾನಪರರು ಈ ಮೊದಲಾದವರ ಹೃದಯದಲ್ಲಿ ವಿಶೇಷ ಪ್ರಕಾಶದಿಂದ ಬೆಳಗುವನೆಂಬ ತತ್ವವನ್ನು ಮಹೇಶನು ಮನದಟ್ಟಾಗಿಟ್ಟುಕೊಳ್ಳುವನು ಇದಕ್ಕೆ ಭಕ್ತದೈಹಿಕ ಸ್ಥಳವೆಂದೆನ್ನುವರು.

## ಅಂಗಪ್ರಸಾದಿ. ೭

೨೫ ಶಿವಾದ್ವೈತಿಯಾದ ಮಹೇಶನೇ ಪ್ರಸಾದಿಯೆಂದೆನಿಸಿಕೊಳ್ಳುವನು. ಮನಸ್ಸು ಶಿವಾದ್ವೈತ ಭಾವನೆಯಿಂದ ನಿರ್ಮಲವಾದಾತನೇ ಪ್ರಸಾದಿಯು. ಈ ಸ್ಥಳಕ್ಕೆ ಪ್ರಸಾದಿಸ್ಥಳವೆನ್ನುವರು.

೨೬ ನಿರ್ಮಲಮನಸ್ಕನಾದ ಪ್ರಸಾದಿಯು ತನಗೆ ಲಿಂಗಪ್ರಸಾದದ ಮಹಿಮೆಯನ್ನು ಹೇಳಿಕೊಟ್ಟ ಶ್ರೀ ಗುರುವನ್ನು ಸ್ಮರಿಸುತ್ತ ಪ್ರಸಾದವನ್ನು ಸೇವಿಸುವನು. ಈ ಪ್ರಕಾರ ಪ್ರಸಾದಿಯು ಮಹತ್ವ ಕೊಟ್ಟ ಗುರುಸ್ಥಾನಕ್ಕೆ ಗುರುಮಹಾತ್ಮ್ಯಸ್ಥಳವೆಂಬ ಹೆಸರು.

೨೭ ಗುರುವಿಗೆ ಗೌರವವನ್ನು ತೋರಿಸುವ ಪ್ರಸಾದಿಯು ಲಿಂಗಪ್ರಸಾದವನ್ನು ಸೇವಿಸುವಾಗ ಲಿಂಗಕ್ಕೂ ಮಹತ್ವಕೊಟ್ಟು ಲಿಂಗದಲ್ಲಿ ನಿರ್ಮಲ ಮನಸ್ಸನ್ನಿರಿಸುವದರಿಂದ ಅದಕ್ಕೆ ಲಿಂಗಮಹಾತ್ಮ್ಯಸ್ಥಳವೆನ್ನುವರು.

೨೮ ಪ್ರಸಾದಿಯು ಗುರುಲಿಂಗಗಳಿಗೆ ಮಹತ್ವವನ್ನು ಕೊಟ್ಟಂತೆ ಲೋಕೋದ್ಧಾರಕ್ಕಾಗಿ ಸಂಚರಿಸುವ ಜಂಗಮ ಮೂರ್ತಿಯನ್ನು ಆದರದಿಂದ ಬರಮಾಡಿಕೊಂಡು ಪ್ರಸಾದವನ್ನು ಸಲ್ಲಿಸಿ ಮಿಕ್ಕ ಪ್ರಸಾದವನ್ನು ತಾನು ಸೇವಿಸುವನು. ಇದಕ್ಕೆ ಜಂಗಮ ಮಹಾತ್ಮ್ಯಸ್ಥಳವೆನ್ನುವರು.

೨೯ ಗುರುಲಿಂಗಜಂಗಮರಿಗೆ ಭಕ್ತಿಯಿಂದ ಪ್ರಸಾದವನ್ನು ಸಲಿಸಿ ಮಿಕ್ಕ ಪ್ರಸಾದವನ್ನು ತಾನು ಸೇವಿಸುವ ಪ್ರಸಾದಿಯೇ ನಿಜವಾದ ಭಕ್ತನು. ಆತನ ಮಹಾತ್ಮೆಯಾದರೂ ಮಹತ್ತರವಾದುದು. ಇದಕ್ಕೆ ಭಕ್ತಮಹಾತ್ಮ್ಯಸ್ಥಳವೆಂಬ ಹೆಸರು.

೩೦ ಗುರುಲಿಂಗನು ಪ್ರಾಣಿಯಾದ ಭಕ್ತನಿಗೆ ಲೋಕದಲ್ಲಿ ಶರಣನೆಂದು ಕರೆಯುವ ವಾಡಿಕೆಯುಂಟು. ಈ ಶರಣನ ಮಹತ್ವವಾದರೂ ಮಹತ್ತರವಾಗಿರುವದರಿಂದ ಈ ಸ್ಥಾನಕ್ಕೆ ಶರಣಮಹಾತ್ಮ್ಯಸ್ಥಲವೆಂದೆನ್ನುವರು.

೩೧ ಗುರುಲಿಂಗಜಂಗಮಗಳಿಗೆ ಶರಣನು ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳನ್ನು ಅರ್ಪಿಸಿ ಉಳಿದುದನ್ನು ತಾನು ಸೇವಿಸಿ ಪ್ರಸನ್ನ ಹೃದಯದಿಂದ ಪರಿಶೋಭಿಸುವದೇ ಪ್ರಸಾದಮಹಾತ್ಮ್ಯಸ್ಥಲವೆನಿಸಿಕೊಳ್ಳುತ್ತದೆ.

## ಅಂಗಪ್ರಾಣಲಿಂಗಿ ೫

೩೨ ನಿರ್ಮಲಚಿತ್ತವುಳ್ಳವನಾದ ಪ್ರಸಾದಿಯು ಶಿವಯೋಗಮಾರ್ಗದಿಂದ ಅಂತರಂಗದಲ್ಲಿ ಜ್ಯೋತಿರ್ಮಯವಾಗಿ ಬೆಳಗುವ ಪ್ರಾಣಲಿಂಗದ ಅನುಸಂಧಾನ ಮಾಡುವನು ಇದಕ್ಕೆ ಪ್ರಾಣಲಿಂಗಿ ಸ್ಥಳವೆಂದೆನ್ನುವರು.

೩೩ ಜ್ಯೋತಿರ್ಮಯವಾದ ಪ್ರಾಣಲಿಂಗವನ್ನು ಶಿವಯೋಗಸಾಧನದಿಂದ ಪೂಜೆಮಾಡುವದೆಂದರೆ ಶಾಂತಿಯೆಂಬ ಜಲ, ವೈರಾಗ್ಯವೆಂಬ ಪುಷ್ಪ, ಏಕಾಗ್ರಚಿತ್ತವೆಂಬ ಗಂಧ, ನಿರಹಂಕಾರವೆಂಬ ಅಕ್ಷತೆ, ವಿಶ್ವಾಸವೆಂಬ ಧೂಪ, ಆತ್ಮಜ್ಞಾನವೆಂಬ ದೀಪ, ಸಂಸಾರಭ್ರಾಂತಿನಿರಸನವೆಂಬ ನೈವೇದ್ಯಗಳಿಂದ ಅರ್ಚಿಸುವದು. ಇದಕ್ಕೆ ಪ್ರಾಣಲಿಂಗಾರ್ಚನಸ್ಥಳವೆನ್ನುವರು.

೩೪ ಇಂಥ ಲಿಂಗಾರ್ಚನೆಯನ್ನೆಸಗುವ ಪ್ರಾಣಲಿಂಗಿಯು ತನ್ನ ಚಿತ್ತವೃತ್ತಿಯನ್ನು ನಿರೋಧಿಸಿ ಶಿವಯೋಗಸಮಾಧಿಯಲ್ಲಿ ನಿಮಗ್ನನಾಗುವನು. ಇದಕ್ಕೆ ಶಿವಯೋಗಸಮಾಧಿಸ್ಥಳವೆಂಬ ಹೆಸರು.

೩೫ ಪ್ರಾಣವೇ ಲಿಂಗವೆಂದು ಭಾವಿಸಿದ ಪ್ರಾಣಲಿಂಗಿಗೆ ಲಿಂಗವು ತನ್ನ ನಿಜಸ್ವರೂಪವನ್ನು ತೋರುವದು. ಲಿಂಗದಲ್ಲಿಯೇ ಆತನಿಗೆ ಜಗತ್ತಿನ ಸೃಷ್ಟಿಸ್ಥಿತಿಲಯಗಳು ತೋರುವವು. ಇಂಥ ಸ್ಥಿತಿಗೆ ಲಿಂಗನಿಜಸ್ಥಳವೆಂದೆನ್ನುವರು.

೩೬ ಲಿಂಗವೇ ಪ್ರಾಣವೆಂದರಿದ ಪ್ರಾಣಲಿಂಗಿಯು ತನ್ನಂಗವನು ಲಿಂಗಸ್ವರೂಪಗೊಳಿಸುವನು. ಈ ಪ್ರಕಾರ ಅಂಗಲಿಂಗಗಳ ಸಂಗವನ್ನು ಮಾಡುವದೇ ಅಂಗಲಿಂಗಸ್ಥಳವೆಂದೆನಿಸುತ್ತದೆ.

### ಅಂಗಶರಣ ಳ

೩೭ ಪ್ರಾಣವೇ ಲಿಂಗವೆಂದರಿದ ಪ್ರಾಣಲಿಂಗಿಯು ಮುಂದೆ ಆ ಲಿಂಗವೇ ಪತಿಯೆಂದೂ ತಾನೇ ಸತಿಯೆಂದೂ ಸತಿಪತಿ ಭಾವದಿಂದ ಆಚರಿಸಿದರೆ ಆ ಸ್ಥಿತಿಗೆ ಶರಣಸ್ಥಳವೆನ್ನುವರು.

೩೮ 'ಶರಣಸತಿ ಲಿಂಗಪತಿ' ಎಂಬೀ ಭಾವದಿಂದಾಚರಿಸುವ ಶರಣನು ಸತ್ವಗುಣಶಾಲಿಯಾಗಿ ತಮೋಗುಣವನ್ನು ನಿರ್ಮೂಲಗೊಳಿಸುವನು. ಇಂಥ ಸ್ಥಿತಿಗೆ ತಾಮಸನಿರಸನಸ್ಥಳವೆಂಬ ಹೆಸರು.

೩೯ ತಾಮಸಗುಣವಿದೂರನಾದ ಶರಣನು ಲಿಂಗಾಂಗ ಸಾಮರಸ್ಯದಲ್ಲಿಯೇ ತನ್ನ ಜ್ಞಾನವನ್ನು ನಿರ್ದೇಶಗೊಳಿಸುವನು. ಆಗ ಅದು ನಿರ್ದೇಶಸ್ಥಳವೆಂದು ಹೇಳಲ್ಪಡುತ್ತದೆ.

೪೦ ಲಿಂಗಾಂಗಸಾಮರಸ್ಯಜ್ಞಾನವೇ ತನ್ನ ಶೀಲವೆಂದು ತಿಳಿಯುವ ಶರಣನಿಗೆ ಶೀಲವಂತನೆಂದನ್ನುವರು. ಅಂಥ ಸ್ಥಿತಿಗೆ ಶೀಲಸಂಪಾದನಸ್ಥಳವೆಂಬ ಹೆಸರು.

### ಅಂಗೈಕ್ಯ ಳ

೪೧ ಲಿಂಗವನ್ನು ಪತಿಯೆಂದು ಕಾಣುವ ಶರಣನು ಮುಂದೆ ಸರ್ವತ್ರ ಲಿಂಗಭಾವವುಳ್ಳವನಾಗುವನು. ಅಂದರೆ ಸರ್ವವಿಶ್ವವೇ ಲಿಂಗಸ್ವರೂಪವೆಂಬ ಭಾವನೆಯಲ್ಲಿ ಮನಮಗ್ನನಾಗುವನು. ಇದಕ್ಕೆ ಐಕ್ಯಸ್ಥಳವೆನ್ನುವರು.

೪೨ ಐಕ್ಯನ ಆಚರಣೆಗಳೆಲ್ಲವೂ ಸರ್ವತ್ರ ಲಿಂಗಭಾವನೆಯನ್ನೊಳಕೊಂಡಂಥವುಗಳಾಗಿರುತ್ತವೆ. ಈ ಸ್ಥಿತಿಗೆ ಸರ್ವಾಚಾರಸಂಪತ್ತಿಸ್ಥಳವೆನ್ನುವರು.

೪೩ ಲಿಂಗವನ್ನು ಸರ್ವತ್ರದಲ್ಲಿ ಕಾಂಬುವ ಐಕ್ಯನು ಅಂಗಲಿಂಗಗಳನ್ನು ಬೇರೆ ಇರಿಸದೆ ಒತ್ತಟ್ಟಿಗೆ ಏಕಾಗ್ರಗೊಳಿಸುವನು. ಇದಕ್ಕೆ ಏಕಭಾಜನಸ್ಥಳವೆನ್ನುವರು.

೪೪ ಲಿಂಗಾಂಗಗಳಲ್ಲಿ ಏಕಸ್ವರೂಪದಿಂದಾಚರಿಸುವ ಐಕ್ಯನು ಜಗತ್ತಿನಲ್ಲಿ ಹೆಚ್ಚುಕಡಿಮೆಯೆಂಬ ಭಾವನೆಯನ್ನಳಿದು ಜಗತ್ತೆಲ್ಲ ಶಿವಸ್ವರೂಪವೆಂದು ತಿಳಿದು ಸಹಭೋಜನಾದಿಗಳಿಂದ ಸಮರಸವನ್ನಾಚರಿಸುವನು. ಇದಕ್ಕೆ ಸಹಭೋಜನಸ್ಥಳವೆನ್ನುವರು.

ಇಲ್ಲಿಗೆ ಅಂಗಸ್ಥಳವು ಸಮಾಪ್ತಿಯಾಯಿತು. ಈ ವರೆಗೆ ವೀರಶೈವದೀಕ್ಷೆಯನ್ನು ಹೊಂದಿದ ಶಿಷ್ಯನು ಸದ್ಗುರುವಿನ ಉಪದೇಶದಿಂದ ಅನೇಕ ವಿಧವಾದ ಕ್ರಿಯಾಚಾರಗಳನ್ನಾಚರಿಸಿ ತನುಮನಭಾವಗಳನ್ನು ಪವಿತ್ರಗೊಳಿಸಿಕೊಂಡು ಜೀವಭಾವವನ್ನುಳಿಹಿ ಶಿವಭಾವವನ್ನೈದಿದ ಬಗ್ಗೆ ವಿವರಣೆಯು ಮಾಡಲ್ಪಟ್ಟದ್ದಾಯಿತು. ಅಂಗನು ಲಿಂಗಸ್ಥಿತಿಗೆ ಬರಲಿಕ್ಕೆಂದು ನೇರ್ಪಟ್ಟ ೪೪ ಸ್ಥಲಗಳನ್ನು ದಾಟಿದ ಬಳಿಕ ಆತನಿಗೆ ಗುರುತ್ವವು ಪ್ರಾಪ್ತವಾಗುವದು. ಆ ಗುರುವಿನ ಆಧ್ಯಾತ್ಮಿಕ ಬೆಳವಣಿಗೆಯು ಕ್ರಮಶಃ ಹೇಗೆ ಆಗುವದೆಂಬದನ್ನು ಮುಂದೆ ಲಿಂಗಸ್ಥಳದಲ್ಲಿ ವಿವೇಚಿಸಲಾಗುವದು.

## ಲಿಂಗಸ್ಥಳಗಳು.



### ಲಿಂಗಭಕ್ತ ೯

೪೫ ಅಂಗಸ್ಥಳದಲ್ಲಿ ಹೇಳಿದ ೪೪ ಸ್ಥಳದಂತೆ ಯಾವ ಭಕ್ತನು ಆಚರಿಸುವನೋ ಅವನೇ ಗುರುವೆಂದು ಕರೆಯಿಸಿಕೊಳ್ಳಲು ತಕ್ಕವನು. ಆತನು ಅನ್ಯಭಕ್ತರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಶುದ್ಧಮಾಡಲು ಸಮರ್ಥನು. ಈ ಸ್ಥಿತಿಗೆ ದೀಕ್ಷಾಗುರುಸ್ಥಳವೆಂಬ ಹೆಸರು.

೪೬ ಶಿವದೀಕ್ಷೆ ಮಾಡಿದ ಬಳಿಕ ಗುರುವು ವೀರಶೈವ ಧರ್ಮದ ಸಂಬಂಧವಾಗಿ ಭಕ್ತರಲ್ಲಿ ಶಂಕಾಪ್ರಶ್ನೆಗಳುದ್ಭವಿಸಿದರೆ ಅವುಗಳನ್ನು ತನ್ನ ಅನುಭವದಿಂದ ನಿವಾರಿಸಿ ಅವರಿಗೆ ಧಾರ್ಮಿಕ ಶಿಕ್ಷಣವನ್ನು ಕೊಡುವನು. ಈ ಸ್ಥಿತಿಗೆ ಶಿಕ್ಷಾಗುರುಸ್ಥಲವೆನ್ನಬೇಕು.

೪೭ ಧರ್ಮಾಚಾರದ ತತ್ವಗಳನ್ನು ಭಕ್ತರಿಗೆ ತಿಳುಹಿಸಿದ ಗುರುವು ಮುಂದೆ ಲಿಂಗಾಂಗ ಸಾಮರಸ್ಯಜ್ಞಾನವನ್ನು ಭಕ್ತರ ಮನೋಭೂಮಿಕೆಯಲ್ಲಿ ನಾಟುವಂತೆ ಉಪದೇಶಿಸುವನು. ಈ ಸ್ಥಿತಿಗೆ ಜ್ಞಾನಗುರುಸ್ಥಳವೆನ್ನುವರು.

೪೮ ತಾನು ಆಚರಿಸಿ ಅನುಭವಿಸಿದ ಇಷ್ಟಲಿಂಗಾಚಾರ ಕ್ರಿಯೆಗಳನ್ನು ಗುರುವು ಶಿಷ್ಯರಿಗೆ ಹೇಳಿಕೊಟ್ಟು ಅವರಿಂದ ಆ ಕ್ರಿಯೆಗಳನ್ನು ವಿಧಾನಪೂರ್ವಕವಾಗಿ ಮಾಡಹಚ್ಚುವನು. ಇದಕ್ಕೆ ಕ್ರಿಯಾಲಿಂಗಸ್ಥಳವೆಂಬ ಹೆಸರು.

೪೯ ಇಷ್ಟಲಿಂಗಾಚಾರವನ್ನು ಹೇಳಿಕೊಟ್ಟ ಮೇಲೆ ಗುರುವು ಶಿಷ್ಯನಿಗೆ ಪ್ರಾಣಲಿಂಗಾನುಸಂಧಾನವನ್ನು ತಿಳಿಸಿ ಇಷ್ಟಲಿಂಗವು ಭಾವದಲ್ಲಿ ಅಳವಡುವ ಪರಿಯನ್ನು ವಿಶದಪಡಿಸುವನು. ಈ ಸ್ಥಿತಿಗೆ ಭಾವಲಿಂಗಸ್ಥಳವೆನ್ನುವರು.

೫೦ ಪ್ರಾಣಲಿಂಗಾನುಸಂಧಾನವನ್ನರುಹಿದ ಬಳಿಕ ಶ್ರೀ ಗುರುವು. ಶಿಷ್ಯನ ಮನದಲ್ಲಿ ಪ್ರಾಣವೇ ಲಿಂಗ ಲಿಂಗವೇ ಪ್ರಾಣವೆಂಬ ಜ್ಞಾನವನ್ನು ದೃಢವಾಗಿ ಬಿಂಬಿಸುವನು. ಇದಕ್ಕೆ ಜ್ಞಾನಲಿಂಗಸ್ಥಳವೆಂಬ ಹೆಸರು

೫೧ ಜ್ಞಾನಲಿಂಗದ ರಹಸ್ಯವನ್ನು ಹೇಳಿಕೊಡುವ ಶ್ರೀ ಗುರುವು ತಾನೇ ಸ್ವತಃ ಭಕ್ತನಿಗೆ ಲಿಂಗರೂಪಿಯಾಗಿ ಕಾಣುವನು. ಇದಕ್ಕೆ ಸ್ವಯಲಿಂಗಸ್ಥಳವೆನ್ನುವರು.

೫೨ ಸ್ವಯಂಲಿಂಗವಾದ ಗುರುಮೂರ್ತಿಯು ಜಗತ್ತಿನಲ್ಲಿ ಶಿಷ್ಯರಿಗೆ ಬೋಧೆಮಾಡುತ್ತ ಸಂಚರಿಸುವನು. ಈ ಸ್ಥಿತಿಗೆ ಚರಲಿಂಗಸ್ಥಳವೆಂದೆನ್ನುವರು.

೫೩ ಜಗತ್ತಿನಲ್ಲಿ ಸಂಚರಿಸುವ ಶ್ರೀಗುರುವು ತನಗೆ ಕಾಣುವ ವಿಶ್ವವೆಲ್ಲ ಶಿವನ ಸ್ವರೂಪವೆಂದರಿದು ತನ್ನ ದರ್ಶನ-ಸ್ಪರ್ಶನ-ಭಾಷಣಾದಿಗಳಿಂದ ಜೀವರುಗಳನ್ನು ಪಾವನಗೊಳಿಸುವನು. ಈ ಸ್ಥಿತಿಗೆ ಪರಲಿಂಗಸ್ಥಳವೆಂಬ ಹೆಸರು.

## ಲಿಂಗಮಹೇಶ್ವರ ೯

೫೪ ಸರ್ವತ್ರ ಲಿಂಗವು ಅಳವಟ್ಟರೂ ಲಿಂಗಪೂಜಾದಿ ಬಾಹ್ಯ ಕ್ರಿಯೆಗಳನ್ನು ಸರ್ವಥಾ ಬಿಡದೆ ಮಹೇಶ್ವರನು ಆಚರಿಸುವನು. ಜ್ಞಾನಕರ್ಮ ಸಮುಚ್ಚಯದಿಂದಲೇ ಮೋಕ್ಷವೆಂಬ ತತ್ವವನ್ನು ಸ್ವಂತ ಆಚರಣೆಯಿಂದ ತೋರಿಸಿಕೊಡುವನು ಈ ಸ್ಥಿತಿಗೆ ಕ್ರಿಯಾಗಮಸ್ಥಳವೆನ್ನುವರು.

೫೫ ಜ್ಞಾನಕ್ರಿಯೆಗಳಲ್ಲಷ್ಟೇ ಲಿಂಗಜ್ಞಾನವು ಅಳವಡದೆ ಮಹೇಶ್ವರನ ಭಾವದಲ್ಲಿಯೂ ಕೂಡು ತುಂಬಿತುಳುಕುವದು. ಇಂಥ ಸ್ಥಿತಿಗೆ ಭಾವಾಗಮಸ್ಥಳವೆಂಬ ಹೆಸರು.

೫೬ ತನ್ನ ಭಾವದಲ್ಲಿ ಕ್ರಿಯಾಜ್ಞಾನವನ್ನು ನೆಲೆಗೊಳಿಸಿದ ಮಹೇಶನು ಅನ್ಯರಲ್ಲಿಯೂ ಜ್ಞಾನವನ್ನಳವಡಿಸುವನು. ಇದಕ್ಕೆ ಜ್ಞಾನಾಗಮಸ್ಥಳವೆಂದೆನ್ನುವರು.

೫೭ ಕ್ರಿಯಾ ಜ್ಞಾನಭಾವಗಳು ಬಲಿತ ಮಹೇಶನು ತನ್ನ ದೇಹವು ನಿರುಪಯೋಗವಾದುದೆಂದು ತಿಳಿದು ಅದನ್ನು ತ್ಯಾಗಮಾಡುವದಿಲ್ಲ. ಆದರೆ ಆದರ ಸದುಪಯೋಗವನ್ನು ಜಗತ್ತಿಗೆ ಉಂಟುಮಾಡಿಕೊಡುವನು. ಇದಕ್ಕೆ ಸಕಾಯಸ್ಥಳವೆಂಬ ಹೆಸರು.

೫೮ ಪರಹಿತಾರ್ಥವಾಗಿ ದೇಹವನ್ನು ಧರಿಸಿದರೂ ದೇಹದ ಗುಣಧರ್ಮಗಳಾದ ಷಡ್ವಿಕಾರಗಳಿಗೆ ಗುರಿಯಾಗದಿರುವದೇ ಅಕಾಯಸ್ಥಳವೆಂದು ಹೇಳಲ್ಪಡುತ್ತದೆ.

೫೯ ಈ ಪ್ರಕಾರ ದೇಹ ಗುಣಧರ್ಮಗಳಿಂದ ನಿರ್ಲಿಪ್ತನಾಗಿ ಪರಿಶುದ್ಧತೆಯಿಂದೊಪ್ಪುವ ಮಹೇಶನ ಕಾಯವು ಪರತರವಾದುದು. ಇದಕ್ಕೆ ಪರಕಾಯಸ್ಥಳವೆನ್ನುವರು.

೬೦ ಪರಕಾಯ ವಿಶಿಷ್ಟನಾದ ಮಹೇಶನು ಅಹಿಂಸಾ, ಸತ್ಯ, ಬ್ರಹ್ಮಚರ್ಯಾದಿ ಧರ್ಮಾಚರಣೆಗಳನ್ನು ತಪ್ಪದೇ ನಡೆಯಿಸುವನು. ಇದಕ್ಕೆ ಧರ್ಮಾಚಾರಸ್ಥಳವೆಂಬ ಹೆಸರು.

೬೧ ಧರ್ಮಾಚಾರಗಳನ್ನಾಚರಿಸುವಾಗ ಮಹೇಶನು ನಾನು ಮಾಡಿದೆನೆಂಬ ಅಹಂಭಾವವನ್ನು ಬಿಟ್ಟು ಶಿವನು ಮಾಡಿಸಿದನೆಂಬ ಶಿವಾರ್ಪಣಬುದ್ಧಿಯಿಂದ ಆಚರಿಸಿದರೆ ಅದೇ ಭಾವಾಚಾರಸ್ಥಲವೆಂದು ಕರೆಯಲ್ಪಡುವದು.

೬೨ ನಿಷ್ಕಾಮ ಭಾವನೆಯಿಂದ ಮಾಡುವ ಆಚರಣೆಗಳೆಲ್ಲವೂ ಸುಜ್ಞಾನವಿಶಿಷ್ಟವಾಗಿರುವದರಿಂದ ಅವು ಜ್ಞಾನಾಚಾರಗಳೆಂದೇ ಲೋಕದಲ್ಲಿಗ್ರಹಿಸಲ್ಪಡುತ್ತವೆ. ಮಹೇಶನು ಸರ್ವಕ್ರಿಯೆಗಳೂ ಜ್ಞಾನದಿಂದಲೇ ಆಚರಿಸಲ್ಪಡುವದರಿಂದ ಈ ಸ್ಥಳಕ್ಕೆ ಜ್ಞಾನಾಚಾರಸ್ಥಳವೆಂಬ ಹೆಸರು ಪ್ರಾಪ್ತವಾಗಿದೆ.

## ಲಿಂಗಪ್ರಸಾದಿ. ೯

೬೩ ಮಹಾಜ್ಞಾನಿಯಾದ ಮಹೇಶನು ಮುಂದೆ ಪ್ರಸಾದಿಯಾಗಿ ಹಸ್ತಪರುಷ, ನೇತ್ರಪರುಷ, ವಾಕ್ಪರುಷಾದಿ ಕಾಯದ ಚಿಹ್ನಗಳಿಂದ ಭಕ್ತರನ್ನನುಗ್ರಹಿಸುವನು. ಇಂಥ ಸ್ಥಿತಿಗೆ ಕಾಯಾನುಗ್ರಹಸ್ಥಳವೆಂದೆನ್ನುವರು.

೬೪ ಲಿಂಗಪ್ರಸಾದಿಯು ಅಂತರಿಂದ್ರಿಯ ಬಹಿರಿಂದ್ರಿಯಗಳನ್ನು ವಶೀಕರಿಸಿ ಶಮ, ದಮ ಮೊದಲಾದ ಗುಣಗಳಿಂದ ಲೋಕೋದ್ಧಾರದ ಕಾರ್ಯವನ್ನು ಮಾಡುವದರಿಂದ ಈ ಸ್ಥಿತಿಗೆ ಇಂದ್ರಿಯಾನುಗ್ರಹಸ್ಥಳವೆಂಬ ಹೆಸರು.

೬೫ ಅನೇಕ ರೋಗಪೀಡೆಗಳಿಂದಾಗಲಿ ಅಕಾಲದಿಂದಾಗಲಿ ಮೃತ್ಯುವಿನ ಬಾಯಿಗೆ ತುತ್ತಾಗುವ ಜನಗಳ ಪ್ರಾಣವನ್ನು ತನ್ನ ಅಧ್ಯಾತ್ಮಿಕ ಶಕ್ತಿಯಿಂದ ಲಿಂಗಪ್ರಸಾದಿಯು ಅನುಗ್ರಹಿಸುವನಾದ್ದರಿಂದ ಈ ಸ್ಥಳಕ್ಕೆ ಪ್ರಾಣಾನುಗ್ರಹಸ್ಥಳವೆನ್ನುವರು.

೬೬ ಲಿಂಗಪ್ರಸಾದಿಯು ಶಿವನ ಕಾರ್ಯಕ್ಕಾಗಿ ತನ್ನ ಕಾಯವನ್ನು ಅರ್ಪಿಸಲು ಸಹ ಹಿಂದುಮುಂದು ನೋಡುವದಿಲ್ಲ. ಈ ಸ್ಥಿತಿಯು ಪ್ರಾಪ್ತವಾದಾಗ ಕಾಯಾರ್ಪಿತಸ್ಥಳವೆನಿಸಿಕೊಳ್ಳುವದು.

೬೭ ದೇಹವನ್ನರ್ಪಿಸಿದರೂ ದೇಹಾಭಿಮಾನವನ್ನರ್ಪಿಸುವದು ಕಠಿಣವೆಂದು ಹಿರಿಯರು ಹೇಳುವರು ಆದರೆ ಲಿಂಗಪ್ರಸಾದಿಯು ಮನ ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತಃಕರಣ ಚತುಷ್ಟಯವನ್ನು ಕೂಡ ಶಿವನಿಗೆ ಸಲ್ಲಿಸಿಬಿಡುವದರಿಂದ ಅದಕ್ಕೆ ಕರಣಾರ್ಪಿತಸ್ಥಳವೆಂಬ ಹೆಸರು ಬಂದಿದೆ.

೬೮ ದೇಹಕಾರಣಾದಿಗಳನ್ನು ಲಿಂಗಕಾರ್ಯಕ್ಕೆ ಅರ್ಪಿಸುವ ಲಿಂಗ ಪ್ರಸಾದಿಯು ತನ್ನ ಜೀವಭಾವವನ್ನು ಶಿವಮಯವಾಗಿ ಮಾಡುವದರಿಂದ ಆ ಭಾವವು ಶಿವನ ಸೊತ್ತಾಗುವದು. ಈ ಸ್ಥಿತಿಗೆ ಭಾವಾರ್ಪಿತಸ್ಥಳವೆನ್ನುವರು.

೬೯ ಹೀಗೆ ದೇಹಾಂತಃಕರಣಭಾವಗಳನ್ನು ಶಿವನಿಗೋಸ್ಕರ ಅರ್ಪಿಸುವ ಲಿಂಗಪ್ರಸಾದಿಯು ಯಾವ ಶಿಷ್ಯನಿಗೆ ಅನುಗ್ರಹಕೊಡುವನೋ ಅವನೇ ಧನ್ಯನು. ಈ ಮೇರೆಗೆ ಶಿಷ್ಯನನ್ನು ಅನುಗ್ರಹಿಸುವ ಈ ಸ್ಥಿತಿಗೆ ಶಿಷ್ಯಸ್ಥಳವೆಂಬ ಹೆಸರು.

೭೦ ಇಂಥ ಅನುಗ್ರಹ ಸಮರ್ಥನಾದ ಪ್ರಸಾದಿಯು ಶಿಷ್ಯನಿಂದ ಶುಶ್ರೂಷೆ ಹೊಂದಲು ತಕ್ಕವನು. ಶಿಷ್ಯನು ನಿರಭಿಮಾನದಿಂದ ಮಾಡಿದ ಸೇವೆಯನ್ನು ಗುರುವು ಪ್ರೇಮದಿಂದ ಸ್ವೀಕರಿಸುವೀ ಸ್ಥಳಕ್ಕೆ ಶುಶ್ರೂಷಾ ಸ್ಥಳವೆಂಬ ಹೆಸರು.

೭೧ ಪರುಷವು ತಾನು ಮುಟ್ಟಿದ ವಸ್ತುವನ್ನು ಬಂಗಾರವಾಗಿ ಮಾಡುವಂತೆ ಲಿಂಗಪ್ರಸಾದಿಯು ತಾನು ಅನುಗ್ರಹಿಸಿದ ಶಿಷ್ಯನನ್ನು ಗುರು ಸ್ವರೂಪವಾಗಿ ಮಾಡಿ ಆತನನ್ನು ಅನ್ಯರು ಸೇವಿಸುವಂತೆ ಅನುಗ್ರಹಿಸು ವದರಿಂದ ಆ ಶಿಷ್ಯನು ಸೇವ್ಯನಾಗುವನು. ಈ ಸ್ಥಳಕ್ಕೆ ಸೇವ್ಯಸ್ಥಳವೆಂ ದೆನ್ನುವರು.

## ಲಿಂಗ ಪ್ರಾಣಲಿಂಗಿ. ೯

೭೨ ಜೀವಭಾವವನ್ನಳಿದ ಪ್ರಸಾದಿಯು ಶಿವಭಾವವನ್ನು ಅರ್ಥಾ ತ್ ಆತ್ಮಭಾವವನ್ನು ತಳೆಯುವನಾದ್ದರಿಂದ ಪ್ರಾಣಲಿಂಗಿಯೆಂದೆನಿಸಿಕೊಂ ಡನು. ಆತ್ಮಭಾವವುಂಟಾದ ಈ ಸ್ಥಿತಿಗೆ ಆತ್ಮಸ್ಥಳವೆಂದು ಹೇಳುವದುಂಟು

೭೩ ಆತ್ಮಭಾವವು ಬಹಿರಂಗದಲ್ಲಷ್ಟೇ ಅಲ್ಲ ಪ್ರಾಣಲಿಂಗಿಯು ಅಂತ ರಂಗದಲ್ಲಿಯೂ ತಿಳವಡುವದು. ಈ ಸ್ಥಿತಿಗೆ ಅಂತರಾತ್ಮಸ್ಥಳವೆನ್ನುವರು.

೭೪ ಪ್ರಾಣಲಿಂಗಿಯು ಅಂತರಾತ್ಮನು ಪರಮಾತ್ಮನಲ್ಲಿ ತಲ್ಲೀನ ಮನ ಸ್ಕನಾಗಿ ಏಕತ್ವವನ್ನು ಹೊಂದುವವನಾದ್ದರಿಂದ ಈ ಸ್ಥಿತಿಗೆ ಪರಮಾ ತ್ಮಸ್ಥಳವೆಂಬ ಹೆಸರು.

೭೫ ಪರಮಾತ್ಮನಲ್ಲಿ ತಲ್ಲೀನನಾದ ಪ್ರಾಣಲಿಂಗಿಗೆ ತನ್ನ ದೇಹದ ಪರಿವೆಯೆಂಬುವದಿಲ್ಲ. ಅಂದರೆ ಆತನ ನಿತ್ಯಕ್ರಿಯೆಗಳು ಅಭ್ಯಾಸಬಲದಿಂದ ಯಥಾಪ್ರಕಾರವಾಗಿ ಸಾಗಿದ್ದರೂ ಆತನ ಮನಸ್ಸೆಲ್ಲ ಶಿವನಲ್ಲಿಯೇ ಲಯ ವಾಗಿಬಿಟ್ಟಿರುವದರಿಂದ ಇದಕ್ಕೆ ನಿರ್ದೇಹಾಗಮಸ್ಥಳವೆಂದು ಹೆಸರು.

೭೬ ಕರ್ಮೇಂದ್ರಿಯಗಳ ಪ್ರವೃತ್ತಿಯ ಕಡೆಗೆ ಎಳ್ಳಷ್ಟೂ ಮನಸ್ಸು ಕೊಡದ ಪ್ರಾಣಲಿಂಗಿಯು ಜ್ಞಾನೇಂದ್ರಿಯಗಳ ಪ್ರವೃತ್ತಿಯಲ್ಲಿಯೂ ತನ್ನ ಭಾವವನ್ನಿರಿಸುವದಿಲ್ಲ. ಈ ಸ್ಥಿತಿಗೆ ನಿರ್ಭಾವಾಗಮಸ್ಥಳವೆನ್ನುವರು.

೭೭ ನಿರ್ಭಾವದಲ್ಲಿ ರಮಿಸುವ ಪ್ರಾಣಲಿಂಗಿಯಲ್ಲಿ ಇವರು ತನ್ನ ವರು ಇವರು ಪರರು ಎಂಬ ಭೇದ ಬುದ್ಧಿಯೇ ನಾಶವಾಗಿ ಹೋಗು ವದರಿಂದ ಈ ಸ್ಥಿತಿಗೆ ನಷ್ಟಾಗಮಸ್ಥಳವೆಂಬ ಹೆಸರು.

೭೮ ಭೇದಭಾವವನ್ನಳಿದ ಪ್ರಾಣಲಿಂಗಿಗೆ ಮೊದಲು ಪರಮಾತ್ಮನ ಪ್ರಸಾದವು ಅಥವಾ ಅನುಗ್ರವು ಪ್ರಾಪ್ತವಾಗುವದು. ಇಂಥ ಸ್ಥಿತಿಗೆ ಆದಿ ಪ್ರಸಾದಿಸ್ಥಳವೆನ್ನುವರು.

೭೯ ಆದಿಯಲ್ಲಿ ಶಿವಾನುಗ್ರಹವನ್ನು ಪಡೆದ ಪ್ರಾಣಲಿಂಗಿಯು ಅಂತ್ಯದ ವರೆಗೂ ಹಾಗೆಯೇ ಪಡೆಯುತ್ತ ಸುಖಿಸುವನು. ಈ ಸ್ಥಿತಿಗೆ ಅಂತ್ಯಪ್ರಸಾದಿಸ್ಥಳವೆನ್ನುವರು.

೮೦ ಸಾದ್ಯಂತವಾಗಿ ಶಿವಾನುಗ್ರಹವನ್ನು ಪಡೆದ ಪ್ರಾಣಲಿಂಗಿಯು ಜಗತ್ತಿನಲ್ಲಿ ಸೇವ್ಯನಾಗುವನು. ತಾನು ಪೂಜ್ಯನಾಗಿ ಶಿಷ್ಯನಿಗೆ ಪ್ರಸಾದ ವನ್ನು ಅರ್ಥಾತ್ ಅನುಗ್ರಹವನ್ನು ಕೊಡಲು ಸಮರ್ಥನಾಗಿರುವದರಿಂದ ಈ ಸ್ಥಿತಿಗೆ ಸೇವ್ಯಪ್ರಸಾದಿಸ್ಥಲವೆಂಬ ಹೆಸರು.

## ಲಿಂಗ ಶರಣ ೧೨

೮೧ ಶಿಷ್ಯರ ಸೇವೆಗೆ ಪಾತ್ರನಾಗಿ ಅವರಿಗೆ ಅನುಗ್ರಹವನ್ನು ದಯ ಪಾಲಿಸುವ ಪ್ರಾಣಲಿಂಗಿಯೇ ಶರಣನು. ಇಂಥ ಶರಣನು ದೀಕ್ಷಾಪಾದೋ ದಕವೆಂಬ ಸಂಸ್ಕಾರದಿಂದ ಶಿಷ್ಯನನ್ನು ತನ್ನ ಸ್ವರೂಪವಾಗಿ ಮಾಡಿಕೊ ಳ್ಳುವನು. ಈ ಸ್ಥಿತಿಗೆ ದೀಕ್ಷಾಪಾದೋದಕ ಸ್ಥಳವೆನ್ನುವರು.

೮೨ ಬಾಹ್ಯಕ್ರಿಯೆಗಳಲ್ಲಷ್ಟೇ ಶರಣನು ಶಿಷ್ಯಗೆ ಗುರುತ್ವವು ಪ್ರಾಪ್ತ ವಾಗುವಂತೆ ಮಾಡುವನೆಂತಲ್ಲ. ಶಿಷ್ಯನ ಮನಸ್ಸಿನಲ್ಲಿಯೂ ಗುರುತ್ವದ ಭಾವನೆಯು ಸ್ಥಿರವಾಗುವಂತೆ ಶಿಕ್ಷಾಪಾದೋದಕದ ಸಂಸ್ಕಾರದಿಂದ ಶಿಷ್ಯ ನನ್ನನುಗ್ರಹಿಸುವನು. ಇದಕ್ಕೆ ಶಿಕ್ಷಾಪಾದೋದಕಸ್ಥಳವೆಂಬ ಹೆಸರು.

೮೩ ಗುರುಶಿಷ್ಯತ್ವದ ಏಕೀಭಾವವು ಸಂಸ್ಕಾರ ವಿಶೇಷದಿಂದ ಶಿಷ್ಯನ ಜ್ಞಾನದಲ್ಲಿ ಸಮರಸವಾಗುವಂತೆ ಮಾಡಿದರೆ ಅದಕ್ಕೆ ಜ್ಞಾನಪಾದೋ ದಕಸ್ಥಳವೆನ್ನುವರು.

೮೪ ಮೇಲಿನ ತ್ರಿವಿಧ ಪಾದೋದಕ ಸಂಸ್ಕಾರದಿಂದ ಶರಣನು ಶಿಷ್ಯನ ಕ್ರಿಯೆಗಳಲ್ಲಿ ನಿರಪೇಕ್ಷ ಬುದ್ಧಿಯನ್ನು ಹುಟ್ಟಿಸುವನು. ಇದಕ್ಕೆ ಕ್ರಿಯಾ ನಿಷ್ಪತ್ತಿಸ್ಥಳವೆನ್ನುವರು.

೮೫ ಇದಲ್ಲದೆ ಶರಣನು ಶಿಷ್ಯನ ಭಾವದಲ್ಲಿಯೂ ನಿರಹಂಕಾರ ವೃತ್ತಿಯನ್ನು ದೃಢೀಕರಿಸುವನು. ಈ ಸ್ಥಿತಿಗೆ ಭಾವನಿಷ್ಪತ್ತಿಸ್ಥಳವೆನ್ನುವರು.

೮೬ ಶರಣನು ಶಿಷ್ಯನ ಲೌಕಿಕ ಜ್ಞಾನವನ್ನು ಅಸ್ಥಿರಗೊಳಿಸಿ ಅದನ್ನು ಶಿವನಲ್ಲಿ ಲಯವಾಗುವಂತೆ ಮಾಡಿದರೆ ಆ ಸ್ಥಿತಿಗೆ ಜ್ಞಾನನಿಷ್ಪತ್ತಿಸ್ಥಳವೆನ್ನುವರು.

೮೭ ಆಕಾಶದಲ್ಲಿ ಪರವಸ್ತುವು ಹೇಗೆ ವ್ಯಾಪಿಸಿಬಿಟ್ಟಿರುವದೋ ಅದರಂತೆ ಶಿಷ್ಯೋದ್ಧಾರಕನ ಪಿಂಡದಲ್ಲಿ ಅಖಂಡವಾದ ಪರವಸ್ತುವು ವ್ಯಾಪಿಸಿರುವದು. ಈ ಸ್ಥಿತಿಗೆ ಪಿಂಡಾಕಾಶಸ್ಥಳವೆನ್ನುವರು.

೮೮ ಆಕಾಶವು ವಿಶ್ವವನ್ನೆಲ್ಲ ವ್ಯಾಪಿಸಿಬಿಡುವಂತೆ, ಬಿಂದುರೂಪವಾದ ಶರಣನ ಆತ್ಮವೂ ಸರ್ವವ್ಯಾಪಕವಾಗಿರುವದು. ಆ ಸ್ಥಿತಿಗೆ ಬಿಂದ್ವಾಕಾಶಸ್ಥಳವೆನ್ನುವರು.

೮೯ ಘಟಾಕಾಶ ಮಠಾಕಾಶವೆಂದೆನಿಸುವ ಮಹಾಕಾಶವೊಂದೇ ಇದ್ದಂತೆ ಶರಣನ ವ್ಯಾಪಕತ್ವವು ಪರವಸ್ತುವಿನ ಮಹಾವ್ಯಾಪಕತ್ವದಲ್ಲಿ ಬೆರೆತು ಏಕತ್ವವನ್ನು ಹೊಂದುವದು. ಅದಕ್ಕೆ ಮಹಾಕಾಶಸ್ಥಳವೆಂಬ ಹೆಸರು.

೯೦ ಶರಣನು ಲೌಕಿಕ ಕ್ರಿಯಾವಿದೂರನಾಗಿದ್ದರೂ ಲಿಂಗ ಕ್ರಿಯೆಗಳಿಂದ ಪ್ರಕಾಶಿಸುವನಾದ್ದರಿಂದ ಆ ಸ್ಥಿತಿಗೆ ಕ್ರಿಯಾಪ್ರಕಾಶಸ್ಥಳವೆನ್ನುವರು.

೯೧ ಶರಣನು ಲಿಂಗಕ್ರಿಯೆಯಿಂದ ಪ್ರಕಾಶಿಸುವಂತೆ ಲಿಂಗಭಾವದಿಂದಲೂ ಪ್ರಕಾಶಿಸುವನು. ಈ ಸ್ಥಳಕ್ಕೆ ಭಾವಪ್ರಕಾಶಸ್ಥಳವೆನ್ನುವರು.

೯೨ ಶರಣನು ಹಾಗೆಯೇ ಲಿಂಗಾಂಗ ಸಾಮರಸ್ಯ ಜ್ಞಾನದಿಂದ ಪ್ರಕಾಶಿಸುವ ಕಾರಣ ಆ ಸ್ಥಿತಿಗೆ ಜ್ಞಾನಪ್ರಕಾಶಸ್ಥಳವೆಂದೆನ್ನುವರು.

## ಲಿಂಗೈಕ್ಯ ೯

೯೩ ಲಿಂಗಾಂಗ ಸಾಮರಸ್ಯ ಜ್ಞಾನವುಳ್ಳ ಶರಣನೇ ಐಕ್ಯನು. ಆತನ ಪ್ರಸಾದವು ಅಥವಾ ಅನುಗ್ರಹವು ಜಗತ್ತಿನಲ್ಲಿ ಸ್ವೀಕರಿಸಲು ತಕ್ಕದ್ದಾಗಿರುವದು. ಈ ಸ್ಥಿತಿಗೆ ಸ್ವೀಕೃತ ಪ್ರಸಾದಿಸ್ಥಲವೆನ್ನುವರು.

೯೪ ಅನೇಕ ಜೀವರಾಶಿಗಳು ಭೋಗಿಸಿ ಉಳಿದ ಮಾಯೆಯೆಂಬ ಅನ್ನದಾಶೆಗೆ ಶಿವಯೋಗಿಯು ಮನವೆಳಿಸಲಾರನು. ಆದರೆ ಶಿಷ್ಟರಾದ ಮಹಾಜ್ಞಾನಿಗಳು ಆಚರಿಸಿ ತೋರಿಸಿದ ಆಚಾರವೆಂಬ ಶೇಷಾನ್ನವನ್ನು ಸ್ವೀಕರಿಸುವದರಿಂದ ಆ ಸ್ಥಿತಿಗೆ ಶಿಷ್ಟೋದನಸ್ಥಳವೆಂಬ ಹೆಸರು.

೯೫ ಜಗತ್ತಿನ ಎಲ್ಲ ಚರಾಚರ ವಸ್ತುಗಳು ಆ ಪರವಸ್ತುವಿನಲ್ಲಿಯೇ ಜನಿಸಿ ಕೊನೆಗೆ ಅಲ್ಲಿಯೇ ಲಯವಾಗುವವೆಂಬ ತತ್ವವನ್ನು ಶಿವಯೋಗಿಯು ತನಗೆ ಸಮನ್ವಯಿಸಿಕೊಳ್ಳುವನು. ಈ ಸ್ಥಿತಿಗೆ ಚರಾಚರ ಲಯಸ್ಥಳವೆಂಬ ಹೆಸರು.

೯೬ ಪರಶಿವನು ವಿಶ್ವವೆಂಬ ಭಾಂಡದಲ್ಲಡಗಿ ನಿಜಸ್ಥಿತಿಯನ್ನು ತೋರುವಂತೆ ಶಿವಯೋಗಿಯು ಈ ದೇಹವೆಂಬ ಭಾಂಡದಲ್ಲಿ ಅಡಗಿ ತನ್ನ ಸ್ವಸ್ವರೂಪವನ್ನು ಜಗತ್ತಿಗೆ ತೋರ್ಪಡಿಸುವನು. ಈ ಸ್ಥಿತಿಗೆ ಭಾಂಡಸ್ಥಳವೆನ್ನುವರು.

೯೭ ಯಾವಾತನ ಪರಾತ್ಪರ ಶಕ್ತಿಗೆ ಈ ದೇಹವೇ ಆಧಾರ ಅಥವಾ ಭಾಜನವಾಗಿರುವದೋ ಅಂಥ ಶಿವಯೋಗಿಯೇ ಧನ್ಯನು. ಅಂಥ ಸ್ಥಿತಿಗೆ ಭಾಜನಸ್ಥಳವೆನ್ನುವರು.

೯೮ ಆಕಾಶವು ಮೇಘಗಳಿಂದ ನಿರ್ಲಿಪ್ತವಾಗಿರುವಂತೆ ಶಿವಯೋಗಿಯ ಅಂಗವು ಜೀವಗುಣಗಳಿಂದ ನಿರ್ಲಿಪ್ತವಾಗಿರುವದು ಈ ಉದಾತ್ತ ಸ್ಥಿತಿಗೆ ಅಂಗಲೇಪಸ್ಥಳವೆಂಬ ಹೆಸರು.

೯೯ ನಿರ್ಲಿಪ್ತಚಿತ್ತನಾದ ಶಿವಯೋಗಿಗೆ ಇದು ತನ್ನದು ಇದು ಅನ್ಯರದೆಂಬ ಜ್ಞಾನವೇ ಇರುವದಿಲ್ಲ. ಇದಕ್ಕೆ ಸ್ವಪರಾಜ್ಞಸ್ಥಳವೆನ್ನುವರು.

೧೦೦ ಯಾವ ಶಿವಯೋಗಿಯ ಲೌಕಿಕ ಭಾವವು ಅಭಾವವಾಗಿ ಆ ಭಾವಾಭಾವವು ಶಿವನಲ್ಲಿ ಲಯವಾಗಲು ಆ ಸ್ಥಿತಿಗೆ ಭಾವಾಭಾವ ಲಯ ಸ್ಥಳವೆನ್ನುವರು.

೧೦೧ ಶಿವಯೋಗಿಯು ಲಿಂಗದಲ್ಲಿ ಸಂಪೂರ್ಣವಾಗಿ ಬೆರೆದಾಗ ಆತನ ಜ್ಞಾನವು ತುರೀಯಾವಸ್ಥೆಗೇರಿರುವದರಿಂದ ಜ್ಞಾನವೇ ಶೂನ್ಯವಾದಂತೆ ತೋರುವದು. ಈ ಪರಾತ್ಪರ ಸ್ಥಿತಿಗೆ ಜ್ಞಾನಶೂನ್ಯಸ್ಥಳವೆಂಬ ಹೆಸರು.

ಇಲ್ಲಿಗೆ ಲಿಂಗಸ್ಥಳದ ೫೭ ಸ್ಥಲಗಳು ಪೂರ್ತಿಯಾದವು. ಅಂಗಸ್ಥಲದಲ್ಲಿ ಶಿಷ್ಯನು ಆತ್ಮೋನ್ನತಿಯನ್ನು ಮಾಡಿಕೊಂಡು ಗುರುಸ್ಥಾನವನ್ನು ಹೇಗೆ ಪಡೆಯಬೇಕೆಂಬದನ್ನು ವಿವರಿಸಿದಂತೆ ಈ ಲಿಂಗಸ್ಥಲದಲ್ಲಿ ಗುರುವು ಕ್ರಮೇಣ ಶಿಷ್ಯೋದ್ಧಾರ ಲೋಕೋದ್ಧಾರಗಳನ್ನು ಮಾಡಿ ಆ ಮೂಲಕ

ತನ್ನ ಆತ್ಮ ವಿಕಾಸವನ್ನು ಮಾಡಿಕೊಂಡು ಜ್ಞಾನದ ತುರಿಯಾವಸ್ಥೆಗೇರಿ ಲಿಂಗಾನಂದ ಪರವಶನಾಗಿ ಹೇಗೆ ರಮಿಸುವನೆಂಬ ಬಗ್ಗೆ ವಿವರಿಸಿದ್ದಾಯಿತು. ಮೇಲಿನ ಸ್ಥಳ ವಿವರಣೆಯಿಂದ ಒಂದು ಸ್ಥಲವು ಮತ್ತೊಂದಕ್ಕಿಂತ ಹೆಚ್ಚಿಂದಾಗಲಿ ಕಡಿಮೆಯಿಂದಾಗಲಿ ತೋರುವದಿಲ್ಲ. ಎಲ್ಲ ಸ್ಥಲಗಳೂ ಸರಿಸಮಾನವಾಗಿ ಮಹತ್ವವುಳ್ಳವುಗಳಾಗಿವೆ. ಒಂದು ಸ್ಥಲದಲ್ಲಿ ಉಳಿದ ಎಲ್ಲ ಸ್ಥಳಗಳ ಛಾಯೆಯು ಮೂಡಿದ್ದರೂ ಆ ಸ್ಥಳದ ವೈಶಿಷ್ಟ್ಯವೇ ಬೇರೆಯಾಗಿ ವ್ಯಕ್ತವಾಗುತ್ತದೆ ಒಮ್ಮೊಮ್ಮೆ ಒಂದು ಸ್ಥಲದ ಅನೇಕ ವಿಚಾರಗಳು ಬೇರೊಂದು ಸ್ಥಲದಲ್ಲಿ ಸಮಾವೇಶವಾಗಿ ಹೋಗಿರುವದರಿಂದ ಅವುಗಳಲ್ಲಿರುವ ವ್ಯತ್ಯಾಸವೇ ಗೋತ್ತಾಗುವದಿಲ್ಲ ಏನೇ ಇರಲಿ, ಶ್ರೀ ಬಸವಾದಿ ಪ್ರಮಥರು ಹಾಕಿಕೊಟ್ಟ ಸ್ಥಲಕುಳಂಗಳ ಜ್ಞಾನವನ್ನು ಮಾಡಿಕೊಂಡು ಸುಖಿಸೋಣ!

---

## ವಚನಕಾರರಿಂದಾದ ಕ್ರಾಂತಿ.

(ಲೇಖಕ — ವೇ. ಬಸವರಾಜ ಶಾಸ್ತ್ರಿಗಳು ವಿಜಾಪುರ.)

---

ಒಂದು ಸಮಾಜದಲ್ಲಾಗಲಿ ರಾಷ್ಟ್ರದಲ್ಲಾಗಲಿ ರೂಢಿವಶದಿಂದ ಅನೇಕ ದೋಷಗಳು ಸೇರಿಕೊಂಡಿರುತ್ತವೆ. ರೂಢಿಪ್ರಿಯರಾದ ದುರ್ಬಲಾತ್ಮರು ಅಂಧಶ್ರದ್ಧೆಯಿಂದ ಆ ದೋಷಗಳನ್ನ ತಿದ್ದಿಕೊಳ್ಳದೆ ಹಾಗೆಯೇ ನೂಕುತ್ತ ಸಾಗುವರು. ಕೆಲವು ಸುವಿಚಾರಿಗಳು ಆ ದೋಷಗಳನ್ನು ಕಿತ್ತೊಗೆಯಬೇಕೆಂಬ ಅಭಿಲಾಷೆಯುಳ್ಳವರಾಗಿದ್ದರೂ ಆತ್ಮಬಲವಿಲ್ಲದ್ದರಿಂದ ನಡೆದಂತೆ ನಡೆಯಲೆಂದು ಸುಮ್ಮನೆ ಬಿಟ್ಟು ಬಿಡುವರು. ಈ ಪ್ರಕಾರ ಬಹು ಜನರ ಮನಸ್ಸಿನಲ್ಲಿ ರೂಢಿಯ ದೋಷಗಳ ಬಗ್ಗೆ ಹೇಯವು ಉತ್ಪನ್ನವಾಗಿ ವಿಚಾರ ಕ್ರಾಂತಿಗೆ ಪ್ರಾರಂಭವಾಗುವದು. ಬಹು ಜನರ ವಿಚಾರ ಕ್ರಾಂತಿಯು ಬೊಬ್ಬಳಿಗೂಡಿ ಒಬ್ಬ ಆತ್ಮಬಲಶಾಲಿಯಲ್ಲಿ ಶೇಖರವಾಗುವದು. ಅವನಿಗೇನೇ ಅವತಾರೀ ಪುರುಷನೆಂದೆನ್ನುವರು. ಆ ಅವತಾರೀ ಪುರುಷನು ರೂಢಿಯ ದೋಷಗಳನ್ನೂ ಕುಂದು ಕೊರತೆಗಳನ್ನೂ ವ್ಯತ್ಯಾಸಪಡಿಸಿ ಹೊಸ ಮಾರ್ಪಾಟುಗಳನ್ನು ಪ್ರಸ್ಥಾಪಿಸುವನು. ಆಯಾಯ ವಿಚಾರಗಳ

ಜನರು ಮೊದಲು ಆ ಅವತಾರಿ ಪುರುಷನ ಅನುಯಾಯಿಗಳಾಗಿ ಅವನೊಡನೆ ಸಹಕಾರದಿಂದ ಕೆಲಸಮಾಡುವರು. ಮುಂದೆ ಈ ಅನುಯಾಯಿಗಳು ಅವತಾರೀ ಪುರುಷನ ಬೆಂಗಾವಲಿನ ಸಹಾಯದಿಂದ ಜನತೆಯಲ್ಲಿ ಜಾಗ್ರತಿಯನ್ನು ಹುಟ್ಟಿಸಿ ಬಹು ದಿವಸಗಳಿಂದ ಅಂಟಿಕೊಂಡ ರೂಢಾಚಾರದ ದೋಷಗಳನ್ನು ಕಿತ್ತೊಗೆದು ಯುಕ್ತವಾದ ಹೊಸ ಪಂಥಕ್ಕೆ ಅವರನ್ನು ಹಚ್ಚುಬಿಡುವರು.

ಒಂದು ಹೊಸ ಪಂಥವು ಪ್ರಾದುರ್ಭವಿಸಿದ ಬಳಿಕ ಅದನ್ನು ಒಂದು ಕ್ರಮಬದ್ಧವಾದ ಸ್ಥಿತಿಯಲ್ಲಿ ವ್ಯವಸ್ಥಿತಗೊಳಿಸಲು ಶಿಷ್ಟಜನರದೊಂದು ಸಂಘಟನೆಯು ಬೇಕಾಗುತ್ತದೆ. ಈ ಸಂಘಟನೆಯು ಮುಂದಾಳುಗಳು ಒಂದು ವಿಶಿಷ್ಟತರದ ನೇಮ, ವಿಧಾನ, ಸಂಸ್ಕಾರಗಳನ್ನು ಮಾಡಿಕೊಂಡು ತಮ್ಮ ಪಂಥದ ಮೂರ್ತಸ್ವರೂಪವನ್ನು ಸಮಾಜದಲ್ಲಿ ತೋರ್ಪಡಿಸುವರು. ಈ ವಿಧಾನಗಳಾದರೋ ಸಂಪೂರ್ಣ ನವೀನವಾಗಿರದೆ ಹಿಂದಿನ ಸೂತ್ರವನ್ನು ಹಿಡಿದುಕೊಂಡೇ ಬೇರೊಂದು ರೂಪವನ್ನು ಹೊಂದಿದಂಥವುಗಳಾಗಿರುತ್ತವೆ. ಈ ಸಂಘಟನೆಯ ಮೂಲಕ ಅನೇಕ ವ್ಯಕ್ತಿಗಳು ಒಳ್ಳೆ ಸುರಿಪಡೆಯನ್ನು ಹೊಂದಿ ಆತ್ಮಾನಾತ್ಮ ವಿಚಾರಮಾಡಲು ಸಮರ್ಥರಾಗುತ್ತಾರೆ. ಇಂಥ ಅನೇಕ ವ್ಯಕ್ತಿಗಳು ತಮ್ಮ ವ್ಯಕ್ತಿತ್ವದ ಮೂಲಸೊತ್ತನ್ನು ಸಮಾಜದ ಮತ್ತು ಜಗತ್ತಿನ ಕಲ್ಯಾಣಕ್ಕಾಗಿ ಸಲ್ಲಿಸಿ ಆ ಮೂಲಕ ಜಗತ್ತಿನ ಸುಖಶಾಂತಿಯನ್ನು ಹೆಚ್ಚಿಸುವರು. ಈ ಮೇರೆಗೆ ಮಹಾತ್ಮರ ಅವತಾರವು ಜನಜಾಗ್ರತಿ, ಶಿಷ್ಟಸಂಘಟನೆ, ವ್ಯಕ್ತಿವಿಕಾಸ, ಲೋಕಕಲ್ಯಾಣಗಳಿಗಾಗಿಯೇ ಇರುತ್ತದೆಂಬದು ಬಸವಾದಿ ಪ್ರಮಥರ ಅವತಾರದಿಂದ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಬಸವಾದಿ ಪ್ರಮಥರು ೧೨ನೆಯ ಶತಮಾನದಲ್ಲಿ ಅವತರಿಸಿದರು ಈಗಿನಂತೆ ಆಗ ಸಹ ರೂಢಾಚಾರದ ಅನೇಕ ದೋಷಗಳು ಜನತೆಯಲ್ಲಿ ಪ್ರಸಾರವಾಗಿದ್ದವು. ಉದಾಹರಣಾರ್ಥ ಬ್ರಾಹ್ಮಣಾದಿ ವರ್ಣಗಳು ಗುಣಕರ್ಮಗಳಿಂದ ನಿರ್ಮಿತವಾಗಿರುವವೆಂಬದನ್ನು ಮರೆತು ಜನ್ಮದಿಂದಲೇ ಉಂಟಾಗಿರುವವೆಂದು ಸಾಧಿಸಿ ಜನರು ಜಾತಿಜಾತಿಗಳಲ್ಲಿ ಮತ್ಸರವನ್ನೆಬ್ಬಿಸಿದರು. ಕಪ್ಪುಕುಲದವರು ಎಗ್ಗಿಲ್ಲದೆ ಮದ್ಯ ಮಾಂಸಗಳನ್ನು ಸೇವಿಸುತ್ತಿದ್ದರು. ಸುಜ್ಞರು ಯಜ್ಞಯಾಗಾದಿಗಳಲ್ಲಿ ಪಶುಹಿಂಸೆ ಮಾಡುತ್ತಿದ್ದರು. ಅಜ್ಞರು ದೇವತೆಗಳಿಗೆ ಮೂಕ ಪಶುಗಳನ್ನು ಹೆಚ್ಚಾಗಿ ಬಲಿಕೊಡುತ್ತಿದ್ದರು. ಸಾಮಾನ್ಯ ಜನರು ಮೂಢಭಾವನೆಯಿಂದ ಕಂಡ

ಕಂಡ ಕಲ್ಲುಮರಗಳಿಗೆ ದೇವರೆಂದು ತಿಳಿದು ಕೈಮುಗಿಯುತ್ತಿದ್ದರು. ಹೊಟ್ಟೆಗಾಗಿ ದುಡಿಯುವ ಕಸುಬು ಕಾಯಕಗಳಲ್ಲಿ ಭೇದಭಾವವನ್ನೆಣಿಸುತ್ತಿದ್ದರು. ಸ್ತ್ರೀಪುರುಷರಿಗೆ ಆತ್ಮವಿಕಾಸ ಮಾಡಿಕೊಳ್ಳಲಿಕ್ಕೆ ಸಮಾನಾಧಿಕಾರವಿರದೆ ಪುರುಷರೇ ಹೆಚ್ಚು ಹಕ್ಕುಗಳನ್ನು ನುಂಗಿ ನೀರಿಳಿದಿದ್ದರು. ಕಾಯಕದಿಂದ ಕುಲಗಳುಂಟಾಗಿ ಪರಸ್ಪರದಲ್ಲಿ ಅನ್ನಪಾನ ವಿವಾಹಾದಿ ಕಾರ್ಯಗಳು ಜರಗುತ್ತಿರಲಿಲ್ಲ. ಕಾಮಕ್ರೋಧಾದಿಗಳ ಹಾವಳಿಯಿಂದ ಪಂಡಿತ ಪಾಮರರು ಬಹು ಪಾಪದ ಕೆಲಸಗಳನ್ನು ಆಚರಿಸುತ್ತಿದ್ದರು. ಇದರಂತೆಯೇ ಜನತೆಯಲ್ಲಿ ಅನೇಕ ಪ್ರಕಾರದ ಅನಾಹುತಗಳು ಮನೆಮಾಡಿಕೊಂಡಿದ್ದವು. ಇವೆಲ್ಲವುಗಳನ್ನು ಮುರಿಬಡಿದು ಬಸವಾದಿ ಪ್ರಮಥರು ಜನರಿಗೆ ಹೊಸ ಮಾರ್ಗವನ್ನು ಹಚ್ಚಿಕೊಟ್ಟರು. ಆದರಿಂದ ಬಹುಜನರಿಗೆ ಕಲ್ಯಾಣವಾದುದೇನೋ ನಿಜ.

ಆದರೆ ಕಾಲಗತಿಯಿಂದ ಮಾಯಾ ರೂಪದ ರೂಢಾಚಾರಗಳು ಅವರ ನಂತರ ಜನತೆಯಲ್ಲಿ ಮತ್ತೆ ಆವರಿಸಿ ಬಿಟ್ಟಿರುವದು ವಿಷಾದದ ಸಂಗತಿಯು. ಮಹಾತ್ಮರು ಕ್ರಾಂತಿ ಮಾಡಿದಾಗಷ್ಟೇ ಅವು ಪಲಾಯನ ಮಾಡಿ ಕೆಲ ಕಾಲದ ನಂತರ ಪುನಃ ಅವು ಜನತೆಯಲ್ಲಿ ಸೇರಿಕೊಳ್ಳುವಂತೆ ಕಾಣುತ್ತದೆ. ಹಿಂದಿನ ಯಾವ ಅವತಾರಿ ಪುರುಷರೂ ಜನತೆಯ ದೋಷಗಳನ್ನು ಸಂಪೂರ್ಣವಾಗಿ ಸದೆ ಬಡಿಯಲು ಸಮರ್ಥರಾಗಿಲ್ಲ. ಅದರಂತೆ ಬಸವಾದಿ ಪ್ರಮಥರು ಅವುಗಳನ್ನು ನಿರ್ಮೂಲಗೊಳಿಸಲು ವಿಶ್ವ ಪ್ರಯತ್ನಬಟ್ಟರೂ ಅವು ಬಹು ಮಟ್ಟಿಗೆ ಹಾಗೆಯೇ ಉಳಿದಿವೆ. ಇದರಿಂದ ಅವರ ಪ್ರಯತ್ನವು ನಿಷ್ಫಲವಾಯಿತೆಂದು ಯಾರೂ ತಿಳಿಯಬಾರದು. ಅವರ ಮಾರ್ಗವನ್ನವಲಂಬಿಸಿ ಎಷ್ಟೋ ಜೀವಜ್ಯೋತಿಗಳು ಕರ್ನಾಟಕದಲ್ಲೆಲ್ಲ ಆತ್ಮ ಪ್ರಭೆಯಿಂದ ಬೆಳಗಿಹೋದರು; ಈಗ್ಯೂ ಬೆಳಗುತ್ತಲಿದ್ದಾರೆ. ಮುಂದಿನ ಕ್ರಾಂತಿಯಲ್ಲಿ ಹುಟ್ಟುವ ಅವತಾರಿ ಪುರುಷರಿಗೆ ಅವರು ಮಾರ್ಗದರ್ಶಿಗಳಾಗಿದ್ದಾರೆ. ಅವರು ಗತಿಸಿದರೂ ಅವರ ಸಜೀವ ಮಯವಾದ ವಚನ ವಾಙ್ಮಯವು ಪಾಪಾತ್ಮರನ್ನು ಪುನೀತ ಮಾಡಲು ಯಾವಾಗಲೂ ಸಿದ್ಧವಾಗಿ ನಿಂತಿದೆ.

ಕಾಲಚಕ್ರದಲ್ಲಿ ಒಮ್ಮೊಮ್ಮೆ ಕೆಡಕು ಅಧಿಕವಾಗುತ್ತದೆ. ಒಮ್ಮೊಮ್ಮೆ ಒಳಿತು ಮೇಲಾಗುತ್ತದೆ. ಒಳಿತನ್ನೇ ನಡೆ ನುಡಿ ಭಾವಗಳಲ್ಲಿ ಪ್ರಚುರಗೊಳಿಸಬೇಕೆಂದು ಎಲ್ಲರ ಪ್ರಯತ್ನಗಳಿದ್ದರೂ ಅವರ ಪ್ರವೃತ್ತಿಯು ಕೆಡ

ಕಿನ ಕಡೆಗೇ ಹೆಚ್ಚು ಒಲಿದಿರುತ್ತದೆ. ಒಳಿತಿಗಾಗಿ ನಿರ್ಮಿತವಾದ ಧಾರ್ಮಿಕ ಕಟ್ಟಳೆಗಳು ಮೊದಮೊದಲು ಎಷ್ಟೇ ಬಂಧುರವಾಗಿದ್ದರೂ ಕ್ರಮೇಣ ಶಿಥಿಲವಾಗುತ್ತಹೋಗುತ್ತವೆ. ಒಟ್ಟಿನ ಮೇಲೆ ಕೆಡಕು ಒಳಿತುಗಳ ಹೋರಾಟದಲ್ಲಿ ಯಾವಾಗಲೂ ಕೆಡಕೇ ಜಯಶಾಲಿಯಾಗಿ ಸಮಾಜದಲ್ಲಿ ತಲೆಯೆತ್ತಿ ಮೆರೆಯುತ್ತಿರುವದು. ವ್ಯಕ್ತಿಗಳ ಪ್ರವೃತ್ತಿಯಂತೆಯೇ ಸಮಾಜದ ಪ್ರವೃತ್ತಿಯಿರುತ್ತದೆ. ವ್ಯಕ್ತಿಗಳ ಪ್ರವೃತ್ತಿಯು ಒಳಿತಿಗಿಂತಲೂ ಕೆಡಕಿನ ಕಡೆಗೇ ಹೆಚ್ಚು ಒಲಿದಿರುತ್ತದೆ. ಸ್ವಾರ್ಥ, ಮಹತ್ವಾಕಾಂಕ್ಷ, ಸಾಹಸಾದಿ ಗುಣಗಳಿಂದ ಲೋಕದಲ್ಲಿ ಅಲ್ಪ ಜನರ ಸುಖಕ್ಕಾಗಿ ಬಹು ಜನರನ್ನು ನಾಶಗೊಳಿಸುವ ಪ್ರವೃತ್ತಿಯೇ ಹೆಚ್ಚಾಗಿರುವದು. ಸೃಷ್ಟಿಯ ನೇಮವು ಹೀಗಿದ್ದರೂ ಬಸವಾದಿಪ್ರಮಥರು ತಮ್ಮ ಜೀವಮಾನದ ಅಲ್ಪಾವಧಿಯಲ್ಲಿಯೇ ಒಳಿತನ್ನೇ ಮುಂದು ಮಾಡಿ ಜಗತ್ತಿಗೆ ಹೇಗೆ ಆದರ್ಶಪ್ರಾಯರಾಗಿ ನಡೆಯಬೇಕೆಂಬದನ್ನು ತೋರಿಸಿ ಕೊಟ್ಟರು. ಅವರ ತರುವಾಯ ನೂರಾರು ವರ್ಷಗಳ ವರೆಗೂ ವೀರಶೈವ ಸಮಾಜದವರ ದೃಷ್ಟಿಕೋನವು ಕೆಡಕಿಗಿಂತಲೂ ಒಳಿತನ ಕಡೆಗೇ ವಿಶೇಷವಾಗಿ ಒಲಿದಿತ್ತು. ಆದರೆ ಸದ್ಯಕ್ಕೆ ಸಾಮಾಜಿಕ ಮತ್ತು ರಾಜಕೀಯ ಕಾರಣಗಳ ಮೂಲಕ ಸ್ಥಿತಿಗತಿಗಳ ಬದಲಾಯಿಸಿದ್ದರಿಂದ ನಮ್ಮ ಸಮಾಜದಲ್ಲಿ ಸ್ವಾರ್ಥಗುಣ, ಅಧಿಕಾರ ಮದ, ಕುಲಪ್ರಶಂಸಾದಿ ಕ್ಷುದ್ರ ಗುಣಗಳು ಮನೆಮಾಡಿಕೊಂಡಿವೆ. ಬಸವಾದಿ ಪ್ರಮಥರ ತತ್ವಗಳಿಗೂ ವಚನಗಳಿಗೂ ಜನರು ಮನ್ನಣೆ ಮಾಡುತ್ತಿದ್ದರೂ ಅವುಗಳಾಚರಣೆಯು ಪ್ರಚಾರದಲ್ಲಿಲ್ಲ.

ಹಳೆ ಸ್ಥಿತಿಯು ಬದಲಾಗಿ ಹೊಸ ಸ್ವರೂಪವನ್ನು ಹೊಂದುವ ಕಾಲಕ್ಕೆ ಕ್ರಾಂತಿಯುಗವೆನ್ನುವರು. ೧೨ ನೆಯ ಶತಮಾನದಲ್ಲಿ ಬಸವಾದಿ ಪ್ರಮಥರು ಕ್ರಾಂತಿಕಾರರಾಗಿ ಜನಿಸಿದರು. ಅವರ ಕ್ರಾಂತಿಮಯ ಜೀವಿತದಲ್ಲಿ (೧) ಜನಜಾಗ್ರತಿ. (೨) ಶಿಷ್ಟ ಜನರ ಸಂಘಟನೆ. (೩) ವ್ಯಕ್ತಿವಿಕಾಸ (೪) ಸಮಾಜ ರಚನೆಗಳೆಂದು ನಾಲ್ಕು ಮುಖ್ಯ ವಿಭಾಗಗಳನ್ನು ಮಾಡಬಹುದು. ಅವುಗಳ ವಿವರವನ್ನು ಇಲ್ಲಿ ಸಂಕ್ಷೇಪವಾಗಿ ಉಲ್ಲೇಖಿಸಿದೆ.

## ಜನಜಾಗ್ರತಿ.

ಶ್ರೀ ಬಸವಾದಿ ಪ್ರಮಥರಲ್ಲಿ ಸಾಮಾನ್ಯ ಜನರ ಮನಸ್ಸನ್ನೆಳೆದುಕೊಳ್ಳುವ ಆಕರ್ಷಕ ಶಕ್ತಿಯಿದ್ದಿತು. ಅವರು ಸಮಯೋಚಿತವಾದ ಸ್ಫೂರ್ತಿದಾಯಕ ವಚನಗಳ ಪ್ರಭಾವದಿಂದ ಪಂಡಿತಪಾಮರರನ್ನು ದಂಗುಗೊಳಿ

ಸಿದರು. ಅನೇಕ ಪ್ರಚಾರಕರು ಬಸವಾದಿಪ್ರಮಥರ ನೈತಿಕ ತತ್ವಗಳನ್ನು ಸಾಮಾನ್ಯ ಜನರಿಗೆ ಬೋಧಿಸಹತ್ತಿದರು. ಇವರ ಮಾತಿನ ಸ್ಫೂರ್ತಿಗೆ ಮನವೆಳಿಸಿ ಅನೇಕ ಬ್ರಾಹ್ಮಣ, ಜೈನ ಮೊದಲಾದ ಉಚ್ಚ ಕುಲದವರೂ ನಾನಾ ಕಸಬು ಕಾಯಕಗಳನ್ನು ಮಾಡುವ ಕೀಳು ಕುಲದವರೂ ತಮ್ಮ ಸ್ಥಿತಿಗಳನ್ನು ಸುಧಾರಿಸಿಕೊಳ್ಳಲಾರಂಭಿಸಿದರು ಈ ಮೇರೆಗೆ ವಚನಕಾರರ ತಂಡವು ಕರ್ನಾಟಕದಲ್ಲಿ ಎಲ್ಲಿ ನೋಡಿದಲ್ಲಿ ತುಂಬಿ ತುಳುಕಹತ್ತಿತು. ಬಹು ದೂರಿನಿಂದ ಉತ್ತರ ಕಡೆಯ ಜನರೂ ಬಸವಣ್ಣನವರ ಕೀರ್ತಿಯನ್ನು ಕೇಳಿ ಅವರ ಸನ್ನಿಧಿಗೆ ಬಿಜಯಂಗೈದರು.

ವಚನಕಾರರು ಜನತೆಯಲ್ಲಿ ನೆಲೆಗೊಂಡ ನಿಷಿದ್ಧವಾದ ಹಾಗೂ ದೂಷಿತವಾದ ರೂಢಾಚಾರಗಳನ್ನು ಪ್ರಸಂಗನುಸಾರವಾಗಿ ಮೃದು ಕಠೋರವಾದ ವಾಣಿಯಿಂದ ಹೊಡೆದು ಹಾಕಿದರು. ಆಗಿನ ಕಾಲದಲ್ಲಿ ಮದ್ಯ ಮಾಂಸ ಸೇವನೆಯನ್ನು ಬಿಟ್ಟು ಇವರ ಪಂಥಕ್ಕೆ ಸೇರಿದ ಅನೇಕ ಜನರ ಸಂತತಿಯವರು ಇವತ್ತಿಗೂ ಪರಿಶುದ್ಧರಾಗಿ ಹಾಗೆಯೇ ಉಳಿದಿರುತ್ತಾರೆ. ಈಗ ಗ್ರಾಮಗಳ ಸುಧಾರಣೆಯನ್ನು ಮಾಡಬೇಕೆಂದು ಬಹು ಜನರು ಹೆಣಗಾಡುತ್ತಿದ್ದರೂ ನಿಶ್ಚಿತ ಉಪಾಯವು ತೋಚದೆ ಬಹು ತೊಂದರೆಗಳಿಂದ ಪೇಚಾಡಹತ್ತಿದ್ದಾರೆ. ಆದರೆ ಬಸವಾದಿ ಪ್ರಮಥರು ಕೇವಲ ತಮ್ಮ ಸ್ಫೂರ್ತಿದಾಯಕವಾದ ವಚನಗಳಿಂದ ಕರ್ನಾಟಕದಲ್ಲೆಲ್ಲ ಅಲ್ಪಾವಧಿಯಲ್ಲಿಯೇ ಗ್ರಾಮ ಸುಧಾರಣೆಯನ್ನು ನೆಲೆಗೊಳಿಸಿದರು. ಸಾಮಾನ್ಯರಲ್ಲಿ ಸ್ವಚ್ಛತೆ, ಪರಿಶುದ್ಧತೆ, ಸಾದಾಚಾರಗಳನ್ನು ಸ್ಥಿರಪಡಿಸಿದರು.

ಇವತ್ತಿಗೆ ೩೫ ಲಕ್ಷ ವೀರಶೈವರು ಕೇವಲ ಶುದ್ಧ ಶಾಕಾಹಾರದಿಂದಲೇ ಉಪಜೀವಿಸುತ್ತಿರುವ ತೇಜಸ್ಸು ಬಸವಾದಿ ಪ್ರಮಥರಿಗೇನೇ ಸಲ್ಲುತ್ತದೆ. ಕರ್ನಾಟಕದಲ್ಲಿ ಯಜ್ಞಯಾಗಾದಿಗಳು ಲೋಪವಾದದ್ದು ಅವರ ಪ್ರಯತ್ನದಿಂದಲೇ ಅನೇಕ ಕೀಳು ಕಸಬುಗಳಿಗೆ ಈಗ ಮಹತ್ವ ಬಂದುದು ಆ ಪುಣ್ಯಶಾಲಿಗಳಿಂದಲೇ. ಅಂತ್ಯಜರನೇಕರು ವಚನಕಾರರಾಗಿ ಪೂಜ್ಯತೆಯನ್ನು ಹೊಂದಿ ಹೋದುದು ಅವರ ಸ್ಫೂರ್ತಿಯಿಂದಲೇ ಬಸವೇಶನು ಜನತೆಯಲ್ಲಿ ಎಲ್ಲರಿಗೂ ಬೆಲ್ಲದ ಹೇರಾಗಿದ್ದುದರಿಂದಲೇ ಜನರು ಪ್ರೀತಿಯಿಂದ 'ಬಸವಣ್ಣ' ನೆಂದು ಕರೆಯುತ್ತಿದ್ದರು. ಜನರ ಭಾವನೆಯನ್ನು ಕಂಡುಹಿಡಿದು ಅದನ್ನು ಪ್ರದೀಪ್ತಿಗೊಳಿಸಿ ಸನ್ಮಾರ್ಗಕ್ಕೆ ಹಚ್ಚುವ ಕಲೆಯು ಎಲ್ಲರಿಗೂ ಸಲ್ಲಿದ್ದಲ್ಲ. ಯಾವನಾದರೊಬ್ಬ ಪ್ರಸಿದ್ಧ ವ್ಯಾಖ್ಯಾತನು ಒಳ್ಳೆ ಸ್ಫೂರ್ತಿ

ಯಿಂದ ಮಾತನಾಡಿ ಜನರ ಮನಸ್ಸನ್ನು ಕ್ಷಣಮಾತ್ರದಲ್ಲಿ ತಿರುಗಿಸಬಹುದು. ಆದರೆ ಆ ಮಾತುಗಳ ವರ್ಚಸ್ಸು ಚಿರಕಾಲ ಉಳಿಯದೆ ಮಧ್ಯಂತರದಲ್ಲಿಯೇ ನಾಮಶೇಷವಾಗುತ್ತದೆ. ಆದರೆ ಬಸವಾದಿ ಪ್ರಮಥರ ವಚನಗಳ ಪ್ರೇರಣೆಯು ಅಜರಾಮರವಾಗಿ ಉಳಿಯುವಂಥಹದು. ಬಸವಣ್ಣನವರಂಥ ಆತ್ಮಬಲಶಾಲಿಗಳಲ್ಲಿಯೇ ಅಂಥ ಸಾಮರ್ಥ್ಯವಿರುತ್ತದೆ.

## ಶಿಷ್ಟಜನ ಸಂಘಟನೆ.

ಜನಜಾಗ್ರತೆಯನ್ನು ಮಾಡಿದ ಬಳಿಕ ಅದರ ಬೆನ್ನ ಹಿಂದೆಯೇ ಜನಸಂಘಟನೆಯ ಕಾರ್ಯವನ್ನೂ ವಚನಕಾರರು ಹೂಡಿದರು. ವಚನಗಳಿಂದ ಪ್ರೇರಿತರಾದ ಅನೇಕ ಸಣ್ಣ ದೊಡ್ಡ ವ್ಯಕ್ತಿಗಳು ಬಸವಣ್ಣನವರ ಬಳಿಗೆ ಬಂದು ಬಹು ವಿನೀತರಾಗಿ ತಮಗೆ ಮುಂದಿನ ಹಾದಿಯನ್ನು ಹಚ್ಚಿಕೊಡಬೇಕೆಂದು ಮನವೃಕ್ಕಿ ಬೇಡಿಕೊಂಡರು. ಶ್ರೀ ಬಸವಣ್ಣನವರ ಆಜ್ಞಾನುಸಾರವಾಗಿ ಕಲ್ಯಾಣ ಪಟ್ಟಣದಲ್ಲಿ ಶ್ರೀ ಚೆನ್ನಬಸವೇಶ್ವರರು ಭಕ್ತಿವಹಿಸಿ ಬಂದಂಥ ಜನಂಗಳಿಗೆ ಶಿವದೀಕ್ಷೆ ಲಿಂಗಧಾರಣವನ್ನು ಮಾಡಿ ಅವರಲ್ಲಿ ಸ್ವಚ್ಛತೆ, ಆರೋಗ್ಯ, ಪವಿತ್ರತೆಗಳನ್ನುಂಟು ಮಾಡಿದರು.

ಜನರ ಮನಸ್ಸಿಗೆ ಒಂದು ಪ್ರಕಾರದ ಸಮಾಧಾನವನ್ನುಂಟುಮಾಡಲಿಕ್ಕೆ ಒಂದು ತರದ ವಿಧಾನವನ್ನು ಮಾಡುವದು ಎಲ್ಲ ಕಾಲದಲ್ಲಿ ಎಲ್ಲ ದೇಶಗಳಲ್ಲಿಯೂ ಉಂಟು. ಉದಾಹರಣಾರ್ಥ ಲಗ್ನ, ರಾಜ್ಯಾಭಿಷೇಕ, ಜನನಮರಣ ಮುಂತಾದ ಕಾಲಗಳಲ್ಲಿ ಕೆಲವು ವಿಶಿಷ್ಟತರಹದ ವಿಧಾನಗಳನ್ನು ಮಾಡುವ ರೂಢಿಯು ಬಹುಶಃ ಎಲ್ಲ ಕಡೆಗೂ ಉಂಟು. ಆ ವಿಧಾನಗಳನ್ನು ಮಾಡಿದರೇನೇ ಜನರಿಗೆ ಆನಂದ; ಇಲ್ಲದಿದ್ದರೆ ಅವರ ಮನಸ್ಸಿಗೆ ಸೊಗಸೆನಿಸುವದಿಲ್ಲ. ವಿಧಾನಗಳಲ್ಲಿ ಪರಿಶುದ್ಧ ಭಾವನೆಯು ಅಡಗಿರುತ್ತದೆ ಕಾಲಕಾಲಕ್ಕೆ ವಿಧಾನಗಳು ವ್ಯತ್ಯಾಸಹೊಂದಬಹುದು. ಆದರೆ ವಿಧಾನಗಳಿಲ್ಲದೆ ಯಾವ ಮಹತ್ಕಾರ್ಯಗಳೂ ನಡೆಯುವದಿಲ್ಲ. ಚನ್ನಬಸವಣ್ಣನವರು ಶಿವದೀಕ್ಷೆ ಲಿಂಗಧಾರಣೆ ಮುಂತಾದ ವಿಧಾನಗಳಿಂದ ಜನರಲ್ಲಿ ಪ್ರೇರಣೆಯನ್ನು ತುಂಬಿ ಅವರಲ್ಲಿ ಭಕ್ತಿಯನ್ನು ಬೆಳೆಯಿಸಿದರು. ಶಿವದೀಕ್ಷಾಸಂಪನ್ನರಾದ ಲಿಂಗಧಾರಿಗಳು ಪುಲಕದಿಂದ ಮೈಯುಬ್ಬಿ ಆನಂದಾಶ್ರುಗಳನ್ನು ಸುರಿಸುತ್ತ ತಮ್ಮ ಹೃದ್ಗತ ಭಕ್ತಿಯನ್ನು ವ್ಯಕ್ತಗೊಳಿಸಿದರು. ಇವರೇ ಮುಂದೆ ಅನೇಕರಿಗೆ ಲಿಂಗಧಾರಣಮಾಡಿ ಜನರಲ್ಲಿ ಲಿಂಗಭಕ್ತಿಯನ್ನು ಹೆಚ್ಚಿಸಿದರು. ಕೇವಲ ಶುದ್ಧಾಚಾರ ಸಂಪ

ನ್ನರಿಗೇನೇ ಶಿವದೀಕ್ಷೆ ಲಿಂಗಧಾರಣೆಗಳಾಗುತ್ತಿದ್ದವು. ಕಂಡಕಂಡವರಿಗೆ ಪ್ರಮಥರು ಲಿಂಗಧಾರಣಮಾಡಲಿಲ್ಲ. ಈ ಪ್ರಕಾರ ಶುದ್ಧಾಚಾರಸಂಪನ್ನರಾದ ಲಿಂಗಭಕ್ತಿಪರಾಯಣರದೊಂದು ಶಿಷ್ಟಮಂಡಳವು ನೇರ್ಪಟ್ಟಿತು. ಲಿಂಗಭಕ್ತಿಯಿಂದ ಪ್ರೇಮರಿತ ಬಹುಜನ ಶರಣರು ಲಿಂಗನಿಷ್ಠೆಯ ಬಗ್ಗೆ ಅನೇಕ ಸ್ಫೂರ್ತಿದಾಯಕವಾದ ವಚನಗಳ ಸುರಿಮಳೆಯನ್ನು ಸುರಿಸಿದರು.

## ವ್ಯಕ್ತಿವಿಕಾಸ.

ಶಿವದೀಕ್ಷಾಸಂಪನ್ನರಾದ ಅನೇಕ ಮಹಾಜನಂಗಳು ಇಷ್ಟಲಿಂಗದಲ್ಲಿ ನಿಷ್ಠೆಯನ್ನು ಬೆಳೆಯಿಸುತ್ತ ಹೋದಂತೆ ಅವರಲ್ಲಿ ಆಧ್ಯಾತ್ಮಿಕ ವಿಷಯಗಳ ಬಗ್ಗೆ ಜಿಜ್ಞಾಸೆಯುಂಟಾಯಿತು. ಅವರು ಆ ವಿಷಯಗಳ ಬಗ್ಗೆ ಮನದಲ್ಲಿ ಚಿಂತಿಸುತ್ತ ಹೋದಂತೆ ಅವರಲ್ಲಿ ವಿಚಾರಕ್ರಾಂತಿಯು ಬೆಳೆಯುತ್ತ ನಡೆಯಿತು. "ವಾದೇವಾದೇ ಜಾಯತೇ ತತ್ವಬೋಧಃ" ಎಂಬ ನೀತಿತತ್ವಕ್ಕನುಸರಿಸಿ ಆ ಮಹಾಮಹಿಮರು ಬಸವನಿದ್ದೆಡೆಗೆ ಬಂದು ಬಹು ಸೂಕ್ಷ್ಮವಾದ ಆಧ್ಯಾತ್ಮಿಕ ತತ್ವಗಳ ಬಗ್ಗೆ ಚರ್ಚೆಮಾಡಹತ್ತಿದರು. ಈ ಚರ್ಚಾತ್ಮಕ ವಿಷಯಗಳು ವ್ಯವಸ್ಥಿತ ರೀತಿಯಲ್ಲಿ ಸಾಗಬೇಕೆಂದು "ಶಿವಾನುಭವಮಂಟಪ" ವನ್ನೇರ್ಪಡಿಸಿದರು. ಶ್ರೀ ಚನ್ನಬಸವೇಶನು ಒಳ್ಳೆ ಜ್ಞಾನಿಯಾಗಿದ್ದುದರಿಂದ ಈತನನ್ನೇ ಶಿವಾನುಭವ ಮಂಟಪದ ಅಧಿಪತಿಯನ್ನಾಗಿ ಮಾಡಿದರು. ಪ್ರಭುದೇವರು, ಬಸವಣ್ಣ, ಅಕ್ಕಮಹಾದೇವಿ, ಹಡಪದಪ್ಪಣ್ಣ, ಮಡಿವಾಳಮಾಚಯ್ಯ, ಸಿದ್ಧರಾಮೇಶ, ಮೊದಲಾದ ಶರಣವೃಂದವು ಶಿವಾನುಭವದಲ್ಲಿ ಮುಖ್ಯವಾಗಿ ಭಾಗ ವಹಿಸಿ ಬಹು ಸೂಕ್ಷ್ಮ ತತ್ವಗಳನ್ನು ವಿಚಾರಿಸತೊಡಗಿದರು. ಈ ಮೇರೆಗೆ ವೇದಾಗಮೋಪನಿಷತ್ತುಗಳನ್ನು ಮೀರುವಂಥ ಮಹಾ ದಿವ್ಯ ವಚನಗಳು ಅವರಂತರಾತ್ಮದಿಂದ ಹೊರಬೀಳಲಾರಂಭಿಸಿದವು. ವಿಚಾರವಿನಿಮಯದಲ್ಲಿ ಶ್ರೀ ಚನ್ನಬಸವಣ್ಣನವರ ನಿರ್ಣಯವೇ ಪ್ರಮಾಣವೆಂದು ಗ್ರಹಿಸಲ್ಪಡುತ್ತಿದ್ದಿತು. ಶ್ರೀ ಚನ್ನಬಸವೇಶ್ವರರು ಮಹಾ ಬುದ್ಧಿಶಾಲಿಗಳೂ ಜ್ಞಾನಸಂಪನ್ನರೂ ಇದ್ದುದರಿಂದ ಅವರು ಎಲ್ಲರ ಮತಗಳನ್ನು ಖಂಡಿಸಿ ತಮ್ಮ ಮತವನ್ನು ಪ್ರಸ್ಥಾಪಿಸುತ್ತಿದ್ದರು.

ಆಧ್ಯಾತ್ಮಿಕ ವಿಷಯಗಳು ಈ ಪ್ರಕಾರ ಸಂಘಟನಾರೂಪದಿಂದ ಪ್ರತಿನಿತ್ಯದಲ್ಲಿಯೂ ಚರ್ಚಿಸಲ್ಪಡುತ್ತಿದ್ದುದು ಯಾವ ಕಾಲದಲ್ಲಿಯೂ ಇದ್ದಂತೆ ತೋರುವದಿಲ್ಲ. ಹಿಂದಕ್ಕೆ ಋಷಿಗಳೂ ಸ್ಮೃತಿಕಾರರೂ ತಮ್ಮ

ಸ್ವಂತ ವಿಚಾರದಿಂದಲೇ ಸ್ಫೂರ್ತಿಗೊಂಡು ಆಗಮೋಪನಿಷತ್ತುಗಳನ್ನು ರಚಿಸಿದರು. ಏನಾದರೂ ಚರ್ಚೆಸಂಘರ್ಷಣೆಗಳಾಗುತ್ತಿದ್ದರೆ ವಿಶೇಷತಃ ಗುರುಶಿಷ್ಯರ ನಡುವೆ ಜರಗುತ್ತಿದ್ದವು. ಆದರೆ ಆವರಲ್ಲಿ ಸಂಘಶಕ್ತಿಯ ಸಂಘರ್ಷಣೆಗಳಾಗುತ್ತಿರಲಿಲ್ಲ. ಶಿವಶರಣರ ವಚನ ಸಂಘರ್ಷಣೆಯಿಂದ ಶಿವಾನುಭವ ಮಂಟಪವಲ್ಲಿ ಷಟ್‌ಸ್ಥಲಜ್ಞಾನವೆಂಬ ಶಿಶುವು ಪ್ರಾದುರ್ಭವಿಸಿತು. ಚನ್ನಬಸವೇಶನಿಗೆ ಷಟ್‌ಸ್ಥಲಜ್ಞಾನಿಯೆಂಬ ಅಭಿಧಾನವುಂಟಾಯಿತು.

ಆಧ್ಯಾತ್ಮಿಕ ವಿಷಯದಲ್ಲಿ ಶಿವಶರಣರು ತಮ್ಮ ಮೂಲ ಬುದ್ಧಿಯಿಂದಲೂ ಚರ್ಚೆ ಸಂಭಾಷಣಾದಿಗಳಿಂದಲೂ ಆತ್ಮವಿಕಾಸವನ್ನು ಮಾಡಿಕೊಂಡರು. ಮೊದ ಮೊದಲು ಆತ್ತಿತ್ತ ಕೈಕಾಲು ಬಡಿದು ದಣಕೊಂಡು ಬರಬರುತ್ತ ನಿರಾಯಾಸವಾಗಿ ಈಸಲಿಕ್ಕೆ ಕಲಿತ ಮನುಷ್ಯನಂತೆ ಶಿವಶರಣರು ತಮ್ಮ ಮೇಧಾಶಕ್ತಿಯನ್ನೆಲ್ಲ ವೆಚ್ಚಮಾಡಿ ಪ್ರಾರಂಭದ ಅನೇಕ ಸುಂದರವಾದ ತಪ್ಪುತಡೆಗಳನ್ನು ತಿದ್ದಿಕೊಂಡು ಕೊನೆಗೆ ನಿಶ್ಚಿತವಾದ ಷಟ್‌ಸ್ಥಲ ಮಾರ್ಗಕ್ಕೆ ಬಂದು ಹತ್ತಿದರು. ಕದಡಿದ ಒರತೆಯ ನೀರನ್ನು ಹೊಡೆಹೊಡೆದು ಕೊನೆಗೆ ತಿಳಿಮಾಡುವಂತೆ ನಾನಾ ಶಂಕೆಗಳಿಂದ ಕಲುಷಿತವಾದ ಶರಣರ ಚಿತ್ತವು ಷಟ್‌ಸ್ಥಲವಿಚಾರಗಳಿಂದ ತಿಳಿಯಾಯಿತು. ರಾ॥ ಸಾ॥ ಹಳಕಟ್ಟಿಯವರು ಸಂಶೋಧಿಸಿ ಪ್ರಕಟಿಸಿದ "ಶೂನ್ಯಸಂಪಾದನೆ' ಯೆಂಬ ಗ್ರಂಥದಲ್ಲಿ ಶಿವಶರಣರ ಸಂವಾದವು ಬಹು ಸರಸವಾಗಿ ವಿವೇಚಿಸಲ್ಪಟ್ಟಿದೆ. ಅದರಲ್ಲಿ ಕೊನೆಗೆ ಶ್ರೀ ಚೆನ್ನಬಸವಣ್ಣನವರ ನಿರ್ಣಯವೇ ಎಲ್ಲರಿಗೂ ಸಮ್ಮತವಾಗಿದೆ. ಷಟ್‌ಸ್ಥಲ ಜ್ಞಾನವನ್ನು ಸಂಪಾದಿಸಿದ ಬಳಿಕ ಶಿವಶರಣರು ಸ್ವತಂತ್ರವಾಗಿ ಆಯಾಯ ಸ್ಥಲಗಳ ಬಗ್ಗೆ ಅನೇಕ ವಚನಗಳನ್ನು ರಚಿಸಿದರು. ಆ ವಚನಗಳಿಂದ ಸ್ಫುರಣಹೊಂದಿ ನಮ್ಮ ಸಮಾಜದಲ್ಲಿ ಬಹು ಜನ ಶಿವಯೋಗಿಗಳೂ ತಪೋನಿಷ್ಠರೂ ಆಗಿಹೋದರು.

## ಸಮಾಜ ರಚನೆ.

ಶಿವಾನುಭವ ಮಂಟಪದ ಸಾರ್ಥಕತೆಯನ್ನು ಆಗಿನ ಕಾಲದಲ್ಲಿ ಬಹು ಜನ ಶೈವರೂ ವೈಷ್ಣವರೂ ಜೈನರೂ ಹೊಂದಿದರು. ಆವರು ಶಿವದೀಕ್ಷೆ ಹೊಂದಿ ಲಿಂಗಾಂಗಿಗಳಾಗಿ ಈ ಪಂಥವನ್ನು ಜನರಲ್ಲಿ ಪ್ರಸಾರ ಮಾಡಲಿಕ್ಕೆ' ಟೊಂಕ ಕಟ್ಟಿದರು. ಮಿಶನರಿ ಜನರು ಅಲ್ಲಲ್ಲಿ 'ಚರ್ಚ'ಗಳನ್ನು ಕಟ್ಟಿಸಿ ತಮ್ಮ ಮತವನ್ನು ಪ್ರಸಾರಮಾಡುವಂತೆ ನಮ್ಮ ಸಮಾ

ಜದ ಪೂರ್ವದ ಸುಶಿಕ್ಷಿತರು ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿ ಆ ಕೇಂದ್ರಗಳ ಮುಖಾಂತರವಾಗಿ ಜನರಿಗೆ ಲಿಂಗಧಾರಣ ಮಾಡಿ ಬಸವಾದಿ ಪ್ರಮಥರ ಲಿಂಗಾಂಗ ಸಾಮರಸ್ಯದ ವಿಚಾರಗಳನ್ನು ದೇಶದಲ್ಲೆಲ್ಲ ಹರಡಹತ್ತಿದರು. ಬಸವಣ್ಣನವರು ಗತಿಸಿದ ನೂರಾರು ವರ್ಷಗಳಲ್ಲಿ ಲಿಂಗಾಯತರದೊಂದು ಸಮಾಜವೇ ಏರ್ಪಟ್ಟಿತು.

ಸಮಾಜ ಸ್ಥಿತಿಗನುಸಾರವಾಗಿ ಜನರಲ್ಲಿ ಶಿಕ್ಷಣ, ಧಾರ್ಮಿಕ ಕಾರ್ಯ, ಶಿವಾನುಭವ ವಿಚಾರ ಮುಂತಾದವುಗಳನ್ನು ಕ್ರಮಬದ್ಧವಾಗಿ ಸಾಗಿಸುವ ಅವಶ್ಯ ಬಿದ್ದಿತು. ಅದಕ್ಕಾಗಿ ನಮ್ಮ ಸಮಾಜದ ಕೆಲವು ಸುಶಿಕ್ಷಿತರು ಈ ಕಾರ್ಯವನ್ನು ಕೈಕೊಂಡರು. ಭಕ್ತರು ಇವರಿಗೆ ಮಠ ಮಾನ್ಯಗಳನ್ನು ಹಾಕಿಕೊಟ್ಟರು. ಮತ್ತು ಇವರಿಗೆ ಆರಾಧ್ಯ, ಆರ್ಯ, ಅಥವಾ ಅಯ್ಯ ಎಂಬ ಗೌರವ ಶಬ್ದದಿಂದ ಕರೆಯ ಹತ್ತಿದರು. ಶಿಕ್ಷಣಕೊಡುವ ಅಯ್ಯನವರಿಗೆ ಶಿಕ್ಷಾಗುರುಗಳೆಂದೂ, ಲಿಂಗಧಾರಣ, ದೀಕ್ಷೆ, ಜನನ ಮರಣಾದಿ ಶುಭಾ ಶುಭ ಕಾರ್ಯಗಳಲ್ಲಿಯ ವಿಧಾನಗಳನ್ನು ಸಾಂಗಗೊಳಿಸುವ ಅಯ್ಯನವರಿಗೆ ದೀಕ್ಷಾಗುರುಗಳೆಂದೂ, ಶಿವಾನುಭವ ಸಿದ್ಧಾಂತವನ್ನು ಜನರಿಗೆ ತಿಳಿಸಿ ಸನ್ಮಾರ್ಗಕ್ಕೆ ಹಚ್ಚುವ ಅಯ್ಯನವರು ಮೋಕ್ಷಾಗುರುಗಳೆಂದೂ ತಿಳಿಯಲ್ಪಟ್ಟರು. ಮತಪ್ರಸಾರಕ್ಕಾಗಿ ನೇರ್ಪಟ್ಟ ಮಠದ ಕೇಂದ್ರಗಳಿಗೆ ಅನೇಕ ಉಪಶಾಖೆಗಳು ಅಲ್ಲಲ್ಲಿ ಉಂಟಾದವು. ಸರಕಾರೀ ರಾಜ್ಯಪದ್ಧತಿಯಂತೆ ಮಠಾಧಿಕಾರಗಳಲ್ಲಿ ತಾರತಮ್ಯಗಳುದ್ಭವಿಸಿದವು. ೧೨ ನೆಯ ಶತಮಾನದಿಂದ ಹಿಡಿದು ಇಲ್ಲಿಯ ವರೆಗೆ ೩೫ ಲಕ್ಷ ವೀರಶೈವ ಜನಾಂಗವು ಈ ಮತ ಪ್ರಸಾರಕರಿಂದ ಸಿದ್ಧವಾಯಿತು. ಆಯಾಯ ಮಠದ ಗುರುಗಳು ಅನೇಕ ಶಿಷ್ಯರನ್ನು ಮಾಡಿಕೊಂಡು ತಮ್ಮ ಸೂತ್ರ ಗೋತ್ರಗಳನ್ನು ಅವರಿಗೆ ಹೇಳಿಕೊಡುತ್ತಾ ಬಂದರು. ಈ ಮೇರೆಗೆ ಸಮಾಜ ರಚನಾ ಕಾರ್ಯವು ಕೆಲವು ವರ್ಷ ನಡೆದು ಪೂರ್ತಿಗೊಂಡಿತು.

ಮುಂದೆ ಬರಬರುತ್ತ ಗುರುಶಿಷ್ಯರಲ್ಲಿ ಆಲಸ್ಯವಿಲಾಸಗಳು ಮನೆ ಮಾಡಿಕೊಂಡವು. ಬಹು ದಿವಸ ನಿಂತಲ್ಲಿಯೇ ನಿಂತ ನೀರು ಮಲೆತು ಕೆಡುವಂತೆಯೂ ಉಪಯೋಗಿಸದಿದ್ದ ಖಡ್ಗವು ಜಂಗು ಹತ್ತಿ ಹಾಳಾಗಿ ಹೋಗುವಂತೆಯೂ ನಿರುದ್ಯೋಗಿಗಳೂ ಭಕ್ತರ ದುಡ್ಡಿನಿಂದ ಹೊಟ್ಟೆ ಹೊರಕೊಳ್ಳುವವರೂ ಆದ ಗುರುಗಳು ಸಮಾಜಕ್ಕೆ ತಲೆಭಾರವಾಗಹತ್ತಿದರು. ಉದ್ಯೋಗವಿಲ್ಲದ ಬಡಿಗನು ಅದೇನೋ ಮಾಡಿದನೆಂಬಂತೆ ತಿರು

ಪಡೆಬೇಡುತ್ತಾ ಸಂಚರಿಸುವ ಗುರುಗಳೇ ಸಮಾಜ ಸೇವೆ ಧಾರ್ಮಿಕಕಾರ್ಯ ಗಳನ್ನು ಸಾಂಗಗೊಳಿಸುವದರ ಬದಲು ಸ್ವಾರ್ಥಕ್ಕೆ ಮೆಚ್ಚಿ ತಮ್ಮತಮ್ಮೊ ಳಗೆ ಕಲಹವನ್ನು ಬೆಳೆಯಿಸಹತ್ತಿದರು. ಹೀಗಾಗಿ ನಾಮಧಾರೀ ಗುರುಗ ಳಿಗೆ ಸಮಾಜದಲ್ಲಿ ಯೋಗ್ಯ ಮನ್ನಣೆಯು ದೊರೆಯದಂತಾಯಿತು. ಸುಜ್ಞ ಸಮಾಜವು ನಿಸ್ವಾರ್ಥಿಗಳನ್ನೂ ಸಮಾಜಸೇವಕರನ್ನೂ ದಾನಶೀಲರನ್ನೂ ಗೌರವಿಸುತ್ತದೆ. ಮಠಗಳು ಮಾಡತಕ್ಕ ಕಾರ್ಯಗಳನ್ನು ವಿದ್ಯಾಸಂಸ್ಥೆ ಗಳೂ ಮುದ್ರಣ ಮಂದಿರಗಳೂ ಮಾಡಲಾರಂಭಿಸಿವೆ.

ರಾಜಕೀಯ ಪರಿಸ್ಥಿತಿಯು ಯಾವ ಪ್ರಕಾರವಾಗಿರುವದೋ ಅದೇ ಸ್ಥಿತಿಯು ಆಯಾಯ ಸಮಾಜಗಳಲ್ಲಿ ಪ್ರತಿಬಿಂಬಿತವಾಗುತ್ತದೆ. ಸಭೆ, ಕಮಿಟಿ, ಅಧ್ಯಕ್ಷ, ನೇಮು, ಠರಾವು, ಮತ, ಚುನಾವಣೆ ಮೊದಲಾದ ರಾಜಕೀಯ ಶಬ್ದಗಳು ಸಮಾಜದಲ್ಲಿ ಸೇರಿ, ವಿದ್ಯಾ ಸಂಸ್ಥೆ ತರುಣ ಸಂಘ, ಫ್ರೀಬೋರ್ಡಿಂಗ ಮುನಸಿಪಾಲ್ಟಿ ಲೋಕಲ್‌ಬೋರ್ಡ, ಮಹಾ ಸಭೆ ಈ ರೂಪವನ್ನು ಧರಿಸುತ್ತವೆ. ಮಹಾಮಹಾ ಮಠದ ಸ್ವಾಮಿಗಳಿಗೆ ಸಮಾಜದಲ್ಲಿ ಸ್ಥಾನವಿಲ್ಲದಂತಾಗಿದೆ. ಕಾರಣ ಸಮಾಜ ಸುಧಾರಣೆಯ ಯಾವ ಕಾರ್ಯಗಳಾದರೂ ನಡೆಯಬೇಕಾದರೆ ಸಂಘಶಕ್ತಿಯೂ ಸಂಸ್ಥೆ ಗಳೂ ಹೆಚ್ಚು ಅವಶ್ಯವು. ಈ ಕಾಲಕ್ಕೆ ಮಠಗಳು ಹಳೆ ಮಾದರಿಯ ಸಂಸ್ಥೆಗಳಾಗಿವೆ. ಸ್ವಾಮಿಗಳೇನೋ ಹಳೆಮಾದರಿಯಂತೆ ಮಠಗಳಿಗೊಡೆ ಯರಾಗಿದ್ದು ಅವರನ್ನೂ ಯಾರೂ ಕೇಳುವದಿಲ್ಲ. ಅವರಲ್ಲಿ ಯಾರಾ ದರೂ ಸಮಾಜ ಸೇವೆ ಮಾಡುತ್ತಿದ್ದರೆ ಅವರಿಗಷ್ಟು ಮನ್ನಣೆ ದೊರೆ ಯುವದು.

ಮನುಷ್ಯನು ಹಳೆ ಅಂಗಿಯನ್ನು ಬಿಟ್ಟು ಹೊಸ ಅಂಗಿಯನ್ನು ಧರಿ ಸುವದು ಸ್ವಾಭಾವಿಕವು. ಅದರಂತೆಯೇ ಆಧುನಿಕ ಸಮಾಜದಲ್ಲಿ ನೆಲೆ ಗೊಂಡ ಸಂಸ್ಥೆ-ಸಂಘ-ಸಭೆಗಳ ಮುಖಾಂತರವಾಗಿ ನಾವು ಸಮಾಜ ಸುಧಾರಣೆಯ ಕಾರ್ಯಗಳನ್ನು ಮಾಡಬೇಕಾಗಿದೆ. ಮಠ ಮಠಾಂತರ ಗಳಲ್ಲಿ ಕಲಹಗಳು ನಡೆದು ಸಮಾಜಕ್ಕೆ ಕಲಂಕವನ್ನು ಹಚ್ಚಿ ಬಿಟ್ಟಿವೆ. ೧೨ ನೆಯ ಶತಮಾನದಂತೆ ಬಸವಾದಿ ಪ್ರಮಥರಂಥ ಮಹನೀಯರ ಅವ ತಾರವಾದಾಗ ಮಾತ್ರ ಮಠಮಾನ್ಯಗಳ ವ್ಯವಸ್ಥೆಯು ಸರಿಯಾಗಿ ನಡೆ ಯುಬಹುದು.

# ಗ್ರಂಥವಿಮರ್ಶೆ.

ಶ್ರೀ ಸುತ್ತೂರು ಸಿಂಹಾಸನದ ಗುರುಪರಂಪರೆ:-- ಇದು ೨೧ ಸಂಧಿಗಳುಳ್ಳ ಭಾಮಿನೀಷಟ್ಪದಿ ಕಾವ್ಯಗಂಥವು. ಇದು ವೇ|| ಸಿ. ಸಂಗಪ್ಪ ಶಾಸ್ತ್ರಿಗಳವರಿಂದ ರಚಿಸಲ್ಪಟ್ಟಿದೆ. ಇವರಲ್ಲಿ ವೀರಶೈವರಲ್ಲಿ ಒಂದು ಮಹತ್ವದ ಮಠವಾದ ಸುತ್ತೂರು ಜಿ|| ನಂಜನಗೂಡ ಶ್ರೀ ವೀರಸಿಂಹಾಸನ ಮಠದ ಗುರುಪರಂಪರೆಯಲ್ಲಿದ್ದ ೨೧ ಪೀಠಾಧೀಶ್ವರರ ಚರಿತೆಗಳು ಹೇಳಲ್ಪಟ್ಟಿವೆ. ವೀರಶೈವರಲ್ಲಿಯ ಅನೇಕ ಮಠಗಳಲ್ಲಿ ಮತ್ತು ಮಹತ್ವದ ರಾಜಕೀಯ ಮನೆತನಗಳಲ್ಲಿ ತಮ್ಮ ಮಠಗಳ ಮತ್ತು ಮನೆತನಗಳ ಪುರಾತನ ವೃತ್ತಾಂತಗಳು ಈಗಲೂ ಉಪಲಬ್ಧವಿವೆ. ಇವುಗಳು ಹೊರಪಟ್ಟಲ್ಲಿ ವೀರಶೈವರ ಸಾಮಾಜಿಕ ಮತ್ತು ರಾಜಕೀಯ ಇತಿಹಾಸದ ಮೇಲೆ ಮಹತ್ವದ ಪ್ರಕಾಶವು ಬೀಳದೆ ಇರದು. ಆದ್ದರಿಂದ ಈ ಗ್ರಂಥವನ್ನು ಪ್ರಚುರಪಡಿಸಿದ ಈಗಿನ ಬ್ರಂ|| ಶ್ರೀ|| ವೇ|| ಪಟ್ಟದ ಶಿವರಾತ್ರಿಸ್ವಾಮಿಗಳನ್ನು ನಾವು ಅತ್ಯಂತವಾಗಿ ಅಭಿನಂದಿಸುತ್ತೇವೆ. ಕಾವ್ಯವು ಬಹು ಸರಳವಾಗಿದ್ದು ಓದುವವರಿಗೆ ಸುಲಭವಾಗಿ ಅರ್ಥವಾಗುವಂತೆ ಬರೆಯಲ್ಪಟ್ಟಿದೆ. ಈ ಗ್ರಂಥಕ್ಕೆ ಆಧಾರವಾಗಿರುವ ಗುರುಪರಂಪರೆಯ ನಡುವಳಿಕೆಗಳನ್ನೂ ಸಹ ಇದ್ದಕ್ಕಿದ್ದ ಹಾಗೆ ಪ್ರಕಾಶಿಸಬೇಕೆಂತಲೂ ನಾವು ಗ್ರಂಥಪ್ರಕಾಶಕರಿಗೆ ಸೂಚಿಸುತ್ತೇವೆ.

ಶ್ರೀಮದ್ವೀರಶೈವ ನಿಜಾಚರಣೆಯು:-- ಇದೊಂದು ಅತ್ಯಂತ ಮಹತ್ವದ ವಚನಗ್ರಂಥವು. ಶೂನ್ಯಸಂಪಾದನೆಯು ವೀರಶೈವ ಧರ್ಮದ ತಾತ್ವಿಕ ವಿವೇಚನೆಯ ದೃಷ್ಟಿಯಿಂದ ಹ್ಯಾಗೆ ಅತ್ಯಂತ ಮಹತ್ವದ್ದೋ ಹಾಗೆಯೇ ನಿಜಾಚರಣೆಯು ಅದರ ವಿಚಾರಗಳನ್ನು ಅರಿಯಲು ಬಹಳ ಮಹತ್ವದ್ದದೆ. ಜ್ಞಾನಅಷ್ಟಾವರಣಗಳು, ೨೧ ದೀಕ್ಷೆಗಳು, ಸಮಾಧಿಯ ವಿಧಗಳು, ಆರು ಲಿಂಗಗಳು, ಒಂಬತ್ತು ಲಿಂಗಗಳು ಇವುಗಳ ನೆಲೆಕಲೆಗಳೆಲ್ಲ ಇದರಲ್ಲಿ ಬಹು ಚನ್ನಾಗಿ ವಿವರಿಸಲ್ಪಟ್ಟಿವೆ. ಇದು ಶ್ರೀ ಗುರಸಿದ್ಧೇಶ್ವರ ಸ್ವಾಮಿಗಳೆಂಬವರಿಂದ ವಿರಚಿತವಾದ ಪುರಾತನ ಗ್ರಂಥವು. ಇದನ್ನು ಜಮುಖಂಡಿ ಸಂಸ್ಥಾನದಲ್ಲಿಯ ಬನಹಟ್ಟಿ ಗ್ರಾಮದ ವೇ|| ವಿ. ಶಿ. ವೀರಸಂಗಯ್ಯ ಶಿವಲಿಂಗಾರ್ಯಸ್ವಾಮಿ ಹಿರೇಮಠ ಇವರು ಪ್ರಸಿದ್ಧಿಸಿದ್ದಕ್ಕಾಗಿ ನಾವು ಇವರನ್ನು ಬಹಳ ಅಭಿನಂದಿಸುತ್ತೇವೆ. ಪುಸ್ತಕದ ಬೆಲೆಯು ೧ ರೂಪಾಯಿ ಇದ್ದು ಇದು ಗ್ರಂಥಪ್ರಕಾಶಕರಲ್ಲಿಯೇ ದೊರೆಯುತ್ತದೆ.

---

ಬಳಿಕ ಹೇಸಲ್ವೇಳ್ಕುಮರಿಯಿರೇ ದೇಹಮಂ
ಪಂಚಭೂತಂ ಸೆರೆಯೆ ಕಾಯಂ ಪರಿಯೆ ವಾಯು
ಇಚ್ಚೆಗೊಳ್ಳದಿರಿ ಎನ್ನ ರೂಪೆಲ್ಲ ಹ್ಯೇಯ

ಎಂಬ ಬೋಧೆಗೆ ಹೋಗದೊಡನೊಡನೆ ಬರುತಮಿರೆ
ನಂಬದುನ್ಮತ್ತ ಜನಗಳು ಪಿಂತೆ ಬರುತಮಿರೆ
ಬೇಸತ್ತು ಪುರಹರಾ ಮಾಯಾತಮೋಹರಾ
ವೇಷವೆನ್ನಂ ಕೊಂದಪುದು ಪಂಚ ಶರಹರಾ.
ಎಂದು ಮೊರೆಯಿಡೆ ಹರಂ ಶಕ್ತಿಯಂ ಕುಡಲಲ್ಲಿ
ನಿಂದು ನಿಶ್ಚೈಸಿದಳ್ದೇಹಮಂ ಬಿಡಲಲ್ಲಿ
ಸೈರಿಸದೆ ಬೆಂಬತ್ತುವಜ್ಞಜನಮಂ ನೋಡಿ
ವೈರಾಗ್ಯಶಸ್ತ್ರದಿಂ ಛೇದಿಸಿಕೊಳಲ್ಬೇಡಿ
ಕಾಮಮಂ ಕ್ರೋಧಮಂ ಲೋಭಮಂ ಬಿದಿರ್ವಂತೆ
ಪ್ರೇಮಮಂ ಮದಮತ್ಸರಂಗಳಂ ಬಿದಿರ್ವಂತೆ
ಮಾಯೆಯಂ ಬಿದಿರ್ವಂತೆ ಮೋಹಮಂ ಬಿದಿರ್ವಂತೆ
ಛಾಯೆಯಂ ಬಿದಿರ್ವಂತೆ ಚಂದಮಂ ಬಿದಿರ್ವಂತೆ
ಅವಯವಂಗಳನಲ್ಲಿ ಚಲ್ಲಿದಳು ಛಲದಿಂದೆ

ತಮತಮಗೆ ಓಡಿತ್ತು ಮೂರ್ಖಜನ ಭಯದಿಂದೆ
ಸ್ಥೂಲತನುವಂ ಬಿಟ್ಟು ಸೂಕ್ಷ್ಮತನುವಿಂ ನಿಲಲು
ಕೇಳು ಭೃಂಗೀಶನೊದರಿದ ಅಂದದೊಳ್ನಿಲಲು
ಕಣ್ಣಳಿಯೆ ಮೆಯ್ಯೆಲ್ಲವೆಲುವಾಗಿ ನಿಲಲಲ್ಲಿ
ಬಣ್ಣವಳಿಯಲ್ಕೋಡುತೆಲ್ಲ ಲಘು ಜನವಲ್ಲಿ
ಮರುಳೋ ಪಿಶಾಚಿಯೋ ಓಡೋಡೆನುತ್ತಲ್ಲಿ
ಮರಳಿ ನೋಡಲಮ್ಮದೆಯೋಡಿತ್ತು ಜನವಲ್ಲಿ
ಇಂತು ಮೆಯ್ಯಂ ಬಿದಿರ್ದು ತಾನೋರ್ವಳೆ ನಿಂದು
ಸಂತ ಸುಖದಿಂ ಶಂಭುವಂ ನೆನೆಯುತುಂ ಬಂದು
ತಲೆಯುಳಿಯೆ ಮೆಯ್ಯೆಲ್ಲವೆಲುವಾಗಿ ನಿಲಲಿಂತೆ
ಕಲಿಯುಗದ ಹೊಲೆಗೆಟ್ಟು ಪುಣ್ಯವೇಳ್ತಪ್ಪಂತೆ
ನಡೆತಂದಳಪ್ರತಿಮ ವೈರಾಗ್ಯ ಸಂಯುಕ್ತೆ

ನಡೆತಂದಳೇಕನಿಷ್ಠೆಯ ಭಕ್ತಿಯನುರಕ್ತೆ
ಹರುಷದಿಂ ಹಾಡುತುಂ ಹಿಗ್ಗುತುಂ ಬರವರಲ್
ಪರಮ ಸಂತೋಷಿಯಾನಂದದಿಂ ಬರವರಲ್

ಕಾಂಚಿಗೆ ಬಡಗಲಿರ್ಪ ತಿರುವಾಸ ಕಾಡೊಳಗೆ
ಪಂಚಮುಖನಿರೆ ಕಂಡಳಲ್ಲಿ ಕಾನನದೊಳಗೆ
ಆಹಾ ಶಿವನೆ ನಿನ್ನ ನಾಟ್ಯವಂ ತೋರೆನಗೆ
ಆಹಾ ಮಹಾ ನಾಟ್ಯವಂ ಕರುಣಿಸುವುದೆನಗೆ
ತೋರಯ್ಯ ಘನ ಕಾಂಡವಾಡಂಬರವನೆನಗೆ
ತೋರಯ್ಯ ಮೆಯ್ಯೆಲ್ಲ ಕಣ್ಣಾಗಿ ನೋಳ್ಪೆನಗೆ
ಎಂದು ಬಿನ್ನೈಸೆ ಶಂಕರನಲ್ಲಿ ತೋರಿದಂ

ನಿಂದು ನೋಡಲ್ಕೂಡೆ ಗಗನವಂ ಮೀರಿದಂ
ಜಡೆ ನಭವನೆಡೆಗೊಂಡು ಪರ್ವಿ ಪಲ್ಲವಿಸುತಿರೆ
ಹೆಡೆಗಳಂ ಬಿರ್ಚಿಯುರಗಂಗಳಾಡುತ್ತವಿರೆ
ಹಸ್ತಂಗಳೀರ್ಣ್ದೆಸಗೆ ನಟಣೆಯಿಂ ನಲಿಯುತಿರೆ
ವಿಸ್ತರದ ಚರಣ ಪಲ್ಲವವೆತ್ತಿ ಮೆರೆಯುತಿರೆ
ಮೇಲೆ ವಿಶ್ವಕ್ಸೇನನಲ್ಲಿ ತಿರ್ರನೆ ತಿರುಗೆ
ಕಾಲನೇವುರವಲ್ಲಿ ಝಣಝಣಿಸುತಂ ತಿರುಗೆ
ಡಮರುಗದ ನಾದಮುಂ ಢಣಢಣಮೆನುತ್ತಿರಲ್
ಅಮಮ ಘಂಟಾನಾದವಲ್ಲಿ ಢಣಢಣಮೆನಲ್
ಪುಲಿದೊವಲ ಪೊಂಗೆಜ್ಜೆಗಳ ಘುಲಿಘುಲಿರೆನಲ್
ಚಲಿಸುವಂದುಗೆಯ ದನಿ ಘುಲುಘುಲುಕು ಘುಲುಕೆನಲ್
ಕೆಯ್ಯ ಬೊಮ್ಮನ ಸಿರಮುದರಿಯರೇ ಎನುತಿರಲ್
ಮೆಯ್ಯ ದೇವರ ಹಿಂಡುದಲೆ ಮಾಲೆಯು ಬುಚೆನಲ್
ಗಜಚರ್ಮವಲ್ಲಿ ಜೊಂಪಿಸಿ ಝಾಡಿ ಮೂಡುತಿರೆ
ಭುಜ ಹತ್ತು ದೆಸೆಗಳಂ ಕೌಂಕುಳೊಳಿರಿಂಕುತಿರೆ
ಪದತಳದ ಹರಿನಯನವೆವೆದೆರೆದು ಹಳವಳಿಸೆ
ಬಿದಿರ್ದೆತ್ತಿ ಖಟ್ವಾಂಗವಂಬರಕವ್ವಳಿಸೆ
ಕೋಟಿರವಿಕಾಂತಿಯುಂ ಪದನಖಂ ಸೂಸುತಿರೆ

ಕೋಟಾನುಕೋಟಿ ನಾಟ್ಯಂಗಳಂ ಚಲ್ಲುತಿರೆ
ಬ್ರಹ್ಮ ವಿಷ್ಣ್ವಾದಿಗಳ್ಜಯಜೀಯವೆನುತಮಿರೆ
ಬ್ರಹ್ಮಾಂಡಭಾಂಡವಾ ತಾಂಡವಕೆ ಬಿರಿವುತಿರೆ
ತಾನಾಡೆಯುಮೆಯಾಡೆ ಹರಿಯಜಸುರರಾಡೆ
ತಾನಾಡೆ ಜಗವಾಡೆ ಜೀವರಾಶಿಗಳಾಡೆ
ಆಡುತಿರ್ದಂ ವಿರುಪಾಕ್ಷ ಶಿವನಮ್ಮಮ್ಮ
ಆಡುತಿರ್ದಂ ಗಣಂಗಳ್ನೋಡಲಮ್ಮ

ಇಂತಾಡೆ ನೋಡಿ ಅಂಜಿದಳಮ್ಮ ಶರಣೆನುತೆ
ಕಂತುಹರ ಶರಣೆನುತೆ ಸಾಲ್ಗು ಸಾಲ್ಗೆಂದೆನುತೆ
ಕಣ್ಮುಚ್ಚಿ ನಡುಗುತಿರ್ದಳ್ಕಾರಿಕಾಲಮ್ಮ
ಅಣ್ಮುಗೆಟ್ಟರಿವುಗೆಟ್ಟಳ್ಕಾರಿಕಾಲಮ್ಮ
ಇರೆ ಹರಂ ಕರುಣದಿಂದಂ ನಾಟ್ಯವಂ ಮಾಣ್ದು
ಸುರರೆಲ್ಲ ಚೋದ್ಯಮೆನೆ ಕಾರುಣ್ಯಮಂ ಮಾಣ್ದು
ಕಂಡವ್ವೆ ಕಾರಿಕಾಲಮ್ಮ ಎಲೆ ನಾಂಟ್ಯಮಂ
ಕಂಡಿರೇಯಮ್ಮಯರೆ ಎನ್ನ ಚೆಲ್ವಾಟಮಂ
ಎನೆ ಕಂಡೆ ನಾ ಕಂಡೆ ಎನ್ನಳವೆ ಬರ್ದುಕಿದೇಂ
ಎನಗೆ ತೋರಿದೆ ದಯಾಪರತೆಯಂ ಬರ್ದುಕಿದೇಂ
ಹರಿಯಜರು ಕಾಂಬರೇ ನಿಮ್ಮ ಪೊಸ ನಾಂಟ್ಯಮಂ
ವರ ವೇದವರಿವವೇ ನಿಮ್ಮ ಕಾಲಾಟಮಂ
ಎಲೆ ದೇವ ಎನ್ನ ಭಾಗ್ಯದ ಬೆಳಗೆ ಸರಿಯುಂಟೆ
ಎಲೆ ದೇವ ನಿಮ್ಮ ನಾಟ್ಯಕ್ಕಿನ್ನು ಸರಿಯುಂಟೆ
ಎಂದು ಕುಣಿದಾಡುತಿರ್ಪಮ್ಮೆಯಂ ಮಿಗೆ ಕಂಡು
ಇಂದುಶೇಖರನಲ್ಲಿ ಹರ್ಷಮಂ ಕೈಕೊಂಡು
ನಡೆ ತಾಯೆ ಕೈಲಾಸಪುರಕೆನುತ್ತಂ ಪೇಳ್ದು
ಮೃಡನಲ್ಲಿ ಲಿಂಗದೊಳ್ಪೊಕ್ಕನೊಲವಂ ತಾಳ್ದು

ಮಿಗೆ ಕಾರಿಕಾಲಮ್ಮ ಮಿಗೆಕೌತುಕಂಗೊಂಡು
ಸೊಗಯಿಸುವ ಶರಣರಡಿ ಹೆಜ್ಜೆಗಳುಮಂಕಂಡು
ಆಹಾ ಶರಣರೆಲ್ಲ ನಡೆದ ಹಾದಿಯ ಹೆಜ್ಜೆ

ಆಹಾ ಎನ್ನೊಡೆಯರೊಲವಿಂ ನಡೆದ ಪೊಸ ಹೆಜ್ಜೆ
ಇಂತಿವೆನ್ನಯ ಶಿರದ ಮೇಲಿರಲ್ವೇಳ್ಕೆಂದು
ಚಿಂತಿಸಿದಳೊಂದು ತೆರನಂ ಚಿತ್ತದೊಳಗೊಂದು
ಅವರೆಲ್ಲ ನಡೆದಂತೆಯಾಂ ನಡೆಯಬಲ್ಲೆನೇ
ಅವರಂತೆ ಸಾಮರ್ಥ್ಯವುಳ್ಳೊಡಾಂ ಬಲ್ಲೆನೇ
ಎನ್ನ ಕೈ ಕಾಲಾಗಿ ನಡೆವೆ ನಾನಿಂತಿಲ್ಲಿ
ಎನ್ನ ತಲೆಯಡಿಯಾಗಿ ನಡೆದು ತೋರುವೆನಿಲ್ಲಿ
ಎಲೆ ಶರಣರಡಿಗಳಿರ ಶಿವನಲ್ಲಿಗೊಯ್ಯಿರೇ
ಎಲೆ ಹೆಜ್ಜೆಗಳಿರ ಕೈಲಾಸಕ್ಕೆ ಕಳಿಪಿರೇ

ಎಂದು ಶರಣರ ಹೆಜ್ಜೆಯೋಳ್ನಂಬಿ ತಲೆಯಿಟ್ಟು
ಬಂದಳೊಂದೊಂದು ಗಳಿಗೆಗದೊಂದಡಿಯನಿಟ್ಟು
ಶಿವಭಕ್ತಿಯುಕ್ತಿ ತಲೆ ಕೆಳಗಾದ ಚಂದದಿಂ
ಶಿವನಿಷ್ಠೆ ಸೊರ್ಕೆ ತಲೆಯೂರಿತೆಂಬಂದದಿಂ
ಎಲ್ಲಾ ನರಾಳಿ ಬೇರ್ವೊದಲಾಗಿ ನಡೆವುತಿರೆ
ಇಲ್ಲಿ ಬೇರ್ಕೆಳಗಾಗಿ ಸಸಿನದೊಳ್ನಡೆವುತಿರೆ
ಇತ್ತ ಕೈಲಾಸಪಥದೋಳ್ನಂಬಿ ಚೇರಮರ್
ಮತ್ತಗಜ ತುರಗಂಗಳೇರಿ ಬರುತಮರ್
ಕಂಡಿದೆಂದಿಂಗೆ ಬರ್ಪಿರೆ ಯಮ್ಮೆಯೆಂದೆನುತೆ
ಖಂಡೇಂದುಮೌಳಿಯ ಪುರಕ್ಕೆ ನೀವೆಂದೆನುತೆ
ಪೋಗಲರ್ಥಿಕೆಯಾದಳಾ ಕಾರಿಕಾಲಮ್ಮೆ
ನಾಗಭೂಷಂಗೆ ಮೊರೆಯಿಟ್ಟಿತ್ತಳಮ್ಮಮ್ಮೆ
ಇಲ್ಲಿಯಳಲಲ್ಲಿ ಸಿಂಹಾಸನಂ ನೆನೆಯಿತ್ತು
ಇಲ್ಲಿ ಮೊರೆಯಿಡಲಲ್ಲಿ ಹರನ ಕಿವಿದಾಗಿತ್ತು
ಅರಿದು ಶರ್ವಂ ತನ್ನ ಮನದ ಕೆಯ್ಯಂ ನೀಡಿ
ತೆರ ಹರಿದು ತೆಗೆದುಕೊಂಡಂ ಮಹಿಮೆಯಿಂ ಕೂಡಿ
ತೆಗೆದುಕೊಳಲವರಿಂದ ಮುನ್ನವೈಯ್ತಂದಲ್ಲಿ
ಮಿಗೆ ರಜತಗಿರಿಯ ಸೋಪಾನವೇರುತ್ತಲ್ಲಿ
ಇದೆ ನಂಬಿ ಚೇರಮರ್ಕಾಣುತಂ ಬೆರಗಾಗಿ
ಹರಭಕ್ತಿಯಂ ಬೇಡಿಕೊಳುತಮಿರೆ ಸಿಗ್ಗಾಗಿ

ಕರುಣಿಸುತೆ ನಡೆತಂದಳಪ್ರತಿಮ ಶಿವಭಕ್ತೆ
ಪರಮ ನಂದೀಶ್ವರನ ಬಾಗಿಲ್ಗೆ ಹರಭಕ್ತೆ
ನಂದೀಶ್ವರಂ ಕಂಡು ಕೈಗಳಂ ಮುಗಿವುತಿರೆ
ಬಂದಳೀಶ್ವರನ ಸಭೆ ಕಂಡು ಬೆರಗಾಗುತಿರೆ
ಅಲ್ಲಿ ಮೆಯ್ಯೆಲ್ಲ ಎಲ್ವಾಗಿ ತಲೆಯೂರಿ ಬರೆ
ಅಲ್ಲಿ ಪಾರ್ವತಿ ನೋಡಿ ನಡನಡನೆ ನಡುಗುತಿರೆ
ದೇವಾ ಇದೇನೆಂದು ಮರುಳು ಬಂದಿದೆ ದೇವ
ದೇವ ನಾನಂಜಿದಪೆನಿರಲಮ್ಮೆನೆಲೆ ದೇವ
ಎನುತ ಹಿಂದಂ ಪೊಕ್ಕು ಶಂಭುವಂ ಬಿಗಿದಪ್ಪಿ
ಮನಸಿಜಹರನನಲ್ಲಿ ಭಯದಿಂದ ಬಿಗಿದಪ್ಪಿ
ಅಲ್ಲಲ್ಲ ಎಲೆ ಗಿರಿಜೆ ಕಾರಿಕಾಲೆಮ್ಮಯರು
ಅಲ್ಲೆ ಎಲೆ ಗೌರಿ ನಿಮ್ಮತ್ತೆ ನಮ್ಮಮ್ಮಯರು
ಎನ್ನಯ ಜನನಿ ಎನಗೆ ಹಣ್ಣಿತ್ತ ಹಿತವೆಯರ್
ಎನ್ನವ್ವೆ ನಿಮ್ಮತ್ತೆ ಕಾರಿಕಾಲಮ್ಮಯರ್
ಮರುಳೆಂಬರೇ ವಿಚಾರಂ ನಿನಗೆ ತೋರದೆನೆ
ಮರುಳೆನಲ್ಬಾಗದೌ ದೇವಿ ಪೊಡೆಮಡುವುದೆನೆ
ಕೇಳ್ದಲ್ಲಿ ಕಾರಿಕಾಲಮ್ಮ ಮನದೋಳ್ನೊಂದು
ಅಳ್ದ ಇಂತೆಂಬರೇ ನಿಮ್ಮ ತೊಳ್ತಾನೆಂದು
ಎನಗೆ ನೀ ತಂದೆ ಪಾರ್ವತಿ ತಾಯಿ ಎಲೆ ದೇವ
ಎನಗೆ ನೀವಿರ್ಬರುಂ ಜೀವದುನ್ನತಿ ದೇವ
ಎನುತಲ್ಲಿ ಶಂಕರನ ಚರಣತಳದೋಳ್ಬೀಳೆ
ಅನುನಯದೊಳೆತ್ತಿದಂ ಸಭೆ ಕೌತುಕದೊಳಾಳೆ
ಎತ್ತಿ ಮೆಯ್ಯಂ ತಡವಿ ನೋಡಲೆಯುಮಾದೇವಿ
ಚಿತ್ತದ ವಿರಕ್ತಿಯುಂ ಕಂಡು ಮಹಾದೇವಿ
ಮೆಯ್ಯೆಲ್ಲವವಿರ್ಮ ಬಿವಿರ್ಮ ನಿಂದವರುಂಟೆ
ಕೆಯ್ಯೆ ಕಾಲಾಗಿ ತಲೆಯೂರಿ ನಡೆದವರುಂಟೆ
ಭಾಪುರೇ ಜಗದ ತಾಯಾಗಿ ಸಲೆ ಸಂದಮ್ಮ
ಭಾಪು ಮಜ ಭಾಪುರೇ ಎಲೆ ಕಾರಿಕಾಲಮ್ಮ
ಎಂದಲ್ಲಿ ಗಣಕುಲಕೆ ತೋರುತುಂ ಬೀರುತುಂ
ಸಂದ ಹರಿ ಬೊಮ್ಮರ್ಗೆ ಹೇಳುತುಂ ಹಿಗ್ಗುತುಂ

ಗಣಪದವಿಯುಂ ಕಾರಿಕಾಲಮ್ಮೆಗೊಲಿದಿತ್ತು
ಗಣನಿವಹದೊಳ್ಸಲಿಸಿ ಪರಮ ಸುಖಮುಂ ಪೊತ್ತು
ಮೇರುಚಾಪಂ ಮಂತ್ರಮೂರ್ತಿ ಶಿವನೊಪ್ಪಿದಂ
ತಾರಾದ್ರಿಯುರಮನೆಯೊಳಿಂದುಧರನೊಪ್ಪಿದಂ
ಬ್ರಹ್ಮಶಿರಕೇಶ ದರ್ಭಾಂಕುರದ ಕೆಂದಳಂ
ಅಮ್ಮಮ್ಮ ಪುಲಿದೊವಲದೋವರಿಯ ನಿರ್ಮಳಂ
ಗಜಚರ್ಮದುತ್ತರೀಯದ ಮಹಾ ಬ್ರಾಹ್ಮಣಂ
ಅಜನುಂ ತ್ರಿಶೂಲ ದಂಡದ ನಿತ್ಯ ನಿರ್ಗುಣಂ
ಭಕ್ತಜನಹೃದಯಸರಸಿಜಹಂಸನೊಪ್ಪಿದಂ
ಭಕ್ತನಿಧಿ ಹಂಪೆಯ ವಿರೂಪಾಕ್ಷನೊಪ್ಪಿದಂ ॥

**ಕಂದಪದ್ಯ:** — ತಲೆಯೂರಿ ನಡೆದು ಹೇಮಾ
ಚಲಮಂ ನೆರೆ ಪೊಕ್ಕು ಕಾರಿಕಾಲಮ್ಮೆಯ
ನಿರ್ಮಲಸುತನೆಂದೊಲವಿಂದಂ
ಸಲಹೆನ್ನಂ ದೇವ ಹಂಪೆಯ ವಿರೂಪಾಕ್ಷಂ॥

## ರುದ್ರಪಶುಪತಿಯ ಮಹಾತ್ಮೆ

**ಕಂದ||** ಅತಿಶಯದಿಂ ಗರಳಧರಂ
ನತಜನ ಸುರಧೇನು ಹಂಪೆಯ ವಿರೂಪಾಕ್ಷಂ
ಶೃತಿಚೂಡಾಮಣಿಗೌರೀ
ಪತಿಮೆರೆದಂ ರುದ್ರಪಶುಪತಿಗಳುಂ ಧರೆಯೊಳ್

**ರಗಳೆ.**

ಧರೆಗೆಸೆವ ಚೋಳದೇಶದೊಳೊಂದು ಶಿವಪುರಂ
ಹರನ ಭಕ್ತಿಗೆ ತಾನೆ ನೆಲೆವನೆ ಎನಲ್ಕರಂ
ಮೆರೆವ ತಿರುತಲೆಯೂರೆನಿಪ್ಪ ಪೆಸರಿಂದೊಪ್ಪಿ
ಅರಿಕೆವಟ್ಟಿಪ್ಪರ್ದಾ ಶಿವನ ಭಕ್ತಿಯನಪ್ಪಿ
ಅಲ್ಲಿ ರುದ್ರಪ್ರಭುವೆನಿಪ್ಪ ವಿಪ್ರಂ ನೋಡ
ಸಲ್ಲೀಲೆ ಪೇರ್ಚಿ ಶಂಕರನ ಭಕ್ತಂ ನೋಡ
ಆತಂಗೆ ರಂಜಿಪಳ್ ಶುಚಿ ಎಂಬ ಸತಿ ನೋಡ
ನೂತನ ಪತಿವ್ರತಾಲಕ್ಷಣಾನ್ವಿತೆ ನೋಡ
ಶಿವಕುಲಂ ಶಿವಬಂಧು ಶಿವನ ಗೋತ್ರಂ ನೋಡ
ಭವನ ಬಳಗಂ ಕೇಳ ಶಿವನನ್ವಯಂ ನೋಡ
ಅಲ್ಲಿ ಶಿವ ಶಿವಭವನ ಭಕ್ತಿಯುದಯಿಸುವಂತೆ
ಅಲ್ಲಿ ಶಶಿಧರನ ಸಾಮರ್ಥ್ಯ ಉದಯಿಸುವಂತೆ
ಅಲ್ಲಿ ರುದ್ರನ ಸೌಕುಮಾರ್ಯ ಉದಯಿಸುವಂತೆ
ಅಲ್ಲಿ ಪಶುಪತಿಯ ಪರಮ ಸ್ನೇಹ ಒಗೆವಂತೆ
ಹುಟ್ಟಿದಂ ಪರಮ ಭಕ್ತಂ ಸತಿಯ ಬಸುರಿಂದೆ

ಹುಟ್ಟಿದ ಮುಹೂರ್ತದಿಂ ವಿಷಗಳನೊಲವಿಂದೆ
ಒಲಿಸುವಂ ಭಕ್ತಿಯಂ ಬಲಿಸುವಂ ನಿಷ್ಠೆಯಂ
ಕಲಿಸುವಂ ಧರೆಗೆ ಈಶನ ಭಕ್ತಿ ಒಟ್ಟೆಯಂ
ಇಂತೆಂದು ಜೋಯಿಸರು ಪೇಳೆ ಹರ್ಷದಳೆದು
ಸಂತತಂ ಪುತ್ರಸುಖದಾಶ್ಚರ್ಯವುಂ ಬಡೆದು
ಬಂದು ತಿರುತಲೆಯೂರ ಶಿವನ ಪ್ರಸಾದವುಂ

ತಂದು ಬಾಯ್ಬೆಣ್ಣೆ ಇಕ್ಕಿದರತಿ ಸ್ವಾದುಮಂ
ಜಾತಕರ್ಮಂ ಮಾಡಿ ಸತಿ ಸಂತಸಂಬಟ್ಟು
ನೂತನದ ರುದ್ರ ಪಶುಪತಿ ಎಂದು ಪೆಸರಿಟ್ಟು
ತಂದೆತಾಯ್ಗಳ್ ಸುಖದೊಳೊಂದಿ ನೋಡುತ್ತಮಿರೆ

ಇಂದುಕಳೆಯಂತೆ ತೊಳತೊಳಗಿ ಬೆಳಗುತ್ತಮಿರೆ
ಹರೆಯದೊಡನೊಡನೆ ಹರಭಕ್ತಿ ದಳವೇರುತಿರೆ
ಹರಭಕ್ತಿಯೊಡನೊಡನೆ ರೂಪು ದಳವೇರುತಿರೆ
ಷೋಡಶ ಪ್ರಾಯವಾದುದು ಮುಗ್ಧ ಭಕ್ತಂಗೆ
ನೋಡೆ ಚಂದನದ ಶಶಿಯಂತಿರ್ಪ ಭಕ್ತಂಗೆ
ಗುರುಕರುಣವಾದುದಾ ಶಿವಲಿಂಗ ಮೂರ್ತಿಯೊಳ್
ಉರವಣಿಪ ನೇಹನಾಯ್ತಿಂದುಧರ ಮೂರ್ತಿಯೊಳ್

ಮನವೆಂಬ ಭೂಮಿಯೊಳ್ ಭಕ್ತಿಬೀಜವನಿರಿಸಿ
ಅನುನಯದಿ ಪಂಚಾಕ್ಷರಿಯ ವೃಕ್ಷವವತರಿಸಿ
ಶಿವನ ನೆನೆಹೆಂಬ ಫಲವಂ ಪಡೆದು ಜೀವಿಪಂ
ಶಿವನ ಪರಮ ಸ್ನೇಹರಸಮುಮಂ ಸೇವಿಪಂ
ಇಂತು ಶಿವಭಕ್ತಿಯೊಳ್ ಯುಕ್ತಿ ಇಲ್ಲದೆ ಸಂದು
ಸಂತಸದೆ ನಿತ್ಯ ನೇಮಕ್ಕೆ ಮನವಂ ತಂದು
ನಡೆದು ತಿರುತಲೆಯೂರದೇವನಲ್ಲಿಗೆ ಬಂದು

ಮೃಡನೆ ಎನ್ನಭಿಮಾನವೇ ಶಿವನೆ ಶರಣೆಂದು
ಮೆಲ್ಲಮೆಲ್ಲನೆ ಪೂಜೆಯಂ ಪರಿಹರಿಸುತಿರಲ್
ಅಲ್ಲಿ ಲಿಂಗದೊಳೊಂದಿರುಂಪೆ ಪರಿಯುತ್ತಿರಲ್
ಕಂಡು ಪವ್ವನೆ ಹಾರಿ ಮರುಗಿ ಮಿಗೆ ಬಗೆಗೆಟ್ಟು
ಕಂಡೆಯ್ಯಿರುಂಪೆಯೂರಿತ್ತೆಂದು ಬಾಯ್ಬಿಟ್ಟು
ಏನವ್ವ ಪಾರ್ವತೀ ಸುಮ್ಮನಿರ್ದಪಿರವ್ವ
ಏನಿಂತಿರುಂಪೆಯೂರಲ್ನೋಡುತಿರ್ದವ್ವ
ಗಂಡೆ ನಿಗೆದುದೇ ದೇಹದೊಳಗುರಿದುದೆ ತಂದೆ
ಬೆಂದೆ ನಾಂ ಬೆಂದೆ ನಾಂ ನಿಲ್ಲಿಗಳೇ ತಂದೆ

ಎನುತೆ ಪಂಚಾಕ್ಷರಿಗಳಿಂ ಮುಟ್ಟಿ ಮಂತ್ರಿಸುತೆ
ಎನುತೆ ಪಂಚಾಮೃತಂಗಳನಲ್ಲಿ ಮಾಡುತ್ತೆ
ಕಾಲವೈರಿಗೆ ಸಹಸ್ರಾಭಿಷೇಕಂ ಮಾಡಿ
ಮೇಲೆ ಪಂಚಾಕ್ಷರಿಯ ಜಪವನೊಲವಿಂ ಮಾಡಿ
ಬಳಿಕ ಪೂಜಿಸಿ ನಿತ್ಯನೇಮಂಗಳಂ ಮಾಡಿ
ಎಳೆಯ ತನು ಸುಕುಮಾರ ನೊಂದೆ ಎನುತುಂ ನೋಡಿ
ತನಿನೋಟಮಂ ಪತ್ತೆ ಜೆಟ್ಟಿತೆಂದಂಜುತಂ
ನೆನೆದುಂ ಮನಂ ಕಠಿಣವೆಂದೆನುತ್ತಂಜುತಂ
ಪೂಜಿಸುವ ಪೂ ಬೀಳೆ ಪಂಚಾಮೃತಂ ಮಾಡಿ
ರಾಜಿಸಲ್ತೊಪಿರಿದು ಪಂಚಾಮೃತಂ ಮಾಡಿ
ಕನಸುಕಂಡೆಯ್ತಂದು ಪಂಚಾಮೃತಂ ಮಾಡಿ
ನೆನಹಿನೊಳ್ಬಗೆಪೆರ್ಚೆ ಪಂಚಾಮೃತಂ ಮಾಡಿ
ಅಲುಕಿದೊಡೆ ಪಂಚಾಮೃತಂಗಳಂ ಮಾಡುತುಂ
ಸಲೆ ನಿರ್ಮಾಳಂಗೆ ಪರಿಹಾರಮಂ ಮಾಡುತುಂ

ಇರೆ ಹರಂ ಬೆರಗಾಗಿ ಇಂತಿಪ್ಪ ಸುಖಿಯುಂಟೆ
ಧರಣಿಯೊಳಗೆನಗೀತನಿಂದೆ ಮೋಹಿತರುಂಟೆ
ಎಂದುವುಂ ಹೊಲ್ಲಹಂದೋರನಾತನ ಕಣ್ಗೆ
ಎಂದುವುಂ ಚೆಲ್ವನಾಗಿರ್ಪನಾತನ ಕಣ್ಗೆ
ಪೊಲ್ಲವಾಗಿರೆ ಕಂಡು ಸೈರಿಸದೆ ಅಂಜುವಂ
ಎಲ್ಲವಂ ಪರಿಹರಿಸಿಕೊಂಡು ತಾನೊಪ್ಪುವಂ
ಪುಳುವಡರೆ ತೆಗೆದು ಪೂ ಬಾಡಿದೊಡೆ ತಾ ತೆಗೆದು
ಕಳೆವ ಭಕ್ತಂ ನೋವನೆಂದಲ್ಲವಂ ತೆಗೆದು
ಇರ್ಪನಾತಂ ಬರ್ಪ ಪೊಳ್ತು ಸುಂದರನಾಗಿ
ಇರ್ಪನಾತನ ಕಣ್ಗೆ ಸುಕುಮಾರತರನಾಗಿ

ಇರೆ ಬಂದು ಪುಟವೆಳ್ದು ಪುಳುಕದಿಂ ಪೂಜಿಸುವ
ಉರವಣಿಪ ನೇಹದಿಂ ನಿಷ್ಠೆಯಿಂ ಪೂಜಿಸುವ
ಅಲ್ಲಿಯುರಗಂಗಳಂ ಪೊರ್ದವಾತನ ಮುಂದೆ
ಅಲ್ಲಿ ಕಠಿಣ ಪ್ರಾಣಿ ಸುಳಿಯವಾತನ ಮುಂದೆ
ಅರಿಯನಾತಂ ಶಿವನ ಪೆಸರುಗ್ರನೆಂಬುವಂ

ಅರಿಯನಾತಂ ಸರ್ಪಭೂಷನೆಂದೆಂಬುದಂ
ಅರಿಯನೀಶನ ಹಸ್ತದೊಳಗೆ ತಲೆಯಿರ್ಪುದಂ
ಅರಿಯನಾತಂ ಉರದಿ ಶಿರಮಾಲೆದೊಟ್ಟಿದಂ
ಅರಿಯನಾತಂ ಶಿವಂ ಗರಳಧರನೆಂಬುದಂ
ಅರಿಯನಾತಂ ತ್ರಿಶೂಲದಲಿ ಹೆಣನಿರ್ಪುದಂ
ಬಲ್ಲನಾತಂ ಶಿವನುಮಾರಮಣನೆಂಬುದಂ
ಬಲ್ಲನಾತಂ ಶಿವಂ ಸುಖಮೂರ್ತಿಯೆಂಬುದಂ
ಬಲ್ಲನಾತಂ ವಿಮಲ ಚಂದ್ರಧರನೆಂಬುದಂ
ಬಲ್ಲನೀಶಂ ನಿರ್ಮಳೋದಯನೆಂಬುದಂ
ಬಲ್ಲನಾನಂದಾಬ್ಧಿ ಪೂರ್ಣೇಂದುವೆಂಬುದಂ
ಬಲ್ಲನೀಶಂ ಕೃಪಾವಾರಿನಿಧಿಯೆಂಬುದಂ
ಇಂತು ಶಂಭುವನರಿದು ಸುಖದೊಳರ್ಚಿಸುತಿರ್ದು
ಸಂತಸದೆ ಪಲಕಾಲ ದೇವನನರ್ಚಿಸುತಿರ್ದು

ಒಂದು ದಿನದೊಳ್ ರುದ್ರಪಶುಪತಿಗಳೊಲವಿಂದೆ
ಇಂದುಮೌಳಿಯನರ್ಚಿಸಲ್ಕೆಂದು ಮುದದಿಂದೆ
ಎಂದುಂ ಪುರಾಣಮಂ ಕೇಳ್ದುವರಿಯದ ಸಾಧು
ಎಂದುಂ ಕಥಾಗೋಷ್ಠಿಯೊಳಗೆ ಸಲ್ಲದ ಸಾಧು
ಬರುತಿರಲ್ ಶಿವಪುರಾಣದ ಸಭೆ ಇರಲ್ಕಂಡು
ಚರಿತದಿಂ ಮೆಯ್ಯಿಕ್ಕಿ ಕೇಳಲ್ಕನಂಗೊಂಡು

ಕುಳ್ಳಿರ್ದು ವಿಷಜನನವಾದ ಭೀಕರಮುಮಂ
ಬಳ್ಳಿವರಿದಮರರಂ ಸುಡುವ ಸಡಗರಮುಮಂ
ಸುರಸಮಿತಿ ಘೋಳಿಡುವ ಘನತರದ ಸ್ಮೃತಿಗಳಂ
ಹರನ ಕಾಲೊಳ್ಕೆಡೆದು ಮೊರೆಯಿಡುವ ಪರಿಗಳಂ
ಶಿವನಭಯಮಂ ಕೊಟ್ಟು ಕರುಣಿಸಿದ ಪರಿಗಳಂ
ಭವನ ಕರತಳದೊಳಗೆ ವಿಷವಿರ್ದ ಪರಿಗಳಂ
ಕೇಳುತುಂ ಕೊಂಡಾಡುತುಂ ಹಿಗ್ಗಿ ಹೆಚ್ಚುತುಂ
ಬಾಳುತುಂ ದಳವೇರುತುಂ ನಲಿದು ನಚ್ಚುತುಂ
ಪೇಳ್ದ ಕಥೆಯೆಲ್ಲವೊಂದಾದುದೆಂಬಂದದಿಂ

ಕೇಳ್ದ ಭಕ್ತನ ಕಿವಿಗೆ ಪೊಸತಾದ ಚಂದದಿಂ
ಇರಲಾ ವಿಷವನುಂಡನೀಶನೆಂದೆನಲೊಡಂ
ಹರನ ಕಂಠದೊಳಿನ್ನುವುಮಿರ್ದಪುದೆನಲೊಡಂ

ಎಲೆಲೆ ಕೆಟ್ಟೆಂ ಕೆಟ್ಟೆನೇನಾಯ್ತಿದೇನಾಯ್ತು
ಎಲೆಲೆಲೆಲೆ ಎನುತ್ತಂ ಬೇಗ ಜೀವಂ ಪೋಯ್ತು
ಏನೆಂಬೆನಾ ರುದ್ರಪಶುಪತಿಗಳೆಚ್ಚತ್ತು
ನಾನಾ ನಿರೋಧದಿಂ ಕಡುಗೋಪಮಂ ಪೊತ್ತು
ಏನೇನದೆಂತೆಂತು ತಾನೆತ್ತ ವಿಷವೆತ್ತ
ಏನಯ್ಯದೇನಾಯ್ತು ಶಿವನೆತ್ತ ವಿಷವೆತ್ತ
ಉರಿಯೇಕೆ ಹೂವೇಕೆ ವಿಷವೇಕಮೃತವೇಕೆ
ಹರನೇಕೆ ಗರಳವೇಕಾನಿತ್ತುಬರಲೇಕೆ
ನಿನ್ನೆಯುರ್ಚಿಸಿ ಬಂದೆನೊಂದುವುಂ ಭಯವಿಲ್ಲ
ಇನ್ನೆಂತು ಮಾಳ್ಪೆನಿಂತಾದುದಂತಿನಿತಿಲ್ಲ
ಎಲೆ ಪಾಪಿಗಳಿರ ಪರಿಹಾರಮಂ ಮಾಡಿರೇ
ಎಲೆಲೆ ಸತ್ತೆಂ ಕೆಟ್ಟೆನಿನ್ನೆಂತು ಹೇಳಿರೇ
ಅಯ್ಯೋ ಇದೇತಕ್ಕೆ ಸುಮ್ಮನಿರ್ದಪಿರೆಲ್ಲ
ಅಯ್ಯೋ ಶಿವಂ ಸೈರಿಸಲ್ಕೆಯಾಪರ್ವನಲ್ಲ
ಬೆಳ್ದಿಂಗಳಂ ಕೊಳ್ಳಿ ಮುಟ್ಟಿತಿನ್ನೇಕಯ್ಯ
ಅಳ್ದಂಗೆ ವಿಷಧರತ್ವಂ ಬಂದುದೆಂತಯ್ಯ
ಇನ್ನೆವರವೆಂತಪ್ಪುದೋ ಶಿವಂಗೆಂದೆನುತ
ಮುನ್ನವೇ ಮಾಣಿಸದೆ ಹರಿಯಜರಿದೆಂವೆನುತ
ಪಾಪಿಗಳ್ಸುಮ್ಮನಿರ್ದರೇ ಶಿವದ್ರೋಹಿಗಳ್
ತಾಪತ್ರಯದ ಪದವಿಗೆಳಸಿರ್ಪ ಮೋಹಿಗಳ್
ತಾನೆಂತು ಸೈರಿಸಿದಳಯ್ಯೋ ಮಹಾದೇವಿ
ತಾನರಿದು ಬೇಡೆನ್ನದಿರ್ದಳೆ ಉಮಾದೇವಿ
ಸುರರಳಿದೊಡೇನಲ್ಲಿ ನರರಳಿದಡೇನಲ್ಲಿ
ಹರಿವಿರಿಂಚಿ ಸುರೇಂದ್ರರಳಿದಿರ್ದೊಡೇನಲ್ಲಿ
ಎನಿತು ಸುರರಾಗರೇ ಎನಿತು ನರರಾಗರೇ
ಎನಿತು ದೇವರ ಹಿಂಡುದೊತ್ತುಗಳ್ನೆರೆಯರೇ

ತಾನಿರಲ್ಕೇನಾಗದಯ್ಯೋ ಶಿವಂ ಪರುಳ್
ಏನೆಂಬೆನಯ್ಯೋ ಕರುಣಿ ಹರಂ ನೆರೆ ಮರುಳ್
ಪಲವು ಮಾತೇಕಿದಂ ಬಿಡಿಸುವೇಂ ಬಿಡಿಸುವೇಂ
ನೆಲನರಿಯೆ ಸುಖದಿಂದಲಿರಿಸುವೇಂ ಇರಿಸುವೇಂ
ಎಡೆಕಡೆಯ ದೇವರಿಂ ಹೋಗದಿದು ಪಿರಿದೆಂದು
ಮೃಡನಿತ್ತ ಪಂಚಾಕ್ಷರಿಯುನೆ ಜಪಿಸುವೆನೆಂಬು
ಇರ್ದಂ ಪುರಾಣಸಭೆ ಕೌತುಕಂಬಡುತಿರಲ್
ಇರ್ದ ಶಿವಭಕ್ತರೆಲ್ಲಚ್ಚರಿವಡುತ್ತಿರಲ್

ಪೊರಮಟ್ಟನಲ್ಲಿ ಪಂಚಾಕ್ಷರಿಯು ಸಾಧಕಂ
ಪ್ರೊರಮಟ್ಟನಮ್ಮಮ್ಮ ಶಿವಭಕ್ತಿವೇಧಕಂ
ಬಂದನುರವಣಿಸುತಂ ಭಕ್ತಿವಾರ್ಧಿಯು ತಡೆಗೆ
ನಿಂದನೊಲವಿಂ ವಿಷಂ ಪರಿಹಾರವಪ್ಪೆಡೆಗೆ
ಪ್ರೇಮಾಂಬುನಿಧಿಯುಂ ನಿರಾಕುಳಂ ಪುಗುವಂತೆ
ಕಾಮಹರನುರವಣೆಯು ನಿಷ್ಠೆಯುಂ ಪುಗುವಂತೆ
ಪೊಕ್ಕನಂಬುಧಿಯೊಳಗೆ ಕಂಠಪ್ರಮಾಣಮುಂ
ಮಿಕ್ಕು ಮಿಗೆ ಧರಿಸಿ ಪಂಚಾಕ್ಷರಿಯ ಮಂತ್ರಮುಂ
ಜ್ವಲನಂ ಜ್ವರಂಗೊಂಡನೆಂದು ಮಂತ್ರಿಸುವಂತೆ
ಜಲಕೆ ಶೀತಂ ಬಂದುದೆಂದು ಭಾವಿಸುವಂತೆ
ಮಾರುತಂಗುರಿ ಪತ್ತಿತೆಂದು ಮಾಣಿಸುವಂತೆ
ಧಾರುಣಿಗೆ ಮಸೆ ಮುಟ್ಟಿತೆಂದು ಮಂತ್ರಿಸುವಂತೆ
ನಭಮುಂ ವಿಷಂ ಪತ್ತಿತೆಂದು ಮಂತ್ರಿಸುವಂತೆ
ಅಭವನ ಕೊರಲ್ಗರಳಮುಂ ಮಾಣಿಸಲ್ಕಿಂತೆ
ಪ್ರೇಮಾಬ್ಧಿಯೊಳ್ಭಕ್ತಿ ತಲೆದೋರಿದೆಂಬಂತೆ
ಆ ಮಹಾರ್ಣವದೊಳಗೆ ತಲೆದೋರಿ ನಿಂದಂತೆ
ತೊಡಗಿದಂ ಜಪಿಸಲುಂ ಪಂಚಾಕ್ಷರಿಯುನಲ್ಲಿ

ನಡುಗುತಿರೆ ಹರಿಯುಜರ್ಸುರಾವಳಿಗಳಂತಲ್ಲಿ
ಹೃದಯದೊಳಗೀಶ್ವರನ ಕೊರಳಗರಳವ ನೆನೆದು
ಸದಮಳ ಮನಂ ಚಿತ್ತದೊಳ್ ಭಕ್ತಿಯಿಂ ನೆನೆದು

ಪಂಚಾಕ್ಷರಿ ರಸದ ಲಹರಿಯೊಳ್ತೀಂಕಾಡೆ
ಪಂಚಮುಖ ಶರಣೆನುತೆ ಕಡು ನಿಷ್ಠೆ ಕೈಗೂಡೆ
ಶ್ರೀ ರುದ್ರ ಜಪದಿಂದೆ ಶ್ರೀರುದ್ರನಂಜುತ್ತೆ
ತಾ ರೌದ್ರದಿಂದೆ ಜಪಿಸುವ ನಿಷ್ಠೆಯೊಳಗಿಂತೆ
ಕಣ್ಮುಚ್ಚಿ ನೆರೆ ನಚ್ಚಿ ಮೆಚ್ಚಿ ಜಪಿಯಿಸುತಿರ್ದ
ಉಣ್ಮನಾನಂದದಿಂ ನಿಂದು ಜಪಿಯಿಸುತಿರ್ದ
ಅತ್ತಿತ್ತ ಜಾರದಚಲಂ ಜಪಿಯಿಸುತಿರ್ದ
ಉತ್ತಮ ಪದಾರೂಢನೊಲ್ದು ಜಪಿಯಿಸುತಿರ್ದ
ಅಪ್ರತಿಮನಾನಂದಮೂರ್ತಿ ಜಪಿಯಿಸುತಿರ್ದ
ಅಪ್ರತಿಹತ ಪ್ರಬಳಕೀರ್ತಿ ಜಪಿಯಿಸುತಿರ್ದ
ಭಕ್ತಚಿಂತಾಮಣಿಯು ತಾನು ಜಪಿಯಿಸುತಿರ್ದ
ಅಮ್ಮಮ್ಮ ರುದ್ರಪಶುಪತಿಯೆ ಜಪಿಯಿಸುತಿರ್ದ

ಇಂತು ಜಪಿಯಿಸುತಿರಲ್ ಜಲಚರಂಗಳ್ಕದರ್ಕೆ
ಪಿಂತೆ ಮುಂತೆನ್ನದಾ ಜಲಚರಂಗಳ್ಕದರ್ಕೆ
ಅಳಿಯದಳುಕದೆ ಹದಿರದಲ್ಲಿ ಜಪಿಸುತ್ತಿರಲ್
ಸುಳಿದು ತನುವೆಲ್ಲಮಂ ತೆಗೆಯೆ ಜಪಿಸುತ್ತಿರಲ್
ಎಲ್ವಳಿಯಲೆಲ್ಲವಂ ಜಲಚರಂಗಳ್ಕೊಳಲ್
ಚೆಲ್ವಗೆಡಿಸುತ್ತವಯವಂಗಳೊಳಗಂ ಕೊಳಲ್
ಅಸ್ತಿಯುಳಿದುದು ಪುಣ್ಯರೂಪು ತಾನೆಂಬಂತೆ
ಅಸ್ತಿಮಾಲಾಧರಂಗರ್ಪಿತವಿವೆಂಬಂತೆ
ಆಯು ತೀರ್ದೊಡೆ ನಿಷ್ಠೆ ತೀರಲೀಯದೆ ಪಿಡಿಯೆ
ಕಾಯವಳಿದೊಡೆ ಮನಂ ನೇಹವಾರದೆ ಪಿಡಿಯೆ
ಅಲ್ಲಿ ತಮ್ಮಯ ಪದವಿಗಂಜಿ ದೇವರ್ಕಳುಂ
ಅಲ್ಲಿ ತಮತಮಗಂಜಿ ದೇವರ್ಕಳುಂ
ಅಲ್ಲಿ ಭಕ್ತಂ ದೇಹ ಮೋಹಮಂ ತಾನರಿಯ
ಅಲ್ಲಿ ಭಕ್ತಂ ಬಯಸುವರ್ತಮಂ ತಾನರಿಯ
ಎಳಿಸುವನೆ ಶಿವಭಕ್ತನಜವಿಷ್ಣು ಪದವಿಯಂ
ಎಳಿಸುವನೆ ಭಕ್ತಿಯಲ್ಲದೆ ಕೆಡುವ ಪದವಿಯಂ

ಎಂಬ ಪುಣ್ಯಕ್ಕೆ ನೆಲೆಯಾಗಿ ಜಪಿಯಿಸುತಿರಲ್
ನಂಬಿ ಕೆಲವುಂ ಕಾಲವಿಂತು ಜಪಿಯಿಸುತಿರಲ್

ಜಪಿಯಿಸುವ ಸಾಮರ್ಥ್ಯವೈದಿತ್ತಾ ರುದ್ರನಂ
ಕಪಟವಿಲ್ಲದ ಮೋಹದಲ್ಲಿ ಕರುಣಾಳ್ದನಂ
ಪರಿದೆಯ್ದದಿರಬಾರದೆಂದು ಕರುಣಾಕರಂ
ಗಿರಿಜೆಯೊಡನುಡಿದನೆಂದುಂ ಚಂದ್ರಶೇಖರಂ
ಅಂದಿಗೆ ಮಹಾವಿಷಂ ಕಂಠಭೂಷಣವಾಯ್ತು
ಇಂದಿವನ ಪ್ರೇಮಲತೆ ಕೊರಲಪಾಶಮುದಾಯ್ತು
ನಡೆ ಗಿರಿಜೆ ನೋಡುವ ಎನ್ನ ಭಕ್ತನನೆಂದು
ಮೃಡನಲ್ಲಿ ಬರುತಿರ್ದನೀ ಧರೆಗೆ ಪೊಸತೆಂದು
ಬರುತಲ್ಲಿ ಗಿರಿಜೆಯುಂ ಕಾಣದಂತಿರಿಸಿದಂ
ಚರಿತದಿಂ ತಾನೊಂದು ವೇಷಮಂ ಧರಿಸಿದಂ
ಧರಿಸುತಂ ಭಕ್ತಿವಾರ್ಧಿಯ ತಡೆಯೊಳಂ ನಿಂದು

ಹರನೊಲ್ದು ನುಡಿದನಾ ರುದ್ರಪಶುಪತಿಗಂದು
ಎಲೆ ಭಕ್ತ ನೀನೇಕೆ ನಡುನೀರೊಳಿರ್ದಪೇ
ಜಲಧಿಯೊಳ್ಮಾಳ್ಪ ತಪವಾವುದೇಕಿರ್ದಪೇ
ಪೇಳೆನಲ್ ಶಂಕರನ ಕೊರಲ ಗರಳಮಂ ನಿಂದು
ಕೇಳಿ ಪರಿಹರಿಸಿದಲ್ಲದೆ ಚಲಿಸೆ ನಾನೆಂದು
ನುಡಿಯಲಟ್ಟಾಸುರಂ ಮಸಗಿ ನಕ್ಕಂ ಭಕ್ತ
ಒಡನೊಡನೆ ಕಟಕಿಗಳನಾಡುತಿರ್ದಂ ಭಕ್ತ

ಎಲೆ ಶಿಶುವೆ ನೀನೇ ಮಹಾ ಗರಳಮಂ ಕಳೆವೆ
ನೆಲದೊಳಗೆ ಮುನ್ನವಿಂತಪ್ಪ ವಾರ್ತೆಗಳೊಳವೆ
ಬಿಡಿಸುವೆಂ ಬೇರುಂಟದಂ ಬಿಡಿಸಲೇತಕ್ಕು
ಮೃಡನುಂಡ ಗರಳವಾಗಳೆ ಹೋದುದಕ್ಕಕ್ಕು
ಗರಳ ಒಂದೇ ಹರಂ ಧರಿಸಿರ್ಪುದದು ನೋಡು
ಮರುಳಾಗದಿರು ನಿನ್ನ ವಶವಲ್ಲ ಬಿಟ್ಟೋಡು
ಕೆಯ್ಯ ತಲೆಯುಂ ಬಿಡಿಸು ಕೊಟ್ಟ ಹಾವಂ ಬಿಡಿಸು

ಮೆಯ್ಯೊಳ್ಸರಂಗೊಂಡ ಸುರರ ಸಿರಮಂ ಬಿಡಿಸು
ತಿಸುಳಮಂ ಬಿಡಿಸಿ ಕಳೆ ಗಜಚರ್ಮವಂ ಬಿಡಿಸು
ಎಸೆವ ಶೂಲದೊಳಿರ್ಪ ಹರಿಯ ಹೆಣನಂ ಬಿಡಿಸು
ನೀನೇಕೆ ವಿಷವೇಕೆ ಬಿಡಿಸುವಾಯಸವೇಕೆ
ನೀನೇಕೆ ಹರನೇಕೆ ಪೊರಮಡಾಯಸವೇಕೆ.

ಎನೆ ರುದ್ರ ಪಶುಪತಿಗಳಲ್ಲಿ ಸುರ್ರನೆ ಸುಯ್ದು
ಎನಗೇಕೆ ರುದ್ರಜಪ ಒಪ್ಪದೆನುತಂ ಬಯ್ದು
ವಿಷದ ಹವಣಲ್ಲಮೀ ನಿಂದೆ ಬಂದಿರ್ಪುದು
ಪಶುಪತಿಯೆ ಕರುಣಿಸೆನಗಿಂತಿದೇಕಾದಪುದು
ಮುನ್ನಮೀ ನಿಂದೆಯಂ ತೀರ್ಚಿಕೊಂಬೆಂ ಬಳಿಕ
ಎನ್ನ ಶಂಕರನ ವಿಷಮಂ ಬಿಡಿಸುವೆಂ ಬಳಿಕ
ಎಂದು ನುಡಿವುತ್ತಿರಲ್ಕತ್ತೆ ಕಟಕಿಯನಾಡೆ
ನೊಂದು ಘುಡಿಘುಡಿಸಿ ಘೂರ್ಮಿಸುವ ಕೋಪಂ ಮೂಡೆ
ಶರಧಿ ಇರ್ಬಗೆಯಾಗಲಾ ಸ್ಫೋಟಿಸುತೆ ಹೊಯ್ದು
ಹರನಿಂದೆಯಂ ಕೇಳಲಾರದೆ ಕರಂ ಕಾಯ್ದು
ಕೈಸಾರ್ದ ತಪವನೀಶ್ವರನಲ್ಲಿ ಬಿಡುವಂತೆ
ಮೈಸಾರ್ದ ನಿಷ್ಠೆಯಂ ರುದ್ರಂಗೆ ಕೊಡುವಂತೆ
ಬಿಡು ಬಿಡು ವಿಷವನೆಂದು ಮಂತ್ರಿಸುತ್ತಿಡುವಂತೆ
ಮೃಡನ ಚರಣಕ್ಕೆ ಸಲಿಲಾಂಜಲಿಯನಿಡುವಂತೆ
ಎಲೆಲೆ ಶಿವನಿಂದಕನೆ ಅಡಗಡಗೆನುತ ಮೇಲೆ
ಜಲವನಭಿಮಂತ್ರಿಸುತ್ತಿಟ್ಟನಾತನ ಮೇಲೆ

ಇಡೆ ಶಿವಂ ಸತ್ಯದುರವಣೆಯ ನೇಹಕ್ಕಂಜಿ
ಕಡು ಹೊಸತೆನುತ್ತೆ ವೇಷವ ಬಿಟ್ಟನಂದಂಜಿ
ಆವನಾದೊಡೆ ಏನು ಕೃತ್ಯಮಂ ಗೆಲ್ವುದೇ
ದೇವನಾದೊಡೆ ಏನು ಸಟೆ ದಿಟಕೆ ನಿಲ್ವುದೇ
ವೇಷಮಾಗಳೆ ಹಾರಿ ಹೋದುದೀಶ್ವರಸಿರ್ದ
ಆಸುರದ ದಶಭುಜಂ ಪಂಚವಕ್ತ್ರದೊಳಿರ್ದ

ಇಂದುಕಳೆ ಜಡೆ ಕುಂಡಲಂಗಳಿಂದೊಪ್ಪಿರ್ದ
ಅಂದು ನಗೆಮೊಗದಗಜೆಯಿಂದೆ ಮೆರೆವುತ್ತಿರ್ದ

ಇರೆ ಕಂಡು ರುದ್ರಪಶುಪತಿಗಳಚ್ಚರಿವಟ್ಟು
ಹರನ ನಿಲವೆಂದರಿದು ಹರ್ಷಮಂ ಮುಂದಿಟ್ಟು
ಬಿಡುಬಿಡೆನ್ನಾಣೆ ಹಿರಿಯಾಣೆ ನಿನಗೆಂದೆನುತೆ
ಬಿಡುಬಿಡು ವಿಷವನುಣ್ಬರೇ ಸದಾಶಿವ ಎನುತೆ
ಶರಧಿಯುಂ ಪೊರಮಟ್ಟು ಗಳಗಳನೆ ನಡೆತರಲ್
ಹರನ ಕೊರಳೊಳಗಲ್ಲಿ ವಿಷವಿಲ್ಲದಂತಿರಲ್
ಎಲೆ ತಂದೆ ವಿಷವೆಲ್ಲಿ ಯಾವ ಕೆಯ್ವೊಳ್ಪಿಡಿದೆ
ಎಲೆ ತಂದೆ ಹೇಳೆನಗೆ ಕೊರಳೊಳೇಕೈತಂದೆ
ತಾಯೇ ಮಹಾದೇವಿ ಸ್ಥೈರಿಸುವರೇ ಅವ್ವ
ತಾಯೆ ನಿನ್ನೋಲೆ ಕಲ್ಲೋಲೆಯುಪ್ಪುದೆಯುವ್ವ
ಎಲ್ಲಿ ವಿಷವಂ ತೊಡದೆ ಕೊರಲೊಳೇಕೆಂದೆನುತೆ
ಅಲ್ಲಿ ಮುಟ್ಟಿತ್ತುಂ ನಮಶ್ಶಿವಾಯೆಂದೆನುತೆ
ಪಂಚಾಕ್ಷರಿಗಳಿಂದೆ ಮತ್ತಲ್ಲಿ ಮಂತ್ರಿಸುತೆ

ಪಂಚವದನಂ ಕಂಡು ಕಡು ಹಿಗ್ಗುತಂ ನಿಲುತೆ
ಕೆಯ್ಯುಮುಂ ಕೊರಳುಮುಂ ವಾಸಿಸಿಯೆ ನೋಡುತ್ತೆ
ಒಯ್ಯನೊಯ್ಯನೆ ನಾಲಿಗೆಯೊಳೀಂಟೆ ನೋಡುತ್ತೆ
ಒಂದು ಚೋಹಕ್ಕೆ ಬರ್ದುಕಿದೆ ತಂದೆ ಸಾಕಯ್ಯ
ಎಂದು ಇಂತಪ್ಪುದಂ ಮಾಡದಿರು ಕಂಡಯ್ಯ
ಇನ್ನಗಲೆನೊಂದುವಂ ಮಾಡಲಿಯ್ಯೆಂ ನೋಡ
ಇಸ್ನಿವರ ವಶವಶವೆ ನಿನ್ನಂ ಬಿಡೆಂ ನೋಡ
ಹರಿಯಾಯುಮಜನಾಯು ಸುರರಾಯು ನಿನಗೆಂದು
ಧರೆಯಾಯು ಅಮರಮುನಿತತಿಯಾಯು ನಿನಗೆಂದು
ಹರಿಸುತಿರೆ ಮುಂದಿರ್ದ ರುದ್ರಪಶುಪತಿಗಳಂ
ಹರುಷದಿಂ ನೋಡುತುಂ ನೇಹ ರಸ ಪರಿಗಳಂ
ಮೊಗದೊಳಗೆ ಕೆಯ್ಯಿಟ್ಟು ತಲೆದೂಗಿ ಬೆರಗಾಗಿ
ಆಗಜೆ ನೋಡೆನ್ನ ಸದ್ಭಕ್ತನ ನೆನುತ ಬೇಗಿ

ಮೆಯ್ಯೆಲ್ಲವಂ ಮುಟ್ಟಿ ಮುಟ್ಟಿ ತಲೆದಡವುತುಂ
ಮೆಯ್ಯಿಂದಲವಯವಂಗಳ ನೋಡಿ ತಡವುತುಂ
ಜಲಚರಂಗಳ್ಕದುಕೆ ಚಲಿಸದಿರ್ದವರುಂಟೆ
ತಲೆಯುಳಿಯೆ ಎಲುದೋರೆ ನಿಂದಿರ್ದರಿಂತುಂಟೆ
ನೋಡೆನಗೆ ಶ್ರೀ ರುದ್ರವುಂ ಜಪಿಸಿದವರುಂಟೆ
ನೋಡು ನಂದೀಶ ಕಡು ಮೋಹಿತರ್ಪೇರರುಂಟೆ
ಎನೆ ಹರಿಯುಜರ್ತಲೆಗಳಂ ನೀವಿಕೊಳುತಂದು
ತನತನಗೆ ಪದವಿ ಬರ್ದುಕಿದೆವೆನುತ್ತೈಯ್ತಂದು
ಪೊಡಮಡುತೆ ನಿಂದಿರಲ್ಪೂಮಳೆಗಳೆರಗಿದವು
ಪೊಡವಿ ನಡುಗಲ್ದುಂದುಭಿ ಧ್ವಾನಮುಣ್ಮಿದವು

ಆಗಳೀಶ್ವರನಲ್ಲಿ ಗಿರಿಜೆಯ ಮೊಗಂ ನೋಡಿ
ಏಗೆಯ್ಯರೆನ್ನವರೆನುತ್ತೆಯೊಲವಿಂ ನೋಡಿ
ಎನ್ನನಲ್ಲದೆ ನೋಡರೆನ್ನ ಭಕ್ತಗಿರಿಜೆ
ಎನ್ನನಲ್ಲದೆ ಬಯಸರೆನ್ನ ಭಕ್ತಗಿರಿಜೆ
ಆನವರ್ಗೆನಗವರೆ ಭೇದವೆನಗಿನಿತಿಲ್ಲ
ಈ ನೆಲದೊಳೆನ್ನವರ್ಗೆಣೆ ಇಲ್ಲ ಹೊಣೆ ಇಲ್ಲ

ಎಂದು ನವರತ್ನದ ವಿಮಾನವಂ ತರಿಸಿದಂ
ಬಂದು ಶ್ರೀ ಕೈಲಾಸಪುರದೊಳವತರಿಸಿದಂ
ರುದ್ರಪಶುಪತಿಗಳ್ಗೆ ಗಣಪದವಿಯುಂ ಕೊಟ್ಟು
ರುದ್ರನೊಪ್ಪಿದನಲ್ಲಿ ಹರುಷಮುಂ ಮುಂದಿಟ್ಟು
ಸಕಲ ಗಣಸಂಕುಳದೊಳಪ್ರತಿಮನೊಪ್ಪಿದಂ
ಸಕಳ ಸುರ ಮುಕುಟರಂಜಿತಚರಣನೊಪ್ಪಿದಂ
ಶಶಿಧರಂ ಶಂಕರಂ ವಿಷಮಾಕ್ಷನೊಪ್ಪಿದಂ
ವಿಷಧರಂ ಸ್ಮರಹರಂ ಪುರಹರಣನೊಪ್ಪಿದಂ
ಆದಿಮಧ್ಯಾಂತ ಶೂನ್ಯಂ ಶಂಭುವೊಪ್ಪಿದಂ
ನಾದರೂಪಂ ವೇದವಿಸ್ತಾರನೊಪ್ಪಿದಂ
ಸರ್ವಗತನೊಪ್ಪಿದಂ ಸರ್ವೇಶನೊಪ್ಪಿದಂ
ಸರ್ವ ದೇವಪ್ರತಿಷ್ಠಾಚಾರ್ಯನೊಪ್ಪಿದಂ

೨೬

ನೀಳಗಳನೊಪ್ಪಿದಂ ನಿರ್ದೈವನೊಪ್ಪಿದಂ
ಭಾಳಾಕ್ಷ ಹಂಪೆಯಧಿನಾಥನಿಂತೊಪ್ಪಿದಂ ॥

**ಕಂದ—** ಕರಿಗೊರಲಂ ಕರುಣಂ ಮಿಗೆ
ಮೆರೆಯಿಸುತಂ ರುದ್ರಪಶುಪತಿಗಳಂ ಧರೆಯೊಳ್
ಮೆರೆದ ಮಹೇಶಂ ಭಕ್ತಿಯ
ನರುಪುಗೆಯೆನಗೊಲ್ದು ಹಂಪೆಯ ವಿರೂಪಾಕ್ಷಂ ॥



# ತಿರುನಾಳ್ವೊವರ ಮಹಾತ್ಮೆ.

**ಕಂದ—** ಹರನಘಕುಲ ಹರನಂತಕ ।
ಹರನತನುಹರಂ ಪಾಪೌಘ ಹರನಾರ್ಥ ಹರಂ
ದುರಿತಹರಂಮಿಗೆ ಮೆರೆದಂ
ತಿರುನಾಳ್ವೊವರನೆ ಹಂಪೆಯ ವಿರೂಪಾಕ್ಷಂ ॥

## ರಗಳೆ.

ಚೋಳನ ದೇಶದೊಳಂದೆಸೆವ ಪುರಂ
ಕೇಳೊಪ್ಪುತ್ತಿರ್ಪುದು ಪುಣ್ಯಕರಂ
ನಾಮಂ ಮೆರೆವ ದನೂರೆನಿಸಿಪ್ಪುದು
ಭೂಮಿಗೆ ತಾನೆ ವಿಚಿತ್ರವೆನಿಪ್ಪುದು
ಅಲ್ಲಿರ್ಪಂ ಸರ್ವೇಶನ ಭಕ್ತಂ
ಸಲ್ಲಲಿತಂ ಸತ್ಯಂ ಶಿವಯುಕ್ತಂ
ತಿರುನಾಳ್ವೊವರೆನಿರ್ಪುದು ನಾಮಂ
ಪುರಮಥನಂಗತ್ಯಂತ ಪ್ರೇಮಂ
ಹಿರಿಯ ಮಹೇಶ್ವರನೆಂದೆನಿಸಿರ್ಪಂ
ಹರನಾನಂದದೊಳಗೆ ಸಂದಿರ್ಪಂ
ಕುಲದೋಳ್ಕಿರಿಯಂ ಮನದೊಳ್ಪಿರಿಯಂ
ನೆಲದೋಳ್ಕಿರಿಯಂ ಪರದೊಳ್ಪಿರಿಯಂ

ಇಂತಿರ್ದೊಂದು ದಿನಂ ಚಿಂತಿಸಿದಂ
ಸಂತತ ತಿರುನಾಳ್ವೋಗಲ್ನೆನೆದಂ
ನಾಳೇನಂ ಮಾಡಿದೊಡಂ ಪೋಪೆಂ
ಶೂಲಿಯ ಪೊನ್ನಾಂಬಲಕಾಂ ಪೋಪೆಂ
ಇಂದಿರುಳೆಲ್ಲಂ ಚಿಂತೆಯೊಳಿರುತಂ
ಇಂದುಧರನ ತಿರುನಾಳೊಳಗಿರುತಂ
ಬೆಳಗಾಗಲ್ಸಾಸಿರ ಕೆಲಸಂ ಬರೆ
ತಳವೆಳಗಾದಂ ಪಾರ್ವಂ ಬಂದಿರೆ
ಇಂದಿನ ಕೆಲಸವನೀಗಳೆ ಮಾಳ್ಪೇಂ

ಕುಂದದೆ ನಾಳೆಲ್ಲವ ನಾಂ ಮಾಳ್ಪೆಂ
ಎಂದಿಂತೆನುತಿರೆ ಮರುದಿನಕೆಲ್ಲಂ
ಕುಂದದೆ ಕೆಲಸಂ ಬರುತಿರಲೆಲ್ಲಂ

ನಿಚ್ಚಂ ನಾಳೆಂಬಚ್ಚರವಿಡಿದುದು
ನಿಚ್ಚಲಿ ತಿರುನಾಳಾರ್ಥಂ ಪಿಡಿದುದು
ಕೇಳ್ವುದು ಕಳೆ ನೆನೆವುದು ಪೊನ್ನಾಂಬಲ
ಬಾಳ್ವುದು ತನು ಬದುಕಂ ಪೊನ್ನಾಂಬಲ
ಉಂಬುದು ಕೈ ಕಾಣ್ಬುದು ಪೊನ್ನಾಂಬಲ
ಕೊಂಬುದು ತನು ಹರುಷಂ ಪೊನ್ನಾಂಬಲ
ಇರ್ಪುದು ಮನೆ ನೆನೆವುದು ಪೊನ್ನಾಂಬಲ
ಬರ್ಪುದು ಪೋಪುದು ನೆರೆ ಪೊನ್ನಾಂಬಲ
ಇರವುಂ ಪುರವುಂ ತಿರುನಾಳಾದುದು
ನೆರವುಂ ಬರವುಂ ತಿರುನಾಳಾದುದು
ಪಿತನುಂ ಪತಿಯುಂ ತಿರುನಾಳಾದುದು
ಗತಿಯುಂ ಮತಿಯುಂ ತಿರುನಾಳಾದುದು
ತಿರುನಾಳಿಂ ಬಪ್ಪವರಂ ಕಂಡರೆ
ಹರಣಂ ಬಂದಂದದೆ ಸುಖವಿಡಿದಿರೆ
ಕಾಲಂ ಕಣ್ಗಳೊಳೊತ್ತುತ್ತಿರ್ಪಂ
ನಾಲಿಗೆಯೊಳ್ತಿರುನಾಳೆನುತಿರ್ಪಂ
ಕನಸಿನೊಳಂ ತಿರುನಾಳೆನುತಿರ್ಪಂ
ಉಂಬುವಡುಡುವಡೆ ತಿರುನಾಳೆಂಬಂ
ಕೊಂಬಡೆ ಕೊಡುವಡೆ ತಿರುನಾಳೆಂಬಂ
ಕರೆವೊಡೆ ನೆರೆವೊಡೆ ತಿರುನಾಳೆಂಬಂ
ತಿರುನಾಳ್ತಿರುನಾಳ್ತಿರುನಾಳೆಂಬಂ

ಇಂತಿರೆ ಪನ್ನೆರಡುಂ ವತ್ಸರಮುಂ
ಸಂತತ ತಿರುನಾಳೆನುತಿರ್ಪಿರವುಂ
ತಿರುನಾಳಾಗಿಯೆ ನೆರೆ ಕೈಕೊಂಡಂ

ಪರಮೇಶಂ ಕರುಣಿಸಿ ಕೈಕೊಂಡಂ
ಇರಲಿರುಳಾಗಲ್ಮನೆಗೆಯ್ತಂದಂ
ಭರದಿಂ ಸುರ್ರನೆ ಸುಯ್ದಿಂತೆಂದಂ
ದೇವಾ ಇನ್ನಿನಿತಿಲ್ಲಿಯೆ ಸಾವೆನೆ
ದೇವಾ ತಿರುನಾಳ್ಕಾಣದೆ ಬೇವೆನೆ
ಅಯ್ಯೋ ಶಿವನೇ ಕರುಣಿಸು ಕರುಣಿಸು
ಅಯ್ಯೋ ಪೊನ್ನಾಂಬಲನೇ ಕರುಣಿಸು
ಎಂದಿಂತಾತಂ ಚಿಂತಾತುರಮಂ
ಸಂದಿಸೆ ಸುಮ್ಮನೆ ನಿದ್ರೆಗಳಿರಮಂ

ಕೊಂಡಿರುತಿರಲಾ ಯುಗ್ಗಾ ದಿವಸಂ
ತಂಡವೆ ಪೊನ್ನಾಂಬಲಕಾ ಕೆಲಸಂ
ಪಂಗುನಿ ತಿರುನಾಳ್ಗಂ ನೆಲ್ಲಡಕುವ
ಹಿಂಗದೆ ಪೊನ್ನಾಂಬಲಕಂದೆಯ್ದುವ
ಹರನಲ್ಲಿಗೆ ನೆರೆ ಬಿಟ್ಟಿಗಳಾದವು
ತಿರುನಾಳ್ಪೋವರ ತುಷ್ಟಿಗಳಾದವು
ಬೆಳಗಾಗಲ್ಪೂರ್ವಂ ನಡೆತಂದಂ
ಕಳಿಪುವ ಭರದಿಂ ಕರೆದಿಂತೆಂದಂ
ಏಳೇಳ್ತಿರುನಾಳ್ಪೋವನೆ ಬಾರೆನೆ
ಏಳೇಳ್ಕೆಲಸಂ ಬಂದುದು ಬಾರೆನೆ
ಅಯ್ಯೋ ಕೆಲಸಂ ಕುಂದದೆ ಹೋದುದೆ
ಅಯ್ಯೋ ತಿರುನಾಳೆನಗಿಲ್ಲಾದುದೆ
ಎನಲೇಳೆಲವೋ ಪೊನ್ನಾಂಬಲಕಂ
ನಿನಗಾದುದು ಬಿಟ್ಟಿಯುಮೀ ದಿನಕಂ

ಎಂದೆನೆ ಪಟ್ಟಿರ್ದವನೆಳ್ದಾಗಲ್
ಸಂದಣಿಸಿದ ಪುಳಕಂಗಳೊಳಾಗಲ್
ಹೊರಳುತ್ತುರುಳುತೆ ಬೊಬ್ಬಿರಿದಾಡುತೆ
ಅರಳುತ್ತುರ್ಬುತ್ತೊಲವಿಂದಾಡುತೆ
ಏನೇನೆಂತೋ ಪೊನ್ನಾಂಬಲಕಂ

ಆನೆಯು ಬಿಟ್ಟಿಯು ಪೊನ್ನಾಂಬಲಕಂ
ಆಹಾ ಆಹಾ ಪೊನ್ನಾಂಬಲಕಂ
ಓಹೋ ಓಹೋ ಪೊನ್ನಾಂಬಲಕಂ

ಎನುತುಂ ತೊನೆಯುತ್ತಂ ಕೂಗುತ್ತಂ
ಮನೆಯಂ ಹಿರಿಹಿರಿದಾಡಾಡುತ್ತಂ
ಮತ್ತಂ ಮಗುಳ್ದು ಕೇಳುತೆ ಬಾಳುತೆ
ಸುತ್ತಂ ಸುಳಿವುತ್ತಂ ಪುಟವೇಳುತೆ
ನಡೆ ನಡೆ ಹೊರಿಸಯ್ಯಾರೇಳೆಂಟಂ
ತಡವೇಕೆಂದೆನುತೀಶನ ಬಂಟಂ
ನಲಿವುತೆ ಕೆಲೆವುತೆ ಕುಕಿಲಿರಿದಾಡುತೆ
ಮಲೆಯುತೆ ಮೂಡುತೆ ದಿಟ್ಟಿಸಿ ನೋಡುತೆ
ಪೊನ್ನಾಂಬಲದತ್ತಂ ನಡೆ ನೋಡುತೆ
ಇನ್ನಾಂ ಬರ್ದುಕಿದೆನೆನುತೊಲಿದಾಡುತೆ
ಪೇರಂಬಲಮಂ ಗುಂಕಿಸಿ ನೋಡುತೆ
ಹಾರೈಸುತೆ ಹಾರುತ್ತಂ ನೋಡುತೆ
ಶಿವಭಕ್ತಿಯು ಬಿತ್ತಂ ಪೊರುವಂದದಿ
ಭವನಿಷ್ಠೆಯು ಬರವಂ ಪೊರುವಂದದಿ
ತಿರುನಾಳಂ ತಲೆಗೇರಿಸುವಂದದಿ
ಹರಪದಮಂ ಶಿರದೊಳ್ಪೊರುವಂದದಿ
ಧರಿಸಿದನೊಂದೆರಡುಂ ಮೂಡೆಗಳಂ
ಹರಹರ ಶಂಕರನ ಕ್ರೀಡೆಗಳಂ
ಬಿಟ್ಟಿಗಳೊಡ ನಲವಿಂ ನಡೆಗೊಂಡಂ
ನೆಟ್ಟನೆ ಶಿವಭಕ್ತಿಯುನೊಳಕೊಂಡಂ

ಸಾವಿರ ಮೂಡೆಗಳೆತ್ತಿದುವಾಗಳ್
ಓವದೆ ನಡೆದವು ನಲವಿಂದಾಗಳ್
ಅವರೊಳಗಾಡುತೆ ಪಾಡುತೆ ಬರ್ಪಂ
ಶಿವಶಿವ ತಿರುನಾಳೆಂದೆನುತಿರ್ಪಂ
ಸಿರಿ ಪರುಕಂಗಳ್ತ್ಯಣದಿಂ ಕಷ್ಟಂ

ಸುರುತರುಗಳ್ಪಲ್ಮರನಿಂ ಕಷ್ಟಂ
ಚಿಂತಾಮಣಿಯುಂ ಬಗೆಯುಂ ಮನದೊಳ್
ಚಿಂತಿಪನೇ ಮತ್ತೊಂದಂ ಮನದೊಳ್
ತಿರುನಾಳನುರಾಗವೆ ತಲೆದೋರುತೆ
ತರತರದಿಂ ಬಿಟ್ಟಿಗಳೊಳ್ನಡೆವುತೆ

ಮುಂದಕ್ಕುಬ್ಬುಬೆಂದೋಡುತೆ ನಿಲುತುಂ
ಹಿಂದಕ್ಕೈತಂದಳ್ತಿಗೆ ಸಲುತುಂ
ನಡುವಡ್ಡಂ ತಿಕಟಂ ಪರಿದಾಡುತೆ
ತುಡುಂ ತುಡುಂ ದಂದಣ ಎಂದಾಡುತೆ
ಆನೇ ತಿರುನಾಳೇ ಶಿವಶಿವಶಿವ
ಆನೇ ಪೊನ್ನಾಂಬಲಮೇ ಶಿವಶಿವ
ತಿರುನಾಳ್ಪೋವನೆ ಬರ್ದುಕಿದೆನೆನುತುಂ
ತಿರುನಾಳಂ ಕಂಡದು ದಿನವೆನುತುಂ
ಎಲೆ ಕಾಲ್ಗಳಿರ ಬರ್ದುಕಿದಿರೆನುತುಂ
ಎಲೆ ಕೆಯ್ಗಳಿರ ಬರ್ದುಕಿದಿರೆನುತುಂ
ಎಲೆ ಕಣ್ಗಳಿರಾ ನಲವಿಂ ನೋಡಿರೆ
ಎಲೆ ಕಿವಿಗಳಿರಾ ಒಲ್ದು ಕೇಳಿರೆ
ಎಲೆ ಮನವೇ ಫಲವಾದೆಯು ಎನುತುಂ
ಎಲೆ ತನುವೇ ಪುಳುಕಿಸು ನೀನೆನುತುಂ
ತನ್ನಂ ತಾನೇ ಬರ್ದುಕಿದೆನೆನುತುಂ
ತನ್ನಂ ತಾನೇ ವಂದಿಸಿಕೊಳುತುಂ
ಬರೆವರೆ ಪೊನ್ನಾಂಬಲವದು ತೋರಲ್

ಬರೆವರೆ ನಿಸ್ಸಾಳ ಧ್ವನಿ ಮೀರಲ್
ಶಿವಶಿವಶಿವಶಿವ ಹರಹರಹರಹರ
ಭವದೂರನೇ ಭಾಳಾಕ್ಷನೆ ಎನುತುಂ
ಆಹಾ ಆಹಾ ಕಲಶಂ ತಾನದೆ
ಆಹಾ ಆಹಾ ವೃಷಭಧ್ವಜವದೆ
ಶಿವಧೋ ಶಿವಧೋ ಪರಮಾನಂದವೆ

ಶಿವಧೋ ಶಿವಧೋ ಹರನಾನಂದವೆ
ಎನುತುಂ ಕೆಲನರಿಯದೆ ಬಲನರಿಯದೆ
ಎನುತುಂ ನೆಲನರಿಯದೆ ಹೊಲನರಿಯದೆ
ಅಚ್ಚರಿಯಾನಂದವನೇನೆಂಬೇಂ
ಪೆಚ್ಚಿದ ನೇಹವನದನೇನೆಂಬೇಂ
ಇಂತೀ ತೆರದಿಂ ಬರುತಿರಲಿತ್ತಲ್

ಸಂತತ ತಿರುನಾಳ್ಪಸಗಿದುದತ್ತಲ್
ಜಗದಗಲದ ಮುತ್ತಿನ ಮಂಟಪದೊಳ್
ದಿಗದಿಪರೀಣ್ದೆಸೆಗಾಂತಿರೆ ಭುಜದೊಳ್
ಗಗನದ ಮೇಲ್ಕಟ್ಟುಂ ದಟ್ಟಯಿಸಲ್
ಮಿಗೆ ಭಕ್ತರ ಜಯರವವಟ್ಟಯಿಸಲ್
ಪೊರವಟ್ಟಂ ಪೊರವಟ್ಟಂ ಶರ್ವಂ
ಪೊರವಟ್ಟಂ ಭೂಮಿಗೆ ತಾನೊರ್ವಂ
ಕೆಲಬಲದೊಳ್ಗಣಸಂತತಿ ಮಸಗಲ್
ನೆಲದೊಳ್ನಭದೊಳ್ ದುಂದುಭಿ ಮಸಗಲ್
ಚಾಮರ ಸೀಗುರಿಗಳ್ಕುಣಿದಾಡಲ್
ವ್ಯೋಮದ ವೃಷಭಧ್ವಜವಲ್ಲಾಡಲ್
ಕೋಟಾಕೋಟಿ ಸ್ತುತಿಗಳ್ಪಸಗಲ್
ಕೋಟಾಕೋಟೀ ಛತ್ರಂ ತೆರಳಲ್
ಆನೆಯ ಮೇಲಣ ಕಹಳೆಗಳೊಗೆದವು
ನಾನಾ ವರ್ಣದ ಬಿರುದಿಂ ನೆಗಳ್ದವು
ಬಂದಂ ಬಂದಂ ದೇವರ ದೇವಂ
ಬಂದಂ ದೇವರ ಗಂಡಂ ದೇವಂ
ಬಂದಂ ಪುರಮಥನಂ ನಡೆತಂದಂ
ಬಂದಂ ಸ್ಮರಮಥನಂ. ನಡೆತಂದಂ
ಬಂದಂ ಭಕ್ತವ್ರಜ ನಿಜವರದಂ
ಬಂದಂ ಶರಣಾವಳಿಯೊಳ್ನೆರೆದಂ
ಎಂದಲ್ಲಲ್ಲಿಯ ಕಹಳೆಗಳೊಗೆಯಲ್
ಬಂದಲ್ಲಲ್ಲಿಯ ಚೋಳರ್ನೆರೆಯಲ್

ಮನುಷ್ಯನಲ್ಲಿ ಸ್ಥೂಲ, ಸೂಕ್ಷ್ಮ, ಕಾರಣವೆಂಬ ಶರೀರಗಳಿದ್ದು, ಇವುಗಳಲ್ಲಿ ಅನುಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಇರುತ್ತವೆ. ಇಷ್ಟಲಿಂಗವು ಸ್ಥೂಲದೇಹಕ್ಕೆ ಸಂಬಂಧಪಟ್ಟಿರುತ್ತದೆ. ಆದ್ದರಿಂದ ಮನುಷ್ಯನು ಮಾಡುವ ಬಾಹ್ಯಕ್ರಿಯೆಗಳನ್ನೆಲ್ಲ ಇಷ್ಟಲಿಂಗದಲ್ಲಿ ಸಂಬಂಧಿಸಬೇಕು. ಪ್ರಾಣಲಿಂಗವು ಮನಸ್ಸಿನ ವ್ಯಾಪಾರಗಳಿಗೆ ಸಂಬಂಧಪಟ್ಟದ್ದದೆ. ಆದ್ದರಿಂದ ಮನಸ್ಸಿನ ಕಾರ್ಯಗಳನ್ನೆಲ್ಲ ಪ್ರಾಣಲಿಂಗಕ್ಕೆ ಅರ್ಪಿಸತಕ್ಕದ್ದು. ಹೀಗೆ ಈ ವ್ಯಾಪಾರಗಳನ್ನು ಅರ್ಪಿಸುವದರಿಂದ ಉಂಟಾದ ಪರಿಣಾಮವು ಕಾರಣ ಶರೀರದ ಮೇಲೆ ಆಗುತ್ತದೆ. ಈ ಪರಿಣಾಮವು ಸರಿಯಾದ ರೀತಿಯಿಂದ ಜರಗಿದರೆ ಕಾರಣ ಶರೀರದಲ್ಲಿದ್ದ ಭಾವಲಿಂಗವು ಚೈತನ್ಯಪಡಹತ್ತುವದು. ಹೀಗೆ ಲಿಂಗದೊಡನೆ ವ್ಯವಹರಿಸುವವನಿಗೆ ಸಂಸಾರಿ ಎಂದೆನ್ನಲಿಕ್ಕೆ ಬರಲಾರದೆಂದು ವಚನಕಾರನ ಭಾವವು.

ಮನುಷ್ಯನು ಯಾವಾಗಲೂ ಹೊನ್ನು, ಹೆಣ್ಣು, ಮಣ್ಣು ಇವುಗಳಲ್ಲಿ ಆಸಕ್ತಿಯುಳ್ಳವನಾಗಿರುತ್ತಾನೆ. ಇವುಗಳನ್ನು ಅವನು ಅನುಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಅರ್ಪಿಸತಕ್ಕದ್ದು. ಮತ್ತು ಹೀಗೆ ಅರ್ಪಿಸಿದ್ದನ್ನು ಅವನು ಆರು ಲಿಂಗಗಳ ಮುಖಾಂತರವಾಗಿ ಅನುಭವಿಸಬೇಕೆಂದು ವಚನಕಾರನು ಹೇಳಿದ್ದಾನೆ.

ಈ ಆರು ಲಿಂಗಗಳು ಮನುಷ್ಯನ ಕರಣಗಳಿಗೆ ಸಂಬಂಧಪಟ್ಟವಿರುತ್ತವೆ. ಈ ಕರಣಗಳು ಯಾವವೆಂದರೆ ಘ್ರಾಣ, ರುಚಿ, ನೇತ್ರ, ಕರ್ಣ, ಸ್ಪರ್ಶ, ಸರ್ವೇಂದ್ರಿಯ ಎಂದು ಇರುತ್ತವೆ. ಇವುಗಳಿಗೆಲ್ಲ ಒಂದೊಂದು ಲಿಂಗವು ಸಂಬಂಧಪಟ್ಟಿದ್ದು ಅವುಗಳ ಮೂಲಕವಾಗಿಯೇ ಅವನು ತನ್ನ ಭೋಗ್ಯ ವಸ್ತುಗಳನ್ನು ಅನುಭವಿಸತಕ್ಕದ್ದು.

ಮನುಷ್ಯನ ದೇಹವು ಪಂಚಭೂತಗಳಿಂದ ಉಂಟಾಗಿದ್ದು ಪೃಥ್ವಿಯು ಘ್ರಾಣಕ್ಕೆ ಮತ್ತು ಅಪ್ಪು ರಸನೇಂದ್ರಿಯಕ್ಕೆ ಸಂಬಂಧಿಸಿರುತ್ತದೆ. ಇವುಗಳಲ್ಲಿ ಘ್ರಾಣೇಂದ್ರಿಯಕ್ಕೆ ಸಂಬಂಧಿಸಿದ ಲಿಂಗವು ಆಚಾರಲಿಂಗವು. ಮತ್ತು ರಸನೇಂದ್ರಿಯಕ್ಕೆ ಸಂಬಂಧಿಸಿದ ಲಿಂಗವು ಗುರುಲಿಂಗವು ಇದೆ. ಇವೆರಡೂ ಇಷ್ಟಲಿಂಗಕ್ಕೆ ಸಂಬಂಧಪಟ್ಟವು. ತೇಜವು ನೇತ್ರಕ್ಕೆ ಮತ್ತು ವಾಯುವು ಕರ್ಣಕ್ಕೆ ಸಂಬಂಧಿಸಿದ್ದಿರುತ್ತವೆ. ಇವುಗಳಲ್ಲಿ ನೇತ್ರೇಂದ್ರಿಯಕ್ಕೆ ಸಂಬಂಧಿಸಿದ ಲಿಂಗವು ಶಿವಲಿಂಗವು ಮತ್ತು ಕರ್ಣೇಂದ್ರಿಯಕ್ಕೆ ಸಂಬಂಧಿಸಿದ ಲಿಂಗವು ಜಂಗಮಲಿಂಗವು ಇದ್ದು ಇವೆರಡೂ ಪ್ರಾಣಲಿಂಗಕ್ಕೆ

ಸಂಬಂಧಪಟ್ಟವು. ಆ ಮೇಲೆ ಆಕಾಶವು ತ್ವಕ್ಕಿಗೆ ಸಂಬಂಧಿಸಿದೆ. ಇದರಲ್ಲಿ ಜಂಗಮಲಿಂಗವಿದೆ. ಈ ಪಂಚಕರಣಗಳನ್ನು ಒಳಕೊಂಡು ಅವುಗಳಿಗೆ ಮೀರಿದ್ದು ಸರ್ವೇಂದ್ರಿಯವೆಂಬುದಿದ್ದು ಇದರಲ್ಲಿ ಮಹಾಲಿಂಗವು ಇದೆ. ಈ ಎರಡೂ ಭಾವಲಿಂಗಕ್ಕೆ ಸಂಬಂಧಿಸಿವೆ. ಪಂಚಭೂತ ಶರೀರದಲ್ಲಿ ಅನುಭವಿಸಿದ ಪರಿಣಾಮಗಳೆಲ್ಲವೂ ಈ ಕಾರಣ ಶರೀರದ ಮೇಲೆ ಆಗುತ್ತವೆ.

ಈ ಸಕೀಲವನ್ನು ತಿಳಿದುಕೊಂಡು ಇಹಲೋಕದಲ್ಲಿರುವ ಸೌಖ್ಯಗಳನ್ನು ಮನುಷ್ಯನು ಮೂರು ಲಿಂಗಗಳಿಗೆ ಅರ್ಪಿಸಿ ಪಂಚಕರಣಗಳ ಮೂಲಕವಾಗಿ ಅವುಗಳನ್ನು ಅನುಭವಿಸತಕ್ಕದ್ದು. ಇದೇ ಲಿಂಗಭೋಗೋಪಭೋಗವೆನಿಸುವದು. ಹೀಗೆ ಅನುಭವಿಸಿದ್ದೇ ಪ್ರಸಾದವೆನಿಸುವದು.

ಪದಾರ್ಥಗಳನ್ನು ಹೀಗೆ ಸೇವಿಸಿ ಅರ್ಪಿಸಬೇಕಾದರೆ ಅವು ಶುದ್ಧವಾಗಿರತಕ್ಕದ್ದು. ಅಶುದ್ಧ ಪದಾರ್ಥಗಳನ್ನು ಲಿಂಗಗಳಿಗೆ ಅರ್ಪಿಸಲಿಕ್ಕೆ ಬರಲಾರದು. ಹೀಗೆ ಶುದ್ಧಪಡಿಸುವದಕ್ಕೆ ಅವುಗಳ ಪೂರ್ವಾಶ್ರಯವನ್ನು ಕಳೆಯಬೇಕೆಂದು ವಚನಕಾರನು ಇಲ್ಲಿ ಹೇಳುತ್ತಾನೆ.

ಹೀಗೆ ವರ್ತಿಸುವ ಪ್ರಸಾದಿಗಳು ಜೋಡಿಲ್ಲದವರು, ತಿಳುವಳಿಕೆಗೆ ಅಗಮ್ಯರು, ಶುದ್ಧರು, ಶೂನ್ಯದಲ್ಲಿ ಇರುವಂಥವರು ಎಂದು ವಚನಕಾರನು ಹೇಳಿ ಇವರು ಸಂಸಾರಿಗಳೆಂದೆನ್ನುವವರು ಜ್ಞಾನರಹಿತರಾಗಿ ವರ್ತಿಸುವ ಸಂದೇಹಿಗಳೆಂದು ಅಂದಿರುವನು.

**ವಚನಃ—** ೧೦೨. ಅಡವಿಯ ತೊಪ್ಪಲ ತಿರಿತಂದು ತಿಂದುಂಡು, ಒಡಲ ದಂಡಿಸಿಕೊಂಡು, ಪಡೆಗವಿಯೊಳಗೆ ತಪವನೈದಿಹೆನೆಂದು ಕಡುಹೆಮ್ಮೆಯಲಿ ನುಡಿವ ಅಣ್ಣಗಳು ನೀವು ಕೇಳಿರೋ! ಷಡುರುಚಿಗಳ ಹುಟ್ಟಿಸಿದ ಶಿವನ ಕರುಣರಸದಲ್ಲಿ ಆ ರುಚಿಯ ಸುಖವಂ ಪಡೆವುದಕ್ಕೆ ಹೊನ್ನು ಹೆಣ್ಣು ಮಣ್ಣು ಈ ತ್ರಿವಿಧ ಪದಾರ್ಥವ ಪಿಡಿದು, ಗುರುಲಿಂಗ ಜಂಗಮಕ್ಕೆ ನೀಡಿ ಮಾಡಿಹೆನೆಂಬ ಷಡ್ ರುಚಿಗೆ ಷಡ್ವಿಧ ಲಿಂಗಂಗಳುಂಟು. ಅವಂ ನೋಡಿ ಎಚ್ಚತ್ತು ಸವಿಸವಿದರ್ಪಿಸಬಲ್ಲ ಮಹಾತ್ಮನು ತಾನೇನು ಜಡನಲ್ಲ, ಅಜಡನಲ್ಲೆಂದಾತ ನಮ್ಮ ಅಂಬಿಗರಚೌಡಯ್ಯ.

**ಭಾವಃ—** ಅನೇಕರು ಮೇಲೆ ಹೇಳಿದ ರೀತಿಯಿಂದ ಪ್ರಸಾದವನ್ನು ಭೋಗಿಸುವದನ್ನು ಅರಿಯದೆ, ಅರಣ್ಯದಲ್ಲಿ ವಾಸಿಸಿ ಅಲ್ಲಿ ಇರುವ ಗಿಡದ ತೊಪ್ಪಲು ಮತ್ತು ಮೂಲಿಕೆಗಳನ್ನು ತಿರಿದು ತಂದು ದೇಹಕ್ಕೆ ಕ್ಲೇಶವ

ನ್ನುಂಟು ಮಾಡುತ್ತಾರೆ. ಮತ್ತು ತಾವು ಪಡೆಗವಿಗಳಲ್ಲಿ ಇದ್ದುಕೊಂಡು ತಪಸ್ಸು ಮಾಡುವವರೆಂದು ಬಹಳ ಹೆಮ್ಮೆಯಿಂದ ನುಡಿಯುತ್ತಾರೆ. ಇದು ಸರಿಯಾದ ಮಾರ್ಗವಲ್ಲವೆಂದು ವಚನಕಾರನ ಅಭಿಪ್ರಾಯವು.

ಶರಣನು ಈ ಪ್ರಕಾರ ತನ್ನ ಶರೀರದ ವ್ಯಾಪಾರಗಳನ್ನು ಕ್ಲೇಶ ಪಡಿಸತಕ್ಕದ್ದಲ್ಲ. ಅವನಿಗೆ ಷಡ್ರುಚಿಗಳು ಇವೆ. ಇವುಗಳನ್ನು ಪರಮಾತ್ಮನು ಹುಟ್ಟಿಸಿರುತ್ತಾನೆ. ಪರಮಾತ್ಮನು ಹುಟ್ಟಿಸಿರುವದರಿಂದ ಅವು ಉಪಯೋಗವುಳ್ಳವೇ ಇರುತ್ತವೆ. ಇಷ್ಟೇ ಅಲ್ಲ, ಅವುಗಳನ್ನು ಹುಟ್ಟಿಸಿದ್ದು ಪರಮಾತ್ಮ ಕಾರುಣ್ಯವೆಂದು ತಿಳಿಯಬೇಕು. ಹೀಗೆ ಪರಮಾತ್ಮನು ದಯಪಾಲಿಸಿದ ಇಂದ್ರಿಯ ಸುಖಗಳನ್ನು ಸರಿಯಾದ ರೀತಿಯಿಂದ ಅನುಭವಿಸುವದೇ ಮನುಷ್ಯನ ಕರ್ತವ್ಯವು. ಈ ಸುಖಗಳು ಮೂಗು, ನಾಲಿಗೆ, ಕಣ್ಣು, ಕಿವಿ, ಚರ್ಮ ಇವುಗಳ ಮೂಲಕವಾಗಿಯೇ ಉಂಟಾಗಿರುತ್ತವೆ.

ಮನುಷ್ಯನು ಜಗತ್ತಿನಲ್ಲಿ ಹೊನ್ನು, ಹೆಣ್ಣು, ಮಣ್ಣು ಇವುಗಳಲ್ಲಿ ಪ್ರೀತನಾಗಿ ವರ್ತಿಸುವದುಂಟು. ವಚನಕಾರರು ಪ್ರಸಾದ ವಿಷಯವನ್ನು ಹೇಳುವಾಗ್ಗೆ ಇವುಗಳನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಬೇಕೆಂದು ಹೇಳುತ್ತಾರೆ. ಹೀಗೆ ಅರ್ಪಣೆಯನ್ನು ಮಾಡಹೇಳುವಲ್ಲಿ ಅವರು ಇದಕ್ಕೆ ವಿಸ್ತೃತಾರ್ಥವನ್ನು ಕೊಟ್ಟು ಹೇಳುವದುಂಟು. ಅದು ಹೇಗೆಂದರೆ,

ಮನುಷ್ಯನು ಜಗತ್ತಿನಲ್ಲಿ ಶರೀರವನ್ನು ಕಷ್ಟಪಡಿಸಿ ಧನವನ್ನು ಗಳಿಸುವನು. ಹೀಗೆ ಶರೀರವನ್ನು ಬಳಲಿಸಿ ದೊರಕಿಸಿದ್ದೆಲ್ಲ ಹೊನ್ನಿನ ಸ್ವರೂಪವಾಗಿರುವದು. ಹೊನ್ನು ಎಂದರೆ ಬರೇ ಬಂಗಾರ ಮಾತ್ರವಲ್ಲ. ಹಾಗೆಯೇ ಮನುಷ್ಯನು ಅನೇಕ ಆಕಾಂಕ್ಷೆಗಳನ್ನು ಮಾಡಿಕೊಂಡು ಮನಸ್ಸಿನಲ್ಲಿ ಬಳಲುವನು. ಹೀಗೆ ಮನಸ್ಸಿನಲ್ಲಿ ಕಾಂಕ್ಷಿಸಿದ್ದೆಲ್ಲ ಹೆಣ್ಣಿನ ಸ್ವರೂಪವಾಗಿದೆ. ಹೆಣ್ಣು ಎಂದರೆ ಬರೇ ಸ್ತ್ರೀಮಾತ್ರವಲ್ಲ. ಹಾಗೆಯೇ ಮನುಷ್ಯನು ತನ್ನ ಶಕ್ತಿಸಾಮರ್ಥ್ಯವನ್ನು ಹೆಚ್ಚಿಸಿ ಅಹಂಕಾರಯುತನಾಗಿ ಭೂಮಿ ಸೀಮೆಯನ್ನು ದೊರಕಿಸಲು, ಹಂಬಲಿಸುವನು ಮತ್ತು ಕಷ್ಟ ಪಡುವನು. ಹೀಗೆ ದೊರಕಿಸಿದ್ದು ಮಣ್ಣಿನ ಸ್ವರೂಪವಾಗಿದೆ. ಮಣ್ಣೆಂದರೆ ಕೇವಲ ಮಣ್ಣಲ್ಲ ಈ ಬಗೆಯ ನಾನಾ ಬಗೆಯ ಬಳಲಿಕೆಗಳನ್ನು ತೊರೆಯುವದು ಶರಣನ ಕರ್ತವ್ಯವಾಗಿದೆ. ಇವುಗಳನ್ನು ಹ್ಯಾಗೆ ತೊರೆಯಬೇಕೆಂಬುದನ್ನು ವಚನಕಾರನು ಇಲ್ಲಿ ನಿರೂಪಿಸಿರುವನು.

ಈ ಭೋಗ್ಯ ವಸ್ತುಗಳು ಮನುಷ್ಯನಿಗೆ ತೊಂದರೆಗಳನ್ನುಂಟುಮಾಡುತ್ತವೆಂದು ಅವುಗಳನ್ನು ನಿರಾಕರಿಸಿ ದೂರಮಾಡಬೇಕೆಂದು ವಚನಕಾರರ ಅಭಿಪ್ರಾಯವಲ್ಲ. ತಪಸ್ವಿಗಳು ಹೀಗೆ ವರ್ತಿಸುವದುಂಟು. ಆದರೆ ಅದು ಷಟ್‌ಸ್ಥಲಮಾರ್ಗವಲ್ಲ.

ಆದರೆ ಈ ಭೋಗ್ಯ ವಸ್ತುಗಳನ್ನು ಶುದ್ಧ ರೀತಿಯಿಂದ ಸಂಪಾದಿಸಿ ಅವುಗಳನ್ನು ಶುದ್ಧ ಮನಸ್ಸಿನಿಂದ ಗುರುಲಿಂಗಜಂಗಮಕ್ಕೆ ಅರ್ಪಿಸುವದೇ ಷಟ್‌ಸ್ಥಲಮಾರ್ಗವು. ಈರೀತಿಯನ್ನು ಅರಿಯುವದೇ ಮನುಷ್ಯನ ಕರ್ತವ್ಯವು.

ಗುರುವು ಬಾಹ್ಯ ಸತ್ಕ್ರಿಯೆಗಳಿಗೆ ಸಂಬಂಧಪಟ್ಟಿದ್ದಾಗಿದೆ. ಆದ್ದರಿಂದ ಹೊನ್ನಿನ ಸ್ವರೂಪವಾದ ಶಾರೀರಿಕ ಭೋಗಗಳನ್ನು ಗುರುವಿಗೆ ಅರ್ಪಿಸುವದೇ ಇಷ್ಟಲಿಂಗಾರ್ಪಣವು. ಸ್ತ್ರೀ ಸ್ವರೂಪವಾದ ಮಾನಸಿಕ ಆಕಾಂಕ್ಷೆಗಳನ್ನು ಲಿಂಗಕ್ಕೆ ಅರ್ಪಿಸುವದೇ ಪ್ರಾಣಲಿಂಗಾರ್ಪಣವು. ಮತ್ತು ತನ್ನ ಶಕ್ತಿಸಾಮರ್ಥ್ಯಗಳನ್ನು ಜಗತ್ತಿನಲ್ಲೆಲ್ಲ ತುಂಬಿದ ಚೈತನ್ಯಸ್ವರೂಪವಾಗಿ ವ್ಯವಹರಿಸುವ ಜಂಗಮಲಿಂಗಕ್ಕೆ ಅರ್ಪಿಸುವದೇ ಭಾವಲಿಂಗಾರ್ಪಣವು.

ಈ ಮೂರೂ ಅರ್ಪಣೆಗಳನ್ನು ಮಾಡುವಲ್ಲಿ, ಷಡ್ರುಚಿಗಳಿಗೆ ಸಂಬಂಧಿಸಿ ಷಡ್ವಿಧಲಿಂಗಗಳಿದ್ದು, ಈ ರೀತಿಯನ್ನು ತಿಳಿದುಕೊಂಡು ಸವಿಸವಿದು, ಅರ್ಪಿಸಿ ಲಿಂಗದೊಳಗಾಗಿ ಅನುಭವಿಸಬೇಕೆಂದು ವಚನಕಾರನು ಇಲ್ಲಿ ಹೇಳಿರುವನು.

**ವಚನ:**— ೧೦೩. ಕೈ ಮುಟ್ಟುವಲ್ಲಿ, ಕಿವಿ ಕೇಳುವಲ್ಲಿ, ಬಾಯಿ ಕೊಂಬಲ್ಲಿ, ಮೂಗು ವಾಸಿಸುವಲ್ಲಿ, ಕಣ್ಣು ನೋಡುವಲ್ಲಿ, ಐದರ ಮಾಟವನು ವಿಚಾರಿಸದೆ, ಸಂಚಿತ ಪ್ರಾರಬ್ಧ ಆಗಾಮಿ ಎಂಬ ಹಿಂಚುಮುಂಚಿಗೆ ಸಿಕ್ಕದೆ ಕುಡಿವೆಳಗಿನ ಮಿಂಚಿನ ಸಂಚದಂತಿರಬೇಕೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ವಚನಕಾರನು ಇಲ್ಲಿ ಒಂದು ಉದಾಹರಣೆಯನ್ನು ಕೊಟ್ಟು ಮನುಷ್ಯನು ಹ್ಯಾಗೆ ವರ್ತಿಸಬೇಕೆಂಬುದನ್ನು ಹೇಳಿರುವನು. ಅದು ಏನೆಂದರೆ— ನೀಟಾಗಿ ಸರಳರೇಷೆಯಿಂದ ಗಮಿಸುವಂಥ ಅತ್ಯಂತ ಪ್ರಕಾಶಮಾನವಾದಂಥ ಮಿಂಚಿನ ಪುಂಜದಂತೆ ಜಗತ್ತಿನಲ್ಲಿ ಅವನು ಇರಬೇಕೆಂದು

ಹೇಳಿರುವನು. ಮನುಷ್ಯನು ತನ್ನ ಕೈ, ಕಿವಿ, ಬಾಯಿ, ಮೂಗು, ಕಣ್ಣು ಇವುಗಳ ಕ್ರಿಯೆಗಳು ಹೇಗೆ ಇರಬೇಕು ಎಂಬುದನ್ನು ತಿಳಿದುಕೊಂಡು ಆ ಪ್ರಕಾರ ವರ್ತಿಸಬೇಕು. ಹೀಗೆ ವರ್ತಿಸಿದ್ದಾದರೆ ಅವನು ತನ್ನ ಹಿಂದಿನ ಮತ್ತು ಮುಂದಿನ ಕರ್ಮಗಳ ಬಲೆಗೆ ಸಿಲ್ಕಿ ಬೀಳುವದಿಲ್ಲ. ಈ ಸ್ಥಿತಿಯು ಉಂಟಾದ ಕೂಡಲೆ ಮನುಷ್ಯನು ಅತ್ಯಂತ ಪ್ರಕಾಶಮಾನವಾಗಿ ಹೊಳೆಯುಹತ್ತುವನು. ಪಂಚೇಂದ್ರಿಯಗಳನ್ನು ಸರಿಯಾಗಿ ಉಪಯೋಗಿಸಬೇಕು, ಅಂದರೆ ಮನುಷ್ಯನು ಇಂಥ ಉಚ್ಚ ಸ್ಥಾನಕ್ಕೆ ಬರುವನೆಂದು ವಚನಕಾರನ ಮುಖ್ಯ ಅಭಿಪ್ರಾಯವು.

**ವಚನ**:—೧೦೪ ಅಂಗವ ಅಂದಮಾಡಿಕೊಂಡು ತಿರುಗುವ ಭಂಗಗೇಡಿಗಳು ನೀವು ಕೇಳಿರೋ. ಅಂಗಕ್ಕೆ ಆಂದವಾವುದೇನೆಂದರೆ ಗುರುವಿಗೆ ತನುವ ಕೊಟ್ಟಿರುವುದೇ ಚಂದ, ಲಿಂಗಕ್ಕೆ ಮನವ ಕೊಟ್ಟಿರುವದೇ ಚಂದ. ಜಂಗಮಕ್ಕೆ ಧನವ ಕೊಟ್ಟಿರುವದೇ ಚಂದ. ಅಷ್ಟಾವರಣದಲ್ಲಿ ನಿಬ್ಬೆರಗಿನಿಂದೆ ಕೂಡಿ ಭಕ್ತಿ ಎಂಬ ಸಮುದ್ರದಲ್ಲಿ ಈಸಾಡುವುದೇ ಚಂದ. ಶಿವನ ಪಾದವ ಹೊಂದುವುದೆ ಚಂದ. ಈ ಮಾರ್ಗವ ಬಿಟ್ಟು ಸಂಸಾರವೇ ಅಧಿಕವೆಂದು ತನ್ನ ಹೆಂಡಿರು ಮಕ್ಕಳು ಸಂಪತ್ತು ಇವು ನನಗೆ ಶಾಶ್ವತವೆಂದು ತಿಳಿದು ಒಂದು ಕಾಸನಾದರು ಪರರಿಗೆ ಕೊಡದೆ ತಾವೆ ತಿಂದು, ನೆಲದಲ್ಲಿ ಮಡಗಿ, ಕಡೆಗೆ ಯಮನ ಕಯ್ಯಲ್ಲಿ ಸಿಲ್ಕಿ ನರಕಕೊಂಡದಲ್ಲಿ ಮುಳುಗೇಳುವುದೇ ನಿಶ್ಚಯ. ಇಂತಹ ಆಂದಗೇಡಿಗಳ ಮುಖವ ನೋಡಲಾಗದು ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ**:— ಜನರು ತಾವು ಪ್ರಕಾಶಮಾನರಾಗಬೇಕೆಂದು ಅನೇಕ ತರದ ಅಂದಚಂದಗಳನ್ನು ಮಾಡಿಕೊಳ್ಳುವದುಂಟು. ಇವರು ಕಡೆಗೆ ಅಪಮಾನಹೊಂದುವರೆಂದು ವಚನಕಾರನ ಅಭಿಪ್ರಾಯವು. ಅವನು ಅನ್ನುವದೇನೆಂದರೆ ಭಕ್ತನು ಗುರುಲಿಂಗಜಂಗಮಕ್ಕೆ ತನುಮನಧನವನ್ನು ಕೊಡುವದೇ ಚಂದವು. ಹಾಗೆಯೇ ಅನೇಕ ಪಾಪಗಳು ತಗಲದಂತೆ ಮಾಡುವ ಅಷ್ಟಾವರಣಗಳಲ್ಲಿ ಕೂಡಿಕೊಂಡು ಭಕ್ತಿ ಎಂಬ ಸಮುದ್ರದಲ್ಲಿ ಈಸಾಡುತ್ತಿರಬೇಕು. ಇದೇ ಚಂದ. ಹೀಗೆ ವರ್ತಿಸುತ್ತ ಶಿವನ ಪಾದವನ್ನು ಹೊಂದತಕ್ಕದ್ದು. ಈ ಮಾರ್ಗವನ್ನು ಬಿಟ್ಟುಕೊಟ್ಟು ಸಂಸಾರವೇ ಅಧಿಕವೆಂದು ಧನ ಕನಕ ವಸ್ತುಗಳು ಶಾಶ್ವತವೆಂದು ನಂಬಿ, ಯಾರಿ

ಗೊಬ್ಬರಿಗೂ ಏನೂ ಕೊಡದೆ, ಬಂದದ್ದನ್ನೆಲ್ಲ ನೆಲದಲ್ಲಿ ಹೂಳಿ ಸತ್ತು ಹೋಗುವವರಿಗೆ ನರಕವು ಎಂದಿಗೂ ತಪ್ಪದು.

**ವಚನಃ**— ೧೦೫. ಸಕಲ ಭೋಗ ವಿಲಾಸ ಲಿಂಗಕ್ಕೆಂದಲ್ಲಿ ತನ್ನಂಗಕ್ಕೆ ಶೃಂಗಾರ ಉಂಟೆ? ಶ್ರೀ ರುದ್ರಾಕ್ಷಿ ವಿಭೂತಿಯು ಸ್ವಸ್ಥಾನದಲ್ಲಿ ತನ್ನಂಗಕ್ಕೆ ಶ್ರೀಂಗಾರವೆಂದು ಮಾಡಿದೊಡೆ ಆ ನಿಜಪದವಂಗ ಒಂದೂ ಇಲ್ಲೆಂದ ನಂಬಿಗಚೌಡಯ್ಯ.

**ಭಾವಃ**— ಮನುಷ್ಯನು ತಾನು ಅನುಭವಿಸುವ ವಿಲಾಸಗಳನ್ನು ಲಿಂಗಕ್ಕೆ ಸಮರ್ಪಿಸಿದಲ್ಲಿ ಅವನಿಗೆ ಬೇರೆ ಶೃಂಗಾರಗಳು ಉಂಟೇ? ಇರಲಾರವು. ಈ ಬಗೆಯಾಗಿ ವರ್ತಿಸಿದಲ್ಲಿ ಅವನು ಎಲ್ಲರಿಗೂ ಸುಂದರನಾಗಿಯೇ ಕಾಣುವದು ನಿಶ್ಚಯವು. ಇಷ್ಟೇ ಅಲ್ಲ, ಅನೇಕರು ವಿಭೂತಿ ರುದ್ರಾಕ್ಷಿ ಮೊದಲಾದ ಶಿವಚಿನ್ಹಗಳನ್ನು ಧಾರಣ ಮಾಡಿ ಹಾಗೆ ಸುಂದರವಾಗಿ ಕಾಣಲು ಅಪೇಕ್ಷಿಸುವರು. ಆದರೆ ಎಲ್ಲಿಯ ವರೆಗೆ ಪರಮಾತ್ಮನಲ್ಲಿ ಸಮರ್ಪಣ ಭಾವವು ಅವರಲ್ಲಿ ಇಲ್ಲವೋ ಆ ವರೆಗೆ ಈ ಶಿವ ಚಿನ್ಹಗಳು ಸಹ ಅವರ ಶೃಂಗಾರವನ್ನು ಹೆಚ್ಚಿಸಲಾರವೆಂದು ವಚನಕಾರನ ಭಾವವು.

**ವಚನಃ**— ೧೦೬. ಮದ್ದ ತಿನಬೇಕಾದರೆ ವೈದ್ಯನಿದ್ದೆಡೆಗೆ ಹೋಗಿ ಹಣ ಹೊನ್ನ ಕೊಟ್ಟು ದೈನ್ಯಬಟ್ಟು ಮದ್ದ ತಿಂಬರು ನೋಡಯ್ಯ. ಇದು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಕ್ಕೆ ಎಂದು ಬಿನ್ನಹವ ಮಾಡದೆ ಅಹಂಕಾರದಲ್ಲಿ ತರಿಸಿಕೊಂಡುಂಬ ಗೊಡ್ಡ ಮೂಳನ ಕಂಡಡೆ ಒದ್ದೊದ್ದು ಕೊಲ್ಲೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ**— ಅನೇಕರು ರೋಗಪೀಡಿತರಾಗಿ ವೈದ್ಯನಿದ್ದೆಡೆಗೆ ಹೋಗಿ ಹಣ ಕೊಟ್ಟು ಬಹಳ ದೈನ್ಯಬಟ್ಟು ಅವನಿಂದ ಔಷಧ ತೆಗೆದುಕೊಂಡು ಬರುವರು. ಆದರೆ ಮನುಷ್ಯನಿಗೆ ಇದಕ್ಕೂ ಹೆಚ್ಚಿನದಾದ ಭವರೋಗವು ಬಂದಿರಲು ಇದನ್ನು ದೂರಮಾಡುವಂತಹದು ಪ್ರಸಾದವು, ಅಂಥ ಪ್ರಸಾದವನ್ನು ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳಿಗೆ ಅರ್ಪಿಸಿ ಸ್ವೀಕರಿಸುವದು ಯುಕ್ತವು. ಈ ಪ್ರಸಾದವು ಅನುಕ್ರಮವಾಗಿ ಶುದ್ಧ, ಸಿದ್ಧ, ಪ್ರಸಿದ್ಧವೆಂಬ ಹೆಸರುಗಳನ್ನು ತಾಳಿದೆ. ಈ ಬಗೆಯ ಮೂರು ಪ್ರಸಾದಗಳನ್ನು ಅಪೇಕ್ಷಿಸದೆ ಕೇವಲ ಅಹಂಕಾರದಲ್ಲಿ ಉನ್ಮತ್ತರಾಗಿ ಪ್ರಪಂಚದ ಭೋಗ

ಗಳನ್ನು ಭೋಗಿಸುವಂಥ ಗೊಡ್ಡ ಮೂಳರನ್ನು ಒದ್ದೊದ್ದು ಕೊಲ್ಲಬೇಕೆಂದು ವಚನಕಾರನು ಅಂದಿರುವನು.

**ವಚನ:**— ೧೦೭. ಪ್ರಸಾದವ ನಂಬಿದರೆ ಬಿಲ್ಲಮರಾಯನಂತೆ ನಂಬಬೇಕಯ್ಯಾ! ಪ್ರಸಾದವ ನಂಬಿದರೆ ಬಿಬ್ಬಿಬಾಚರಸನಂತೆ ನಂಬಬೇಕಯ್ಯಾ! ಪ್ರಸಾದವ ನಂಬಿದರೆ ವಾಮನ ಮುನೀಶ್ವರನ ಶಿಷ್ಯನಂತೆ ನಂಬಬೇಕಯ್ಯಾ! ಇಂತು ನಂಬಿಕೊಂಡರೆ ಮಹಾ ಸಾಧನ. ನಂಬದೆ ಸಮಯ ದಾಕ್ಷಿಣ್ಯಕ್ಕೆ ಹೋಗಿ ತಾ ಬಂದು ಮನವ ಸಿಕ್ಕಿಕೊಂಡರೆ ಅದು ತನಗೆ ಸಿಂಗಿ ಕಾಳಕೂಟ ವಿಷವೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಈ ಪ್ರಕಾರ ವಚನಕಾರನು ಪ್ರಸಾದದ ಮರ್ಮವನ್ನು ಹೇಳಿ ಅನ್ನುವದೇನಂದರೆ, ಹೀಗೆ ಪ್ರಸಾದವೆಂದು ಭಾವಿಸದೆ ಮನುಷ್ಯನು ವಿಶ್ವಾಸಹೀನನಾಗಿ ವರ್ತಿಸಿದ್ದಾದರೆ, ಅವನ ಮೇಲೆ ಅದು ಏನೂ ಪರಿಣಾಮ ಮಾಡಲಾರದು. ಪ್ರಸಾದವು ಕಾಲ್ಪನಿಕವಾದದ್ದು, ಅದರಿಂದ ಏನೂ ಫಲವಾಗಲಾರದು, ಎಂದು ಅದರಲ್ಲಿ ಅವಿಶ್ವಸಿಸಿ ಆಚರಿಸಿದ್ದಾದರೆ, ಅದು ಅವನಿಗೆ ಸಿಂಗಿ ಕಾಳಕೂಟವಿಷದಂತೆ ಪರಿಣಮಿಸುವದು. ಆದ್ದರಿಂದ ವೀರಶೈವ ಮಾರ್ಗವನ್ನು ಅವಲಂಬಿಸಿದವರು ಬಿಲ್ಲಮರಾಯ, ಬಿಬ್ಬಿಬಾಚರಸ, ವಾಮನ ಮುನೀಶ್ವರನ ಶಿಷ್ಯ, ಇವರಂತೆ ಪ್ರಸಾದವನ್ನು ನಂಬಿ ಆ ರೀತಿ ವರ್ತಿಸಬೇಕೆಂದು ವಚನಕಾರನು ಹೇಳಿರುವನು.

**ವಚನ:**— ೧೦೮. ಮಡುವಿನಲ್ಲಿ ಮೊಗಸಿ ತಾಹೆನೆ? ಅಗ್ಗವಣಿ ಶುದ್ಧವಲ್ಲ. ಗಿಡುವಿನಲ್ಲಿ ಪುಷ್ಪವ ತಾಹೆನೆ? ಹೂ ನಿರ್ಮಾಲ್ಯ. ಅಟ್ಟುಡಿಗೆಯಾದಡೆ, ಮನ ಮುನ್ನವೆ ಉಂಡಿತ್ತು. ನುಡಿವ ಶಬ್ದ ಎಂಜಲಾಯಿತ್ತು. ಹಿಡಿಯೊಳಯಿಂಕೆ ಒಂದ ಕೊಂಡು ಬಂದು ಲಿಂಗಕ್ಕೆಂದು ಸಂಕಲ್ಪವ ಮಾಡಿದಡೆ ಅದಕ್ಕೆ ಬೋನವಿಲ್ಲೆಂದನಂಬಿಗಚೌಡಯ್ಯ.

**ಭಾವ:**— ಪ್ರಸಾದದಲ್ಲಿ ಆಚರಿಸುವ ಅನೇಕರು ಬಾಹ್ಯ ಆಚರಣೆಯಲ್ಲಿ ಮಾತ್ರ ಅತ್ಯಂತ ಪರಿಶುದ್ಧವಾಗಿ ಆಚರಿಸಲು ಪ್ರಯತ್ನಿಸುವದುಂಟು. ಈ ಜನರು ಪೂಜಾಕಾರ್ಯಕ್ಕೆ ಬೇಕಾಗುವ ವಸ್ತುಗಳನ್ನೆಲ್ಲ ಅತ್ಯಂತ ಮಡಿವ್ಯೆಲಿಗೆಯಿಂದ ಅಣಿಮಾಡಿ ಇಟ್ಟುಕೊಳ್ಳುತ್ತಾರೆ. ಅನೇಕ ಶೀಲಗಳನ್ನು ವ್ರತಗಳನ್ನು ಆಚರಿಸುತ್ತಾರೆ. ಇವೆಲ್ಲವೂ ವ್ಯರ್ಥವೆಂದು ವಚನಕಾರನ ಅಭಿಪ್ರಾಯವು. ಪೂಜೆಗೋಸ್ಕರ ನೀರನ್ನು ತರುವಲ್ಲಿ ಸೂರ್ಯನ

ಕಿರಣ ಸಹ ಬೀಳದಂತೆ ಅದಕ್ಕೆ ಪಾವುಡವನ್ನು ಹೊಚ್ಚಿ ತರುವರು. ಆದರೆ ಹೀಗೆ ತಂದ ನೀರು ಶುದ್ಧವಲ್ಲ. ಯಾಕೆಂದರೆ ಅದರಲ್ಲಿ ಮೀನು, ಕಪ್ಪೆ ಮೊದಲಾದ ಜಂತುಗಳು ತುಂಬಿ ಇದ್ದು ಅವು ಕುಡಿದು ಗುಳಿದ ಶೇಷವು ಅದಾಗಿರುತ್ತದೆ. ಹಾಗೆಯೇ ಹೂಗಿಡಗಳ ಮೇಲಿನ ಪುಷ್ಪಗಳನ್ನು ಯಾರೂ ಮೂಸಿ ನೋಡದವುಗಳನ್ನು ಆಯ್ದು ಪೂಜೆಗೋಸ್ಕರ ತಂದಿರಿಸಿಕೊಳ್ಳುತ್ತಾರೆ. ಆದರೆ ಇವೂ ಕೂಡ ಶುದ್ಧವಾದವುಗಳಲ್ಲ. ಯಾಕಂದರೆ ಅನೇಕ ಪಕ್ಷಿಗಳು ಮತ್ತು ಹುಳುಗಳು ಅವುಗಳ ಮೇಲೆ ಹಾರಾಡಿ ಮೊದಲಿಗೇ ಸೇವಿಸಿಬಿಟ್ಟಿರುತ್ತವೆ. ಅದರಂತೆಯೇ ಅಟ್ಟಡಿಗೆಯೂ ಕೂಡ ಶುದ್ಧವಲ್ಲ. ಯಾಕಂದರೆ ಮನಸ್ಸು ಅದನ್ನು ಆಶಿಸಿ ಮೊದಲಿಗೆಯೇ ಆಸ್ವಾದಿಸಿ ಬಿಟ್ಟಿರುತ್ತದೆ. ನಾವು ಮಾತಾಡುವ ಶಬ್ದವು ಸಹ ಶುದ್ಧವಲ್ಲ. ಅದು ಎಂಜಲು. ಬಾಯೊಳಗಿಂದ ಮೊದಲು ಹೊರಬೀಳಬೇಕಾಗುತ್ತದೆ. ಅರ್ಪಣೆಮಾಡುವವನು ತಾನು ಕೊಡತಕ್ಕ ವಸ್ತುವನ್ನು ಒಂದು ಕಯ್ಯಲ್ಲಿ ಹಿಡಿದು ಮತ್ತೊಂದು ಕಯ್ಯಲ್ಲಿ ಲಿಂಗವನ್ನು ಇಟ್ಟು ಲಿಂಗಕ್ಕೆಂದು ಸಂಕಲ್ಪಮಾಡುತ್ತಾನೆ. ಆದರೆ ಅದು ಆ ಲಿಂಗವನ್ನು ಮುಟ್ಟಲಾರದು. ಪ್ರಸಾದವು ಹೀಗೆ ತೋರಿಕೆಯದಲ್ಲ. ಅದು ಮನುಷ್ಯನ ಶುದ್ಧಾಚರಣೆ, ಶುದ್ಧ ಮನಸ್ಸು, ಪರಮಾತ್ಮನಲ್ಲಿಯ ನಿಜವಾದ ನಂಬಿಗೆ ಇವುಗಳ ಮೇಲೆ ಅವಲಂಬಿಸಿದೆಂದು ವಚನಕಾರನ ಅಭಿಪ್ರಾಯವು.

**ವಚನ:**— ೧೮೯. ಎಲೋ ಮಾನುವ ಕೇಳೆಲೋ. ಶೀಲದಲ್ಲಿ ಸಂಪನ್ನರಾದವರು ನೀವು ಕೇಳಿರೋ. ಹಣ್ಣುಗಳು ಸಣ್ಣ ಜಾತಿಯ ಎಂಜಲು, ಹಾಲು ಕರುವಿನ ಎಂಜಲು, ಮೊಸರು ಗೊಲ್ಲಿಯ ಎಂಜಲು, ಅಕ್ಕಿ ಗೋದಿ ಬೇಳೆ ಬೆಲ್ಲಗಳು ನೊಣದ ಎಂಜಲು, ನೀರು ಮೀನು ಕಪ್ಪೆಗಳ ಎಂಜಲು, ಉಪ್ಪು ಉಪ್ಪಾರನ ಎಂಜಲು, ಎಣ್ಣೆ ಸರ್ವಮಾನವರ ಎಂಜಲು, ಸಕಲ ಪದಾರ್ಥವು ಅನಂತ ಹುಳಗಳ ಎಂಜಲು, ಇಂತಹ ಎಂಜಲವು ಎಂದು ಕಣ್ಣಾರೆ ನೋಡಿ ಕಿವಿಯಾರೆ ಕೇಳಿ, ಮಾಡುವ ದುರಾಚಾರವ ಆರು ಬಣ್ಣಿಸಬಹುದು? ಅರಿವು ಇಲ್ಲದವರು ಅರಮನೆಗೆ ಮಾಡಿದರು. ಭಕ್ತಿ ಇಲ್ಲದವರು ತಮ್ಮ ಗುರುಲಿಂಗಜಂಗಮಕ್ಕೆ ಮಾಡಿದರು. ಇಂತಪ್ಪ ಸರ್ವರ ಎಂಜಲ ತಿಂದು ಅಂಗದಲ್ಲ ಶಿವಲಿಂಗವ ಧರಿಸಿಕೊಂಡು ಶಿವಭಕ್ತರೆಂದು ಹೇಳಿಸಿ, ಕಾಲಿಗೆ ಬಂದಂತೆ ಕುಣಿದು,

ಬಾಯಿಗೆ ಬಂದಂತೆ ತಿಂದು, ಮನ ಬಂದಂತೆ ಸ್ತ್ರೀ ಸಂಗದಲ್ಲಿ ಆಚರಿಸುವ ಭ್ರಷ್ಟ ಹೊಲೆಮಾದಿಗರಿಗೆ ಶೀಲವು ಎಲ್ಲಿಹದು? ಆಚರಣೆ ಎಲ್ಲಿಹದು? ಕುಲವೆಲ್ಲಿಹದು? ಇಂತಪ್ಪ ಮೂಳಹೊಲೆಯರ ಮೂಗ ಕೊಯ್ದು ಪಡಿಹಾರಿ ಉತ್ತಣ್ಣಗಳ ಪಾದುಕದಿ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವಃ—** ಹಿಂದಿನ ವಚನಗಳ ಭಾವವನ್ನೇ ವಚನಕಾರನು ಇಲ್ಲಿ ಪುನಃ ಬೇರೆ ಉದಾಹರಣೆಗಳನ್ನು ಕೊಟ್ಟು ಹೇಳಿರುವನು. ಹಣ್ಣುಗಳನ್ನು ಸಣ್ಣ ಸಣ್ಣ ಕ್ರಿಮಿಕೀಟಕಾದಿಗಳು ಮೊದಲು ಸೇವಿಸುವವು. ಆದ್ದರಿಂದ ಅವಾದರೂ ಎಂಜಲು. ಹಾಗೆಯೇ ಹಾಲು ಕರುವಿನ ಎಂಜಲು, ಮೊಸರು ಗೌಳಿಗಿತ್ತಿಯ ಎಂಜಲು, ಅಕ್ಕಿ, ಗೋದಿ ಬೆಲ್ಲಗಳು ನೊಣದ ಎಂಜಲು, ನೀರು ಇದು ಮೀನು ಕಪ್ಪೆಗಳ ಎಂಜಲು, ಉಪ್ಪು ಉಪ್ಪಾರನ ಎಂಜಲು, ಎಣ್ಣೆ ಸರ್ವ ಜನರ ಎಂಜಲು, ಇತರ ಪದಾರ್ಥಗಳೆಲ್ಲವು ಅನಂತ ಹುಳಗಳ ಎಂಜಲು, ಹೀಗಿದ್ದರೂ ಕೂಡ ಜನರು ಬಾಹ್ಯ ಆಚರಣೆಯಲ್ಲಿ ತಾವು ಪ್ರಸಾದಿಗಳೆಂದು ಹೇಳಿಕೊಳ್ಳುವರು. ಆದರೆ ಇವರಿಗೆ ನಿಜವಾದ ಆಚಾರವಿಲ್ಲ. ಇವರ ಸ್ಥಿತಿಯು ಹೇಗಾಗುವದೆಂದರೆ ಬುದ್ಧಿಗೇಡಿ ಜನರು ಅರಸನು ಪ್ರೀತನಾಗಲೆಂದು ಅವನಿಗೆ ಮಾಡಿದಂತೆ ಅಥವಾ ಅನೇಕರು ಗುರುಲಿಂಗ ಜಂಗಮಕ್ಕೆ ನಂಬಿಗೆ ಇಲ್ಲದೆ ದಾನ ಮಾಡಿದಂತೆ ಆಗುವದು. ಇವರು ಕಡೆಗೆ ನಷ್ಟವಾಗುವರೆಂದು ವಚನಕಾರನ ಅಭಿಪ್ರಾಯವು. ಆದ್ದರಿಂದ ತಾವು ಪ್ರಸಾದಿಗಳೆಂದು ಭಾವಿಸಿಕೊಂಡು ಮರ್ಮವನ್ನು ತಿಳಿಯದೆ ಕೇವಲ ಬಾಹ್ಯ ಆಚರಣೆಗಳನ್ನು ಆಚರಿಸುತ್ತ ವ್ಯರ್ಥ ಶ್ರಮಪಡಬಾರದೆಂದು ವಚನಕಾರನ ಅಭಿಪ್ರಾಯವು.

**ವಚನಃ—** ೧೧೧. ನಮಗೊಬ್ಬರೆಂಜಲು ಸೇರದೆಂದು ಶುಚಿತನದಲ್ಲಿ ಬದಕುತಿಹೆನೆಂಬ ಬರಿಯ ಮಾತಿನ ಭುಂಜಕರು ನೀವು ಕೇಳಿರೋ! ನೀವು ತಂದು ಕುಡಿವ ನೀರು ಜಲಚರದೆಂಜಲು, ಮೃಗಪಕ್ಷಿಗಳೆಂಜಲು, ಬಳಿಸಹೋದಲ್ಲಿ ಕೈಕಾಲ ತೊಳೆದು ಬಾಯ ಮುಕ್ಕುಳಿಸುವಲ್ಲಿ ನರಮನುಷ್ಯರೆಂಜಲು. ಇಂತೀ ಹಲವೆಂಜಲು ಬೆರಿಸಿದ ಸಕಲ ಪದಾರ್ಥವನು ಆ ಜಲದಿಂದ ಪಾಕವನು ಮಾಡಿ, ನಲಿನಲಿದುಂಡು ಕೊಡುವಲ್ಲಿ, ಆ ಎಂಜಲು ಹಿಂಗಿದ ಠಾವು ತೋರಿರಣ್ಣಾ! ಇದ ಬಲ್ಲ ಭಕ್ತರು ಸರ್ವ ಪದಾರ್ಥವನು ಶಿವಮಂತ್ರ ಹಸ್ತಸ್ಪರ್ಶ ವಿಭೂತಿಯಿಂದೆ ಶುದ್ಧಮಾಡಿ

ಕೊಟ್ಟು ಕೊಂಬಲ್ಲಿ ಗುರುಪ್ರಸಾದವಾಯಿತ್ತು. ಹೀಗೆ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವನು ಕೊಟ್ಟು ಕೊಂಬ ಭಕ್ತನಿಗೀಗಲೆ ಸರ್ವರೆಂಜಲ ಹೊಲೆಯು ನೀಗಿದ. ಇದನರಿಯದಿರ್ದೊಡೆ, ಸರ್ವರೆಂಜಲ ಹೊಲೆಯೊಳಗೆ ಮುಳುಗಿಹೋದರೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ—** ಈ ಪ್ರಕಾರ ವಚನಕಾರನು ಅರ್ಪಿಸತಕ್ಕ ವಸ್ತುಗಳು ಹೇಗೆ ಎಂಜಲಾಗುತ್ತವೆಂಬದನ್ನು ಹೇಳಿ ಅವುಗಳ ಬಾಹ್ಯ ಕಿಲ್ಮಿಷವನ್ನು ಹೋಗಲಾಡಿಸುವ ಒಂದು ಕ್ರಮವನ್ನು ಹೇಳಿರುವನು. ಅದು ಏನೆಂದರೆ, ಭಕ್ತರು ಶಿವಮಂತ್ರವನ್ನು ಅಂಗುಲಿಗಳಲ್ಲಿ ನಿವೇದಿಸಿ ಇಂಥ ಹಸ್ತದಲ್ಲಿ ವಿಭೂತಿಯುನ್ನು ಇಟ್ಟು, ಆದರ ಮೂಲಕ ಎಂಜಲಾದ ಪದಾರ್ಥಗಳನ್ನು ಶುದ್ಧಗೊಳಿಸತಕ್ಕದ್ದು. ಹೀಗೆ ಶುದ್ಧಮಾಡಿ ಪರಮಾತ್ಮನಿಗೆ ಅರ್ಪಿಸಿ ಸೇವಿಸತಕ್ಕದ್ದು. ಇದು ಗುರುಪ್ರಸಾದವೆನಿಸುವದು. ಇದೇ ರೀತಿಯಾಗಿಯೇ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳನ್ನು ಅಣಿಮಾಡಿಕೊಂಡು ಸೇವಿಸತಕ್ಕದ್ದು. ಹೀಗೆ ಮಾಡಿದಲ್ಲಿ ಎಲ್ಲ ಬಗೆಯ ಎಂಜಲು ಮತ್ತು ಹೊಲೆಯು ಹೊರಟುಹೋಗುವದು. ಈ ರೀತಿಯುನ್ನು ತಿಳಿಯದೆ ಹೋಗಿ ಪದಾರ್ಥಗಳನ್ನು ಸೇವಿಸಿದರೆ, ಅದೇ ನಿಜವಾದ ಹೊಲೆ ಎಂದು ಇಲ್ಲಿ ಹೇಳಿದ್ದಾನೆ.

**ವಚನಃ—** ೧೧೧. ಜನನ ಸೂತಕ ಮರಣಸೂತಕಂಗಳ ಕಳೆದು ಶುದ್ಧವಾದೆನೆಂಬ ಅಜ್ಞಾನಿ ಜಡಜೀವಿಗಳು ನೀವು ಕೇಳಿರೋ! ಪೃಥ್ವಿ ಶುದ್ಧವೆಂಬಿರಿ. ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಅಲ್ಲಿಯೇ ಹುಟ್ಟಿ ಅಲ್ಲಿಯೇ ಮರಣ ಹೊಂದಿದವಾಗಿ ಪೃಥ್ವಿ ಶುದ್ಧವಲ್ಲ. ಅಪ್ಪು ಶುದ್ಧವೆಂಬಿರಿ. ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಅಲ್ಲಿಯೇ ಹುಟ್ಟಿ ಅಲ್ಲಿಯೇ ಹೊಂದಿದವಾಗಿ ಅಪ್ಪು ಶುದ್ಧವಲ್ಲ. ಅಗ್ನಿ ಶುದ್ಧವೆಂಬಿರಿ. ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಅಲ್ಲಿಯೇ ಹುಟ್ಟಿ ಅಲ್ಲಿಯೇ ಹೊಂದಿದವಾಗಿ ಅಗ್ನಿ ಶುದ್ಧವಲ್ಲ. ವಾಯು ಶುದ್ಧವೆಂಬಿರಿ. ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಅಲ್ಲಿಯೇ ಹುಟ್ಟಿ ಅಲ್ಲಿಯೇ ಹೊಂದಿದವಾಗಿ ವಾಯು ಶುದ್ಧವಲ್ಲ. ಆಕಾಶ ಶುದ್ಧವೆಂಬಿರಿ. ಈ ಚತುರ್ವಿಧ ತತ್ವಂಗಳ ಒಳಗಿಟ್ಟುಕೊಂಡು ಈ ಪ್ರಕಾರವಾದ ಕಾರಣ ಆಕಾಶ ಶುದ್ಧವಲ್ಲ. ಇವು ಶುದ್ಧವಹ ಪರಿ ಎಂತೆಂದೊಡೆ, ಈ ಪಂಚತತ್ವಂಗಳು ಹುಟ್ಟಿದವು ನಮ್ಮ ಸದಾಶಿವನ ಸಿರಿಯುಪ್ಪದೊಂದು ಇಷ್ಟಲಿಂಗದಲ್ಲಿ. ಆ ಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡಿ ಸರ್ವ ರುಚಿ

ಪದಾರ್ಥವನು ತಂದು ಆ ಲಿಂಗಕ್ಕೆ ಕೊಟ್ಟಲ್ಲಿ ಲಿಂಗಪ್ರಸಾದವನು ಅಂಗಕ್ಕೆ ಲೇಸಾಗಲೆಂದು ಕೊಂಬಾತನ ಸರ್ವಾಂಗವೆಲ್ಲ ಶುದ್ಧವಯ್ಯಾ! ಆತನಿಪ್ಪ ಗೃಹವೇ ಪುಣ್ಯಕ್ಷೇತ್ರವು. ಅಂತಹವರ ಪಾದಕ್ಕೆ ಶರಣಾರ್ಥಿ. ಈ ವಿವ ರವನರಿಯದೆ ತನ್ನ ಕರದ ಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡದೆ, ಭೋಜನ ಪದಾರ್ಥ ನೀರು ರೊಟ್ಟಿ ಮುಟ್ಟಿಗೆ ಗುಗ್ಗರಿ ಸೀತನಿ ಬೆಳಸಿ ಕಾಯಿ ಕಸಿಕು ಹಣ್ಣು ಹಂಪಲ ಹಾಲು ಮೊಸರು ಮಜ್ಜಿಗೆ ತುಪ್ಪ ಸಕ್ಕರೆ ಹೋಳು ವೀಳೆಯ ಇವನೆಲ್ಲವನು ತನ್ನ ಲಿಂಗಕ್ಕೆ ಕೊಡದೆ ಅಂಗಕ್ಕೆ ಲೇಸಾಗಲೆಂದು ತಿಂಬುವನು ಅವನೀಗ ತಾನೇ ಶುದ್ಧ ಹೊಲೆಯನೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ**— ಪಂಚಭೂತಗಳು ಅತ್ಯಂತ ಶುದ್ಧವಾದವುಗಳೆಂದು ನಂಬು ತ್ತಾರೆ. ಆದರೆ ಅವು .ಶುದ್ಧವಾದವುಗಳಲ್ಲ. ಅವು ಯಾಕೆ ಶುದ್ಧವಲ್ಲವೆಂ ಬುದನ್ನು ವಚನಕಾರನು ಈ ವಚನದಲ್ಲಿ ಉದಾಹರಣೆಗಳನ್ನು ಕೊಟ್ಟು ಸ್ಪಷ್ಟಮಾಡಿ ತಿಳಿಯಪಡಿಸಿರುವನು. ಆದರೆ ಈ ವಸ್ತುಗಳನ್ನು ಇಷ್ಟ ಲಿಂಗಕ್ಕೆ ಅರ್ಪಿಸಿ, ಅವುಗಳ ರುಚಿ ಪದಾರ್ಥಗಳನ್ನು ಪ್ರಸಾದರೂಪಾಗಿ ಸೇವಿಸಿದರೆ ಅವುಗಳ ಅಶುದ್ಧತೆಯು ಹೊರಟುಹೋಗಿ ಭಕ್ತನ ಶರೀರ ವೆಲ್ಲ ಶುದ್ಧವಾಗುವದು. ಆದರೆ ಹೀಗೆ ವರ್ತಿಸದೆ ತನ್ನ ಶರೀರಕ್ಕೆ ಲೇಸಾ ಗಲೆಂದು ಭೋಗ್ಯ ವಸ್ತುಗಳನ್ನು ಭೋಗಿಸುವವನು ನಿಜವಾದ ಹೊಲೆ ಯನೆಂದು ಇಲ್ಲಿ ವಚನಕಾರನು ಅಂದಿದ್ದಾನೆ.

**ವಚನಃ**— ೧೧೨. ಪರ ಪುರುಷಾರ್ಥವನರಿಯದ ಕೆಟ್ಟ ನರಗುರಿ ಗಳು ನೀವು ಕೇಳಿರೋ. ಪರಪುರುಷಾರ್ಥಕ್ಕೆ ಪ್ರಾಣವ ಕೊಟ್ಟವರುಂಟು. ಮರಳಿ ಕೊಟ್ಟದ್ದಕ್ಕೆ ಕೀರ್ತಿದೇಹವ ಪಡೆದವರ ಪರಿಯ ಕೇಳು ಎಲೆ ಮನವೇ. ಪರಪುರುಷಾರ್ಥಿಯಾದರೆ, ವೀರವಿಕ್ರಮನಂತಾಗಬೇಕು. ಪರ ಪುರುಷಾರ್ಥಿಯಾದರೆ ಬಸವಕುಮಾರನಂತಾಗಬೇಕು. ಪರಪುರುಷಾರ್ಥಿ ಯಾದರೆ ಕಪೋತಪಕ್ಷಿಯಂತಾಗಬೇಕು. ಇಂತೀ ಪರಪುರುಷಾರ್ಥಕ್ಕೆ ಪ್ರಾಣವ ಕೊಟ್ಟವರುಂಟು. 'ಹಣವೇನು ದೊಡ್ಡಿತ್ತು? ಹೆಣ್ಣೇನು ದೊಡ್ಡಿತ್ತು? ಮಣ್ಣೇನು ದೊಡ್ಡಿತ್ತು? ಅನ್ನವೇನು ದೊಡ್ಡಿತ್ತು? ಇಂತಿ ವುಗಳೊಳು ಒಂದನಾದರು ಪರಪುರುಷಾರ್ಥಕ್ಕೆ ನೀಡದೆ ಮಾಡದೆ, ತನ್ನ ಶರೀರವ ಹೊರೆದುಕೊಂಡು, ಬದುಕುವೆನೆಂಬ ಹೊಲೆ ಮಾದಿಗರುಗಳಿಗೆ ಇಹ ಪರ ನಾಸ್ತಿ ಎಂದಾತ ನಮ್ಮ ಅಂಬಿಗರ ಚೌಡಯ್ಯ.

ಕೊಟ್ಟು ಕೊಂಬಲ್ಲಿ ಗುರುಪ್ರಸಾದವಾಯಿತ್ತು. ಹೀಗೆ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವನು ಕೊಟ್ಟು ಕೊಂಬ ಭಕ್ತನಿಗೀಗಲೆ ಸರ್ವರಿಂ ಜಲ ಹೊಲೆಯು ನೀಗಿದ. ಇದನರಿಯದಿರ್ದೊಡೆ, ಸರ್ವರೆಂಜಲ ಹೊಲೆ ಯೊಳಗೆ ಮುಳುಗಿಹೋದರೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ—** ಈ ಪ್ರಕಾರ ವಚನಕಾರನು ಅರ್ಪಿಸತಕ್ಕ ವಸ್ತುಗಳು ಹೇಗೆ ಎಂಜಲಾಗುತ್ತವೆಂಬದನ್ನು ಹೇಳಿ ಅವುಗಳ ಬಾಹ್ಯ ಕಿಲ್ಮಿಷವನ್ನು ಹೋಗಲಾಡಿಸುವ ಒಂದು ಕ್ರಮವನ್ನು ಹೇಳಿರುವನು. ಅದು ಏನೆಂದರೆ, ಭಕ್ತರು ಶಿವಮಂತ್ರವನ್ನು ಅಂಗುಲಿಗಳಲ್ಲಿ ನಿವೇದಿಸಿ ಇಂಥ ಹಸ್ತದಲ್ಲಿ ವಿಭೂತಿಯನ್ನು ಇಟ್ಟು, ಆದರ ಮೂಲಕ ಎಂಜಲಾದ ಪದಾರ್ಥಗಳನ್ನು ಶುದ್ಧಗೊಳಿಸತಕ್ಕದ್ದು. ಹೀಗೆ ಶುದ್ಧಮಾಡಿ ಪರಮಾತ್ಮನಿಗೆ ಅರ್ಪಿಸಿ ಸೇವಿಸತಕ್ಕದ್ದು. ಇದು ಗುರುಪ್ರಸಾದವೆನಿಸುವದು. ಇದೇ ರೀತಿಯಾಗಿಯೇ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳನ್ನು ಅಣಿಮಾಡಿಕೊಂಡು ಸೇವಿಸತ ಕ್ಕದ್ದು. ಹೀಗೆ ಮಾಡಿದಲ್ಲಿ ಎಲ್ಲ ಬಗೆಯ ಎಂಜಲು ಮತ್ತು ಹೊಲೆಯು ಹೊರಟುಹೋಗುವದು. ಈ ರೀತಿಯನ್ನು ತಿಳಿಯದೆ ಹೋಗಿ ಪದಾ ರ್ಥಗಳನ್ನು ಸೇವಿಸಿದರೆ, ಅದೇ ನಿಜವಾದ ಹೊಲೆ ಎಂದು ಇಲ್ಲಿ ಹೇಳಿ ದ್ದಾನೆ.

**ವಚನಃ—** ೧೧೧. ಜನನ ಸೂತಕ ಮರಣಸೂತಕಂಗಳ ಕಳೆದು ಶುದ್ಧವಾದೆನೆಂಬ ಅಜ್ಞಾನಿ ಜಡಜೀವಿಗಳು ನೀವು ಕೇಳಿರೋ! ಪೃಥ್ವಿ ಶುದ್ಧವೆಂಬಿರಿ. ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಅಲ್ಲಿಯೇ ಹುಟ್ಟಿ ಅಲ್ಲಿಯೇ ಮರಣ ಹೊಂದಿದವಾಗಿ ಪೃಥ್ವಿ ಶುದ್ಧವಲ್ಲ. ಅಪ್ಪು ಶುದ್ಧ ವೆಂಬಿರಿ. ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಅಲ್ಲಿಯೇ ಹುಟ್ಟಿ ಅಲ್ಲಿಯೇ ಹೊಂದಿದವಾಗಿ ಅಪ್ಪು ಶುದ್ಧವಲ್ಲ. ಅಗ್ನಿ ಶುದ್ಧವೆಂಬಿರಿ. ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಅಲ್ಲಿಯೇ ಹುಟ್ಟಿ ಅಲ್ಲಿಯೇ ಹೊಂದಿದವಾಗಿ ಅಗ್ನಿ ಶುದ್ಧವಲ್ಲ. ವಾಯು ಶುದ್ಧವೆಂಬಿರಿ. ಇಪ್ಪತ್ತೊಂದು ಲಕ್ಷ ಜೀವರಾಶಿಗಳು ಅಲ್ಲಿಯೇ ಹುಟ್ಟಿ ಅಲ್ಲಿಯೇ ಹೊಂದಿದವಾಗಿ ವಾಯು ಶುದ್ಧವಲ್ಲ. ಆಕಾಶ ಶುದ್ಧವೆಂಬಿರಿ. ಈ ಚತುರ್ವಿಧ ತತ್ವಂಗಳ ಒಳಗಿಟ್ಟುಕೊಂಡು ಈ ಪ್ರಕಾರ ವಾದ ಕಾರಣ ಆಕಾಶ ಶುದ್ಧವಲ್ಲ. ಇವು ಶುದ್ಧವಹ ಪರಿ ಎಂತೆಂದೊಡೆ, ಈ ಪಂಚತತ್ವಂಗಳು ಹುಟ್ಟಿದವು ನಮ್ಮ ಸದಾಶಿವನ ಸಿರಿಯುಪ್ಪದೊಂದು ಇಷ್ಟಲಿಂಗದಲ್ಲಿ. ಆ ಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡಿ ಸರ್ವ ರುಚಿ

ಪದಾರ್ಥವನು ತಂದು ಆ ಲಿಂಗಕ್ಕೆ ಕೊಟ್ಟಲ್ಲಿ ಲಿಂಗಪ್ರಸಾದವನು ಅಂಗಕ್ಕೆ ಲೇಸಾಗಲೆಂದು ಕೊಂಬಾತನ ಸರ್ವಾಂಗವೆಲ್ಲ ಶುದ್ಧವಯ್ಯಾ! ಆತನಿಪ್ಪ ಗೃಹವೇ ಪುಣ್ಯಕ್ಷೇತ್ರವು. ಅಂತಹವರ ಪಾದಕ್ಕೆ ಶರಣಾರ್ಥಿ. ಈ ವಿವರವನರಿಯದೆ ತನ್ನ ಕರದ ಲಿಂಗಕ್ಕೆ ಅಷ್ಟವಿಧಾರ್ಚನೆಯ ಮಾಡದೆ, ಭೋಜನ ಪದಾರ್ಥ ನೀರು ರೊಟ್ಟಿ ಮುಟ್ಟಿಗೆ ಗುಗ್ಗರಿ ಸೀತನಿ ಬೆಳಸಿ ಕಾಯಿ ಕಸಿಕು ಹಣ್ಣು ಹಂಪಲ ಹಾಲು ಮೊಸರು ಮಜ್ಜಿಗೆ ತುಪ್ಪ ಸಕ್ಕರೆ ಹೋಳು ವೀಳೆಯ ಇವನೆಲ್ಲವನು ತನ್ನ ಲಿಂಗಕ್ಕೆ ಕೊಡದೆ ಅಂಗಕ್ಕೆ ಲೇಸಾಗಲೆಂದು ತಿಂಬುವನು ಅವನೀಗ ತಾನೇ ಶುದ್ಧ ಹೊಲೆಯನೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ—** ಪಂಚಭೂತಗಳು ಅತ್ಯಂತ ಶುದ್ಧವಾದವುಗಳೆಂದು ನಂಬುತ್ತಾರೆ. ಆದರೆ ಅವು .ಶುದ್ಧವಾದವುಗಳಲ್ಲ. ಅವು ಯಾಕೆ ಶುದ್ಧವಲ್ಲವೆಂಬುದನ್ನು ವಚನಕಾರನು ಈ ವಚನದಲ್ಲಿ ಉದಾಹರಣೆಗಳನ್ನು ಕೊಟ್ಟು ಸ್ಪಷ್ಟಮಾಡಿ ತಿಳಿಯಪಡಿಸಿರುವನು. ಆದರೆ ಈ ವಸ್ತುಗಳನ್ನು ಇಷ್ಟಲಿಂಗಕ್ಕೆ ಅರ್ಪಿಸಿ, ಅವುಗಳ ರುಚಿ ಪದಾರ್ಥಗಳನ್ನು ಪ್ರಸಾದರೂಪಾಗ ಸೇವಿಸಿದರೆ ಅವುಗಳ ಅಶುದ್ಧತೆಯು ಹೊರಟುಹೋಗಿ ಭಕ್ತನ ಶರೀರವೆಲ್ಲ ಶುದ್ಧವಾಗುವದು. ಆದರೆ ಹೀಗೆ ವರ್ತಿಸದೆ ತನ್ನ ಶರೀರಕ್ಕೆ ಲೇಸಾಗಲೆಂದು ಭೋಗ್ಯ ವಸ್ತುಗಳನ್ನು ಭೋಗಿಸುವವನು ನಿಜವಾದ ಹೊಲೆಯನೆಂದು ಇಲ್ಲಿ ವಚನಕಾರನು ಅಂದಿದ್ದಾನೆ.

**ವಚನಃ—** ೧೧೨. ಪರ ಪುರುಷಾರ್ಥವನರಿಯದ ಕೆಟ್ಟ ನರಗುರಿಗಳು ನೀವು ಕೇಳಿರೋ. ಪರಪುರುಷಾರ್ಥಕ್ಕೆ ಪ್ರಾಣವ ಕೊಟ್ಟವರುಂಟು. ಮರಳಿ ಕೊಟ್ಟದ್ದಕ್ಕೆ ಕೀರ್ತಿದೇಹವ ಪಡೆದವರ ಪರಿಯ ಕೇಳು ಎಲೆ ಮನವೇ. ಪರಪುರುಷಾರ್ಥಿಯಾದರೆ, ವೀರವಿಕ್ರಮನಂತಾಗಬೇಕು. ಪರಪುರುಷಾರ್ಥಿಯಾದರೆ ಬಸವಕುಮಾರನಂತಾಗಬೇಕು. ಪರಪುರುಷಾರ್ಥಿಯಾದರೆ ಕಪೋತಪಕ್ಷಿಯಂತಾಗಬೇಕು. ಇಂತೀ ಪರಪುರುಷಾರ್ಥಕ್ಕೆ ಪ್ರಾಣವ ಕೊಟ್ಟವರುಂಟು. 'ಹಣವೇನು ದೊಡ್ಡಿತ್ತು? ಹೆಣ್ಣೇನು ದೊಡ್ಡಿತ್ತು? ಮಣ್ಣೇನು ದೊಡ್ಡಿತ್ತು? ಅನ್ನವೇನು ದೊಡ್ಡಿತ್ತು? ಇಂತಿವುಗಳೊಳು ಒಂದನಾದರು ಪರಪುರುಷಾರ್ಥಕ್ಕೆ ನೀಡದೆ ಮಾಡದೆ, ತನ್ನ ಶರೀರವ ಹೊರೆದುಕೊಂಡು, ಬದುಕುವೆನೆಂಬ ಹೊಲೆಮಾದಿಗರುಗಳಿಗೆ ಇಹ ಪರ ನಾಸ್ತಿ ಎಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವ:**— ಪ್ರಸಾದಿಯು ತನ್ನ ಪ್ರಾಣವಲ್ಲದೆ ತನ್ನ ಸ್ವತ್ತನ್ನೆಲ್ಲ ತನ್ನ ಕೇವಲ ಸ್ವಾರ್ಥಕ್ಕಾಗಿ ಮಾಡದೆ ಪರಪುರುಷಾರ್ಥಕ್ಕೋಸ್ಕರ ಮಾಡಿ ಬಾಳಬೇಕೆಂದು ವಚನಕಾರನು ಹೇಳಿರುವನು. ಹೀಗೆ ಆಚರಿಸುವದೇ ಅವನ ಶೀಲ ಮತ್ತು ಆವನ ಆಚಾರಕ್ಕೆ ತಕ್ಕುದೆಂದು ಅಂದಿದ್ದಾನೆ. ಹೀಗೆ ಆಚರಿಸದೆ ಇದ್ದವನು ಹೊಲೆ ಮಾದಿಗನೆಂದು ಹೇಳಿ, ಹಿಂದಿನ ಅನೇಕರ ಚಾರಿತ್ರ್ಯಗಳನ್ನು ಉದಹರಿಸಿದ್ದಾನೆ.

# ಗುರುಲಿಂಗಜಂಗಮ.

**ವಿವರಣೆ:**— ಗುರುಲಿಂಗಜಂಗಮಕ್ಕೆ ವೀರಶೈವ ಧರ್ಮದಲ್ಲಿ ಅತ್ಯಂತ ಮಹತ್ವದ ಸ್ಥಾನವಿದೆ. ಅವುಗಳ ಮರ್ಮವನ್ನು ಪ್ರತಿಯೊಬ್ಬ ವೀರಶೈವನು ಅರಿತು ಆಚರಿಸುವದು ಅವಶ್ಯವು. ಆದರೆ ಷಟ್‌ಸ್ಥಲದ ತತ್ವಗಳನ್ನು ತಿಳಿದಾಗಳೇ ಈ ಗುರುಲಿಂಗಜಂಗಮದ ನಿಜಸ್ಥಿತಿಯು ತಿಳಿದು ಬರುವದು.

ಗುರುಲಿಂಗಜಂಗಮವೆಂದರೆ ಕೇವಲ ಬಾಹ್ಯ ವಸ್ತುಗಳಲ್ಲ. ಗುರುವೆಂದರೆ ದೀಕ್ಷೆಯನ್ನು ಮಾಡಿ ಲಿಂಗಧಾರಣೆ ಮಾಡಿಸುವಂಥವನೆಂತಲೂ, ಲಿಂಗವೆಂದರೆ ಕೆಲವು ಸಂಸ್ಕಾರಗಳಿಂದ ಶರೀರದ ಮೇಲೆ ಧಾರಣೆಮಾಡಿದ ಸ್ಥೂಲ ವಸ್ತುವೆಂತಲೂ, ಜಂಗಮವೆಂದರೆ ಮಠಗಳಲ್ಲಿದ್ದುಕೊಂಡು ಸಾಮಾಜಿಕ ಕೆಲವು ವಿಶಿಷ್ಟ ಕಾರ್ಯಮಾಡುವಂಥ ವ್ಯಕ್ತಿ ಎಂತಲೂ, ವಾಡಿಕೆಯಾಗಿ ತಿಳಿಯುವದುಂಟು. ಈ ಮೂವರನ್ನು ನಂಬಿ ಪೂಜಿಸಿದರೆ, ಮೋಕ್ಷವೆಂತಲೂ ಜನರು ನಂಬುವದುಂಟು. ಈ ತಿಳುವಳಿಕೆಯಲ್ಲಿ ಕೆಲ ಮಟ್ಟಿಗೆ ಸತ್ಯಾಂಶವು ಇದ್ದರೂ, ಇಷ್ಟರಿಂದ ಮಾತ್ರ ಗುರುಲಿಂಗಜಂಗಮದ ಜ್ಞಾನವಾದಂತಾಗಲಿಲ್ಲ. ಇದು ಕೇವಲ ಬಾಹ್ಯ ಆಚರಣೆ ಮಾತ್ರ ಆಗುವದು. ಇಷ್ಟರಿಂದ ಮನುಷ್ಯನಿಗೆ ಲಿಂಗಾಂಗ ಸಾಮರಸ್ಯತ್ವವು ಪ್ರಾಪ್ತವಾಗಲಾರದು.

ಗುರುಲಿಂಗಜಂಗಮದ ಕ್ರಿಯೆಗಳು ಷಟ್‌ಸ್ಥಲಶಾಸ್ತ್ರದ ಪ್ರಕಾರ ತೀರ ಬೇರೆ ಇವೆ. ಮನುಷ್ಯನು ಅವುಗಳನ್ನು ತಿಳಿದು ಅವುಗಳನ್ನು ತನ್ನಲ್ಲಿ ಸಂಬಂಧಿಸಿಕೊಳ್ಳಬೇಕು. ಅವುಗಳ ಮೂಲಕ ತನ್ನ ಅಂತರ್ಯ ಶಕ್ತಿಗಳನ್ನು ಬೆಳಿಸಿಕೊಳ್ಳಬೇಕು. ಗುರುಲಿಂಗಜಂಗಮಗಳು ಕೇವಲ ಬಾಹ್ಯ ವಸ್ತುಗಳಲ್ಲ. ಅವುಗಳಿಗೂ ಮನುಷ್ಯನ ಒಳಗಿನ ಶಕ್ತಿಗಳಿಗೂ ಸಂಬಂಧವಿದೆ. ಈ ಸಂಬಂಧವನ್ನು ತಿಳಿದುಕೊಂಡು ಮನುಷ್ಯನು ತನ್ನೊಳಗೆ ಆ ಗುರುಲಿಂಗಜಂಗಮಗಳನ್ನು ಪ್ರಕಾಶಿಸಹತ್ತಬೇಕು.

ಉದಾಹರಣಾರ್ಥವಾಗಿ ಅಂಬಿಗರ ಚೌಡಯ್ಯನು ಮುಂದೆ ಕಾಣಿಸಿದ ಒಂದು ವಚನದಲ್ಲಿ ಗುರುಲಿಂಗಜಂಗಮಗಳೆಂದರೆ ಅವು ಅನುಕ್ರಮವಾಗಿ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದ ಸ್ವರೂಪವೆಂದು ವರ್ಣಿಸಿರುವನು. ಪ್ರಸಾದವೆಂದರೆ ಅರ್ಪಣಮಾಡಿ, ಹೀಗೆ ಶುದ್ಧಮಾಡಿದ ವಸ್ತುವನ್ನು ಸ್ವೀಕರಿ

ಸುವದಿರುತ್ತದೆ. ಮನುಷ್ಯನು ಗುರುಲಿಂಗಜಂಗಮದೊಡನೆ ಹೀಗೆ ವ್ಯವಹರಿಸಬೇಕು. ಅಂದರೆ ಅವುಗಳೊಡನೆ ಅರ್ಪಣಭಾವದಿಂದ ವ್ಯವಹರಿಸಿದರೆ, ಆ ಗುರುಲಿಂಗಜಂಗಮದ ಗುಣಗಳು ತನ್ನಲ್ಲಿ ಒಡಮೂಡುವವು. ಮನುಷ್ಯನ ಶರೀರಗಳು ಸ್ಥೂಲ ಸೂಕ್ಷ್ಮ ಕಾರಣಗಳೆಂದು ಮೂರು ಇರುತ್ತವೆ. ಇವುಗಳನ್ನು ಗುರುಲಿಂಗಜಂಗಮಕ್ಕೆ ಅನುಕ್ರಮವಾಗಿ ಸಂಬಂಧಿಸಬೇಕು. ಹೀಗೆ ಮಾಡಬಲ್ಲನಾದರೆ ಗುರುಲಿಂಗಜಂಗಮದ ಗುಣಗಳು ಈ ಮೂರು ಶರೀರಗಳಲ್ಲಿ ವ್ಯಾಪಿಸಹತ್ತುವವು. ಎಂದರೆ ಅವುಗಳ ಚೈತನ್ಯದಲ್ಲಿ ಲಿಂಗದ ಗುಣಗಳು ತಲೆದೋರುತ್ತ ಹೋಗುವವು. ಗುರುಲಿಂಗಜಂಗಮದ ಉದ್ದೇಶವು ಮನುಷ್ಯನಲ್ಲಿಯ ಭವಸಂಬಂಧದ ಗುಣಗಳನ್ನು ನಿರ್ಮೂಲವಮಾಡಿ ಅವನಲ್ಲಿ ಲಿಂಗದ ಬೆಳಕನ್ನು ಕೆಡಹುವದೇ ಇರುತ್ತದೆ.

ಮನುಷ್ಯನಲ್ಲಿ ಗುರುಲಿಂಗಜಂಗಮದ ಕಳೆಯು ಬಲಪಟ್ಟ ಹಾಗೆ, ಅವನ ಶಕ್ತಿಗಳಾದರೂ ಹೆಚ್ಚುತ್ತ ಹೋಗುವವು. ಈ ಸ್ಥಿತಿಯು ಬಲಪಡುವದು ಅವನ ಪ್ರಗತಿಯನ್ನು ಸೂಚಿಸುತ್ತದೆ ಇದು ಅವನ ಅಂತರ್ಯ ವಿಕಾಸವು.

ಗುರುವು ಬಾಹ್ಯಸ್ಥಿತಿಯನ್ನು ಬಲಪಡಿಸುತ್ತಾನೆ. ಅವನಿಂದ ರೀತಿ ನಡತೆ ನೀತಿ ಆಚಾರ ವಿಚಾರಗಳನ್ನು ಅರಿಯಬೇಕು. ಲಿಂಗವು ಮನಸ್ಸಿಗೆ ಸಂಬಂಧಿಸಿದ್ದು. ಅದರ ಮೂಲಕ ಅವನು ತನ್ನ ಮನಸ್ಸನ್ನು ಬಲಪಡಿಸಬೇಕು. ಲಿಂಗವು ಮನಸ್ಸನ್ನು ತನ್ನ ಕೈವಶದಲ್ಲಿ ಇಟ್ಟುಕೊಳ್ಳಲು ಸಹಾಯವಾಗುತ್ತದೆ. ಜಂಗಮದ ಮೂಲಕ ತನ್ನ ಆತ್ಮ ಶಕ್ತಿಯನ್ನು ಬೆಳಿಸಬೇಕು. ಗುರುಲಿಂಗಜಂಗಮಗಳು ಈ ಪ್ರಕಾರ ಮನುಷ್ಯನಲ್ಲಿ ಪರಿಪೂರ್ಣ ವಿಕಾಸವನ್ನುಂಟುಮಾಡಲು ಸಹಾಯಕವಾಗುತ್ತವೆ. ಇದರ ತಿಳುವಳಿಕೆಯೇ ಗುರುಲಿಂಗಜಂಗಮದ ಅರಿವು.

ಗುರುಲಿಂಗಜಂಗಮದ ಗುಣಗಳು ಆಯಾ ಶರೀರಗಳಲ್ಲಿ ಹೆಚ್ಚುತ್ತ ಹೋದ ಹಾಗೆ, ಅವುಗಳ ಅಂತರ್ಯ ಪರಸ್ಪರ ಸಂಬಂಧವೂ ಶರೀರದಲ್ಲಿ ನಿಕಟವಾಗುತ್ತ ಹೋಗುವದು. ಅವು ಬಾಹ್ಯದಲ್ಲಿ ಭಿನ್ನವಾಗಿದ್ದರೂ ಅವುಗಳ ಮೂಲಸ್ಥಿತಿಯು ಒಂದೇ ಇರುತ್ತದೆ. ಅವುಗಳ ಮೂಲಕ ಶರೀರದಲ್ಲಿ ಆಯಾ ಶಕ್ತಿಗಳ ಏಕೀಕರಣವಾಗುತ್ತದೆ. ಆಗಳೇ ಲಿಂಗಾಂಗ

ಸಾಮರಸ್ಯತ್ವವು ಒದಗುತ್ತದೆ. ಷಟ್‌ಸ್ಥಲಶಾಸ್ತ್ರದ ಪ್ರಕಾರ ಇದೇ ಮೋಕ್ಷಪದವೆನಿಸುತ್ತದೆ.

ವಚನಕಾರರು ಗುರುಲಿಂಗಜಂಗಮಕ್ಕೆ ಬಹಳ ಮಹತ್ವ ಕೊಟ್ಟಿರುವರು. ಇದು ಏಕೆಂಬುದು ಮೇಲ್ಕಂಡ ಕಾರಣಕ್ಕೋಸ್ಕರವೇ ಇದೆ. ಗುರುಲಿಂಗಜಂಗಮದ ಮೇಲ್ಕಂಡ ತತ್ವಗಳನ್ನು ಉದ್ದೇಶಿಸಿ, ಅವರು ತಮ್ಮ ವಚನಗಳನ್ನು ನುಡಿದಿರುತ್ತಾರೆ.

ಒಟ್ಟಿಗೆ ತನ್ನನ್ನು ತಾನು ಅರಿಯುವದೇ ಗುರುಲಿಂಗಜಂಗಮದ ಜ್ಞಾನವೆಂದು ಹೇಳಬಹುದು. ಈ ಜ್ಞಾನವನ್ನು ಹೊಂದಲು ಈ ವಸ್ತುಗಳು ಬಹಳ ಸಹಾಯಕಾರಿಗಳಾಗಿವೆ. ತಾನೆಂಬ ವಸ್ತುವಿನಲ್ಲಿ ಅನೇಕ ವಿಷಯುಗಳು ಅಡಕವಾಗಿವೆ. ಈ ವಿಷಯುಗಳಾವವು ಮತ್ತು ಅವುಗಳ ಪರಸ್ಪರ ಸಂಬಂಧವೇನು ಎಂಬದನ್ನು ಅರಿಯಬೇಕು. ಇದಕ್ಕೋಸ್ಕರ ವಚನಕಾರರು ಕರಣಹಸಿಗೆ, ಘಟಚಕ್ರ ಸಕೀಲಗಳೆಂದು ಅನೇಕ ಗ್ರಂಥಗಳನ್ನು ಬರೆದಿರುವರು. ಅವುಗಳನ್ನು ಗುರುಮುಖದಿಂದ ಅರಿಯಬೇಕೆಂದು ಅವರು ಹೇಳುತ್ತಾರೆ. ಹೀಗೆ ಅರಿತು ಗುರುಲಿಂಗಜಂಗಮವನ್ನು ತನ್ನಲ್ಲಿ ಸಂಬಂಧಿಸಿಕೊಂಡು ಆಚರಿಸಬೇಕು. ಹೀಗೆ ಆಚರಿಸಿದಾಗಳೆ ಅಷ್ಟಾವರಣಗಳು ಅವನಿಗೆ ಪ್ರಾಪ್ತವಾಗುವವು. ಹೀಗೆ ಅಷ್ಟಾವರಣಗಳನ್ನು ಹೊಂದುವವೇ ವೀರಶೈವತ್ವದ ಗುರುತು. ವೀರಶೈವರು ಜಪ ತಪ ಹೋಮ ಹವನಾದಿಗಳನ್ನು ಪಾಲಿಸುವದಿಲ್ಲ. ಯಾಕಂದರೆ ಅಷ್ಟಾವರಣಗಳನ್ನು ಅವರು ಪಾಲಿಸುವವರಾದ್ದರಿಂದ ಈ ಬಗೆಯ ಆಚಾರಗಳು ಅವರಿಗೆ ಅನಾವಶ್ಯಕವಾಗುತ್ತವೆ. ಹಾಗೆಯೇ ಅವರು ಅನೇಕ ಗುಡಿಗುಂಡಾರಗಳಿಗೆ ಹೋಗಿ ಅನೇಕ ವಿಧ ಪೂಜೆಗಳನ್ನು ಅಲ್ಲಿ ಮಾಡುವದು ಅವಶ್ಯವಿಲ್ಲ. ಯಾಕೆಂದರೆ ಗುರುಲಿಂಗಜಂಗಮದ ಮೂಲಕ ಅತ್ಯಂತ ಮಹತ್ವವಾದ ಅಂತರ್ಯ ಪೂಜೆಯಲ್ಲಿ ಅವರು ಮಗ್ನರಾಗಿರಬೇಕು. ಇದು ಅವರ ಅಷ್ಟಾವರಣಗಳ ಜ್ಞಾನದ ಮೂಲಕ ಉಂಟಾಗುತ್ತದೆ. ಇದರಿಂದ ವೀರಶೈವರಲ್ಲಿ ಬಾಹ್ಯ ಆಚರಣೆಗಳು ಬಹು ಕಡಿಮೆಯಾಗಿವೆ. ಕಡಿಮೆಯಾಗಿದ್ದರೂ ಇದ್ದವುಗಳು ಗರ್ಭಿತಾರ್ಥವುಳ್ಳವು ಮತ್ತು ಭಾವನಾಪ್ರಧಾನವಾದವುಗಳು ಇವೆ. ಷಟ್‌ಸ್ಥಲಗಳ ತತ್ವಗಳನ್ನು ತಿಳಿದುಕೊಂಡು ಆ ರೀತಿ ಅಷ್ಟಾವರಣಗಳನ್ನು ನಂಬಿ ಪಾಲಿಸಿದರೆ ಪರಮಾತ್ಮ

ಪದವು ನಿಶ್ಚಯವಾಗಿ ಒಂದೇ ಜನ್ಮದಲ್ಲಿ ಸಿಗುವದೆಂದು ವಚನಕಾರರು ಸಂಪೂರ್ಣ ವಿಶ್ವಾಸವನ್ನು ತಾಳಿರುವರು.

**ವಚನಃ**— ೧೧೩. ಅಯ್ಯಾ ಶ್ರೀಗುರುಲಿಂಗಜಂಗಮದ ವೇಧಾ ಮಂತ್ರ ಕ್ರಿಯಾದೀಕ್ಷೆಗೆ ಹೊರಗಾದ ಭುವನದ ಶೈವ ದೈವದರ್ಶನೆ ಪೂಜೆಯ ಮಾಡಿ ಆದರುಚ್ಛಿಷ್ಟವ ಭುಂಜಿಸುವುದಂಗಾಚಾರ. ಅದನುಳಿದು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಸ್ವರೂಪವಾದ ಅನಾದಿ ಗುರುಲಿಂಗಜಂಗ ಮದರ್ಶನೆ ಪೂಜೆಯ ಮಾಡಿ ಕಿಂಕುರ್ವಾಣದಿಂದವರ ಒಕ್ಕು ಮಿಕ್ಕು ಪ್ರಸಾದವ ಹಾರೈಸುವದೆ ಲಿಂಗಾಚಾರ. ಈ ಭೇದವ ತಿಳಿದು ಪಂಚಾ ಚಾರವ ಆಚರಣೆಗೆ ತಂದು ಸಪ್ತಾಚಾರವ ಸಂಬಂಧವಿಟ್ಟು ಅಷ್ಟಾವರ ಣದ ಕಲಿನೆಲೆಗಳ ಒಳಗು ಹೊರಗು ಎನ್ನದೆ ಸದ್ಗುರು ಮುಖದಿಂದೆ ಆಚರಣೆಯ ಸಂಬಂಧವ ತಿಳಿದು ಸದ್ಭಕ್ತಿ ಜ್ಞಾನ ವೈರಾಗ್ಯ ಷಟ್ಸ್ಥಲ ಮಾರ್ಗವಿಡಿದು ನಿಜಾಚರಣೆಯಲ್ಲಿ ಆಚರಿಸುವರೆ, ಶಿವಭಕ್ತಿ ಶಿವಭಕ್ತ ಶಿವಜಂಗಮವಲ್ಲದೆ ಉಳಿದ ವೇಷಧಾರಿಗಳೆಲ್ಲ ಎನ್ನೊಡೆಯ ಪ್ರಮಥ ಗಣಾಚಾರಕ್ಕೆ ಹೊರಗೆಂದಾತನಂಬಿಗರ ಚೌಡಯ್ಯನು.

**ವಿವರಣೆಃ**— ವಚನಕಾರನು ಇಲ್ಲಿ ಆಚಾರಗಳಲ್ಲಿ ಎರಡು ವಿಧ ಗಳನ್ನು ಮಾಡಿರುವನು. ಒಂದು ಅಂಗಾಚಾರ ಮತ್ತೊಂದು ಲಿಂಗಾ ಚಾರ. ಅಂಗಾಚಾರವೆಂದರೆ ಶೈವರು ಆಚರಿಸುವ ಆಚರಣೆಯು. ಈ ಶೈವ ರಿಗೆ ವೀರಶೈವರಲ್ಲಿ ಹ್ಯಾಗೆ ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ವೇಧಾದೀಕ್ಷೆ ಇವುಗಳಿಂದ ಲಿಂಗಧಾರಣವಿರುತ್ತದೋ ಹಾಗೆ ಲಿಂಗಧಾರಣವಿರುವದಿಲ್ಲ. ವೀರಶೈವರು ಕ್ರಿಯಾದೀಕ್ಷೆಯಿಂದ ಸ್ಥೂಲಶರೀರದಲ್ಲಿ ಇಷ್ಟಲಿಂಗವನ್ನೂ ಮಂತ್ರದೀಕ್ಷೆಯಿಂದ ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗವನ್ನೂ ವೇಧಾದೀ ಕ್ಷೆಯಿಂದ ಕಾರಣ ಶರೀರದಲ್ಲಿ ಭಾವಲಿಂಗವನ್ನೂ ಹೊಂದಿ ಆಯಾ ಲಿಂಗಗಳನ್ನು ಪೂಜಿಸುತ್ತಾರೆ. ಆದರೆ ಶೈವರು ಈ ಬಗೆಯ ಸಂಸ್ಕಾರ ಗಳನ್ನು ಹೊಂದುವದಿಲ್ಲ. ಅವರು ಗುಡಿಗುಂಡಾರಗಳಲ್ಲಿರುವ ವೀರಭದ್ರ ಗಣಪತಿ ಶಿವ ಪಾರ್ವತಿ ನಂದಿ ಮೊದಲಾದ ಶೈವ ದೈವಗಳನ್ನು ಪೂಜಿ ಸುವರು. ಮತ್ತು ಹೀಗೆ ಪೂಜಿಸಿ ಆ ದೈವಗಳ ಉಚ್ಛಿಷ್ಟವನ್ನು ಪ್ರಸಾದ ವೆಂದು ಭಾವಿಸಿ ಸೇವಿಸುವರು. ಈ ಬಗೆಯ ಪ್ರಸಾದವು ವೀರಶೈವನಿ ಗಿಲ್ಲ. ಆವನ ಪ್ರಸಾದವು ಬೇರೆ ವಿಧವಾಗಿರುತ್ತದೆ. ಆವನು ಆಯಾ ದೀಕ್ಷೆಗಳಿಂದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಇವುಗಳನ್ನು ಒಳ

ಕೊಂಡು ಗುರುಲಿಂಗಜಂಗಮ ಪೂಜೆಯನ್ನು ಮಾಡಿ ಪ್ರಸಾದಮಯನಾಗಿರತಕ್ಕದ್ದು. ಈ ವಚನದಲ್ಲಿ ಈ ಗುರುಲಿಂಗಜಂಗಮಕ್ಕೆ ವಚನಕಾರನು ಅನಾದಿ ಗುರುಲಿಂಗಜಂಗಮವೆಂದಿರುವನು. ಅಂದರೆ ಕೇವಲ ದೃಶ್ಯವಾದ ಸ್ಥೂಲ ಗುರುಲಿಂಗಜಂಗಮಗಳಲ್ಲ. ಅವನು ಪೂಜಿಸುವದು ಅನಾದಿ ಗುರುಲಿಂಗಜಂಗಮವು. ಈ ಅನಾದಿ ಗುರುಲಿಂಗಜಂಗಮವು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ಸ್ವರೂಪುಳ್ಳದಾಗಿರುತ್ತದೆಂದು ಹೇಳಿದ್ದಾನೆ. ಅಂದರೆ ಗುರುವು ಶುದ್ಧ ಪ್ರಸಾದ ಸ್ವರೂಪವಾಗಿರುವದು. ಲಿಂಗವು ಸಿದ್ಧ ಪ್ರಸಾದ ಸ್ವರೂಪವಾಗಿರುವದು. ಜಂಗಮವು ಪ್ರಸಿದ್ಧ ಪ್ರಸಾರ ಸ್ವರೂಪವಾಗಿರುವದು. ಈ ಬಗೆಯ ಗುರುಲಿಂಗಜಂಗಮದ ಅರ್ಚನೆ ಪೂಜೆಯ ಮಾಡಿ ಕಿಂಕರಭಾವದಿಂದ ತನ್ನೆಲ್ಲವುಗಳನ್ನು ಅವುಗಳಿಗೆ ಅರ್ಪಿಸಿ ಪ್ರಸಾದವನ್ನು ಸೇವಿಸುವನು. ಇದೇ ಲಿಂಗಾಚಾರವೆನಿಸಿಕೊಳ್ಳುವದು. ಇದು ಹೇಗೆ ಸಾಧ್ಯವೆಂಬುದನ್ನು ವಚನಕಾರನು ಇಲ್ಲಿ ಹೇಳಿದ್ದಾನೆ. ಅದು ಏನೆಂದರೆ, ಮನುಷ್ಯನು ಮೊದಲು ಪಂಚಾಚಾರಗಳನ್ನು ತಿಳಿಯಬೇಕು. ಇವು ಯಾವವೆಂದರೆ, ಲಿಂಗಾಚಾರ ಸದಾಚಾರ ಶಿವಾಚಾರ ಭೃತ್ಯಾಚಾರ ಗಣಾಚಾರ ಇವುಗಳೇ ಇರುತ್ತವೆ. ಲಿಂಗವನ್ನು ನಂಬಿ ಪೂಜಿಸುವದೇ ಲಿಂಗಾಚಾರವು. ನೀತಿಮತ್ತೆಯೇ ಸದಾಚಾರವು. ಎಲ್ಲವೂ ಶಿವಮಯವೆಂದು ಭಾವಿಸಿ ಭೇದವಿಡಿಯದೆ ಎಲ್ಲರೊಡನೆ ಬಂಧುಭಾವದಿಂದ ವರ್ತಿಸುವದೇ ಶಿವಾಚಾರವು. ಎಲ್ಲರೊಡನೆ ಕಿಂಕರಭಾವದಿಂದ ಇರುವದೇ ಭೃತ್ಯಾಚಾರವು. ತನ್ನ ಕಾರ್ಯಗಳನ್ನು ಎಂಥ ಪ್ರಸಂಗಗಳು ಬಂದರೂ ಕೂಡ ಬಿಡದಿರುವದೇ ಗಣಾಚಾರವು. ಹೀಗೆ ಮನುಷ್ಯನು ಮೊದಲು ನಡೆಯಬೇಕು. ಇವಲ್ಲದೆ ಸಪ್ತಾಚಾರಗಳು ಬೇರೆ ಇವೆ§ ಅವುಗಳನ್ನು ತನ್ನ ಅಂತರ್ಯ ಶರೀರಗಳಲ್ಲಿ ಸಂಬಂಧಿಸಿಕೊಳ್ಳಬೇಕು. ಈ ಸಪ್ತಾಚಾರಗಳು ಯಾವವೆಂದರೆ, ಕ್ರಿಯಾಚಾರ ಜ್ಞಾನಾಚಾರ ಭಾವಾಚಾರ, ಸತ್ಯಾಚಾರ ನಿತ್ಯಾಚಾರ, ಧರ್ಮಾಚಾರ ಮತ್ತು ಸರ್ವಾಚಾರ ಸಂಪತ್ತು ಇವಾಗಿವೆ. ಕ್ರಿಯಾಚಾರ ಜ್ಞಾನಾಚಾರ ಭಾವಾಚಾರಗಳು ಪಾದೋದಕ ಪ್ರಸಾದಗಳನ್ನು ತೆಗೆದುಕೊಳ್ಳುವ ರೀತಿಗಳು. ಇವು ವಿಶಿಷ್ಟಾರ್ಥವುಳ್ಳವಿವೆ. ಸತ್ಯಾಚಾರ ನಿತ್ಯಾಚಾರ ಧರ್ಮಾಚಾರ ಇವು ಕ್ರಿಯೆಗಳನ್ನು ಮಾಡುವ ರೀತಿಯಾಗಿವೆ. ಸರ್ವಾಚಾರಸಂಪತ್ತು ಷಟ್‌ಸ್ಥಲದ

---

§ **ಇವುಗಳ ಪೂರ್ಣ ವಿವೇಚನೆಯು ಶಿವಾನುಭವ ಸಂಪುಟ ೮ ಸಂಚಿಕೆ ೩ ಪುಟ ೧೭೬ ಇಲ್ಲಿ ಬಂದಿದೆ.**

ಪ್ರಕಾರ ಎಲ್ಲ ಆಚರಣೆಗಳನ್ನು ಕ್ರೋಡೀಕರಿಸಿದ ಏಕೋತ್ತರ ಶತಸ್ಥಲ ಮಾರ್ಗವಾಗಿದೆ. ಹೀಗೆ ಈ ಸಪ್ತಾಚಾರಗಳನ್ನು ತನ್ನ ಅಂತರ್ಯದಲ್ಲಿ ಸಂಬಂಧಿಸಿಕೊಳ್ಳಬೇಕು. ಈ ಆಚರಣೆಗಳ ಕೂಡ ಗುರುಲಿಂಗಜಂಗಮ ಮೊದಲಾದ ಅಷ್ಟಾವರಣಗಳ ನೆಲೆಕಲೆಗಳನ್ನು ಅರಿಯಬೇಕೆಂದು ವಚನಕಾರನು ಹೇಳಿದ್ದಾನೆ. ಈ ಅಷ್ಟಾವರಣಗಳು ಒಳಗಿನವು ಹೊರಗಿನವು ಎಂದು ಎರಡು ವಿಧವಾಗಿ ಇರುತ್ತವೆ. ಹೀಗೆ ಎರಡು ವಿಧವಾಗಿದ್ದರೂ ಅವುಗಳಲ್ಲಿ ಪರಸ್ಪರ ಏನೂ ಭೇದವಿಡದೆ ಒಂದಕ್ಕೊಂದು ಸಂಬಂಧಿಸಿಕೊಂಡು ವರ್ತಿಸಬೇಕೆಂದು ವಚನಕಾರನು ಹೇಳುತ್ತಾನೆ. ಈ ವಿವರವನ್ನು ಗುರುಮುಖದಿಂದ ಅರಿಯಬೇಕೆಂದು ಅನ್ನುತ್ತಾನೆ. ಹೀಗೆ ಪಂಚಾಚಾರ, ಸಪ್ತಾಚಾರ, ಅಷ್ಟಾವರಣ ಇವುಗಳನ್ನು ಹಿಡಿದು ನಡೆದದ್ದಾದರೆ ಮನುಷ್ಯನು ಭಕ್ತಿ, ಜ್ಞಾನ, ವೈರಾಗ್ಯ ಇವುಗಳನ್ನೊಳಕೊಂಡ ಷಟ್‌ಸ್ಥಲ ಮಾರ್ಗದ ಮೆಟ್ಟಲುಗಳನ್ನು ಕ್ರಮವಾಗಿ ಏರುತ್ತಹೋಗುವನು. ಮತ್ತು ಕಡೆಗೆ ಲಿಂಗಾಂಗಸಾಮರಸ್ಯವನ್ನು ಹೊಂದುವನು. ಇದು ಇತರೇ ಜನರಿಗೆ ಸಾಧ್ಯವಲ್ಲ. ಆದರೆ ಯಾರು ಭಕ್ತಿಯುಳ್ಳವರಾಗಿ ಭಕ್ತರಂತೆ ಆಚರಿಸಿ ಶಿವಮಯವಾಗಿ ವರ್ತಿಸುತ್ತಾರೋ, ಅಂಥ ಜಂಗಮರಿಗೆ ಮಾತ್ರ ಸಾಧ್ಯವೇ ಹೊರ್ತು, ಬರೀ ಜಂಗಮರ ವೇಷಧಾರಣಮಾಡುವಂಥವರಿಗೆ ಸಾಧ್ಯವಲ್ಲವೆಂತಲೂ, ಇಂಥವರು ಕೇವಲ ವೇಷಧಾರೀ ಜಂಗಮರೆಂತಲೂ, ಪ್ರಮಥರು ಹಿಡಿದು ವರ್ತಿಸತಕ್ಕ ಗಣಾಚಾರಕ್ಕೆ ಹೊರಗೆಂತಲೂ, ವಚನಕಾರನು ನುಡಿದಿದ್ದಾನೆ.

**ವಚನ:**— ೧೧೪. ಗುರುವೆಂಬ ಭಾವ ಬ್ರಹ್ಮಮೂರ್ತಿ, ಲಿಂಗವೆಂಬ ಭಾವ ವಿಷ್ಣುಮೂರ್ತಿ, ಜಂಗಮವೆಂಬ ಭಾವ ರುದ್ರಮೂರ್ತಿ. ಅದೆಂತೆಂದೊಡೆ, ಅನಾದಿವಸ್ತು ಗುರುವಾದ ಕಾರಣ ಅಹಂ. ಬ್ರಹ್ಮವೆಂಬಾಕಾರವಿಡಿದು ಬ್ರಹ್ಮಮೂರ್ತಿಯಾದ. ಜ್ಞಾನಸಂಬಂಧಿಯಾದ ಕಾರಣ ವಿಷ್ಣುಮೂರ್ತಿಯಾದ ಚಿದ್ಘನಸಂಬಂಧಿಯಾದ. ಕಾರಣ ಚತುರ್ವಿಧ ಫಲಪದಂಗಳ ಸಂಹಾರ ರುದ್ರನಾದ. ಸಂಹಾರವಡಗಿ ನಿಂದು ಉಮೆಯ ಬಿಟ್ಟು ಸ್ವಯಂಭುಲಿಂಗವಾದ. ಆ ಸ್ವಯಂಭುಜಂಗಮವೆಂಬಲ್ಲಿ ನಿಂದು ನಿಜವ ಕಂಡಲ್ಲಿ, ಲಿಂಗವಾದ. ಹೀಗೆ ಭಾವರಹಿತನಾಗಬೇಕೆಂದನಂಬಿಗರಚೌಡಯ್ಯ.

**ವಿವರಣೆ:**— ವಚನಕಾರನು ಗುರುಲಿಂಗಜಂಗಮವನ್ನು ಬೇರೊಂದು

ರೀತಿಯಿಂದ ಇಲ್ಲಿ ವಿವರಿಸಿದ್ದಾನೆ. ಇವುಗಳನ್ನು ವಿವರಿಸುವಲ್ಲಿ ಅವನ್ನು ಗುರುವೆಂಬ ಭಾವ ಲಿಂಗವೆಂಬ ಭಾವ ಜಂಗಮವೆಂಬ ಭಾವ ಎಂದು ವಿವರಿಸಿದ್ದಾನೆ. ಅಂದರೆ ಈ ಗುರುಲಿಂಗಜಂಗಮದ ವೃತ್ತಿಯನ್ನು ತನ್ನೊಳಗೆ ಬೆಳೆಯಿಸಬೇಕೆಂದು ಅವನ ಮುಖ್ಯೋದ್ದೇಶವಾಗಿದೆ. ಈ ಭಾವವನ್ನು ತನ್ನಲ್ಲಿ ಬೆಳೆಯಿಸುತ್ತ ಬೆಳೆಯಿಸುತ್ತ, ಕಡೆಗೆ ಆ ಭಾವದಲ್ಲಿ ತಾನೇ ಬೆರೆದು ಲಿಂಗಾಂಗ ಸಮರಸ್ಯವನ್ನು ಹೊಂದುವದು ವೀರಶೈವ ಮಾರ್ಗವಾಗಿದೆ. ಹೀಗೆ ಈ ವಚನದ ಮುಖ್ಯ ಭಾವವಾಗಿದೆ. ಹೀಗೆ ಅವನು ವಿವರಿಸುವಲ್ಲಿ ಗುರುಲಿಂಗಜಂಗಮಗಳನ್ನು ಬ್ರಹ್ಮ ವಿಷ್ಣು ಮಹೇಶ್ವರಗೆ ಹೋಲಿಸಿರುವನು. ಯಾವ ಕಾರ್ಯಗಳನ್ನು ಬ್ರಹ್ಮ ವಿಷ್ಣು ಮಹೇಶರು ಜಗತ್ತಿನಲ್ಲಿ ಮಾಡುತ್ತಾರೋ ಅವೇ ಕಾರ್ಯಗಳನ್ನು ಗುರುಲಿಂಗಜಂಗಮಗಳು ಮನುಷ್ಯನ ದೇಹದಲ್ಲಿ ಮಾಡುತ್ತವೆಂದು ಅವನ ಭಾವವು. ಬ್ರಹ್ಮ ವಿಷ್ಣು ಮಹೇಶನ ಕಾರ್ಯಗಳ ವಿವರಣೆಗಳು ಷಟ್‌ಸ್ಥಲಶಾಸ್ತ್ರದಲ್ಲಿ ಸಾದಾಖ್ಯಗಳ ನಿರೂಪಣೆಯಲ್ಲಿ ಬರುತ್ತದೆ. ಬ್ರಹ್ಮನು ಕ್ರಿಯಾರೂಪನಾಗಿದ್ದಾನೆ. ದೃಶ್ಯ ಜಗತ್ತೆಲ್ಲ ನಾನಾವಿಧ ಕ್ರಿಯೆಗಳಿಂದ ತುಂಬಿಕೊಂಡಿದೆ. ಹೇಗೆ ಇವುಗಳು ಬ್ರಹ್ಮನಿಗೆ ಸಂಬಂಧವೋ ಹಾಗೆ ಮನುಷ್ಯನ ಬಾಹ್ಯ ಕ್ರಿಯೆಗಳು ಎಂದರೆ ಅವನ ರೀತಿ, ನಡತೆ, ಪದ್ಧತಿಗಳು ಗುರುವಿಗೆ ಸಂಬಂಧವು. ಇವುಗಳನ್ನು ಗುರುವಿನಿಂದಲೇ ಅರಿಯಬೇಕು. ಅವುಗಳ ಮೇಲ್ಮೆಯನ್ನು ಅವನ ಸಿರೀಕ್ಷಣೆಯಲ್ಲಿಯೇ ಹೊಂದಬೇಕೆಂದು ಷಟ್‌ಸ್ಥಲಶಾಸ್ತ್ರದ ಪದ್ಧತಿಯು. ವಿಷ್ಣುವು ಜ್ಞಾನಸಂಬಂಧಿಯಾಗಿರುತ್ತಾನೆ. ಆದರಿಂದ ವಿಷ್ಣು ಸ್ವರೂಪವಾಗಿರುವ ಜ್ಞಾನವನ್ನು ಪ್ರಾಣಲಿಂಗದ ಮೂಲಕ ತನ್ನಲ್ಲಿ ಪ್ರಕಟಗೊಳಿಸಿ ಲಿಂಗದ ಹೆಚ್ಚುವಿಕೆಯನ್ನು ಮಾಡಿಕೊಳ್ಳತಕ್ಕದ್ದು. ವಿಷ್ಣುವು ಹೇಗೆ ಜಗತ್ತಿನಲ್ಲಿ ಜ್ಞಾನಸ್ವರೂಪನಾಗಿ ಅಡಗಿರುತ್ತಾನೋ, ಹಾಗೆಯೇ ಜ್ಞಾನಸ್ವರೂಪಾದ ಲಿಂಗವು ಮನುಷ್ಯನಲ್ಲಿದ್ದು, ಅದನ್ನು ಅವನು ತನ್ನಲ್ಲಿ ಒಳಕೊಳ್ಳತಕ್ಕದ್ದು. ರುದ್ರನು ಸಂಹಾರ ಶಕ್ತಿಯುಳ್ಳವನಾಗಿದ್ದಾನೆ. ಸಂಹಾರವೆಂದರೆ ಎಲ್ಲ ಶಕ್ತಿಗಳ ಕಾರ್ಯಗಳನ್ನು ನಿಲ್ಲಿಸಿ, ಅವುಗಳನ್ನು ಒಟ್ಟುಗೂಡಿಸುವದು ಇರುತ್ತದೆ. ನಾಶಮಾಡುವದಲ್ಲ. ಈ ಕಾರ್ಯವು ಜಗತ್ತಿನಲ್ಲಿ ಯಾವಾಗಲೂ ನಡೆದೇ ಇದೆ. ಇದು ರುದ್ರನ ಕಾರ್ಯವು. ಹಾಗೆಯೇ ಮನುಷ್ಯನಲ್ಲಿಯೂ ಸಂಹಾರ ಕಾರ್ಯವು ನಡೆದಿರುವದು. ಇದು ಚಿತ್‌ಶಕ್ತಿಯ ಮೂಲಕ. ಇದು ಜಂಗಮಸ್ವರೂಪವಾಗಿದೆ. ಈ ಶಕ್ತಿಯನ್ನು ಬಲಪಡಿಸಿದಾಗಳೇ ಮನುಷ್ಯನ ಪ್ರಗ

ತಿಯು. ಈ ಚಿತ್‌ಶಕ್ತಿಯೇ ಲಿಂಗಾಂಗಸಾಮರಸ್ಯವನ್ನು ಹೊಂದಲು ಸಹಾಯಕಾರಿಯು. ಇದೇ ಸಂಹಾರ ರುದ್ರನ ಸ್ವರೂಪವು, ಜಂಗಮವು. ಈ ಬಗೆಯಾಗಿರುವ ಗುರುಲಿಂಗಜಂಗಮಗಳೆಲ್ಲ ಅನಾದಿವಸ್ತುವೆಂದು ವಚನಕಾರನು ಅಂದಿದ್ದಾನೆ. ಈ ಬಗೆಯ ಸಂಹಾರದ ಸ್ಥಿತಿಯು ಉತ್ಪನ್ನವಾದ ಬಳಿಕ, ಈ ಸ್ಥಿತಿಯನ್ನು ಸಹ ಮನುಷ್ಯನು ತೊರೆಯಬೇಕೆಂದು ಇಲ್ಲಿ ವಚನಕಾರನು ಹೇಳಿದ್ದಾನೆ. ಈ ಕಡೆಯ ಸ್ಥಿತಿಗೆ ವಚನಕಾರರು ನಿರವಯ ಅಥವಾ ಬಯಲು ಎಂದು ಹೇಳುವದುಂಟು. ಇದು ಶೂನ್ಯಸ್ಥಲವೆನಿಸಿಕೊಳ್ಳುತ್ತದೆ. ಈ ಶೂನ್ಯಸ್ಥಲದ ವರೆಗೆ ಮಾಯೆಯು ಜಗತ್ತಿನಲ್ಲಿ ವ್ಯವಹರಿಸುತ್ತದೆ. ಈ ಶೂನ್ಯಸ್ಥಲದ ಮುಂದೆ ಈ ಮಾಯೆಯು ಬಿಟ್ಟುಹೋಗುತ್ತದೆ. ಈ ಮಾಯೆಗೆ ವಚನಕಾರನು ಇಲ್ಲಿ ಉಮೆ ಎಂದು ಕರೆದಿದ್ದಾನೆ. ಈ ಉಮೆಯನ್ನು ಬಿಟ್ಟಾಗಳೇ ಮನುಷ್ಯನು ಸ್ವಯಂಭೂ ಲಿಂಗವಾಗುವನು. ಇಂಥ ಸ್ವಯಂಭೂ ಲಿಂಗ ಅಥವಾ ಸ್ವಯಂಭೂ ಜಂಗಮದಲ್ಲಿ ಮನುಷ್ಯನು ನಿಂತು ನಿಜಸ್ಥಿತಿಯನ್ನು ಹೊಂದಿದಲ್ಲಿ ಲಿಂಗವೆನಿಸಿಕೊಳ್ಳುವನು. ಇಲ್ಲಿ ಅವನು ಭಾವರಹಿತನಾಗಿರುವನು. ಹೀಗೆ ವಚನಕಾರನು ಗುರುಲಿಂಗಜಂಗಮ ಸ್ವರೂಪವನ್ನು ವಿವರಿಸಿ ಅದರಿಂದ ಮೋಕ್ಷಪ್ರಾಪ್ತಿಯನ್ನು ಮಾಡಿಕೊಳ್ಳಬೇಕೆಂದು ವಚನಕಾರನು ಇಲ್ಲಿ ಹೇಳಿರುವನು.

**ವಚನ:**— ೧೧೫. ತೋಯವಿಲ್ಲದ ಕುಂಭ, ಜ್ಞಾನವಿಲ್ಲದ ಘಟ, ದೇವರಿಲ್ಲದ ಗುಡಿ, ಇವು ಹಾಳುದೇಗುಲಸಮವು. ಎಲೆ ಪರವಾದಿಗಳಿರಾ, ಗುರುವು ಎಂಬ ನಾಮವು ಪರಶಿವನು. ಪರಶಿವನೆ ಇಷ್ಟಲಿಂಗವು. ಆ ಇಷ್ಟಲಿಂಗದ ಪೂಜೆಯಲ್ಲಿ ಲೋಲುಪ್ತನಾಗಿರಬೇಕು. ಆ ಗುರು ಮಂತ್ರದಲ್ಲಿ ಮಗ್ನವಾಗಿರಬೇಕು. ಚರಭಕ್ತಿಯಲ್ಲಿ ಯುಕ್ತನಾಗಿರಬೇಕು. ಈ ತ್ರಿವಿಧವ ಬಿಟ್ಟು ಮಲತ್ರಯಕ್ಕೆ ಒಳಗಾಗಿ ಬಂಧನಕ್ಕೆ ಹೋಗುವರ ನೋಡಿ ಮನನಾಚಿತ್ತಂದ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ:**— ಇಲ್ಲಿ ವಚನಕಾರನು ಕುಂಭ, ಶರೀರ, ಗುಡಿ ಎಂದು ಮೂರು ವಸ್ತುಗಳನ್ನು ತೆಗೆದುಕೊಂಡು ಅವುಗಳ ಮೂಲಕ ಗುರುಲಿಂಗ ಜಂಗಮದ ಸ್ವರೂಪವನ್ನು ವಿವರಿಸಿದ್ದಾನೆ. ಕುಂಭ, ಶರೀರ, ಗುಡಿ ಇವು ಕ್ರಮವಾಗಿ ಉಚ್ಚ ಉಚ್ಚ ಸೂಕ್ಷ್ಮ ವಸ್ತುಗಳಾಗಿವೆ. ಹಾಗೆಯೇ ಗುರು ಲಿಂಗ ಜಂಗಮಗಳು ಹೆಚ್ಚು ಹೆಚ್ಚು ಉಚ್ಚವಸ್ತುಗಳಾಗಿವೆಂದು ಅವನ ಭಾವವು. ಆದರೆ ನೀರಿಲ್ಲದೆ ಹೊದರೆ ಕುಂಭದ ಉಚ್ಚತನವು

ಹೊರಟುಹೋಗುತ್ತದೆ. ಹಾಗೆಯೇ ಜ್ಞಾನವಿಲ್ಲದೆ ಹೋದರೆ ಶರೀರವು, ಮತ್ತು ಪೂಜ್ಯವಸ್ತುವಾದ ಲಿಂಗವಿಲ್ಲದೆ ಹೋದರೆ ಗುಡಿಯು, ಇವುಗಳೂ ವ್ಯರ್ಥವಾಗುವವು. ಹಾಗೆಯೇ ಸತ್ಕ್ರಿಯೇ ಜ್ಞಾನ, ಮತ್ತು ಪೂಜ್ಯತ್ವವು ಇವುಗಳು ಇಲ್ಲದೆ ಹೋದರೆ ಗುರುಲಿಂಗಜಂಮುಗಳು ತನ್ನಲ್ಲಿ ಒದಗಲಾರವು. ಮತ್ತು ಈ ವಸ್ತುಗಳಾದರೂ ನಿರುಪಯೋಗವುಳ್ಳವೆಂದು ವಚನಕಾರನ ಭಾವವಾಗಿದೆ. ಮುಂದೆ ಅವನು ಅನ್ನುವದೇನಂದರೆ:—

ಪರಮಾತ್ಮಪ್ರಕಾಶವು ಈ ಗುರುಲಿಂಗ ಜಂಗಮುಗಳಲ್ಲಿ ವಾಸಿಸುತ್ತದೆ. ಆದರೆ ಈ ಪ್ರಕಾಶದ ಸ್ವರೂಪು ಮಾತ್ರ ಮನುಷ್ಯನಲ್ಲಿಯ ವಿವಿಧತೆಯ ಪ್ರಕಾರ ವಿವಿಧ ರೂಪಾಗಿರುತ್ತದೆ. ಅವನು ಇಲ್ಲಿ ಅನ್ನುವದೇನಂದರೆ, ಗುರುವೆಂಬ ನಾಮವು ಪರಶಿವನೆಂದು ತಿಳಿಯುತಕ್ಕದ್ದು. ಈ ಪರಶಿವನೇ ಲಿಂಗಧಾರಣದ ಮೂಲಕ ಇಷ್ಟಲಿಂಗರೂಪಾಗಿರುವನು. ಗುರುವು ಲಿಂಗಧಾರಣೆ ಮಾಡುವಲ್ಲಿ ಈ ಭಾವವನ್ನೇ ಭಕ್ತನಲ್ಲಿ ವ್ಯಕ್ತಗೊಳಿಸುವನು. ಇಂಥ ಇಷ್ಟಲಿಂಗದ ಪೂಜೆಯಲ್ಲಿ ಭಕ್ತನು ಲೋಲುಪ್ತನಾಗಿರಬೇಕು. ಇಷ್ಟ ಲಿಂಗದ ಪೂಜೆ ಎಂದರೆ, ಅದರ ಕೇವಲ ಬಾಹ್ಯ ಪೂಜೆಯಲ್ಲ. ಅದು ಗುರುಮಂತ್ರದಲ್ಲಿ ಮಗ್ನವಾಗಿರುವಿಕೆ ಎಂದು ಅವನು ಇಲ್ಲಿ ಹೇಳಿದ್ದಾನೆ. ಇಷ್ಟಲಿಂಗವನ್ನು ತನ್ನಲ್ಲಿ ಸಂಪಾದಿಸುವ ರೀತಿಯು ಇದಾಗಿದೆ. ಹೀಗೆ ಇವುಗಳನ್ನು ಸಂಪಾದಿಸಿ ಚರ ಎಂದರೆ ಜಂಗಮ ಭಕ್ತಿಯಲ್ಲಿ ಯುಕ್ತನಾಗಿರಬೇಕು. ಈ ಭಕ್ತಿಯನ್ನು ಅವನು ಹೊಂದಬೇಕು. ಗುರುಭಕ್ತಿ ಲಿಂಗಭಕ್ತಿ ಇವುಗಳನ್ನು ತಿಳಿದರೆ, ಈ ಜಂಗಮಭಕ್ತಿಯು ಎಂದರೆ ಜಂಗಮವನ್ನೊಳಕೊಳ್ಳುವ ಶಕ್ತಿಯು ಸ್ವಾಭಾವಿಕವಾಗಿ ತಾನಾಗಿಯೇ ತನ್ನಲ್ಲಿ ಬರುತ್ತದೆಂದು ವಚನಕಾರರ ಸಾಮಾನ್ಯ ತಿಳುವಳಿಕೆ ಇರುತ್ತದೆ. ಹೀಗೆ ಈ ಶಕ್ತಿಗಳನ್ನು ತನ್ನಲ್ಲಿ ಉಂಟುಮಾಡಿಕೊಳ್ಳಬೇಕಾದರೆ ಮನುಷ್ಯನು ಮಲತ್ರಯಗಳನ್ನು ಬಿಡಬೇಕು. ಹೀಗೆ ಬಿಡದವರನ್ನು ನೋಡಿ ನನ್ನ ಮನಸ್ಸು ನಾಚುತ್ತದೆಂದು ವಚನಕಾರನು ನುಡಿದಿದ್ದಾನೆ.

**ವಚನ:**— ೧೧೬. ನಾಯಿ ಬಲ್ಲುದೆ ದೇವರ ಬೋನವ? ದ್ರೋಹಿ ಬಲ್ಲನೆ ಗುರುಲಿಂಗಜಂಗಮದ ನೆಲೆಯ? ಅಜ್ಞಾನಿ ಬಲ್ಲನೆ ಸುಜ್ಞಾನಿಯ ನೆಲೆಯ? ಕುಕ್ಕುರ ಬಲ್ಲುದೆ ಸುಭಿಕ್ಷದ ಸವಿಯ? ಇಂತಪ್ಪ ಆಚಾರ

ಭ್ರಷ್ಟರ ಕಡೆಗೆ ನೋಡೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವಃ**— ಗುರುಲಿಂಗಜಂಗಮವನ್ನು ತಿಳಿಯಬೇಕಾದರೆ ಆಚಾರವುಳ್ಳವರಿರಬೇಕೆಂದು ವಚನಕಾರನ ಮುಖ್ಯ ಭಾವವಿದೆ. ಮನುಷ್ಯನು ಸದಾಚಾರಿಯಾಗಿದ್ದರೆ ಮಾತ್ರ ಇವುಗಳು ಪ್ರಾಪ್ತವಾಗುವವೆಂದು ಅವನ ಅಭಿಪ್ರಾಯವು.

ಮನುಷ್ಯನ ಸುತ್ತಲೂ ಶ್ರೇಷ್ಠ ವಸ್ತುಗಳು ತುಂಬಿವೆ. ಆದರೆ ಅವುಗಳನ್ನು ಅವನು ಅರಿತರೆ ಮಾತ್ರ ಅವುಗಳ ಉಪಯೋಗವು. ನಾಯಿಯು ಉತ್ತಮವಾದ ಅನ್ನವನ್ನು ಬಿಟ್ಟು ಕೀಳ ವಸ್ತುಗಳನ್ನು ಆಶಿಸುವಂತೆ ಅವನು ಆಶೆಮಾಡಿದ್ದಾದರೆ ಆ ಉತ್ತಮ ಅನ್ನದ ಪ್ರಯೋಜನವೇನು? ಗುರುವು ತನ್ನಲ್ಲಿ ಶ್ರೇಷ್ಠ ವಸ್ತುವನ್ನು ಒದಗಿಸಿಕೊಟ್ಟಿರುತ್ತಾನೆ. ಹೀಗೆ ಕೊಟ್ಟರೂ ಭಕ್ತನು ಅವನ ಉಪಕಾರವನ್ನು ಮನ್ನಿಸದೆ ಹೋಗಿ ಅವನಿಗೆ ದ್ರೋಹ ಬಗೆಯುತ್ತಾನೆ. ಇವನಿಗೆ ಗುರುಲಿಂಗಜಂಗಮದ ನೆಲೆಯು ಹೇಗೆ ತಿಳಿಯಬೇಕು? ಜಂಗಮನು ಸುಜ್ಞಾನಿಯಾಗಿದ್ದು ಈ ಜ್ಞಾನವನ್ನು ಬೋಧಿಸುತ್ತಾನೆ. ಆದರೆ ಈ ಜ್ಞಾನವನ್ನು ಮನುಷ್ಯನು ಅರಿಯದೆ ಹೋದರೆ ಏನು ಪ್ರಯೋಜನ? ಗುರುಲಿಂಗಜಂಗಮದ ಉತ್ತಮವಾದ ಭಿಕ್ಷವು ತನ್ನಲ್ಲಿ ಯಾವಾಗಲೂ ಇದೆ. ಆದರೆ ಈ ಭಿಕ್ಷವನ್ನು ಬಿಟ್ಟುಕೊಟ್ಟು ಮನುಷ್ಯನು ಕೋಳಿಯಂತೆ ತಿಪ್ಪೆಯ ಮೇಲಿನ ಕಿರುಕುಳ ವಸ್ತುಗಳನ್ನು ಸವಿಯಲು ಹಾತೊರೆಯುತ್ತಾನೆ. ಹೀಗೆ ಹಾತೊರೆಯುವವರು ಆಚಾರಭ್ರಷ್ಟರು. ಇವರನ್ನು ದುರ್ಲಕ್ಷಿಸಬೇಕೆಂದು ವಚನಕಾರನು ನುಡಿದಿದ್ದಾನೆ.

**ವಚನಃ**— ೧೧೭. ನಾರಿವಾಳ ತಂದು ನಾಯ ಮುಂದೆ ಹಾಕಿದರೆ ಒಡೆಯಲರಿಯದು, ತಿನಲರಿಯದು. ಅದರೊಲು ಜಂಗಮದೊಳಗೆ ಲಿಂಗವನರಿಯದವ ಭಂಗಿಯ ತಿಂದಂತೆ. ತನ್ನ ಹೊದ್ದಿದ ತನ್ನ ತಾ ತಿಳಿಯಲರಿಯದಿದ್ದರೆ ತೆಂಗ ತಿನಲರಿಯದ ನಾಯಂತೆ ಎಂದನಂಬಿಗರ ಚೌಡಯ್ಯ.

**ಭಾವಃ**— ಪರಮಾತ್ಮನು ತನ್ನಲ್ಲಿಯೇ ಇದ್ದು, ಅದನ್ನು ತಿಳಿಯಬೇಕು ಹೀಗೆ ತಿಳಿಯಲರಿಯದಿದ್ದರೆ ತೆಂಗು ತನ್ನ ಮುಂದೆ ಇದ್ದರೂ ಕೂಡ ಅದನ್ನು ಒಡೆದು ಅವರ ಸಾರವನ್ನು ತಿನಲಾರದ ನಾಯಿಯಂತೆ ಅವನ ಸ್ಥಿತಿಯು, ಎಂದು ಇಲ್ಲಿ ವಚನಕಾರನು ಅಂದಿರುವನು. ಜಂಗ

ಮಾದಲ್ಲಿ ಲಿಂಗವು ಹುದುಗಿರುವದು. ಅದನ್ನು ಮನುಷ್ಯನು ಅರಿಯ ಬೇಕು. ಅದನ್ನು ಅರಿಯದವನು ಭಂಗಿಯನ್ನು ತಿಂದು ಅರಿ ಮರುಳಾದವನಂತೆ ಎಂದು ಹೇಳಿರುವನು. ಜಂಗಮದಲ್ಲಿಯ ಈ ಲಿಂಗವನ್ನು ಅರಿತು ಅದರ ಮೂಲಕ ತನ್ನ ತಾ ತಿಳಿಯಬೇಕು, ಎಂದು ವಚನಕಾರನು ಜಂಗಮದ ಉಪಯೋಗವನ್ನು ವಿವರಿಸಿದ್ದಾನೆ. ಜಂಗಮವನ್ನು ಒಳಕೊಳ್ಳುವ ಬಗೆಯನ್ನು ಷಟ್‌ಸ್ಥಲದ ತತ್ವಗಳ ಮೂಲಕ ಅರಿತು ಅಷ್ಟಾವರಣಗಳಂತೆ ಆಚರಿಸಬೇಕು.

**ವಚನ:**— ೧೧೮. ಜಂಗಮವ ಕರೆತಂದು ಮನೆಯಲ್ಲಿ ಕುಳ್ಳಿರಿಸಿ, ಲಿಂಗದ ಮೇಲಣ ಜಪವನೆಣಿಸುವ ಭಕ್ತನ ಬಾಯಲ್ಲಿ ಕೆರವನಿಕ್ಕಲಿ. ಅವನ ಲಿಂಗಾರ್ಚನೆಯ ಬಾಯಲ್ಲಿ ಹುಡಿಯ ಹೊಯ್ಯಲಿ. ಜಂಗಮದ ತೃಪ್ತಿಯನರಿಯದೆ ಲಿಂಗವಂತನೆಂತಾದನೋ ಮರುಳೆ? ಆತ ಪಿಸುಣ ಹೊಲೆಯನೆಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವ:**— ಜಂಗಮದಲ್ಲಿಯೇ ಲಿಂಗವಿದೆ, ಎಂದು ಹಿಂದಿನ ವಚನದಲ್ಲಿ ಹೇಳಿದೆ. ಆದ್ದರಿಂದ ಜಂಗಮವು ಮನೆಯಲ್ಲಿ ಆಗಮಿಸಿರಲು ಆ ಜಂಗಮದಲ್ಲಿದ್ದ ಲಿಂಗವನ್ನು ಒಳಕೊಳ್ಳುವದನ್ನು ತಿಳಿಯದೆ, ಭಕ್ತನು ಆ ಜಂಗಮನನ್ನು ಒತ್ತಟ್ಟಿಗೆ ಕುಳ್ಳಿರಿಸಿ, ತನ್ನ ಇಷ್ಟಲಿಂಗವನ್ನು ಪೂಜಿಸುವ ಸಲುವಾಗಿ ಜಪವನ್ನೆಣಿಸಹತ್ತುವನು. ಇದು ಹೊಲ್ಲದ್ದೆಂದು ವಚನಕಾರನ ಅಭಿಪ್ರಾಯವು. ಈ ಲಿಂಗಾರ್ಚನೆಯು ಹಾಳು. ಜಂಗಮದ ತೃಪ್ತಿಯನ್ನು ಮಾಡಲರಿಯದಿದ್ದರೆ ಆತನು ಲಿಂಗವಂತನು ಹೇಗೆಂದು ಪ್ರಶ್ನೆಮಾಡಿರುವನು. ಇಂಥವನು ಹೊಲೆಯನೆಂದು ಅವನನ್ನು ಬಯ್ದಿರುವನು.

ಅಷ್ಟಾವರಣಗಳ ಪ್ರಕಾರ ಜಂಗಮಾರ್ಚನೆಯಲ್ಲಿ ತ್ರಿವಿಧ ಲಿಂಗಗಳನ್ನು ಒಳಕೊಳ್ಳುವ ವಿಧವು ಇರುತ್ತದೆ. ಈ ತತ್ವವು ಇದರಲ್ಲಿ ಅಡಕವಾಗಿದೆ. ಆದ್ದರಿಂದ ವಚನಕಾರರು ಜಂಗಮಾರ್ಚನೆಯ ಕಾಲದಲ್ಲಿ ಕೇವಲ ಬಾಹ್ಯ ಇಷ್ಟಲಿಂಗವನ್ನು ಪೂಜಿಸಬಾರದೆಂದು ಅವರ ಅಭಿಪ್ರಾಯವಿದೆ.

**ವಚನ:**— ೧೧೯. ಶಿವಭಕ್ತಿ ಶಿವಾಚಾರ ಬೇಕಾದ ಭಕ್ತನು ತನ್ನ ಮಠಕ್ಕೆ ಬಂದ ಲಿಂಗಜಂಗಮದ ಸಮಯಾಚಾರ ಸಮಯ ಭಕ್ತಿಯ ನಡಿಸಬೇಕಯ್ಯಾ. ಬಂದ ಲಿಂಗಜಂಗಮದ ಸಮಯವ ತಪ್ಪಿಸಿ

ಮುಂದೆ ಶಿವಪೂಜೆಯ ಮಾಡಿ ಫಲಪದವ ಪಡೆವೆನೆಂಬ ಹಂದಿಗಳು ಎತ್ತ ಬಲ್ಲರಯ್ಯಾ ಸತ್ಯರ ನ್ಯಾಯವನು? ಮುಂದಿರ್ದ ನಿಧಾನವ ಕಾಣಲರಿಯದೆ ಸಂದಿಗೊಂದಿಯ ಹೊಕ್ಕು ಅರಸಿ ಬಳಲುವ ಅಂಧಕನಂತೆ ಎಂದಾದರೂ ತಮ್ಮ ವ್ಯಸನವೆತ್ತಿದಾಗ, ಒಂದೊಂದು ಪರಿಯಲ್ಲಿ ಸಿಪ್ಡಾನ್ನಂಗಳಂ ಮಾಡಿ ಚಂದಚಂದದಲ್ಲಿ ಬೋನ ಪದಾರ್ಥಂಗಳಂ ಮಾಡಿಸಿ, ತಮ್ಮ ಹಿಂದಣ ಮುಂದಣ ಹರಕೆಯನೊಡಗೊಂಡು ಬಂಧುಬಳಗವ ಮುಯ್ಯಿ ಮುಟ್ಟುವದೆಂದು ಕೂಡಿ ಆ ದಿನದಲ್ಲಿ ಚಂದ್ರಶೇಖರನ ಭಕ್ತರಿಗೆ ದಣಿಯನುಣಿಸಿದೆನೆಂಬ ಅಂಧಕ ಮೂಳರಿಗೆ ಎಂದೆಂದು ಮುಕ್ತಿ ಆಗದೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ—** ಇಲ್ಲಿ ಭಕ್ತನು ಜಂಗಮದ ಕೂಡ ಹೇಗೆ ನಡೆಯಬೇಕೆಂಬುದನ್ನು ವಿವರಿಸಿರುವನು. ಜಂಗಮನು ಕೇವಲ ಸುಗ್ರಾಸಭೋಜನವನ್ನು ಮಾಡಿಸುವದಕ್ಕೋಸ್ಕರ ಇರುವದಿಲ್ಲೆಂದು ಅವನ ಮುಖ್ಯ ಭಾವವು. ಅನೇಕರು ತಮಗೆ ಏನಾದರೂ ಸಂಪಾದನೆ ಆಗಬೇಕೆಂದು ಬಯಸಿ ಅನೇಕ ತರದ ಪಾಪಗಳನ್ನು ಮಾಡುವರು. ಚಂದ ಚಂದದ ಬೋನಗಳನ್ನು ತಯಾರಿಸುವರು. ಹಿಂದೆ ಏನಾದರೂ ಸಂಕಟಗಳು ಬಂದ ಕಾಲಕ್ಕೆ ಹೀಗೆ ಮಾಡಿಸುವೆವೆಂದು ಹರಿಕೆ ಹೊತ್ತಿರುವದುಂಟು. ಆಗ ಅವರು ತಮ್ಮ ಬಂಧುಬಳಗದವರನ್ನು ಮುಯ್ಯಿಗೆ ಮುಯ್ಯಿ ಮುಟ್ಟಲೆಂದು ಕರೆತಂದು ಸುಗ್ರಾಸಭೋಜನ ಮಾಡಿಸುವರು. ಹೀಗೆ ಶಿವಭಕ್ತರಿಗೆ ಉಣಿಸಿದೆವೆಂದು ಬಲು ಉತ್ಸಾಹ ಬಡುವರು. ಇಂಥವರು ಅಂಧಕ ಮೂಳರು, ಇವರಿಗೆ ಎಂದೂ ಮುಕ್ತಿ ಸಲ್ಲದೆಂದು ವಚನಕಾರನು ಇಲ್ಲಿ ಅಂದಿರುವನು.

ಆದರೆ ಜಂಗಮ ಭಕ್ತಿ ಮತ್ತು ಶಿವಪೂಜೆ ಎಂಬುದು ತೀರ ಬೇರೆಂದು ಅವನು ಇಲ್ಲಿ ನುಡಿದಿರುವನು. ಯಾವ ಭಕ್ತನಿಗೆ ಶಿವಭಕ್ತಿ ಶಿವಾಚಾರವು ಬೇಕಾಗಿರುತ್ತದೋ ಅವನು ಹೀಗೆ ಮಾಡದೆ ತನ್ನ ಮಠಕ್ಕೆ ಬಂದ ಲಿಂಗ ಜಂಗಮದ ಸಮಯಾಚಾರ ಸಮಯ ಭಕ್ತಿಯನ್ನು ಅರಿತು ಅದನ್ನು ನಡಿಸಬೇಕೆಂದು ಹೇಳುತ್ತಾನೆ. ಮೊದಲಿನ ಕಾಲದ ವಚನಕಾರರು ಮಠವೆಂದರೆ ಮಠಾಧಿಕಾರಿಗಳಿರುವ ಜಂಗಮರ ಮಠವೆಂದು ತಿಳಿದಿಲ್ಲ. ಪರಮಾತ್ಮನಲ್ಲಿ ಭಕ್ತಿಯುಳ್ಳಂಥವರು ಯಾರಿದ್ದರೂ ಕೂಡ ಅವರ ವಾಸಸ್ಥಳಗಳಿಗೆ ಮಠಗಳೆಂದು ಕರೆದಿದ್ದಾರೆ. ಹೀಗೆ

ಶಿವಾನುಭವ ಗ್ರಂಥಮಾಲಾ ನಂ॥ ೩೯

# ಕಾಲಜ್ಞಾನದ ವಚನಗಳು.



ಸಂಪಾದಕರು.

**ರಾ॥ ಸಾ॥ ಫ. ಗು. ಹಳಕಟ್ಟಿ.**

ಬಿ. ಎ. ಎಲ್. ಎಲ್. ಬಿ.

ವಿಜಾಪುರ.



೧೯೩೪

**ಬೆಲೆ ೮ ಆಣೆ.**

# ಪ್ರಸ್ತಾವನೆ.



ವೀರಶೈವ ಮತತತ್ವಗಳನ್ನು ಅರಿಯುವದು ಎಷ್ಟು ಮಹತ್ವದ್ದೋ ಅಷ್ಟೇ ವೀರಶೈವರ ರಾಜಕೀಯ ಮತ್ತು ಸಾಮಾಜಿಕ ಇತಿಹಾಸವನ್ನು [illegible]ವದು ಮಹತ್ವದ್ದಿರುತ್ತದೆ. ಈ ದೃಷ್ಟಿಯಿಂದ ಕಾಲಜ್ಞಾನದ ವಚ[illegible] ಪರೀಕ್ಷಿಸುವದು ಅವಶ್ಯವಿರುತ್ತದೆ. ಹೀಗೆ ಪ್ರಯತ್ನಿಸುವವರಿಗೆ [illegible]ಗಬೇಕೆಂದು ನಾವು ಈ ವಚನಗಳನ್ನು ಅಚ್ಚು ಹಾಕಿದ್ದೇವೆ [illegible] ಕರ್ನಾಟಕದ ಇತಿಹಾಸದ ಅನೇಕ ಸಂಗತಿಗಳನ್ನು ಸಹ ಕಂಡು ಹಿಡಿಯಬಹುದಾಗಿದೆ. ಕಲಚೂರ್ಯರು, ವಿಜಯನಗರದ ರಾಜರು, ವಿಜಾಪುರದ ಬಾದಶಹರು, ಮರಾಠರು, ಮೊಗಲರು, ಅಹಮದನಗರ ಮತ್ತು ಗೋವಳಕೊಂಡದ ಬಾದಶಹರು, ಇಕ್ಕೇರಿ ಅರಸರು ಅಲ್ಲದೆ ಇನ್ನೂ ಅನೇಕ ಪಾಳೆಯಗಾರರ ಉಲ್ಲೇಖಗಳು ಇವುಗಳಲ್ಲಿ ಆಗಿಂದಾಗ್ಗೆ ಬಂದಿವೆ. ಅದ್ದರಿಂದ ಇತಿಹಾಸ ಸಂಶೋಧಕರಿಗೆ ಇವು ಸಹಾಯಕವಾಗಬಹುದೆಂದು ಎಣಿಸಿ ಈ ವಚನಗಳನ್ನು ನಾವು ಅಚ್ಚು ಹಾಕಿದ್ದೇವೆ.

ನಾವು ಈ ಪುಸ್ತಕವನ್ನು ೨ ಹಸ್ತಲಿಖಿತ ಗ್ರಂಥಗಳ ಆಧಾರದಿಂದ ಸಿದ್ಧಪಡಿಸಿದ್ದೇವೆ. ಒಂದು ಕೈ. ವಾ. ಗುರುಬಸಯ್ಯ ಕಂತಿ ಮು. ಬನಹಟ್ಟಿ ಸಂ। ಜಮುಖಂಡಿ ಇವರಲ್ಲಿ ದೊರೆತದ್ದು, ಎರಡನೇದು ಶ್ರೀ॥ ಮಾ॥ ಶಿ. ಚ. ಪುರಾಣಿಕ ಹೆಡ್ ಮಾಸ್ತರ ಮು. ಗುಳೇದಗುಡ್ಡ ತಾ. ಬದಾಮಿ ಇವರು ಕಳಿಸಿದ್ದು. ಈ ಮಹನೀಯರು ಈ ಗ್ರಂಥಗಳನ್ನು ನಮಗೆ ಕಳಿಸಿದ್ದಕ್ಕೆ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ.

ಈ ಎರಡೂ ಗ್ರಂಥಗಳು ಬಹು ಅಶುದ್ಧವಾದವುಗಳು. ಆದರೂ ಶಕ್ಯವಿದ್ದಷ್ಟು ತಿದ್ದಿ ಈ ಗ್ರಂಥಗಳನ್ನು ಮುದ್ರಣಗೊಳಿಸಿದ್ದೇವೆ. ಇವುಗಳಲ್ಲಿ ಗುಳೇದಗುಡ್ಡ ಗ್ರಂಥದ ಕಡೆಯ ಭಾಗವು ಬಹಳ ನಾಶವಾಗಿದ್ದರಿಂದ, ಒಂದೇ ಗ್ರಂಥದ ಸಹಾಯದಿಂದ ಎಲ್ಲ ಭಾಗವನ್ನು ಸರಿಯಾಗಿ ಪ್ರಸಿದ್ಧಿಸುವದು ಅಶಕ್ಯವಾಯಿತು. ಮತ್ತು ಈ ಬಿಟ್ಟ ಭಾಗದಲ್ಲಿ ಮಹತ್ವದ ಸಂಗತಿಗಳೂ ಹೆಚ್ಚಾಗಿ ಕಂಡು ಬರಲಿಲ್ಲ. ಅದ್ದರಿಂದ ಇದನ್ನು ಈ ಗ್ರಂಥದಲ್ಲಿ ಸೇರಿಸುವದನ್ನು ಬಿಟ್ಟಿದ್ದೇವೆ. ಘಟವಾಳಯ್ಯನ ಕಾಲಜ್ಞಾನದಲ್ಲಿ ಕೆಲವು ಸಂಧಿಗಳು ಇದ್ದು ವಿಶೇಷ ಐತಿಹಾಸಿಕ ಸಂಗತಿಗಳುಳ್ಳ ಒಂದೇ ಸಂಧಿಯನ್ನು ಇದರಲ್ಲಿ ಅಚ್ಚು ಹಾಕಿದ್ದೇವೆ. ಹೀಗೆ ನಾವು ಬಿಟ್ಟ

ಕೊಟ್ಟ ಕಾಲಜ್ಞಾನಗಳು ಯಾವವೆಂದರೆ:- (೧) ವಹಿಲಯ್ಯ (೨) ಕೊಡಗದ ಮೊಗೆರಾಮಯ್ಯ (೩) ಘಟ್ಟಿವಾಳಯ್ಯ (೪) ಅಕ್ಕ ನಾಗಮ್ಮ ಮತ್ತು ನೀಲಮ್ಮ (೫) ಎಮ್ಮೆಯ ಬಸವಣ್ಣ (೬) ಜೋಗೀಕೊಳ್ಳದ ಸ್ವಾಮಿಗಳು. ಈ ವಚನಕಾರರ ಕಾಲಜ್ಞಾನದ ವಚನಗಳನ್ನು ನಾವು ಪ್ರಸಿದ್ಧಿಸಿಲ್ಲ.

ಈ ಗ್ರಂಥದ ಬೇರೆ ಪ್ರತಿಗಳು ನಮಗೆ ಮುಂದೆ ದೊರೆತಲ್ಲಿ ಗಳನ್ನು ಸಹ ಶುದ್ಧಪಡಿಸಿ ೨ನೇ ಆವೃತ್ತಿಯಲ್ಲಿ ಸ್ವತಂತ್ರವಾಗಿ ಣಗೊಳಿಸುವೆವು.

ಅನೇಕರು ಈ ಕಾಲಜ್ಞಾನದ ವಚನಗಳನ್ನು ಅಂಧ ಭಕ್ತಿ ನಂಬಬಹುದು. ಬೇರೆ ಕೆಲವರು ಸಂಪೂರ್ಣ ಚಿಕಿತ್ಸಕ ಬುದ್ಧಿಯಿಂದ ಪರೀಕ್ಷಿಸ ಹೋಗಬಹುದು. ಆದರೆ ಹೀಗೆ ಇವುಗಳ ಮಹತ್ವವನ್ನು ಕಂಡು ಹಿಡಿಯಲು ಯತ್ನಿಸುವದು ದೋಷಾಸ್ಪದವಾಗಿದೆ. ಆದರೆ ಸಂಶೋಧಕ ಬುದ್ಧಿಯಿಂದ ಇವುಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ನಿಜವಾಗಿ ವರ್ಣಿಸಿದ್ದನ್ನು ಕಂಡು ಹಿಡಿಯಲಿಕ್ಕೆ ಇವು ಬರೇ ಮಾರ್ಗದರ್ಶಕವಾದವುಗಳೆಂದು ತಿಳಿಯಬೇಕೆಂದು ನಮ್ಮ ನಮ್ರ ಸೂಚನೆ ಇದೆ.

ವಿಜಾಪುರ.
ತಾ|| ೨೯-೧೧-೩೩

**ಫ. ಗು. ಹಳಕಟ್ಟಿ**
ಸಂಪಾದಕ

# ಅನುಕ್ರಮಣಿಕೆ.





ಕರದಾನು. ಶಿವನಾಣೆ ಎಚ್ಚರಿಕೆ. ಭುವನವೆಲ್ಲರಿವಂತೆ ನೆರೆದಾರು. ಪ್ರಮಥಗಣಂಗಳು ಅರಿದು ತೋರುವರು ನಾಲ್ಕುದಿಕ್ಕಿನ ಸುದ್ದಿಯು. ಅಂದಿಂಗೆ ಕಲಿ ಶಕೆ ೪೭೯೦ ವರುಷಕ್ಕೆ ಮುಂದೆ ಉಳಿದ ಲಬ್ಧಗಳ ಶಕೆ ೩೨ ವರುಷ ಪ್ರಮಾಣವು. ವೀರವಸವಂತ ಪೊರೆವ ಸಂಭ್ರಮದ ಬರವ ಬರೆಕೊಳ್ಳಿ. ಕಲ್ಯಾಣಿ ಒರೆದು ಸೇಳಿದಳು. ಪ್ರಭುರಾಯನ ಹಗರಣವ ನೋಡಿ. ಶರಣರ ಬರವು ತಪ್ಪಲ್ಲ. ಸುಳ್ಳೆಂದು ನುಡಿವ ದೂಷಕನಿಗೆ ರೌರವನರಕ ತಪ್ಪದು. ಇದು ಸಿದ್ಧಾಂತವು.

ಕಲಬುರಿಗೆ ಅಳಿದುದೆ ಕಡೆ ಶರಣರುದಯಕ್ಕೆ. ಬಿದಿರಿಯ ಹೊರಪಥದಲ್ಲಿ ಒಬ್ಬ ಶರಣೆಯು ಗರ್ಭದಲ್ಲಿ ಶರಣ ಹುಟ್ಟುವುದೆ ಕಡೆ. ಕೆಂಡದ ಮಳೆ ಹೊಯಿದುದೇ ಕುರುಹು. ಅದಕ್ಕೆ ಶರಣರು ಬಂದಾರು. ವೀರವಸವಂತ ಧರಣಿಗೆ ನಿಲುವುದಕ್ಕೆ ಕಲಿ ಶಕೆ ೪೭೯೩ ವರುಷಕ್ಕೆ ವಾಲಿಯ ಭಾಂಡಾರವ ನೊಡೆದಾರು. ಕಾನಕಾನರು ಮಾಡಿದಾರು. ಆರು ತಿಂಗಳು ಬೇಡ ಪಟ್ಟವನಾಳಿಯಾನು.

ಗುರ್ಜರ ದೇಶದರಸುಗಳಾಳಿಕೆಯು ಪೇಳ್ವೆ. ವಿತರಣ ವೀರ ೫೬ ನರಸಿಂಹ ೪೯ ಶರಣ ತಿಲಕರಾಜ ೩೭ ವರುಷ, ಅಲ್ಲಿಂದವರಿಗೆ ಕಡೆಯಾಟವು.

ಇನ್ನು ಬಿದಿರಿಗೆ ೭ ವರುಷ ಬರನು. ಅಪ್ಪು ಬತ್ತಿತ್ತು. ಬಿಸಿಲು ಸುರಿದಿತ್ತು. ಕೆಂಧೂಳು ಕವಿದಿತ್ತು. ವಾಲಿಯ ಭಾಂಡಾರದ ಮುಚ್ಚಳ ತೆರೆದಿತ್ತು. ಪರ್ವತದ ಕದವಿಕ್ಕಿತ್ತು. ಪಾತಾಳಗಂಗೆಯಲ್ಲಿ ಓತು ಚಿಪ್ಪಿಲಿ ಮುಗಿದಿತ್ತು. ಭೂಮಂಡಲವೆಲ್ಲ ವಿಕಾರವಾದಿತ್ತು. ಬೀದಿ ಬೀದಿಯಲ್ಲಿ ಒಡವೆಯು ಚಲಾಡ್ಯಾರು. ಜಂಗಮವೆಲ್ಲ ಅನಾಚಾರಿಗಳಾದಾರು. ಲೋಕವೆಲ್ಲ ಗಾಸಿಯಾದೀತು. ಪಾಪ ಹೋವೀತು. ಧರ್ಮ ಉಳಿದೀತು.

ವೀರವಸವಂತ ಆಳುವ ಶಕೆ ೫೫೨೫ ವರುಷವು. ಬಿಂದುನಗರಾನಂದವಾದೀತು. ಕಲ್ಯಾಣ ದಂಡನಾಯಕಗೆ ಬರುವ ಕಾಲಕ್ಕೆ ಉಳಿವೆ ಉಳಿದೀತು. ಅಧರ್ಮ ಹೆಚ್ಚೀತು. ಭಟಕಳ ಉಳಿದೀತು ಮುರಿ ಕೆಡುವುದು. ರಾಮೇಶ್ವರ ಉಳಿವುದು. ಆಗರ ಅಳಿವುದು. ಕಾಶಿ ಉಳಿವುದು. ಚಾರವು ಬರುವನು. ಕುತುಮಶಾನಿಗೆ ಅಳಿವು. ಗಪಜತಿಗೆ ಉಳಿವು. ಪರ್ವತ ವಿನಶ್ಯತಿ. ಮೂಗಾವುದಕೊಂದು ಆರು ಗಾವುದಕೊಂದು ಪಟ್ಟಣ. ಸರ್ವ ದೊರೆಗಳಿಗೆ ಅಳಿವು. ಅಂದಿನ ಪತಿವ್ರ

ತೆಯರೆಲ್ಲ ಸೂಳೆಯರಾದಾರು. ಭಕ್ತರೆಲ್ಲ ವಿಟಗಾರರಾದಾರು ಬ್ರಾಹ್ಮಣ ರೆಲ್ಲ ಹೊಲೆಯರಾದರು. ವಾಲಿಯ ಭಾಂಡಾರವನೆಲ್ಲ ರಾಶಿಯ ಮಾಡಿ ಯಾರು. ದಕ್ಷಿಣದ್ವಾರದ ವೀರಣ್ಣನು ಮೊಡೆಯ ನೀರೊಳಗೆದ್ದಾನು. ಮಂಗಳವಾಡದ ದೇಶದಲ್ಲಿ ಅದೃಶ್ಯ ಗಣನಾಥ ಬಂದಾನು ವಿಕಾರಿನಾಮ ಸಂವತ್ಸರಕೆ ಉರಿಮರಣನ ಕ್ಷೇತ್ರ ಹುಟ್ಟಿ ಬಯಲಾಗುವದು. ಚಂದ್ರ ಸೂರ್ಯರ ಗ್ರಹಣ ಕಾರ್ತಿಕದ ಒಂದೇ ಪಕ್ಷಕ್ಕೆ ಬರಲು ತುರುಕರು ಲಿಂಗವ ಕಟ್ಟಿಯಾರು. ಕಾವೇರಿಯಲ್ಲಿ ವೀರಬಸವಂತ ಹುಟ್ಟಿಯಾನು. ಕಲಿಯುಗ ೪೩೨೦೦೦ ವರುಷ ಶಕೆ ವಿಚಾರಣೆ. ವಿಜಯಪುರವು ೪೭೭೭ ವರುಷಕ್ಕೆ ಹುಟ್ಟಿ, ವಿಕಾರಿನಾಮ ಸಂವತ್ಸರಕ್ಕೆ ಅನುದನಗರ ಹುಟ್ಟಿ, ಮನ್ಮಥ ನಾಮ ಸಂವತ್ಸರಕ್ಕೆ ಗೋವರ್ಧನಗಿರಿ ಹುಟ್ಟಿ, ಸೌಮ್ಯ ನಾಮ ಸಂವತ್ಸರಕ್ಕೆ ಏಳುವರುಷ ಬರನು. ವಿಕಾರಿನಾಮ ಸಂವತ್ಸರಕ್ಕೆ ಉರಿಮರಣನ ಕ್ಷೇತ್ರ ಹುಟ್ಟಿ ಬಯಲಾಗುವದು. ಚಂದ್ರಸೂರ್ಯರ ಗ್ರಹಣ ಕಾರ್ತಿಕದ ಒಂದೇ ಪಕ್ಷಕ್ಕೆ ಬರಲು ಅಳಿಯ ಬಿಜ್ಜಳನೆ ವೀರವಸಂತನಾಗಿ ಬಂದಾನೆಂದು ಲೋಕವೆಲ್ಲ ತಿಳಿವುದು. ಇನ್ನು ವೀರಬಸವಂತ ರಾಯನಾಳುವ ಶಕೆ ೫೫೨೫ ವರುಷ. ಇದರ ಮೇಲೆ ದಾರೋಧರರಾಯ, ಆವ ಹೋದ ಮೇಲೆ ಸೋಮಪ್ರಭು ಆ ಮೇಲೆ ಏಕಾಂಗ ತುರಗ ಆಮೇಲೆ ಶಂಕರಸನು, ಆಮೇಲೆ ಕುಮಿದತ್ತ, ಆಮೇಲೆ ಚಕ್ರವರ್ತಿ, ಇಂತೀ ವೀರವಸಂತನ ಕೂಡಿ ೭ ರಾಯರಿಗೆ ಕಲಿಸಂಪೂರ್ಣ ಕಲಿ ಪಾಪರೂಪವಾದ ಕಾರಣ ಕಾಲಜ್ಞಾನವ ಹೇಳಬೇಕಾಯಿತ್ತು. ಸಂದ ಕರ್ಮಕಲಿ ೪೭೭೭ ವರುಷ ಉಳಿದ ಧರ್ಮದಲಿ ೪೨೭೨೩ ವರುಷ ಇಂತಪ್ಪ ಕಲಿಯುಗವನಾಳ್ವ ಸತ್ಯವ್ರತ ಆರಾರೆಂದೊಡೆ, ವೀರ ವಸಂತರಾಯನಾಳುವ ಕಲಿ ಶಕೆ ೫೫೨೫ ವರುಷ, ಆಮೇಲೆ ಧಾರೋಧರರಾಯನಾಳುವ ಕಲಿ ಶಕೆ ೬೧೦೩೨ ವರುಷ, ಆಮೇಲೆ ಸೋಮಪ್ರಭುನಾಳುವ ಕಲಿಶಕೆ ೬೧೦೩೨ ವರುಷ ಆಮೇಲೆ ಏಕಾಂಗನ ತುರಗನಾಳುವ ಕಲಿಶಕೆ ೬೧೦೩೨ ವರುಷ ಕುಮಿತ ೬೧೦೩೨ ಆಮೇಲೆ ಚಕ್ರವರ್ತಿ ಭೋಗಿಸುವ ಕಲಿಶಕೆ ೬೧೦೩೨ ವರುಷ ಇಂತೀ ವೀರವಸಂತನ ಕೂಡಿ ಏಳು ರಾಯರಿಗೆ ಕಲಿ ಸಂಪೂರ್ಣವು. ಲೆಕ್ಕ ಬಲ್ಲ ಪಂಡಿತರು ಮುಳುಗಾಡಾರು. ಜೋತಿಷ್ಯವ ಬಲ್ಲಂತಹ ಜೋಯಿಸರು ಅರಿಯರು. ಅಕ್ಕಸಾಗಲಿಯಾಣೆ. ಲೆಕ್ಕ ಸಿಕ್ಕದು ಶಾಸ್ತ್ರವ ಬಲ್ಲ ಹಿರಿಯರಿಗೆ ಸಿಕ್ಕದು. ನಿಮ್ಮಾಣೆ ನಿಮ್ಮ ಪ್ರಮಥರಾಣೆ. ಕವಿತ್ವಬಲ್ಲವ ಕಾರಣಿಕರು ಕಾಣದೆ ಕೆಟ್ಟು ನುಡಿವರು. ಕಲಬುರಿಗೆ ನಾಶವಾದುದೆ ಕಡೆ.

ನಾಲ್ಕು ಮೂಲಿ ಉರಿದು ಹೋದುದೆ ಕಡೆ. ಪಾಲೀ ಭಾಂಡಾರ ಸೂರೆಯಾದುದೆ ಕಡೆ. ವಿಜಯಪುರ ಕೆಟ್ಟು ಹೋದುದೆ ಕಡೆ. ಲೋಕವೆಲ್ಲ ಅನ್ನ ಅರಿವೆಯು ಕಾಣದೆ ಗಾಸಿಯಾಪುದೆ ಕಡೆ. ಹಾಳಾದೀತು. ಉತ್ತರದ ಬಾಳ್ವೆ ಕೆಟ್ಟೀತು. ಕಾಶಿಯು ಸೀಮೆ ಗಾಸಿಯಾದೀತು. ಮೋಸವಾದೀತು ಮಾರಾಟನಿಂದೆ. ವಿಶ್ವನಾಮ ಸಂವತ್ಸರದ ಕಾರ್ತೀಕದ ಮಾರ್ಗಶಿರದ ಪಂಚಮಿ ಒಳಗಾಗಿ ಆ ಜಗದಂಬೆಯನೊಡೆದಾರು. ಒಡೆದುತ್ಪಾತಕ್ಕೆ ಆ ರಕ್ಕಸ ದೊಡ್ಡ ಕಾನ ಬಿದ್ದನು ಕತ್ತಲೆದೋರೀತು. ಉತ್ತರ ಅಟ್ಟಿ ಬಂದಾನು. ಮಾರಾಟನ ಅರ್ಭಾಟವಾದೀತು. ಮಾರಾಟನಿಂದೆ ಬೊಬ್ಬಿಟ್ಟೀತು. ಉತ್ತರ ದೇಶ ಸುರುಳಿಸಿತು. ಪನ್ನಾಳಿ ನಗರಿಗೆ ಜಯ ಘನವಾದೀತು. ಸ್ಥಿರವಿಲ್ಲ ಕಾನರಿಗೆ. ಮೂಜಗವರಿಯಲು ರಂಭೆ ಹೊರಹೊರಟಳು. ಆ ರಂಭೆ ಹೂಂಕರಿಸಿಯಾಳು. ಕಡಿತವಾದೀತು. ಉತ್ತರ ದಕ್ಷಿಣಕ್ಕೆ ಸ್ಥಿರವಿಲ್ಲ. ಹರ ನಾಣೆ ರಾಜ್ಯ ಹಾಳು. ಶಿವಶರಣರು ಹೇಳಿದ ಮಾತು ಹುಸಿ ಎಂಬ ಕರ್ಮಿ ದೂಷಕರ ಬಾಯೊಳು ಬಾಲ್ಹುಳು ಸುರಿಯದಿಪ್ಪವೆ ? ಭಯದಲ್ಲಿ ಕಟ್ಟಿ, ಪಂಜುಗಳ ಕಡೆಮೊದಲಿಲ್ಲದೆ ಮುಟ್ಟಿ ಹೆಣಗಳನು ಇರಿತಗಳ ಮಾಡಿಯಾರು. ದಿಕ್ಕು ದಿಕ್ಕುಗಳ ಸೆರೆಸೂರೆ ಮಾಡಿಯಾರು. ಒಕ್ಕಲಿಕ್ಕಿಯಾರು. ಒಳಸೂರೆ ಹೊರಸೂರೆ ಇಷ್ಟನು ಮಾಡುವ ಮಾರಾಟನು ಸೊಕ್ಕಿ ಸುಲಿವುತ್ತ ನಾಡೆಲ್ಲವ ಕೆಡಿಸಿ ರಕ್ಕಸರ ಬಲವ ಮುರಿವುತ್ತ ಚಿಕ್ಕ ಕಾಂಡಿಗೆಯ ವೀರಣ್ಣ ನಡೆತಂದು ಹುಲಿಗೆರಿಯ ಸೋಮಯ್ಯನೆಡೆಗೆ ನಾಂಟ್ಯವನಾಡುತ ಹೊಕ್ಕು ಬೆಳವಲದ ಅಮೃತೇಶನ ಒಡಗೂಡಿ ದಿಕ್ಕು ದಿಕ್ಕುಗಳ ನೋಡಿ ಅನುಭವಗಳ ಮಾಡಿ ಚಿಕ್ಕ ಮಾಳಿಗೆಯ ಗೊಡಚಿಯ ವೀರಣ್ಣ ಬಯಲು ಸೊರಟೂರಿಂದ ಸೋಮನಂಗಡಿಗಳನು ದಿಟವಿಟ್ಟಲನ ಒಡದಿನ್ನು ಗದಿಗಿನ ತೇರು ನಷ್ಟವಾದುದೆ ಕಡೆ. ಭ್ರಷ್ಟ ರಕ್ಕಸರು ವಿಟ್ಟಲನ ಒಡೆದು ಸೃಷ್ಟಿಯ ಜನವರಿಯಲು ಅವ ಮುಂದೆ ನಷ್ಟವಾದಾನು. ಇದ ಬರಕೊಳ್ಳಿ ಹೀಗೆಂದು ಕಲ್ಯಾಣಿ ಮೂಜಗವರಿಯಲು ಇಟ್ಟ ವಾಕ್ಯಗಳ ನೋಡಿಕೊಳ್ಳಿ. ಶರಣರು ಅಟ್ಟಿಬಂದಾರು ಬರಕೊಳ್ಳಿ. ಬಂದ ಶರಣರ ಕುರುವು. ಅಂದು ಹುಲಿಗೆರೆಯ ಸೋಮಯ್ಯನಿಂದು ನೋಡಿದನು. ಉಳಿವಿಲ್ಲ. ಗದುಗಿನ ತ್ರಿಯಂಬಕ ಕಂಡು ಮನನೊಂದು ಹುಲಿಗೆರೆಯ ಬಯಲಲ್ಲಿ ನಿಂದಿರುವದಕ್ಕೆ ತಾವಿಲ್ಲ. ಅಮೃತೇಶಗೆ ಓಲೆಯ ಬರೆವುತಲಿ ಉಳಿವೆಯ ಮಂಡಲಕ್ಕೆ ನಡೆಗೊಳ್ಳಿ. ಕಲ್ಯಾಣಮ್ಮ ಎಂದ ನುಡಿಗಳನು ಬರಕೊಳ್ಳಿ. ಉತ್ತರ ದಕ್ಷಿಣ ರಾಕ್ಷಸರು ಮುತ್ತಿ ಅಷ್ಟ

ದಿಕ್ಕುಗಳಳತೆಯ ಮಾಡಿ ಕುಕ್ಕು ನೂರಲ್ಲಿ ಕಿರಿಜಡೆಯ ಸಿದ್ಧಯ್ಯ ಮುಟ್ಟಿ ನೋಡಿದನು. ಕಳಕ ಮಲ್ಲಯ್ಯನ ಗಂಟೆ ಢಣರೆಂಬ ಧ್ವನಿಯು ಸೃಷ್ಟಿಗಾಶ್ಚರ್ಯವು. ಶಿವಪಥವ ಕೇಳಿನ್ನು. ಅಷ್ಟಾಭರಣಗಳು ಅರಿದರಿದು ನಗರದ ಸೃಷ್ಟಿ ಉಡುಗುತಲಿ ಸೀಮೆಗಳ ಸುಲಿವುತಲಿ ಮೆಟ್ಟಿ ನೋಡಿದನು. ಕೊಟ್ಟಿದ ರಾಚಯ್ಯ. ಕೆಟ್ಟ ಮನುಜರ ಹುಡಿಬಡಿದು ಬೇಡರ ಪಡೆಯ ನೆಬ್ಬಿಸಿಹರು. ಇದು ಬರವಸವು. ಇಟ್ಟಣಿಸಿ ಬೆಟ್ಟದ ಪುರದರಸು ಮೆಟ್ಟಿ ನೋಡಿದನು. ಶಿವಗಂಗೆಯ ಬಸವನ ಕಟ್ಟಳೆಯ ದಿನವು ಇಷ್ಟವು. ನಮ್ಮಾಕ್ಕನಾಗಲಿಯ ಚೊಚ್ಚಿಲ ಮಗನು ಬರೆವ ಭರವಸವು. ಲೆಕ್ಕವ ಬಲ್ಲ ಪಂಡಿತರು ಬರೆದಲ್ಲಿ ಸಿಕ್ಕದೊಡಕಿಲ್ಲ. ಶಿವನಾಣೆ. ಮಹಾಕೂಟದಲ್ಲಿ ಜಲ ಬತ್ತಿತ್ತು. ಬನದ ಸಿರಿ ಉಡುಗಿತ್ತು. ಗೀಜಗನ ಹಳ್ಳಿ ಸೆರೆಸೂರೆಯಾದೀತು. ಸೃಷ್ಟಿ ಎಲ್ಲರಿದು ಶಿವನ ಕಟ್ಟಳೆ ಎಂದು ಕೆಟ್ಟಿತ್ತು ಜನವು.

ಶರಣರುದಯದ ಮುಂದೆ ಸಂಪತ್ತನಾಳಿ ಸಕಲ ಭೋಗಂಗಳ ಕೊಂಡು ಲಂಕೆಯ ಸುಟ್ಟ ರಾಮ ಅರಸಿಯ ಬಿಟ್ಟು ದೃಢದಲ್ಲಿ ಬಯಲು ಇದು ಸಿದ್ಧಾಂತವು. ಶರಣರು ಬರುವುದಕ್ಕೆ ಗುರುತುಂಟು. ಧರೆ ಎಲ್ಲ ಕಾಂಬಂತೆ ಪರಿಯಾಯವ ವಿಸ್ತರಿಸಿ ತೋರಿದ ಬಗೆ. ಹರಿಹರದ ಎಡದ ಕಡೆಯಲ್ಲಿ ಉರಿಯಂತೆ ತೋರಿ ಅಡಗುವದು. ಹುಟ್ಟೀತು ಒಂದು ಹೊಸಮಾತು. ಹೊಸಪುರದ ವೆಂಕಯ್ಯಂಗೆ ಉತ್ತರದ ಬಂಕಯ್ಯಗಳ ಪುರಕ್ಕೆ ಹೊಸ ಸುದ್ದಿ ಸತ್ಯ.

ಗೀಜಗನ ಹಳ್ಳಿಯಲ್ಲಿ ಸೀತೆ ಹುಟ್ಟಿ ಲೋಕಕ್ಕೆ ತೋರುತಿಹಳು. ಕಾನಕಾನರಿಗೆ ಗಾರುಡದ ಬಾಲೆ ಮಡಿದಾಳು. ಅರಿತರಿತುಕೊಳ್ಳಿ. ಆದಿಯ ಸೀತೆ ಅವತಾರಗಳ ತೋರಿ ಆಡಿದಳು. ನರರ ಕುರಿದಲೆಗಳ ಮಾಡಿ ಮೀರಿ ನಡೆದವರ ಗಾರುಡದಲ್ಲಿ ಕೊಂದು ಒಳ ಲಂಚಗಳ ಮಾಡಿ ಸ್ನೇಹ ಜಾತಿ ಎಂಬ ಪಟ್ಟಣದ ಕುವರಗೆ ತೋರಿತ್ತು ಮುಂದೆ ಜಗವರಿಯೆ ಉತ್ತರ ದಕ್ಷಿಣಕ್ಕೆ ಬಳ್ಳಿಟ್ಟು ಹುಯ್ಯಲು ಹೂಂಕರಿಸಿತ್ತು. ಕಡಿತವಾದೀತು. ಮಲಪ್ರಹಾರಿ ಕಟ್ಟಿ ಗಂಗೆ ಬಯಲಾಗುವದು. ಲೋಕಕ್ಕೆ ನಿತ್ಯ ನಿರ್ವಾಣ ನಿಜಪುರುಷರು ಮರ್ತ್ಯಕ್ಕೆ ಕುರುಹು. ಇದ ನೋಡಿ ಮರ್ತ್ಯದ ಕಟ್ಟಳೆಗೆ ಶರಣರು ಬರುವುದಕ್ಕೆ ಕಲ್ಯಾಣ ಕೆಟ್ಟಿತ್ತು. ಕಲಬುರಿಗೆ ನಾಶವಾದೀತು. ಇದು ಸತ್ಯಶರಣರು ಬರುವ ಕಾಲಕ್ಕೆ ರಾಜಬಲವೆದ್ದಿತ್ತು. ರಾಕ್ಷಸರ ಬಲ ತಗ್ಗಿತ್ತು. ಆಕಾಶದಲ್ಲಿ ಗದ್ದರಣೆಯಾದಿತ್ತು.

ಭೂತನಾಥನೆಂಬ ದುರ್ಗಕ್ಕೆ ಮುತ್ತಿಗೆ ಬಂದೀತು. ಆಕರಿಸೀತು ಹುಲ್ಲಮೊರಡಿ. ವಿವೇಕವಿಲ್ಲದೆ ರಕ್ಕಸನು ಮಡಿದಾನು. ನಾ ಕಂಡೆಚೋದ್ಯವ. ಅಂಕುರಿಸಿತ್ತು ಮಹಾಬಲವೆಲ್ಲ. ಜೋಕೆ ಎಚ್ಚರಿಕೆ. ಪಟ್ಟಣಕ್ಕೆ ನೂಂಕಿತ್ತು. ಕುತುಮಶಹನಿಗೆ ಒಳಕದನವಾದೀತು. ಕುತುಮಶಹನಿಗೆ ಹೆಣ್ಣಿನ ಹಗರಣ ಹಬ್ಬೀತು. ಮತ್ತಾದೀತು ಮೊಗಲರಿಗೆ ಘಾತವಾದೀತು. ಕುತುಮಶಹನಿಗೆ ಆ ಕ್ಷಣ ಬಲವಾದೀತು. ಗಜಪತಿಗೆ ಮಾತು ಹತ್ತೀತು. ರಾಜಂಗೆ ಇಳೆ ಬಯಲಾಗುವಳು. ನೀತಿವಂತರು ತಿಳಿದೋದಿ. ಮತ್ತೆ ರಡಿಲ್ಲದೆ ಭೂತ ನಾಥನ ದುರ್ಗ ಮಾತಿನಿಂದ ಹೋದೀತು. ಘಾತ ವಾದೀತು. ಮುಲ್ಲರಿಗೆ ಜೋಕೆ ಎಂದು ಹೇಳುವ ಬಗೆ.

ನೀತಿಯು ಬಲ್ಲ ಸುಗುಣರು ತಿಳಿದೋದಿ. ಈ ಕಾಲಜ್ಞಾನವ ವಿವೇ ಕವಲ್ಲದೆ ಜರಿಯದಿರಿ. ಲೋಕದ ಮಾತೆಂದು ಬಲ್ಲವರು ನಿಃಕರಿಸ ಬೇಡಿರಿ. ನಿಃಕರಿಸಿ ನೀಚರಾಗಬೇಡಿರಿ. ಶರಣರು ಹೇಳಿದ ಪರುಷ ವಾಕ್ಯವು. ತಿಳಿದು ನೋಡಿಕೊಳ್ಳಿರಿ. ನೀವು ತಿಳಿಯದೆ ಮಾತಾಡ ಲಾಗದು. ಶರಣರ ಪ್ರೀತಿಯ ವಾಕ್ಯವು. ತಿಳಿದು ನೋಡಿಕೊಳ್ಳಿರಿ. ತಿಳಿಯದಿರ್ದೊಡೆ ನಿಮ್ಮ ಭವದಲ್ಲಿ ನೀವೇ ಕೊಳಕೊಳ್ಳಿರಿ. ನೀವು ತಿಳಿಯದೆ ಮಾತಿಡಲಾಗದು. ಶರಣರ ಪ್ರೀತಿಯ ಕಾಲಜ್ಞಾನಕ್ಕೆ. ಇದನು ತಿಳಿಯದೆ ನುಡಿದರೆ ಮುಂದೆ ಅಘೋರ ನರಕ ತಪ್ಪದು. ನಿಮ್ಮ ಪ್ರಮಥರಾಣೆ. ನೀವೆ ಸಾಕ್ಷಿಯಾಗಿ ನೀತಿವಂತರು ತಿಳಿದು ನೋಡಿ. ಗುಣಿತಂಗಳಂ ಮಾಡಿ. ಭೂಗೋಳ ಸೂತ್ರದಲ್ಲಿ ನೋಡಿ. ಮಾತಬಲ್ಲವರಿಗೆ ತಿಳಿಯದು. ಶರಣರ ಸಂತತಿಗಳು ತಿಳಿವುದು. ಈ ಲೆಕ್ಕವನ್ನು ೭ ರಾಯರಿಗೆ ಕಲಿಸಂದು ಹೋಯಿತ್ತು. ದಿನ ತಿರಿಗಿತ್ತು. ಗೀಜಗನ ಹಳ್ಳಿ ಹೋದ ಮೇಲೆ ಈ ಪಾಪ ಕರ್ಮಿ ಗಳು ತಿಳಿಯಲರಿಯರು. ಎಷ್ಟು ಸಂವತ್ಸರ ಹೀಗೆ ತಿರಿಗಿ ಬಂದಾ ವೆಂದು ದೂಷಕರ ಮುಖಕ್ಕೆ ನಮ್ಮ ಪಡಿಹಾರಿ ಉತ್ತಣಗಳ ಎಡದ ಪಾದರಕ್ಷೆಯ ನಿಕ್ಕಿ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯನು.

ನಮ್ಮ ಪುರಾತನರು ಬರುವಬ್ಬರಕ್ಕೆ ಸೆಲೆ ಬತ್ತಿತ್ತು. ಭೂಮಿ ಬೆಳೆ ಮಂದವಾದೀತು. ಮೇಘ ಬಯಲಾದೀತು. ಆಗಮಸಿದ್ಧರು ದಯಗೈದಾರು. ಸಾಗರ ಕದಿವುದು. ಆಗರು ಬಯಲಾಗುವದು. ಆಗ

ಬಂದಾರು ನಮ್ಮ ಶರಣರು. ಸೋಜಿಗವಾದೀತು. ಪರಿಧಾವಿ ನಾಮ ಸಂವತ್ಸರದಲ್ಲಿ ಶರಣರುದಯಿಸಿದ ಕುರುಹು. ಶರಣರು ಲೋಕಾದಿ ಲೋಕಂಗಳ ಕಂಡಾರು. ಈ ಶೃತಿ ಶರಣರ ಬರವು. ವಿರೋಧಿ ಕೃತ ನಾಮ ಸಂವತ್ಸರದಲ್ಲಿ ದೀಪ ಸಂದ ಬಸವನ ಪಂಚಮಿಯಲ್ಲಿ ಈ ಕಲ್ಯಾಣದ ಶರಣರು ಪ್ರತ್ಯಕ್ಷವಾಗಿ ಮೈಗಾಣಿಸಿ ಕೊಂಬರು. ಲೋಕಕ್ಕಿದು ಚೋದ್ಯವಾದೀತು. ಭೂಕಾಂತೆ ನಡುಗುವದು. ಏಕಾದಶಿಯಲ್ಲಿ ಪ್ರತಿ ಕುರುಹು ತೋರುವುದು. ಯಾವಖಂಡದಲ್ಲಿ ಸುರಿವುದು ಕೆಂಡದ ಮಳೆ ಆ ಖಂಡವೇ ಮಡಿದೀತು. ಲೋಕಕ್ಕೆ ನಿರ್ವಿಷವಹುದು ಈ ಶೃತಿ ತಪ್ಪದು. ನಿಮ್ಮಾಣೆ ನಿಮ್ಮಪ್ರಮಥರಾಣೆ. ॥

ಲೋಕಕ್ಕೆ ಅಪಜಯ. ತವಡಿನಹೋಳಿಗೆ ಪಾವನವಾದೀತು. ಇದು ಸತ್ಯ. ಬರಕೊಳ್ಳಿರಿ. ಆಕರಿಸಿಹರು ರಕ್ಕಸರು ನಾ ಕಂಡು ಬೆರಗಾದೆ ಪ್ರಭುರಾಯ ಬಲ್ಲ. ಆಗುವ ಆಗಮಂಗಳು ನಂದನ ಸಂವತ್ಸರಾದಿ ಖರ ಸಂವತ್ಸರ ಮೊದಲು ಮುಂದಣ ಹೇಮಳಂಬಿಯಲ್ಲಿ ಕುಂದಾದ ಲೋಕದೊಳು ವಿಕಾರಿನಾಮ ಸಂವತ್ಸರದಲ್ಲಿ ಉರಿಮರಣನ ಕ್ಷೇತ್ರ ತೋರಿ ಬಯಲಾಗುವದು. ಲೆಂಡುಖಾನ ರಕ್ಕಸ ಮಡಿದಾನು. ಮರಾಟನಿಂದೆ. ಕುಂದುಗೊಳ್ಳದ ಗೋವರಿ ಮಲ್ಲಯ್ಯ ಸಾಕ್ಷಿಯಾಗಿ ಶಾರ್ವರಿನಾಮ ಸಂವತ್ಸರದಲ್ಲಿ ತೋರೀತು ಉತ್ಪಾತವು. ರನ್ನವೊಳಲ ವದೀಗ ಸಂಗಮದ ರುಪ್ರನ ಪೂರ್ವದೆಸೆಯಲ್ಲಿ ಗಾರುಡದ ಬಳ್ಳಿ ಅಮೃತವ ಕರೆದು ತೊರುವದು. ಬೆಳವಲನಾಡ ಗದಗಿನ ವೀರನಾರಾಯಣನ ತೇರು ಎಳೆದ ಮೇಲೆ ತೋರುವದು. ಹರಿಹರದ ಕಡೆ ಅಭ್ರಾಟ ಮೈಲಾರದಲ್ಲಿ ಮಂಚಿಗೆಯನಿಕ್ಕುವದು ತೋರುವದು. ಹೊಸಪುರದಲ್ಲಿ ಆಲಿಟ್ಟ ಬೊಬ್ಬೆ ಉತ್ತರದಿಂದ ರಕ್ಕಸರು ತಲೆದೋರುವರು ವಾರಣಾಸಿ ಕಡೆ ಬೇಗೆ ವರಿವುದು. ಪನ್ನಾಳಿಯಲ್ಲಿ ಇರಿತಮರಿತವಾದೀತು. ಮಾರಾಟನಿಂದಲಿ. ಗದಗಿನ ತ್ರಿಯಂಬಕನ ಮೂಡಣದೆಸೆಯಲ್ಲಿ ಎಡದ ಭಾಗದ ಶಂಕರನ ಮಸ್ತಕದಲ್ಲಿ ಅಮೃತ ಕರೆದು ತೋರುವುದು. ಸೋಜಿಗವೆಂದಾರು ಊರಜನರೆಲ್ಲ. ಉತ್ತರದೇಶದ ಕುಂಬಾರನ ಮನೆಯಲ್ಲಿ ಕೊಟ್ಟೂರ ಶಿವನಿಟ್ಟ ಮುಕ್ಕಂಡಿಕೆಯ ಬಿಲ್ಲು ದಕ್ಷಿಣಮುಖವಾದೀತು. ಗೀಜಗನ ಪುರದ ಸೀಮೆ ಕೆಟ್ಟು ಮೊಗಲರ ವಾಸವಾದೀತು. ಕಡೆಯಲ್ಲಿ ಕರೆದುಕೊಟ್ಟಾರು ಇದು ಸತ್ಯ. ನಂದನನಾಮಸಂವತ್ಸರ ಮೊದಲಾಗಿ ರಾಜ್ಯವ ಹಾಳುಮಾಡುವರು. ಶಿಬಿಯ

ದೇವರುಗಳೆಲ್ಲ ಒಡೆದಾರು. ಪಟ್ಟದ ರಂಭೆ ಹೊರಟಾಳು. ಗುರುತುಂಟು. ಖಾನಖಾನರಿಗೆ ನಂಬಿಗೆಯು ಮಾಡಿ ಹೊಸಸುದ್ದಿ ಪನ್ನಾಳಿಯಲ್ಲಿ ನಂಬುಗೆ ಇಲ್ಲವು. ಹುಲಿಗೆರಿಯು ಸೋಮಯ್ಯ ನಂದಿಯನೇರಿ ಬೇಟೆಯನಾಡುತ್ತಾನೆ.

ಶರಣರು ಉಳಿವೆಯಲ್ಲಿ ನಿಂತು ಉಳಿವೆಯ ಮಹಾಮನೆಯ ಕಳಸಗಳು ತೋರುವವು. ಶರಣರುದಯಕ್ಕೆ ತೋರಿತ್ತು. ಕುರುಹುಂಟು. ಹೊನ್ನರಳೆಯ ಮರ ಮೂರು ತೆಕ್ಕೆಯಾದೀತು. ಜಗವರಿಯಲು ಉಳುವೆ ಪಟ್ಟಣವಾದೀತು. ರೇಚಣ್ಣಗಳರವು ಂಗ ಮಂಟಪದಲ್ಲಿ. ಶರಣರುದಯಕ್ಕೆ ಕುರುಹು ತೋರಿದ ಮಹಾ ಮನೆಗಳ ಸುಳುಹುಗಳ ತೋರುತ ಬಂದಾರು. ಕೂಗಿನಮಾರಯ್ಯ ಬಂದಾನು. ಚಂದ್ರಗುಪ್ತರಾಯಗೆ ಬಾಲಿಕೆಯ ಹಿಡಿದಂತಹ ಆಗಮ ಬಂದಾವು. ಅತಿ ವಿಚಿತ್ರದ ಸಾವಾದೀತು. ಚಂದ್ರಗುಪ್ತಂಗೆ ಗಾಡಿಕಾರರು ಉರುಳಿ ಬಿದ್ದಾರು. ಕಲ್ಲು ಕೋಣ ನಲಿವುದು. ಮೇದಿನಿಯು ಲೋಂದು ಉತ್ಪಾತ. ಲೋಕವರಿಯಲು ಕಲ್ಲಕೋಳಿ ಕೂಗೀತು. ಈ ಕಥಾಂತರವ ಲೋಕವರಿಯಲು ಶರಣರುದಯಕ್ಕೆ ಆ ಕಲಿ ಅಂದಿಗೆ ಕಲಿಶಕೆ ೪೭೭೫ ವರುಷಕ್ಕೆ ಕಲಿ ಶಕೆ ಆನಂದ ನಾಮ ಸಂತ್ಸರಕ್ಕೆ ಶರಣರುದ್ಭವದ ಕುರುಹು ತೋರಿತ್ತು. ಇಂದು ನಾಳೆಂಬ ಮಂದಮತಿಗಳ ಮಾತು ನಂಬುಗೆ ಬೇಡ. ನಿಮ್ಮಾಣೆ ನಿಮ್ಮ ಪ್ರಮಥರಾಣೆ. ಶರಣರು ಬಂದುವ ಬರಕೊಳ್ಳಿ. ಕಲ್ಯಾಣಿಯಮ್ಮ ಒರೆದು ಪೇಳಿದಳು. ಕಲ್ಯಾಣಿಯಮ್ಮಗಳು ನುಡಿದ ವಚನಗಳು ಸಿದ್ಧಾಂತವು. ಹೀಗೆಂದು ಸಂಗಯ್ಯ ನುಡಿದ ಶಿವನಾಣೆ. ಲೋಕದ ಭುಂಜಕರಿಗೆ ತಿಳಿಯವು.

ಇನ್ನು ಮರ್ತ್ಯಕ್ಕೆ ಪ್ರಭುರಾಯ ಬರುವ ಪ್ರಸ್ತಾವದ ವಚನ. ಕುಲಗಿರಿಯು ನಡುಗುವದೇ ಕುರುಹು. ಕೂಸ ಬಯಲಾಗುವದು. ವ್ಯವಹಾರವೆಲ್ಲ ಬಯಲಾಗಿ ನಾಡೆಲ್ಲ ನೀರಿಲ್ಲದೆ ಸತ್ತಿತ್ತು. ಇಕ್ಕೆರೆಯ ಅಘೋರೇಶನ ಬಸವನ ಮುಂದೆ ಚಿಕ್ಕಹೊಸಪುರದ ಹೊರಪಥದಲ್ಲಿ ಶರಣೆಯ ಗರ್ಭದಲ್ಲಿ ಹುಟ್ಟಿದ ಶರಣನ. ಆ ಬಸವನ ಮುಂದೆ ದೃಷ್ಟಗಳ ತೋರಿ ತನ್ನ ಶಿರವ ಘರಿಘರಿನೆ ಹರಿದು ಅಘೋರ ಬಸವನ ಮುಂದೆ ಇಟ್ಟಾನು. ಶಿರಗಳನು ಖಂಡಿಸಿ ಮೆರೆದ ಶರಣನ ಮುಂದೆ ಲೋಕವು ಕೆಟ್ಟು ನರರೆಲ್ಲ ಭ್ರಷ್ಟರಾಗಿ ಬಯಲಾಗಿ ಹೊಸಪುರದ ದಿಕ್ಕುಗಳೆಲ್ಲ ಬಯಲಾಗಿ ರಾಜಂಗೆ ಉತ್ತರ ಬಲ ನಿಜವಾಗಿ, ಇವೇಸತ್ಯ. ಏಕಚ್ಛತ್ರವಾಗಿ ನರರೆಲ್ಲ ಉತ್ತರದ ರಕ್ಕಸರ ತುರಗದ ಸೆರೆಯಾಗಿ ಹೋದಾರು. ಕೊಟ್ಟದ

ರಾಚಯ್ಯ ಕೈಯೆತ್ತಿ ಕರೆದಾನು. ದಾರಿ ಬಟ್ಟೆಗಳೆಲ್ಲ ಬೊಗಳಾಟವಾ
ದಾವು. ಮಾಡಲು ದಿಕ್ಕುಗಳೆಲ್ಲ ಮುಗಿದಾವು. ಮಾರಾಟನಿಗೆ ಲಕ್ಷಕು
ದುರೆ ದೃಷ್ಟದಲ್ಲಿ ಕೂಡೀತು. ಕೆಂಭಾವಿಯಲ್ಲಿ ದಂಡು ಬಿಟ್ಟೀತ ವಿಪ
ರೀತವಾದೀತು. ಸಗರದ ರಂಭೆಯರೆಲ್ಲ ಕೈಸೆರೆ ಹೋದಾರು. ಇಂಬಿಲ್ಲ ಜನಕ್ಕೆ
ಇನ್ನು ಅಳಿಗಾಲವು. ಪನ್ನಾಳಿಯ ತನಕ ಪರಿಸರಿಯ ದಟ್ಟಳಿಯು. ಕಾಶಿಯ
ರಂಬೆಯರೆಲ್ಲರು ಗಾಸಿಯಾದಾರು. ಹಂಪೆಯ ಮಂದಿರದಲ್ಲಿ
ಹೊಸ ಮಾತು ಹುಟ್ಟಿಯಾವು. ಗೂಳೂರ ನಂದಿ ಡರಕೆಂದು ನಲಿದಾನು.
ಅಭ್ರಾಟಗಳ ಮಾಡಿ ಚಂದಚಂದಲ್ಲಿ ಗುಡಿಗಟ್ಟಿ ತಿಗಳಾಣ್ಯ ದೇಶವೆಲ್ಲ
ಸೆರೆ ಸೂರೆಯಾದೀತು. ಆನಂದಕ್ಕೆ ಸಂದ ಕಲಿಯುಗವು ೪೭೭೫ ವರು
ಷಕ್ಕೆ ಬಂದ ಪ್ರಭುರಾಯ ಮರ್ತ್ಯಕ್ಕೆ ಕುರುಹು.

ಇನ್ನು ಆನಂದವೆಂಬುದನು ಗುಣಿತಾಗಳಮಾಡಿ ನಿಂದ ಕಲಿಯುಗವು
ಮರ್ತ್ಯದ ಕಟ್ಟಳೆಯು ಬಂದಾರು ಪ್ರಮಥರು. ಆನಂದವನು ಪ್ರಭುರಾಯನ
ಮುಂದೆ ತೋರುವುದು ಹೊಸಲೀಲೆ. ಕಡೆಯಲ್ಲಿ ಉಂಬುತ ಬರುತಾನೆ. ಬೆಳ
ವಲ ನಾಡುಗಳ ಶರಣರುದಯಕ್ಕೆ ತೋರಿತ್ತು. ಇರಿತ ಮುರಿತವಾದೀತು
ಶರಣರಾಟಕ್ಕೆ. ಉಳಿವೆಯ ಮುಖದಲ್ಲಿ ಒಂದು ಕುರುಹಿನ ಗುಡ್ಡದ
ಗುಂಡು ಜರಿದು ಬಿದ್ದೀತು. ಕಾಣಲಮ್ಮರು. ಕರುಣಿ ಮಾರಯ್ಯಗಳು ಕೈ
ಯೆತ್ತಿ ನಲಿನಲಿದು ಹರುಷವನು. ತೋರತಲಿ ಶರಣರ ಕುರುಹಿನಲ್ಲಿ
ಬಿಚ್ಚಿಟ್ಟ ತೊಟ್ಟಿಲ ಮೆರೆವುತಿದೆ. ಮುಂದಿನ್ನು ಮಹಾ ಮಹಂತಿನ
ಚರವು ಹಾಸುತಲಿ ಒರೆದು ನೋಡಲು ಒಂದು ಬಗೆಯಲ್ಲಿ ಸಕಳ
ಕಾಣುದು. ಶಿಖರಗಂಬದಿ ಚರಲಿಂಗ ಕಂಡೀತು.

ಚನ್ನಬಸವಣ್ಣ ಗುರುವು ಬಂದಾನು. ಘನಮಹಿಮ ಬಂದಾನು.
ಮರೆಣ ವಿರಹಿತ ಮಾನ್ಯನಹುದಯ್ಯ. ಉಳಿವೆಯಲ್ಲಿ ಕರುಣಿ ಬಂದಾನು
ಮಹಾಮಹಾಂತ. ನೋಡುತಲಿ ಕರುಣಿ ಶರಣ ಬಂದಾನು. ಸಕಳತಿಂಥಿ
ಣಿಯು ಘನವಾಗಿ ಎರಕವಾದಾವು. ಹಿರಿಯರೆಲ್ಲ ಕಂಡು ಕರುಣ
ವನು ಬೇಡುವಂದದಿ ಕುರುಹುದೋರುತ ಬಯಲ ನಟ್ಟಿಸಿ ಹಿರದ
ಕುರುಹಿನ "ಕಿರೀಟವ ಗುರುತವಿಟ್ಟ ಚರಕ್ಕೆ ತನ್ನಯ ಅರಿಕೆಗಳ ತೋ
ರುತ್ತ ಅಷ್ಟಾಂಗದಲ್ಲಿ ಬಯಲಾಗಿ ಶರಣರುದಯಕ್ಕೆ ಬರುವಬ್ಬರ
ವಶಕ್ಕೆ ಕುರುಹ ಕಾಂಬುವ ತೆರನ ಪರಿಯ ವಿಸ್ತಾರ ವೆಂದೆನುತ
ಹರನ ಲೋಕವು ಹರುಷದಿಂದಲಿ ಮೆರೆವುದನು ನಾ ಕಂಡೆ ಚೋದ್ಯವನು.

ಕರುಣಿ ಉಳಿವೆಯ ಮಾರಿತಂದೆಗಳ ಮೂಡಣಾದ್ರಿಯ ಉಳಿವೆಯ ಬಾಗಿಲು ಪೂರ್ವದಿಕ್ಕಿನಲ್ಲಿ ಶರಣರೊಂದಾಗಿ ಕಣ್ಣಿಗೆ ತೋರು ವಂದದಿ ಮೆರೆದು ತೋರುತ್ತ ಮೂಕರದಂದದಲಿ ಕರುಣಿ ಬಸವನು ಒರೆದು ನಿಂದಾನು. ಅಬ್ಬರದಲ್ಲಿ ಬಂದು ನಿಂದಾನು. ಉರುತರದ ಹೆಬ್ಬಾಗಿಲಿಗೆ ಬಂದು ಗರುವ ಬಸವನ ನಾಮದಂದದಲಿ ಶರಣ ಕಲ್ಯಾಣದಲಿ ಬಂದಾನು. ಪ್ರಮಥರೊಡಗೊಂಡು ನರ ಸುರರ ಬೇಂಟೆಯನಾಡುತ್ತ ಪರಿಪರಿಯ ವಿಪರೀತವ ತೋರುತ್ತ ಮರೆಯಲ್ಲಿ ಬಂದಾನು. ಮೂಗಿನ ಬಾಗಿಲಬ್ಬರದಿ ಶರಣ ಕಂಡಾನು. ಕರ್ಮದಗ್ರ ಮರಣ ರಹಿತ ಮೂಗನಹುದಯ್ಯ. ಹೆಬ್ಬಾಗಿಲಲ್ಲಿ ಶರಣಸಂಗನ ಕರುಣದಿಂ ಹಲಿ ಶರೀರವನು ಬಚ್ಚಿಟ್ಟು ಮೂಗಿನ ಕಡೆಯ ಬಾಗಿಲ ಮುಂದೆ ಮಂಟಪದಲ್ಲಿ ಬಯಲಾಗಿ ಇರಲಿಲ್ಲ. ಒಂದುತ್ಪಾತ ತೋರುವ ಪರಿಯ ಕಂಡಾರು. ಹಲವು ಮುಖದಲ್ಲಿ ಹರನೇ ಅಹುದೆಂದು ಮರವೆಯಲ್ಲಿ ಮಾನವರರಿಯರು. ಶರಣ ಬಸವನ ಕುರುಹುಗಾಣದೆ ಬರಿದೆ ಗಾದಿಯ ಮನುಜರರಿಯರು. ಶಿವ ಘನವೆಂದು ಒರೆದು ನೋಡಲು ಒಪ್ಪವಿಟ್ಟರೆ ಶರಣನಹುದಯ್ಯ. ಮೂಗಿನ ಕುರುಹು ಧರೆ ಎಲ್ಲ ಕಾಂಬಂದದಿ ಕರುಣಿ ಒರೆದು ತೋರಿದ. ಕಲಿಯುಗದ ಮನುಜರಿಗೆ ಡರಕಿಗಳ ಮಾಡುವನು. ಲೋಕಕ್ಕೆ ಅರಿಕೆಗಳ ತೋರುವನು. ಭಕ್ತರಿಗೊರೆದು ತೋರುವನು ಒಂದೊಂದು ಚೋದ್ಯವ. ಜನರು ಕಾಂಬಂದದಲ್ಲಿ ಕಣ್ಣಿಂಗೆ ನೊರಜು ಮುತ್ತುವದೊಂದು ಮುದಿ ಎತ್ತಾಗಿ ವೈ ಗುದ್ದಿದರೆ ನೋಡುವ ವೀರಶೈವದ ಪುರುಷ ಬಂದಾನು. ಪುಣ್ಯಾಂಗದಲ್ಲಿ ಮೆರೆದ ಜನರುಗಳೆಲ್ಲ ಕಂಡಾರು. ಶರನಹುದೆಂದು ದಾನ ಧರ್ಮಂಗಳ ಮಾಡುವಂತಹ ಪುರುಷರು ಕಂಡಾರು. ಹರುಷದಿಂದಲಿ ನೋಡುವರಿಗೆ ಕರುಣದಲಿ ಕಂಡಾರು. ಶರಣರ ಕುರುಹು ಅರಿದೆಂದು ಮುರುಟಿಸಿ ಮುದಿ ಎತ್ತಾದ ಪರಿಯನು ಆ ಶರಣ ಬಂದಾಕ್ಷಣ ಅತಿ ರೂಪ ಪುಟ್ಟಿಸಿ ಧರೆಯ ಮನುಜರು ಕೇಡು ಆಶ್ಚರ್ಯ ಕೌತುಕವೆಂದು ನುಡಿವರು. ಪ್ರಮಥರುದಯಕ್ಕೆ ಶರಣರು ತೋರುತ್ತ ಬಯಲ ನಟಿಸುತ್ತ ಅಹುದು ಬಸವನಾದಿಯ ಪಥವು. ಶರಣರಿದ್ದ ನೋಡಿ ಭಕ್ತರೆಲ್ಲ ಇದು ನರರ ಪಾತ್ರವೆಂಬ ಕರ್ಮಿಗೆ ಬಾಯೊಳು ಬಾಲ್ಹುಳು ಸುರಿಯದಿಪ್ಪವೆ? ಬರಿದೆ ಭ್ರಮೆಯಲ್ಲಿ ಜರಿದವರಿಗೆ ಅಘೋರ ನರಕ ತಪ್ಪದು. ಹರನ ಭಕ್ತರು ಒರೆದು ನೋಡಲು ಪರಮ ಪದವಿಯ ಪಡೆವರು. ಸುಖಿಸುವ ಶರಣರೆಲ್ಲರು ಕೇಳಿ ನೋಡಿ ಸುಖಿಯಾಗಿ ಸಾಮ್ರಾಜ್ಯ

ಪದವಹುದು. ಶರಣರು ಬೇಗ ಬಂದಾರು. ಬರೆಕೊಳ್ಳಿರಿ. ಹೀಗೆಂದು ಹರಳಯ್ಯನವರ ಪಟ್ಟದ ರಾಣಿ ಕಲ್ಯಾಣಿಯಮ್ಮನು ಶಿವಜ್ಞಾನದಲಿ ನೋಡಿ ಹೇಳಿದಳು. ಇದು ಸತ್ಯ ಸತ್ಯವೆಂದು ಬರೆಕೊಳ್ಳಿರಿ. ನೋಡಿ ಅರಿದುಕೊಳ್ಳಿರಿ. ಅರಿದುಕೊಳ್ಳದಿದ್ದೊಡೆ ಯಮಪುರಕ್ಕೆ ಸರಿದುಕೊಳ್ಳಿರಿ. ಶಿವಗಣಂಗಳ ಕಾಲಜ್ಞಾನವ ಆನಂದದಲ್ಲಿ ಚಿತ್ತವಿಟ್ಟು ಓದಿ ಕೇಳಿದಂತಹ ಮಹಾತ್ಮರಿಗೆ ಜಯ ಹೊಂದುವುದು. ದುಃಖ ದುರ್ಮರಣ ದೂರವಾಗುವುದು. ಭಕ್ತಿಯಿಂದ ಕೇಳಿ ಮರ್ತ್ಯಲೋಕದ ಮಹಾಗಣಂಗಳು ಭಕ್ತರಾಗಿ ಕೇಳಿದವರು ಹೇಳಿದವರು ಅನೇಕ ಕಾಲದಲ್ಲಿ ಜಯವಾಗಲಿ. ಪುತ್ರ ಮಿತ್ರ ಕಳತ್ರಂಗಳಿಗೆ ಜಯವಾಗಲಿ.

# ಹೊಡೆಹುಲ್ಲ ಬಂಕಯ್ಯಗಳ ಕಾಲಜ್ಞಾನದ ವಚನ

ಶಾರ್ವರಿ ನಾಮ ಸಂವತ್ಸರಕ್ಕೆ ತೋರೀತು ವಿಪರೀತ ಕಾರಣವು. ಕಾರ್ತಿಕದಲ್ಲಿ ತೋರುವುದು ಪಂಚಗ್ರಹಂಗಳು. ಮೀರಿದ ಮಾರ್ಗಶಿರದ ಪಂಚಮಿಯಲ್ಲಿ ತೋರುವದು ಮರ್ತ್ಯಲೋಕದ ಮನುಜರಿಗೆ. ರೂಡಿಯ ಖಾನಖಾನರಿಗೆ ಅಪಜಯ ಅಪತ್ತು ಮೂಡಿದವು. ಪ್ರತಿಸೂರ್ಯ ಮರ್ತ್ಯದ ಮಹಾಜನರು ಕಂಡಾರು. ಒಂದೊಂದು ಕುರುಹ ಗಾಡ ಬಂದಾವು. ಉತ್ತರದ ರಕ್ಕಸರು ಆಗ ಮಾಡುವುದೊಂದು ಬಗೆಯುಲಿ ಬೇಗವಾದೀತು ದಕ್ಷಿಣವು. ಅಗ ಕಂಡಾರು ಕವಲ ನುಡಿಗಳ. ಆಗ ಮಾಡುವರು ಕರ್ಮ ದುಗ್ರವ. ಲೊಗರೆಲ್ಲರು ನೆರೆದು ಬಂದಾರು. ಈಗ ಕನ್ನಡ ಗೌಳ ಗುರ್ಜರ ಕನಸುವಳ್ಳಿಯು ನೆರೆದು ಖಾನಖಾನರು ನೆರೆದು ತಾವೆ ಕೂಡಿ ಇರಿದಾಡಿ ಇಕ್ಕೆಲದಲ್ಲಿ ಬಿದ್ದಾರು. ಧೀರ ಮನ್ನೆಯ ಲೆಂಡ ಗುರ್ಜರರು ಆ ಧರೆಯೊಳಗೆ ಅತಿ ಮಂಟಪ ದೃಷ್ಟ ಕೋಟೆಯು ಕೊಟ್ಟು ಇರಿತದಿ ನಷ್ಟವಾದಾರು. ಬೆಟ್ಟದಪುರದಲ್ಲಿ ಕವಿ ಕವಿದು ಸುರಿಗೆಯು ಬಿಟ್ಟು ಹೋದಾರು. ಸುಖವು ನಮಗಿಲ್ಲಿನ್ನು ಇರಬಹುದೆ? ಬಟ್ಟೆಗಳಲ್ಲಿ ಬೊಗಳಾಟವು ಪಡವಲಾದ್ರಿಯ ಗಟ್ಟಿಮಾಡುವರು. ಬಳ್ಳಾಪುರದ ತನಕ ರಕ್ಕಸರ ಬಲ ಉಕ್ಕಿ ಉಲಿವುತ್ತ ಉತ್ತರವನೊಡಗೂಡಿ ಖಾನ ರಕ್ಕಸರು ಸಿಕ್ಕು ದೊಡಕು ಸಿರಿಗಳನು ದಿಕ್ಕು ಗಳನೆಲ್ಲ ಸುಲಿಯುತ್ತ ನಾಲ್ಕು ದಿಕ್ಕುಗಳನ್ನು ನೋಡುತ್ತ ರಂಜಿಸಿ ಮಿಗೆ ಬಂದುಬಿಟ್ಟರು. ನಲಿನಲಿದು ಚಿಕ್ಕ ಪಕ್ಷಿಯು ಮುರಿವ ತೆರದಲಿ ಲೆಕ್ಕವಿಲ್ಲದೆ ಖಾನಖಾನರು ಹೊಕ್ಕು ಇರಿತಗಳ ಮಾಡಿ ಇದಿರಿಲ್ಲವೆಂದು ಉಮ್ಮಳಿಸಿ ಚಿಕ್ಕ ಪಟ್ಟದ ಕಲ್ಲು ಕೋಟೆಯ ಒತ್ತಿನಿಂದಲಿ ಚಿಕ್ಕ ನಗರದಿಂದ ಒಬ್ಬ ಬೇಡ ಬಂದಾನು. ಪಡುವಲಾದ್ರಿಯ ಸೃಷ್ಟಿಯನೆಲ್ಲವನು ಸುಲಿವುತಲಿ ಜಗವರಿಯೆ ನೋಡುತ ಉತ್ತಮ ಶರಣ ನಡೆತಂದಾನು. ಈ ನುಡಿ ತಪ್ಪದು ಶಿವ ನುಡಿ ಪ್ರತಿವಾಕ್ಯವು. ಕಟ್ಟೆಳಿಯು ಕಲಿಯುಗ ಸಂದು ಸಂವತ್ಸರ ಮುಟ್ಟೆ ಪರಾಭವ ಆದಿ ಆನಂದ ಕಡೆಯಾಗಿ ಸೃಷ್ಟಿ ಎಲ್ಲ ಉಡಿಗಿ ಧರೆಯ ಮನುಜರು ಸತ್ತು ನಿಜ ಭಕ್ತರು ನಿಲುವುದಕೆ ಕುರುಹುಗಳು. ಅಷ್ಟು ದಿಕ್ಕುಗಳಳಿದಾವು. ಶ್ರೀಶೈಲ ಕೆಟ್ಟಿತ್ತು. ನಿಜವಿದು ಸಿದ್ಧಾಂತವು.

ದಾನಧರ್ಮಂಗಳ ಮರೆಯದಿರಿ. ಇದರಿಂದಧಿಕವಿಲ್ಲವು. ಇನ್ನು ರಾಕ್ಷಸರು ಬರುವುದಕೆ ರಾಕ್ಷಸ ನಾಮ ಸಂವತ್ಸರವೇ ಕಡೆ. ನಳನಾಮ ಸಂವತ್ಸರದ ಮಾರ್ಗಶಿರ ಮಾಸದಲ್ಲಿ ಕಾವೇರಿಯಲ್ಲಿ ದೇವಕಿ ದೇವರಸರ ಗರ್ಭದಲ್ಲಿ ವೀರ ಬಸವಂತ ಉದ್ಭವಿಸುವನು. ಶ್ರೀ ಶೈಲ ಚನ್ನ ಮಲ್ಲಿಕಾರ್ಜುನನ ದರುಶನಕ್ಕೆ ಬಂದಾನು. ಇದು ಸಿದ್ಧಾಂತವು. ಹೊಡೆಹುಲ್ಲ ಬಂಕಯ್ಯಗಳ ಕಾಲಜ್ಞಾನದ ವಚನವ ಕೇಳಿದ ಮಹಾಗಣಂಗಳಿಗೆ ಶರಣ ಸಂತತಿಗಳಹರು. ಶಿವಸುಖದಿರವು ದೊರೆಕೊಂಬುವುದು. ಸಕಳ ಸೌಭಾಗ್ಯ ಇಷ್ಟಾರ್ಥಗಳನು ಈಶ್ವರನೊಲಿದಿಹನು. ಹೊಡೆಹುಲ್ಲ ಬಂಕಯ್ಯಗಳ ಕಾಲಜ್ಞಾನದ ವಚನ ಸಮಾಪ್ತ ಮಂಗಳ ಮಹಾ. ಶ್ರೀ

# ಕೂಗಿನ ಮಾರಯ್ಯಗಳ ಕಾಲಜ್ಞಾನದ ವಚನ.

ಅಘಹರನುರುತರದ ಮನೆಯಲ್ಲಿ ಕೂಗೋ ಕೂಗೋ. ಆಗ ದಂಡು ಬಿಟ್ಟಿತೆಂದು ಮುಂದಣ ಕದನಕ್ಕೆ ಕೂಗೋ ಕೂಗೋ. ಗಗನ ಮಹಲುಗಳೆಲ್ಲ ಮಸೂತಿಯಾದವು ಕೂಗೋ ಕೂಗೋ. ಆಗ ಚಂದ್ರಸಾಲೆಗಳೆಲ್ಲ ಪ್ರಳಯುಗಳಾದಾವು ಕೂಗೋ ಕೂಗೋ. ಬಿದ್ದು ಹೋಗುವುದು ಬದ್ಧ ಮಂದಿನ್ನು ಜಗದೊಳು ಕೂಗೋ ಕೂಗೋ. ಮಿಗೆ ಸಾವಿರ ಶತವರುಷ ತುಂಬುತಲಿದೆ ಕೂಗೋ ಕೂಗೋ. ಮೊಗಲರ ಪಟ್ಟವ ಕಡ್ಡಿಯಾಗುತಲಿದೆ ಕೂಗೋ ಕೂಗೋ. ಬಸವಣ್ಣ ಬರುವಾಗ ಪುಸಿಯಲ್ಲ ಹಿಂದಿನವರು ಕೂಗೋ ಕೂಗೋ. ಅಸಮಾನದ ಮನೆ ಬಿದ್ದು ಎದ್ದಾವೆಂದು ಕೂಗೋ ಕೂಗೋ. ಕುಶಲ ಕೋವಿದ ತುರಕಾಣ್ಯದೇಶಕ್ಕೆ ಕೂಗೋ ಕೂಗೋ. ಆಸವಲ್ಲ ಮರ್ತ್ಯಕ್ಕೆ ಸೆರೆ ಸೂರೆಗಳೆಂದು ಕೂಗೋ ಕೂಗೋ. ವಿಸ್ತರದಿಂದಲಿ ಮುಸುಕಿನ ಬಿಬ್ಬೇರು ಕೂಗೋ ಕೂಗೋ. ಹಸಗೆಟ್ಟು ಹೋದರು ವಸುಧೆಯ ಬಿಟ್ಟಿನ್ನು ಕೂಗೋ ಕೂಗೋ. ವಸುಧೆಗಳಳಿದಾವು ಮರ್ತ್ಯಕ್ಕೆ ಪ್ರಳಯವು ಕೂಗೋ ಕೂಗೋ. ಅಸಮಾನ ಕೂಗಿನ ಮಾರ ಕೂಗಿದನೆಂದು ಕೂಗೋ ಕೂಗೋ. ಅಲ್ಲಮನ ಹುಯ್ಯಲು ನಿಲ್ಲದೆ ಬರುತಿದೆ ಕೂಗೋ ಕೂಗೋ. ಬಲ್ಲಂತಹ ಪ್ರೌಢರಿಗೆ ಹುಲ್ಲಿಡಿದು ಸಾರಿದೆ ಕೂಗೋ ಕೂಗೋ. ಎಲೋ ಎರಡು ಸಾವಿರ ಕೋಟಾರವು ಕೂಗೋ ಕೂಗೋ. ನಿಲ್ಲದೆ ಬಳೆಗಳು ರಾಸಿ ಹೊಯಿದಾವೆಂದು ಕೂಗೋ ಕೂಗೋ. ಬಲ್ಲಿದ ತೆಲುಗರು ವಿಜಯಪುರಕಿನ್ನು ಕೂಗೋ ಕೂಗೋ. ಅಲ್ಲಿ ಹಾಸ್ಯವ ಮಾಡಿಯಾರು ಇದ್ದಂತಹ ಪ್ರಜೆಗಳು ಕೂಗೋ ಕೂಗೋ. ಎಲ್ಲಿಯು ಮಾತೆಂದು ನುಡಿವ ದೂಷಕರಿಗೆ ಕೂಗೋ ಕೂಗೋ. ಹುಲ್ಲ ಹಿಡಿದು ಸಾರಿದ ಕೂಗಿನ ಮಾರಾ ಕೂಗೋ ಕೂಗೋ. ಕೂಗಿನ ಮಾರಯ್ಯಗಳ ಕಾಲಜ್ಞಾನದ ವಚನ ಸಮಾಪ್ತ.

---

# ಚನ್ನಬಸವೇಶ್ವರ ದೇವರು ನಿರೂಪಿಸಿದ ಕಾಲಜ್ಞಾನದ ವಚನ.

ಮುಂದೆ ಹೇಳುವೆ ಕೇಳಿರಯ್ಯ. ಇಕ್ಕೇರಿಯ ಆಳಿಕೆಯ ಪೇಳ್ವೆನು. ಪ್ರಥಮದಲ್ಲಿ ಹುಚ್ಚ ಸಂಕಣ್ಣನು. ಅವ ಆಳಿದ ಮೇಲೆ ವೀರಭದ್ರನು. ಅವ ಆಳಿದ ಮೇಲೆ ನಾರಿಯ ಸೀಮೆಯಲ್ಲಿ ಧೀರರಿಬ್ಬರು ಹುಟ್ಟಿ ಶಿವ ನಾರಾಯಣ ನಾಮದವರು ಬಂದು ಜಂಗಮಾರ್ಚನೆಯ ಮಾಡಿಹರು. ಶಿವನ ಹೆಸರವನು ಸ್ಥಿರವಾಗಿ ಆಳಿಯಾನು. ನಾರಾಯಣನ ಹೆಸರವನು ವೆಂಕಟೇಶನು. ವೀರನ ಹೆಸರವನು ಹುಚ್ಚನು. ವೆಂಕಟೇಶನೆಂಬವನು ಇರಿದಾನು. ಅವ ಮಡಿದ ಮೇಲೆ ವೀರನ ಹೆಸರವನಾಳಿಯಾನು. ಅವ ನಾಳುವಾಗ ಹುಚ್ಚು ಹಿಡಿದೀತು. ವಿಪ್ರರ ಬೋಧೆಯ ಕೇಳಿ ಜನ್ನಿವಾರವ ಹಾಕಿಯಾನು. ನರಕೀಟಕನಾಗಿರುತಲೆ ಮಡಿದಾನು. ಇದು ಸತ್ಯವು. ಹುಸಿಯಲ್ಲ. ಹುಸಿ ಎಂಬ ಶಿವದ್ರೋಹಿಯ ಬಾಯಲ್ಲಿ ಜಲಮಲಗಳ ಬಿಡು ಎಂದಾಸು. ಅವನ ಮುಂದೆ ಎತ್ತು ಕಾವವ ಹುಟ್ಟಿಯಾನು. ಅರೆಪಟ್ಟವನಾಳುತಲೆ ತುರುಕರ ಕಯ್ಯಿಂದ ಮೋಸದಲ್ಲಿ ಮಡಿದಾನು. ಎತ್ತು ಕಾವನ ಸೀಮೆಯೊಳಗೆ ಹತ್ತು ಮರವ ಹುಟ್ಟ್ಯಾನು. ಎತ್ತು ಕಾವವ ಮಡಿದ ಮೇಲೆ ಹೋತು ಮಾರುವವನ ಮಗಳು ಮುತ್ತೈದಿತನವನಳಿದಾಳು. ಆಕೆ ರಾಜ್ಯವನಾಳ್ಯಾಳು. ಇದು ಸತ್ಯ. ಪಟ್ಟಣ ಬಿದುರೂರು ಕೆಟ್ಟು ಹೋಗುವ ಕಾಲಕ್ಕೆ ಸೆಟ್ಟಿಯ ಮಗಳಾಳಿಕೆ ನೆಟ್ಟನೆ ಬಂದ ಕುರುಹು. ಇದು ಸತ್ಯವು.

ಮಲೆನಾಡರಸುಗಳಾಳಿಕೆ ೫೦ ವರುಷಕೆ ಹೆಣ್ಣು ಪಟ್ಟಣಸೆಟ್ಟಿಯ ಮಗಳಾಳಿಕೆ ಬಂದ ಮೇಲೆ ಶಿವಪ್ಪನಾಯಕರ ವಂಶಕ್ಷಯವು. ಮಲೆನಾಡವರ ಆಳಿಕೆ ಮುಕ್ತಾಯ.

ಮುಂದೆ ಮರಾಟರಾಳಿಕೆಯ ಪೇಳ್ವೆ. ಪ್ರಥಮದಲ್ಲಿ ಸಿದ್ದೋಜಿ. ಅವನ ಮಗ ಮದ್ದೋಜಿ ಆಳ್ವನು. ಅವ ಮಡಿದ ಮೇಲೆ ಅವನ ಮಗ ವಣಗೋಜಿ ಗೋಪಾಳ ಆಳ್ವನು. ಅವ ಮಡಿದ ಮೇಲೆ ಅವನ ಮಗ ಶಹಾಜಿಯಾಳ್ವನು. ಅವ ಮಡಿದ ಮೇಲೆ ಅವನ ಮಗ ಶಿವಾಜಿಯಾಳ್ವನು. ಆ ಶಿವಾಜಿಯ ಅರ್ಭಾಟ ರಾಜ್ಯದೊಳಗೆ ಹೆಚ್ಚಿತ್ತು. ರಾಜ್ಯ ಹಾಳುಮಾಡಿಯಾನು. ಶಿವಾಜಿಯಿಂದ ಉತ್ತರದ ದೇಶವೆಲ್ಲ ಹಾಳಾದಿತ್ತು. ಭಾಗೀ

ರಥಿಯು ತನಕ ಹಾಳಾದಿತ್ತು. ಶಿವಾಜಿ ಮಡಿದ ಮೇಲೆ ಅವನ ಮಗ ಸಂಭಾಜಿ. ಕೆಲವು ರಾಜ್ಯ ಹಾಳು ಮಾಡಿಯಾನು. ಶಿವಾಜಿ ಮಡಿದ ಮೇಲೆ ಅವನ ಮಗ ಸಂಭಾಜಿಯು ಕೊಂದಾರು. ಸಂಭಾಜಿ ಮಡಿದ ಮೇಲೆ ರಾಮರಾಜನ ಮುತ್ತಿಹರು. ಆ ರಾಮರಾಜನೇ ಕಡೆ. ಆರೇರ ವಂಶಕ್ಕೆ ಏಳು ತಲೆ. ಆ ರಾಮರಾಜನ ಆಳಿಕೆ ಕಾಲದಲ್ಲಿಗೆ ಆರೇರ ಪಟ್ಟ ಸರಿ. ೧೨೦ ವರುಷಕ್ಕೆ ರಾಮರಾಜನ ಆಳಿಕೆಯು ಪಟ್ಟ ಮುಕ್ತಾಯವಾದಿತ್ತು.

ವಿಜಯಪುರಕ್ಕೆ ಸುಲತನ ಶಿಖೇಂದ್ರನೇ ಕಡೆ. ತುರಕರೊಳಗೆ ಅವರಿಗೆ ೧೩೦ ವರುಷಕ್ಕೆ ತುರಕರದು ಸರಿ. ಮೊಗಲರಾಳಿಕೆಯೊಳಗೆ ನವರಂಗಶಾಹನ ಮಗ ಅವರಂಗಜೇಬನು ಬಂದುದೇ ಕಡೆ. ಮೊಗಲರ ಪಟ್ಟ ೧೧೦೦ ವರುಷಕ್ಕೆ ಮುಕ್ತಾಯವು. ಮೊಗಲರು ಆಳಿ ವಿಜಯಪುರವ ತಕ್ಕೊಂಡ ಮೇಲೆ ಎರಡೆರಡು ಒಂದು ಒಂದು ವರುಷಕ್ಕೆ ಅಂತೂ ವರುಷ ಐದು ಪ್ರಮಾಣವು ಧಾತು ನಾಮಸಂವತ್ಸರಕ್ಕೆ ೧೧೦೦ ವರುಷ ತುಂಬಿತ್ತು. ಅಲ್ಲಿಗೆ ಮೊಗಲರದು ಮುಕ್ತಾಯವು.

ಇನ್ನು ರಾಜಪಟ್ಟವಾದೀತು. ರಾಯನು ಕಾಶಿಗೆ ಹೋಗಿ ತಲೆಯ ತಂದ ವರುಷಕ್ಕೆ ಅವರಿಗೆ ಮರಣವು. ಅವರಿಗಾಮೇಲೆ ಚಿಕ್ಕನಗರದ ಬೇಡ ಆರು ಮಾಸವನಾಳ್ವನು. ಅಶ್ವಪತಿ ಗಜಪತಿ ನರಪತಿ ಈ ಮೂವ್ವರು ಭಂಡಾರವ ಒಡೆದ ಮೇಲೆ ಆರು ತಿಂಗಳು ಬೇಡನಾಳಿ ಭಾಂಡಾರವ ಕಾಯ್ದುಕೊಂಡಿರುವಾಗ ಚನ್ನಬಸವಣ್ಣನು ವೀರವಸವಂತನು ಉಳಿವೆಯ ಮಹಾಮನೆಯಿಂದ ಚಿತ್ತೈಸಿ ಮದಗದ ಕೆರೆಯಲ್ಲಿ ಗಣಪರ್ವಮಂ ಮಾಡಿ ಪರ್ವತಕ್ಕೆ ಹೋಗಿ ಶ್ರೀಶೈಲ ಮಲ್ಲಿಕಾರ್ಜುನನ ದರುಶನವಾಗಿ ಹಂಪೆಗೆ ಬಂದೆವು. ವಿರೂಪಾಕ್ಷನ ದರುಶನವಾಗಿ ಬೇಡ ಪಟ್ಟಣವ ಶೃಂಗಾರವ ಮಾಡಿ ಇದಿರುಗೊಂಡಾನು. ಬೇಡ ಶರಣರ ಪಾದವ ಕಂಡಾನು. ಲಿಂಗವ ಕಟ್ಟಿಯಾನು. ವೀರವಸವಂತಗೆ ಹಂಪೆಯಲ್ಲಿ ಪಟ್ಟವ ಕಟ್ಟಿಯಾರು. ಚನ್ನಬಸವಣ್ಣಂಗೆ ಪ್ರಧಾನಿ ಪಟ್ಟವಾಗಿ ರಾಜ್ಯವನಾಳುವದಕ್ಕೆ ಬಂದೇವು. ಶ್ರೀಮುಖ ನಾಮ ಸಂವತ್ಸರದ ಕಾರ್ತಿಕ ಶುದ್ಧ ಬಿದಿಗೆ ಮಂಗಳವಾರ ಬಂದೀತು. ಇದು ಸತ್ಯ.

ನಾವು ಬರುವುದಕ್ಕೆ ಪಾದೋದಕ ಪ್ರಸಾದದ ಮಹಿಮೆ ವಿಶೇಷವಾದೀತು. ಪಾದತೀರ್ಥ ಪ್ರಸಾದದ ಮಹಿಮೆ ಒಬ್ಬ ಶರಣನಿಂದೆ ಘನ

# ಚೆನ್ನಬಸವೇಶ್ವರ ದೇವರು ನಿರೂಪಿಸಿದ ಕಾಲಜ್ಞಾನದ ವಚನ.

ಮುಂದೆ ಹೇಳುವೆ ಕೇಳಿರಯ್ಯ. ಇಕ್ಕೇರಿಯ ಆಳಿಕೆಯ ಪೇಳ್ವೆನು. ಪ್ರಥಮದಲ್ಲಿ ಹುಚ್ಚ ಸಂಕಣ್ಣನು. ಅವ ಆಳಿದ ಮೇಲೆ ವೀರಭದ್ರನು. ಅವ ಆಳಿದ ಮೇಲೆ ನಾರಿಯ ಸೀಮೆಯಲ್ಲಿ ಧೀರರಿಬ್ಬರು ಹುಟ್ಟಿ ಶಿವ ನಾರಾಯಣ ನಾಮದವರು ಬಂದು ಜಂಗಮಾರ್ಚನೆಯ ಮಾಡಿಹರು. ಶಿವನ ಹೆಸರವನು ಸ್ಥಿರವಾಗಿ ಆಳಿಯಾನು. ನಾರಾಯಣನ ಹೆಸರವನು ವೆಂಕಟೇಶನು. ವೀರನ ಹೆಸರವನು ಹುಚ್ಚನು. ವೆಂಕಟೇಶನೆಂಬವನು ಇರಿದಾನು. ಅವ ಮಡಿದ ಮೇಲೆ ವೀರನ ಹೆಸರವನಾಳಿಯಾನು. ಅವ ನಾಳುವಾಗ ಹುಚ್ಚು ಹಿಡಿದೀತು. ವಿಪ್ರರ ಬೋಧೆಯ ಕೇಳಿ ಜನ್ನಿವಾರವ ಹಾಕಿಯಾನು. ನರಕೀಟಕನಾಗಿರುತಲೆ ಮಡಿದಾನು. ಇದು ಸತ್ಯವು. ಹುಸಿಯಲ್ಲ. ಹುಸಿ ಎಂಬ ಶಿವದ್ರೋಹಿಯ ಬಾಯಲ್ಲಿ ಜಲಮಲಗಳ ಬಿಡು ಎಂದಾನು. ಅವನ ಮುಂದೆ ಎತ್ತು ಕಾವವ ಹುಟ್ಟಿಯಾನು. ಅರೆಪಟ್ಟವನಾಳುತಲೆ ತುರುಕರ ಕಯ್ಯಿಂದ ಮೋಸದಲ್ಲಿ ಮಡಿದಾನು. ಎತ್ತು ಕಾವನ ಸೀಮೆಯೊಳಗೆ ಹತ್ತು ಮರವ ಹುಟ್ಟ್ಯಾನು. ಎತ್ತು ಕಾವವ ಮಡಿದ ಮೇಲೆ ಹೋತು ಮಾರುವವನ ಮಗಳು ಮುತ್ತೈದಿತನವನಳಿದಾಳು. ಆಕೆ ರಾಜ್ಯವನಾಳ್ಯಾಳು. ಇದು ಸತ್ಯ. ಪಟ್ಟಣ ಬಿದುರೂರು ಕೆಟ್ಟು ಹೋಗುವ ಕಾಲಕ್ಕೆ ಸೆಟ್ಟಿಯ ಮಗಳಾಳಿಕೆ ನೆಟ್ಟನೆ ಬಂದ ಕುರುಹು. ಇದು ಸತ್ಯವು.

ಮಲೆನಾಡರಸುಗಳಾಳಿಕೆ ೫೦ ವರುಷಕೆ ಹೆಣ್ಣು ಪಟ್ಟಣಸೆಟ್ಟಿಯ ಮಗಳಾಳಿಕೆ ಬಂದ ಮೇಲೆ ಶಿವಪ್ಪನಾಯಕರ ವಂಶಕ್ಷಯವು. ಮಲೆನಾಡವರ ಆಳಿಕೆ ಮುಕ್ತಾಯ.

ಮುಂದೆ ಮರಾಟರಾಳಿಕೆಯ ಪೇಳ್ವೆ. ಪ್ರಥಮದಲ್ಲಿ ಸಿದ್ದೋಜಿ. ಅವನ ಮಗ ಮದ್ದೋಜಿ ಆಳ್ವನು. ಅವ ಮಡಿದ ಮೇಲೆ ಅವನ ಮಗ ವಣಗೋಜಿ ಗೋಪಾಳ ಆಳ್ವನು. ಅವ ಮಡಿದ ಮೇಲೆ ಅವನ ಮಗ ಶಹಾಜಿಯಾಳ್ವನು. ಅವ ಮಡಿದ ಮೇಲೆ ಅವನ ಮಗ ಶಿವಾಜಿಯಾಳ್ವನು. ಆ ಶಿವಾಜಿಯ ಅರ್ಭಾಟ ರಾಜ್ಯದೊಳಗೆ ಹೆಚ್ಚಿತ್ತು. ರಾಜ್ಯ ಹಾಳುಮಾಡಿಯಾನು. ಶಿವಾಜಿಯಿಂದ ಉತ್ತರದ ದೇಶವೆಲ್ಲ ಹಾಳಾದಿತ್ತು. ಭಾಗೀ

ರಥಿಯು ತನಕ ಹಾಳಾದಿತ್ತು. ಶಿವಾಜಿ ಮಡಿದ ಮೇಲೆ ಅವನ ಮಗ ಸಂಭಾಜಿ. ಕೆಲವು ರಾಜ್ಯ ಹಾಳು ಮಾಡಿಯಾನು. ಶಿವಾಜಿ ಮಡಿದ ಮೇಲೆ ಅವನ ಮಗ ಸಂಭಾಜಿಯು ಕೊಂದಾರು. ಸಂಭಾಜಿ ಮಡಿದ ಮೇಲೆ ರಾಮರಾಜನ ಮುತ್ತಿಹರು. ಆ ರಾಮರಾಜನೇ ಕಡೆ. ಆರೇರ ವಂಶಕ್ಕೆ ಏಳು ತಲೆ. ಆ ರಾಮರಾಜನ ಆಳಿಕೆ ಕಾಲದಲ್ಲಿಗೆ ಆರೇರ ಪಟ್ಟ ಸರಿ. ೧೨೦ ವರುಷಕ್ಕೆ ರಾಮರಾಜನ ಆಳಿಕೆಯು ಪಟ್ಟ ಮುಕ್ತಾಯವಾದಿತ್ತು.

ವಿಜಯಪುರಕ್ಕೆ ಸುಲತನ ಶಿಖೇಂದ್ರನೇ ಕಡೆ. ತುರಕರೊಳಗೆ ಅವರಿಗೆ ೧೩೦ ವರುಷಕ್ಕೆ ತುರಕರದು ಸರಿ. ಮೊಗಲರಾಳಿಕೆಯೊಳಗೆ ನವರಂಗಶಾಹನ ಮಗ ಅವರಂಗಜೇಬನು ಬಂದುದೇ ಕಡೆ. ಮೊಗಲರ ಪಟ್ಟ ೧೧೦೦ ವರುಷಕ್ಕೆ ಮುಕ್ತಾಯವು. ಮೊಗಲರು ಆಳಿ ವಿಜಯಪುರವ ತಕ್ಕೊಂಡ ಮೇಲೆ ಎರಡೆರಡು ಒಂದು ಒಂದು ವರುಷಕ್ಕೆ ಅಂತೂ ವರುಷ ಐದು ಪ್ರಮಾಣವು ಧಾತು ನಾಮಸಂವತ್ಸರಕ್ಕೆ ೧೧೦೦ ವರುಷ ತುಂಬಿತ್ತು. ಅಲ್ಲಿಗೆ ಮೊಗಲರದು ಮುಕ್ತಾಯವು.

ಇನ್ನು ರಾಜಪಟ್ಟವಾದೀತು. ರಾಯನು ಕಾಶಿಗೆ ಹೋಗಿ ತಲೆಯು ತಂದ ವರುಷಕ್ಕೆ ಅವರಿಗೆ ಮರಣವು. ಅವರಿಗಾಮೇಲೆ ಚಿಕ್ಕನಗರದ ಬೇಡ ಆರು ಮಾಸವನಾಳ್ವನು. ಅಶ್ವಪತಿ ಗಜಪತಿ ನರಪತಿ ಈ ಮೂವ್ವರು ಭಂಡಾರವ ಒಡೆದ ಮೇಲೆ ಆರು ತಿಂಗಳು ಬೇಡನಾಳಿ ಭಾಂಡಾರವ ಕಾಯ್ದುಕೊಂಡಿರುವಾಗ ಚನ್ನಬಸವಣ್ಣನು ವೀರವಸವಂತನು ಉಳಿವೆಯು ಮಹಾಮನೆಯಿಂದ ಚಿತ್ತೈಸಿ ಮದಗದ ಕೆರೆಯಲ್ಲಿ ಗಣಪರ್ವಮಂ ಮಾಡಿ ಪರ್ವತಕ್ಕೆ ಹೋಗಿ ಶ್ರೀಶೈಲ ಮಲ್ಲಿಕಾರ್ಜುನನ ದರುಶನವಾಗಿ ಹಂಪೆಗೆ ಬಂದೆವು. ವಿರೂಪಾಕ್ಷನ ದರುಶನವಾಗಿ ಬೇಡ ಪಟ್ಟಣವ ಶೃಂಗಾರವ ಮಾಡಿ ಇದಿರುಗೊಂಡಾನು. ಬೇಡ ಶರಣರ ಪಾದವ ಕಂಡಾನು. ಲಿಂಗವ ಕಟ್ಟಿಯಾನು. ವೀರವಸವಂತಗೆ ಹಂಪೆಯಲ್ಲಿ ಪಟ್ಟವ ಕಟ್ಟಿಯಾರು. ಚನ್ನಬಸವಣ್ಣಂಗೆ ಪ್ರಧಾನಿ ಪಟ್ಟವಾಗಿ ರಾಜ್ಯವನಾಳುವದಕ್ಕೆ ಬಂದೇವು. ಶ್ರೀಮುಖ ನಾಮ ಸಂವತ್ಸರದ ಕಾರ್ತಿಕ ಶುದ್ಧ ಬಿದಿಗೆ ಮಂಗಳವಾರ ಬಂದೀತು. ಇದು ಸತ್ಯ.

ನಾವು ಬರುವುದಕ್ಕೆ ಪಾದೋದಕ ಪ್ರಸಾದದ ಮಹಿಮೆ ವಿಶೇಷವಾದೀತು. ಪಾದತೀರ್ಥ ಪ್ರಸಾದದ ಮಹಿಮೆ ಒಬ್ಬ ಶರಣನಿಂದೆ ಘನ

ವಾದೀತು. ಮನೆ ಮನೆಗೆ ಅತಿ ವಿಶೇಷವಾದುದ್ದೀ ಕುರುಹು. ಕೂಡಲ ಚನ್ನಸಂಗಯ್ಯ ಎಂದು ಚನ್ನಬಸವೇಶ್ವರ ದೇವರು ನಿರೂಪಿಸಿದರು.

ಇನ್ನು ಕಲಿಯುಗದ ಪ್ರಮಾಣ ೪೩೨೦೦೦. ಮುಂದೆ ಕಲಿಯುಗದ ಶಕೆ ವಿಳಂಬಿನಾಮಸಂವತ್ಸರಕ್ಕೆ ಎಷ್ಟೆಂದರೆ ೪೭೫೧ ವರುಷವಾಯಿತ್ತು. ಮುಂದೆ ಉಳಿಯತ್ತೆಷ್ಟೆಂದರೆ ೪೨೭೭೮೧. ಮುಂದೆ ವಿಕ್ರಮ ಶಕೆಯ ಪ್ರಮಾಣು ೧೮೧೩೪. ಮುಂದೆ ವಿಕ್ರಮ ಶಕೆ ವಿಳಂಬಿ ನಾಮಸಂವತ್ಸರಕ್ಕೆಷ್ಟೆಂದರೆ ೧೭೧೫ ಆಯಿತ್ತು. ಮುಂದೆ ಉಳಿಯಿತ್ತು ಎಷ್ಟೆಂದರೆ ೧೬೪೨೦. ಮುಂದೆ ಶಾಲಿವಾಹನ ಶಕೆಯ ಪ್ರಮಾಣವು ೧೮೦೦೦. ಮುಂದೆ ವಿಳಂಬಿ ನಾಮ ಸಂವತ್ಸರಕ್ಕೆ ಶಾಲಿವಾಹನ ಶಕೆ ಎಷ್ಟು ಎಂದರೆ ೧೫೮೦ ವರುಷ ವಾಯಿತ್ತು. ಮುಂದೆ ಉಳಿಯಿತ್ತು ಎಷ್ಟೆಂದರೆ ೬೪೨೦. ಮುಂದೆ ವೀರ ವಸವಂತರಾಯ ಬಾಹ ಪ್ರಮಾಣವ ಪೇಳುವೆನು. ಬಸವಣ್ಣನು ಕಲ್ಯಾಣವ ಬಿಟ್ಟು ಹೋಗುವಾಗ ೮೨೧ ವರುಷವಾಯಿತ್ತು. ನಾವು ಬರುವುದಕ್ಕೆ ಏಳುನೂರೆಪ್ಪತ್ತು ಬಂದಿತ್ತು. ಅಂದಿಗೆ ಎಷ್ಟಾದಿತೆಂದರೆ ಎರಡು ಕೂಡಿದರೆ ೧೫೯೮ ಆಯಿತ್ತು. ಮುಂದೆ ವಿಳಂಬಿ ನಾಮ ಸಂವತ್ಸರಕ್ಕೆ ಶಾಲಿವಾಹನ ಶಕೆ ಎಷ್ಟೆಂದರೆ ೧೫೮೦. ಮುಂದೆ ವೀರವಸವಂತರಾಯ ಬಾಹ ಪ್ರಮಾಣ ೧೮ ವರುಷಕ್ಕೆ ಬಂದಾನು. ಮುಂದೆ ಆನಂದ ನಾಮ ಸಂವತ್ಸರಕೆ ವೀರವಸವಂತರಾಯಗೆ ಪಟ್ಟವಾದಿತ್ತು. ೧೬ ವರುಷಕ್ಕೆ ಎರಡು ವರುಷ ಮಿಕ್ಕಿತ್ತು. ಗಣಂಗಳೆಲ್ಲ ಬಂದಾರು. ಇಂತೀ ವರುಷ ೧೮ ಕ್ಕೆ ವಿಳಂಬಿನಾಮ ಸಂವತ್ಸರಕ್ಕೆ ಉಳಿದೀತು. ಮುಂದೆ ೧೮ ವರುಷ ತನಕ್ಕೆ ಏನೇನು ಎಂದರೆ ವಿಳಂಬಿನಾಮ ಸಂವತ್ಸರಕ್ಕೆ ಮೊದಲಾಗಿ ಹೇಳುವೆ. ೧ ವರುಷಕ್ಕೆ ವಿಜಯಪುರವರಣ್ಯವಾದೀತು. ೨ ವರುಷಕ್ಕೆ ಉತ್ತರ ದೇಶ ಹಾಳಾದೀತು. ವಿಳಂಬಿ ಸಂವತ್ಸರದ ೭ ವರುಷಕ್ಕೆ ಹದ್ದು ನಗರವಾದೀತು. ಚಪ್ಪನ್ನ ದೇಶಗಳು ತಮ ತಮಗೆ ಹಾಳಾದಾವು.

ಪ್ಲವಂಗ ನಾಮ ಸಂವತ್ಸರಕ್ಕೆ ವಿಜಯನಗರ ಪಟ್ಟಣವಾದೀತು. ೧೦ ವರುಷಕ್ಕೆ ತುರುಕರಿಗೆ ಕಡೆಗಾಲವಾದೀತು. ಮುಂದೆ ವರುಷ ೫ ಕ್ಕೆ ವಿಜಯನಗರ ಹಾಳಾದೀತು. ೧೫ ವರುಷಕ್ಕೆ ಪಾಪಿಗಳು ಲಯವಾದಾರು. ಪುಣ್ಯವಂತರುಳಿದಾರು ಕಾಣಾ ಕೂಡಲ ಚನ್ನಸಂಗಯ್ಯ ಎಂದು ಚನ್ನ ಬಸವೇಶ್ವರ ದೇವರು ನಿರೂಪಿಸಿದ ಕಾಲಜ್ಞಾನ ವಚನ ಸಮಾಪ್ತ.

# ಸರ್ವಜ್ಞಸ್ವಾಮಿಗಳು ನಿರೂಪಿಸಿದ ಕಾಲಜ್ಞಾನದ ವಚನ

ಕಲ್ಯಾಣವನು ಬಸವೇಶ್ವರ ದೇವರು ಬಿಟ್ಟುಹೋಗುವಾಗ ೮೨೧ ವರುಷ ಮುಂದೆ ಉಳಿದುದು. ೭೭೭ ವರುಷಕ್ಕೆ ವೀರವಸವಂತರಾಯ ಬಾಹ ಪ್ರಮಾಣವು. ಅಂದಿಂಗೆ ಶಾಲಿವಾಹನ ಶಕೆ ಸಂದಿತ್ತು ೧೫೫೮ಲ ನಡೆದೀತು ಪೂರ್ವ ಕಲಿಶಕೆ ೪೩೨೦೦೦ ಬಸವಣ್ಣ ಹೋಗುವಾಗ ಕಲಿ ಶಕೆ ಎಷ್ಟೆಂದರೆ ೪೦೦೦. ಮುಂದೆ ಚನ್ನಬಸವಣ್ಣ ಬರುವದಕ್ಕೆ ೭೭೭ ವರುಷ. ಚನ್ನಬಸವಣ್ಣ ಬರುವಾಗ ಸಂದಿತ್ತು ೪೭೭೭ ವರುಷ. ಮುಂದೆ ಉಳಿದ ಶಕೆ ೪೨೭೨೬೩ ವರುಷ ಮುಂದೆ ನಡೆದಾವು. ಹೋದ ಶಕೆ ೪೭೭೭ ವರುಷ ವಿಕ್ರಮನಾಮ ಸಂವತ್ಸರದಿಂದ ಅಧಿಕವಾಗಿ ಮುಂದೆ ಉಳಿದುದು ೧೦ ವರುಷ. ನಂದನಸಂವತ್ಸರ ಮೊದಲಾಗಿ ಸರ್ವ ಜನವು ಕಳೆಗುಂದಿತ್ತು. ದುರ್ಮುಖಿನಾಮ ಸಂವತ್ಸರದಲ್ಲಿ ನೃಪ ಸತ್ತಾನು. ಹೇಮವಿಳಂಬಿಯಲ್ಲಿ ಪೂರ್ವಕ್ಕೆ ಕದನ ಹುಟ್ಟೀತು. ವಿಜಯಪುರ ಹಾಳಾಗಿ ಅರಣ್ಯವಾದೀತು. ವಿಶ್ವಾವಸುನಾಮಸಂವತ್ಸರದಲ್ಲಿ ಆಮದಾನಗರವಳಿದೀತು. ಪ್ಲವಂಗನಾಮ ಸಂವತ್ಸರದಲ್ಲಿ ದೇಶವಳಿದೀತು, ದಕ್ಷಿಣದೇಶವಳಿದೀತು.

ಮೂರಾರನ್ಯಜೆಯೊದ್ದಾವ(?) ವರುಷ ಒಂದೇ ದಿನ ಹೆಚ್ಚು ಕುಂದು ಪ್ರಮಾಣ ಶಕೆ ವರುಷ ೬ ತಿಂಗಳು, ಇವ ಕಳೆದು ಕೂಡಿದ ಲೆಕ್ಕ ಆಯಿತು. ಶಕೆ ೪೭೬೭ ವರುಷ ಮಾಸ ಒಂಬತ್ತು ಉಳಿದ ಶಕೆ ೧೦ ವರುಷ ಕೂಡಿಸಿ ೪೭೭೭ ವರುಷ, ಅದರ ಮಾಸ ೩ ಕ್ಕೆ ವೀರಬಸವಂತ ಧರಣಿಗೆ ನಿಲುವುದಕ್ಕೆ ಕುರುಹು ತೋರುವ ಬಗೆ. ಅಂದಿಗೆ ದಕ್ಷಿಣ ಮನೆಯಾದಿತ್ತು. ಕಲ್ಯಾಣ ಮೊದಲಂತೆ ರಚಿಸೀತು. ಮುಂದಿನ ಸೂಚನೆ. ಅಂದಿಗೆ ಅಳಿದುಳಿದವರ ಪ್ರಮಾಣವಳಿದ ತಹ ಮಹಾಗಣಂಗಳು ಉದಯವಾದಾರು. ದಂಡನಾಥನ ಸುತ್ತ ಪಂಚಕ್ಲೇಶವಳಿದೀತು. ಬೆಳಗಾವಿಯಲ್ಲಿ ಮಧುವರಸಯ್ಯ ಉದಯವಾದಾನು. ಸುತ್ತ ಪಂಚಕ್ಲೇಶವಳಿದೀತು. ಮಿಕ್ಕಿನದು ಬಯಲು. ಬಂಕಾಪುರದಲ್ಲಿ ಹರಳಯ್ಯನವರು ಉದಯವಾದಾರು. ಸುತ್ತ ಪಂಚಕ್ಲೇಶವಳಿದೀತು. ಮಿಕ್ಕಿನದು ಬಯಲು. ಕಾವೇರಿ ದೇಶದೊಳಗೆ ಎಣ್ಣೆ ಕಾವೇರಿ ಎಂಬ ಗ್ರಾಮದಲ್ಲಿ ವೀರವಸವಂತರಾಯ ಉದಯವಾದಾನು. ಸುತ್ತ ಪಂಚಯೋಜನ ಉಳಿದಿತ್ತು. ಮಿಕ್ಕಿನದು ಬಯಲು. ತಿಗಳಾಣ್ಯ

ದೇಶಕ್ಕೆ ಸೆರೆಸೂರೆಯಾದೀತು. ತಿರುಮಲೆಯ ಮೇಲೆ ಯೋಜನವಳಿ
ದೀತು. ಆನೇಗುಂದಿಯುಳಿದೀತು. ವಿಜಯಪುರ ಸುತ್ತ ೧೩ ಗಾವುದವಳಿ
ದೀತು. ತೆಲುಗಾಣ್ಯ ೨೫ ಗಾವುದವಳಿದೀತು. ತೆಲುವತ್ತಾರದೇಶ ೧೫
ಗಾವುದವಳಿದೀತು. ಅಲ್ಲಿಗಲ್ಲಿಗೆ ಅಳಿದೀತು. ಕಡೆಕಡೆಯಾಗಿ ದೇಶವಳಿ
ದೀತು. ಬಿದಿರಿಕೋಟೆಯಲ್ಲಿ ಹದಿನೆಂಟು ನೆಜೆಯುದ್ಭಾವ (?) ಚಪ್ಪನ್ನದೇಶ
ಗಳು ತಮತಮಗೆ ಕೆಟ್ಟಾವು. ಸಾವಿರಕೊಂದು ಉಳಿದೀತು. ಲಕ್ಷಕ್ಕೊಂದು
ಉಳಿದೀತು. ರೇವಣಸಿದ್ಧೇಶ್ವರನು ಮರುಳ ತಾಂಡವರ ಬಿಟ್ಟಾನು.
ಪಾಪ ಲಯವಾದೀತು. ಮುಂದಿನ್ನು ನಿರೂಪವಾದೀತು. ಅಸುರರಳಿದಾರು.
ವಾಲಿಯ ಭಂಡಾರ ತೆಗೆದಾರು. ಅಲ್ಲಿಗೆ ಒಬ್ಬ ಜೇಡ ಬಂದಾನು. ಆ
ಮೇಲೆ ವೀರವಸವಂತರಾಯ ಬಂದಾನು. ಈ ಮಾತು ಸತ್ಯ. ನಿಮ್ಮಾಣೆ
ನಿಮ್ಮ ಪ್ರಮಥರಾಣೆಯಯ್ಯ. ಸರ್ವಜ್ಞಸ್ವಾಮಿಗಳು ನಿರೂಪಿಸಿದ ಕಾಲ
ಜ್ಞಾನದ ವಚನ ಸಮಾಪ್ತ.



# ಘಟ್ಟಿವಾಳಯ್ಯನವರ ಕಾಲಜ್ಞಾನದ ವಚನಗಳು.

ಅಲ್ಲಮನಾಟವು ನಿಲ್ಲದೆ ಬಂದೀತು ಕೇಳಿರೆ ನೀವು ಕೇಳಿರೆ. ಕಲ್ಯಾಣಪುರವೆಲ್ಲ ಹಾಳಾಗಿ ಹೋದೀತು ಕೇಳಿರೆ ನೀವು ಕೇಳಿರೆ. ಕೊಲ್ಲದ ಕೊಲೆಗಳ ಕೊಂದಾರು ತುರುಕರು ಕೇಳಿರೆ ನೀವು ಕೇಳಿರೆ. ಅಲ್ಲಿಯದುಲಶಹ ಮೊದಲು ತಾ ನೋಡಿನ್ನು ಕೇಳಿರೆ ನೀವು ಕೇಳಿರೆ. ಅಲ್ಲಿಗೆ ಐನೂರು ಎಂಬತ್ತು ವರುಷ ಕೇಳಿರೆ ನೀವು ಕೇಳಿರೆ. ಕಲ್ಯಾಣ ಹಾಳಾದಂದಿಗೆ ನೋಡಿನ್ನು ಕೇಳಿರಿ ನೀವು ಕೇಳಿರೆ. ಅಲ್ಲಿಗೈನೂರುತೊಂಬತ್ತೊರುಷವು ಕೇಳಿರೆ ನೀವು ಕೇಳಿರೆ. ಸಲ್ಲಿತು ಆನಂದಸಂವತ್ಸರಕೆಲ್ಲ ಕೇಳಿರೆ ನೀವು ಕೇಳಿರೆ. ಐನೂರತೊಂಬತ್ತು ವರುಷವು ಆಗಲಿಕ್ಕೆ ಕೇಳಿರೆ ನೀವು ಕೇಳಿರೆ. ಮೀರಿ ನಡೆದಂತಹ ನಡತೆಗಳೆಲ್ಲವ ಕೇಳಿರೆ ನೀವು ಕೇಳಿರೆ. ಸಾರಿ ಹೇಳುವೆನು ಸಟೆಯಲ್ಲ ಶಿವನಾಣೆ ಕೇಳಿರೆ ನೀವು ಕೇಳಿರೆ. ಮಾರಿಯು ಬಂದೀತು ಮರ್ತ್ಯಲೋಕಕ್ಕೆಲ್ಲ ಕೇಳಿರೆ ನೀವು ಕೇಳಿರೆ.

ಸಾಳುವನರಸಿಂಗರಾಯನ ಮಗನೊಬ್ಬ ಕೇಳಿರೆ ನೀವು ಕೇಳಿರೆ. ಬಾಳದೆ ಲಯವಾದ ಕಾರಣವೆಲ್ಲವ ಕೇಳಿರೆ ನೀವು ಕೇಳಿರೆ. ಅಳಿಯಪಟ್ಟವನು ಕಟ್ಟ್ಯಾರು ಅವನಿಗೆ ಕೇಳಿರೆ ನೀವು ಕೇಳಿರೆ. ಪಾಳೆಯಗಾರರು ಹೆಚ್ಚಿ ಚಿಪ್ಪಗಿರಿ ರಾಮಗೆ ಕೇಳಿರೆ ನೀವು ಕೇಳಿರೆ. ತುಂಡ ಬೇಡರ ದಂಡು ಕೂಡಿನ್ನು ಬಂದೀತು ಕೇಳಿರೆ ನೀವು ಕೇಳಿರೆ. ಮಂಡಲಪತಿ ಭೀಮರಥಿಗಾಗಿ ಬಂದಾರು ಕೇಳಿರೆ ನೀವು ಕೇಳಿರೆ. ಪಾಂಡುರಂಗನ ಕಿತ್ತುಕೊಂಡಿನ್ನು ಬಂದಾರು ಕೇಳಿರೆ ನೀವು ಕೇಳಿರೆ. ಬಂಡುಮಾಡುತ ಲೋಕವನೆಲ್ಲ ಕೊಂದಾರು ನೀವಿಂದು ಕೇಳಿರೆ ನೀವು ಕೇಳಿರೆ. ಕಾಶಿಯವರು ಸಾಸಿರದೈನೂರಕ್ಕೆ ಕೇಳಿರೆ ನೀವು ಕೇಳಿರೆ. ದೇಶದ ಪ್ರಜೆಗಳ ಬಾಧಿಸುತಿರ್ದ್ದಾರು ಕೇಳಿರೆ ನೀವು ಕೇಳಿರೆ. ಲೇಸಾಗಿ ದೇಗುಲ ಕಟ್ಟುತ ಇರಲಾಗಿ ಕೇಳಿರೆ ನೀವು ಕೇಳಿರೆ. ರೋಷವು ಬಂದೀತು ಅಲ್ಲಿಯದುಲಶಹಗೆ ಕೇಳಿರೆ ನೀವು ಕೇಳಿರೆ. ರಾಮರಾಜನ ತಲೆ ರಕ್ಕಸಿಹೊಳೆಯಲ್ಲಿ ಕೇಳಿರೆ ನೀವು ಕೇಳಿರೆ. ಸಮರಾಂಗಣದಲಿ ಕೊಯಿಕೊಂಡು ಒಯ್ದಾರು ಕೇಳಿರೆ ನೀವು ಕೇಳಿರೆ. ಪ್ರಮಾದಿ ಕಾಶಿಯತೀರಕ್ಕೆ ಒಯ್ದಾರು ಕೇಳಿರೆ ನೀವು ಕೇಳಿರೆ.

ಸೀಮೆಯು ಹಾಳಾಗಿ ಬೇಡರು ಹೆಚ್ಯಾರು ಕೇಳಿರೆ ನೀವು ಕೇಳಿರೆ. ವಿದ್ಯಾನಗರವೆಲ್ಲ ಹಾಳಾಗಿ ಹೋದೀತು ಕೇಳಿರೆ ನೀವು ಕೇಳಿರೆ. ಬುದ್ಧಿ ವಂತರು ಇಲ್ಲವಾ ಮಹಾನಗರಕ್ಕೆ ಕೇಳಿರೆ ನೀವು ಕೇಳಿರೆ. ಸದ್ಯದಿ ಬೇಡರು ತಮತಮಗೆ ರಾಜ್ಯವ ಕೇಳಿರೆ ನೀವು ಕೇಳಿರೆ. ಬದ್ಧವಾಗಿಯೆ ಆಳುತಲಿದ್ದಾರು ಕೇಳಿರೆ ನೀವು ಕೇಳಿರೆ. ಪರ್ವತ ತಿರುಮಲೆ ಶಿವಗಂಗೆ ಯನೆಲ್ಲ ಕೇಳಿರೆ ನೀವು ಕೇಳಿರೆ. ನರಗುಂದ ವಾಗನಗೇರಿಯನೆಲ್ಲವ ಕೇಳಿರೆ ನೀವು ಕೇಳಿರೆ. ಉರುವಣಿಸಿ ಬೆಳಗಲು ಯರವಮಾಲೆಯ ಗಂಟಿ ಕೇಳಿರೆ ನೀವು ಕೇಳಿರೆ.

ಧುರಧೀರ ಬೇಡರು ಆಳ್ಯಾರು ರಾಜ್ಯವ ಕೇಳಿರೆ ನೀವು ಕೇಳಿರೆ. ಒಂದು ಬಿಸಿಗೆ ಹತ್ತು ವರುಷವು ಬೇಡರು ಕೇಳಿರೆ ನೀವು ಕೇಳಿರೆ. ಚಂದದಿ ಎಪ್ಪತ್ತೇಳು ಬಂದಿತಿನ್ನು ಕೇಳಿರೆ ನೀವು ಕೇಳಿರೆ. ಬಂದೀತು ದಾಳಿಯು ಅವರಿಗೆ ನೀವೆಲ್ಲ ಕೇಳಿರೆ ನೀವು ಕೇಳಿರೆ ಬಂಡಾನು ಶಿವ ಬೇಂಟೆಯ ನಾಡುತ ಮೊದಲಿನ್ನು ಕೇಳಿರೆ ನೀವು ಕೇಳಿರೆ.

ಅಲ್ಲಿಯದುಲಶಹ ಅಬುದುಲ್ಲಬಾಬನು ಕೇಳಿರೆ ನೀವು ಕೇಳಿರೆ. ಮಲ್ಲಜಿ ಬೆಟ್ಟದ ಬೇಡರ ಕೊಲ್ಲುತ ನೀವಿನ್ನು ಕೇಳಿರೆ ನೀವು ಕೇಳಿರೆ. ಕಲ್ಲ ಹಾಸಿಗೆ ಹೋಗಿ ಪರ್ವತದಲಿನ್ನು ಕೇಳಿರೆ ನೀವು ಕೇಳಿರೆ. ಅಲ್ಲೊಬ್ಬ ಬೇಡನ ಕಡಿಸುತಲಾರಿನ್ನು ಕೇಳಿರೆ ನೀವು ಕೇಳಿರೆ. ಮೀನ ಗುಂದಿಯ ಬೇಡರ ಹಿಡಿತಂದಿನ್ನು ಕೇಳಿರೆ ನೀವು ಕೇಳಿರೆ. ಆನೆಯ ಕಾಲಿಗೆ ಕಟ್ಟಿನ್ನು ಎಳಸ್ಯಾರು ಕೇಳಿರೆ ನೀವು ಕೇಳಿರೆ. ಗೊನಕೊಂಡಿ ಯಕ್ಕಡಿಗನ ಹಿಡಿತಂದು ಕೇಳಿರೆ ನೀವು ಕೇಳಿರೆ. ಮಾನಭಂಗವಮಾಡಿ ಕೆಡಸ್ಯಾರು ಅವರಿನ್ನು ಕೇಳಿರೆ ನೀವು ಕೇಳಿರೆ. ಕೂಸಿಗೆ ಬೇಡರು ಮೋಸವ ಮಾಡಿಯಾರು ಕೇಳಿರೆ ನೀವು ಕೇಳಿರೆ. ರೋಷದಿ ತಲೆಗಳ ಕೊಯಿದಾರು ಅವರನು ಕೇಳಿರೆ ನೀವು ಕೇಳಿರೆ. ಲೇಸಾಗಿ ಮುರುವಣಿ ಬೇಡರ ಹಿಡಿ ತಂದು ಕೇಳಿರೆ ನೀವು ಕೇಳಿರೆ. ಹಾಸುಗಲ್ಲಿಗೆ ದಬ್ಬಿ ಎಳೆದಾರು ಅಲ್ಲಿಂದ ಕೇಳಿರೆ ನೀವು ಕೇಳಿರೆ. ಕೋಟನಕೊಂಡಿಯ ಪಾಪನಾಯಕರಲ್ಲಿ ಕೇಳಿರೆ ನೀವು ಕೇಳಿರೆ. ಕೋಟಿಗೊಂಡಿಯ ದೇವನ ಕೋಡೆಯ ಪತ್ತಿಯು ಕೇಳಿರೆ ನೀವು ಕೇಳಿರೆ ಕೊಟ್ಟೆ ಪಾಪಲಿಯುಪಲ್ಲೆ ಪತ್ತಿಕೊಂಡಿಯು ಉರುವ ಕೇಳಿರೆ ನೀವು ಕೇಳಿರೆ. ಉಟ್ಟರಿವೆಯ ಕಸಕೊಂಡು ಬಾಗಿಲ ಕಾಸೇರು ಕೇಳಿರೆ ನೀವು ಕೇಳಿರೆ. ದಾಮಲತು ಬಾಕಪಲ್ಲಿಯವರ ಪಾಕ ಕೇಳಿರೆ ನೀವು ಕೇಳಿರೆ.

ಮಹಾ ಬೆಟ್ಟಪಾಳೆಯವು ಯಮುಪಲ್ಲಿಗಂಡಿಯು ಕೇಳಿರೆ ನೀವು ಕೇಳಿರೆ. ಕೋಮಲ ಅಮ್ಮನ ನಾಮವನೆಲ್ಲವ ಕೇಳಿರೆ ನೀವು ಕೇಳಿರೆ. ಅಲ್ಲಿಗೆ ಆ ಮಹಾ ಬೇಡರ ಪಡೆ ಎಲ್ಲ ಅಡಗಿತು ಕೇಳಿರೆ ನೀವು ಕೇಳಿರೆ. ಕುಡು ತಿನಿ ಕುರುಗೋಡು ಗುಡಿಯಕೋಟೆ ಸಹ ಕೇಳಿರೆ ನೀವು ಕೇಳಿರೆ ನಿಡು ಗಲ್ಲು ಮಿಡಿಗೆ ಸಿಕುಂದ್ರಿಸೆಯುವನೆಲ್ಲ ಕೇಳಿರೆ ನೀವು ಕೇಳಿರೆ. ನಡುವೆ ಶ್ರೀರಂಗವು ಚಿತ್ರಕಲ್ಲು ಇತ್ತ ಕೇಳಿರೆ ನೀವು ಕೇಳಿರೆ. ದೃಢವೃಕ್ಷ ಹರ್ಪನಹಳ್ಳಿಯು ಇತ್ತ ಕೇಳದೆ ನೀವು ಕೇಳಿರೆ. ಇಂತಹ ಪಾಳೆಯುವ ನಿಸ್ಸಂತಾನ ಮಾಡ್ಯಾರು ಕೇಳಿರೆ ನೀವು ಕೇಳಿರೆ. ನಿಂತಾರು ಅರುವತ್ತು ವರುಷವು ನೀವೆಲ್ಲ ಕೇಳಿರೆ ನೀವು ಕೇಳಿರೆ. ಎಂತೆಂತಹ ಸಂಸಾರ ಬದ ನಾಮಿ ಮಾಡಿಸ್ಯಾರು ಕೇಳಿರೆ ನೀವು ಕೇಳಿರೆ. ಚಿಂತೆಗಾಳಾದಾರು ತುರು ಕರ ದೆಸೆಯಿಂದೆ ಕೇಳಿರೆ ನೀವು ಕೇಳಿರೆ. ದೇಗುಲವನಳಿದಾರು ದೇವರ ನೊಡೆದಾರು ಕೇಳಿರೆ ನೀವು ಕೇಳಿರೆ. ಬಾಗಿಲಗಳ ಮುಚ್ಚಳಿಕ್ಯಾರು ದೇವರ ಕೇಳಿರೆ ನೀವು ಕೇಳಿರೆ. ಬೇಗ ಸಂಗಿತರು ಮನೆ ಮನೆ ತಿರಿದಾರು ಕೇಳಿರೆ ನೀವು ಕೇಳಿರೆ. ಹೇಗೆ ವಾಕ್ಯಗಳ ನುಡಿದಾರು ಅವರಿನ್ನು ಕೇಳಿರೆ ನೀವು ಕೇಳಿರೆ. ನುಂಗ್ಯಾರು ಭಾಷೆಯ ರಂಬಿಸಿ ಸೇರಿದ ಕೇಳಿರೆ ನೀವು ಕೇಳಿರೆ. ರಂಗನ ತಲೆಯನು ಕೊಯ್ದಾರು ಅಲ್ಲಿನ್ನು ಕೇಳಿರೆ ನೀವು ಕೇಳಿರೆ. ಭೃಂಗ ಕುಂತಳ ದೇಶ ಮಂಗಲವಾದೀತು ಕೇಳಿರೆ ನೀವು ಕೇಳಿರೆ ಸಂಗ ನಬಸವಣ್ಣ ಬೆಂಗಳೂರಿನಲ್ಲಿ ಕೇಳಿರೆ ನೀವು ಕೇಳಿರೆ. ಬಳ್ಳಾಪುರದಲ್ಲಿ ಜಂಗಮಾರ್ಚನೆ ಕೆಟ್ಟು ಕೇಳಿರೆ ನೀವು ಕೇಳಿರೆ. ನಿಲ್ಲದೆ ಮೈಸೂರ ಸೆರೆ ಸೂರೆ ಹಿಡಿದಾರು ಕೇಳಿರೆ ನೀವು ಕೇಳಿರೆ. ಚೆಲ್ವ ವ್ಯಯ ನಾಮ ಸಂವತ್ಸ ರದೊಳಗಿನ್ನು ಕೇಳಿರೆ ನೀವು ಕೇಳಿರೆ. ಅಲ್ಲಿ ಮೊರಸರ ರಾಜ್ಯಕ್ಕೆ ಬರ ಸಿಡಿಲೆರಗ್ಯಾರು ಕೇಳಿರೆ ನೀವು ಕೇಳಿರೆ. ಅಲ್ಲಿ ಬಿಸಿ ತಾಗಿ ಲೋಕವು ಉರಿ ದೀತು ಕೇಳಿರೆ ನೀವು ಕೇಳಿರೆ. ಕಂಚಿಯ ಪುರವ ಮ್ಲೇಂಛರು ಒಳ ಹೊಕ್ಕು ಕೇಳಿರೆ ನೀವು ಕೇಳಿರೆ. ಅಂಚೆಗಮನೆಯರ ಕೆಡಿಸ್ಯಾರು ಅಲ್ಲಿನ್ನು ಕೇಳಿರೆ ನೀವು ಕೇಳಿರೆ. ಪಂಚಲಿಂಗಗಳ ಪೂಜೆಗಳಳಿದಾರು ಕೇಳಿರೆ ನೀವು ಕೇಳಿರೆ. ಶಿವಲಾಂಛನಗಳನೆಲ್ಲ ಬದನಾಮಿ ಮಾಡ್ಯಾರು ಕೇಳಿರೆ ನೀವು ಕೇಳಿರೆ. ರಾಚೋಟಿ ದೇವರ ಇಡುಗುಡಿಯ ಇಕ್ಯಾರು ಕೇಳಿರೆ ನೀವು ಕೇಳಿರೆ. ಚಚ್ಚ್ಯಾರು ತಿರುಮಲನ ಭಾಗ್ಯವನೆಲ್ಲವ ಕೇಳಿರೆ ನೀವು ಕೇಳಿರೆ. ನಾಚಿಕೆಗಳೆದಾರು ನೆಲ್ಲೂರ ಸೀಮೆಯ ಕೇಳಿರೆ ನೀವು ಕೇಳಿರೆ. ಆದನಾ ಚಲಿ ಬೆಲ್ಲಮಕೊಂಡೆಯನೆಲ್ಲವ ಕೇಳಿರೆ ನೀವು ಕೇಳಿರೆ. ಬಂಡೆದ್ದು

ಹೋದೀತು ಪಡುವಲ ದೇಶ ಕೇಳಿರಿ ನೀವು ಕೇಳಿರಿ. ಹೆಂಡಗಾರರಿಗಂಜಿ ಸಕಲ ಲೋಕವೆಲ್ಲ ಕೇಳಿರಿ ನೀವು ಕೇಳಿರಿ. ಹಂಡ ಡರಿಕೆಯಾ ತಿರಿದಾರು ಗಡಗಿನ ದೊರೆಗಳು ಕೇಳಿರಿ ನೀವುಕೇಳಿರಿ. ಮಂಡಲ ಮದಗದ ಕೆರೆ ತನಕ ಇನ್ನು ಕೇಳಿರಿ ನೀವು ಕೇಳಿರಿ. ಕುಕ್ಕನೂರ ಗುದ್ದಬೇಕು ನಾಯು ಸಾಕು ಕೇಳಿರಿ ನೀವು ಕೇಳಿರಿ. ಬೊಕ್ಕರ ಕುಲವನು ಜರಿದು ನಿಂದಿಸ್ಯಾರು ಕೇಳಿರಿ ನೀವು ಕೇಳಿರಿ. ದಿಕ್ಕುದಿಕ್ಕುಗಳ ತಿರುಗುತ ಸತ್ತಾರು ಕೇಳಿರಿ ನೀವು ಕೇಳಿರಿ. ಪುಕ್ಕಟಿ ಲಂಪಟಕೊಳಗಾಗಿ ಹೋದರು ಕೇಳಿರಿ ನೀವು ಕೇಳಿರಿ.

ರಾಯದುರ್ಗದಲೊಬ್ಬ ಮಾಯದ ಜಂಗಮ ಕೇಳಿರಿ ನೀವು ಕೇಳಿರಿ. ಸಾಯುಸವಾರುಡವೆನಿಸ್ಯಾನು ಅಲ್ಲಿನ್ನು ಕೇಳಿರಿ ನೀವು ಕೇಳಿರಿ. ಕಾಯು ಸಿದ್ಧಿಗವ ಹೆಣಗಾಡಿ ಸತ್ತಾನು ಕೇಳಿರಿ ನೀವು ಕೇಳಿರಿ. ಮಾಯುದ ಸಿದ್ಧರ ಕೈಯ್ಯಾಲ್ಲಿ ಹೋದನು ಕೇಳಿರಿ ನೀವು ಕೇಳಿರಿ.

ಗುತ್ತಿ ಸೀಮೆಯುಲೊಬ್ಬ ವಿರಕ್ತ ಜಂಗಮ ಕೇಳಿರಿ ನೀವು ಕೇಳಿರಿ. ಬತ್ತಲೆ ತಿರುಗಾಡ್ಯಾನು ಆಜಾತನೆನಿಸ್ಯಾನು ಕೇಳಿರಿ ನೀವು ಕೇಳಿರಿ. ಮುಕ್ತಿಸಾಧನ ಸಿಕ್ಕದೆ ಧರೆಯೊಳು ಕೇಳಿರಿ ನೀವು ಕೇಳಿರಿ. ಸತ್ತು ಹೂಳಿಸಿಕೊಂಡು ಹೋದನು ಧರೆಯೊಳು ಕೇಳಿರಿ ನೀವು ಕೇಳಿರಿ.

ಕೊಂಡಗುಂದಿಯುಲೊಬ್ಬ ಪಾಲನೆಂಬುವ ಕೇಳಿರಿ ನೀವು ಕೇಳಿರಿ. ಬಂಡು ಮಾಡ್ಯಾನು ಲೊಕವನೆಲ್ಲವ ಕೇಳಿರಿ ನೀವು ಕೇಳಿರಿ. ಉಂಡಾನು ಹದಿನೆಂಟು ಕುಲವ ನಿಂದಿಸ್ಯಾನೆಂದು ಕೇಳಿರಿ ನೀವು ಕೇಳಿರಿ. ಅವ ಪುಂಡಗಾರನಾಗಿ ಕೆಟ್ಟಿನು ಧರೆಯೊಳು ಕೇಳಿರಿ ನೀವು ಕೇಳಿರಿ.

ಕಾಡಸಿದ್ಧನೊಬ್ಬ ಮೀನಗುಂದಿಯುಲ್ಲಿ ಕೇಳಿರಿ ನೀವು ಕೇಳಿರಿ. ಆಡ್ಯಾನು ಸೂಚನೆ ಕಯ್ಯಿಂದಲಿ ಮತ್ತೆ ಕೇಳಿರಿ ನೀವು ಮತ್ತೆ ಕೇಳಿರಿ. ಕೋಡಗನಂದದಿ ಮುನ್ನೂರು ವರುಷವು ಕೇಳಿರಿ ನೀವು ಕೇಳಿರಿ. ಬೇಡರ ಗುಡ್ಡದ ಒಳಗಿನ್ನು ಮತ್ತಲ್ಲಿ ಕೇಳಿರಿ ನೀವು ಕೇಳಿರಿ.

ರಾಯದುರ್ಗದಲ್ಲಿ ಪಂಚಾಳದವನೊಬ್ಬ ಕೇಳಿರಿ ನೀವು ಕೇಳಿರಿ. ಪ್ರೇಮದಿ ಪರನಾರೀ ಸೋದರ ನೆನಿಸ್ಯಾನು ಕೇಳಿರಿ ನೀವು ಕೇಳಿರಿ. ಕಾಮ ವೆಗ್ಗಳವಾಗಿ ಕೆಲವರ ಕೆಡಿಸ್ಯಾನು ಕೇಳಿರಿ ನೀವು ಕೇಳಿರಿ. ನೇಮವ ತಪ್ಪೆನ್ನುತ ಓಡಿ ಹೋದನು ಕೇಳಿರಿ ನೀವು ಕೇಳಿರಿ.

ಮುಪ್ಪುರ ಗೊಲ್ಲನು ಶಕ್ತಿ ಪೂಜೆಯ ಮಾಡಿ ಕೇಳಿರಿ ನೀವು ಕೇಳಿರಿ. ಅಷ್ಟ ದಿಕ್ಕಿನ ಜನರುಗಳೆಲ್ಲ ಬಂದಿನ್ನು ಕೇಳಿರಿ ನೀವು ಕೇಳಿರಿ. ಭ್ರಷ್ಟನಾಗಿ ಹೋದನು ಮೂರು ಬಾರಿ ತಿರುಗಿ ಕೇಳಿರಿ ನೀವು ಕೇಳಿರಿ. ಕೆಟ್ಟೀತು ಸಿದ್ಧಾಂತ. ಕೆಟ್ಟು ತಾ ಹೋದನು ಕೇಳಿರಿ ನೀವು ಕೇಳಿರಿ.

ಮಾಮಯ್ಯನೆಂಬ ಒಕ್ಕಲ ಮಗನೊಬ್ಬ ಕೇಳಿರಿ ನೀವು ಕೇಳಿರಿ. ಸೋಮಧರನ ನಿಜಭಕ್ತನೆಂದೆನಿಸ್ಯಾನು ಕೇಳಿರಿ ನೀವು ಕೇಳಿರಿ. ಕಾಮಿತಾರ್ಥಂಗಳ ಪಡೆದಾನು ಮರ್ತ್ಯದಿ ಕೇಳಿರಿ ನೀವು ಕೇಳಿರಿ. ವಿಶ್ವಾಭಿರಾಮನೆಂದೆನಿಸ್ಯಾನು ಧರೆಯೊಳು ಕೇಳಿರಿ ನೀವು ಕೇಳಿರಿ.

ರಾಘವಗಿರಿಯಲ್ಲಿ ಲಚುಮ ಭಕ್ತನೊಬ್ಬ ಕೇಳಿರಿ ನೀವು ಕೇಳಿರಿ. ಅವ ಆಗಮಸ್ತುತಿಗಳ ಹೇಳ್ಯಾನು ಅವನಿಗೆ ಕೇಳಿರಿ ನೀವು ಕೇಳಿರಿ. ಯೋಗಮಾರ್ಗವ ಹಿಡಿದು ಏಕಾರ್ಥವಾದಾನು ಕೇಳಿರಿ ನೀವು ಕೇಳಿರಿ.

ಆಗ ಮತ್ತೊಬ್ಬ ಶರಣನು ಅಲ್ಲಿನ್ನು ಕೇಳಿರಿ ನೀವು ಕೇಳಿರಿ. ಕರಸ್ಥಲದ ನಾಗಯ್ಯ ಗುರುಸ್ಥಲವನರಿದಾನು ಕೇಳಿರಿ ನೀವು ಕೇಳಿರಿ. ಬೆರೆದಾನು ಪ್ರಭುದೇವರೊಡನಲ್ಲಿ ಕೇಳಿರಿ ನೀವು ಕೇಳಿರಿ.

ಕರೆದಾನು ಎನ್ಮಯ ಬಸವಣ್ಣನೆಂಬ ಕೇಳಿರಿ ನೀವು ಕೇಳಿರಿ. ಅವನೊರೆದಾನು ಕಾಲಜ್ಞಾನವ ಧರೆಯೊಳು ಕೇಳಿರಿ ನೀವು ಕೇಳಿರಿ.

ಉತ್ತರ ದೇಶದಿ ಮತ್ತೊಬ್ಬ ಶರಣನು ಕೇಳಿರಿ ನೀವು ಕೇಳಿರಿ. ವಿರಕ್ತಿಸ್ಥಲವನು ಕೈಕೊಂಡು ಮೆರೆದಾನು ಕೇಳಿರಿ ನೀವು ಕೇಳಿರಿ. ಭಕ್ತಿಲಿ ಪೊವಾಡ ಖಂಟು ಮಾಡ್ಯಾನು ಕೇಳಿರಿ ನೀವು ಕೇಳಿರಿ. ಮರ್ತ್ಯಕ್ಕೆ ಇಂತಿದು ಸಟೆಯಲ್ಲ ಜನಗಳು ಕೇಳಿರಿ ನೀವು ಕೇಳಿರಿ.

ಮುಂದಣ ಮಾತನು ಚಂದದಿ ಹೇಳುವೆ ಕೇಳಿರಿ ನೀವು ಕೇಳಿರಿ. ಬಂದೀತು ತುರುಕರಿಗೆ ಮೋಸದ ದಾಳಿನ್ನು ಕೇಳಿರಿ ನೀವು ಕೇಳಿರಿ. ನಂದನ ಹನ್ನೆರಡಲ್ಲಿಗೆ ಸಂದವು ಕೇಳಿರಿ ನೀವು ಕೇಳಿರಿ. ಅಂದು ವಿಜಯಪುರಕ್ಕೆ ಒಂದೊಂದು ಹೇಳುವೆ ಕೇಳಿರಿ ನೀವು ಕೇಳಿರಿ. ಫೌಜದಾರನು ಚೋಪುದಾರರಿನ್ನು ಕೇಳಿರಿ ನೀವು ಕೇಳಿರಿ. ಅವು ಮೀನ ಕುರುಡಿಖಾನಗೆ ಎನುತಲಿ ಕೇಳಿರಿ ನೀವು ಕೇಳಿರಿ. ದೌಲತ ತಾವೆಲ್ಲ ಹಾಳು ಮಾಡುತಿನ್ನು ಕೇಳಿರಿ ನೀವು ಕೇಳಿರಿ. ಅವನಿಯ ಹದಿನೈದು ವರುಷವು ಮತ್ತಿನ್ನು ಕೇಳಿರಿ ನೀವು ಕೇಳಿರಿ.

ಸಗರ ಶಹಪುರದಲ್ಲಿ ಜಗಳಗಳಾದುವು ಕೇಳಿರೆ ನೀವು ಕೇಳಿರೆ. ಅಗಣಿತ ಧೊರೆಗಳು ಮಾಡಿದಾರಲ್ಲಿನ್ನು ಕೇಳಿರೆ ನೀವು ಕೇಳಿರೆ. ಬಗೆ ಬಗೆ ಜಗದರಂಗ ದುಗರಂಗವಾದೀತು ಕೇಳಿರೆ ನೀವು ಕೇಳಿರೆ. ಅಗುರಂಗನೆಂಬ ವನ ದೆಸೆಯಿಂದೆ ಧರೆಯೊಳು ಕೇಳಿರೆ ನೀವು ಕೇಳಿರೆ. ವಾಗನಗೇರಿಗೆ ಕುರುಮನ ದಂಡು ಕೇಳಿರೆ ನೀವು ಕೇಳಿರೆ.

ರೋಗ ಬಾಧೆಗಳು ಹೆಚ್ಚಾದಾವು ಅವರಿಗೆ ಕೇಳಿರೆ ನೀವು ಕೇಳಿರೆ. ಭಾಗೀರಥೀ ಎಂಬ ದುರ್ಗಿ ಬಂದಾಳು ಕೇಳಿರೆ ನೀವು ಕೇಳಿರೆ. ಜಗವ ಬಿಡಿಸಿಹಳು ಕುರುಮರರೆಲ್ಲ ಕೇಳಿರೆ ನೀವು ಕೇಳಿರೆ. ತಿರುಮಲೆ ಮುಂಗಡೆ ಹರಿದಾಳು ನಿತ್ಯರು ಕೇಳಿರೆ ನೀವು ಕೇಳಿರೆ. ಅರುವತ್ತುಸಾವಿರ ಕುದುರೆಯ ಮಾತಿನ್ನು ಕೇಳಿರೆ ನೀವು ಕೇಳಿರೆ. ಬರಗಾಲವಾದೀತು ಹದಿನೈದು ವರುಷವು ಕೇಳಿರೆ ನೀವು ಕೇಳಿರೆ. ಧೊರೆ ಧೊರೆಗಳಲಿ ಕೂಲಿಗಳ ಮಾಡ್ಯಾರು ಕೇಳಿರೆ ನೀವು ಕೇಳಿರೆ.

ಬಂದಾಳು ದುರ್ಗಿಯು ವಿಜಯಪುರಕಿನ್ನು ಕೇಳಿರೆ ನೀವು ಕೇಳಿರೆ. ಕೊಂದಾಳು ಸುತ್ತಣ ಪ್ರಜೆಗಳನೆಲ್ಲರ ಕೇಳಿರೆ ನೀವು ಕೇಳಿರೆ. ಅಂದಣ ಪಲ್ಲಕ್ಕಿ ಮೂಲೆಗೆ ಬಿದ್ದಾವು ಕೇಳಿರೆ ನೀವು ಕೇಳಿರೆ. ಅಂದಿಗೆ ಸಂದು ಹೋದೀತು ಲೋಕವು ಕೇಳಿರೆ ನೀವು ಕೇಳಿರೆ. ಸುತ್ತಲೆ ಮೂವತ್ತು ಗಾವುದ ಸೀಮೆಯು ಕೇಳಿರೆ ನೀವು ಕೇಳಿರೆ. ಕತ್ತಲೆ ಮಾಡಿನ್ನು ಮುತ್ತಿಗೆ ಹಾಕ್ಯಾಳು ಕೇಳಿರೆ ನೀವು ಕೇಳಿರೆ. ಮುಕ್ಕು ಮುರಿಯ ಮಾಡಿ ಕೊಂದಾಳು ಲೋಕವ ಕೇಳಿರೆ ನೀವು ಕೇಳಿರೆ. ಮಕ್ಕಳು ಸಹಿತಾಗಿ ಒಕ್ಕಾಲು ಹೋದಾರು ಕೇಳಿರೆ ನೀವು ಕೇಳಿರೆ. ಹಾಳಾಗಿ ಹೋದೀತು ವಿಜಯಪುರ ಸೀಮೆ ಕೇಳಿರೆ ನೀವು ಕೇಳಿರೆ. ಬಾಳುವ ಬದುಕುವ ಜನರುಗಳೆಲ್ಲ ಕೇಳಿರೆ ನೀವು ಕೇಳಿರೆ.

ದಾಳಿಯ ಹೋದಾಳು ಹಿರಿಯ ಹೊಳೆಯ ದಾಟಿ ಕೇಳಿರೆ ನೀವು ಕೇಳಿರೆ. ಮೋಳವ ಮಾಡ್ಯಾಳು ಮೋಸವ ಮಾಡಿನ್ನು ಕೇಳಿರೆ ನೀವು ಕೇಳಿರೆ. ತಿಂದಾಳು ಎಲ್ಲರ ಹಿಂದಕ್ಕೆ ತಿರಿಗ್ಯಾಳು ಕೇಳಿರೆ ನೀವು ಕೇಳಿರೆ.

ಬಂದು ಕೊಟ್ಟೂರು ಸೀಮೆಯ ಒಳಗಿನ್ನು ಕೇಳಿರೆ ನೀವು ಕೇಳಿರೆ. ಒಂದೊಂದು ಬಗೆಯಲ್ಲಿ ಹೋರಾಡಿ ಸತ್ತಾರು ಕೇಳಿರೆ ನೀವು ಕೇಳಿರೆ. ಬಂದಾಳು ಹರ್ಪ್ಪನಹಳ್ಳಿಯ ಒಳಗಿನ್ನು ಕೇಳಿರೆ ನೀವು ಕೇಳಿರೆ. ಗುಡಿಯಕೋಟೆಗಾಗಿ ನಡೆದು ತಾ ಬಂದಾಳು ಕೇಳಿರೆ ನೀವು ಕೇಳಿರೆ. ಒಡಗೊಂಡು ತನ್ನಯ ಬಳಗವನೆಲ್ಲವ ಕೇಳಿರೆ ನೀವು ಕೇಳಿರೆ. ಅಡವಿಯ

ಪಾಲಾದಾರು ಗುಡಿಯು ಕೋಟೆಯು ಬಿಟ್ಟು ಕೇಳಿರೆ ನೀವು ಕೇಳಿರೆ. ಸಡಗ ರದಲ್ಲಿದ್ದ ದೊರೆಗಳು ಮತ್ತಿನ್ನು ಕೇಳಿರೆ ನೀವು ಕೇಳಿರೆ. ಪಟ್ಟಣವನು ಹೊಕ್ಕು ಕಟ್ಟಳೆ ಮಾಡಿಯಾಳು ಕೇಳಿರೆ ನೀವು ಕೇಳಿರೆ. ತಟ್ಟೆಯಾಳು ರಾಯದುರ್ಗದವರನೆಲ್ಲ ಕೇಳಿರೆ ನೀವು ಕೇಳಿರೆ.

ನೆಟ್ಟನೆ ಚಿತ್ರಕಲ್ಲಿಗೆ ಬಂದಾಳು ಕೇಳಿರೆ ನೀವು ಕೇಳಿರೆ. ಕೆಟ್ಟಾರ್ರು ಬೇಡರು ಕಡೆಗಾಲು ಬಂದಿತೆಂದು ಕೇಳಿರೆ ನೀವು ಕೇಳಿರೆ. ಹುಟ್ಟಿಯಾರು ಹದಿನೆಂಟು ದುರ್ಗೇರು ಮತ್ತಿನ್ನು ಕೇಳಿರೆ ನೀವು ಕೇಳಿರೆ. ಭ್ರಷ್ಟರ ಮಾಡಿ ಯಾರು ಲೋಕವನೆಲ್ಲ ಕೇಳಿರೆ ನೀವು ಕೇಳಿರೆ.

ಕೆಟ್ಟ ಶ್ರೀರಂಗ ಹೊಟ್ಟಾಗಿ ಹಾರೀತು ಕೇಳಿರೆ ನೀವು ಕೇಳಿರೆ. ಹುಟ್ಟಿಯಾಳು ದುರ್ಗಿಯು ಶಿವನ ವರದಿಂದ ಕೇಳಿರೆ ನೀವು ಕೇಳಿರೆ. ಅತ್ತಲು ದುರ್ಗಿಯು ಮೊತ್ತದಲಿರುತಿರೆ ಕೇಳಿರೆ ನೀವು ಕೇಳಿರೆ.

ಇತ್ತಲಿ ಉತ್ತರ ದೇಶಕ್ಕೆ ನಡೆದಾಳು ಕೇಳಿರೆ ನೀವು ಕೇಳಿರೆ. ಕತ್ತಲೆ ಗವಿದಂತೆ ಬತ್ತಲೆಯಾದಾರು ಕೇಳಿರೆ ನೀವು ಕೇಳಿರೆ. ಸುತ್ತು ಮುನ್ನೂರು ಗಾವುದ ಬಟ್ಟೆಯು ಕೇಳಿರೆ ನೀವು ಕೇಳಿರೆ. ಕಾಶಿಯ ಲಿಂಗವ ಲೇಸಾಗಿ ಕಿತ್ತಾರು ಕೇಳಿರೆ ನೀವು ಕೇಳಿರೆ. ಒಡ್ಡೀ ಜಗನ್ನಾಥನಿನ್ನು ಕೇಳಿರೆ ನೀವು ಕೇಳಿರೆ ರಾಶಿಯ ಮಾಡಿಯಾರು ಕೇದಾರ ಹೊಕ್ಕಾರು ಕೇಳಿರೆ ನೀವು ಕೇಳಿರೆ. ಜಗದೀಶನ ಜಗವನು ಹಾಳುಮಾಡಿಯಾರು ಕೇಳಿರೆ ನೀವು ಕೇಳಿರೆ.

**೩ ನೇ ಸಂಧಿ ಸಮಾಪ್ತ.**



**ಗುಣತ್ರಯಯಾನ್ನಾಮರೂಪ ಕ್ರಿಯಾಸ್ಪದಾಃ। ಪರಸ್ಪರ ವಿಭಿನ್ನಾ ಧರಣ್ಯಾದಿ ವಿಂಶತಿ ತತ್ವಾನಿ ॥೧೨॥**

**ಟೀಕು**— ಶಿವಂ=ಶಿವತತ್ವವು ಶಕ್ತಿಃ=ಶಕ್ತಿತತ್ವವು ಸದಾಶಿವಃ= ಸದಾಶಿವತತ್ವವು ಕಾಲಃ=ಕಾಲತತ್ವವು ನಿಯತಿಃ=ನಿಯತಿತತ್ವವು ಕಲಾ=ಕಲಾತತ್ವವು ವಿದ್ಯಾ=ವಿದ್ಯಾತತ್ವವು ರಾಗಃ=ರಾಗತತ್ವವು ಪುರುಷಃ=ಪುರುಷತತ್ವವು ತತಃ=ಅನಂತರದಲ್ಲಿ ಪ್ರಕೃತಿಃ=ಪ್ರಕೃತಿತತ್ವವು ಪ್ರಕೃತೇಃ=ಪ್ರಕೃತಿಯ ದೆಶೆಯಿಂದ ಮಹಾನ್=ಮಹತ್ವವು ಮಹತಃ=ಮಹತ್ತತ್ವದ ದೆಸೆಯಿಂದ ಗುಣತ್ರಯಂ=ಗುಣತ್ರಯವು ಗುಣತ್ರಯಾತ್=ಗುಣತ್ರಯದ ದೆಸೆಯಿಂದ ನಾಮರೂಪ ಕ್ರಿಯಾಸ್ಪದಾಃ=ನಾಮರೂಪ ಕ್ರಿಯಗಳಿಗಾಸ್ಪದವಾದ ಬುದ್ಧಿತತ್ವ ಅಹಂಕಾರತತ್ವ ಮನಸ್ತತ್ವಂಗಳು ಪರಸ್ಪರವಿಭಿನ್ನಾಃ=ಅನ್ಯೋನ್ಯ ಭಿನ್ನಗಳಾಗಿರ್ದ ಧರಣ್ಯಾದಿವಿಂಶತಿ ತತ್ವಾನಿ=ಶ್ರೋತ್ರ ತ್ವಕ್ಕುನೇತ್ರ ಜಿಹ್ವೆ ಪ್ರಾಣಂಗಳು ವಾಕ್ಕು ಪಾಣಿ ಪಾದ ಗುಹ್ಯ ಗುದಂಗಳು ಶಬ್ದ, ಸ್ಪರ್ಶ, ರೂಪ, ರಸ, ಗಂಧಂಗಳು ಆಕಾಶ, ವಾಯು, ಅಗ್ನಿ, ಆಪ್, ಪೃಥ್ವಿಗಳು ಈಪ್ರಕಾರವಾದ ಪಂಚಜ್ಞಾನೇಂದ್ರಿಯಂಗಳು ಪಂಚಕರ್ಮೇಂದ್ರಿಯಂಗಳು ಪಂಚತನ್ಮಾತ್ರಂಗಳು ಪಂಚಭೂತಂಗಳು ಕೂಡಿ ಇಪ್ಪತ್ತು ತತ್ವಂಗಳು.

ಹಾಗೆಯೆ ಪೌಷ್ಕರ ಸೂತ್ರಾರ್ಥದೊಡನೆ ಕೂಡಿದ ಮೃಗೇಂದ ಸೂತ್ರದಿಂದೆ ತೋರಿಸುತ್ತಿರ್ದಪಂ

**ಶೈವಂ ಶಾಕ್ತಂ ಸದೇಶಾಖ್ಯ ನ್ಯೈಶಂ ವಿದ್ಯಾಹ್ವಯಂ ತಥಾ॥ ಗ್ರಂಥಿಜನ್ಯ ಕಲಾಕಾಲ ವಿದ್ಯಾರಾಗನೃಮಾತರಃ॥ ಗುಣಧೀಗರ್ವ ಚಿತ್ತಾಕ್ಷಮಾತ್ರಾ ಭೂತಾನ್ಯನುಕ್ರಮಾತ್ ॥೧೨॥**

**ಟೀಕು**— ಶೈವಂ=ಶಿವತತ್ವವು ಶಾಕ್ತಂ=ಶಕ್ತಿತತ್ವವು ಸದೇಶಾಖ್ಯಂ= ಸದಾಶಿವತತ್ವವು ಐಶಂ=ಈಶ್ವರತತ್ವವು ವಿದ್ಯಾಹ್ವಯಂ=ವಿದ್ಯಾತತ್ವವು ಈ ೫ ಮಲಯುಕ್ತವಾದ ಶುದ್ಧಾಧ್ವದ ವಿಜ್ಞಾನಾಕಲರಿಗೆ ತನುಕರಣ ಭುವನ ಭೋಗಂಗಳು ಗ್ರಂಥಿ=ಮಾಯಾತತ್ವವು ಜನ್ಯ=ಮಾಯೆಯಿಂದುತ್ಪನ್ನವಾದ ನಿಯತಿ ತತ್ವವು ಕಲಾ=ಕಲಾತತ್ವವು ಕಾಲ=ಕಾಲತತ್ವವು ವಿದ್ಯಾ=ವಿದ್ಯಾತತ್ವವು ರಾಗ=ರಾಗತತ್ವವು ನೃ=ಪುರುಷತತ್ವವು ಈ ೬ ಮಲಕರ್ಮಯುಕ್ತರಾದ ಮಿಶ್ರಾಧ್ವದ ಪ್ರಳಯಾಕಲರಿಗೆ ತನುಕರಣ

ಭುವನ ಭೋಗಂಗಳು ಮಾತರಃಪ್ರಕೃತಿ=ಪ್ರಕೃತಿ ತತ್ವವು. ಗುಣ=ಗುಣ ತ್ವವು ಧೀ=ಬುದ್ಧಿ ತತ್ವವು ಗರ್ವ=ಅಹಂಕಾರ ತತ್ವವು ಚಿತ್ತ=ಮನಸ್ತ ತ್ವವು ಅಕ್ಷ=ಕರ್ಮೇಂದ್ರಿಯ ಜ್ಞಾನೇಂದ್ರಿಯಗಳು ಮಾತ್ರಾ=ಪಂಚತನ್ಮಾ ತ್ರಗಳು ಭೂತಾನಿ=ಪಂಚಭೂತಂಗಳು ಈ ೨೫ ತತ್ವಂಗಳು ಅನುಕ್ರಮಾತ್= ಕ್ರಮಾನುಗತಿಯ ದೆಸೆಯಿಂದ ಮಲ ಮಾಯಾ ಕರ್ಮಯುಕ್ತರಾದ ಅಧೋ ಭುವನದ ಸಕಲರಿಗೆ ತನು ಕರಣ ಭುವನ ಭೋಗಂಗಳು ಇತಿಜ್ಞಾನಪಾದೆ.

ಇನ್ನು ಕ್ರಿಯಾಪಾದ ಪ್ರಸಿದ್ಧವಾದ ಷಟ್ತ್ರಿಂಶತ್ತತ್ತ್ವನ್ಯಾಸವನು ಕಾರ ಣಾಗಮ ಸಾರ್ಥ ಪಂಚಕ ಸೂತ್ರಗಳಿಂದೆ ತೋರಿಸುತ್ತಿರ್ದಪಂ ॥

**ಶಿವತತ್ವಂ ಶಕ್ತಿತತ್ತ್ವಂ ಮಸ್ತಕೇವಿನ್ಯಸೇದ್ಗುರುಃ ॥೧೩॥**

**ಟೀ**॥— ಗುರುಃ=ನೂರೊಂದು ಸ್ಥಲರೂಪವಾದ ದೀಕ್ಷೆಗಳಲ್ಲಿ ಕುಸಲನಾದ ದೇಶಿಕನಾದ ಶಿವತತ್ವಂ=ಶಿವತತ್ವವನು ಶಕ್ತಿತತ್ವಂ=ಶಕ್ತಿತತ್ವ ವನು ಮಸ್ತಕೇ=ಶಿಷ್ಯನ ಮಸ್ತಕದಲ್ಲಿ ವಿನ್ಯಸೇತ್=ದೀಕ್ಷಾ ಕಾಲದಲ್ಲಿ ನ್ಯಾಸ ಮಂ ಮಾಡುವದು

**ಸದಾಶಿವೇಶ್ವರಂ ತತ್ವಂ ದ್ವಯಂ ವಕ್ತ್ರೇತು ವಿನ್ಯಸೇತ್ ॥೧೪॥**

**ಟೀ**— ಸದಾಶಿವೇಶ್ವರಂ=ಸದಾಶಿವತತ್ವ ಈಶ್ವರ ತತ್ವವೆಂಬ ತತ್ವ ದ್ವಯಂ=ಎರಡು ತತ್ವವನು ವಕ್ತ್ರೇ ತು=ಮುಖದಲ್ಲಿಯಾದೊಡೆ ವಿನ್ಯಸೇತ್= ನ್ಯಾಸಮಂ ಮಾಡುವದು

**ವಿದ್ಯಾಂಚ ಮೋಹಿನೀಂ ಚೈವಕಾಲಂ ಚೈವಕಲಾಂತಥಾ॥**
**ಅವಿದ್ಯಾಂ ನಿಯತಿಂ ಚೈವ ರಾಗಂ ಚ ಹೃದಯೇ**
**ನ್ಯಸೇತ್ ॥೧೫॥**

**ಟೀ**— ವಿದ್ಯಾಂ=ಶುದ್ಧ ವಿದ್ಯಾ ತತ್ವವನು ಮೋಹಿನೀಂ=ಮಾಯಾ ತತ್ವವನು ಕಲಾಂ=ಕಲಾ ತತ್ವವನು ಅವಿದ್ಯಾಂ=ಅವಿದ್ಯಾ ತತ್ವವನು ನಿಯತಿಂ=ನಿಯತಿ ತತ್ವವನು ರಾಗಂಚ=ರಾಗ ತತ್ವವನು ಹೃದಯೇ=ಹೃದ ಯದಲ್ಲಿ ನ್ಯಸೇತ್=ನ್ಯಾಸಮಂ ಮಾಡುವದು

**ಪುರುಷಂ ಪ್ರಕೃತಿಂ ಚೈವಬುದ್ಧ್ಯಹಂಕಾರ ಮೇವಚ॥**
**ಮನಃ ಶ್ರೋತ್ರಂ ತ್ವಚಂ ನೇತ್ರಂ ಜಿಹ್ವಾಂ ಘ್ರಾಣಂ**

**ತಥೈವಚ॥ ವಾಚಂ ಪಾಣಿಂ ತಥಾಪಾದಂ ಗುದಂ ಚೋಪಸ್ಥಮೇವಚ॥ ಶಬ್ದಂ ಸ್ಪರ್ಶಂಚ ರೂಪಂಚ ರಸಂ ಗಂಧಂ ತಥೈವಚ॥ ಆಕಾಶಂ ವಾಯು ಮನಲಂ ಜಲಂ ಗುಹ್ಯೆತು ವಿನ್ಯಸೇತ್॥ ಪೃಥಿವೀ ತತ್ವ ಮೇಕಂತು ಪಾದ ವಿನ್ಯಸೇತ್॥ ಷಟ್ತ್ರಿಂ ಶತ್ತತ್ವ ವಿನ್ಯಾಸ ಉಕ್ತಃ ಶೈವಾಗ ಮೋದಿತಃ ॥೯॥**

ಟೀ— ಅರ್ಥಂ ಸುಲಭಂ ಇತಿಜ್ಞಾನಪಾದೆ ಕ್ರಿಯಾಪಾದಃ

ಇನ್ನು ಚರ್ಯಾಪಾದದಲ್ಲಿ ಪ್ರಸಿದ್ಧವಾದ ಷಟ್ತ್ರಿಂಶ ತತ್ವ ರೂಪವಾದ ಹೃತ್ಕಮಲದಲ್ಲಿ ಶಿವಲಿಂಗ ಪೂಜೆಯನು ಕಾಮಿಕ ತಂತ್ರ ಚತುಸ್ಸೂತ್ರ ಗಳಿಂದ ತೋರಿಸುತ್ತಿರ್ದಪಂ॥

**ಕರ್ಣಿಕಾಶಿವ ತತ್ವಂಚ ಕಿಂಜಲ್ಕಾಂ ಶಕ್ತಿತತ್ವಗಾಃ॥ ಸದಾಶಿವೇಶ್ವರೆ ತತ್ವೆ ಆಜ್ಞಾ ಚಕ್ರ ಸ್ಥಿತೆ ದಳೆ॥ ವಿದ್ಯಾ ವೃಂತಂಚ ಮಾಯಾದಿ ನರಾಂತಂ। ನಾಳಮೀರಿತಂ॥ ಪ್ರಕೃತ್ಯಾದಿ ಜಲಾಂತಂಚ ಕಂದಂ ಪೃಥ್ವೀಸರಃ ಸ್ಮೃತಂ ॥೧೭॥**

ಟೀ— ಶಿವತತ್ವಂ=ಶಿವತ್ತ್ವವು ಕರ್ಣಿಕಂ=ಕಮಲಕರ್ಣಿಕೆ ಶಕ್ತಿ ತತ್ತ್ವಗಾಃ=ಶಕ್ತಿ ತತ್ವವ ನೆಯ್ದಿದ ಕಳೆಗಳು ಕಿಂಜಲ್ಕಾಃ=ಕಮಲ ಕೇಸರಂ ಗಳು ಸದಾಶಿವೇಶ್ವರೆ ತತ್ವೆ=ಸದಾಶಿವ ತತ್ವ ಈಶ್ವರ ತತ್ವಗಳು ಆಜ್ಞಾ ಚಕ್ರಸ್ಥಿತೆದಳೆ=ಆಜ್ಞಾಚಕ್ರದಲ್ಲಿ ಇರ್ದ ದಳಂಗಳು ವಿದ್ಯಾ=ಶುದ್ಧವಿದ್ಯಾ ತತ್ವವು ವೃಂತಂ=ತೊಟ್ಟು ಮಾಯಾದಿ ನರಾಂತಂ=ಮಾಯಾತತ್ವ ತೊಡಗಿ ಪುರುಷತತ್ವಕಡೆಯಾದ ಏಳು ತತ್ತ್ವವು ನಾಳಂ=ನಾಳವೆಂದು ಈರಿತಂ= ಹೇಳಲ್ಪಟ್ಟಿತ್ತು ಪ್ರಕೃತ್ಯಾದಿಜಲಾಂತಂ=ಪ್ರಕೃತಿ ತೊಡಗಿ ಜಲ ಕಡೆಯಾದ ಇಪ್ಪತ್ತುನಾಲ್ಕು ತತ್ವವು ಕಂದಂ=ಗೆಣಸು ಪೃಥ್ವೀ=ಪೃಥ್ವಿತತ್ವವು ಸರಃ= ಕೊಳನೆಂದು ಸ್ಮೃತಂ=ನೆನೆಯಲ್ಪಟ್ಟಿತ್ತು

**ಯದಾಜ್ಞಾಚಕ್ರ ಮುದಿತಂ ತದಷ್ಟದಳ ಸಾರಸಂ॥ ತತ್ರಸೂರ್ಯೇಂದು ದಹನ ಶಕ್ತಿಮಂಡಲ ಮಧ್ಯಮೆ॥ ತತ್ವ**

**ವಿಜ್ಞಾನ ವಿನ್ಯಾಸ ಪೂಜಾಭಿರ್ಮೋಕ್ಷ ಮಾಪ್ನು ಯಾತ್ ॥೧೮॥**

**ಟೀಕು:**— ಯತ್ ಆಜ್ಞಾಚಕ್ರಂ=ಆವುದಾನೊಂದಾಜ್ಞಾಚಕ್ರವು ಉದಿತಂ=ಹೇಳಲ್ಪಟ್ಟಿತ್ತು ತತ್=ಅದು ಅಷ್ಟದಳಸಾರಸಂ=ಆ ಅಷ್ಟದಳಕಮಲದಲ್ಲಿ ಸೂರ್ಯೇಂದು ದಹನಶಕ್ತಿ ಮಂಡಲ ಮಧ್ಯಮೆ=ಸರ್ಯಚಂದ್ರಾಗ್ನಿ ಪರಾಶಕ್ತಿ ಮಂಡಲದ ಮಧ್ಯದಲ್ಲಿ ತತ್ವಾತೀತಂ=ಷಟ್ತ್ರಿಂಶತ್ತತ್ವಾತೀತನಾದ ಶಿವಂ=ಪರಮಶಿವನು ಗುರೂಕ್ತ್ಯಾ=ಗುರುಪದೇಶದಿಂದೆ ಜ್ಞಾತ್ವಾ = ಅರಿದು ಬುಧ:=ದಿವ್ಯಜ್ಞಾನಿಯಾಗಿ ಪೂಜಯೇತ್ = ಅಹಿಂಸಾದ್ಯಷ್ಟಪುಷ್ಪಂಗಳಿಂದೆ ಪೂಜಿಸುವದು ತತ್ವವಿಜ್ಞಾನವಿನ್ಯಾಸ ಪೂಜಾಭಿಃ = ತತ್ವವಿಜ್ಞಾನ=ಷಟ್ತ್ರಿಂಶತ್ತತ್ತ್ವವಿಜ್ಞಾನ ವಿನ್ಯಾಸ = ಷಟ್ತ್ರಿಂಶತ್ತತ್ತ್ವವಿನ್ಯಾಸ ಪೂಜಾಭಿಃ = ಷಟ್ತ್ರಿಂಶತ್ತತ್ತ್ವರೂಪವಾದ ಪದ್ಮಪೂಜೆಗಳಿಂದೆ ಮೋಕ್ಷಂ=ಪರಮುಕ್ತಿಯನು ಆಪ್ನುಯಾತ್=ಎಯ್ದುವನು ಇತಿಜ್ಞಾನಪಾದೆ ಚರ್ಯಾಪಾದಃ

ಇನ್ನು ಯೋಗಪಾದದಲ್ಲಿ ಪ್ರಸಿದ್ಧವಾದ ಷಟ್ತ್ರಿಂಶತ್ತತ್ವವಾಸಿಗಳಾದ ಪ್ರಾಣಿಗಳನು ವಾದಿಗಳನು ಜ್ಞಾನಿಗಳು ಪೌಷ್ಕರಾದ್ಯಾಗಮಂಗಳ ದಶಸೂತ್ರದಿಂದೆ ತೋರಿಸುತ್ತಿರ್ದಪಂ

**ಭೂತತನ್ಮಾತ್ರ ಕಾಕ್ಷಾಣಿ ಮನೋಹಂಕಾರ ಬುದ್ಧಯಃ ॥ ಗುಣಾವ್ಯಕ್ತನ ರಾಶ್ಚೈವ ಪ್ರಾಪ್ಯಸ್ಥಾನಾನಿ ವಾದಿನಾಂ ॥೧೯॥**

**ಟೀಕು:**— ಭೂತ=ಪಂಚಭೂತಂಗಳು ತನ್ಮಾತ್ರಕ = ಪಂಚತನ್ಮಾತ್ರೆಗಳು ಅಕ್ಷಾಣಿ = ದಶೇಂದ್ರಿಯಂಗಳು ಮನಃ=ಮನಸ್ಸು ಅಹಂಕಾರ= ಅಹಂಕಾರವು ಬುದ್ಧಯಃ = ಬುದ್ಧಿಗಳು ಗುಣ=ಗುಣತತ್ತ್ವ ಅವ್ಯಕ್ತ= ಪ್ರಕೃತಿತತ್ತ್ವ ನರಾಃ=ಪುರುಷತತ್ತ್ವಂಗಳು ವಾದಿನಾಂ=ವಾದಿಗಳಿಗೆ ಪ್ರಾಪ್ಯಸ್ಥಾನಾನಿ = ಎಯ್ದಲು ಯೋಗ್ಯವಾದ ಸ್ಥಾನಂಗಳು

**ಪುರುಷೋಪರಿಯತ್ತತ್ತ್ವಂ ಶಿವತತ್ತ್ವೈಕಗೋಚರಂ। ಪುಂಸಾಂ ತನ್ನಿಷ್ಠ ಕಾನಸ್ಯಾದ್ವಿಶೇಷಾನುಗ್ರಹಾದೃತೆ ॥೨೦॥**

# ಶಿವಾನುಭವ



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.

ವಿಜಾಪುರ



ಸಂಪುಟ ೮ ಸಂಚಿಕೆ ೫

ಜಾನೇವರಿ

೧೯೩೪

ವಾ. ವರ್ಗಣಿ ೪-೪-೦ ] [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೮ ] ಜಾನೇವರಿ ೧೯೩೪ [ಸಂಚಿಕೆ ೫

## ಶೂನ್ಯಸಂಪಾದನೆಯ ರಹಸ್ಯ.

### ಪ್ರಸ್ತಾವನೆ.

(ಲೇ:— ಮಿ॥ ಕಲ್ಯಾಣಪ್ಪ ಬ್ಯಾಳಿ ಬಿ. ಎ. ಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ.)

ಶೂನ್ಯಸಂಪಾದನೆಯು ವೀರಶೈವ ತತ್ವವನ್ನು ಪ್ರತಿಪಾದಿಸುವ ಉದಾತ್ತ ಗ್ರಂಥವಾಗಿದೆ. ವಚನಶಾಸ್ತ್ರಸಾರದಂತೆ ಶೂನ್ಯಸಂಪಾದನೆಯೇನೂ ಸುಲಭವಾಗಿ ತಿಳಿದುಕೊಳ್ಳುವಂತಹ ಗ್ರಂಥವಲ್ಲ. ಅನುಭಾವಿಗಳ ಹೊರತು ಅನ್ಯರಿಗೆ ಆದರೊಳಗಿನ ತಿರುಳನ್ನು ಅರಿಯುವದು ಸಾಧ್ಯವಿಲ್ಲ. ಬಸವಾದಿ ಪ್ರಮಥರ ಕಾಲದಲ್ಲಿ ಶ್ರೀ ಪ್ರಭುದೇವರು ದೊರೆಕೊಂಡ ನಾನಾ ಪ್ರಸಂಗಗಳಲ್ಲಿ ಈ ಮಹಾನುಭಾವದ ವಾಗ್ಝರಿಯು ಉಗಮವಾಯಿತು. ಅದೇ ಶಿವಾನುಭವ ಗೋಷ್ಠಿಯನ್ನೇ ವಿಜಯನಗರದ ಅರಸರ ಕಾಲದಲ್ಲಿ ಪರಮ ಪೂಜ್ಯರಾದ ವಿರಕ್ತ ಸ್ವಾಮಿಗಳು ಸಂಘರ್ಷಣ ಮಾಡಿ ಆ ಪ್ರಭುದೇವರ ವಚನಗಳಿಗೆ ಒಂದು ವಿಶಿಷ್ಟ ತರದ ಕ್ರಮವನ್ನು ಗೊತ್ತುಪಡಿಸಿದರು. ಆ ಮೇರೆಗೆ ವಿವೇಚಿಸಲ್ಪಟ್ಟು ಕ್ರಮಗೊಳಿಸಿದ ಶೂನ್ಯಸಂಪಾದನೆಯನ್ನು ರಾ॥ ಸಾ॥ ಹಳಕಟ್ಟಿಯವರು ಮುದ್ರಿಸಿ ನಮ್ಮ ಸಮಾಜಕ್ಕೆ ಮಹದುಪಕಾರ ಮಾಡಿರುವರು. ಶೂನ್ಯಸಂಪಾದನೆಯೊಳಗಿನ ದಿವ್ಯತತ್ವಗಳನ್ನು ಸುಲಭವಾಗಿ ಬರೆದು ಸಾಮಾನ್ಯ ಜನರಿಗೆ ತಿಳಿಸುವದು ಈಗ ಅತಿ ಮಹತ್ವದ ಕೆಲಸವಾಗಿದೆ. ನಾವು ಬಹು ಪರಿಶ್ರಮ ವಹಿಸಿ ಅವುಗಳನ್ನು ಚನ್ನಾಗಿ ಪರಿಶೀಲಿಸಿ ಸಂಘರ್ಷಣೆ ಮಾಡದ ಹೊರತು ಅವುಗಳ ಗಂಧವೂ ಕೂಡ ನಮಗೆ ಹತ್ತುವದಿಲ್ಲ. "ಭಿನ್ನ ರುಚಿರ್ಹಿ ಲೋಕಃ" ಎಂಬ ಗಾದೆಯಂತೆ ಆ ತತ್ವಗಳು ಒಬ್ಬರಿಗೆ ಒಂದು ರೀತಿಯಾಗಿ ಹೊಳೆದರೆ ಇನ್ನೊಬ್ಬರಿಗೆ ಮತ್ತೊಂದು ರೀತಿ

ಯಾಗಿ ಹೊಳೆಯಬಹುದು. ಯಾರಿಗಾದರೂ ಹೇಗೆ ಹೊಳೆಯುವವೋ ಹಾಗೆ ವ್ಯಕ್ತಪಡಿಸಲು ಅವರು ಸ್ವತಂತ್ರರಿದ್ದಾರೆ. ಆದರೆ ಈ ಸ್ವಾತಂತ್ರ್ಯವು ಮೇರೆದಪ್ಪಿ ಮಾತ್ರ ಹೋಗಬಾರದು. ಇದನ್ನರಿತು ವಚನವಾಙ್ಮಯದಲ್ಲಿಯೇ ಪ್ರತಿನಿತ್ಯ ವ್ಯಾಸಂಗ ಮಾಡುತ್ತಿರುವ ರಾ॥ ಸಾ॥ ಹಳಕಟ್ಟಿಯವರ ಸಹಾಯದಿಂದ ಶೂನ್ಯಸಂಪಾದನೆಯೊಳಗಿನ ಉಜ್ವಲವಾದ ತತ್ವಗಳನ್ನು ನನಗೆ ತಿಳಿದ ಮಟ್ಟಿಗೆ ಸುಲಭವಾಗಿ ವಿಶದಪಡಿಸಬೇಕೆಂದು ಪ್ರಯತ್ನ ನಡೆಯಿಸಿದ್ದೇನೆ. ಆದಕ್ಕೆ ಪರಮಾತ್ಮನು ಯಶಸ್ಸುಕೊಡಲೆಂದು ಹಾರೈಸುತ್ತೇನೆ.

ಇನ್ನು ಶೂನ್ಯಸಂಪಾದನೆಯನ್ನು ಯಾರು ರಚಿಸಿದರು, ಎಂದು ರಚಿಸಿದರು, ಹೇಗೆ ರಚಿಸಿದರು, ಎಂಬೀ ಪ್ರಶ್ನೆಗಳ ಬಗ್ಗೆ ರಾ॥ ಸಾ॥ ಹಳಕಟ್ಟಿಯವರು ಶೂನ್ಯಸಂಪಾದನೆಯ ಪ್ರಸ್ತಾವನೆಯಲ್ಲಿ ದಿಗ್ದರ್ಶನ ಮಾಡಿದ್ದಾರೆ. ಆದರೆ ಶೂನ್ಯಸಂಪಾದನೆಯಲ್ಲಿ ಯಾವ ಯಾವ ಉದಾತ್ತ ತತ್ವಗಳು ಅಡಕವಾಗಿವೆ, ಎಂಬೀ ಪ್ರಶ್ನೆಯನ್ನು ವಿವೇಚಿಸುವದು ಅತ್ಯಂತ ಮಹತ್ವದ್ದಾಗಿದೆ. ಪ್ರಸ್ತುತ ಲೇಖದ ಉದ್ದೇಶವಾದರೂ ಅದೇ ಆಗಿದೆ.

ಕ್ರಿ. ಶ. ೧೫ನೆಯ ಶತಮಾನದಲ್ಲಿ ವಿಜಯನಗರದ ಮೊದಲನೆಯ ದೇವರಾಯನು ಆಳುವಾಗ ಆತನ ಆಶ್ರಯದ ಕೆಳಗೆ ತೋಂಟದಾರ್ಯರೇ ಮೊದಲಾದ ನೂರೊಂದು ಜನ ವೀರಶೈವ ವಿರಕ್ತ ತತ್ವಜ್ಞಾನಿಗಳು ಪ್ರತಿನಿತ್ಯ ಶಿವಾನುಭವ ಗೋಷ್ಠಿಯಲ್ಲಿ ನಿರತರಾಗಿದ್ದರು. ಆ ತೋಂಟದ ಸಿದ್ಧಲಿಂಗದೇಶಿಕರಿಗೆ ಬೋಳಬಸವಾಚಾರ್ಯನೆಂಬ ಶಿಷ್ಯನಿದ್ದನು. ಆ ಬೋಳಬಸವೇಶ್ವರನು ಗೂಳೂರ ಸಿದ್ಧವೀರಾಚಾರ್ಯನೆಂಬವನಿಗೆ ಅಲ್ಲಮ ಪ್ರಭುದೇವರ ಪರಮಾನುಭವ ಬೋಧೆಯನ್ನು ಅರುಹಿದನು. ಪ್ರಭುದೇವರು ಆಯಾಯ ಪ್ರಸಂಗಗಳಲ್ಲಿ ಪ್ರಸ್ಥಾಪಿಸಿದ ಅಮೌಲ್ಯವಾದ ವಚನಗಳನ್ನು ಸಿದ್ಧವೀರಾಚಾರ್ಯನು ಪ್ರಶ್ನೋತ್ತರ ರೂಪದಲ್ಲಿ ಸಂಗ್ರಹಿಸಿ ಅದಕ್ಕೆ ಶೂನ್ಯಸಂಪಾದನೆಯೆಂದು ಹೆಸರಿಟ್ಟನು. ಈ ವಿಷಯದಲ್ಲಿ ಗೂಳೂರ ಸಿದ್ಧವೀರಾಚಾರ್ಯನು ಹೇಳಿರುವದೇನಂದರೆ “ಅಖಿಲ ಜಗದಾರಾಧ್ಯರಪ್ಪ ತೋಂಟದ ಸಿದ್ಧಲಿಂಗೇಶ್ವರನ ಕೃಪಾಪ್ರಸನ್ನ ಪುತ್ರರಾದ, ವಸುಧೆಯ ಷಟ್‌ಸ್ಥಲ ಜ್ಞಾನಿಗಳಾದ, ದಿವ್ಯಾನುಭಾವಿಗಳಾದ ಬೋಳ ಬಸವೇಶ್ವರದೇವರ ಬೋಧೆವಿಡಿದು ಗೂಳೂರ ಸಿದ್ಧವೀರೇಶ್ವರನೆಂಬ ಮಹಾನುಭಾವಿಯು ನಿತ್ಯ ನಿರ್ಮಲ ನಿರಂಜನನೆನಿಪ ಅಲ್ಲಮಪ್ರಭುದೇವರು ಸಮಸ್ತ ಮಹಾ ಗಣಂಗ

ಗಳಿಗೆ ದಿವ್ಯಜ್ಞಾನ ಪ್ರಸನ್ನವುಂ ಬೋಧಿಸಿದ ಕ್ರಮವುಂ ಅಖಿಲ ಪುರಾತನರ ವಚನಂಗಳಿಂದೆ ಸಂಗ್ರಹಿಸಿದೆವು."

ಇನ್ನು "ಶೂನ್ಯ"ವೆಂದರೇನೆಂಬ ಬಗ್ಗೆ ಸ್ವಲ್ಪ ವಿವೇಚಿಸುವಾ. ಶೂನ್ಯವೆಂದರೆ ಶ್ರೀ ಶಂಕರಾಚಾರ್ಯರು ಬೋಧಿಸಿದ ಜಗನ್ಮಿಥ್ಯಾವಾದವಲ್ಲ. ಜೈನರು ಪ್ರತಿಪಾದಿಸುವ ನಾಸ್ತಿಕ ವಾದವೂ ಅಲ್ಲ. ಆದರೆ ಶೂನ್ಯವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣವಪ್ಪ ಮೂಲ ಲಿಂಗವು. ಈ ಮೂಲ ಲಿಂಗವು ಸರ್ವಶೂನ್ಯವನ್ನೊಳಕೊಂಡಿರುತ್ತಾನೆ. ಜೇಡವು ತನ್ನೊಳಗಿನ ಎಳೆಗಳಿಂದಲೇ ತನ್ನ ಬೀಡನ್ನು ಕಟ್ಟುವಂತೆ ಈ ಲಿಂಗವು ಸ್ವೇಚ್ಛಾಲೀಲಾವಿಲಾಸದಿಂದ ತನ್ನಲ್ಲಿಯೇ ಅನಂತಕೋಟಿ ಬ್ರಹ್ಮಾಂಡಗಳನ್ನೂ ಅನಂತಕೋಟಿ ಆತ್ಮರುಗಳನ್ನೂ ಹುಟ್ಟಿಸಿದನು. ಈ ಆತ್ಮರುಗಳು ಮುಂದೆ ಪಂಚವಿಂಶತಿ ತತ್ವಗಳ ಸಂಬಂಧದಿಂದ ದೇಹವೇ ಪರವೆಂದು ತಿಳಿದು ಜಾತಿ ವರ್ಣಾಶ್ರಮ, ಕುಲಗೋತ್ರ, ಸುಖದುಃಖ ಬಂಧಮೋಕ್ಷಗಳಿಗೆ ಬಲಿಬಿದ್ದವು. ಈ ಸಂಸಾರದಲ್ಲಿ ತೊಳಲಾಡುವ ಜೀವರುಗಳಿಗೆ ದೇಹದ ಬಗ್ಗೆ ಹ್ಯೇಯುವನ್ನು ಹುಟ್ಟಿಸಿ ಸಂಸಾರ ವಿಮೋಚನೆಮಾಡಿಸಬೇಕೆಂಬ ಸದಿಚ್ಛೆಯಿಂದ ಆ ಪರಶಿವ ಲಿಂಗವು ಗುರು ಲಿಂಗಜಂಗಮರೂಪದಿಂದ ಭೂಮಿಗವತರಿಸಿದನು.

ಈ ಪರಶಿವ ಲಿಂಗವು ಭೂಮಿಗೆ ಗುರುವಾಗಿ ಬಂದು ತ್ರಿವಿಧ ದೀಕ್ಷೆಯಿಂದ ಸಂಸಾರಿಗಳ ಮಲತ್ರಯಂಗಳನ್ನು ಕಳೆದು, ಲಿಂಗಸ್ವರೂಪವಾಗಿ ಬಂದು ಅವರ ಕರಸ್ಥಲದಲ್ಲಿ ಪೂಜೆಗೊಂಡು, ಜಂಗಮಸ್ವರೂಪವಾಗಿ ಬಂದು ಅವರ ಅಂತರಂಗ ಬಹಿರಂಗವನ್ನು ಪ್ರವೇಶಿಸಿ ಪ್ರಸಾದವ ಕರುಣಿಸಿಕೊಟ್ಟನು. ಆ ಪರಶಿವಲಿಂಗದ ಗುರುರೂಪವೇ ಬಸವೇಶನು; ಲಿಂಗರೂಪವೇ ಚನ್ನಬಸವೇಶನು; ಜಂಗಮರೂಪವೇ ಪ್ರಭುದೇವರು. ಈ ಮೇರೆಗೆ ಆ ಲಿಂಗವೇ ಜಗದ ಹಿತಾರ್ಥವಾಗಿ ತ್ರಿವಿಧ ರೂಪದಿಂದ ಅವತರಿಸಿರುವದಲ್ಲದೆ ಬಸವ ಚನ್ನಬಸವ ಅಲ್ಲಮ ಪ್ರಭುದೇವರು ಶಾಪವಶದಿಂದ ಮರ್ತ್ಯಕ್ಕೆ ಬಂದರೆಂದು ಯಾರಾದರೂ ಹೇಳುತ್ತಿದ್ದರೆ ಅವರು ೨೮ ಕೋಟಿ ನರಕದಲ್ಲಿ ಸೂರ್ಯಚಂದ್ರರಿರುವ ತನಕ ಬೀಳುವರೆಂದು ಚನ್ನಬಸವದೇವರು ಸ್ವತಃ ಅಪ್ಪಣೆಕೊಡಿಸಿದ್ದಾರೆ.

ಅದೇ ಮೇರೆಗೆ ಶ್ರೀಮತ್ಸಕಲ ಜಗದಾಚಾರ್ಯರುಮಪ್ಪ ಅಲ್ಲಮ ಪ್ರಭುದೇವರು ಚನ್ನಬಸವ ಮೊದಲಾದ ಅಸಂಖ್ಯಾತ ಪ್ರಮಥ ಗಣಂ

ಗಳೊಡನೆ ಮಹಾನುಭಾವಗೋಷ್ಠಿಯನ್ನು ಮಾಡಿ ಮಾಯೆಯನ್ನು ಗೆದ್ದು ನಿರ್ಮಾಯ ನಿರಂಜನ ಮಾಯಾ ಕೋಲಾಹಲನೆಂಬ ಬಿರುದನ್ನು ಧರಿಸಿರುವದೇ ಸತ್ಯ. ಆದರೆ ಯಾರಾದರೂ ಪ್ರಭುದೇವರು ಮಾಯಾವಶಗತನೆಂದು ಹೇಳಿದರೆ ಅವರಿಗೆ ಗುರುಲಿಂಗಜಂಗಮ ದ್ರೋಹ ತಪ್ಪದೆಂದು ಹಡಪದ ಅಪ್ಪಣ್ಣಗಳು ಅಪ್ಪಣೆಯನ್ನು ಕೊಡಿಸಿದ್ದಾರೆ.

ಈ ಮೇರೆಗೆ ನಿಃಕಲ ಲಿಂಗದ ಜಂಗಮಸ್ವರೂಪವಾದ ಪ್ರಭುದೇವರು ಜಗತ್ತಿನಲ್ಲಿ ಅವತರಿಸಿ ಸಂಸಾರದಲ್ಲಿ ಬಳಲುವ ಜೀವರುಗಳಿಗೆ ಪರಮಾತ್ಮನ ನಿಲವನ್ನು ತಿಳಿಸಿ, ಆ ಪರಶಿವಲಿಂಗದಿಂದಲೇ ಈ ಜೀವಾತ್ಮವು ಉಂಟಾಗಿರುವದೆಂಬದನ್ನರುಹಿ ಅವರಿಗೆ ಈ ಸಂಸಾರದಲ್ಲಿ ಹ್ಯೇಯವನ್ನು ಹುಟ್ಟಿಸಿ ಆ ಸಂಸಾರಕ್ಕೆ ಕಾರಣೀಭೂತವಾದ ಮಾಯೆಯನ್ನು ನಿವೃತ್ತಿಮಾಡಿದರು. ಈ ವಿಷಯಗಳಿಗನುರೂಪವಾಗಿ ಪ್ರಸ್ತಾವನೆಯಲ್ಲಿ ಪ್ರಭುದೇವರು (೧) ಪಿಂಡಸ್ಥಲ (೨) ಪಿಂಡಜ್ಞಾನಸ್ಥಲ (೩) ಸಂಸಾರಹ್ಯೇಯಸ್ಥಲ (೪) ಮಾಯಾವಿಲಾಸ ವಿಡಂಬನಸ್ಥಲ ಎಂಬೀ ನಾಲ್ಕು ಸ್ಥಲಗಳಲ್ಲಿ ಅನೇಕ ಸುಗಮವಾದ ವಚನಗಳಿಂದ ಸಂಸಾರಿಗಳಿಗೆ ಬೋಧೆ ಮಾಡಿರುವರು.

## ೧. ಪಿಂಡಸ್ಥಲ.

ಪ್ರಥಮದಲ್ಲಿ ಪ್ರಭುದೇವರು ಪರಮಾತ್ಮನ ನಿಲವನ್ನು ಕೆಳಗಿನ ವಚನದಲ್ಲಿ ನಿರೂಪಿಸಿದ್ದಾರೆ. ಇದಕ್ಕೆ ಪಿಂಡಸ್ಥಲವೆನ್ನುವರು. ಪಿಂಡವೆಂದರೆ ಜೀವಾತ್ಮನು.

ಕಲ್ಲೊಳಗಣ ಪಾವಕದಂತೆ ಉದಕದೊಳಗಣ ಪ್ರತಿಬಿಂಬ
ದಂತೆ ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಶ್ಶ
ಬ್ದದಂತೆ ಗುಹೇಶ್ವರಾ ನಿಮ್ಮ ನಿಲವನನುಭವ ಸುಖಿ ಬಲ್ಲ॥

ಅಂದರೆ ಪರಶಿವಲಿಂಗವು ನಮ್ಮ ದೇಹದಲ್ಲಿ ಕಣ್ಣಿಗೆ ತೋರದಂತೆ ಅಡಕವಾಗಿದ್ದಾನೆಂಬರ್ಥ. ಆತನ ನಿಲವನ್ನು ಅನುಭಾವಿಯಾದ ಶರಣನೇ ಬಲ್ಲ.

## ೨ ಪಿಂಡಜ್ಞಾನಸ್ಥಲ.

ನಮ್ಮ ಪಿಂಡದಲ್ಲಿ ಶಿವಲಿಂಗವಿರುವದರಿಂದ ನಮ್ಮಲ್ಲಿ ಜ್ಞಾನವು ಹುಟ್ಟಿ ನಾನು ಮಾಂಸಪಿಂಡದವನಲ್ಲ. ಯಾಕೆಂದರೆ ಅದು ಉತ್ಪತ್ತಿ ಸ್ಥಿತಿಲಯಗಳಿಗೆ ಕಾರಣವಾಗಿರುವದು. ಆದರೆ ನಾನು ಬ್ರಹ್ಮಾಂಡಾದಿ

ಸಕಲಪ್ರಪಂಚಗಳು ತೋರುವದಕ್ಕಿಂತ ಮುಂಚಿತವಾಗಿ ಅದಿ ಚಿಚ್ಛಕ್ತಿಯಿಂದ ಹುಟ್ಟಿದೆನೆಂದು ಜೀವಾತ್ಮನಿಗೆ ಅರಿವಾದರೆ ಅಧಕ್ಕೆ ಪಿಂಡಜ್ಞಾನಸ್ಥಲವೆನ್ನುವರು. ನಮ್ಮ ಈ ಜಡದೇಹವು ನಮ್ಮ ತಾಯಿ ತಂದೆಗಳಿಂದಾಗಿರುತ್ತದೆ. ಆದರೆ ಜೀವವು ಪರವಸ್ತುವಿನಿಂದುದಿಸಿ ಅನಾದಿ ಕಾಲದಿಂದಲೂ ಭಿನ್ನ ಭಿನ್ನ ಸಂಸ್ಕಾರವನ್ನು ಹೊಂದುತ್ತ ಕಾಲವಶದಿಂದ ಈ ದೇಹದಲ್ಲಿ ಮನೆಮಾಡಿಕೊಂಡಿರುತ್ತದೆ. ಆದುದರಿಂದ ನಮ್ಮ ದೇಹವು ಹೊಸದಾದರೂ ಜೀವವು ಬಹಳ ಹಳೆಯದಾಗಿರುತ್ತದೆ. ಈ ವಿಷಯದಲ್ಲಿ ಪ್ರಭುದೇವರು ಅಪ್ಪಣೆಕೊಡಿಸಿರುವದೇನಂದರೆ:—

> ಆದಿ ಆಧಾರವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು,
> ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಃಶೂನ್ಯವಿಲ್ಲದಂದು,
> ಸಚರಾಚರವೆಲ್ಲ ರಚನೆಗೆ ಬಾರದಂದು, ಗುಹೇಶ್ವರನ ಶರಣ
> ನುದಯಿಸಿದನಂದು ॥

ಅಂದರೆ ಜೀವಾತ್ಮನು ಈ ದೃಶ್ಯರೂಪೀ ಜಗತ್ತು ಹುಟ್ಟುವದಕ್ಕಿಂತಲೂ ಪೂರ್ವದಲ್ಲಿ ಪರಶಿವಲಿಂಗದಿಂದುದ್ಭವಿಸಿದನೆಂಬರ್ಥ. ಇದನ್ನು ತಿಳಿಯುವದೇ ಪಿಂಡಜ್ಞಾನಸ್ಥಳವು.

ಮಹಾಜ್ಞಾನಿಗಳಾದ ಬಸವಣ್ಣ ಪ್ರಭುದೇವರು ತಾವು ಯುಗಯುಗಾಂತರಗಳ ಹಿಂದೆ ಯಾವ ಯಾವ ಜನ್ಮವನ್ನು ತಾಳುತ್ತ ಬಂದಿರುವರೆಂಬದನ್ನು ಸ್ಮರಿಸಿಕೊಂಡು ವಚನದಲ್ಲಿ ಹೇಳಿದ್ದಾರೆ. ಉದಾಹರಣಾರ್ಥವಾಗಿ ಇಲ್ಲಿ ಪ್ರಭುದೇವರ ವಚನವನ್ನು ಕೊಟ್ಟಿದೆ.

> ಕೃತಯುಗದಲ್ಲಿ ನಾನು ಸ್ಥೂಲಕಾಯ ಗಣೇಶ್ವರನಾಗಿರ್ದೆನಯ್ಯ
> ತ್ರೇತಾಯುಗದಲ್ಲಿ ಶೂನ್ಯಕಾಯ ಗಣೇಶ್ವರನಾಗಿರ್ದೆನಯ್ಯ.
> ದ್ವಾಪಾರಯುಗದಲ್ಲಿ ಅನಿಮಿಷಗಣೇಶ್ವರನಾಗಿರ್ದೆನಯ್ಯಾ
> ಕಲಿಯುಗದಲ್ಲಿ ಅಲ್ಲಮಪ್ರಭ ದೇವರೆಂಬ ಗಣೇಶ್ವರನಾಗಿರ್ದೆ
> ಕಾಣಾ ಗುಹೇಶ್ವರಾ॥

ಮಹಾನುಭಾವರಿಗೆ ಪೂರ್ವಜನ್ಮದ ಅರಿವಿರುವಂತೆ ನಮ್ಮಗಳಿಗಿರುವದಿಲ್ಲ. ಆದುದರಿಂದಲೇ ನಾವು ಆ ಪರವಸ್ತುವಿನಿಂದ ಹುಟ್ಟಿದೆವೆಂಬದು ಗುರುತಿಲ್ಲ.

## ೩ ಸಂಸಾರಹೇಯಸ್ಥಲ.

ಅನಾದಿಗಣೇಶ್ವರತತ್ವವನ್ನು ನಿರೂಪಿಸಿದ ಪ್ರಭುದೇವರು ಆದಿ ಚಿಚ್ಛಕ್ತಿಯಿಂದ ಹುಟ್ಟಿದ ಜೀವಾತ್ಮನು ತನ್ನಿಂದ ಭಿನ್ನವಾದ ಸಂಸಾರಭ್ರಾಂತಿಯನ್ನು ನಿವೃತ್ತಿಮಾಡಬೇಕೆಂದು ಅನೇಕ ವಚನಗಳಲ್ಲಿ ಪ್ರಸ್ತಾಪಿಸಿರುವರು. ಇದಕ್ಕೆ ಸಂಸಾರಹೇಯಸ್ಥಳವೆನ್ನುವರು. ಆ ವಚನಗಳ ತಾತ್ಪರ್ಯವಿಷ್ಟೇ. ಈ ಸಂಸಾರದಲ್ಲಿ ತೊಳಲಾಡುವ ಜೀವಿಗಳು ತಮ್ಮನ್ನು ಹುಟ್ಟಿಸಿದ ಪರಶಿವಲಿಂಗವನ್ನು ಮರೆತುಬಿಟ್ಟಿದ್ದಾರೆ. ದೇಹವೇ ತಾವೆಂದು ತಿಳಿದು ಸುಖದುಃಖಗಳಿಗೀಡಾಗಿದ್ದಾರೆ. ಮೂರ್ತಿಮಂತವಾದ ದೇಹವು ನಶ್ವರವಾದುದೆಂಬದನ್ನರಿಯರು. ಈ ಸಂಸಾರದಲ್ಲಿ ಹುಟ್ಟು ಸಾವುಗಳು ಯಾರನ್ನೂ ಬಿಟ್ಟಿಲ್ಲ. ಸತ್ತ ದನವನ್ನು ತಿನ್ನಬೇಕೆಂದು ನಾಯಿಗಳು ಕಡಿದಾಡುವಂತೆ ಸಂಸಾರ ಜೀವಿಗಳು ತಮ್ಮ ಹೊಟ್ಟೆಯ ಸಲುವಾಗಿ ಪರಸ್ಪರ ಹೋರಾಡುತ್ತಿರುತ್ತವೆ. ಈ ಪ್ರಕಾರ ಅಂಗಸುಖಕ್ಕಾಗಿ ಹಂಬಲಿಸುವ ಸಂಸಾರಿಗಳಿಗೆ ಲಿಂಗದ ಪರಿವೆಯೇ ಇಲ್ಲ. ಸೂತ್ರದ ಬೊಂಬೆಯಂತಿದ್ದ ಈ ದೇಹವನ್ನು ನೆಚ್ಚಿ ಜೀವಿಗಳು ಸೂತ್ರಧಾರನನ್ನೇ ಮರೆದುಬಿಟ್ಟಿರುವರು. ಭೌತಿಕ ಪ್ರಪಂಚದಲ್ಲಿ ಮಾನವೀ ಅಘಟಿತ ಘಟನಾ ಕಾರ್ಯಗಳೇ ಜೀವರುಗಳನ್ನು ದಂಗುಬಡಿಸಿಬಿಟ್ಟಿವೆ. ಈ ಪ್ರಪಂಚದಲ್ಲಿ ದ್ರವ್ಯಲೋಭ, ಅನ್ನದಾಶೆಗಳಿಂದ ಒಬ್ಬರ ಕೊರಳನ್ನೊಬ್ಬರು ಕೊಯ್ಯಲು ಹಿಂದುಮುಂದು ನೋಡಲಾರರು. ದೂರ ದೂರ ವ್ಯಾಪಾರಮಾಡಿ ಜಗತ್ತಿನ ಪೇಟೆಯನ್ನೇ ಹರಣಮಾಡಬೇಕೆನ್ನುವ ದುರಾಶೆಯುಳ್ಳ ಜೀವರು ಅನ್ಯರ ಬಗ್ಗೆ ತಿಲಮಾತ್ರವಾದರೂ ದಯೆಯನ್ನು ತೋರಿಸದಾಗಿದ್ದಾರೆ. ಈ ದೇಹವೆಂಬ ಪಂಜರದಲ್ಲಿ ಜೀವವೆಂಬ ಗಿಳಿಯು ಇಂದ್ರಿಯಂಗಳೆಂಬ ಬೆಕ್ಕುಗಳ ಪಕ್ಕದಲ್ಲಿ ಸಿಕ್ಕು ಪೇಚಾಡುತ್ತಿದೆ. ಇತ್ಯಾದಿ

ಇಂಥ ದುಃಖಮಯವಾದ ಸಂಸಾರದಲ್ಲಿ ಆಸಕ್ತಿಯನ್ನು ತೊರೆದು ನಿರಂತರ ಆ ಪರಶಿವಲಿಂಗದಲ್ಲಿಯೇ ತಲ್ಲೀನ ಮನಸ್ಕರಾಗಿರೆಂದು ಪ್ರಭುದೇವರು ಸಂಸಾರಿಗಳಿಗುಪದೇಶಿಸಿದ್ದಾರೆ.

## ೪ ಮಾಯಾವಿಲಾಸ ವಿಡಂಬನಸ್ಥಲ.

ನಿಃಕಲ ಲಿಂಗವನ್ನು ಮರೆಯಿಸಿ ಸಂಸಾರದಲ್ಲಿ ತೊಡಗಿಸಲಿಕ್ಕೆ ಮಾಯೆಯೇ ಕಾರಣವಾಗಿದೆ. ಆ ಮಾಯೆಯು ಅನೇಕ ಪ್ರಕಾರದ ಸೊಬಗು ಸೌಂದರ್ಯಗಳಿಂದ ಜೀವರುಗಳನ್ನು ಪರಮಾತ್ಮನ ಸನ್ನಿಧಾ

ನವನ್ನು ಬಿಟ್ಟು ಸಂಸಾರಕ್ಕೆಳಿಸುತ್ತದೆ. ಅದು ಕಾರಣ ಸಂಸಾರದಲ್ಲಿ ಹ್ಯೇಯವುಂಟಾದ ಮನುಷ್ಯನು ಪುನಃ ಮಾಯೆಯ ಬಲಿಗೆಂದೂ ಬೀಳಬಾರದು. ಇದಕ್ಕೆ ಮಾಯಾವಿಲಾಸ ವಿಡಂಬನಸ್ಥಲವೆಂಬ ಹೆಸರು. ಮಾಯೆಯ ಸ್ವರೂಪವನ್ನು ಪ್ರಭುದೇವರು ಒಗಟಿನ ರೂಪದಿಂದ ಒಳ್ಳೆ ವಿನೋದಪರವಾಗಿ ಹೇಳಿದ್ದಾರೆ. ಆ ವಚನಗಳ ಮುಖ್ಯಾಂಶವಿಷ್ಟೇ. ಗಂಡಹೆಂಡರಲ್ಲಿ ಪ್ರೇಮವನ್ನು ಹುಟ್ಟಿಸುವದು ಮಾಯೆ; ಮಕ್ಕಳು ಮರಿಗಳನ್ನು ಹಡೆಯಿಸುವದು ಮಾಯೆ; ಮಕ್ಕಳನ್ನು ನುಂಗಿ ತಾಯ್ತಂದೆಗಳನ್ನುಳಿಸುವದು ಮಾಯೆ; ನಿಚ್ಚವಲ್ಲದೀ ದೇಹಕ್ಕೆ ಆಡಂಬರವನ್ನು ಮಾಡಿಸುವದು ಮಾಯೆ; ಸೆರೆ ಸಿಂದಿಯನ್ನು ಕುಡಿಸುವದು ಮಾಯೆ; ಸೂಳೆಯ ಮನೆಗೆ ಮನವೆಳಿಸುವದು ಮಾಯೆ; ಸಕಲ ಭೂಮಂಡಲವ ನಾಶಗೆಯ್ಯುವದು ಮಾಯೆ; ಸತ್ತವರ ಕಂಡು ಕಣ್ಣೀರ ತರಿಸುವದು ಮಾಯೆ; ದೇಹವನ್ನು ಸುಟ್ಟು ಜೀವವನ್ನು ಮೇಲಕ್ಕೆ ಹಾರಿಸುವದು ಮಾಯೆ; ಪಂಚತತ್ವಗಳಿಂದ ಜಗತ್ತಿಗೆ ಅದ್ಭುತವ ಮಾಡಿ ತೋರಿಸುವದು ಮಾಯೆ; ಇಂದ್ರಿಯಂಗಳನ್ನು ಕೋಡಗನಂತೆ ಕುಣಿಸುವದು ಮಾಯೆ; ಕಾಲಯಮನರು ಬಂದು ಹಿಡಿದೆಳೆಯುವಾಗ ಕಣ್ಣುಂಬ ನೀರ ತರಿಸುವದು ಮಾಯೆ; ಭೂಮಿಯಲ್ಲಿ ಕಠಿಣತ್ವ ಆಕಾಶದಲ್ಲಿ ಮೃದುತ್ವವನ್ನಿರಿಸಿತ್ತು ಮಾಯೆ; ಹಸಿವು ತೃಷೆಗಳ ತಾನು ನೆಲಿಸಿತ್ತು ಮಾಯೆ; ತಾನಾರೆಂಬುದನ್ನು ಮರೆಸಿತ್ತು ಮಾಯೆ; ಅಗ್ನಿಜಲಪ್ರಳಯದಿಂದ ಜಗವ ಸೂರೆ ಮಾಡಿತ್ತು ಮಾಯೆ;

ಆದುದರಿಂದ ಇಂಥ ಮಾಯೆಯ ವಿಲಾಸಕ್ಕೆ ಮರುಳಾಗದೆ ಮಾಯಾತೀತನಾದ ಪರವಸ್ತುವನ್ನು ನಂಬಿರೆಂದು ಪ್ರಭುದೇವರು ಹಾಡಿಕೊಂಡಿದ್ದಾರೆ. ಇಲ್ಲಿಗೆ ಪ್ರಸ್ತಾವನೆಯು ಸಮಾಪ್ತ.



# ಭಕ್ತಿ.

೧ ಹೇ ವ್ಯಕ್ತಿಯೇ, ಸುರಿವವಶ್ರುಗಳದೇಕೆ?
ಅವ್ಯಕ್ತನನು ಕಾಣಲೆಂದು ಹಂಬಲಿಕೆ!

೨ ಹಂಬಲದ ಬೆಂಬಲವೆ ಮುಂದರಿವ ದಾರಿ
ಮುಂಬಂದರಿನಿಸಾನು ಕಾಣ ಬಳಿಸಾರಿ!

೩ ಕಾಣನೇ? ಕಾಣೆಯಾ ಕಂಬನಿಗಳನ್ನು?
ಜಾಣನೇ ಪೇಳಿದರ ಗೂಢಾರ್ಥವನ್ನು.

೪ ತುಂಬಿರುವ ಕೊಳದೊಳಗೆ ಹಾರಲೇನೊದಗುವದು?
ಅಂಬುವನಿಗಳು ತುಳುಕಿ ಮೇಲ್ಬರುವವವು ಸಿಡಿದು.

೫ ಎದೆದುಂಬಿ ಕೊರಲ ಸೆರೆಯುಬ್ಬಿರುವದಲ್ತೇ!
ಆದ ನಿನ್ನ ಬಗೆದಿಟ್ಟಗಳು ಪೇಳ್ವವಲ್ತೇ?

೬ ಇಂತಿರಲು ಚಿಂತೆಯೇ? ಲಭಿಸುವದು ಬಗೆವಯಕೆ!
ಅಂತಾದೊಡೆಲ್ಲಿಹುದು ದುಗುಡವದು ಮನ್ಮನಕೆ?

೭ ನಂಬುಗೆಯ ತನಿರಸದಿ ತುಂಬಿರಲು ನಿನ್ನೆದೆಯು
ಕಂಬನಿಗಳೊಸರುವವೆಯುಂಡೊಳಗೆ ಪರನಿಳೆಯೆ?

೮ ದಿಟದಿಟವು! ದಿಟದಿಟವು!! ನೀನೆನ್ನುವದು ದಿಟವು!!!
ಅಟಮಟವ ಮಾತಲ್ಲ? ನಂಬಲೇನೀ ವಚವ?

೯ ನಿನ್ನೊಳಗೆ ನೀ ನೋಡು, ಕಾಣ್ಬುದಾ ಪರವಸ್ತು!
ಮನ್ನಿಸುವೆನೀ ನುಡಿಯ! ನಿನಗೆ ಮಂಗಳಮಸ್ತು!

೧೦ ಕೇಳ್ವ ದನಿಯೇ ಕೊನೆಗೆ ಹೊಳೆವ ಬೆಳಕಾಯ್ತು!
ಹೇಳ್ವ ದನಿಯುದರೊಳಗೆ ಬೆರೆದು ಬಯಲಾಯ್ತು!

ಈಶ್ವರ ಸಣಕಲ್ಲ.

# ಬಾಹ್ಯ ಅಷ್ಟಾವರಣಗಳು.

ಅಷ್ಟಾವರಣಗಳೆಂದರೆ ಎಂಟು ಕವಚಗಳು ಅಥವಾ ಹೊದಿಕೆಗಳು. ಅವು ನಮ್ಮನ್ನು ಪಾಪದಿಂದಲೂ ಅಪವಿತ್ರತೆಯಿಂದಲೂ ರಕ್ಷಿಸುತ್ತವೆ. ನಮ್ಮಲ್ಲಿ ಸ್ವಚ್ಛತೆ, ಆರೋಗ್ಯ, ಪವಿತ್ರತೆಗಳುಂಟಾಗಬೇಕಾದರೆ ಅಷ್ಟಾವರಣಗಳು ಒಳ್ಳೆ ಸಾಧನಗಳಾಗಿವೆ. ಮೊದಮೊದಲು ಆರೋಗ್ಯದ ನಿಮಿತ್ತ ನಿರ್ಮಿತವಾಗಿ ಕೊನೆಗೆ ಅಷ್ಟಾವರಣಗಳು ಆಧ್ಯಾತ್ಮಿಕ ವಿಕಾಸಕ್ಕೆ ಸಾಧನೀಭೂತವಾದವು. ನಮ್ಮ ಪೂರ್ವಜರು ಏನೋ ಅಂಗರಕ್ಷಣೆ ಶರೀರಶೋಭೆಗಳಿಗೆಂದು ಮಾಡಿಕೊಂಡ ವಸ್ತುಗಳೇ ಮುಂದೆ ಉತ್ಕ್ರಾಂತಿವಶದಿಂದ ಆಧ್ಯಾತ್ಮಿಕದ ಚಿಹ್ನಗಳಾಗಿ ಪರಿಣಮಿಸಿದವು. ಆ ಅಷ್ಟಾವರಣಗಳಾವವೆಂದರೆ:— (೧) ಗುರು (೨) ಲಿಂಗ (೩) ಜಂಗಮ (೪) ಪಾದೋದಕ (೫) ಪ್ರಸಾದ (೬) ವಿಭೂತಿ (೭) ರುದ್ರಾಕ್ಷಿ (೮) ಮಂತ್ರ.

ತಾನು ಸದಾಚಾರಸಂಪನ್ನನೂ ಸುಜ್ಞಾನಪರಿಪೂರ್ಣನೂ ಎಂದು ದೈವದವರಿಂದ ಅನುಜ್ಞೆಹೊಂದಿದವನಾಗಿ ಅವರಿಂದ ಒಂದು ವಿಧದ ಸಂಸ್ಕಾರವನ್ನು ಹೊಂದಿ ತನ್ನ ಭಕ್ತಾದಿಗಳಲ್ಲಿ ಸ್ವಚ್ಛತೆ, ಆರೋಗ್ಯ, ಪರಿಶುದ್ಧತೆಗಳು ನೆಲೆಗೊಳ್ಳಲೆಂದು ಅವರಂಗದ ಮೇಲೆ ಲಿಂಗಧಾರಣ ಮಾಡಿ ನಿತ್ಯಾಚರಣೆಗಳನ್ನು ಪರಿಶುದ್ಧವಾಗಿಟ್ಟುಕೊಳ್ಳುವಂತೆ ಉಪದೇಶ ಮಾಡುವವನೇ ಗುರುವು.

ಎಲ್ಲೆಡೆಯಲ್ಲಿಯೂ ಅಡಕವಾಗಿರುವ ಪರವಸ್ತುವು ನಮ್ಮಲ್ಲಿಯೂ ಇದೆಯೆಂಬುವದನ್ನು ತೋರ್ಪಡಿಸಲಿಕ್ಕೆ ನಮ್ಮ ದೇಹವೆಂಬೀ ದೇಗುಲದಲ್ಲಿ ಶ್ರೀ ಸದ್ಗುರುವಿನ ಹಸ್ತದಿಂದ ವಿಧಾನಪೂರ್ವಕವಾಗಿ ಸ್ಥಾಪಿತವಾದ ಚಿಹ್ನವೇ ಲಿಂಗವು.

ಜಗತ್ತಿನೊಳಗಿನ ಪಾಪಹಿಂಸಾದಿ ಕಾರ್ಯಗಳನ್ನು ತಗ್ಗಿಸಿ ಪತಿತರನ್ನು ಪುನೀತರನ್ನಾಗಿ ಮಾಡಲಿಕ್ಕೆ ಸಂಚರಿಸುವ ಮಹಾಮಹಿಮನೇ ಜಂಗಮನು.

ನಾವು ಪ್ರತಿನಿತ್ಯ ಸೇವಿಸುವ ನೀರಿಗೆ ನಮ್ಮ ಕರಣವೃತ್ತಿಗಳಡಗಲೆಂದು ಸಂಸ್ಕಾರ ವಿಶೇಷದಿಂದ ಒಂದು ದಿವ್ಯಸ್ವರೂಪವನ್ನು ಕೊಟ್ಟು ಸಿದ್ಧಪಡಿಸಿದ ಜಲವೇ ಪಾದೋದಕವು.

ನಾವು ಊಟಮಾಡುವ ಆಹಾರದಲ್ಲಿ ಸಹ ಸಂಸ್ಕಾರ ವಿಶೇಷದಿಂದ ಒಂದು ತರಹದ ಶಿವಕಳೆಯನ್ನು ತುಂಬಿ ಆ ಭಾವವು ಬಲಿದು ಮನಸ್ಸಿನ ಪವಿತ್ರತೆಯಿಂದ ಸ್ವೀಕರಿಸುವ ಆಹಾರವೇ ಪ್ರಸಾದವು.

ನಮ್ಮ ಮೈಗೆ ಚಳಿಯು ತಗಲಬಾರದೆಂದೂ ಮೈಯೊಳಗಿನ ಉಷ್ಣತೆಯು ಹೊರಗೆ ಹೋಗಬಾರದೆಂದೂ ತಿಳಿದು ಮೈಗೆ ತೊಡೆದುಕೊಳ್ಳುವ ಬೂದಿಯನ್ನು ಒಂದು ವಿಧಾನದಿಂದ ಪವಿತ್ರೀಕರಿಸಿ ಅದನ್ನೇ ಭಕ್ತಿಭಾವನೆಯಿಂದ ಸರ್ವಾಂಗಕ್ಕೂ ಲೇಪಿಸಿಕೊಂಡರೆ ಅದೇ ವಿಭೂತಿಯೆನಿಸುತ್ತದೆ.

ತನ್ನ ದೇಹವು ಶೋಭಾಯಮಾನವಾಗಿ ಕಾಣಲೆಂದು ಒಂದಾನೊಂದು ಕಾಲದಲ್ಲಿ ನಮ್ಮ ಪೂರ್ವಜರು ಧರಿಸಿಕೊಳ್ಳುತ್ತಿದ್ದ ಗಿಡದ ಕಾಯಿಗಳನ್ನೇ ಕಾಲಾಂತರದಿಂದ ಸಂಸ್ಕಾರಮಾಡಿ ಅವು ಪರಮಪವಿತ್ರ ವಸ್ತುಗಳೆಂದು ಧರಿಸುತ್ತ ಬಂದರು. ಇವೇ ರುದ್ರಾಕ್ಷಿಗಳು.

ಗುಪ್ತವಾಗಿಟ್ಟ ಮಾತಿನಲ್ಲಾಗಲಿ ವಸ್ತುವಿನಲ್ಲಾಗಲಿ ಮಹತ್ವವು ಹೆಚ್ಚಾಗಿರುತ್ತದೆಂಬ ತತ್ವವನ್ನೊಳಕೊಂಡ ಪಂಚಾಕ್ಷರೀ ಮತ್ತು ಷಡಕ್ಷರೀ ಮಂತ್ರಗಳನ್ನು ಬಹುದಿವಸಗಳಿಂದ ನಮ್ಮ ಹಿರಿಯರು ಗುಪ್ತವಾಗಿಡುತ್ತ ಬಂದಿದ್ದಾರೆ. ಗೌಪ್ಯವಾಗಿಟ್ಟ ಅಪಾರ ಶಕ್ತಿಯುಳ್ಳ ಶಬ್ದವೇ ಮಂತ್ರವೆನಿಸುತ್ತದೆ.

ಜನರಲ್ಲಿ ಶ್ರದ್ಧಾ ಭಾವನೆಗಳನ್ನು ಬೆಳೆಯಿಸಲಿಕ್ಕೆ ಸಂಸ್ಕಾರಗಳ ಉತ್ಪತ್ತಿಯಾಯಿತು. ನಿಷ್ಠೆಯಿಂದ ಅಷ್ಟಾವರಣಗಳನ್ನನುಸರಿಸಿ ನಡೆದರೆ ನಿಜವಾಗಿಯೂ ನಮ್ಮ ರಕ್ಷಣೆಯಾಗುವದು.

## ಗುರು.

ನಮ್ಮೀ ವೀರಶೈವ ಧರ್ಮವು ಆಗಮದಿಂದ ಪ್ರತಿಪಾದಿತವಾಗಿದೆ. ಆಗಮಕಾಲದಲ್ಲಿ ನಮ್ಮ ಯೋಗಿವರೇಣ್ಯರು ಅಡವಿಯಲ್ಲಿ ವಾಸಮಾಡಿ ಭಕ್ತಿವಹಿಸಿ ಬಂದಂಥ ಶಿಷ್ಯರಿಗೆ ಲಿಂಗಧಾರಣಮಾಡಿ ಅವರಿಗೆ ಲಿಂಗಾಂಗ ಸಾಮರಸ್ಯಜ್ಞಾನವನ್ನುಂಟುಮಾಡಿಕೊಡುತ್ತಿದ್ದರು. ಇಂಥ ಶುದ್ಧಾಚಾರ ಸಂಪನ್ನರಿಗೇ ಗುರುಗಳೆಂಬ ಸಂಜ್ಞೆಯಿದ್ದಿತು. ಈ ಮೇರೆಗೆ ಸಹಸ್ರಾರು ವರ್ಷಗಳು ಗತಿಸಿದಮೇಲೆ ೧೨ ನೆಯ ಶತಮಾನದಲ್ಲಿ ಬಸವಾದಿ ಪ್ರಮಥರು ಈ ಧರ್ಮದಲ್ಲಿ ಒಳ್ಳೆ ಉತ್ಕ್ರಾಂತಿಯನ್ನು ನೆಲೆಗೊಳಿಸಿದರು.

ಅರಣ್ಯದಲ್ಲಿ ಮೃಗಗಳಂತೆ ವಾಸಮಾಡಿ ತತ್ವೋಪದೇಶ ಮಾಡುವದಕ್ಕಿಂತಲೂ ಊರಲ್ಲಿಯೇ ಇದ್ದುಕೊಂಡು ನಾನಾ ತರಹದ ಕಾಯಕಗಳನ್ನು ಮಾಡಿ ತತ್ವೋಪದೇಶವನ್ನು ಮಾಡಲಿಕ್ಕೆ ಬರುತ್ತದೆಂಬ ಮಾತನ್ನು ಶಿವಾನುಭವ ಮಂಟಪವನ್ನು ಪ್ರಸ್ಥಾಪಿಸಿ ಉದಾಹರಣೆ ಹಾಕಿಕೊಟ್ಟರು. ಅಂದಿನಿಂದ ಗುರುಗಳ ವಾಸವು ಅರಣ್ಯವನ್ನು ಬಿಟ್ಟು ಊರನ್ನು ಸೇರಿತು. ಶ್ರೀ ಬಸವಾದಿ ಪ್ರಮಥರ ದಿವ್ಯ ತತ್ವಗಳಿಗೆ ಬೆರಗಾಗಿ ಅವರ ಕಾಲದಲ್ಲಿ ವೈಷ್ಣವ, ಶೈವ, ಆರಾಧ್ಯ ಮೊದಲಾದ ಬ್ರಾಹ್ಮಣರು ವೀರಶೈವ ದೀಕ್ಷೆಯನ್ನು ಹೊಂದಿ ವೀರಶೈವ ಮತವನ್ನು ಪ್ರಸಾರಮಾಡುತ್ತಿಂಲು ಬಸವಣ್ಣನವರ ಕಾಲಕ್ಕೆ ಶಿವಾನುಭವ ಮಂಟಪವೇ ಗುರುಪೀಠವಾಗಿದ್ದಿತು. ಅಲ್ಲಲ್ಲಿ ಪ್ರಚಾರಕ ಕಾರ್ಯಗಳು ಸ್ವಲ್ಪ ಪ್ರಮಾಣದಿಂದ ನಡೆದಿದ್ದವು. ಬಸವಾದಿ ಪ್ರಮಥರು ಗತಿಸಿದ ನೂರಾರು ವರ್ಷದೊಳಗೆ ವೀರಶೈವ ಧರ್ಮವು ಸಮಾಜ ಸ್ವರೂಪವನ್ನು ಹೊಂದಿತು. ಅನಂತರ ಕ್ರಮಯುಕ್ತವಾದ ಸಿಂಹಾಸನಗಳು ಗುರುಪೀಠಗಳಾದವು.

ನಮ್ಮ ಧರ್ಮವು ಸಮಾಜದ ಸ್ವರೂಪವನ್ನು ಹೊಂದಿದ ಬಳಿಕ ಜನತೆಯ ಶಿಕ್ಷಣ, ಧರ್ಮಕಾರ್ಯ, ತತ್ವಜ್ಞಾನಗಳ ಬಗ್ಗೆ ನಮ್ಮ ಧರ್ಮೋದ್ಧಾರಕರು ಲಕ್ಷಕೊಡಬೇಕಾಯಿತು. ಅದಕ್ಕನುಗುಣವಾಗಿ ಶಿಕ್ಷಾಗುರು, ದೀಕ್ಷಾಗುರು, ಮೋಕ್ಷಾಗುರುಗಳ ಯೋಜನೆಯುಂಟಾಯಿತು. ಶಿಕ್ಷಾಗುರುವೆಂದರೆ ಸಮಾಜದ ಶಿಕ್ಷಣಕಾರ್ಯವನ್ನು ನೋಡಿಕೊಳ್ಳುವವನು. ದೀಕ್ಷಾಗುರುವೆಂದರೆ ಸಮಾಜದಲ್ಲಿ ಜನನ ಸಂಸ್ಕಾರ ಲಿಂಗಧಾರಣ, ವಿವಾಹ, ಅಂತ್ಯವಿಧಿ ಮೊದಲಾದ ಧಾರ್ಮಿಕ ಕಾರ್ಯಗಳನ್ನು ನೋಡಿಕೊಳ್ಳತಕ್ಕವನು. ಮೋಕ್ಷಾಗುರುವೆಂದರೆ ವೀರಶೈವ ಧರ್ಮದ ಉದಾತ್ತ ತತ್ವವಾದ ಲಿಂಗಾಂಗ ಸಾಮರಸ್ಯದ ಜ್ಞಾನವನ್ನು ಜಿಜ್ಞಾಸುಗಳಿಗೆ ತಿಳಿಸಿಕೊಡತಕ್ಕಂಥವರು. ಈ ಮೂರು ತರಹದ ಗುರುಗಳಿಗೆ ಭಕ್ತರು ತಮ್ಮ ಊರುಗಳಲ್ಲಿ ಮಠಗಳನ್ನು ಕಟ್ಟಿಸಿಕೊಟ್ಟು ಅವರನ್ನು ಆರ್ಯರು ಅಥವಾ ಅಯ್ಯನವರೆಂಬ ಬಹುಮಾನವಾಚಕ ಶಬ್ದದಿಂದ ಕರೆಯಹತ್ತಿದರು. ಮುಂದೆ ಬರಬರುತ್ತ ಈ ಅಯ್ಯಗಳದೊಂದು ಜಾತಿಯೇ ಆಯಿತು. ಗುಣಯೋಗ್ಯತೆಗಳಿಗೆ ಸಲ್ಲುವ ಗೌರವವು ಜಾತಿಗೆ ಸಲ್ಲಲಾರಂಭಿಸಿತು.

ನಮ್ಮ ಸಮಾಜದಲ್ಲಿ ಜನ್ಮಾಧಿಕಾರದಿಂದ ಗುರುವಾಗಬೇಕೆಂದು ಶಾಸ್ತ್ರವಿಲ್ಲ. ಯೋಗ್ಯನಾದ ಗುರುವು ಸಮಾಜದಿಂದ ಆರಿಸಲ್ಪಡುತ್ತಾನೆ.

ನಾವು ಊಟಮಾಡುವ ಆಹಾರದಲ್ಲಿ ಸಹ ಸಂಸ್ಕಾರ ವಿಶೇಷ ದಿಂದ ಒಂದು ತರಹದ ಶಿವಕಳೆಯನ್ನು ತುಂಬಿ ಆ ಭಾವವು ಬಲಿದು ಮನಸ್ಸಿನ ಪವಿತ್ರತೆಯಿಂದ ಸ್ವೀಕರಿಸುವ ಆಹಾರವೇ ಪ್ರಸಾದವು.

ನಮ್ಮ ಮೈಗೆ ಚಳಿಯು ತಗಲಬಾರದೆಂದೂ ಮೈಯೊಳಗಿನ ಉಷ್ಣ ತೆಯು ಹೊರಗೆ ಹೋಗಬಾರದೆಂದೂ ತಿಳಿದು ಮೈಗೆ ತೊಡೆದುಕೊ ಳ್ಳುವ ಬೂದಿಯನ್ನು ಒಂದು ವಿಧಾನದಿಂದ ಪವಿತ್ರೀಕರಿಸಿ ಅದನ್ನೇ ಭಕ್ತಿ ಭಾವನೆಯಿಂದ ಸರ್ವಾಂಗಕ್ಕೂ ಲೇಪಿಸಿಕೊಂಡರೆ ಅದೇ ವಿಭೂತಿಯೆನಿ ಸುತ್ತದೆ.

ತನ್ನ ದೇಹವು ಶೋಭಾಯಮಾನವಾಗಿ ಕಾಣಲೆಂದು ಒಂದಾ ನೊಂದು ಕಾಲದಲ್ಲಿ ನಮ್ಮ ಪೂರ್ವಜರು ಧರಿಸಿಕೊಳ್ಳುತ್ತಿದ್ದ ಗಿಡದ ಕಾಯಿಗಳನ್ನೇ ಕಾಲಾಂತರದಿಂದ ಸಂಸ್ಕಾರಮಾಡಿ ಅವು ಪರಮಪವಿತ್ರ ವಸ್ತುಗಳೆಂದು ಧರಿಸುತ್ತ ಬಂದರು. ಇವೇ ರುದ್ರಾಕ್ಷಿಗಳು.

ಗುಪ್ತವಾಗಿಟ್ಟ ಮಾತಿನಲ್ಲಾಗಲಿ ವಸ್ತುವಿನಲ್ಲಾಗಲಿ ಮಹತ್ವವು ಹೆಚ್ಚಾಗಿರುತ್ತದೆಂಬ ತತ್ವವನ್ನೊಳಕೊಂಡ ಪಂಚಾಕ್ಷರೀ ಮತ್ತು ಷಡ ಕ್ಷರೀ ಮಂತ್ರಗಳನ್ನು ಬಹುದಿವಸಗಳಿಂದ ನಮ್ಮ ಹಿರಿಯರು ಗುಪ್ತವಾ ಗಿಡುತ್ತ ಬಂದಿದ್ದಾರೆ. ಗೌಪ್ಯವಾಗಿಟ್ಟ ಅಪಾರ ಶಕ್ತಿಯುಳ್ಳ ಶಬ್ದವೇ ಮಂತ್ರವೆನಿಸುತ್ತದೆ.

ಜನರಲ್ಲಿ ಶ್ರದ್ಧಾ ಭಾವನೆಗಳನ್ನು ಬೆಳೆಯಿಸಲಿಕ್ಕೆ ಸಂಸ್ಕಾರಗಳ ಉತ್ಪತ್ತಿಯಾಯಿತು. ನಿಷ್ಠೆಯಿಂದ ಅಷ್ಟಾವರಣಗಳನ್ನನುಸರಿಸಿ ನಡೆ ದರೆ ನಿಜವಾಗಿಯೂ ನಮ್ಮ ರಕ್ಷಣೆಯಾಗುವದು.

## ಗುರು.

ನಮ್ಮೀ ವೀರಶೈವ ಧರ್ಮವು ಆಗಮದಿಂದ ಪ್ರತಿಪಾದಿತವಾಗಿದೆ. ಆಗಮಕಾಲದಲ್ಲಿ ನಮ್ಮ ಯೋಗಿವರೇಣ್ಯರು ಅಡವಿಯಲ್ಲಿ ವಾಸಮಾಡಿ ಭಕ್ತಿವಹಿಸಿ ಬಂದಂಥ ಶಿಷ್ಯರಿಗೆ ಲಿಂಗಧಾರಣಮಾಡಿ ಅವರಿಗೆ ಲಿಂಗಾಂಗ ಸಾಮರಸ್ಯಜ್ಞಾನವನ್ನುಂಟುಮಾಡಿಕೊಡುತ್ತಿದ್ದರು. ಇಂಥ ಶುದ್ಧಾಚಾರ ಸಂಪನ್ನರಿಗೇ ಗುರುಗಳೆಂಬ ಸಂಜ್ಞೆಯಿದ್ದಿತು. ಈ ಮೇರೆಗೆ ಸಹಸ್ರಾರು ವರ್ಷಗಳು ಗತಿಸಿದಮೇಲೆ ೧೨ ನೆಯ ಶತಮಾನದಲ್ಲಿ ಬಸವಾದಿ ಪ್ರಮ ಥರು ಈ ಧರ್ಮದಲ್ಲಿ ಒಳ್ಳೆ ಉತ್ಕ್ರಾಂತಿಯನ್ನು ನೆಲೆಗೊಳಿಸಿದರು.

ಅರಣ್ಯದಲ್ಲಿ ಮೃಗಗಳಂತೆ ವಾಸಮಾಡಿ ತತ್ತ್ವೋಪದೇಶ ಮಾಡುವದಕ್ಕಿಂತಲೂ ಊರಲ್ಲಿಯೇ ಇದ್ದುಕೊಂಡು ನಾನಾ ತರಹದ ಕಾಯಕಗಳನ್ನು ಮಾಡಿ ತತ್ತ್ವೋಪದೇಶವನ್ನು ಮಾಡಲಿಕ್ಕೆ ಬರುತ್ತದೆಂಬ ಮಾತನ್ನು ಶಿವಾನುಭವ ಮಂಟಪವನ್ನು ಪ್ರಸ್ಥಾಪಿಸಿ ಉದಾಹರಣೆ ಹಾಕಿಕೊಟ್ಟರು. ಅಂದಿನಿಂದ ಗುರುಗಳ ವಾಸವು ಅರಣ್ಯವನ್ನು ಬಿಟ್ಟು ಊರನ್ನು ಸೇರಿತು. ಶ್ರೀ ಬಸವಾದಿ ಪ್ರಮಥರ ದಿವ್ಯ ತತ್ತ್ವಗಳಿಗೆ ಬೆರಗಾಗಿ ಅವರ ಕಾಲದಲ್ಲಿ ವೈಷ್ಣವ, ಶೈವ, ಆರಾಧ್ಯ ಮೊದಲಾದ ಬ್ರಾಹ್ಮಣರು ವೀರಶೈವ ದೀಕ್ಷೆಯನ್ನು ಹೊಂದಿ ವೀರಶೈವ ಮತವನ್ನು ಪ್ರಸಾರಮಾಡುತ್ತಿರಲು ಬಸವಣ್ಣನವರ ಕಾಲಕ್ಕೆ ಶಿವಾನುಭವ ಮಂಟಪವೇ ಗುರುಪೀಠವಾಗಿದ್ದಿತು. ಅಲ್ಲಲ್ಲಿ ಪ್ರಚಾರಕ ಕಾರ್ಯಗಳು ಸ್ವಲ್ಪ ಪ್ರಮಾಣದಿಂದ ನಡೆದಿದ್ದವು. ಬಸವಾದಿ ಪ್ರಮಥರು ಗತಿಸಿದ ನೂರಾರು ವರ್ಷದೊಳಗೆ ವೀರಶೈವ ಧರ್ಮವು ಸಮಾಜ ಸ್ವರೂಪವನ್ನು ಹೊಂದಿತು. ಅನಂತರ ಕ್ರಮಯುಕ್ತವಾದ ಸಿಂಹಾಸನಗಳು ಗುರುಪೀಠಗಳಾದವು.

ನಮ್ಮ ಧರ್ಮವು ಸಮಾಜದ ಸ್ವರೂಪವನ್ನು ಹೊಂದಿದ ಬಳಿಕ ಜನತೆಯ ಶಿಕ್ಷಣ, ಧರ್ಮಕಾರ್ಯ, ತತ್ವಜ್ಞಾನಗಳ ಬಗ್ಗೆ ನಮ್ಮ ಧರ್ಮೋದ್ಧಾರಕರು ಲಕ್ಷಕೊಡಬೇಕಾಯಿತು. ಆದಕ್ಕನುಗುಣವಾಗಿ ಶಿಕ್ಷಾಗುರು, ದೀಕ್ಷಾಗುರು, ಮೋಕ್ಷಾಗುರುಗಳ ಯೋಜನೆಯುಂಟಾಯಿತು. ಶಿಕ್ಷಾಗುರುವೆಂದರೆ ಸಮಾಜದ ಶಿಕ್ಷಣಕಾರ್ಯವನ್ನು ನೋಡಿಕೊಳ್ಳುವವನು. ದೀಕ್ಷಾಗುರುವೆಂದರೆ ಸಮಾಜದಲ್ಲಿ ಜನನ ಸಂಸ್ಕಾರ ಲಿಂಗಧಾರಣ, ವಿವಾಹ, ಅಂತ್ಯವಿಧಿ ಮೊದಲಾದ ಧಾರ್ಮಿಕ ಕಾರ್ಯಗಳನ್ನು ನೋಡಿಕೊಳ್ಳತಕ್ಕವನು. ಮೋಕ್ಷಾಗುರುವೆಂದರೆ ವೀರಶೈವ ಧರ್ಮದ ಉದಾತ್ತ ತತ್ವವಾದ ಲಿಂಗಾಂಗ ಸಾಮರಸ್ಯದ ಜ್ಞಾನವನ್ನು ಜಿಜ್ಞಾಸುಗಳಿಗೆ ತಿಳಿಸಿಕೊಡತಕ್ಕಂಥವರು. ಈ ಮೂರು ತರಹದ ಗುರುಗಳಿಗೆ ಭಕ್ತರು ತಮ್ಮ ಊರುಗಳಲ್ಲಿ ಮಠಗಳನ್ನು ಕಟ್ಟಿಸಿಕೊಟ್ಟು ಅವರನ್ನು ಆರ್ಯರು ಅಥವಾ ಅಯ್ಯನವರೆಂಬ ಬಹುಮಾನವಾಚಕ ಶಬ್ದದಿಂದ ಕರೆಯಹತ್ತಿದರು. ಮುಂದೆ ಬರಬರುತ್ತ ಈ ಅಯ್ಯಗಳದೊಂದು ಜಾತಿಯೇ ಆಯಿತು. ಗುಣಯೋಗ್ಯತೆಗಳಿಗೆ ಸಲ್ಲುವ ಗೌರವವು ಜಾತಿಗೆ ಸಲ್ಲಲಾರಂಭಿಸಿತು.

ನಮ್ಮ ಸಮಾಜದಲ್ಲಿ ಜನ್ಮಾಧಿಕಾರದಿಂದ ಗುರುವಾಗಬೇಕೆಂದು ಶಾಸ್ತ್ರವಿಲ್ಲ. ಯೋಗ್ಯನಾದ ಗುರುವು ಸಮಾಜದಿಂದ ಆರಿಸಲ್ಪಡುತ್ತಾನೆ.

ಆದರೆ ಕಾಲಾನುರೋಧದಿಂದ ಗುರುಗಳನ್ನು ಆರಿಸುವ ಪರಿಪಾಟು ನಿಂತು ಗುರುಸಂತತಿಯವರಿಗೆ ಗುರುಗಳೆಂದು ಕರೆಯುವ ಸಾಂಪ್ರದಾಯವುಂಟಾಯಿತು. ಅದಕ್ಕೆ ದೈವದವರು ಅಂಧಶ್ರದ್ಧೆಯಿಂದ ಒಪ್ಪಿಗೆಯನ್ನು ಕೊಡುತ್ತ ಬಂದರು. ಈ ರೂಢಾಚಾರವೇನೂ ನಿರಂಕುಶ ಪ್ರಭುತ್ವದ ಸೊತ್ತಲ್ಲ. ಸಮಾಜದವರಿಗೆ ತಮಗೆ ಯುಕ್ತ ಕಂಡವರನ್ನು ಗುರುಗಳನ್ನು ಮಾಡಿಕೊಳ್ಳಲು ಸರ್ವಾಧಿಕಾರವಿದೆ.

## ಲಿಂಗ.

ಶೈವ ಧರ್ಮದಿಂದಲೇ ವೀರಶೈವ ಧರ್ಮವು ಉತ್ಕ್ರಾಂತಿಯನ್ನು ಹೊಂದಿದೆಯೆಂಬದನ್ನು ತೋರಿಸಲಿಕ್ಕೆ ಲಿಂಗವು ಒಳ್ಳೆ ದೃಷ್ಟಾಂತವಾಗಿದೆ. ಗುಡಿಗುಂಡಾರಗಳಲ್ಲಿ ಕಂಡುಬರುವ ಸ್ಥಾವರ ಲಿಂಗಾಕಾರದ ಪೀಠಕಗಳ ಮೇಲೆ ಕಾಂತಿಯನ್ನು ಕೂಡ್ರಿಸಿ ಅದಕ್ಕೆ ಲಿಂಗವೆಂದು ಹೆಸರಿಟ್ಟರು. ಶೈವಧರ್ಮವು ಸ್ಥಾವರಲಿಂಗ ಪೂಜೆಯನ್ನು ಪ್ರತಿಪಾದಿಸುತ್ತದೆ. ವೀರಶೈವ ಧರ್ಮವು ಇಷ್ಟಲಿಂಗ ಪೂಜೆಯನ್ನು ಪ್ರತಿಪಾದಿಸುತ್ತದೆ. ಗುಡಿಯಲ್ಲಿರುವ ಒಬ್ಬ ದೇವರನ್ನು ಎಲ್ಲರೂ ಸರಿಯಾಗಿ ಪೂಜೆ ಪುನಸ್ಕಾರಗಳನ್ನು ಮಾಡಲಿಕ್ಕೆ ತೊಂದರೆಯಾಗುವದೆಂದು ತಿಳಿದು ಲಿಂಗಧಾರಣೆಯ ಶೋಧವನ್ನು ನಮ್ಮ ಆರ್ಯರು ಪ್ರಚಾರದಲ್ಲಿ ತಂದರು. ತನ್ನ ಮೈಮೇಲಿರುವ ದೇವರನ್ನು ತಾನು ಬೇಕಾದಷ್ಟುಸಾರೆ ಸ್ವತಂತ್ರತೆಯಿಂದ ಪೂಜಿಸಲು ಯಾರ ಆಕ್ಷೇಪವೂ ಇಲ್ಲ. ತಮ್ಮ ದೇವರನ್ನು ದೇಹದ ಮೇಲೆ ಧರಿಸಿಕೊಂಡು ತಿರುಗಾಡುವ ವ್ಯಕ್ತಿಗಳು ಜಗತ್ತಿನಲ್ಲಿ ವೀರಶೈವರೊಬ್ಬರೇ. ವೀರಶೈವರಲ್ಲಿ ಲಿಂಗಧಾರಣೆಗೆ ಹೆಣ್ಣುಗಂಡೆಂಬ ಭೇದಭಾವವಿಲ್ಲ. ಈ ಲಿಂಗ ಧಾರಣ ಶೋಧದಿಂದ ಪ್ರತಿಯೊಂದು ವ್ಯಕ್ತಿಗೆ ಆತ್ಮವಿಕಾಸಮಾಡಿಕೊಳ್ಳಲು ಬೇಕಾದಷ್ಟು ಆಸ್ಪದವಿರುತ್ತದೆ.

ಲಿಂಗವು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವೆಂದು ತ್ರಿವಿಧವಾಗಿರುವದು. ಇಷ್ಟಲಿಂಗವನ್ನು ಈ ಸ್ಥೂಲತನುವಿನ ಮೇಲೆ ಧರಿಸುತ್ತಾರೆ. ಪ್ರಾಣಲಿಂಗವನ್ನು ಸೂಕ್ಷ್ಮತನುವಿಗೆ ಧರಿಸುತ್ತಾರೆ. ಭಾವಲಿಂಗವನ್ನು ಕಾರಣ ಶರೀರಕ್ಕೆ ಧರಿಸುತ್ತಾರೆ. ಇಷ್ಟಲಿಂಗ ಪೂಜೆಯಿಂದ ಆಣವ ಮಲವು ನಾಶವಾಗುತ್ತದೆ. ಪ್ರಾಣಲಿಂಗ ಪೂಜೆಯಿಂದ ಮಾಯಾ ಮಲವು ನಷ್ಟವಾಗುವದು. ಭಾವಲಿಂಗ ಪೂಜೆಯಿಂದ ಕಾರ್ಮಿಕ ಮಲವು ಪರಿಹಾರವಾಗುವದು. ಒಟ್ಟಿನ ಮೇಲೆ ಇಷ್ಟಲಿಂಗದಿಂದ ನಮ್ಮ ತನುವು

ಶುದ್ಧವಾಗುತ್ತದೆ. ಪ್ರಾಣಲಿಂಗದಿಂದ ನಮ್ಮ ಮನವು ಪವಿತ್ರವಾಗುತ್ತದೆ. ಭಾವಲಿಂಗದಿಂದ ನಮ್ಮ ಭಾವವು ಪರಿಶುದ್ಧವಾಗುತ್ತದೆ. ತನು ಮನ ಭಾವಗಳನ್ನು ಪರಿಶುದ್ಧಗೊಳಿಸುವದಕ್ಕಾಗಿಯೇ ಲಿಂಗತ್ರಯಗಳ ಯೋಜನೆಯನ್ನು ಮಾಡಿದ್ದಾರೆ. ಇಷ್ಟಲಿಂಗ ಧರಿಸಿದವನು ನಿತ್ಯ ಸ್ನಾನ ಪೂಜಾದಿಗಳಿಂದ ತನ್ನ ತನುವನ್ನು ಸ್ವಚ್ಛವಾಗಿಟ್ಟುಕೊಳ್ಳುವನು ಅದರಿಂದ ಅವನ ದೇಹದ ಹೊಲಸು ಅಥವಾ ಆಣವ ಮಲವು ನಷ್ಟವಾಗುವದು. ಪ್ರಾಣಲಿಂಗಧಾರಿಯು ನಿರಂತರ ಪ್ರಾಣಲಿಂಗಾನುಸಂಧಾನದಲ್ಲಿರುವದರಿಂದ ಬಹುಕಾಲದಿಂದ ಬಂದ ರಕ್ತ ಸಂಬಂಧದ ದೋಷಗಳೆಲ್ಲ ಅಡಗಿ ಹೋಗುವವು. ಅಂದರೆ ಅವನ ಮಾಯಾ ಮಲವು ನಾಶವಾಗುವದು. ಭಾವಲಿಂಗ ಪರಾಯಣನು ತನ್ನ ಭಾವ ನೈರ್ಮಲ್ಯದಿಂದ ಹಿಂದಣ ಜನ್ಮದ ಪಾಪದ ಫಲಗಳನ್ನು ಅನುಭವಿಸುವದಿಲ್ಲ. ಅಗ್ನಿಯಿಂದ ಕಾಷ್ಠವು ಸುಟ್ಟು ಭಸ್ಮವಾಗುವಂತೆ ಭಾವಪರಿಶುದ್ಧತೆಯಿಂದ ಪ್ರಾಕ್ತನಜನ್ಮದ ಪಾಪಗಳೆಲ್ಲ ಪರಿಹಾರವಾಗುವವು.

ಲಿಂಗಪೂಜೆಯು ಮನಸ್ಸನ್ನು ಏಕಾಗ್ರಗೊಳಿಸುವ ಉತ್ತಮೋಪಾಯವಾಗಿದೆ. ಲಿಂಗನಿಷ್ಠರು ತಾವು ಧರಿಸಿದಲಿಂಗವನ್ನು ಪ್ರಾಣಸ್ವರೂಪವೆಂದು ತಿಳಿದು ಜೋಪಾನಮಾಡುತ್ತಾರೆ. ಆದರೆ ಮೂರ್ಖಶಿರೋಮಣಿಗಳು ಲಿಂಗ ಕಳೆದರೆ ಆತ್ಮಘಾತಮಾಡಿಕೊಳ್ಳುತ್ತಾರೆ. ಲಿಂಗ ಪೂಜಾವಿಧಾನವನ್ನು ಮೇರೆಗೊಳಿಸಲಿಕ್ಕೆ ಬರುವದಿಲ್ಲ. ಯಾಕಂದರೆ ಯಾರಿಗೆ ಹೇಗೆ ಪ್ರೇಮವೆನಿಸುತ್ತದೆಯೋ ಯಾರ ಮನೋಲಹರಿಯು ಹೇಗೆ ಹರಿಯುವದೋ ಹಾಗೆ ಅವರು ಪೂಜೆ ಮಾಡಬಹುದು. "ಎನ್ನಯ್ಯ ಎನ್ನಪ್ಪನೆಂಬುದೇ ಶಿವಮಂತ್ರ। ನನ್ನಯ್ಯ ಕಣ್ಣಪ್ಪನುಡಿದುದೇ ಶಿವಮಂತ್ರ" ಎಂದು ಹರಿಹರಾಚಾರ್ಯರು ನುಡಿದಿರುವರು. ಪೂಜೆಮಾಡಬೇಕೆಂಬದಿಷ್ಟೇ ಧರ್ಮದ ಕಟ್ಟಳೆಯಿದೆ. ಪೂಜಾಕ್ರಮವೂ ವಿಧಾನವೂ ವ್ಯಕ್ತಿ ಸ್ವಾತಂತ್ರ್ಯತೆಗೆ ಬಿಡಲ್ಪಟ್ಟವೆ.

## ಜಂಗಮ-

ಸರ್ವಲೋಕೋಪಕಾರಾಯ ಯೋ ದೇವಃ ಪರಮೇಶ್ವರಃ ॥
ಚರತ್ಯಾತಿಥಿರೂಪೇಣ ನಮಸ್ತೇ ಜಂಗಮಾತ್ಮನೇ ॥

ಎಂಬ ಆಗಮವಚನವುಂಟು ಕ್ರಿಸ್ತೀ ಮಿಶನರಿಗಳಂತೆಯೂ ಬುದ್ಧ ಭಿಕ್ಷುಗಳಂತೆಯೂ ನಮ್ಮ ವೀರಶೈವ ಜಂಗಮರು ದೇಶವಿದೇಶಗಳಲ್ಲಿ ಸಂಚರಿಸಿ

ಮತಪ್ರಸಾರ ಕಾರ್ಯವನ್ನು ಮಾಡುತ್ತಿದ್ದರಲ್ಲದೆ ಲೋಕಸಂಗ್ರಹಕಾರ್ಯದ ಲ್ಲಿಯೂ ತತ್ಪರರಾಗಿದ್ದರು. ಹಿಂದಕ್ಕೆ ಮಳೆಯಮಲ್ಲಯ್ಯನವರೆಂಬ ಜಂಗಮ ಮೂರ್ತಿಗಳು ಅರಬಸ್ಥಾನಕ್ಕೆ ದಯಮಾಡಿಸಿ ಎಷ್ಟೋ ಜನ ಖಲೀಂದ್ರ ರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟರೆಂದು ಇತಿಹಾಸದಿಂದ ತಿಳಿಯು ತ್ತದೆ. ಆಧ್ಯಾತ್ಮಿಕ ವಿಷಯವನ್ನು ಕುರಿತು ವೀರಶೈವ ಜಂಗಮರು ಶಂಕ ರಾಚಾರ್ಯರೊಡನೆ ವಾದ ಮಾಡಿದರೆಂದು ಉಲ್ಲೇಖಗಳ ಮೇಲಿಂದ ಕಂಡುಬರುತ್ತದೆ. ಇದರ ಮೇಲಿಂದ ಜಂಗಮರೆಂದರೆ ಸುಜ್ಞಾನಿಗಳು ಲೋಕಸಂಗ್ರಹ ಕಾರ್ಯಕರ್ತರು ಇದ್ದರೆಂದು ಗೊತ್ತಾಗುವದು. ಜಂಗ ಮರು ಮಹಾವೈರಾಗ್ಯಶಾಲಿಗಳೂ ಹೊನ್ನು ಹೆಣ್ಣು ಮಣ್ಣಿನಾಶೆಯನ್ನು ತೊರೆದವರೂ ಆಗಿದ್ದರು.

ಜಂಗಮರಲ್ಲಿ ಸ್ಥಿರ, ಚರ, ಪರರೆಂದು ಮೂರು ವಿಭಾಗಮಾಡಿ ದ್ದಾರೆ. ಸ್ಥಿರ ಜಂಗಮರೆಂದರೆ ಒತ್ತಟ್ಟಿಗೆ ಭಕ್ತಾದಿಗಳು ಕಟ್ಟಿಸಿಕೊಟ್ಟ ಮಠದಲ್ಲಿದ್ದುಕೊಂಡು ಪರಮ ವೈರಾಗ್ಯಶಾಲಿಗಳಾಗಿ ತಮ್ಮ ಶುದ್ಧಾಚರಣೆ ಯಿಂದ ಭಕ್ತಾದಿಗಳಿಗೆ ಮಾರ್ಗದರ್ಶಿಗಳಾಗಿರತಕ್ಕಂಥವರು. ಚರಜಂಗ ಮರೆಂದರೆ ಲೋಕೋಪಕಾರಾರ್ಥವಾಗಿಯೂ ಮತಪ್ರಸಾರದ ಸಲುವಾ ಗಿಯೂ ಜಗತ್ತಿನಲ್ಲಿ ಸಂಚರಿಸುವಂಥವರು. ಇವರು ವಿಶ್ವಕುಟುಂಬಿಗಳು. ಜಗತ್ತೇ ತಮ್ಮದೆಂದು ಅದರ ಸೇವೆ ಮಾಡುವಂಥವರು. "ಸ್ವಾರ್ಥೋ ಯಸ್ಯ ಪರಾರ್ಥ ಏವ ಸ ಪುಮಾನ್ ಲೋಕೇ ಸತಾಮಗ್ರಣೀಃ" ಎಂಬ ಭಾರತವಾಕ್ಯವು ಜಂಗಮರ ಕರ್ತವ್ಯಕ್ಕೆ ಅನುಗುಣವಾಗಿದೆ. ಪರಜಂಗ ಮರೆಂದರೆ ಮಹಾಜ್ಞಾನಿಗಳು, ತಪೋನಿಷ್ಠರು, ಶಿವಯೋಗಿಗಳು, ಅವ ತಾರಿ ಪುರುಷರು, ಲೋಕದೊಳಗಿದ್ದು ಇಲ್ಲದ ಮಹಿಮರು, ಬೇಕು ಬೇಡೆಂಬೆರಡು ಭವಬೀಜಗಳನ್ನು ಹುರಿದವರು, ವೇದಶಾಸ್ತ್ರಕ್ಕೆ ನಿಲುಕ ದಂಥವರು. ಅವರ ನುಡಿಯೇ ನುಡಿಯು, ಅವರ ನಡೆಯೇ ನಡೆಯು. ಇಂಥವರು ಜಗದಲ್ಲಿ ಬಹುವಿರಳ. ಇಂಥವರೊಡನೆ ಸರಸವಾಡುವ ಮೂಢರು ಉರಿಕೊಳ್ಳಿಯಿಂದ ತಲೆಯನ್ನು ತುರಿಸಿಕೊಂಡಂತೆಯೂ ಹಾವಿನ ಹೆಡೆಗೆ ಮುದ್ದಿಡುವಂತೆಯೂ ಹಿಂಸೆಬಡುವರು. ಇಂಥ ಮಹನೀಯರಿಗೆ ಹಸ್ತಪರುಷ, ನೇತ್ರಪರುಷ, ವಾಕ್ಪರುಷ ಮೊದಲಾದ ಪಂಚಪರುಷಗಳು ಸಿದ್ಧಿಯಾಗಿರುತ್ತವೆ. ಜಗತ್ತಿನ ದುಷ್ಕರ್ಮಗಳನ್ನು ತಗ್ಗಿಸಿ ಸದ್ಧರ್ಮ ವನ್ನು ಪ್ರಸ್ಥಾಪಿಸಲೋಸುಗ ಸಾಕ್ಷಾತ್ ಪರಶಿವನೇ ಜಂಗಮರೂಪದಿಂದ ಜನಿಸಿ ಲೀಲೆಯನ್ನು ತೋರಿಸುತ್ತಿದ್ದಾನೆಂದು ನಮ್ಮವರ ಗ್ರಹಿಕೆ.

ಇಂಥ ಮಹಿಮಾ ಶಾಲಿಗಳನೇಕರು ನಮ್ಮ ಧರ್ಮದಲ್ಲಿ ಕಾಲ ಕಾಲಕ್ಕೆ ಜನಿಸಿ ವೀರಶೈವ ಮತವನ್ನು ಬೆಳಗುತ್ತ ಬಂದಿದ್ದಾರೆ. ಅಂಥ ಪುಣ್ಯಾತ್ಮರ ನೆರವಿನಿಂದ ಸಮಾಜದಲ್ಲಿ ಪಾಪದ ಕೃತ್ಯಗಳಿಗೆ ಹೆಚ್ಚಾಗಿ ಆಸ್ಪದವಿರಲಿಲ್ಲ. ಆದರೆ ಸದ್ಯದ ವಾತಾವರಣದಲ್ಲಿ ನಿಸ್ವಾರ್ಥಿಗಳು, ಪರ ಮವೈರಾಗ್ಯಶಾಲಿಗಳು, ಲೋಕಸಂಗ್ರಹ ಕಾರ್ಯತತ್ಪರರೂ ಆದ ಜಂಗಮ ಮೂರ್ತಿಗಳು ದೊರೆಯುವದು ದುಸ್ತರವಾಗಿದೆ.

## ಪಾದೋದಕ.

ಶುದ್ಧವಾದ ನೀರು ನಮ್ಮ ಆರೋಗ್ಯಶುದ್ಧಿಗಷ್ಟೇ ಕಾರಣವಾಗಿರದೆ ನಮ್ಮ ಆತ್ಮಶುದ್ಧಿಗೂ ಕಾರಣವಾಗಿದೆ. ಹಿಂದಕ್ಕೆ ಮಹಾಮಹಿಮರು ಆನಂದಪೂರ್ಣ ದೃಷ್ಟಿಯಿಂದ ಜಲವನ್ನು ನೋಡಿ ತಮ್ಮ ಪವಿತ್ರ ದೃಷ್ಟಿ ಯನ್ನೂ ಭಾವನೆಯನ್ನೂ ಅದರಲ್ಲಿ ತುಂಬಿ ಆ ಜಲದಲ್ಲಿ ತಮ್ಮ ಅಂಗು ಷ್ಠವನ್ನಿರಿಸಿ ತಮ್ಮ ನಿರ್ಮಲಾಂತಃಕರಣವೇ ಅದರಲ್ಲಿ ಅಳವಡುವಂತೆ ಮಾಡಿ ಅದನ್ನು ಭಕ್ತಿವಹಿಸಿ ಬಂದ ಜನರಿಗೆ ಕೊಡುತ್ತಿದ್ದರು. ಅದನ್ನು ಪಡೆದವರು ಗುರುಕರುಣವನ್ನು ಪಡೆದು ಧನ್ಯರಾದೆವೆಂದು ಹಿಗ್ಗುತ್ತಿದ್ದರು. ಭಕ್ತರು ಆ ಜಲವನ್ನು ಒಳ್ಳೇ ಭಕ್ತಿಯಿಂದಲೂ ಆಶಾಪೂರಿತ ದೃಷ್ಟಿ ಯಿಂದಲೂ ಸೇವಿಸುತ್ತಿದ್ದುದರಿಂದ ಗುರುಗಳಲ್ಲಿರುವ ದಿವ್ಯ ಗುಣಸಾರ ವನ್ನೇ ಸುರಿಯುತ್ತಿದ್ದರೆಂಬಂತೆ ಭಾಸವಾಗುತ್ತಿದ್ದಿತು.

ನಮ್ಮ ರಕ್ತ ವೀರ್ಯಗಳಲ್ಲಿ ಬಹು ಮಟ್ಟಿಗೆ ನೀರಿನ ಅಂಶವಿರು ತ್ತದೆ. ಆ ನೀರನ್ನು ನಾವು ಪರಿಶುದ್ಧ ಭಾವನೆಯಿಂದ ಸೇವಿಸಿದರೆ ನಮ್ಮ ರಕ್ತ ವೀರ್ಯಗಳೂ ಪರಿಶುದ್ಧವಾಗುವವು. ಪೂಜ್ಯರ ಪಾದತೀರ್ಥವು ನಮ್ಮಲ್ಲಿ ಪಾವಿತ್ರತೆಯನ್ನುಂಟುಮಾಡುವದು. ಯಾವನ ರಕ್ತವೀರ್ಯ ಗಳು ಪರಿಶುದ್ಧವಾಗಿರುವವೋ ಅವನು ಸದ್ಗುಣಿಯೂ ಸದಾಚಾರಿಯೂ ಆಗುವನಲ್ಲದೆ ಅವನ ಸಂತತಿಯೂ ಹಾಗೆಯೇ ಆಗುವದು. ನಾವು ಸೇವಿಸುವ ನೀರು ಆಹಾರಗಳಿಗೂ ನಮ್ಮ ಗುಣಧರ್ಮಗಳಿಗೂ ನಿಕಟ ಸಂಬಂಧವಿರುತ್ತದೆ.

ನಮ್ಮ ದೇಹಕ್ಕೆ ಅಶ್ವತ್ಥ ವೃಕ್ಷವೆಂಬ ಹೆಸರುಂಟು. ಈ ವೃಕ್ಷದ ಬೇರುಗಳು ಊರ್ಧ್ವವಾಗಿದ್ದು ಶಾಖೆಗಳು ಅಧೋಮುಖವಾಗಿರುತ್ತವೆ. ಬೇರುಗಳಿಗೆ ನೀರೆರೆದರೆ ಆ ನೀರು ಶಾಖೆಗಳೊಳಗಿಂದ ಹಾಯ್ದು ಹೊರ

ಚಿಮ್ಮುವದು. ಏರಿನಿಂದ ಇಳುಕಲಿಗೆ ಹರಿಯುವದು ನೀರಿನ ಗುಣಧ ರ್ಮವಾಗಿರುವದರಿಂದ ಗುರುವಿನ ಶಿರದ ಜ್ಞಾನಗಂಗೆಯು ಅಧೋಮು ಖವಾಗಿ ಹರಿದು ಪಾದಾಗ್ರದಿಂದ ಹೊರಸೂಸುವದು. ಆ ಸುಜ್ಞಾನಜಲ ವನ್ನೇ ಪಾದೋದಕವೆಂದು ಭಾವಿಸಿ ಭಕ್ತನು ಸ್ವೀಕರಿಸುವನು.

ಪಾದೋದಕದಲ್ಲಿ ಗುರುಪಾದೋದಕ, ಲಿಂಗಪಾದೋದಕ, ಜಂಗ ಮಪಾದೋದಕವೆಂದು ಮೂರು ತೆರನುಂಟು. ವೀರಶೈವರು ಗುರುಲಿಂ ಗಜಂಗಮದಲ್ಲಿ ಭೇದವನ್ನೆಣಿಸುವದಿಲ್ಲ. ಒಬ್ಬನೇ ದೇವರು ಕಾರ್ಯ ವಶದಿಂದ ಮೂರು ರೂಪವಾಗಿ ಭೂಮಿಯಲ್ಲಿ ಅವತರಿಸಿರುವನೆಂದು ತಿಳಿಯುತ್ತಾರೆ. ಗುರುವು ಸದ್ಬೋಧೆ ಮಾಡುವ ದೇವರು, ಲಿಂಗವು ಪೂಜೆ ಗೊಳ್ಳುವ ದೇವರು, ಜಂಗಮವು ಮೋಕ್ಷಕ್ಕೆ ಸಾಧನೀಭೂತವಾದ ಸುಜ್ಞಾ ನವನ್ನು ದಯಪಾಲಿಸುವ ದೇವರು. ಈ ಮೂವರ ಅನುಗ್ರಹ ಕರುಣೆ ಯನ್ನು ಪಡೆದುಕೊಳ್ಳುವದೇ ಪಾದೋದಕ ಸೇವನಯು.

ಗುರುಲಿಂಗಜಂಗಮ ಶಬ್ದಗಳು ಸಂಬಂಧವಾಚಕವಿರುವದರಿಂದ ಅವುಗಳಲ್ಲಿ ತಾರತಮ್ಯವನ್ನೆಣಿಸಕೂಡದು. ಗುರುವು ಮೊದಲು ಲಿಂಗ ಧಾರಣಮಾಡುವದರಿಂದ ಗುರುವಿಗೆ ಪ್ರಾಧಾನ್ಯಬರುತ್ತದೆ. ಲಿಂಗಪೂಜೆ ಯಿಂದ ಗುರುಶಿಷ್ಯರಿಬ್ಬರೂ ಉದ್ಧಾರವಾಗುವದರಿಂದ ಲಿಂಗಕ್ಕೆ ಪ್ರಾಶ ಸ್ತ್ಯಯುಂಟಾಗುತ್ತದೆ. ಲಿಂಗಪೂಜೆಯು ಫಲವೇ ಜಂಗಮವು ಅರ್ಥಾತ್ ಸುಜ್ಞಾನವಾಗಿರುವದರಿಂದ ಜಂಗಮಕ್ಕೆ ಆಧಿಕ್ಯವುಂಟಾಗುವದು. ಆದರೆ ಗುರುಲಿಂಗಗಳ ಸಹಾಯವಿಲ್ಲದೆ ಜಂಗಮತ್ವವು ಪ್ರಾಪ್ತವಾಗಲಾರದು. ಕಾರಣ ಗುರುಲಿಂಗಜಂಗಮದಲ್ಲಿ ಭೇದವನ್ನೆಣಿಸದೆ ಅವರ ಪಾದೋದ ಕವನ್ನು ಸೇವಿಸಬೇಕೆಂದು ನಮ್ಮ ಧರ್ಮವು ಸಾರುತ್ತದೆ.

ಮಹಾನುಭಾವಿಗಳ ಪಾದಧೂಳಿಯನ್ನು ಶಿರದಲ್ಲಾಂತು ಅವರ ಪಾದತೀರ್ಥವನ್ನು ಸೇವಿಸುವದು ವಿಹಿತವೆಂಬ ರೂಢಾಚಾರವು ಬಹುದಿ ವಸಗಳಿಂದ ಬಳಿಕೆಯಲ್ಲಿ ಬಂದಿದೆ. ದುರ್ಬಲಾತ್ಮರು ಮಹನೀಯರ ಪಾದಕ್ಕೆ ಮಹತ್ವಕೊಡುವದು ವಿಸೀತಭಾವದ ಕುರುಹಾಗಿರುತ್ತದೆ ಪಾದೋ ದಕ ಸೇವನೆಯು ವೀರಶೈವರಿಗೆ ಪ್ರತಿನಿತ್ಯದ ಕ್ರಿಯೆಯಾಗಿರುವದರಿಂದ ಅವರ ರಕ್ತಧಾತುಗಳು ಪರಿಶುದ್ಧವಾಗಿರಲು ಸಾಕಷ್ಟು ಆಸ್ಪದವಿದೆ.

## ಪ್ರಸಾದ.

ಲಿಂಗಪೂಜೆಯಾದ ಬಳಿಕ ಲಿಂಗಪ್ರಸಾದ ಸಮಯವು ಪ್ರಾಪ್ತಿಸುವದು. ಪ್ರಸಾದವನ್ನು ಒಡಲ ಕಳವಳಕ್ಕಾಗಲಿ ನಾಲಿಗೆಯ ರುಚಿ ದುರಾಶೆಯಿಂದಾಗಲಿ ಸೇವಿಸದಿರುವದೇ ಪ್ರಸಾದದ ಮೂಲತತ್ವವು. ತನ್ನ ಎಡೆಯಲ್ಲಿ ಬಂದ ಶುದ್ಧ ಆಹಾರವೇ ಶಿವಪ್ರಸಾದವೆಂದು ಭಾವಿಸಿ ತುತ್ತಿಗೊಮ್ಮೆ ಶಿವಾಶರಣೆನ್ನುತ್ತಾ ಸೇವಿಸುವದೇ ಪ್ರಸಾದದ ಲಕ್ಷಣವು. ಪ್ರಸಾದ ಸೇವಿಸುವಾಗ ಮನಸ್ಸು ಅತ್ತಿತ್ತ ಹರಿದಾಡದಂತೆ ಅದನ್ನು ಆ ಪರವಸ್ತುವಿನಲ್ಲಿಯೇ ತಲ್ಲೀನವಾಗಿರಿಸುವದು ಪ್ರಸಾದದ ಮುಖ್ಯೋದ್ದೇಶವು. ನಾವು ಸೇವಿಸುವ ಆಹಾರದಿಂದಲೇ ಮಾಂಸ ಮಜ್ಜೆ ಮೊದಲಾದ ಸಪ್ತಧಾತುಗಳ ಉತ್ಪತ್ತಿಯಾಗುವದರಿಂದ ನಾವು ಪಶುಗಳಂತೆ ಆಹಾರ ಸೇವಿಸಿ ಮಾಂಸ ಪಿಂಡವನ್ನು ಬೆಳೆಯಿಸುವದಕ್ಕಿಂತಲೂ ಸುಪ್ರಸಾದಿಗಳಾಗಿ ಶಿವಭಾವನೆಯಿಂದ ಪ್ರಸಾದ ಸೇವಿಸಿ ಮಂತ್ರಪಿಂಡವನ್ನು ಮಾಡುವದು ಶ್ರೇಯಸ್ಕರವು. ಮಾಂಸ ಪಿಂಡಿಯು ಪಾಶವಿಕ ವೃತ್ತಿಯಿಂದ ಅಧೋಗತಿಗಿಳಿಸುತ್ತಾನೆ. ಮಂತ್ರಪಿಂಡಿಯು ಆಚಾರ ವಿಚಾರ ಪರಿಶುದ್ಧತೆಯಿಂದ ಉದಾತ್ತಸ್ಥಿತಿಗೆ ಹೋಗುತ್ತಾನೆ. ಇದರಿಂದ ನಾವು ಸೇವಿಸುವ ಆಹಾರಕ್ಕೂ ನಮ್ಮ ಗುಣ ಧರ್ಮಕ್ಕೂ ನಿಕಟಸಂಬಂಧವಿರುತ್ತದೆಂದು ಗೊತ್ತಾಗುವದು.

ಪ್ರಸಾದದಲ್ಲಿ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದವೆಂದು ಮೂರು ಭಾಗಗಳನ್ನು ಕಲ್ಪಿಸಿದ್ದಾರೆ. ಶುದ್ಧ ಪ್ರಸಾದವೆಂದರೆ ಶುದ್ಧ ಶಾಕಾಹಾರವು. ನಿಷಿದ್ಧವಾದ ಮದ್ಯಮಾಂಸಾದಿಗಳಲ್ಲ. ಸಿದ್ಧ ಪ್ರಸಾದವೆಂದರೆ ಹಾಲು, ಹಣ್ಣು, ಹಂಪಲ ಮೊದಲಾದ ಮಧುರತರ ಸಾತ್ವಿಕಾಹಾರವು ಪ್ರಸಿದ್ಧ ಪ್ರಸಾದವೆಂದರೆ ತಪೋನಿಷ್ಠರು ಸೇವಿಸುವ ವಾಯುತರಗೆಲೆಗಳು. ಒಟ್ಟಿನ ಮೇಲೆ ವೀರಶೈವರು ಸಾತ್ವಿಕಾಹಾರಿಗಳು. ಸಾತ್ವಿಕಾಹಾರಿಗಳಲ್ಲಿ ಸಾತ್ವಿಕ ಗುಣಗಳೇ ಪ್ರಾಮುಖ್ಯವಾಗಿರಬೇಕೆಂಬದನ್ನು ಬೇರೆ ಹೇಳಬೇಕಾಗಿಲ್ಲ.

ಈಗಿನ ಸುಶಿಕ್ಷಿತರೆನಿಸಿಕೊಳ್ಳುವವರು ಸಹ ಭೋಜನ ಫಲಾಹಾರದ ನೆವದಿಂದ ಅನ್ಯ ಜಾತಿಯವರೊಡನೆ ಬೆರೆತು ಖಾದ್ಯಪೇಯಗಳನ್ನು ಸ್ವೀಕರಿಸುತ್ತಿದ್ದಾರೆ. ನಮ್ಮ ಧರ್ಮವು ಈ ವೃತ್ತಿಯನ್ನು ನಿರಾಕರಿಸುತ್ತದೆ. ಯಾಕೆಂದರೆ ಇಂದು ನಾಲಿಗೆಯ ರುಚಿಯಿಂದಾಗಲಿ ಸ್ನೇಹದ ದಾಕ್ಷಿಣ್ಯದಿಂದಾಗಲಿ ಶಾಕಾಹಾರವನ್ನು ಸೇವಿಸುವ ವ್ಯಕ್ತಿಯು ನಾಳೆ

ಮಾಂಸ ಮದ್ಯಗಳನ್ನು ಸೇವಿಸಲಿಕ್ಕೆ ಹೇಸುವದಿಲ್ಲವೆಂದು ಏಕೆ ತಿಳಿಯ ಬಾರದು? ಆದರೆ ಕಾಲಸ್ಥಿತಿಯು ವಿಪರೀತವಾಗಿರುವದರಿಂದ ಜಾತಿ ಜಾತಿಗಳಲ್ಲಿ ವೈರಭಾವವಡಗಿ ಮೈತ್ರಿಯು ಬೆಳೆಯುತ್ತ ನಡೆದಿರುವ ಕಾರಣ ಒಂದೇ ಮನೆಯವರಂತೆ ಅವರು ಪರಸ್ಪರ ಊಟ ಫಲಾಹಾರ ಗಳನ್ನು ನಡೆಯಿಸುವದುಂಟು. ಧಾರ್ಮಿಕ ಕಟ್ಟಳೆಗೆ ಹೀಗೆ ಮಾಡು ವದು ವಿರುದ್ಧವಾದರೂ ದೇಶಬಾಂಧವರಲ್ಲಿ ಪರಸ್ಪರ ಪ್ರೇಮವು ಹೆಚ್ಚು ತ್ತಿರುವದು ರಾಷ್ಟ್ರದ ಭಾಗ್ಯೋದಯವೆಂದೇ ಅನೇಕರು ಭಾವಿಸಿದ್ದಾರೆ. ಈ ಮಾತು ರಾಷ್ಟ್ರಹಿತದ ದೃಷ್ಟಿಯಿಂದ ಒಳಿತಾದುದು. ನಾಲಿಗೆಯ ಚಾಪ ಲ್ಯಕ್ಕಾಗಿ ಅವರು ಪರಸ್ಪರ ಸಹಭೋಜನಮಾಡದೆ ಸ್ನೇಹಭಾವದಿಂದ ಮಾಡುತ್ತಿದ್ದಾರೆ.

ಈಗಿನ ವಾತಾವರಣವೇ ವಿಪರೀತವಾಗಿದೆ. ಧರ್ಮದ ಕಟ್ಟಳೆಗ ಳೆಲ್ಲ ಶಿಥಿಲವಾಗಿ ಅವು ರಾಜಕೀಯ ಸ್ವರೂಪವನ್ನು ಹೊಂದಲಾರಂಭಿ ಸಿವೆ. ಸ್ವಾಮಿಗಳಲ್ಲಿ ಪೂಜ್ಯತೆಯಿಲ್ಲ. ಭಕ್ತರಲ್ಲಿ ಪೂಜ್ಯಭಾವನೆಯಿಲ್ಲ. ಒಬ್ಬರ ಅವಗುಣಗಳನ್ನೊಬ್ಬರು ಬೈಲಿಗಿಡಲು ಮುಂದುವರಿಯುವರಲ್ಲದೆ ಒಬ್ಬರನ್ನು ಇನ್ನೊಬ್ಬರು ಸುಧಾರಿಸುವ ಎದೆಗಾರಿಕೆಯು ಯಾರಿಗೂ ಇಲ್ಲ. ರಾಜಕೀಯ ಶಾಸನಗಳ ಬಲವಿಲ್ಲದೆ ಸಮಾಜವನ್ನು ಭದ್ರವಾಗಿ ಡುವದು ಸುಲಭಸಾಧ್ಯವಲ್ಲ.

## ವಿಭೂತಿ.

ನಮ್ಮ ಪೂರ್ವಜರು ಒಂದಾನೊಂದು ಕಾಲದಲ್ಲಿ ತೀರ ಕಾಡುಸ್ಥಿ ತಿಯಲ್ಲಿದ್ದಾಗ ಆಕಳುಗಳನ್ನು ಸಾಕಿಕೊಂಡು ಅವುಗಳ ಹಾಲು ಕುಡಿದು ಉಪಜೀವಿಸುತ್ತಿದ್ದರು. ಕೃಷಿಯನ್ನೂ ಆಗ ಮಾಡುತ್ತಿದ್ದರು. ಅವರಿಗೆ ಹೊದೆಯಲಿಕ್ಕೆ ಬಟ್ಟೆಗಳೇನೂ ಇದ್ದಂತೆ ಕಾಣುವದಿಲ್ಲ. ಅವರು ಅಹಿಂ ಸಾವಾದಿಗಳಾದ್ದರಿಂದ ಹುಲಿಯ ಚರ್ಮವನ್ನಾಗಲಿ ಕೃಷ್ಣಾಜಿನವನ್ನಾ ಗಲಿ ಉಪಯೋಗಿಸುತ್ತಿರಲಿಲ್ಲ. ನೂಲಿನ ಹಾಗೂ ಉಣ್ಣೆಯ ಬಟ್ಟೆಗಳ ಶೋಧವು ಇನ್ನೂ ಆ ಕಾಲಕ್ಕೆ ಆದಂತೆ ಕಾಣುವದಿಲ್ಲ. ಆದುದರಿಂದ ಗಿಡದ ತೊಗಟೆಯನ್ನೇ ಕೌಪೀನವನ್ನಾಗಿ ಮಾಡಿಕೊಂಡು ಚಳಿಯ ಬಾಧೆಯು ತಗಲಬಾರದೆಂದು ಮೈಗೆಲ್ಲ ಆಕಳಿನ ಕುಳ್ಳು ಬೂದಿಯನ್ನು ತೊಡೆದುಕೊಳ್ಳುತ್ತಿದ್ದರು. ಮತ್ತು ಕುಳ್ಳುಬೆಂಕಿಯನ್ನು ಕಾಸಿಕೊಳ್ಳುತ್ತಿ ದ್ದರು. ಮುಂದೆ ಬರಬರುತ್ತ ಉಣ್ಣೆಯ ಮತ್ತು ನೂಲಿನ ಬಟ್ಟೆಗಳು

ಪ್ರಚಾರದಲ್ಲಿ ಬಂದರೂ ಹಿರಿಯರ ಅನುಕರಣವನ್ನು ಬಿಡಬಾರದೆಂದು ಅವರ ಸಂತತಿಯವರು ಜಳಕ ಮಾಡಿದ ಬಳಿಕ ಮೈ ಕೈಗಳಿಗೆ ಭಸ್ಮವನ್ನು ಹಚ್ಚಿಕೊಳ್ಳುತ್ತ ಬಂದರು. ಈ ಕ್ರಮವು ಮುಂದೆ ಹೆಚ್ಚು ಸುಧಾರಣೆಹೊಂದಿ ಆ ಬೂದಿಯಲ್ಲಿ ಆಧ್ಯಾತ್ಮಿಕ ತೇಜಸ್ಸುಂಟೆಂತಲೂ ಅದನ್ನು ಧರಿಸಿದರೆ ಸರ್ವ ಪಾಪಗಳು ನಾಶವಾಗುವವೆಂತಲೂ ನಮ್ಮ ಹಿರಿಯರು ಅದಕ್ಕೆ ಉದಾತ್ತ ಸ್ವರೂಪವನ್ನು ಕೊಟ್ಟು ಒಳ್ಳೆ ಭಕ್ತಿಭಾವನೆಯಿಂದ ಅದನ್ನು ಧರಿಸಹತ್ತಿದರು.

ಮುಂದೆ ಆ ಭಸ್ಮವು ಸಂಸ್ಕಾರ ವಿಶೇಷದಿಂದ ಧೂಳಪಾದೋದಕ ಘಟ್ಟ ಕ್ರಿಯಾಘಟ್ಟಗಳೆಂಬೆರಡು ತೆರನಾಗಿ ನಮ್ಮ ಧರ್ಮದಲ್ಲಿ ತಲೆದೋರಿತು. ಆಮೇಲೆ ಅದಕ್ಕೆ ವಿಭೂತಿಯೆಂಬ ಉದಾತ್ತನಾಮವು ಕೊಡಲ್ಪಟ್ಟಿತು. ಜಗತ್ತಿನಲ್ಲಿರುವ ಪ್ರತಿಯೊಂದು ಪ್ರಾಣಿಯ ವಸ್ತುವಿನ ಅಥವಾ ಶಾಸ್ತ್ರದ ಇತಿಹಾಸವನ್ನು ನೋಡಿದರೆ ಅದು ಹೇಗೆ ಹುಟ್ಟಿತು, ಹೇಗೆ ಬೆಳೆಯಿತು, ಹೇಗೆ ಪರ್ಯವಸಾನ ಹೊಂದಿತು, ಈ ಉತ್ಕ್ರಾಂತಿಯುಕ್ತವಾದ ಪ್ರಶ್ನೆಗಳನ್ನೊಳಕೊಂಡಿರುತ್ತದೆ. ಅಷ್ಟಾವರಣಗಳೆಲ್ಲವೂ ಉತ್ಕ್ರಾಂತಿಯ ಚಿಹ್ನಗಳು. ಕಾಡುಸ್ಥಿತಿಯಿಂದ ಸುಧಾರಣೆಯ ಸ್ಥಿತಿಗೆ ಬಂದಾಗ ಅನೇಕ ವ್ಯತ್ಯಾಸಗಳನ್ನು ಹೊಂದಿದಂಥವುಗಳು.

ಸದ್ಯಕ್ಕೆ ಹೇರಳವಾಗಿ ಬಟ್ಟೆಗಳು ದೊರೆಯುವ ಸುಸಮಯದಲ್ಲಿ ಭಸ್ಮವನ್ನು ಧರಿಸಿ ಚಳಿಯನ್ನು ಕಳೆದುಕೊಳ್ಳಬೇಕೆಂಬ ಆವಶ್ಯಕತೆ ಏನೂ ಇರುವದಿಲ್ಲ. ಹಾಸಿಗೆ ಹೊದಿಕೆಗಳು ಸಾಕಷ್ಟಿದ್ದವರಿಗೆ ಭಸ್ಮವೇಕೆ ಬೇಕು? ಆದರೆ ನಮ್ಮ ಧರ್ಮದಲ್ಲಿ ವಿಭೂತಿಗೆ ಒಂದು ವಿಶಿಷ್ಟತರದ ಅರ್ಥವನ್ನು ಕಲ್ಪಿಸಿ ಅದರ ಮಹತ್ವವನ್ನು ಹೆಚ್ಚಿಸಿದ್ದರಿಂದ ಅದನ್ನು ಧರಿಸಬೇಕಾಗಿದೆ. ಬೇಕುಬೇಕಾದ ವಸ್ತುವಿನಲ್ಲಿ ಇಲ್ಲದ ಮಹತ್ವವನ್ನು ಕಲ್ಪಿಸುವ ಹುಚ್ಚು ಬಹುಶಃ ಎಲ್ಲ ಧರ್ಮದಲ್ಲಿಯೂ ಉಂಟು. ಆದರೆ ಆ ಹುಚ್ಚಿನಿಂದಲೇ ಅನೇಕರು ನಿಜವಾದ ಆನಂದಶಾಂತಿಗಳನ್ನು ಪಡೆಯುತ್ತಬಂದಿರುವದರಿಂದ ಒಂದು ರೀತಿಯಿಂದ ಜಾಣರಾಗುವದೇ ಹುಚ್ಚುತನವೆನಿಸುತ್ತದೆ.

ನಮ್ಮ ಧರ್ಮದಂತೆ ಇನ್ನುಳಿದ ಧರ್ಮಗಳಲ್ಲಿಯೂ ಕೂಡ ಏನೂ ಅರ್ಥವಿಲ್ಲದ ವಿಧಾನಗಳೂ ಸಂಸ್ಕಾರಗಳೂ ಬಹು ಕಾಲದಿಂದ ನಡಿದು ಬಂದಿರುತ್ತದೆ, ಅವುಗಳನ್ನು ಯಾಕೆ ಮಾಡುತ್ತಾರೆಂದು ಯಾರಾದರೂ ಕೇಳಿದರೆ ಯಾರಿಗೂ ಸಮಂಜಸನಾಗಿ ಹೇಳಲಿಕ್ಕೆ ಬರುವದಿಲ್ಲ. ಕೇಳಿ

ದವರಿಗೆ ಸಿಟ್ಟುಮಾಡಿ ತಮ್ಮ ಒಣ ಹೆಮ್ಮೆಯನ್ನು ಕಾಪಾಡಿಕೊಳ್ಳುವರು. ಅವುಗಳನ್ನು ವಿಶ್ವಾಸವಿಲ್ಲದಿದ್ದರೂ ಸುಶಿಕ್ಷಿತರೂ ಕೂಡ ಅಂಧಶ್ರದ್ಧೆಯಿಂದ ಪಾಲಿಸುತ್ತ ಬಂದಿದ್ದಾರೆ. ಕೆಲವು ಸುವಿಚಾರಿಗಳು ಈ ಸಂಸ್ಕಾರ ವಿಧಾನಗಳಿಗೆ ವಿರೋಧಬಟ್ಟರೂ ಬಹು ಜನರು ರೂಢಿಯ ದಾಸರಾಗಿರುವದರಿಂದ ಅವುಗಳನ್ನು ವ್ಯತ್ಯಾಸಮಾಡಲಿಕ್ಕಾಗುವದಿಲ್ಲ. ವಿಭೂತಿ ಧರಿಸುವದರಿಂದ ಪಾಪಗಳು ನಾಶವಾಗುತ್ತಿದ್ದರೆ ವಿಭೂತಿ ಧರಿಸಿದ ಅನೇಕ ಮಹನೀಯರು ಎಷ್ಟೋ ಪಾಪಾಚರಣೆಗಳನ್ನೇಕೆ ಮಾಡುತ್ತಿದ್ದಾರೆ? ನಿಜವಾಗಿ ನೋಡಿದರೆ ಅಂಧಶ್ರದ್ಧೆಯುಳ್ಳ ಭಕ್ತರಲ್ಲಿ ಒಂದು ತರಹದ ಪವಿತ್ರ ಭಾವನೆಯು ನೆಲೆಗೊಳ್ಳಲೆಂದೂ ಅವರಿಂದ ಪಾಪಕಾರ್ಯಗಳು ಘಟಿಸಬಾರದೆಂದೂ ವಿಭೂತಿಧಾರಣೆಯ ತತ್ವವನ್ನು ನಮ್ಮ ಆರ್ಯರು ಪ್ರಚಾರದಲ್ಲಿ ತಂದಿರಬಹುದು. ವಿಭೂತಿ ಧರಿಸುವವರ ಪಾಪಗಳು ನಾಶವಾಗುವವೆಂದರೆ ಅವರು ಪಾಪಗಳನ್ನು ಮಾಡಬಾರದೆಂದು ಎಚ್ಚರಿಕೆಯನ್ನು ಕೊಟ್ಟಂತೆಯೇ ಸರಿ.

## ರುದ್ರಾಕ್ಷಿ.

ದೇಹದ ಮೇಲೆ ಅಲಂಕಾರಗಳನ್ನು ಧರಿಸಿ ಸುಂದರವಾಗಿ ಕಾಣಬೇಕೆಂಬ ಕಲ್ಪನೆಯು ಈಗ ಇದ್ದಂತೆ ಹಿಂದಕ್ಕೂ ಇದ್ದಿತು. ಪೂರ್ವದಲ್ಲಿ ಅರಣ್ಯದೊಳಗೆ ಕಾಲಹರಣ ಮಾಡುತ್ತಿದ್ದ ನಮ್ಮ ಆರ್ಯರು ರುದ್ರಾಕ್ಷಿಗಳೆಂಬ ಗಿಡದ ಕಾಯಿಗಳಿಗೆ ಮೋಹಗೊಂಡು ಸರವನ್ನಾಗಿ ಮಾಡಿ ಕೊರಳಲ್ಲಿ ಧರಿಸುತ್ತಿದ್ದರು. ಅದರಂತೆ ಉಳಿದವರು ತುಳಸೀ ಮಣಿಗಳನ್ನು ತಳೆಯುತ್ತಿದ್ದರು. ಆದರೆ ಮುತ್ತು ರತ್ನಹಾರಾದಿಗಳ ಈಗಿನ ನವಯುಗದಲ್ಲಿ ರುದ್ರಾಕ್ಷಿ ಸರಗಳಿಗೆ ಅಲಂಕಾರ ದೃಷ್ಟಿಯಿಂದ ಸ್ವಲ್ಪೂ ಮಹತ್ವವಿಲ್ಲ. ಮೊದಲು ಅಲಂಕಾರವೆಂದು ತಿಳಿಯಲ್ಪಟ್ಟ ರುದ್ರಾಕ್ಷಿಗಳು ಉತ್ಕ್ರಾಂತಿವಶದಿಂದ ಶಿವನ ನೇತ್ರಗಳೆಂದೂ ಅವುಗಳನ್ನು ಧರಿಸುವವರಿಗೆ ರೋಗಭೂತಾದಿಗಳ ಭಯವು ಹಿಂಗುವದೆಂದೂ ಹುಸಿ ನುಡಿಯನ್ನು ವಿಶ್ವಾಸಿಕ ಜನರಲ್ಲಿ ಪಸರಿಸುತ್ತ ಬಂದರು. ಅದನ್ನು ನಂಬಿದವರು ಎಚ್ಚರದಿಂದಲೂ ನಿರ್ಭಯದಿಂದಲೂ ನಡೆಯುತ್ತಿದ್ದರಾದ್ದರಿಂದ ಅವರಿಗೆ ರೋಗಭೂತಾದಿಗಳ ಭಯವು ಎಳ್ಳಷ್ಟಿರಲಿಲ್ಲವೇನೋ ನಿಜ. ನಿಜವಾಗಿ ರುದ್ರಾಕ್ಷಿಗಳಲ್ಲೇನೂ ಅಂಥ ಶಕ್ತಿಯಿಲ್ಲ. ರುದ್ರಾಕ್ಷಿಯಲ್ಲಿಟ್ಟ ಶ್ರದ್ಧೆಯೇ ನಿಜವಾಗಿ ನಿರ್ಭಯತೆಯನ್ನುಂಟುಮಾಡುವದು. ಹೇಳಿದ ಮಾತಿನಮೇಲೆ ನಂಬಿಗೆಯನ್ನಿಟ್ಟು

ನಡೆಯುವದರಲ್ಲಿಯೇ ಹೆಚ್ಚು ಸಾಮರ್ಥ್ಯವುಂಟಲ್ಲದೆ ನಿಜವಾಗಿ ಯಾಯ ವಸ್ತುಗಳಲ್ಲೇನೂ ಅಂಥ ಸಾಮರ್ಥ್ಯವಿರುವದಿಲ್ಲ.

ಹಿಂದಿನ ಮಹಿಮರು ಇಂತಿಂಥ ವಸ್ತುಗಳನ್ನು ಯಾವ ಯಾವ ಭಾವನೆಯಿಂದ ಪ್ರಚುರಗೊಳಿಸಿದರೋ, ಅದೇ ಭಾವನೆಯ ಸೂತ್ರವನ್ನೊಳಕೊಂಡೇ ನಂತರದ ಮಹಾಮಹಿಮರು ನಡೆದುಕೊಂಡರು. ಯಾಕಂದರೆ ಜನರಲ್ಲಿ ಅಳವಟ್ಟ ಒಂದು ಭಾವನೆಯಿಂದ ಜನಜಾಗ್ರತೆಯಾಗುತ್ತಿದ್ದರೆ ಅದನ್ನು ಕಿತ್ತೊಗೆಯುವದು ಮೂರ್ಖತನವು. ಮೂಢ ನಂಬಿಗೆಯ ಮೇಲೆಯೇ ಎಷ್ಟೋ ಭಾವಿಕ ಕೃತ್ಯಗಳ ತಳಹದಿಯುಂಟು. ಅವು ಈಗ ಯಂತ್ರದಂತೆ ಯಥಾಪ್ರಕಾರವಾಗಿ ನಡೆದಿದ್ದರೂ ಅದರಲ್ಲಿಯೇ ಭಾವಿಕರು ಆನಂದವನ್ನು ಪಡೆಯುವರು. ನಾವು ಏನಾದರೊಂದು ಹೊಸ ವಿಚಾರವನ್ನು ಅವರ ತಲೆಯಲ್ಲಿ ಹಾಕಿದರೆ ನಮ್ಮನ್ನು ವಿರೋಧ ದೃಷ್ಟಿಯಿಂದ ಕಾಣುವರು. ಇದ್ದುದನ್ನು ತೆಗೆದುಹಾಕುವದರಿಂದ ಧರ್ಮಸುಧಾರಣೆಯಾಗುವದಿಲ್ಲ, ಧರ್ಮದಲ್ಲಿ ಕ್ರಾಂತಿಯೇಳುವದು. ಆದುದರಿಂದ ನಿಜವಾದ ಧರ್ಮಸುಧಾರಕರು ಇದ್ದ ವಸ್ತುಗಳನ್ನು ಸ್ಥಿರವಾಗಿಯೇ ಇಟ್ಟು ಅವುಗಳ ಅರ್ಥವನ್ನು ಕಾಲಕ್ಕೆ ತಕ್ಕಂತೆ ಜನತೆಯಲ್ಲಿ ಪ್ರಸಾರಮಾಡಬೇಕು. ಅಸ್ವಾವರಣಗಳು ಏನೋ ಕಾಲವಶದಿಂದ ನಮ್ಮೀ ಸಮಾಜದಲ್ಲಿ ನೆಲೆಗೊಂಡಿವೆ. ಆದರೆ ಅವುಗಳಲ್ಲೇನೂ ಅರ್ಥವಿಲ್ಲೆಂದು ತೆಗೆದುಹಾಕಿರೆಂದು ಉಪದೇಶ ಮಾಡಿದರೆ ಆದರ ಪರ್ಯವಸಾನವು ಪ್ರಕೋಪಸ್ಥಿತಿಗೆ ಹೋಗುವದು. ಎಷ್ಟೋ ಭಾವಿಕರಾದ ಜನಗಳ ಪವಿತ್ರ ಹೃದಯಕ್ಕೆ ಶಲ್ಯವನ್ನು ಚುಚ್ಚಿದಂತಾದೀತು. ಆದರೆ ಆ ಅಸ್ವಾವರಣಗಳ ರಹಸ್ಯವನ್ನು ಸದ್ಯದ ಪರಿಸ್ಥಿತಿಗೆ ತಕ್ಕಂತೆ ಅರ್ಥಮಾಡಿ ಜನರ ವೃತ್ತಿಯನ್ನು ಪರಿಪಡಿಸುವದೇ ಸಮಾಜ ಸುಧಾರಕನ ಮುಖ್ಯ ಕರ್ತವ್ಯವಾಗಿದೆ.

## ಮಂತ್ರ.

ಗುಪ್ತವಾಗಿಟ್ಟ ಮಾತಿನಲ್ಲಿ ಮಹತ್ವವೂ ಕಾರ್ಯಸಾಧಕತೆಯೂ ಹೆಚ್ಚಾಗಿದ್ದಂತೆ ಡಣಾಡಂಗುರವಾಗಿ ಹೇಳುವ ಮಾತಿನಲ್ಲಿರುವದಿಲ್ಲ. ಈಗಿನ ನಮ್ಮ ಸರಕಾರದವರು ಎಷ್ಟೋ ಮಹತ್ವದ ವಿಷಯಗಳನ್ನು ಬಹು ಗುಪ್ತವಾಗಿಟ್ಟು ನಡೆಯುವದರಿಂದ ಅವರಿಗೆ ಒಳ್ಳೆ ಬಲವು ಬಂದಿರುತ್ತದೆ. ಗುಪ್ತವಾಗಿರುವ ಮಾತಿನ ಬಗ್ಗೆ ಜಿಜ್ಞಾಸೆಯೂ ಕುತೂಹಲವೂ ಉತ್ಪನ್ನವಾಗುತ್ತವೆ. ಗುಪ್ತವಾದ ಮಾತಿನಲ್ಲಿ ಶ್ರದ್ಧೆಯು ದೃಢವಾಗಿ ನಿಲ್ಲು

ವದು. ಶ್ರದ್ಧೆಯು ಒಮ್ಮೆ ಭದ್ರವಾಗಿ ಬೇರೂರಿದ ಬಳಿಕ ಆ ವ್ಯಕ್ತಿಯಿಂದ ಅಘಟಿತ ಘಟನಾಕಾರ್ಯಗಳು ನೆರವೇರುವವು. ನಿನ್ನಲ್ಲಿ ಶ್ರದ್ಧೆಯೊಂದಿದ್ದರೆ ನೀನು ನಿನ್ನೆದುರಿನ ಗುಡ್ಡಕ್ಕೆ ಸರಿಯೆಂದು ಹೇಳಿದರೆ ಅದು ನಿಜವಾಗಿಯೂ ಸರಿಯುವದು ಎಂದು ಕ್ರೈಸ್ತನು ಹೇಳಿದ್ದಾನೆ. ಈ ರಹಸ್ಯವನ್ನರಿತೇ ನಮ್ಮ ಪೂರ್ವಜರು ಪಂಚಾಕ್ಷರಿ ಮತ್ತು ಷಡಕ್ಷರಿ ಮಂತ್ರಗಳನ್ನು ಶ್ರದ್ಧೆಯುಳ್ಳ ಶಿಷ್ಯರಿಗೆ ಗೌಪ್ಯವಾಗಿ ಹೇಳುತ್ತ ಬಂದರು. ಕೇಳಿದವರು ಅವುಗಳನ್ನು ನಂಬುತ್ತ ಸದ್ಗತಿಯನ್ನು ಕಂಡರು.

ಮಂತ್ರಗಳೇನೋ ಶಬ್ದಗಳೇ. ತೋರಿಕೆಯ ಶಬ್ದಗಳಲ್ಲೇನೂ ನಿಜವಾದ ಸ್ವಾರಸ್ಯವಿರುವದಿಲ್ಲ. ಆದರೆ ಆ ಶಬ್ದಗಳಲ್ಲಿ ಅಂತರ್ಗತವಾದ ಸ್ಫೂರ್ತಿಯಲ್ಲಿ ಸಾಮರ್ಥ್ಯವುಂಟು. ಶ್ರದ್ಧೆಯೇ ಮಂತ್ರದಲ್ಲಿ ಅಡಕವಾದ ಸ್ಫೂರ್ತಿಯು. "ಪಂಚಾಕ್ಷರಿ ಮತ್ತು ಷಡಕ್ಷರಿ ಮಂತ್ರಗಳನ್ನು ಜಪಿಸುವವನು ಸುಖಸಂಪತ್ತನ್ನು ಪಡೆಯುವನು. ಸದ್ಗತಿಯನ್ನು ಹೊಂದುವನು" ಎಂದು ಗುರುವು ಗೌಪ್ಯವಾಗಿ ಶಿಷ್ಯನ ಕಿವಿಯಲ್ಲಿ ಹೇಳಿದರೆ ಅದರ ಮೇಲೆ ತುಂಬಾ ವಿಶ್ವಾಸವನ್ನಿಟ್ಟು ನಡೆದುಕೊಂಡವನು ಇಷ್ಟಾರ್ಥವನ್ನು ತಪ್ಪದೆ ಪಡೆಯುವನು. ಇಷ್ಟಾರ್ಥಗಳು ಸಿದ್ಧಿಸದಿದ್ದರೆ ಅವನಲ್ಲಿ ಶ್ರದ್ಧೆಯು ಶಿಥಿಲವಾಗಿರಬೇಕೆಂದೇ ಅವರು ತಿಳಿಯುತ್ತಿದ್ದರಲ್ಲದೆ ಪ್ರಸಂಗವು ಒದಗಿಬಂದಿಲ್ಲವೆಂದು ಭಾವಿಸುತ್ತಿರಲಿಲ್ಲ. ನಮಗೆ ಬಂದಡರುವ ದುಃಖ ವಿಪತ್ತುಗಳಿಗೆ ನಮ್ಮ ಮನೋದೌರ್ಬಲ್ಯವೇ ಕಾರಣವಲ್ಲದೆ ಅನಿರ್ವಾಹ ಪ್ರಸಂಗಗಳೇನೂ ಕಾರಣವಲ್ಲವೆಂಬುದೇ ಮಂತ್ರನಿಷ್ಠರ ತಿಳುವಳಿಕೆ.

ಈಗಿನ ವಾತಾವರಣದಲ್ಲಿ ಮಂತ್ರ ಹೇಳುವವರಲ್ಲಿಯೂ ಕೇಳುವವರಲ್ಲಿಯೂ ಮಹತ್ವವಿಲ್ಲದ್ದರಿಂದ ಮಂತ್ರದಲ್ಲಿದ್ದ ಮಹತ್ವವೂ ಹಾರಿಹೋದಂತಾಗಿದೆ. ಏನೋ ಮಂತ್ರದಲ್ಲಿ ನಂಬಿಗೆಯನ್ನಿಟ್ಟ ಕೆಲವು ಬಡಪ್ರಾಣಿಗಳು ತಕ್ಕಮಟ್ಟಿಗೆ ಫಲಸಿದ್ಧಿಯನ್ನು ಪಡೆಯುತ್ತಿರಬಹುದು. ಶಿಷ್ಯನಲ್ಲಿ ಕಳಕಳಿಯ ಭಾವನೆ, ಗುರುವಿನಲ್ಲಿ ಪರಿಪಕ್ವ ವಿಚಾರಗಳು ತುಂಬಿಕೊಂಡಾಗ ಮಂತ್ರಕ್ಕೆ ಹೆಚ್ಚು ಸಾಮರ್ಥ್ಯವು ಬರಬಹುದಲ್ಲದ ಲೋಭಿಯಾದ ಗುರುವು ಭಕ್ತಿಹೀನನಾದ ಶಿಷ್ಯನ ಕಿವಿಯಲ್ಲಿ ಶಂಖವನ್ನೂದಿದಂತೆ ಮಂತ್ರವನ್ನೂದಿದರ ಅವರಿಂದೇನೂ ಪ್ರಯೋಜನವಾಗಲಾರದು.

ಇದು ಶಾಸ್ತ್ರೀಯ ಯುಗವು. ಇಂಥವರಲ್ಲಿ ಈಗ ಭಕ್ತಿ, ಭಾವನೆ, ಶ್ರದ್ಧೆಗಳು ಅಡಗಹತ್ತಿವೆ. ಇದೊಂದು ಆಧ್ಯಾತ್ಮಿಕ ಪ್ರಗತಿಗೆ ದೊಡ್ಡ ಆಘಾತವೆಂದೇ ಹೇಳಬಹುದು. ಸ್ಕೂಲು ಕಾಲೇಜಗಳಲ್ಲಾಗಲಿ ಮಠ ಮಾನ್ಯಗಳಲ್ಲಾಗಲಿ ಇಂಥ ಪವಿತ್ರ ಗುಣಗಳನ್ನು ಪೋಷಿಸಲು ಅವಕಾಶವೇ ಇಲ್ಲ. ಎಲ್ಲಿ ನೋಡಿದಲ್ಲಿ ಸ್ವಾರ್ಥ, ಅಕುಂಚನಸ್ವಭಾವ, ಒಣ ಬಡಿವಾರಗಳೇ ಕಣ್ಣಿಗೆ ಎದ್ದು ಕಾಣುವದರಿಂದ ಧಾರ್ಮಿಕ ಭಾವನೆಯು ಲೋಪವಾಗಹತ್ತಿದೆ. ಶಾಸ್ತ್ರೀಯ ಶೋಧದ ಮುಖ್ಯೋದ್ದೇಶವು ಸತ್ಯವನ್ನು ಕಂಡುಹಿಡಿದು ಪ್ರಯೋಗದಿಂದ ಆ ಸತ್ಯವನ್ನು ಸಿದ್ಧಮಾಡಿಕೊಡುವದಾಗಿರುತ್ತದೆ.

ನಾವು ಶಾಸ್ತ್ರಜ್ಞರೆದುರಿಗೆ ಲಿಂಗ, ವಿಭೂತಿ, ರುದ್ರಾಕ್ಷಿಗಳನ್ನಿರಿಸಿ ಅವುಗಳ ಸತ್ಯಾಂಶವನ್ನು ಶೋಧಿಸಿರೆಂದು ಹೇಳಿದರೆ ಅವರು ಆ ವಸ್ತುಗಳು ಕಲ್ಲು, ಕಟ್ಟಿಗೆ, ಮಣ್ಣಿನಂತೆ ಜಡವಾದ ಪದಾರ್ಥಗಳಿರುತ್ತವೆ ಎಂದಿಷ್ಟೇ ಹೇಳುವರಲ್ಲದೆ ಅವರ ದೃಷ್ಟಿಕೋನವು ಅದಕ್ಕೂ ಮುಂದೆ ಹರಿಯದು.

ಶಾಸ್ತ್ರಜ್ಞನ ದೃಷ್ಟಿಯಲ್ಲಿ ಗುರುವು ನಮ್ಮಂತೆ ಸರ್ವ ಅವಯವಗಳಿದ್ದ ಒಬ್ಬ ಮನುಷ್ಯನು; ಲಿಂಗವೆಂದರೆ ಶಿಲೆಯಿಂದ ಮಾಡಿದ ದೇವರು; ಜಂಗಮವೆಂದರೆ ಊರೂರು ತಿರುಗುವ ಒಬ್ಬ ಭಿಕ್ಷುಕನು; ಪಾದೋದಕವೆಂದರೆ ಕಾಲುತೊಳೆದ ನೀರು; ಪ್ರಸಾದವೆಂದರೆ ನಾವು ತಿನ್ನುವ ಆಹಾರ; ವಿಭೂತಿಯೆಂದರೆ ಬೂದಿಯ ಪೆಂಟೆಯು; ರುದ್ರಾಕ್ಷಿಯೆಂದರೆ ಒಂದು ಗಿಡದ ಕಾಯಿ; ಮಂತ್ರವೆಂದರೆ ವಟವಟ ಅನ್ನುವ ಶಬ್ದ; ಇದಕ್ಕಿಂತಲೂ ಹೆಚ್ಚಿನ ಅರ್ಥವನ್ನು ಶಾಸ್ತ್ರಜ್ಞನರಿಯನು. ಈಗಿನ ಸುಶಿಕ್ಷಿತರು ಶಾಸ್ತ್ರೀಯ ದೃಷ್ಟಿಯಿಂದ ಅಷ್ಟಾವರಣಗಳನ್ನವಲೋಕಿಸುವದರಿಂದ ನಿಜವಾಗಿಯೂ ಅವುಗಳಲ್ಲೇನೂ ಅರ್ಥವಿಲ್ಲ. ಮೇಲ್ಕಾಣಿಸಿದ ಶಾಸ್ತ್ರಜ್ಞರ ಅರ್ಥವು ಶಬ್ದಶಃ ನಿಜವಿರುತ್ತದೆ. ನಂಬಲಿಕ್ಕೂ ಅದು ಸುಲಭವಿರುತ್ತದೆ.

ಆದರೆ ಧಾರ್ಮಿಕ ಭಾವನೆಯು ಶಾಸ್ತ್ರವನ್ನು ಮೀರಿದಂತಹದು. ಪರಮಸದ್ಭಕ್ತನಾದ ವೀರಶೈವನಿಗೆ ಗುರುಲಿಂಗ ಜಂಗಮರೆಂದರೆ ಸಾಕ್ಷಾತ್ ಪರಶಿವನ ಸ್ವರೂಪಿಗಳು; ಪಾದೋದಕವೆಂದರೆ ಪರಶಿವನ ಜ್ಞಾನರಸವು ಪ್ರಸಾದವೆಂದರೆ ಶಿವನ ಕರುಣಾಮೃತವು; ವಿಭೂತಿಯೆಂದರೆ ಆ ಶಂಭುವಿನ ವೈಬೆಳಗು; ರುದ್ರಾಕ್ಷಿಯೆಂದರೆ ಆ ಪಶುಪತಿಯ ನೇತ್ರವು; ಮಂತ್ರ

ವೆಂದರೆ ಶಿವನ ವಾಕ್ಯ. ಈ ಮಾತಿಗೆ ಸುಶಿಕ್ಷಿತರೆನಿಸಿಕೊಳ್ಳುವವರು ಒಪ್ಪದಿದ್ದರೂ ಮೂಢ ನಂಬಿಗೆಯುಳ್ಳವರೂ ನಿಜವಾದ ಶ್ರದ್ಧೆಯುಳ್ಳವರೂ ತಪ್ಪದೆ ಒಡಂಬಟ್ಟು ಅದರಿಂದ ಸುಖಾನಂದಗಳನ್ನು ಪಡೆದುಕೊಳ್ಳುತ್ತಾರೆ. ಅವರು ಅನುಭವಿಸುವ ಆನಂದವು ಶಾಸ್ತ್ರೀಯ ಮತವಾದಿಗಳಿಗೆಂದಿಗೂ ಸಲ್ಲಲಾರದು. ಆದುದರಿಂದ ಶಾಸ್ತ್ರೀಯ ವಿಚಾರಕ್ಕಿಂತಲೂ ಅನುಭಾವವೇ ಮಿಗಿಲೆಂದು ಭಾವಿಸಿ ಅಷ್ಟಾವರಣಗಳಲ್ಲಿ ನಿಷ್ಠೆಯನ್ನಿಡುವದು ಪ್ರತಿಯೊಬ್ಬ ವೀರಶೈವನ ಕರ್ತವ್ಯವಾಗಿದೆ.

---

# ವರದಾನಿ ಗುಡ್ಡಮ್ಮ.

ವರದಾನಿ ಗುಡ್ಡಮ್ಮ ಭಕ್ತವತ್ಸಲೆ ನಿನ್ನ
ಚರಣದರುಶನದಾಸೆಯಿಂದೆ ನಾ ಹಗಲಿರುಳು
"ಬರಬೇಕು ಬರಬೇಕು" ಎಂದು ಹಂಬಲಿಸುತ್ತೆ
ಕಡೆಗಿಂದು ಬಂದು ನಿನ್ನ।
ಪರಮಪಾವನ ಮೂರ್ತಿಯನ್ನು ಕಣ್ದಣಿ ನೋಡಿ
ಹರುಷದಿಂದೊಡಗೂಡಿ ಭಕ್ತಿಗಿಂಬನು ಮಾಡಿ
ಹೊರಳುತ್ತಲಿರುತಿಹೆನು ನಿನ್ನಯಡಿಹುಡಿಯಲ್ಲಿ
ಬೆರಗಾಗಿ ತವ ಲೀಲೆಗೆ ॥೧॥

ಇಲ್ಲಿ ಸುಳಿಯುವ ಗಾಳಿ ಕಲ್ಪತರುವಿನ ಗಾಳಿ
ಇಲ್ಲಿರುವ ನುಣುಪಾದ ಹಾಸುಗಲ್ಲುಗಳೆಲ್ಲ
ಚಲ್ವವಾಗಿಹ ಹಂಸದುಪ್ಪಳದ ಹಾಸಿಗೆಗ-
ಳಿಲ್ಲಿರುವ ಗುಡ್ಡದೊಳಗೆ।
ಕಲ್ಲುಕೊರಕಲಿನಲ್ಲಿ ಕಂಡು ಬರುತಿಹ ನೀರು
ಅಲ್ಲಿ ಸಗ್ಗದೊಳಿರುವ ಸೊದೆಯನಣಕಿಸುತಿಹವು!
ಇಲ್ಲಿರುವ ಅನ್ನವದು ರುಚಿಯಾದ ಪ್ರಸಾದವದು!
ತಾಯೆ ಆದರಿಂದೆ ಜನರು ॥೨॥

ಬಾಳುವೆಯು ಕಾಟದಿಂ ಬೇಸತ್ತು ನಿನ್ನೆಡೆಗೆ
ಮೊಳೈಸಿ ತಪ್ಪದಲೆ ಭಕ್ತಿಯಿಂದಾಗಮಿಸಿ
ಬೀಳಲ್ಕೆ ನಿನ್ನ ಪಾದಂಗಳಿಗೆಯುವರ ತನು
ಶಾಂತಿಯನು ತಳೆಯುತಿಹುದು ।

ಮಾಲಿನ್ಯವನು ಕಳೆದು ಮನವು ತಿಳಿಯಾಗುವದು
'ಪಾಲಿಸವ್ವಾ!' ಎಂದು ನಿನ್ನ ಸನ್ನಿಧಿಯಲ್ಲಿ
ಕಾಲ ಕಳೆವರು ತಮ್ಮ ದುಃಖಚಿಂತೆಗಳನ್ನು
ಮರೆಯುತ್ತ ಜಗದ ತಾಯೆ ॥೩॥

ತಿರುಗಲೆಂತವ್ವ, ನಾ ನಿನ್ನ ಗುಡಿಯನು ಬಿಟ್ಟು,
ಬರುತಿಹವು ಹೊರಸೂಸಿ ದುಃಖದಿಂ ಕಣ್ಣೀರು!
ಬರಲಾರೆಯೇಂ ತಾಯೆ, ತವ ಮರುಳ ತರಳನಂ
ಮುದ್ದಿಡಲು ಶಾಂತಿಪ್ರದೇ!

ಇರುತಿರುವೆ ನೀನೆಲ್ಲ ತಳಗಳಲಿ ಎಂದು ಜನ
ಪೊರೆಯುತಿರೆ ನೀನೇಕೆ ಕಾಣಲೊಲ್ಲೆಯೆ ಅವ್ವ!
ಭರದಿಂದ ಬಾರವ್ವ ತೋರವ್ವ ಮೊಗವನ್ನು
ನಿನ್ನಳುವ ಕಂದಗೀಗ ॥೪॥

ಚಿತ್ತವಿಲ್ಲಿಯೆ ಸುಳಿವುದತ್ತ ನಾ ಪೋದರೂ!
ಸುತ್ತಲೂ ನಿನ್ನಯ ಸುಮೂರ್ತಿಗಳೆ ಕಾಣುವವು!
ಎತ್ತಲೂ ನಿನ್ನ ಸ್ತುತಿಗಾನಗಳೆ ಕೇಳುವವು!
ನಿನ್ನ ಧವಲಿತ ಕೀರ್ತಿಯು ।

ಹತ್ತು ದಿಕ್ಕುಗಳಲ್ಲಿ ಹರಡಿ ಹೊರಚಲ್ಲುವದು!
ಎತ್ತ ನಾನಿರುತಿರುವೆ! ನೀನೆತ್ತ ನೆಲಸಿರುವೆ!
ಮತ್ತೆ ವತ್ತರಸುವೆನು ತಿಳಿಯೆ ನಿನ್ನಿರವನ್ನು
ಕರುಣೆಯೊಂದಿರಲಿ ಜನನೀ ॥೫॥

**ಈಶ್ವರ ಸಣಕಲ್ಲ.**

# ಶ್ರೀ ಕೂಡಲ ಸಂಗಮ ಕ್ಷೇತ್ರವು.

ಈ ಕ್ಷೇತ್ರವು ವಿಜಾಪುರ ಜಿಲ್ಹಾ ಹುನಗುಂದ ತಾಲೂಕಿನಲ್ಲಿ ಕೃಷ್ಣೆ ಮತ್ತು ಮಲಪ್ರಭಾ ನದಿಗಳ ಸಂಗಮಸ್ಥಳದಲ್ಲಿದೆ. ಇಲ್ಲಿ ಸಂಗ ಮವೆಂದು ಗ್ರಾಮವಿದ್ದು ಅದು ಬಾಗಲಕೋಟೆಯಿಂದ ಈಶಾನ್ಯ ದಿಕ್ಕಿಗೆ ೩೦ ಮೈಲಿನ ಮೇಲೆ ಇದೆ. ಈ ಕ್ಷೇತ್ರ ಸ್ಥಾನದಲ್ಲಿ ಶ್ರೀಬಸವೇಶ್ವರನು ಕಲ್ಯಾಣಕ್ಕೆ ಹೋಗುವ ಪೂರ್ವದಲ್ಲಿ ಅನೇಕ ವರ್ಷ ವಾಸವಾಗಿದ್ದರಿಂದ ಮತ್ತು ಕಡೆಗೆ ಈ ಲಿಂಗದಲ್ಲಿಯೇ ಐಕ್ಯ ಹೊಂದಿದ್ದರಿಂದ ಇದು ವೀರ ಶೈವರಿಗೆ ಅತ್ಯಂತ ಪವಿತ್ರ ಸ್ಥಾನವಾಗಿರುತ್ತದೆ. ಆದರೆ ಇದು ವೀರ ಶೈವರಿಗಷ್ಟೇ ಅಲ್ಲ, ಎಲ್ಲ ಜಾತಿಯ ಜನರಿಗೂ ಕೂಡ ಪುಣ್ಯಸ್ಥಲವಾಗಿ ರುತ್ತದೆ.

ಈ ಕ್ಷೇತ್ರದ ಒಂದು ಸ್ಥಲ ಪುರಾಣವಿದ್ದು, ಅದರಲ್ಲಿ ಅನೇಕ ಮಹತ್ವದ ಮನೋರಂಜಕ ವಿಷಯಗಳಿರುವದರಿಂದ ಅದರೊಳಗಿನ ಸಂಗ ತಿಗಳನ್ನು ನಾವು ಇಲ್ಲಿ ವಿವರಿಸಿದ್ದೇವೆ.

ಕೃಷ್ಣಾ ನದಿಗೆ ಮುಖ್ಯವಾಗಿ ೫ ಸಂಗಮಗಳಿವೆ. ಅವು ಯಾವ ವೆಂದರೆಃ— (೧) ಪಂಚಗಂಗಾ ಸಂಗಮ ಅಥವಾ ನರಸೋಬಾನ ವಾಡಿ (೨) ಘಟಪ್ರಭೆಯ ಸಂಗಮ ಅಥವಾ ಮೂರಮಟ್ಟಿ ಸಂಗಮ (೩) ಮಲಾಪಹಾರೀ ಸಂಗಮ ಅಥವಾ ಕೂಡಲಸಂಗಮ (೪) ಭೀಮಾ ಸಂಗಮ ಅಥವಾ ಕಾಡಲೂರ ಸಂಗಮ (೫) ತುಂಗಭದ್ರಾ ಸಂಗಮ ಅಥವಾ ನಿವೃತ್ತಿ-ಸಂಗಮ ಎಂದು ಇದ್ದು, ಇವೆಲ್ಲವೂ ಕರ್ನಾಟಕ ಭಾಗದಲ್ಲಿ ಅತ್ಯಂತ ಪ್ರಸಿದ್ಧವಾಗಿರುತ್ತವೆ.

ಕೂಡಲಸಂಗಮ ಕ್ಷೇತ್ರದ ವಿಸ್ತಾರವು ಸುತ್ತಲು ೫ ಮೈಲು ಇದೆ. ನೈರುತ್ಯ ದಿಕ್ಕಿಗೆ ಮಲಾಪಹಾರೀ ದಂಡೆಯ ಮೇಲೆ ಪಾಪನಾಥನಾಳ ವೆಂಬ ಗ್ರಾಮವಿದ್ದು ಇಲ್ಲಿ ಶ್ರೀಪಾಪೇಶ್ವರ ದೇವಾಲಯ ಒಂದುಂಟು. ಪರಶುರಾಮನು ೨೧ ಸಾರೆ ಕ್ಷತ್ರಿಯ ಅರಸರನ್ನು ಸಂಹರಿಸಿದ್ದ ರಿಂದ ಉಂಟಾದ ತನ್ನ ಪಾಪವನ್ನು ಇಲ್ಲಿ ಕಳೆದುಕೊಂಡನಂತೆ.

ಈ ಕ್ಷೇತ್ರಕ್ಕೆ ಐದು ಹೆಸರುಗಳಿವೆ ಅವು ಯಾವವೆಂದರೆಃ—(೧) ಕೂಡಲಸಂಗಮ (೨) ಕಪ್ಪಡಿ ಸಂಗಮ (೩) ಕಪಿಲಕ್ಷೇತ್ರ (೪) ಭಾಸ್ಕರ ಕ್ಷೇತ್ರ (೫) ಪರಶುರಾಮ ಕ್ಷೇತ್ರ.

ಕೃತಯುಗದಲ್ಲಿ ಈ ಸಂಗಮಕ್ಕೆ ಭಾಸ್ಕರಕ್ಷೇತ್ರವೆಂತಲೂ ಈಶ್ವರನಿಗೆ ಅಮೃತೇಶ್ವರನೆಂದೂ, ತ್ರೇತಾಯುಗದಲ್ಲಿ ಸಂಗಮಕ್ಕೆ ಪರಶುರಾಮಕ್ಷೇತ್ರವೆಂದೂ ದೇವರಿಗೆ ಯಜ್ಞೇಶ್ವರನೆಂದೂ, ದ್ವಾಪರದಲ್ಲಿ ಸಂಗಮಕ್ಕೆ ಕಪಿಲಕ್ಷೇತ್ರವೆಂದೂ ದೇವರಿಗೆ ಸಿದ್ಧೇಶ್ವರನೆಂದೂ, ಕಲಿಯುಗದಲ್ಲಿ ಸಂಗಮಕ್ಷೇತ್ರವೆಂದೂ ದೇವರಿಗೆ ಸಂಗಮೇಶ್ವರನೆಂದೂ, ಹೆಸರುಗಳಿದ್ದ ಹಾಗೆ ಸ್ಥಳ ಪುರಾಣದಿಂದ ತಿಳಿಯಬರುತ್ತದೆ.

ದೇವರ ಮುಂದೆ ಎರಡು ನಂದಿಗಳ ಸ್ಥಾಪನೆಯು ಇದೆ. ಮೊದಲು ಇದ್ದದ್ದು ಅಮೃತೇಶ್ವರನ ಮುಂದಿನದೆಂತಲೂ, ಅದರ ಮುಂದಿನದು ಪರಶುರಾಮನು ಪೂಜೆ ಮಾಡಿ ಐಕ್ಯವಾದ ನಂತರ ಸ್ಥಾಪಿಸಿದ್ದೆಂತಲೂ ಹೇಳಲ್ಪಡುತ್ತದೆ.

ನದಿಯಲ್ಲಿ ಮತ್ತು ದಂಡೆಯ ಮೇಲೆ ಕೂಡಿ ೮ ಲಿಂಗಗಳೂ ನೀರಿನಲ್ಲಿ ೧೩ ತೀರ್ಥಗಳೂ ಉಂಟೆಂದು ತಿಳಿಯಲ್ಪಡುತ್ತಿದೆ.

ಬಿಳೇ ಕಲ್ಲಿನ ಮೇಲೆ ಒಂದೇ ಜಲಹರಿಯಲ್ಲಿ ಮೂರು ಪಿಂಡಿಕೆಗಳಿದ್ದು ಇವುಗಳಿಗೆ ತ್ರಿಕುಟೇಶ್ವರನೆಂದು, ಕೂಡಲದ ಚೌಕ ಮಂಟಪದಲ್ಲಿ ಕೂಡಲೇಶ್ವರನೆಂದು, ಈಶಾನ್ಯಕ್ಕೆ ಸೋಮೇಶ್ವರನೆಂಬುದೊಂದು ಹೀಗೆ ಲಿಂಗಗಳಲ್ಲದೆ, ದೇವರ ಗುಡಿಯಲ್ಲಿ ೩ ಲಿಂಗಗಳು ತೋರಿಸಲ್ಪಡುತ್ತವೆ. ಈ ೮ ಲಿಂಗಗಳ ಹೆಸರುಗಳು ಯಾವವೆಂದರೆ:— (೧) ಅಮೃತೇಶ್ವರ (೨) ಯಜ್ಞೇಶ್ವರ (೩) ಚಂಡೇಶ್ವರ (೪) ರಾಮೇಶ್ವರ (೫) ಸಂಗಮೇಶ್ವರ (೬) ಸೋಮೇಶ್ವರ (೭) ಸಿದ್ಧೇಶ್ವರ (೮) ಕಪಿಲೇಶ್ವರ. ಸೋಮೇಶ್ವರನ ಹತ್ತರವೇ ಗಣಪತಿಯೊಂದುಂಟು.

ಅಲ್ಲದೆ ೧೩ ತೀರ್ಥಗಳು ಇಲ್ಲಿ ಇದ್ದು ಅವುಗಳ ಹೆಸರುಗಳು:— (೧) ಗೋಷ್ಪಾದ ತೀರ್ಥ (೨) ವಾಯು ತೀರ್ಥ (೩) ಸೂರ್ಯ ತೀರ್ಥ (೪) ಶುಕ್ಲ ತೀರ್ಥ (೫) ಶಂಖ ತೀರ್ಥ (೬) ಚಕ್ರ ತೀರ್ಥ (೭) ಐರಾವತ ತೀರ್ಥ (೮) ಕಪಿಲ ತೀರ್ಥ (೯) ಸಿದ್ಧ ತೀರ್ಥ (೧೦) ಜಟಾ ತೀರ್ಥ (೧೧) ಋಣಮೋಚನ ತೀರ್ಥ (೧೨) ಗೌರೀ ತೀರ್ಥ (೧೩) ಕೋಟಿ ತೀರ್ಥ.

ಗೋಷ್ಪಾದ ತೀರ್ಥ:— ಉತ್ತರ ಬಾಗಿಲು ಮುಂದೆ ಕೃಷ್ಣಾನದಿಯಲ್ಲಿ ಒಂದು ಕಲ್ಲಿನಲ್ಲಿ ಆಕಳ ಖುರ ಮೂಡಿದಂತೆ ಒಂದು ತಗ್ಗು

ಈಗಲೂ ಇದ್ದು ಈ ಸ್ಥಳಕ್ಕೆಯೇ ಗೋಷ್ಪಾದತೀರ್ಥವೆಂಬ ಹೆಸರು ಇದೆ. ಆಕಳು ಮತ್ತು ಎತ್ತು ಇವುಗಳನ್ನು ಹೊಡೆದು ಹಿಂಸಿಸಿದವನು ಇಲ್ಲಿ ಸ್ನಾನ ಮಾಡಿದರೆ ಪಾಪದಿಂದ ಬಿಡುಗಡೆ ಹೊಂದುತ್ತಾನೆ.

ವಾಯು ತೀರ್ಥ:— ಇಲ್ಲಿ ಹನುಮಂತನ ಮೂರ್ತಿಯು ಇದ್ದು ಇಲ್ಲಿ ಪೂಜೆ ಮಾಡುವವನು ಬೇನೆಗಳಿಂದ ದೂರಾಗುವನು.

ಸೂರ್ಯ ತೀರ್ಥಃ— ವಾಯುತೀರ್ಥದ ಸಮೀಪದಲ್ಲಿಯೇ ಇದು ಇದೆ. ಇಲ್ಲಿ ಕುದುರೆಯು ಚಿನ್ಹದ ಕಲ್ಲು ಇದೆ. ಇದರ ಪೂರ್ವಕ್ಕೆ ಕೆಂಪು ಕಲ್ಲು ಕಾಣಿಸುತ್ತದೆ. ಇಲ್ಲಿ ಸ್ನಾನ ಮಾಡಿ ಪೂಜಿಸಿದವನು ಇಷ್ಟಸಿದ್ಧಿಯನ್ನು ಹೊಂದುತ್ತಾನೆ. ಪಾವಮಾದನೆಂಬ ಋಷಿಯು ಇಲ್ಲಿಯೇ ತಪಸ್ಸು ಮಾಡಿದನೆಂದು ಖ್ಯಾತಿಯು ಇದೆ.

ಶುಕ್ಲ ತೀರ್ಥಃ— ಕೂಡಲ ಮುಖದ ಹತ್ತರ ಸ್ನಾನ ಮಾಡಿ ಪಂಚಲಿಂಗಗಳ ಅಭಿಷೇಕ ಮಾಡಿದರೆ ಎಲ್ಲ ಪಾಪಗಳಿಂದ ಮುಕ್ತ ನಾಗುತ್ತಾನೆ. ಇದರ ಹತ್ತಿರವೇ ಸೋಮೇಶ್ವರನು ಇರುತ್ತಾನೆ.

ಶಂಖ ತೀರ್ಥಃ— ಮೇಲೆ ವಿವರಿಸಿದ ಆಕಳ ಖುರದ ಸಮೀಪ ದಲ್ಲಿಯೇ ಪಶ್ಚಿಮ ಪ್ರವಾಹದಲ್ಲಿ ಸ್ನಾನ ಮಾಡಿದ್ದಾದರೆ ಶುದ್ಧನಾಗು ತ್ತಾನೆ. ಇಲ್ಲಿಯು ಕಲ್ಲಿನ ಮೇಲೆ ಶಂಖದ ಆಕೃತಿಯಂತೆ ಚಿನ್ಹವಿರುವ ಕಾರಣ ಶಂಖತೀರ್ಥವೆನ್ನುವರು.

ಚಕ್ರ ತೀರ್ಥಃ— ದೇಸಾಯಿ ಬಂಡೆಗಲ್ಲಿನ ಹತ್ತಿರ ಉತ್ತರಕ್ಕೆ ಚಕ್ರಾಕಾರದ ಕಲ್ಲು ಇರುತ್ತದೆ. ಇದು ಯಾವಾಗಲೂ ನೀರಿನಲ್ಲಿ ಮುಳುಗಿರುತ್ತದೆ. ಇಲ್ಲಿ ೬ ತಿಂಗಳು ಸ್ನಾನ ಮಾಡಿದವನು ಸಂಸಾರ ಚಕ್ರದಿಂದ ಮುಕ್ತನಾಗುತ್ತಾನೆ.

ಐರಾವತ ತೀರ್ಥಃ— ಚಕ್ರತೀರ್ಥದ ಪಶ್ಚಿಮಕ್ಕೆ ಕಲ್ಲಿನ ಮೇಲೆ ವಿಷ್ಣುಪಾದ ಚಿನ್ಹವದೆ. ಇಲ್ಲಿ ಈಶ್ವರನ ಪೂಜೆ ಮಾಡಿದ್ದಾದರೆ ಮುಕ್ತಿ ಯುಂಟಾಗುತ್ತದೆ. ಇಲ್ಲಿ ಇಂದ್ರನು ತಪಸ್ಸು ಮಾಡಿ ಐಶ್ವರ್ಯ ಹೊಂದಿದನಂತೆ.

ಕಪಿಲ ತೀರ್ಥಃ— ಐರಾವತ ತೀರ್ಥದ ಉತ್ತರಕ್ಕೆ ವಿಷ್ಣುಪಾದ ಇರುವ ಬಂಡೆಯಲ್ಲಿ ಕರೇ ಕಲ್ಲಿನ ಕೆಳಗೆ ಸ್ನಾನ ಮಾಡಿ ಪೂಜೆ ಮಾಡಿದರೆ ಸಕಲ ರೋಗಗಳು ನಾಶವಾಗುವವು.

ಸಿದ್ಧ ತೀರ್ಥವು:— ಕೂಡಲ ಮುಖದ ಪೂರ್ವಕ್ಕೆ ಗವಿ ಕುಂಡದ ಹತ್ತಿರ ಸ್ನಾನ ಮಾಡಿ ಸಿದ್ಧೇಶ್ವರನ ಪೂಜೆಯಿಂದ ಅನೇಕರು ಸಿದ್ಧಿಯನ್ನು ಹೊಂದಿದರಂತೆ. ಈ ಕಲ್ಲಿನ ಕೆಳಗೆ ಒಂದು ದೊಡ್ಡ ಗವಿ ಇರುತ್ತದಂತೆ. ಇದರ ಬಾಗಿಲಿಗೆ ಕಲ್ಲುಗುಂಡು ಆನಿಸಿರುತ್ತಾರೆ. ಇಲ್ಲಿ ಸಿದ್ಧ ಶರಣರು ವಾಸಿಸುತ್ತಾರೆಂದು ಜನರು ತಿಳಿಯುತ್ತಾರೆ.

ಜಟಾ ತೀರ್ಥ:— ಉಭಯ ನದಿಗಳ ಸಂಗಮದ ಪೂರ್ವಕ್ಕೆ ಆಚೇ ದಂಡೆಗೆ ವೀರಭದ್ರ ದೇವರ ಗುಡಿಯುಂಟು. ಇದರ ಉತ್ತರಕ್ಕೆ ಕೃಷ್ಣಾ ನದಿಯಲ್ಲಿ ಸ್ನಾನ ಮಾಡಿ ವೀರಭದ್ರನ ಪೂಜೆ ಮಾಡಿದರೆ ಶಿವ ಸಾಯುಜ್ಯವು ಪ್ರಾಪ್ತವಾಗುತ್ತದೆ. ಇದು ಭೈರವ ತೀರ್ಥ ಅಥವಾ ಜಟಾ ತೀರ್ಥ.

ಋಣವಿಮೋಚನ ತೀರ್ಥ:— ತಂಗಡಿಗೆಯ ಹಾದಿಯ ಮೇಲೆ ಹೊಳೆಯಲ್ಲಿ ಸ್ನಾನ ಮಾಡಿ ಸಂಗಮೇಶ್ವರನನ್ನು ಪೂಜೆ ಮಾಡುವದರಿಂದ ಹಿಂದಿನ ಜನ್ಮದಲ್ಲಿ ಸಾಲಕೊಡದ್ದರ ಪಾಪವು ನಾಶವಾಗಿ ಮುಕ್ತಿಯು ದೊರೆಯುತ್ತದೆ ಡಾಲ್ಭ್ಯನೆಂಬ ಬ್ರಾಹ್ಮಣನು ತನ್ನ ಋಣದಿಂದ ವಿಮೋಚನನಾಗಿ ಇಲ್ಲಿ ಮುಕ್ತಿಯನ್ನು ಹೊಂದಿದನಂತೆ.

ಗೌರೀ ತೀರ್ಥ:— ಆಡಿಹಾಳ ಗ್ರಾಮದ ಇದಿರಿಗೆ ಗಂಗೆ ಗೌರೀ ಕಲ್ಲು ಇದೆ. ಇದರ ಹತ್ತಿರ ಕಲ್ಲು ಬಂಡೆಯ ಮೇಲೆ ಕಡೆಗೋಲಿನ ಚಿನ್ಹವದೆ. ಇದೇ ಗೌರೀ ತೀರ್ಥವು. ಇಲ್ಲಿ ಹೆಂಗಸರು ಸ್ನಾನ ಮಾಡಿ ಕಡೆಗೋಲು ಪೂಜೆ ಮಾಡಿದರೆ ಅಖಂಡ ಸೌಭಾಗ್ಯವು ದೊರೆಯುತ್ತದಂತೆ.

ಕೋಟಿ ತೀರ್ಥ:— ಗವಿಕುಂಡದ ದಕ್ಷಿಣಕ್ಕೆ ಮಲಪ್ರಭೆಯ ಊರ ಕಡೆಯ ದಂಡೆಯ ಮೇಲೆ ಕಲ್ಲು ಬಂಡೆಯಲ್ಲಿ ಎರಡು ರುದ್ರ ಪಾದಗಳು ಮೂಡಿರುತವೆ. ಇದಕ್ಕೆ ರುದ್ರಪಾದತೀರ್ಥವೆಂದೆನ್ನುವರು. ಕೋಟಿ ತೀರ್ಥವೆಂತಲೂ ಇದಕ್ಕೆ ಹೆಸರು ಇದೆ.

ಶ್ರೀಸಂಗಮೇಶ್ವರನ ಗುಡಿಯಲ್ಲಿರುವ ಲಿಂಗದ ಸುತ್ತಲು ಎರಡು ಇಂಚು ಅಗಲಾದ ಪೊಳ್ಳು ಇರುತ್ತದೆ. ಇದೇ ಪಾನ ಬಟ್ಟಲವು. ಅಭಿಷೇಕದ ನೀರು ಇದರಲ್ಲಿ ಇಳಿದು ಬಿಡುವದರಿಂದ ಇದಕ್ಕೆ ಈ ಹೆಸರು ಬಂದಿದೆ. ದುರ್ಭಿಕ್ಷ ಕಾಲದಲ್ಲಿ ನೀರು ಹೋಗಿ ಬಿಡುತ್ತದೆ. ಇದು

ಅಶುಭ ಚಿಹ್ನವೆಂದು ಜನರು ತಿಳಿಯುತ್ತಾರೆ. ಅಭಿಷೇಕದ ನೀರು ಈ ನೀರಿನ ಮೇಲಿಂದ ಹರಿದು ಜಲಹರಿಯಲ್ಲಿ ಬೀಳುತ್ತದೆ.

ಸಂಗಮೇಶ್ವರ ಮೂರ್ತಿಯು ಹುಟ್ಟು ಲಿಂಗವದೆ. ಅಂದರೆ ಇದು ಜನರು ಕಟಿದು ನಿರ್ಮಿಸಿದ ಲಿಂಗವಲ್ಲ. ಕಾರಣ ಸಿದ್ಧೇಶ್ವರನೆಂತಲೂ ಇದಕ್ಕೆ ಹೆಸರು ಬಂದಿದೆ. ಅಮೃತೇಶ್ವರನೆಂತಲೂ ಕರೆಯುತ್ತಾರೆ.

ಶ್ರೀಬಸವೇಶ್ವರನು ಈ ಲಿಂಗದಲ್ಲಿಯೇ ಐಕ್ಯವಾದನೆಂದು ಹೇಳಲ್ಪಡುತ್ತಿದೆ. ಅವನು ಐಕ್ಯವಾದದ್ದು ಶ್ರೀಸಂಗಮೇಶ್ವರ ದೇವರ ಪಿಂಡಿಕೆಯಲ್ಲಿ ಉತ್ತರಬದಿಗೆಂದು ಹೇಳುತ್ತಾರೆ. ಈ ಸ್ಥಳದಲ್ಲಿ ಈಗಲೂ ಸ್ವಲ್ಪ ತಗ್ಗು ಕಾಣುತ್ತಿದೆ.

ಕೃಷ್ಣೆಯು ಪರಶುರಾಮನಿಗೆ ಹೆಚ್ಚಿಗೆ ಸಂಬಂಧಪಟ್ಟ ಹಾಗೆ ಕಾಣುತ್ತದೆ. ಇದೇ ನದಿಯ ಧಡದಲ್ಲಿರುವ ಶೂರ್ಪಾಲಿ ಎಂಬ ಗ್ರಾಮದಲ್ಲಿ ಪರಶುರಾಮನು ಮುಂಜಾವಿನಲ್ಲಿ ಕಪ್ಪಡಿಸಂಗಮದಲ್ಲಿ ಮಧ್ಯಾನ್ಹ ಕಾಲದಲ್ಲಿ ಮತ್ತು ಶ್ರೀಶೈಲದಲ್ಲಿ ಸಾಯಂಕಾಲದಲ್ಲಿ ಇರುವನೆಂದು ತಿಳಿಯಲ್ಪಟ್ಟಿದೆ.

ಊರ ಮುಂದೆ ಅನೇಕ ಬಂಡೆಗಲ್ಲುಗಳು ಇದ್ದು ಅವುಗಳಿಗೆ ಸಹ ಪವಿತ್ರತೆಯು ಕಲ್ಪಿಸಲ್ಪಟ್ಟಿದೆ. ಆ ಕಲ್ಲುಗಳು ಯಾವವೆಂದರೆ:— (೧) ಆಕಳ ಖುರದ ಕಲ್ಲು (೨) ದೇಸಾಯಿಬಂಡೆ (೩) ಕರೇಕಲ್ಲು (೪) ಬಿಳೀಕಲ್ಲು (೫) ಕೆಂಪುಕಲ್ಲು (೬) ಗಂಗೇಗೌರೀಕಲ್ಲು (೭) ರುದ್ರಪಾದಕಲ್ಲು (೮) ಆನೆಯಕಲ್ಲು (೯) ಕುದುರೆಕಲ್ಲು (೧೦) ಆಚಾರಬಂಡೆ (೧೧) ಗವಿಕುಂಡ (೧೨) ವಿಠ್ಠಲರಾಯನ ಕಂಬ. ಇವುಗಳಲ್ಲಿ ಕೆಲವು ಹಿಂದೆಯೇ ವರ್ಣಿಸಲ್ಪಟ್ಟಿವೆ.

ಇವು ಅಲ್ಲದೆ ಇನ್ನೂ ಕೆಲವು ಪವಿತ್ರ ಸ್ಥಾನಗಳೆಂದು ತಿಳಿಯಲ್ಪಟ್ಟಿವೆ. ಅವು ಯಾವವೆಂದರೆ, ಸೀತಾಕುಂಡ, ಅಕ್ಕಮ್ಮನ ಮಡು, ಶಂಭುಲಿಂಗೇಶ್ವರನ ಗುಡಿ, ಗಡ್ಡಿಸಂಗಪ್ಪ, ನೀಲಗಂಗಮ್ಮನ ಗುಡಿ, ಬೇಳೀಬಸಪ್ಪ, ಪಾದಗಟ್ಟಿ, ನೂರೊಂದಪ್ಪನ ಗುಡಿ, ಅರಳೀಕಟ್ಟೆಪ್ಪ ಮುಂತಾದವು ಇವೆ.

ಗುಡಿಯು ಪುರಾತನಕಾಲದ್ದು ಇದೆ. ಅದು ಸಾವಿರ ವರುಷದಕಿಂತಲೂ ಹಿಂದಿನದು ಇರಬಹುದು. ರಂಗಮಂಟಪದ ನಾಲ್ಕು ಕಂಬಗಳಲ್ಲಿ ಕೊರೆದ ಮೂರ್ತಿಗಳು ಇವೆ. ಗರ್ಭಗುಡಿಯಲ್ಲಿ ದೇವರ ಪಶ್ಚಿ

ಮಕ್ಕೆ ಒಂದು ಶಕ್ತಿಯ ಪ್ರತಿಮೆ ಇರುತ್ತದೆ ಇದಕ್ಕೆ ೮ ಆಯುಧಗಳನ್ನು ಧರಿಸಿದ ೮ ಕೈಗಳು ಇರುವ ಕಾರಣ ಅಷ್ಟಭುಜಶಕ್ತಿ, ಪಾರ್ವತೀದೇವಿ ಎಂದು ಜನರು ಪೂಜಿಸುತ್ತಾರೆ.

ಗರ್ಭಗುಡಿಯಲ್ಲಿ ಶ್ರೀ ಚನ್ನಬಸವೇಶ್ವರ ಮೂರ್ತಿಯು ಉತ್ತರಾಭಿಮುಖವಾಗಿ ಸ್ಥಾಪಿತವಾಗಿರುತ್ತದೆ. ಇದನ್ನು ಪೂಜಿಸಿ ಅನೇಕರು ಜ್ಞಾನ ಸಂಪಾದನೆ ಮಾಡಿಕೊಂಡಿರುವರು.

ಅಲ್ಲದೆ ಇಲ್ಲಿ ಶೃಂಗೀ, ಭೃಂಗೀ ಮೊದಲಾದ ಪ್ರಮಥಗಣಗಳ ಮೂರ್ತಿಗಳೂ ಇರುತ್ತವೆ.

ಈ ಕ್ಷೇತ್ರಕ್ಕೆ ವೀರಶೈವರಲ್ಲದೆ ಶಾಕ್ತರು, ಸೌರರು, ಶೈವರು, ಗಾಣಪತ್ಯರು, ಸ್ಮಾರ್ತರು, ವೈಷ್ಣವರು, ಪಾಂಚಾಳರು ಮುಂತಾದ ಎಲ್ಲ ಜನರು ನಡಕೊಳ್ಳುತ್ತಾರೆ. ಶಾಕ್ತರು ಶಕ್ತಿಯ ಪ್ರತಿಮೆಯನ್ನೂ ಶೈವರು ಸಂಗಮೇಶ್ವರ ಲಿಂಗವನ್ನೂ ಗಾಣಪತ್ಯರು ಗಣೇಶ ಪ್ರತಿಮೆಯನ್ನೂ ಸ್ಮಾರ್ತರು ಅಮೃತೇಶ್ವರನನ್ನೂ, ವೈಷ್ಣವರು ಕೇಶವ ದೇವರನ್ನೂ ವೀರಶೈವರು ಸಂಗಮನಾಥ ಮತ್ತು ಬಸವೇಶ್ವರನನ್ನೂ ಪಾಂಚಾಳರು ವೀರಭದ್ರ ದೇವರನ್ನೂ ಪೂಜಿಸುತ್ತಾರೆ. ಈ ಎಲ್ಲ ಪ್ರತಿಮೆಗಳು ಗುಡಿಯಲ್ಲಿಯೇ ಇವೆ.

ಗುಡಿಯ ಆವಾರದ ಪಶ್ಚಿಮ ಹೆಬ್ಬಾಗಿಲಿನ ಬದಿಗೆ ಒಂದು ಶಿಲಾಲಿಪಿ ಇದೆ. ಇದು ಚಾಲುಕ್ಯರ ಕಾಲಿನದು ಇದೆ.

ಇಲ್ಲಿಯ ಮಠಗಳಲ್ಲಿ (೧) ಸಾರಂಗಮಠ (೨) ವಿರಕ್ತಮಠ (೩) ಕಳ್ಳೀಮಠ (೪) ಶಿವಯೋಗಿಮಠ (೫) ಪಡದಯ್ಯನ ಮಠ ಇವುಗಳು ಮಹತ್ವವಾದವುಗಳು. ಸಾರಂಗಮಠದಲ್ಲಿ ಕೆಲವು ಶತಮಾನಗಳ ಹಿಂದೆ ಇಡೀ ಕರ್ನಾಟಕ ಮತ್ತು ದಕ್ಷಿಣದೇಶಗಳಲ್ಲಿ ಸಂಚರಿಸಿ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿ ಹೋದ ಆದಿಸಾರಂಗ ದೇವರ ಗದ್ದುಗೆಯು ಇದೆ. ಕುಂಭಕೋಣದಲ್ಲಿಯ ಮಹತ್ವದ ಸಾರಂಗಮಠದ ಸಂಸ್ಥಾಪಕರೇ ಇವರು.

ಅಲ್ಲದೆ (೧) ಶಂಕರಭಾರತೀಮಠ (೨) ಉತ್ತರಾದಿಮಠ (೩) ರಾಘವೇಂದ್ರಸ್ವಾಮಿಮಠ ಈ ಪ್ರಕಾರ ಮಠಗಳೂ ಅವುಗಳ ಸ್ಥಾನಗಳೂ ಇಲ್ಲಿ ಇವೆ.

ಸಂಗಮಕ್ಷೇತ್ರದಿಂದ ಈಶಾನ್ಯಕ್ಕೆ ೧ ಮೈಲಿನ ಮೇಲೆ ತಂಗಡಿಗಿ ಎಂಬ ಗ್ರಾಮವಿದ್ದು ಅದಕ್ಕೆ ಸಮೀಪವಾಗಿ ನದಿಯ ಧಡದಲ್ಲಿ ನೀಲ

ಗಂಗವ್ವನ ಗುಡಿಯು ಇದೆ. ನೀಲಗಂಗವ್ವನು ಬಸವೇಶ್ವರನ ಪತ್ನಿಯು. ಶ್ರೀ ಬಸವೇಶ್ವರನು ಸಂಗಮಕ್ಕೆ ಹೋದ ಬಳಿಕ, ನೀಲಗಂಗವ್ವನೂ ಅವನನ್ನು ಹಿಂಬಾಲಿಸಿ ಈ ಸ್ಥಳದಲ್ಲಿ ಬಂದಳು. ಆದರೆ ಅಷ್ಟರಲ್ಲಿ ಬಸವೇಶ್ವರನು ಲಿಂಗೈಕ್ಯನಾದ ಸುದ್ದಿಯನ್ನು ಕೇಳಿದ ಕೂಡಲೆ, ನೀಲಗಂಗವ್ವನು 'ಇದೇ ಸ್ಥಳದಲ್ಲಿ ತನ್ನ ಲಿಂಗದಲ್ಲಿ ಐಕ್ಯಳಾದಳು. ಐಕ್ಯಳಾದ ಸ್ಥಳದಲ್ಲಿ ಗುಡಿಯು ಕಟ್ಟಲ್ಪಟ್ಟಿದೆ. ತಂಗಡಿಗಿ ಗ್ರಾಮದ ಹೆಸರು "ತಂಗಿ ಅಡಗಿದಳು" ಎಂಬುದರಿಂದ ಉಂಟಾಗಿದೆಂದು ಜನರು ಹೇಳುತ್ತಾರೆ.

ಈ ದೇವಾಲಯದ ಜಾತ್ರೆಯು ಚೈತ್ರ ಬಹುಳ ಪಂಚಮಿ ದಿವಸ ಪ್ರತಿವರ್ಷ ಆಗುತ್ತದೆ. ಮೂಲಾನಕ್ಷತ್ರದಲ್ಲಿ ತೇರು ಎಳೆಯುತ್ತಾರೆ. ತೇರು ಬಹಳ ದೊಡ್ಡದು ಇದ್ದು ಅದರ ಎತ್ತರ ೧೦೧ ಅಡಿ ಇದೆ. ಜಾತ್ರೆಯಲ್ಲಿ ಒಕ್ಕಲುತನದ ಸಾಮಾನುಗಳ ವ್ಯಾಪಾರ ಬಹಳವಾಗುತ್ತದೆ. ಜಾತ್ರೆಗಿಂತ ೯ ದಿವಸ ಮೊದಲು "ಬಸವನ ಪಟ" ಎಂದು ಕಟ್ಟುತ್ತಾರೆ. ಆಗ ಪ್ರತಿದಿವಸ ರಾತ್ರೆಯಲ್ಲಿ ಸಣ್ಣ ತೇರನ್ನು ಎಳೆಯುತ್ತಾರೆ. ಮಾರ್ಗಶೀರ್ಷ ತಿಂಗಳದಲ್ಲಿ ಕಾರ್ತಿಕವಾಗುತ್ತದೆ. ಶ್ರಾವಣದಲ್ಲಿ ಮಹಾಭಿಷೇಕವಾಗುತ್ತದೆ. ಗುಡಿಯ ಪೂಜಾರರು ಜೀರ ಮೊದಲಾದವರಿಗೆ ಇನಾಮು ಭೂಮಿಗಳು ಇರುತ್ತವೆ.

ಆದರೆ ಈ ಸ್ಥಳವು ಪುರಾಣಪ್ರಸಿದ್ಧವಲ್ಲದೆ ಇತಿಹಾಸಪ್ರಸಿದ್ಧವೂ ಇರುತ್ತದೆ. ಇದರ ನೆರೆಯಲ್ಲಿಯೇ ತಾಳೀಕೋಟೆಯ ರಣಾಂಗಣವು ಇದೆ. ಈ ಮಹಾಯುದ್ಧವು ಕೃಷ್ಣೆಯ ಉತ್ತರದಂಡೆಯಲ್ಲಿರುವ ತಂಗಡಿಗಿ ಗ್ರಾಮದಿಂದ ಪೂರ್ವಕ್ಕೆ ೮ ಮೈಲುಗಳ ಮೇಲಿರುವ ರಕ್ಕಸಿಗಿಯ ವರೆಗೆ ಇರುವ ಮೈದಾನಿನಲ್ಲಿ ಆಯಿತು. ಶ್ರೀ ಸಂಗಮನಾಥನ ದೇವಾಲಯದ ಎತ್ತರವಾದ ಸ್ಥಳದಿಂದ ಈ ಸಮರಾಂಗಣವನ್ನು ಬಹು ದೂರದ ವರೆಗೆ ಕಾಣಬಹುದಾಗಿದೆ.

ಇಲ್ಲಿಯ ಹವೆ ಮತ್ತು ನೀರು ಬಹು ಗುಣಕಾರಿಯಾಗಿವೆ. ಸುತ್ತಲೂ ವಿಶಾಲವಾದ ಬೈಲುಸೀಮೆಯು ಇದ್ದು ಇಲ್ಲಿ ರೋಗೋಪದ್ರವಗಳಿಗೆ ಆಸ್ಪದವಿಲ್ಲ. ತಿಂದ ಅನ್ನವು ಒಳ್ಳೇ ಪಚನವಾಗುತ್ತದೆ. ಇಲ್ಲಿಯ ಹೈನಿನಲ್ಲಿ ರುಚಿಯು ಹೆಚ್ಚು. ಕೆಮ್ಮು, ದಮ್ಮು, ಕ್ಷಯ ಮೊದಲಾದ ರೋಗಗಳು ತೀವ್ರ ದೂರಾಗುತ್ತವೆ. ಈ ಪ್ರಾಂತದಲ್ಲಿ ಇದೊಂದು ಆರೋಗ್ಯ ಸ್ಥಾನವೆಂದು ತಿಳಿಯಲ್ಪಟ್ಟಿದೆ.

ಈ ಪ್ರಕಾರ ಈ ಸ್ಥಾನದ ಮಹತ್ವವು ಇದ್ದು ಇದರಲ್ಲಿ ಪುರಾತನ ಕಾಲದಿಂದ ಕರ್ನಾಟಕದಲ್ಲಿ ನಡೆದುಬಂದ ಸಂಸ್ಕೃತಿಯ ಕುರುಹುಗಳನ್ನು ಕಂಡುಹಿಡಿಯಬಹುದಾಗಿದೆ. ಇಲ್ಲಿ ಪರುಶುರಾಮನಿಂದ ಹಿಡಿದು ಅನೇಕ ಋಷಿಗಳ ಮತ್ತು ಮಹಾತ್ಮರ ಆವಾಸಸ್ಥಾನಗಳಿವೆ. ಅನೇಕ ಐತಿಹಾಸಿಕ ಪ್ರಸಿದ್ಧ ಪುರುಷರ ಸೇವೆಗೆ ಪಾತ್ರವಾಗಿದೆ. ಈ ಕ್ಷೇತ್ರದ ಪ್ರತಿಯೊಂದು ಭಾಗವು ಅತಿ ಪವಿತ್ರವಾದದೆಂದು ಎಲ್ಲ ಜಾತಿಯ ಜನರು ತಿಳಿದು ಅತ್ಯಂತ ಭಕ್ತಿಯಿಂದ ಇದಕ್ಕೆ ನಡೆದುಕೊಳ್ಳುತ್ತಾರೆ. ಕರ್ನಾಟಕದಲ್ಲಿ ಇದೊಂದು ದರ್ಶನೀಯ ಸ್ಥಾನವೆಂದು ನಾವು ಅವಶ್ಯವಾಗಿ ತಿಳಿಯಬಹುದು.

---

## ಹಾಳಾದ ಆಲಮಟ್ಟಿ.

೧

ಮುಚ್ಚಂಜೆ ಮುಸುಕುತಿರೆ
ಬಿಸಿಯುಸಿರನೆಳೆಯುತಲಿ
ಆಶ್ರಮದ ಹೊರಗೆ ನಿಂತೆ !
ಕುಚ್ಚುತಿಹ ತಾಪದೊಳು
ಹಾಳು ಬಿದ್ದಿಹ ಹಳ್ಳಿ
ಯನು ಕಂಡು ಬಾಷ್ಪನಾಂತೆ !

೨

ಹಾಳು ಬಿದ್ದಿಹ ಮನೆಯು!
ಹಾಳು ಬಿದ್ದಿಹ ಓಣಿ !
ಸುತ್ತಲೂ ಹಾಳಿ ಹಾಳು !
ಜೋಲು ಬಿದ್ದಿಹ ಸೊಬಗಿ
ನೊಳಗೇಳುತಿದೆ ಕೊರೆವ
ಬಾಳುವೆಯ ಗೋಳಿ ಗೋಳು !

೩

ಅಲ್ಲೊಂದು ಇಲ್ಲೊಂದು
ಎದ್ದಿರುವ ಮನೆಗಳಲಿ
ಜೀವ ಮಿಸುಕಾಡುತಿಹುದು!
ಸೊಲ್ಲಿಲ್ಲ! ಬಿದ್ದಿರುವ
ಹೆಣವು ಹಾ! ಮಿಸುಕಿದೊಲು
ಭಾವನೆಗೆ ಎನಿಸುತಿಹುದು!

೪

ಸುಮ್ಮನೇ ನಿಂತಿದ್ದೆ!
ಸುಮ್ಮನೇ ನಿಂತಿದ್ದೆ!
ಗಾಳಿ ನಿಡುಸುಯ್ಯುತಿತ್ತು!
ದುಮ್ಮಾನವೇ ರೂಹು
ಗೊಂಡಂತೆ ಹಳ್ಳಿಯುದು
ಕಂಗಳಿಗೆ ಕಾಣುತಿತ್ತು!

೫

ರಕ್ಕಸನ ಕಂಗಳೊಲು
ಅಲ್ಲೊಂದು ಇಲ್ಲೊಂದು
ದೀವಿಗೆಗಳುರಿದಿರ್ದುವು!
ದುಕ್ಕದಾವೇಶದಲಿ
ಹಿಂದುಮುಂದುಗಳೆಲ್ಲ
ಒಂದಾಗಿ ತೋರಿರ್ದುವು!

೬

ಹಿಂದಿನವರೆಲ್ಲಿದರೊ?
ಮತ್ತೆಲ್ಲಿ ಹುಟ್ಟಿದರೊ?
ಈ ತಳವು ಮರವಾಯಿತೇ?
ಸಂದಿರುವ ಕತ್ತಲೆಯು
ಎನಿತಗಿದರೂ ಕೂಡ
ನಿಷ್ಫಲವೆ ಫಲವಾಯಿತೇ?

೭

ಬೀಳಿನೊಳಗೇಳುಂಟು;
ಏಳಿನೊಳು ಬೀಳುಂಟು;
ತಿರೆಯೊಂದು ತಿಗರಿಯುಂತೆ!
ಹೇಳುವೆನು ಕೊನೆಗೊಮ್ಮೆ,
ಈ ತತ್ವವಿದೆ ಬೀಜ
ವೃಕ್ಷಗಳ ನ್ಯಾಯದಂತೆ"

ಈಶ್ವರ ಸಣಕಲ್ಲ.

---

## ಈಶೋಪನಿಷತ್ತು.

ಹಳಕಲ್ಲು ಫ.ಗು?

ಉಪನಿಷತ್ತುಗಳು ಅನೇಕವಿದ್ದು ಅವುಗಳಲ್ಲಿ ಹತ್ತು ಉಪನಿಷತ್ತುಗಳು ಅತ್ಯಂತ ಮಹತ್ವವಾದವುಗಳು. ಈ ಹತ್ತು ಉಪನಿಷತ್ತುಗಳಲ್ಲಿ ಈಶೋಪನಿಷತ್ತು ಅಥವಾ ಈಶಾವಾಸ್ಯೋಪನಿಷತ್ತು ಎಂಬುದು ಒಂದಾಗಿರುತ್ತದೆ. ಈ ಉಪನಿಷತ್ತಿನ ಮೇಲೆ ಶಂಕರಾಚಾರ್ಯರು ಒಂದು ಟೀಕೆಯನ್ನು ಬರೆದಿರುವರು. ಮತ್ತು ಈ ಟೀಕೆಗೆ ಆನಂದಗಿರಿ ಎಂಬವರು ಬರೆದ ವಿವರಣೆಯೂ ಒಂದುಂಟು. ಅಲ್ಲದೆ ಉವತ್, ಬ್ರಹ್ಮಾನಂದ, ಶಂಕರಾನಂದ, ರಾಮಚಂದ್ರಪಂಡಿತ, ಆನಂದಭಟ್ಟ, ಮಹೀಧರ, ಅನಂತಾಚಾರ್ಯ, ಸಾಯಣ ಇವರು ಸಹ ಟೀಕೆಗಳನ್ನು ಬರೆದಿರುವರು.

ಈಶಾವಾಸ್ಯೋಪನಿಷತ್ತು ಎಲ್ಲ ಉಪನಿಷತ್ತುಗಳಲ್ಲಿ ಅತ್ಯಂತ ಚಿಕ್ಕದಾಗಿದೆ. ಇದರಲ್ಲಿ ೧೮ ಮಂತ್ರಗಳು ಮಾತ್ರ ಇವೆ. ಇಷ್ಟು ಸಣ್ಣದಾಗಿದ್ದರೂ ಇದು ವೇದಾಂತಿಗಳ ಲಕ್ಷವನ್ನು ಪೂರ್ಣವಾಗಿ ತನ್ನ ಕಡೆಗೆ ಎಳೆದುಕೊಂಡಿರುತ್ತದೆ. ಮತ್ತು ಅವರಿಗೆ ಇದು ಅತ್ಯಂತ ಪ್ರಿಯಕರವಾದ ಉಪನಿಷತ್ತು ಆಗಿರುತ್ತದೆ.

ಉಪನಿಷತ್ತುಗಳು ವೇದಾಂತ ವಾಙ್ಮಯಕ್ಕೆ ಮುಖ್ಯ ಆಧಾರಗ್ರಂಥಗಳಾಗಿವೆ. ಶಂಕರ, ರಾಮಾನುಜ, ನೀಲಕಂಠ, ಶ್ರೀಕರ ಮೊದಲಾದ ಭಾಷ್ಯಕಾರರು ಇವುಗಳನ್ನೇ ತಮಗೆ ಮುಖ್ಯ ಆಧಾರಗ್ರಂಥಗಳೆಂದು ಇಟ್ಟುಕೊಂಡು ತಮ್ಮ ಮತಗಳನ್ನು ಪ್ರತಿಪಾದಿಸಿದ್ದಾರೆ. ಆರ್ಯಧರ್ಮ

ಮತ್ತು ಆರ್ಯಸಂಸ್ಕೃತಿಗಳ ರಹಸ್ಯವನ್ನು ಕಂಡುಹಿಡಿಯಲು ಅವು ಮಹತ್ವದ ಸಾಧನಗಳಾಗಿವೆ.

ಉಪನಿಷತ್ತುಗಳ ಮುಖ್ಯೋದ್ದೇಶವು ಮನುಷ್ಯನಿಗೆ ಮೋಕ್ಷಮಾರ್ಗವನ್ನು ತೋರಿಸಿಕೊಡುವದೇ ಇರುತ್ತದೆ. ಉಪನಿಷತ್ ಇದರ ಮೂಲಾರ್ಥವನ್ನು ನೋಡಿದರೆ ಮನುಷ್ಯನಿಗಿರುವ ಬಂಧನೆಗಳನ್ನು ದೂರಮಾಡಿ ಅವನನ್ನು ಪರಮಾತ್ಮನ ಸಮೀಪಕ್ಕೆ ಒಯ್ಯುವದೇ ಅವುಗಳ ಉದ್ದೇಶವಿರುತ್ತದೆಂದು ಕಂಡುಬರುವದು.

ವೀರಶೈವ ವಚನಕಾರರಾದರೂ ಉಪನಿಷತ್ತಿನ ತತ್ವಗಳನ್ನೇ ತಮ್ಮ ವಚನವಾಙ್ಮಯದಲ್ಲಿ ಬೀರಿರುವರು. ಉಪನಿಷತ್ತಿನ ತತ್ವಗಳೇ ಅವರ ವಚನಗಳಲ್ಲಿ ಒಡಮೂಡಿರುವವು. ಹ್ಯಾಗೆ ಉಪನಿಷತ್ತುಗಳು ಹಿಂದೂ ಧರ್ಮದ ಸ್ಥಿತಿಯನ್ನು ತಿಳಿಯಲು ಸಾಧನವಾಗಿರುತ್ತವೋ ಹಾಗೆಯೇ ವಚನಗಳೂ ವೀರಶೈವ ಧರ್ಮದ ತಿರುಳನ್ನು ಅರಿಯಲು ಉತ್ತಮ ಸಾಧನಗಳಾಗಿವೆ.

ಉಪನಿಷತ್ತುಗಳು ಆತ್ಮನ ಉಚ್ಚ ಸ್ಥಿತಿಯ ರೀತಿಯನ್ನು ವಿವರಿಸುತ್ತವೆ. ಆತ್ಮನು ತನ್ನನ್ನು ತಾನು ಏಕೆ ಅರಿಯನೆಂಬುದನ್ನು ಅವು ಹೇಳಿಕೊಟ್ಟು ಅವನನ್ನು ಪರಬ್ರಹ್ಮನ ನೆರೆಯಲ್ಲಿ ಒಯ್ಯಲು ಸಹಾಯಕಾರಿಗಳಾಗಿವೆ. ವಚನಕಾರರ ಉದ್ದೇಶವಾದರೂ ಹೀಗೆಯೇ ಇದೆ. ಮನುಷ್ಯನಿಗೆ ಮುಕ್ತಿಮಾರ್ಗದ ಜ್ಞಾನವನ್ನು ತಿಳಿಯಪಡಿಸಬೇಕೆಂಬುದೇ ಅವುಗಳನ್ನು ರಚಿಸಿದ ಶಿವಶರಣರ ಪ್ರಯತ್ನವಿದೆ. ಇದರಲ್ಲಿ ಅವರು ಏನೂ ಮುಚ್ಚುಮರೆಮಾಡದೆ ತಿರುಳ್ಗನ್ನಡದಲ್ಲಿ ತಮ್ಮ ವಿಚಾರಗಳನ್ನು ಜನತೆಯ ಮುಂದೆ ಇಟ್ಟಿರುವರು.

ಉಪನಿಷತ್ಕಾರರು ಪರಮಾತ್ಮನನ್ನು ಇದಿರಿದಿರಿಗೆ ಪ್ರತ್ಯಕ್ಷನಾಗಿ ಕಾಣಬೇಕೆಂಬ ಉತ್ಕಟೇಚ್ಛೆಯನ್ನು ತಾಳಿರುವರು. ಅವರಿಗೆ ಬೇರೊಬ್ಬರ ಮಧ್ಯಸ್ಥಿಕೆಯು ಬೇಡ. ಆದ್ದರಿಂದ ಉಪನಿಷತ್ಕಾಲದಲ್ಲಿ ಹಿಂದೂ ಸಮಾಜದಲ್ಲಿ ಜಾತಿವಿಶಿಷ್ಟ ಒಂದು ಸ್ವತಂತ್ರ ಪುರೋಹಿತವರ್ಗವು ಇರಲಿಲ್ಲ. ಒಂದು ವೇಳೆ ಇದ್ದರೂ ಇದರ ಸಹಾಯವನ್ನು ಅವರು ಬಯಸಲಿಲ್ಲ. ಇದರಿಂದ ಉಪನಿಷತ್ತುಗಳ ಕಾಲದಲ್ಲಿ ದೇವಾಲಯಗಳ ಸ್ಥಾಪನೆಗೆ ಉತ್ತೇಜನವಿರಲಿಲ್ಲ. ಆಗ ದೇವಾಲಯಗಳು ಇರಲಿಲ್ಲವೆಂತಲೂ ಇತಿಹಾಸಜ್ಞರ ಶೋಧವಿರುತ್ತದೆ.

ಹಾಗೆಯೇ ವಚನವಾಙ್ಮಯದಲ್ಲಿಯೂ ದೇವಾಲಯಗಳ ಸ್ಥಾಪನೆಗೆ ಇಂಬು ಇಲ್ಲ. ವಚನಕಾರರು ಮನುಷ್ಯನ ದೇಹವೇ ಒಂದು ದೇವಾಲಯವೆಂದು ಭಾವಿಸಿರುವರು. ಹೀಗೆ ಭಾವಿಸಿ ಅದರಲ್ಲಿರುವ ಶ್ರೇಷ್ಠ ವಸ್ತು ಎಂದರೆ ಜೀವಾತ್ಮನಲ್ಲಿ ಒಂದು ಚೈತನ್ಯವನ್ನು ಉಂಟುಮಾಡಿ, ಅದರಲ್ಲಿ ಪ್ರಕಾಶವನ್ನು ಬೀರಿ ಅದನ್ನು ಉಚ್ಚ ಸ್ಥಿತಿಗೆ ತರುವದೇ ಅವರ ಧ್ಯೇಯವಾಗಿದೆ.

ಆದ್ದರಿಂದ ಪೂರ್ವದ ವೀರಶೈವ ಸಮಾಜದವರು ಜೈನ ಬೌದ್ಧರಂತೆ ದೇವಾಲಯಗಳನ್ನು ಸ್ಥಾಪಿಸಲಿಲ್ಲ. ಅವರು ಈ ಮೋಹಕ್ಕೆ ಬೀಳಲಿಲ್ಲ. ಶಿವಾನುಭವದ ತಿಳುವಳಿಕೆಯನ್ನು ಪ್ರಸಾರಗೊಳಿಸಬೇಕೆಂದು ಅವರು ಗ್ರಾಮಗ್ರಾಮಗಳಲ್ಲಿ ಮಠಗಳನ್ನು ಸ್ಥಾಪಿಸಿದರು.

ಉಪನಿಷತ್ತುಗಳು ದೇವರು ಒಬ್ಬನೇ ಇದ್ದಾನೆಂಬ ತತ್ವವನ್ನು ಪ್ರತಿಪಾದಿಸುತ್ತವೆ. ಅವು ಜಾತಿ, ಪಂಗಡ, ನಾನಾ ಬಗೆಯ ಕರ್ಮಗಳಿಗೆ ಮೀರಿದವಾಗಿವೆ ಹಾಗೆಯೇ ವೀರಶೈವ ವಚನಕಾರರೂ ದೇವರು ಒಬ್ಬನೇ ಇದ್ದಾನೆಂದು ಪ್ರತಿಪಾದಿಸುತ್ತಾರೆ. ಅವರ ಉಕ್ತಿಗಳಲ್ಲಿ ಅನೇಕ ದೇವತೆಗಳ ಲೀಲೆಗೆ ಇಂಬು ಇಲ್ಲ. ಬಸವೇಶ್ವರನು ಅನ್ನುವದೇನೆಂದರೆ,

"ಸ್ವಾಮಿ ನೀನು ಶಾಶ್ವತನು ನೀನು ಎತ್ತಿದೆ ಬಿರಿದು ಜಗವೆಲ್ಲರಿಯಲು, ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ. ಪಶುಪತಿ ಜಗಕ್ಕೆ ಏಕೋದೇವ, ಸ್ವರ್ಗ ಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ ಕೂಡಲಸಂಗಮದೇವ" ಎಂದು ಅಂದಿರುವನು.

ಈ ವಿಚಾರಗಳನ್ನು ಪ್ರತಿಯೊಬ್ಬ ವಚನಕಾರನು ತನ್ನ ವಚನಗಳಲ್ಲಿ ನುಡಿದಿರುವನು.

ಪರಬ್ರಹ್ಮ ವಸ್ತುವನ್ನ ಒಳಕೊಳ್ಳಬೇಕೆಂಬುದೇ ಪೂರ್ವದ ಆರ್ಯ ಋಷಿಗಳ ಹಂಬಲವಾಗಿತ್ತು. ಆದ್ದರಿಂದ ಉಪನಿಷತ್ತುಗಳು ಪರಮಾತ್ಮನ ಧ್ಯಾನದ ರೀತಿಯನ್ನು ಹೇಳಿಕೊಡುತ್ತವೆ. ಈ ಧ್ಯಾನದ ಅನೇಕ ತರಹಗಳಿದ್ದು ಅವುಗಳ ವಿವರಣೆಗಳು ಉಪನಿಷತ್ತುಗಳಲ್ಲಿ ಬಂದಿವೆ. ಹಾಗೆಯೇ ವಚನಕಾರರು ತಮ್ಮ ಉಕ್ತಿಗಳಲ್ಲಿ ಇವುಗಳನ್ನು ವಿವರಿಸಿರುವರು. ಷಟ್‌ಸ್ಥಲ ಶಾಸ್ತ್ರದಲ್ಲಿ ಈ ಬಗೆಯ ಧ್ಯಾನದ ವಿವೇಚನೆಗಳು ಮೇಲಿಂದ ಮೇಲೆ ಬರುತ್ತವೆ. ಮೇಲ್ಕಂಡ ವಿಷಯಗಳು ಈಶಾವಾಸ್ಯೋಪನಿಷತ್ತಿದ ಉಕ್ತಿಗಳಲ್ಲಿ ಸೂಕ್ಷ್ಮ ರೀತಿಯಿಂದ ವಿವರಿಸಲ್ಪಟ್ಟಿವೆ.

## ಈಶಾವಾಸ್ಯೋಪನಿಷತ್.

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ ।

ಓಂ ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್। ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯ ಸ್ವಿದ್ಧನಂ ॥೧॥

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ । ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥೨॥

ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾವೃತಾಃ । ತಾನ್ ರತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥೩॥

ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಆಪ್ನುವನ್ ಪೂರ್ವಮರ್ಶತ್ । ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥೪॥

ತದೇಜತಿ ತನ್ನೈಜತಿ ತದ್ದೂರೆ ತದ್ವಂತಿಕೆ । ತದಂತರಸ್ಯ ಸರ್ವಸ್ಯ ಸದು ಸರ್ವಸ್ಯಾಸ್ಯ ಬಾಹ್ಯತಃ ॥೫॥

ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ । ಸರ್ವಭೂತೇಷು ಚಾತ್ಮಾನಂ ತತೋ ನ ವಿಜಿಗುಪ್ಸತೆ ॥೬॥

ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ । ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥೭॥

ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಂ ಶುದ್ಧಮಪಾಪವಿದ್ಧಮ್ । ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ ॥೮॥

ಅಂಧಃ ತಮಃ ಪ್ರವಿಶಂತಿ ಯೆ ಅವಿದ್ಯಾಮುಪಾಸತೆ । ತತೋ ಭೂಯ ಇವ ತೆ ತಮೋ ಯ ಉ ವಿದ್ಯಾಯಾಂ ರತಾಃ ॥೯॥

ಅನ್ಯ ದೇವಾಹುರ್ವಿದ್ಯಯಾನ್ಯದಾಹುರವಿದ್ಯಯಾ । ಇತಿ ಶುಶ್ರುಮ ಧೀರಾಣಾಂ ಯೆ ನಸ್ತದ್ವಿಚಚಕ್ಷಿರೆ ॥೧೦॥

ವಿದ್ಯಾಂಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ । ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ ॥೧೧॥

ಅಂಧಂ ತಮಃ ಪ್ರವಿಶಂತಿ ಯೇ ಅಸಂಭೂತಿಮುಪಾಸತೇ । ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಂ ರತಾಃ ॥೧೨॥

ಅನ್ಯದೇವಾಹುಃ ಸಂಭವಾದನ್ಯದಾಹುರಸಂಭವಾತ್ । ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥೧೩॥

ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಂ ಸಹ । ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಮೃತಮಶ್ನುತೇ ॥೧೪॥

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ । ತತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥೧೫॥

ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹರಶ್ಮೀನ್ ಸಮೂಹ । ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ಯೋ ಅಸಾವಸೌ ಪುರುಷಃ ಸೋ ಅಹಮಸ್ಮಿ ॥೧೬॥

ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಂ। ಓಂ ಕ್ರತೋ ಸ್ಮರ ಕೃತಂ ಸ್ಮರ ಕ್ರತೋ ಸ್ಮರ ಕೃತಂ ಸ್ಮರ ॥೧೭॥

ಅಗ್ನೇನಯ ಸುಪಥಾ ರಾಯೆ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್।ಯುಯೋಧ್ಯಸ್ಮಜ್ಜುಹುರಾಣ ಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥೧೮॥

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣ ಮೇವಾವ ಶಿಷ್ಯತೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಇತಿ ವಾಜಸನೇಯ ಸಂಹಿತೋಪನಿಷತ್ ಸಂಪೂರ್ಣಾ

ಈ ಉಪನಿಷತ್ತಿನ ಆರಂಭದ ವಾಕ್ಯಗಳಲ್ಲಿ ಪರಬ್ರಹ್ಮ ವಸ್ತುವಿನ ಸಾಮಾನ್ಯ ಸ್ವರೂಪ ವರ್ಣಿಸಲ್ಪಟ್ಟಿದೆ. ಇದರಲ್ಲಿ ಹೇಳಲ್ಪಟ್ಟಿದ್ದೇನಂದರೆ ಆ ಬ್ರಹ್ಮನು ಪೂರ್ಣನಿದ್ದಾನೆ. ಈ ಬ್ರಹ್ಮನೂ ಪೂರ್ಣನಿದ್ದಾನೆ. ಪೂರ್ಣವಾದದರಿಂದ ಉದ್ಭವಿಸಿದ್ದು ಪೂರ್ಣವೇ ಇರುತ್ತದೆ. ಪೂರ್ಣದೊಳಗಿಂದ ಪೂರ್ಣವನ್ನು ಕಳೆದರೆ ಉಳಿದದ್ದು ಪೂರ್ಣವೇ ಉಳಿಯುತ್ತದೆ.

ಮೂಲ ಭೂತ ವಸ್ತುವು ಪೂರ್ಣವಾಗಿದ್ದು ಅದರಿಂದ ಹುಟ್ಟಿದ್ದಾದರೂ ಪೂರ್ಣವೇ ಇರುತ್ತದೆ. ಮತ್ತು ಇಂಥ ಪೂರ್ಣವಾದ ವಸ್ತುವಿನೊಳಗಿಂದ ಪೂರ್ಣವನ್ನು ಹೋಗಲಾಡಿಸಿದರೆ ಉಳಿದುದು ಪೂರ್ಣವೇ ಇರುತ್ತದೆ. ಪರಬ್ರಹ್ಮನು ಮತ್ತು ಅವನಿಂದಾದ ವಸ್ತುಗಳೆಲ್ಲ ಪೂರ್ಣವಾಗಿದ್ದು, ಅವು ಚಿರಕಾಲ ಪೂರ್ಣವಾಗಿಯೇ ಇರುತ್ತವೆ.

(೧) ಪೃಥ್ವೀತಲದಲ್ಲಿ ಯಾವುದಕ್ಕೆ ಜೀವವಿದೆಯೋ ಅದೆಲ್ಲವೂ ಪರಮಾತ್ಮನಿಂದ ಆಚ್ಛಾದಿಸಲ್ಪಟ್ಟಿದೆ. ಹೀಗೆ ವಸ್ತು ಮಾತ್ರವಾದುದನ್ನು ತ್ಯಾಗ ಮಾಡಿ ಮನುಷ್ಯನು ಸಂತೋಷದಿಂದಿರತಕ್ಕದ್ದು. ನಿನ್ನ ಅಥವಾ ಹೆರವರ ಒಡವೆಗೆ ಕಾಂಕ್ಷಿಸಬೇಡ ಎಂದು ಮೊದಲಿನ ನುಡಿಯಲ್ಲಿ ಹೇಳಲ್ಪಟ್ಟಿದೆ. ಇದರಲ್ಲಿ ಪರಮಾತ್ಮನು ಸರ್ವವ್ಯಾಪಿಯಾಗಿರುತ್ತಾನೆ. ಆತನೇ ನಿಜ ವಸ್ತುವು. ಅಂಥದನ್ನು ಮನುಷ್ಯನು ಕಾಂಕ್ಷಿಸತಕ್ಕದ್ದು. ಉಳಿದ ವಸ್ತುಗಳು ತನ್ನವಿರಲಿ ಅಥವಾ ಹೆರವರವಿರಲಿ ಅವುಗಳ ಮೋಹವನ್ನು ಬಿಟ್ಟುಬಿಡಬೇಕು. ಹೀಗೆ ಬಿಟ್ಟುಬಿಟ್ಟದ್ದಾದರೆ ಮನುಷ್ಯನು ಸುಖಪಡುವನೆಂದು ಇದರಲ್ಲಿ ಹೇಳಲ್ಪಟ್ಟಿದೆ.

(೨) ಮುಂದೆ ಉಪನಿಷತ್ಕಾರನು ಅನ್ನುವದೇನೆಂದರೆ, ಈ ಪ್ರಕಾರ ವಸ್ತುಮಾತ್ರವನ್ನು ಆತ್ಮರೂಪದಿಂದ ಕಾಣಲು ಅಸಮರ್ಥನಾದರೆ ಈ ಲೋಕದಲ್ಲಿ ಕರ್ಮಗಳನ್ನು ಮಾಡುತ್ತ ನೂರು ವರ್ಷಗಳ ವರೆಗೆ ಜೀವಿಸಲು ಇಚ್ಛೆಯನ್ನು ಮಾಡಬೇಕು. ಈ ಪ್ರಕಾರ ಜೀವಿಸುವ ಇಚ್ಛೆಯನ್ನು ಮಾಡಿದ್ದಾದರೆ ಯಾವ ಪ್ರಕಾರ ಮನುಷ್ಯನು ಅಶುಭ ಕರ್ಮದಿಂದ ಅಲಿಪ್ತನಾಗಲು ಇಚ್ಛಿಸುತ್ತಾನೋ ಅದು ಮಾತ್ರ ಅವನಿಗೆ ಕೈಗೂಡದು.

ಮನುಷ್ಯನು ಕರ್ಮಗಳಿಂದ ದೂರಿರುವದು ಅವಶ್ಯವು. ಆದ್ದರಿಂದ ಯಾವ ಕರ್ಮದಿಂದ ಮನುಷ್ಯನು ನಿರ್ಲೇಪನಾಗಲು ಶಕ್ಯವೋ ಅಂಥ ಕರ್ಮವನ್ನೇ ಅವನು ಮಾಡುತ್ತ ಹೋಗಬೇಕು. ಇದೇ ಅವನ ಜೀವಿತದ ಸಾರ್ಥಕತೆಯು. ಇಲ್ಲದೇ ಹೋದರೆ ಅವನು ಕರ್ಮಗಳನ್ನು ಮಾಡುತ್ತಲೇ ಜೀವಿಸಬೇಕಾಗುವದು.

(೩) ಅವಿದ್ಯಾರೂಪದೋಷದಿಂದ ಯಾರು ಆತ್ಮನನ್ನು ತಿರಸ್ಕಾರ ಮಾಡುತ್ತಾರೋ ಅವರು ಉತ್ತಮ ಲೋಕಕ್ಕೆ ತೆರಳುವದಿಲ್ಲ. ಅವರು ತಮ್ಮ ದೇಹವನ್ನು ತ್ಯಾಗಮಾಡಿದ ತರುವಾಯ ಅಜ್ಞಾನರೂಪ ಅಂಧ

ಕಾರದಿಂದ ಆವರಿಸಲ್ಪಟ್ಟ ಅಸುರ ಲೋಕಕ್ಕೆ ತೆರಳುವರೆಂದು ಮೂರನೇ ನುಡಿಯಲ್ಲಿ ಹೇಳಲ್ಪಟ್ಟಿದೆ.

ನಾಲ್ಕನೇ ನುಡಿಯಲ್ಲಿ ಉಪನಿಷತ್ಕಾರನು ಆತ್ಮ ತತ್ವದ ಸ್ವರೂಪವನ್ನು ವರ್ಣಿಸುತ್ತಾನೆ.

(೪) ಆತ್ಮತತ್ವವು ಎಂದೂ ಅವಸ್ಥಾಂತರವನ್ನು ಹೊಂದುವದಿಲ್ಲ. ಇದು ಯಾವಾಗಲೂ ಏಕರೂಪವಾಗಿರುತ್ತದೆ. ಇದು ಮನಸ್ಸಿಗಿಂತಲೂ ಅತ್ಯಂತ ವೇಗವುಳ್ಳದ್ದದೆ. ಇದು ಚಕ್ಷು ವೊದಲಾದ ಇಂದ್ರಿಯಗಳಿಗೆ ಎಂದೂ ಗೋಚರವಾಗುವದಿಲ್ಲ. ಇದು ಮನಸ್ಸಿಗಿಂತಲೂ ಹೆಚ್ಚಿಗೆ ವೇಗವುಳ್ಳದ್ದಿರುವದರಿಂದ ಇದು ಮನಸ್ಸಿನ ಆಚೆಗೆ ಹೋಗುತ್ತದೆ. ವೇಗವುಳ್ಳಂಥ ಮನಸ್ಸು ವಾಕ್ಕು ವೊದಲಾದ ಇಂದ್ರಿಯಗಳ ಆಚೆಗೆ ಇದು ಹೋಗುತ್ತದೆ. ಆತ್ಮತತ್ವವು ವಿಕಾರವಿಲ್ಲದ್ದು. ಇದರಲ್ಲಿ ಪ್ರಾಣಧಾರಕವಾದ ವಾಯುವು ಇದೆ. ಈ ವಾಯುವಿನ ಮೂಲಕವೇ ಕರ್ಮವು ಉಂಟಾಗುತ್ತದೆ.

(೫) ಈ ಆತ್ಮವು ಕಂಪಿತವಾಗುತ್ತದೆ. ಮತ್ತು ಕಂಪಿತವೂ ಆಗುವದಿಲ್ಲ. ಅದು ದೂರವದೆ. ಹಾಗೆಯೇ ಅದು ಸಮೀಪವೂ ಇದೆ. ಅದು ಈ ಎಲ್ಲ ವಿಶ್ವದ ಒಳಗೆ ಇದೆ. ಮತ್ತು ಅದರ ಹೊರಗೂ ಇದೆ.

ಈ ಪ್ರಕಾರ ಉಪನಿಷತ್ಕಾರನು ಆತ್ಮನ ಸ್ವರೂಪವನ್ನು ವರ್ಣಿಸಿ ಆತ್ಮನಿಗೂ ಜಗತ್ತಿಗೂ ಇರುವ ಸಂಬಂಧವನ್ನು ಮುಂದೆ ಹೇಳುತ್ತಾನೆ. ಅದು ಹೇಗೆಂದರೆ

(೬) ಯಾವ ಮುಮುಕ್ಷುವು ಹುಟ್ಟಿದಂಥ ಎಲ್ಲ ವಸ್ತುಗಳನ್ನು ತನ್ನ ಆತ್ಮಸ್ವರೂಪದಲ್ಲಿ ಲೀನವಾಗುವವನ್ನು ನೋಡುತ್ತಾನೋ ಮತ್ತು ಇವೆಲ್ಲವುಗಳಲ್ಲಿ ಆತ್ಮಸ್ವರೂಪವನ್ನು ಕಾಣುತ್ತಾನೋ, ಅವನಿಗೆ ಎಂದೂ ಮೋಹವಿಕಾರವಿರುವದಿಲ್ಲ. ಮತ್ತು ಹೇಯಬುದ್ಧಿಯೂ ಇರುವದಿಲ್ಲ.

(೭) ಯಾವ ಜ್ಞಾನಿಗೆ ಭೂತಮಾತ್ರವೆಲ್ಲ ಆತ್ಮಸ್ವರೂಪವಾಗಿ ಕಾಣುತ್ತದೋ ಏಕರೂಪವಾಗಿ ತೋರುವ ಅವನಿಗೆ ಶೋಕವೆಲ್ಲಿ ಮತ್ತು ಮೋಹವೆಲ್ಲಿ ?

(೮) ಈ ಆತ್ಮವು ಸರ್ವವ್ಯಾಪಿಯು, ದೀಪ್ತಿಯುಳ್ಳದ್ದು, ಸೂಕ್ಷ್ಮಶರೀರಕ್ಕೆ ಹೊರತಾದದ್ದು, ಸ್ಥೂಲಶರೀರ ರಹಿತವಾದದ್ದು, ಅವಿದ್ಯಾರೂಪವಾದ

ಮಲದಿಂದ ರಹಿತವಾದದ್ದು, ಪಾಪರಹಿತನಾದನು, ಯಾವತ್ತನ್ನು ಕಾಣು ವಂಥಾದ್ದು, ಯಾವತ್ತನ್ನು ತಿಳಿಯುವಂಥಾದ್ದು, ಸರ್ವವ್ಯಾಪಿಯಾದದ್ದು ಮತ್ತು ಸ್ವಯಂಭುವು ಆಗಿದೆ. ಈ ಆತ್ಮವೆಂದರೆ ಈಶ್ವರನು. ಈ ಈಶ್ವ ರನು ನಿತ್ಯವಾದ ಸಂವತ್ಸರವೆಂಬ ಹೆಸರಿನ ಪ್ರಜಾಪತಿಗೆ ಅದರ ಯೋಗ್ಯತೆ ಯಂತೆ ಆಯಾ ಕರ್ತವ್ಯಗಳನ್ನು ವಿಭಾಗಿಸಿಕೊಟ್ಟಿರುತ್ತಾನೆ.

ಈ ಪ್ರಕಾರ ಉಪನಿಷತ್ಕಾರನು ಆತ್ಮನ ಸ್ವರೂಪನ್ನು ವರ್ಣಿಸಿ ಕರ್ಮ ಮತ್ತು ಜ್ಞಾನ ಇವುಗಳ ವಿವರವನ್ನು ಮುಂದೆ ಹೇಳುತ್ತಾನೆ.

(೯) ಯಾರು ಕೇವಲ ಕರ್ಮವನ್ನು ಮಾಡುತ್ತಾರೋ ಅವರು ಅತ್ಯಂತ ಗಾಢವಾದ ಅಂಧಕಾರದಲ್ಲಿ ಪ್ರವೇಶ ಮಾಡುತ್ತಾರೆ. ಮತ್ತು ಯಾರು ಕರ್ಮದ ತ್ಯಾಗ ಮಾಡಿ ಕೇವಲ ದೇವತಾ ಜ್ಞಾನದಲ್ಲಿ ರತರಾ ಗುತ್ತಾರೋ ಅವರೂ ಸಹ ಇದಕ್ಕಿಂತಲೂ ಹೆಚ್ಚಿನ ಅಂಧಕಾರದಲ್ಲಿ ಪ್ರವೇಶ ಮಾಡುತ್ತಾರೆ.

(೧೦) ವಿದ್ಯೆಯ ಮೂಲಕ ಒಂದು ಪದವು ಪ್ರಾಪ್ತವಾಗುವದೆಂದು ಹೇಳುತ್ತಾರೆ ಮತ್ತು ಅವಿದ್ಯೆ ಎಂದರೆ ಕರ್ಮದ ಮೂಲಕ ಬೇರೊಂದು ಪದವು ಪ್ರಾಪ್ತವಾಗುವದೆಂದು ಹೇಳುತ್ತಾರೆ. ಹೀಗೆ ನಾವು ಬುದ್ಧಿವಂತ ರಾದವರಿಂದ ಕೇಳುತ್ತೇವೆ. ಅವರು ಈ ಬುದ್ಧಿ ಕರ್ಮ ಮತ್ತು ಜ್ಞಾನ ಇವುಗಳಲ್ಲಿ ಹೀಗೆ ಅಂತರವಿದೆ ಎಂದು ನಮಗೆ ಹೇಳುತ್ತಾರೆ.

(೧೧) ಜ್ಞಾನ ಮತ್ತು ಕರ್ಮ ಇವುಗಳನ್ನು ಒತ್ತಟ್ಟಿಗೆ ಅನು ಷ್ಠಾನ ಮಾಡಬೇಕೆಂದು ಯಾವನಿಗೆ ತಿಳಿಯುತ್ತದೋ ಅವನು ಕರ್ಮದ ಮೂಲಕ ಆಗುವ ಮೃತ್ಯುವ ಅತಿಕ್ರಮಣ ಮಾಡಿ ಜ್ಞಾನದಿಂದ ಆಗುವ ಅಮೃತತ್ವವನ್ನು ಅಂದರೆ ಮೋಕ್ಷವನ್ನು ಹೊಂದುವನು.

(೧೨) ಯಾರು ಕಾರಣಬ್ರಹ್ಮದ ಅಂದರೆ ಅವಿದ್ಯೆಯ ಉಪಾಸನೆ ಯನ್ನು ಮಾಡುತ್ತಾರೋ ಅವರು ಗಾಢಾಂಧಕಾರವನ್ನು ಪ್ರವೇಶ ಮಾಡು ವರು. ಆದರೆ ಯಾರು ಕೇವಲ ವಿದ್ಯೆಯ ಉಪವಾಸನೆಯನ್ನು ಮಾಡು ತ್ತಾರೋ ಅವರು ಇದಕ್ಕೂ ಹೆಚ್ಚಿನ ಅಂಧಕಾರವನ್ನು ಪ್ರವೇಶಮಾಡುತ್ತಾರೆ.

(೧೩) ವಿದ್ಯೆಯ ಉಪಾಸನೆಯನ್ನು ಮಾಡುವದರಿಂದ ಒಂದು ಫಲವು ಪ್ರಾಪ್ತವಾಗುತ್ತದೆ. ಮತ್ತು ಅವಿದ್ಯೆಯ ಉಪವಾಸನೆಯಿಂದ ತೀರ ಬೇರೆ ಫಲವು ಪ್ರಾಪ್ತವಾಗುವದೆಂದು ಹೇಳುತ್ತಾರೆ. ಹೀಗೆ ವ್ಯಕ್ತ

ಮತ್ತು ಅವ್ಯಕ್ತ ಉಪಾಸನೆಯ ಫಲದ ಬಗ್ಗೆ ಯಾವ ಬುದ್ಧಿವಂತರು ನಮಗೆ ಸ್ಪಷ್ಟ ಮಾಡಿ ತೋರಿಸಿದರೋ ಅವರಿಂದಲೇ ನಾವು ಹೀಗೆ ಕೇಳಿರುವೆವು.

(೧೪) ಅವಿದ್ಯೆ ಮತ್ತು ಯಾವದಕ್ಕೆ ವಿನಾಶವಿದೆಯೋ ಅಂಥ ವಿದ್ಯೆ ಇವೆರಡನ್ನು ಯಾವನು ಒಂದಾಗಿ ಭಾವಿಸಿ ಆಚಾರಿಸುತ್ತಾನೋ ಅವನು ಮೃತ್ಯುವಿನ ಆಚೆಗೆ ಹೋಗುತ್ತಾನೆ. ಮತ್ತು ಅಮರತ್ವ ಸ್ಥಿತಿಯನ್ನು ಪಡೆಯುತ್ತಾನೆ.

(೧೫) ಸುವರ್ಣದ ಪಾತ್ರೆಯಿಂದ ಆದಿತ್ಯಮಂಡಲದಲ್ಲಿಯ ಸೂರ್ಯನು ಹ್ಯಾಗೆ ಆಚ್ಛಾದಿಸಲ್ಪಟ್ಟಿರುವನೋ ಹಾಗೆಯೇ ಬ್ರಹ್ಮನ ಮುಖವು ಜನರ ದೃಷ್ಟಿಗೆ ಕಾಣದಂತೆ ಆಚ್ಛಾದಿಸಲ್ಪಟ್ಟಿರುತ್ತದೆ. ಆದರೆ ಬ್ರಹ್ಮೋಪಾಸನೆಯು ಯಾರ ಧರ್ಮವೋ ಅವರು ಬ್ರಹ್ಮನ ಸಾಧನೆಗಾಗಿ ಈ ಆವರಣವನ್ನು ದೂರ ಮಾಡತಕ್ಕದ್ದು.

(೧೬) ಜಗತ್ತಿನ ಪೋಷಣೆಯನ್ನು ಮಾಡುವಂಥ ಎಲ್ಲರನ್ನು ಸಂಯಮನ ಮಾಡುವಂಥ, ಮತ್ತು ಪ್ರಾಣದ ಸ್ವೀಕಾರವನ್ನು ಮಾಡುವಂಥ ಎಲೋ ಪ್ರಜಾಪತಿಯ ಪುತ್ರನೇ, ನೀನು ನಿನ್ನ ಕಿರಣಗಳನ್ನು ಒಟ್ಟುಗೂಡಿಸು. ನಿನ್ನ ಕಲ್ಯಾಣಕರವಾದ ತೇಜಸ್ಸುಳ್ಳ ರೂಪವು ನನ್ನ ಕಣ್ಣಿಗೆ ಬೀಳಲಿ. ಇದರಿಂದ ಯಾವ ಪುರುಷನು ಆದಿತ್ಯ ಮಂಡಲದಲ್ಲಿರುವನೋ ಅವನೇ ನಾನಾಗುವೆನು.

(೧೭) ಜ್ಞಾನ ಮತ್ತು ಕರ್ಮ ಇವುಗಳ ಮೂಲಕ ಸಂಸ್ಕಾರವನ್ನು ಹೊಂದಿದಂಥ ನನ್ನ ವಾಯು ಎಂದರೆ ಪ್ರಾಣವು ಸರ್ವವ್ಯಾಪಿಯೂ ಮರಣ ರಹಿತವೂ ಆಗಲಿ. ನನ್ನ ಶರೀರವು ಭಸ್ಮದಲ್ಲಿ ಬೆರೆಯಲಿ. ಹೀಗೆ ಸಂಕಲ್ಪ ಮಾಡುವ ಪ್ರಾಣವು ಸ್ಮರಿಸಲಿಕ್ಕೆ ಯೋಗ್ಯವಾದ ಅಗ್ನಿಸ್ವರೂಪಾದ ಬ್ರಹ್ಮದ ಸ್ಮರಣೆಯನ್ನು ಮಾಡತಕ್ಕದ್ದು.

(೧೮) ಈ ವರೆಗೆ ಮಾಡಿದ ಕರ್ಮದ ಅರಿವನ್ನುಂಟುಮಾಡಿಕೊಳ್ಳು. ಎಲ್ಲ ಪ್ರಕಾರದ ಕರ್ಮ ಅಥವಾ ಜ್ಞಾನ ಇವುಗಳನ್ನು ತಿಳಿದ ಅಗ್ನಿಯೇ, ಮೇಲಿಂದ ಮೇಲೆ ಉಂಟಾಗುವ ಗಮನ ಮತ್ತು ಆಗಮನ ಇವುಗಳಿಂದ ದೂರಾದ ಉತ್ತಮ ತೆರೆದ ಮಾರ್ಗಕ್ಕೆ ನನ್ನನ್ನು ಒಯ್ಯು. ನನಗೆ ಶತ್ರುವಿನಂತೆ ಇದ್ದ ಪಾಪವನ್ನು ನಾಶಮಾಡು. ನಾನು ನಿನಗೆ ಬಹಳವಾಗಿ ನಮಸ್ಕಾರ ಮಾಡುವೆನು.

ಈಶೋಪನಿಷತ್ತಿನಲ್ಲಿ ಆತ್ಮನ ಸ್ವರೂಪವು ಬಹು ಚನ್ನಾಗಿ ವಿವರಿಸಲ್ಪಟ್ಟಿದೆ. ಆತ್ಮನಿಗೆ ಜನನ ಮರಣಗಳಿಲ್ಲ, ಅದು ಸರ್ವವ್ಯಾಪಿಯಾಗಿದೆ, ಎಲ್ಲವನ್ನೂ ಮೀರಿದೆ. ಆದರೆ ಅವಿದ್ಯೆಯ ಮೂಲಕ ಜಗತ್ತಿನಲ್ಲಿ ವಿವಿಧತೆಯು ಉತ್ಪನ್ನವಾಗಿದೆ ಮತ್ತು ಪುಣ್ಯಪಾಪಗಳು ಪ್ರಾಪ್ತವಾಗುತ್ತವೆ. ಇವುಗಳನ್ನು ಹೋಗಲಾಡಿಸಿ ಆತ್ಮನನ್ನು ತಿಳಿಯಬೇಕಾದರೆ ಜಗತ್ತಿನಲ್ಲಿದ್ದುದನ್ನೆಲ್ಲ ಪರಮಾತ್ಮಭಾವದಿಂದ ಕಾಣಬೇಕು. ಇದರಿಂದ ಅವಿದ್ಯೆಯು ನಾಶವಾಗುವದೆಂದು ಇದರಲ್ಲಿ ಹೇಳಲ್ಪಟ್ಟಿದೆ.

ಜಗತ್ತಿನಲ್ಲಿ ಕ್ರಿಯೆಯು ಇದ್ದು ಧ್ಯಾನವೂ ಅದರೊಡನೆ ಬೆರೆಯಬೇಕು. ಹೀಗೆ ಬೆರೆದದ್ದಾದರೆ ಮನುಷ್ಯನು ಶ್ರೇಷ್ಠ ಸ್ಥಿತಿಗೆ ಬರುವನು. ಬೆರೆಯದಿದ್ದರೆ ಕ್ರಿಯೆಯು ಅವನನ್ನು ಬಂಧನಕ್ಕೆ ಗುರಿಮಾಡುವದು. ಅದೇ ಪ್ರಕಾರ ಯಾರು ಕೇವಲ ಧ್ಯಾನದಲ್ಲಿ ಮುಳುಗಿರುತ್ತಾರೋ ಅವರೂ ಕೂಡ ಜಗತ್ತಿನಲ್ಲಿ ದುಃಖವನ್ನು ಹೊಂದುವರು. ಈಶೋಪನಿಷತ್ತಿನಲ್ಲಿ ಅವಿದ್ಯೆ ಎಂದರೆ ಕ್ರಿಯೆ, ವಿದ್ಯೆ ಎಂದರೆ ಧ್ಯಾನ ಈ ಅರ್ಥವನ್ನು ಇಟ್ಟುಕೊಂಡು ಉಕ್ತಿಗಳು ಹೇಳಲ್ಪಟ್ಟವೆ.

ಮೇಲ್ಕಂಡ ವಿಧದಿಂದ ಆತ್ಮಜ್ಞಾನ ಮಾಡಿಕೊಂಡವನು ಮಾಯೆ ಮತ್ತು ದುಃಖದಿಂದ ದೂರಾಗುವನು. ಯಾವನು ಎಲ್ಲ ವಸ್ತುಗಳಲ್ಲಿ ತನ್ನನ್ನು ಮತ್ತು ತನ್ನಲ್ಲಿ ಎಲ್ಲ ವಸ್ತುಗಳನ್ನು ಕಾಣುತ್ತಾನೋ ಅವನಿಗೆ ದುಃಖಗಳು ಒದಗುವ ಬಗೆ ಹೇಗೆ?

ಈ ಬಗೆಯ ಸಾಮರಸ್ಯ ಭಾವವನ್ನು ಕಂಡುಹಿಡಿಯುವದು ಮನುಷ್ಯನ ಮುಖ್ಯ ಧ್ಯೇಯವಾಗಿರತಕ್ಕದ್ದು. ಜಗತ್ತಿನ ಶಾಂತತೆಯು ಇದರ ಮೇಲೆಯೇ ಅವಲಂಬಿಸಿದೆ. ಹೀಗೆ ತಿಳಿದವನು ಮತ್ತು ಆಚರಿಸುವವನು ಯಾರ ಗೂಡವೂ ದ್ವೇಷಮಾಡಲಾರನು. ಆದರೆ ಈ ವಿಚಾರಗಳು ಈ ಕಾಲದಲ್ಲಿ ರೂಢವಾಗಿರದ್ದರಿಂದಲೇ ದೇಶಗಳಲ್ಲಿ ಮತ್ತು ಸಮಾಜದಲ್ಲಿ ಅನೇಕ ಬಗೆಯ ದ್ವೇಷಾಸೂಯೆಗಳು ನೆಲೆಗೊಂಡಿರುವವು.

ಮೇಲ್ಕಂಡ ವಿಚಾರಗಳನ್ನು ಶಿವಶರಣರು ತಮ್ಮ ಉಕ್ತಿಗಳಲ್ಲಿ ಗಾಢವಾಗಿ ಹೆಣೆದುಬಿಟ್ಟಿರುವರು. ಲಿಂಗಾಂಗ ಸಾಮರಸ್ಯದ ಮೂಲಕ ಅಂಗವು ಲಿಂಗದಲ್ಲಿ, ಲಿಂಗದಲ್ಲಿ ಅಂಗವು ಸೇರ್ಪಡೆಯಾಗಿ ತಾನು ಮತ್ತು ಜಗತ್ತು ಇವುಗಳಲ್ಲಿ ಐಕ್ಯಭಾವವು ನೆಲೆಗೊಂಡು ಮನುಷ್ಯನು ಕಡೆಗೆ ನಿರವಯ ಅಥವಾ ಶೂನ್ಯಸ್ಥಿತಿಯನ್ನು ಹೊಂದುವನು.

# ಕೊಡಗೂಸಿನ ಶಿವಭಕ್ತಿ (ವಿಮರ್ಶೆ.)

(ಲೇಖಕ:— ಬಿ. ಶಿವಮೂರ್ತಿಶಾಸ್ತ್ರಿ, ಕೀರ್ತನಕೇಸರಿ, ಕವಿರತ್ನ,
ಹುಲಕುಂಟಿ ಮಠ, ತುಮಕೂರ.)

---

ಪರಮಾತ್ಮನಲ್ಲಿಯೂ ಗುರುಹಿರಿಯರಲ್ಲಿಯೂ ನಮಗಿರುವ ಪ್ರೇಮಾತಿಶಯವನ್ನು ಭಕ್ತಿಯೆಂದು ಹೇಳುವರು. ಪರಮೇಶ್ವರನ ಪ್ರಸನ್ನತೆಗೆ ಭಕ್ತಿಯಂತಹ ರಾಜಮಾರ್ಗವು ಮತ್ತೊಂದಿಲ್ಲವೆಂದು ಅನುಭವಿಗಳು ಹೇಳುವರು. ಗೀತೆಯಲ್ಲಿ ಕರ್ಮಯೋಗ, ಜ್ಞಾನಯೋಗಗಳಿಗಿಂತಲೂ, ಭಕ್ತಿಯೋಗವು ಮಿಗಿಲಾದುದೆಂದೂ, ಮುಮುಕ್ಷುವಿಗೆ ಇದುವೇ ಸುಲಭ ಮಾರ್ಗವೆಂದೂ ಭಗವಂತನು ಹೇಳಿರುವನು. ಕರ್ಮಯೋಗಿ, ಜ್ಞಾನಯೋಗಿಗಳಿಗಿಂತಲೂ ಭಕ್ತಿಯೋಗಿಯು ಬಹು ಬೇಗ ಶಂಕರನ ಕೃಪೆಗೆ ಪಾತ್ರನಾದ ದೃಷ್ಟಾಂತಗಳು ಪುರಾಣೇತಿಹಾಸಗಳಲ್ಲಿ ಸಿಗುವವು.

ಭಕ್ತಿಯು ಸುಲಭವಾಗಿ ಲಭಿಸತಕ್ಕುದಲ್ಲ. ಯಾವಾತನು ಸಂಪೂರ್ಣ ಸುಕೃತಶಾಲಿಯೋ ಅಂತಹವನಿಗೆ ಮಾತ್ರ ಪರಮಾತ್ಮನಲ್ಲಿ ಭಕ್ತಿಯು ದೃಢಗೊಳ್ಳುವುದು. ಹಾಗೆ ಭಕ್ತಿಯು ಸ್ಥಿರವಾದರೆ ಆ ಭಕ್ತನು ಶಿವಕೃಪೆಗೆ ಪಾತ್ರನಾಗುವನು. ಆದುದರಿಂದಲೇ ಸುಸಂಸ್ಕೃತನಾದ ಜೀವನು ಸದಾ ತನಗೆ ಭಕ್ತಿಯು ಲೋಕೇಶ್ವರನಲ್ಲಿ ನೆಲಗೊಳ್ಳಲಿ ಎಂದು ಬೇಡುವನು. ಶಿವಗೀತೆಯಲ್ಲಿ ಮಹರ್ಷಿ ಸೂತ ಪುರಾಣಿಕನು ನೈಮಿಷಾರಣ್ಯದ ಮುನಿಜನವನ್ನು ಕುರಿತು

"ಕೋಟಿಜನ್ಮಾರ್ಜಿತೈಃ ಪುಣ್ಯೈಃ ಶಿವೇಭಕ್ತಿಃ ಪ್ರಜಾಯತೇ"

ಶಿವಗೀತೆ. ಅ. ೧. ಶ್ಲೋ. ೧೬.

ಎಂಬುದಾಗಿ ಹೇಳಿರುವನು. ಬಹು ಜನ್ಮಗಳಲ್ಲಿ ಪುಣ್ಯವನ್ನು ಮಾಡಿದಲ್ಲದೆ ಜೀವನು ಶಿವಭಕ್ತಿ ಸಂಪನ್ನನಾಗಲಾರನು ಎಂಬುದೇ ಮೇಲಿನ ಶ್ಲೋಕಾರ್ಥದ ರಹಸ್ಯವು.

ಭಕ್ತಿಯ ರಹಸ್ಯವು ಭಕ್ತನಿಗೇ ಗೊತ್ತು. ಅದರ ರಹಸ್ಯವನ್ನು ಅವನು ಅರಿತು ಸಮೀಚೀನವಾದ ಮಾರ್ಗದಿಂದ ತನ್ನನ್ನು ತಾನೇ ಉದ್ಧರಿಸಿಕೊಳ್ಳುವನು. ಯಾವುದಾದರೊಂದು ಪ್ರಯೋಜನ ಕಾಂಕ್ಷೆಯಿಂದ ಪರಮೇಶ್ವರನನ್ನು ಸೇರಿಸುವವನು ನಿಃಕಾಮ ಭಕ್ತನು. ಯಾವ ಫಲಪ್ರಾಪ್ತಿಗಾ

ಗಿಯೂ ಅಪೇಕ್ಷಿಸದೆ ಲೋಕವಲ್ಲಭನ ಸೇವೆಯು ತನ್ನ ಕರ್ತವ್ಯವೆಂದು ತಿಳಿದು ದೇವರನ್ನು ಪ್ರೀತಿಸುವವನು ನಿಷ್ಕಾಮ ಭಕ್ತನು. ಸಕಾಮ ಮತ್ತು ನಿಷ್ಕಾಮ ಭಕ್ತರಿಬ್ಬರೂ ಭಕ್ತವರ್ಗದಲ್ಲಿಯೇ ಗಣನೀಯರಾದರೂ ಇವರೀರ್ವರ ಯೋಗ್ಯತಾ ನಿರ್ಣಯವು ಭೂಮ್ಯಾಕಾಶದಷ್ಟಿದೆ.

ಇಂದ್ರಕೀಲದಲ್ಲಿ ಸಕಾಮಿಯಾಗಿ ತಪಸ್ಸು ಮಾಡುತ್ತಿದ್ದ ಹಠಯೋಗಿಯಾದ ಕಲಿಪಾರ್ಥನಿಗೆ ನಾಲ್ಕು ತಿಂಗಳಾದರೂ ಪರಶಿವನು ಪ್ರತ್ಯಕ್ಷನಾಗದಿದ್ದನು. ನಿಷ್ಕಾಮ ಭಕ್ತನಾದ ಕಲಿಭೀಮನು ತನ್ನ ಗದೆಯನ್ನು ಮೇಲಕ್ಕೆಸೆದು ಬಾರೆಂದು ಕರೆದೊಡನೆಯೇ ಕ್ಷಣಾರ್ಧದಲ್ಲಿ ಕೈಲಾಸಪತಿಯು ಬಂದುಬಿಟ್ಟನು. ಸಕಾಮಭಕ್ತಿ ನಿಷ್ಕಾಮಭಕ್ತಿ ಇವೆರಡಕ್ಕೂ ಇರುವ ವ್ಯತ್ಯಾಸವನ್ನು ಮೇಲಿನ ಇತಿಹಾಸದಿಂದ ತಿಳಿಯಬಹುದು.

ಪರಮಾತ್ಮನಿಗೆ ಭಕ್ತರೆಂದರೆ ಬಹು ಪ್ರೇಮ. "ಮಮ ಭಕ್ತೋ ಹಿ ಮಮಾಧಿಕಃ" ಎಂದು ಅವನು ಜಗತ್ತಿನಲ್ಲಿ ಡಂಗುರ ಹೊಡೆದಿರುವನು. ಅದರಲ್ಲಿಯೂ ನಿಷ್ಕಾಮಭಕ್ತರು ಅವನಿಗೆ (ದೇವರಿಗೆ) ಅತ್ಯಂತ ಪ್ರಿಯತಮರೆಂದು ಆತನು ಬಾಯಿಬಿಟ್ಟು ಹೇಳದಿದ್ದರೂ ಆತನ ಚರ್ಯೆಗಳಿಂದ ನಾವು ನಿರ್ಧರಿಸಬಹುದು.

ಭಕ್ತರನ್ನು ಪ್ರೀತಿಸುವಾಗ ಕುಲ, ರೂಪ, ಅಧಿಕಾರ, ಐಶ್ವರ್ಯ ಮೊದಲಾದವುಗಳಾವನ್ನೂ ಲೆಕ್ಕಿಸದೆ ಆ ದಯಾಘನನು ಭಕ್ತನ ಚಿತ್ತವೃತ್ತಿಯನ್ನು ಮಾತ್ರ ಅವಲೋಕಿಸುವನೆಂಬುದನ್ನು ನಾವು ಮಾರ್ಕಂಡೇಯ, ಕಣ್ಣಪದೇವ, ಬಿಲ್ಹಣಾದಿಗಳನ್ನು ಕೇಳಿ ತಿಳಿಯಬಹುದು.

ಭಕ್ತಿಯ ರುಚಿಯನ್ನು ಚನ್ನಾಗಿ ಅನುಭವಿಸಿದ ಮಹಾಕವಿ ಮಗ್ಗೆಮಾಯಿದೇವನು.

ಏನೆನಲುಂಟು ಭಕ್ತಿಯ ಮಹಾತ್ಮತೆಯಂ ಶೃತಿಶಾಸ್ತ್ರ ಪಙ್ತಿಯೋ ।
ಗೇನಪರಾ ಎನುತ್ತಮಳ ಭಕ್ತಿಯ ವೈಭವಮಂ ಪೊಗಳ್ದು ಸ ॥
ನ್ಮಾನಿಸಿತಾಗಿ ಯೋಗ ಪದದಿಂದುಪರಿಷ್ಟವೆನಿಪ್ಪ ಭಕ್ತಿ ಸಾ ।
ಖ್ಯಾನುಭವೈಕ ನಿಷ್ಕಳ ಪದಕ್ಕೆಣೆ ಯಾವ ಪದಂ ಶಿವಾಧವಾ ॥೭॥
ಭಕ್ತಿ ಶಿವಪ್ರಸಾದ ಜನನೀ ಭವನಂ ಶಿವನ ಪ್ರಸಾದವಾ ।
ಭಕ್ತಿಗೆ ಜನ್ಮ ಭೂಮಿ ವಿಮಲಾಂಕುರ ಬೀಜದ ಪೋಲ್ ಪರಸ್ಪರಂ ॥

ವ್ಯಕ್ತಮಿದಿಂತು ನೋಳ್ಪೊಡದು ತಾನೆ ನಿರಂತರಮಪ್ಪ ಮುಕ್ತಿಯಾ।
ಮುಕ್ತಿಯೆ ಶುದ್ಧ ನಿಷ್ಕಳ ನಿಜೈಕ್ಯಪದಂ ಪರಮಂ‍ ಶಿವಾಧವಾ॥೮॥
ಶಿವಾಧವ ಶತಕ

ಎಂಬುದಾಗಿ ಹೇಳಿರವನು. ಭಕ್ತಿಯು ಮುಕ್ತಿಗಿಂತಲೂ ಉನ್ನತವೆಂದೂ, ಶಿವಕೃಪೆಯಲ್ಲದೆ ಜೀವನಿಗೆ ಭಕ್ತಿಯು ಪ್ರಾಪ್ತವಾಗುವದಿಲ್ಲವೆಂದೂ. ಭಕ್ತಿಯಿಲ್ಲದೆ ಶಿವನ ಕೃಪೆಯೂ ಲಭಿಸಲಾರದೆಂದೂ ಆದುದರಿಂದ ಶಿವಕೃಪೆ, ಭಕ್ತಿ ಎಂಬವೆರಡೂ ಬೀಜವೃಕ್ಷ ನ್ಯಾಯದಂತೆ ಊಹಾತೀತವೆಂದೂ ಮಾಯಿದೇವನು ಹೇಳುವನು.

ಭರತ ವರ್ಷದ ಕ್ಷೇತ್ರಸಙ್ತಿಯಲ್ಲಿ ಪ್ರಾಚೀನ ಕಾಲದಿಂದಲೂ ವಿಖ್ಯಾತವಾದ ಶ್ರೀಶೈಲ ಕ್ಷೇತ್ರವು ತ್ರಿಲಿಂಗ ದೇಶದಲ್ಲಿರುವುದು. ಇದಕ್ಕೆ ವಾಯುವ್ಯ ದಿಕ್ಕಿನಲ್ಲಿ ಕರ್ನಾಟಕ ಜಾನಪದದಲ್ಲಿ 'ಕೋಳೂರು' ಎಂಬ ಗ್ರಾಮವೊಂದಿದ್ದಿತು. ಅಲ್ಲಿ ಶಿವದೇವನೆಂಬ ಓರ್ವ ಗೃಹಸ್ಥನು 'ಕಲ್ಯಾಣಿ ಎಂಬ ಸಹಧರ್ಮಿಣಿಯೊಡನೆ ಸಂಸಾರ ಮಾಡುತ್ತಿದ್ದನು. ಅವನಿಗೆ ಸಕಲ ಭಾಗ್ಯಗಳಿದ್ದರೂ ಮಕ್ಕಳಿಲ್ಲದ ಚಿಂತೆಯೊಂದಿದ್ದಿತು.

ಸಮಾನ ಹೃದಯರಾದ ಸತಿಪತಿಗಳು ಸದಾ ಸನ್ಮಾರ್ಗಿಗಳಾಗಿ ಗುರುಹಿರಿಯರ ಸೇವೆಯಲ್ಲಿ ಕಾಲಹರಣ ಮಾಡುತ್ತಿದ್ದರು. ಪರಮ ಸಾಧ್ವೀಶಿರೋಮಣಿಯಾದ ಕಲ್ಯಾಣಿಯು ಪುತ್ರಾಪೇಕ್ಷೆಯಿಂದ ಸದಾ ಕಾತರಳಾಗಿದ್ದಳು. ಹೀಗಿರುತ್ತಿರುವಲ್ಲಿ ಸತಿಪತಿಗಳೀರ್ವರೂ ಆ ಊರಿನಲ್ಲಿದ್ದ ಶ್ರೀ ಕಲ್ಲಿನಾಥ ಶಿವಾಲಯಕ್ಕೆ ಹೋಗಿ ಭಕ್ತಿಯಿಂದ ಶಿವಾರ್ಚನೆ ಮಾಡಿ ತಮಗೆ ಪುತ್ರಲಾಭವನ್ನು ಕೊಡುವಂತೆ ಪ್ರಾರ್ಥಿಸಿದರು.

ಭಕ್ತಪರಾಧೀನನಾದ ಪರಮೇಶ್ವರನು ಇವರ ಸೇವೆಯಿಂದ ಸಂತುಷ್ಟನಾಗಿ ಶುಭಪ್ರಸಾದವನಿತ್ತನು ಶಿವದೇವನು ಅದನ್ನು ನೋಡಿ ಹರ್ಷಿತನಾಗಿ ಶಿವನು ತಮ್ಮನ್ನು ಕರುಣಿಸಿದ ವಿಷಯವನ್ನು ತನ್ನ ಪತ್ನಿಗೆ ತಿಳುಹಿ ಆಕೆಯೊಡನೆ ಮನೆಗೆ ಹಿಂದಿರುಗಿದನು.

ಆ ದಿನ ರಾತ್ರಿ ಮನೆಯಲ್ಲಿ ಮಲಗಿರಲು ಬೆಳಗಿನ ಜಾವದಲ್ಲಿ ಶಂಕರನು ಶಿವದೇವನ ಸ್ವಪ್ನದಲ್ಲಿ ಜಂಗಮಾಕಾರದಿಂದ ಪ್ರಸನ್ನನಾಗಿ "ಎಲೈ ಶಿವದೇವಾ, ನಿಮ್ಮ ಇಚ್ಛೆಯಂತೆ ಓರ್ವ ಕನ್ಯಾಮಣಿಯು ನಿಮ್ಮುದರದಲ್ಲಿ ಹುಟ್ಟಿ ತನ್ನ ಪವಿತ್ರವಾದ ವೃತ್ತಿಯಿಂದ ಜಗತ್ತನ್ನೇ ವಿಸ್ಮಯ

ಗೊಳಿಸುವಳು. ಆಕೆಗೆ 'ಕೊಡಗೂಸು' ಎಂದು ಹೆಸರಿಡಿ, ನಿಮಗೆ ಮಂ ಗಳವಾಗಲಿ" ಎಂದು ಹೇಳಿ ಹರಸಿ ಅದೃಶ್ಯನಾದನು. ಶಿವದೇವನು ಸ್ವಪ್ನದಿಂದೆಚ್ಚತ್ತು ಕಲ್ಯಾಣಿಯನ್ನು ಜಾಗ್ರದಗೊಳಿಸಿ ಯಾವದ್ವೃಂತವನ್ನೂ ಆಕೆಗೆ ತಿಳುಹಿದನು. ಅದಕ್ಕವಳು ಅತ್ಯಂತವಾಗಿ ಹರ್ಷಿಸಿ "ಹೃದಯೇ ಶ್ವರಾ ನಾನು ಮನಸ್ಸಿನಲ್ಲಿ ಹೆಣ್ಣು ಮಗಳಾದರೆ ಸಾಕೆಂದು ಸಂಕಲ್ಪಿಸಿ ದ್ದೆನು. ಪಂಶಿವನೂ ಅದನ್ನೇ ಅಪ್ಪಣೆ ಮಾಡಿರುವನಲ್ಲಾ ಎಂದು ಪರಮಾತ್ಮನ ಅಪಾರ ಮಹಿಮೆಯನ್ನು ಕೊಂಡಾಡಿದಳು.

ಕಲ್ಯಾಣೀ ಶಿವದೇವರು ಸ್ವಲ್ಪ ಕಾಲ ಕಳೆಯಲಾಗಿ ಶಿವಕೃಪೆ ಯಿಂದ ಶಿವದೇವ ಪತ್ನಿಯು ಗರ್ಭಿಣಿಯಾಗಿ ಸುಮುಹೂರ್ತದಲ್ಲಿ ಒಂದು ಕನ್ಯಾರತ್ನವನ್ನು ಹಡೆದಳು. ಜಾತಕರ್ಮಾದಿಗಳಾಗಲು ಆ ಶಿಶುವಿಗೆ ಶಿವನಪ್ಪಣೆಯಂತೆ ಕೊಡಗೂಸೆಂದು ಹೆಸರಿಟ್ಟರು. ಮಗುವು ಬಾಲ ಚಂದ್ರನಂತೆ ಒಳೆಯಿತು.

ಮಗುವಿಗೆ ತಕ್ಕಷ್ಟು ವಯಸ್ಸಾಗಲು ತಂದೆ ತಾಯಿಗಳು ಓದು ಬರಹಗಳನ್ನೂ ಆಚಾರವಿಚಾರಗಳನ್ನೂ ಕಲಿಸತೊಡಗಿದರು. ಹುಡುಗಿಯು ವಿಧೇಯಳಾಗಿ ವಿದ್ಯಾವಂತೆಯೂ ಗುಣವಂತೆಯೂ ಆಗುತ್ತಿದ್ದಳು. ಹೀಗಿ ಗುತ್ತಿರಲು ಹುಡುಗಿಗೆ ೮-೯ ವರ್ಷ ವಯಸ್ಸಾಯಿತು.

ಒಂದಾನೊಂದು ದಿವಸ ಸತಿಪತಿಗಳೀರ್ವರೂ ಸರಸಸಲ್ಲಾಪದಲ್ಲಿರು ವಾಗ ಹೀಗೆ ಚರ್ಚಿಸಿದರು.

ಶಿವದೇವ:— ಪ್ರಿಯತಮೆ, ಶಿವರಾತ್ರಿಯ ಪುಣ್ಯದಿನವು ಸನ್ನಿಹಿತ ವಾಯಿತು. ಭೂಕೈಲಾಸವೆನಿಸಿದ ಶ್ರೀಶೈಲಕ್ಷೇತ್ರದಲ್ಲಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಜಾತ್ರೆಯು ನಡೆಯುವುದು. ಆ ಕಾಲದಲ್ಲಿ ಅಖಂಡ ಭರತ ಖಂಡದಿಂದಲೂ ಸಾಧುಸಂತರೂ, ಗುರುಜಂಗಮರೂ ದಯಮಾಡಿಸು ವರು. ಇದಲ್ಲದೆ ಆ ಕಾಲದಲ್ಲಿ ಶ್ರೀ ಮಲ್ಲಿಕಾರ್ಜುನನ ಬಗೆಬಗೆಯಾದ ಉತ್ಸವಗಳನ್ನು ಭಕ್ತರು ನೆರವೇರಿಸುವರು. ಈ ವರ್ಷ ನಾವೀರ್ವರೂ ಸಹ ಸ್ವಾಮಿಯ ಸೇವೆಗೆ ಹೋಗಿಬರೋಣವೇ?

ಕಲ್ಯಾಣಿ:— ಹೃದಯೇಶ್ವರಾ, ಒಳ್ಳೆಯ ಯೋಚನೆಯನ್ನು ಹೇಳಿ ದಿರಿ. ನನಗೆ ಮಗಳಾಗುವದಕ್ಕಿಂತ ಮುಂಚೆ ನಾನು ನನ್ನ ಹೊಟ್ಟೆಯಲ್ಲಿ ಮಕ್ಕಳಾಗಿ ನನ್ನ ಒಂಚೆತನವು ಹಿಂಗಿದರ ನಾವೊಮ್ಮೆ ಶ್ರೀಶೈಲಯಾತ್ರೆ

ಯನ್ನು ಮಾಡುವೆನೆಂಬುದಾಗಿ ಮಲ್ಲಿಕಾರ್ಜುನನಿಗೆ ಹರಿಕೆ ಮಾಡಿಕೊಂಡಿದ್ದೆನು. ಮಗಳಾಗಿ ನನ್ನ ಇಷ್ಟಾರ್ಥವು ನೆರವೇರಿದರೂ ನಾನು ಸ್ವಾಮಿಯ ಸೇವೆಯನ್ನು ಈ ಸಡಗರದಲ್ಲಿ ಮರೆತು ಕೃತಘ್ನಳಾದೆನು. ಹಾ, ಹಾ ಪ್ರಮಾದವಾಯಿತು.

ಶಿವದೇವಃ— ದೇವೀ ಚಿಂತಿಸಬೇಡ. ಪರಶಿವನು ಕರುಣಾಮಯನು. ನಿನ್ನನ್ನು ಕ್ಷಮಿಸುವನು. ಹರಕೆಗೆ ಹನ್ನೆರಡು ವರುಷವೆಂದು ಹಿರಿಯರು ಹೇಳುವರು. ನಿನ್ನ ಪ್ರತಿಜ್ಞೆ ಕಾಲವು ಇನ್ನೂ ಮೀರಿಲ್ಲವಲ್ಲಾ.

ಕಲ್ಯಾಣಿಃ— ಪ್ರಾಣನಾಥಾ, ಹಾಗಾದರೆ ನಾವೀರ್ವರೂ ಯಾತ್ರೆಗೆ ಹೊರಡಬಹುದು. ಕುಮಾರಿಯೋ?

ಶಿವದೇವಃ— ಕುಮಾರಿಯಲ್ಲಿ ಬರಲಿಕ್ಕೆ ಸಾಧ್ಯವಾಗುವುದು. ನಾನು ಪ್ರತಿದಿನವೂ ಕಪಿಲೆಯ ಹಸುವಿನ ಬಳ್ಳ (ನಾಲ್ಕು ಸೇರು) ಹಾಲನ್ನು ಕಲ್ಲಿನಾಥನಿಗೆ ಸಲ್ಲಿಸುವ ವ್ರತವುಳ್ಳವನಾಗಿ ಕೊಡಗೂಸು ಹುಟ್ಟಿದಂದಿನಿಂದಲೂ ಒಂದು ದಿನವೂ ತಪ್ಪದೆ ನಡೆಸಿಕೊಂಡು ಬಂದಿರುವೆನು. ಆದುದರಿಂದ ನಾವು ಯಾತ್ರೆಯಿಂದ ಹಿಂತಿರುಗಿ ಬರುವ ವರೆಗೂ ಕುಮಾರಿಯು ಈ ವ್ರತವನ್ನು ನಡೆಸುತ್ತಿರಲಿ.

ಕಲ್ಯಾಣಿಃ— ದೇವಾ, ಏಳೆಂಟು ವರ್ಷದ ಮಗಳು ಈ ಕಠಿಣ ವ್ರತವನ್ನು ನಡಿಸುವಳೇ? ಮನೆಯಲ್ಲಿ ಅವಳೊಬ್ಬಳೇ ಜೋಪಾನವಾಗಿ ಇರಲು ತಾನೇ ಸಾಧ್ಯವೇ?

ಶಿವದೇವಃ— ಮಗಳನ್ನೇ ಕೇಳಿ ನೋಡೋಣ.

ಕಲ್ಯಾಣಿಃ— ತಾವೊಬ್ಬರೇ ಹೋಗಿ ಸ್ವಾಮಿಯ ಸೇವೆಯನ್ನು ಸಲ್ಲಿಸಿಬರಬಾರದೇಕೆ? ನಾನು ಮನೆಯಲ್ಲಿದ್ದು ದೇವರ ವ್ರತವನ್ನು ನಡೆಸುವೆನು.

ಶಿವದೇವಃ— (ನಸುನಗೆಯಿಂದ) ಕಲ್ಯಾಣೀ ಹಾಗಲ್ಲ ಕೇಳು. ತೀರ್ಥಯಾತ್ರೆಗಳನ್ನು ಸತಿಪತಿಗಳಿಬ್ಬರೂ ಮಾಡಬೇಕೆಂದು ಗೃಹಸ್ಥಾಶ್ರಮ ನಿಯಮವಿರುವುದಾಗಿ ಗುರುಗಳು ಹೇಳುವರು. ಹಾಗಲ್ಲದೆ ಸತಿಯೇ ಆಗಲಿ ಪತಿಯೇ ಆಗಲಿ ಒಬ್ಬಂಟಿಗರಾಗಿ ಯಾತ್ರೆ ಮಾಡುವುದು ನಿಷ್ಫಲವಂತೆ.

ಕಲ್ಯಾಣಿಃ— ಹಾಗಾದರೆ ಈಗೇನು ಮಾಡೋಣ?

ಶಿವದೇವ:— ಮಾಡುವದೇನು ಮಗಳನ್ನು ಕರೆದು ಅವಳಿಗೀ ವಿಷಯುವನ್ನೆಲ್ಲ ತಿಳಿಸಿ ಅವಳು ಮನೆಯಲ್ಲಿದ್ದು ಶಿವಸೇವೆಯನ್ನು ಮಾಡು ತ್ತಿರುವಂತೆ ನಿಯಮಿಸಿ ನಾವೀರ್ವರೂ ಶ್ರೀಶೈಲಕ್ಕೆ ಹೊರಡೋಣ.

ಹೀಗೆ ಸತಿಪತಿಗಳು ಮಾತನಾಡುತ್ತಿರುವಲ್ಲಿ ಪಾಠಶಾಲೆಗೆ ಹೋಗಿದ್ದ ಮಗಳು ಓಡಿಯೋಡಿ ತಂದೆತಾಯಿಗಳಿದ್ದ ಸ್ಥಳಕ್ಕೆ ಬಂದು ಆನಂದ ದಿಂದ ತಾಯಿಯ ಮೈಮೇಲೆ ಬಿದ್ದು ನಲಿದಾಡುವಳು. ಮಾತಾಪಿತೃ ಗಳು ಸೌಂದರ್ಯ, ಸೌಜನ್ಯ, ಸೌಕುಮಾರ್ಯ ಸೌಭಾಗ್ಯಗಳನ್ನೂ ಅಕೃತ್ರಿಮವಾದ ನಡೆನುಡಿಗಳನ್ನೂ ನೋಡಿ ಮನದಣಿಯ ಆನಂದಿಸು ವರು. ಶಿವದೇವನು ಮಗಳ ಮುದ್ದು ಮುಖವನ್ನು ನೋಡಿ ಸಂತೋ ಷಾತಿಶಯದಿಂದ

ಶಿವದೇವ:— ತಂಗೀ ನಾನೂ ನಿಮ್ಮ ತಾಯಿಯೂ ಶ್ರೀಶೈಲಕ್ಕೆ ಹೋಗಿಬರುವೆವು. ನೀನು ಮನೆಯಲ್ಲಿ ಎಚ್ಚರಿಕೆಯಿಂದ ಇರುವೆಯಾ?

ಕೊಡಗೂಸು:— ತಂದೆಯೇ ನಿನ್ನಪ್ಪಣೆಯಂತಾಗಲಿ.

ಕಲ್ಯಾಣಿ:— (ಮಗಳನ್ನು ಮೈದಡವಿ) ಅಮ್ಮಾ ಮನೆಯಲ್ಲಿರುವುದು ಮಾತ್ರವಲ್ಲ. ನಾವು ಶ್ರೀಶೈಲದಿಂದ ಹಿಂದಿರುಗಿ ಬರುವ ವರೆಗೂ ನಿಮ್ಮ ತಂದೆಯು ನಡೆಸುತ್ತಿರುವ ಕಲ್ಲಿನಾಥನ ವ್ರತವನ್ನು ನಡೆಸುವಿಯಾ?

ಕೊಡಗೂಸು:— ಅಮ್ಮಾ ನಿಮ್ಮ ಅಪ್ಪಣೆಯನ್ನು ಎಂದಾದರೂ ಮೀರಿರುವೆನೇ. ನೀವು ನಿಶ್ಚಿಂತರಾಗಿ ಯಾತ್ರೆಗೆ ಹೋಗಿ ಬನ್ನಿ. ನೀವು ಬರುವ ವರೆಗೂ ಪ್ರತಿದಿನವೂ ತಂದೆಯು ಕಲ್ಲಿನಾಥನಿಗೆ ಸಲ್ಲಿಸುತ್ತಿರುವ ಬಳ್ಳ ಹಾಲನ್ನು ನಾನೂ ತಪ್ಪದೆ ಶಿವನಿಗೆ ಸಲ್ಲಿಸುವೆನು.

ಶಿವದೇವ:— (ಮಗಳ ತಲೆಯನ್ನು ಕೈಯಿಂದ ಸವರಿ) ಮಗೂ ಪ್ರತಿದಿನವೂ ಜ್ಞಾಪಕವಾಗಿ ಸ್ವಾಮಿಗೆ ಕಪಿಲೆಯ ಹಸುವಿನಿಂದ ಬಳ್ಳ ಹಾಲನ್ನು ಕರೆದು ಚನ್ನಾಗಿ ಕಾಯಿಸಿ ಮಡಿಯಿಂದ ಹೋಗಿ ಕಲ್ಲಿನಾ ಥನಿಗೆ ಸಮರ್ಪಿಸುವೆಯಾ?

ಕೊಡಗೂಸು:— ತಂದೆಯೇ ನಾನು ನೀವು ಹೇಳಿದುದನ್ನು ಚಾಚೂ ತಪ್ಪಿಲ್ಲದಂತೆ ನಡೆಯಿಸುವೆನು. ಪ್ರತಿದಿನವೂ ಕಾಲಕ್ಕೆ ಸರಿಯಾಗಿ ಶಿವ ನಿಗೆ ಬಳ್ಳಕಪಿಲೆಯ ಹಾಲನ್ನು ಒಪ್ಪಿಸಿಬರುವೆನು. ನನ್ನ ಮಾತನ್ನು ನಿಜವೋ

ಸುಳ್ಳೋ ಎಂಬುದನ್ನು ನೀವು ಯಾತ್ರೆಯಿಂದ ಬಂದ ಬಳಿಕ ಕಲ್ಲಿನಾಥ ಸ್ವಾಮಿಯನ್ನೇ ಕೇಳಿ ತಿಳಿಯಿರಿ.

ಕೊಡಗೂಸಿನ ವಿಮಲವಾದ ಮಾತುಗಳನ್ನು ಕೇಳಿ ಕಲ್ಯಾಣೀ ಶಿವದೇವರು ಬಹುವಾಗಿ ಕೊಂಡಾಡಿ ತಾವು ಶ್ರೀಶೈಲ ಯಾತ್ರೆಗೆ ಸಿದ್ಧರಾದರು.

ಸುಮುಹೂರ್ತ ಒಂದರಲ್ಲಿ ಸತಿಪತಿಗಳು ಮಗಳಿಗೆ ಹೇಳುವ ಬುದ್ಧಿವಾದಗಳನ್ನೆಲ್ಲಾ ಹೇಳಿ ಶ್ರೀಶೈಲದ ಹಾದಿಯನ್ನು ಹಿಡಿದರು. ಜನರು ನಾನಾ ದೇಶಗಳಿಂದ ತಂಡೋಪತಂಡವಾಗಿ ಜಾತ್ರೆಗಾಗಿ ಹೋಗುತ್ತಿದ್ದರು.

ಮರುದಿನ ಕೊಡಗೂಸು ಮನೆಗೆಲಸಗಳನ್ನೆಲ್ಲ ಮಾಡಿ ಸ್ನಾನ ಮಾಡಿ ಮಡಿಯುಟ್ಟು ತಮ್ಮ ಮನೆಯಲ್ಲಿದ್ದ ಕಪಿಲೆ ವರ್ಣದ ಹಸುವಿನಿಂದ ಬಳ್ಳ ಹಾಲನ್ನು ಕರೆದು ಅದನ್ನು ಬೆಳ್ಳಿಯ ಪಾತ್ರೆಯಲ್ಲಿ ಕಮ್ಮಗೆ ಕಾಯಿಸಿ ತಾನು ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಕಲ್ಲಿನಾಥನ ದೇವಾಲಯದ ಕಡೆಗೆ ನಡೆದಳು.

ಹೀಗೆ ಹೋಗುವಾಗ ಬಾಲಕಿಯು ಕಲ್ಲಿನಾಥನನ್ನು ಯಾವಾಗ ನೋಡುವೆನು, ಶಿವನು ಯಾವಾಗ ಹಾಲನ್ನು ಸೇವಿಸುವನು, ಎಂಬುದಾಗಿ ತವಕಿಸುತ್ತ ಬಹು ಬೇಗನೆ ಶಿವಾಲಯವನ್ನು ಸೇರಿದಳು. ದೇವಸ್ಥಾನದ ಅಂದಚೆಂದಗಳನ್ನು ನೋಡಿ ಆನಂದಾಶ್ಚರ್ಯನಿಮಗ್ನಳಾದಳು. ಆ ದೇವಾಲಯದ ಪ್ರಾಕಾರದಲ್ಲಿ ಕೆತ್ತಿರುವ ಸುಂದರವಾದ ಶಿಲ್ಪಚಿತ್ರಗಳನ್ನು ನೋಡಿ ಸಂತೋಷಪಟ್ಟಳು.

ದೇವಾಲಯದ ಗರ್ಭಾಂಗಣವನ್ನು ಹೊಕ್ಕಳು. ಪಾರ್ವತೀವಲ್ಲಭನು ಲಿಂಗಾಕಾರವಾಗಿ ಶೋಭಿಸುತ್ತಿದ್ದನು. ಶಿವನಿಗೆ ಸಾಷ್ಟಾಂಗ ಮಾಡಿದಳು. ಅರ್ಚಿಸಿದಳು. ತಾನು ಸುವರ್ಣ ಪಾತ್ರೆಯಲ್ಲಿ ತಂದಿದ್ದ ಕಪಿಲೆಯ ಹಾಲನ್ನು ಮುಂದಿಟ್ಟು ಎಲೈ ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಪಾರ್ವತೀವಲ್ಲಭನೇ ನಮ್ಮ ತಂದೆಯು ಶ್ರೀಶೈಲ ಯಾತ್ರೆಗೆ ಹೋಗಿರುವನು. ನಾನು ನನ್ನ ಜನಕನ ಅಪ್ಪಣೆಯಂತೆ ಕಪಿಲೆಯ ಬಳ್ಳ ಹಾಲನ್ನು ತಂದಿರುವೆನು. ದೇವಾ, ಈ ಹಾಲನ್ನು ಸ್ವೀಕರಿಸು, ಎಂದು ಪ್ರಾರ್ಥಿಸಿದಳು.

ಕೊಡಗೂಸು ನಿಷ್ಕಾಮ ಭಕ್ತಳಾದುದರಿಂದ ತಂದೆಯು ಶಿವನಿಗೆ ಕಪಿಲೆಯ ಹಾಲನ್ನು ಸಮರ್ಪಿಸಿ ಬಾರೆಂದುದನ್ನು ಪರಮಾತ್ಮನಿಗೆ ಕುಡಿಸುವದೆಂದು ಅರ್ಥ ಮಾಡಿಕೊಂಡಳು ಶಿವನಿಗೆ ಹಾಲನ್ನು ನಿವೇದಿಸಿ ಹಿಂದಕ್ಕೆ ತರುವದು 'ದತ್ತಾಪಹಾರ ದೋಷ' ವೆಂದೂ ಜಿಪುಣತನವೆಂದೂ ಅವಳ ನಂಬುಗೆ ಆದುದರಿಂದ ಕಲ್ಲಿನಾಥನು ಹಾಲನ್ನು ಎದ್ದು ಬಂದು ಕುಡಿಯದೆ ಮೌನವಾಗಿದ್ದುದನ್ನು ನೋಡಿ,

ಕಂದ ದಡದಡಿಪೆದೆ ಬಿಸಿಮುಸಗುವ ।
ನಿಡುಸುಯ್ಯುಂಪಿಪ ಗರಂಗಳಿರ್ಪೊಣಿದ ಬಾಯ್ ।।
ಗುಡುಗುಡನೆ ಸುರಿದ ಕಣ್ಬನಿ ।
ಯೊಡನಿರೆ ಕೊಡಗೂಸು ನೋಡಿ ಲಿಂಗಮನಾಗಳ್ ॥

ವೃಷಭೇಂದ್ರವಿಜಯ ಅ ೯ ಪ. ೭೨

ಎಲೈ ಕರುಣಾಭರಣನಾದ ಸರ್ಪಭೂಷಣಾ! ಉಮಾಧವಾ!! ಶಂಕರಾ!!!

ಕಂದ॥ ಏಂ ಕಾರಣಮೀ ಪಾಲಂ ।
ನೀಂ ಕುಡಿಯದೆ ಸುಮ್ಮನಿರ್ಪೆಯ ಕಟಕಟನಗಾ ॥
ಟಂಕಮನಾಗಿಪುದುಚಿತಮೆ ।
ಶಂಕರ ನೀ ಪೇಳ್ವುದೆಂದು ಮಗುಳ್ದಿಂತೆಂದಳ್ ॥೭೩॥

ಪಸಿವೇನಾದುದೊ ದೇವ ಕೇಳ್ನನಗೆ ಪಾಲೇಂ ಕಾಯದೋ ಪೊತ್ತಿತೋ ।
ಬಿಸುಪಾರಿರ್ದುದೊ ಕಂಮನಾಗದೊ ತನತ್ತಿಂ ಪೇರದೋ ಕಣ್ಗೆ ರಂ ॥
ಜಿಸದೋ ಮೇಣ್ ಪೊಗೆಸುತ್ತಿದತ್ತೊ ಪೆರರಿಂ ಕಣ್ಣಂಜಲಾದತ್ತೆಂಬ ।
ಲ್ಪಿಸಿಯಾಗಿರ್ದುದೊ ಮೀಸಲೋಸರಿಸಿತೋ ಪೇಳೆಂಟದಿರ್ಪಂದವಂ

ಮನವೆಳಸಿ ನೋಡಿದೆನೆಸ ।
ಲ್ಗನೆಯುಂ ಬೇರ್ಕೈರ್ದುತಂದೆನೇ ಪಾಲನಿದಂ ॥
ಮನೆಯಲ್ಲಿ ತಡಂಗೆಯ್ದನೆ ।
ನೆನೆದಿನೆ ಪೆರಕೊಂದನೇಕೆ ಸುಡಿಯೆ ಪುರಾರೀ ॥೭೪॥

ಬಿಸುಪಾರಿರ್ದೊಡೆ ಸವಿಸವು ।
ನಿಸುಗುಮೆ ಬಗೆದುಂದು ಜವದಿ ನೀಂಟಯ್ಯಸುಧಾ ॥
ರಸಮುಂ ನೀಂ ಬಯಸಿದುದಂ ।
ಬೆಸಸೀಗಳೆ ನಿನಗೆ ಪೋಗಿತಂದಪೆನಭವಾ ॥೭೫॥

ಪೊಸಸಕ್ಕರೆಯಂಗವ ಮಧು ।
ರಸಮಂ ನರುನೆಯ್ಯನೆಸೆವ ಕದಳೀ ಫಲಮಂ ॥
ರಸನೆ ಯೆಳಸಿದುದ ನೆನ್ನೊಳ್ ।
ಬೆಸಸೀಗಳೆ ನಿನಗೆ ತಂದಪೆಂ ಶಶಿಮೌಳಿ ॥೭೭॥

ಪುರಿಗಡುಬು ತರಗು ಚಕ್ಕುಲಿ ।
ಕರಂಜಿಕಾಯುತಿರಸಂಚಿಗುಳಿಲಡ್ಡುಗೆ ಸ ॥
ಕ್ಕರೆ ಪೇಣಿಯೊಳವುಮನ್ನಂ ।
ದಿರದೋಳ್ನೀಂ ಬಯಸೆ ಪೋಗಿ ತಂದಪೆನೀಗಳ್ ॥೭೮॥

ಪಾಲೊಡನಾರೋಗಿಪೆನೆನೆ ।
ಲೀಲೆಯೊಳಾಂ ಪೋಗಿ ತರ್ಪೆನೋರಗಮನಿವಳ್ ॥
ಬಾಲಕಿ ಪುಸಿ ನುಡಿದಪಳೆಂ ।
ದಾಲೋಚಸದಿರು ಪರೀಕ್ಷಿಸೆನ್ನಯ ಗುಣಮಂ ॥೭೯॥

ಎನ್ನ ಮಾತನುಪೇಕ್ಷೆಗೆಯ್ಯದೆ ಪಾಲನೀಂಟಿದಡಯ್ಯ ಕೇಳ್ ।
ನಿನ್ನನಾಂ ಕರದೊಯ್ವೆ ನೊಪ್ಪುವ ವೀರಭದ್ರನ ತೇರ್ಗೆಸಂ ॥
ಪನ್ನ ಮದ್ಗುರು ಪರ್ವ ಕೆನ್ನೆಯ ತಂದೆ ನಾಳೆನಗೀವರ ॥
ತ್ನೋನ್ನತಾಭರಣಂಗಳಂ ನಿನಗೀವೆನಿಂದು ಕಳಾಧರಾ ॥೮೦॥
ವೃಷಭೇಂದ್ರವಿಜಯ ಅ. ೯

ಎಂಬುದಾಗಿ ಪರಮೇಶ್ವರನನ್ನು ನಾನಾ ಪ್ರಕಾರವಾಗಿ ಪ್ರಾರ್ಥನೆಮಾಡಿದರೂ ಶಂಕರನು ಸಾಕಾರನಾಗಿ ಬಂದು ತಾನು ತಂದಿಟ್ಟ ಹಾಲನ್ನು ಕುಡಿಯದೆ ಮೌನವಾಗಿರುವುದನ್ನು ನೋಡಿ ಕೊಡಗೂಸು ಬಾಲೆಯು ಅತ್ಯಂತ ದುಃಖಿಯಾಗಿ ಕಂದಿ ಕುಂದಿ ಬೆಂದು ಬಸವಳಿದು ಬೇಗುದಿಯಾಗಿ ಹೋದಳು.

ಆಗ ಹುಡಿಗಿಯು ಈ ರೀತಿ ತನ್ನ ಮನಸ್ಸಿನಲ್ಲಿ ಯೋಚಿಸಿದಳು. 'ನಾನು ಮುಂದೆ ನಿಂತಿರುವುದರಿಂದ ಪರಮೇಶ್ವರನು ಎದ್ದು ಬಂದು ಹಾಲು ಕುಡಿಯಲು ನಾಚುತ್ತಿರಬಹುದು. ಆದುದರಿಂದ ನಾನು ಈ ಕಂಬದ ಮರೆಯಲ್ಲಿ ನಿಂದುದಾದರೆ ಶಿವನು ಹಾಲನ್ನು ಕುಡಿವನು ಹೀಗೆ ಆಲೋಚಿಸಿ, ಕೊಡಗೂಸು ಬಾಲಕಿಯು ಆ ದೇವಾಲಯದ ಅದೊಂದು ಕಂಬದ ಮರೆಯಲ್ಲಿ ಸ್ವಲ್ಪಕಾಲ ನಿಂತುಕೊಂಡಳು. ಸ್ವಲ್ಪ ಕಾಲವಾದ ಮೇಲೆ

'ಈಗ ಶಂಕರನು ಹಾಲುಕುಡಿದು ಹೋಗಿರಬೇಕು' ಎಂದು ಯಥಾ ಪ್ರಕಾರ ತನ್ನ ಹಾಲಿನ ಬಟ್ಟಲ ಹತ್ತಿರಕ್ಕೆ ಬಂದು ನೋಡಿದಳು. ಮೊದಲಿನಂತೆ ಹಾಲು ತುಂಬಿದ ಪಾತ್ರೆಯಿದ್ದಿತು. ಕೊಡಗೂಸಿಗೆ ಬಹು ದುಃಖವಾಗಿ.

ವೃಡನಡಿಗೆ ಪೊಡಮಡುಗು ಪಾಲಂ ।
ಕುಡಿಯದಿರ್ದಡೆ ನೋಡಿ ಕಡುಸಿಡಿ ।
ಮಿಡಗೊಳುತ್ತೋರಂತೆ ಚಿಂತಿಸುತಿರ್ದ ಕೊಡಗೂಸು ॥
ಬಡವುಗುವು ನಾನೆಂದು ಕಾಡುವ ।
ವೊಡೆಯು ನಿಮ್ಮುವನೇನನೆಂಬೆನು ।
ಕಡೆಗೆ ಆರೋಗಿಸಿದಡಲ್ಲದೆ ಬಿಡೆನು ನಿವ್ಮಾಣೆ ॥೧೯॥

ಹಾಲನೀಗಳು ಕುಡಿಯದಿರ್ದಡೆ ।
ಕೇಳಿಯುಮ್ಮವರೆನ್ನನಾಗಳೆ ।
ಬೀಳ ಸದೆದಸುವನ್ನ ಕಳೆಯುವರಲ್ಲದವರಿಂದೆ ॥
ಮೇಲದೆಂತುಂ ಸಾವು ತಪ್ಪದು ।
ಶೂಲಿ ಚಿತ್ತೈಸೈಯ ಹಿಂದಕೆ ।
ಕಾಲನಿಕ್ಕುವಳಲ್ಲ ಯಿಲ್ಲಿಯೆ ಸತ್ತು ಸರಿಯುಹೆನು ॥೨೦॥

ಬಸವಪುರಾಣ ಸಂಧಿ ೧೪

ಮೇಲ್ಕಂಡಂತೆ ಬಾಲಕಿಯು ಪ್ರತಿಜ್ಞೆಮಾಡಿ ಶಿವನೇ ನೀನು ಹಾಲು ಕುಡಿಯದಿದ್ದರೆ ಮುಂದಿರುವ ಕಲ್ಲು ಕಂಭಕ್ಕೆ ನನ್ನ ತಲೆಯನ್ನು ಆಹುತಿಯಾಗಿ ಕೊಡುವೆನು. ನಾನೆಂದಿಗೂ ಮಾತಾಪಿತೃಗಳಿಗೆ ಸುಳ್ಳು ಹೇಳತಕ್ಕವಳಲ್ಲ ಎಂದು ಕೊಡಗೂಸು ಮುಂದಿರುವ ಶಿಲಾಸ್ತಂಭದ ಕಡೆಗೆ ಸರಸರನೆ ನಡೆದಳು.

ದಯಾ ಘನನಾದ ಪರಮೇಶ್ವರನು ಇನ್ನು ತಡ ಮಾಡಿದರೆ ಕೆಲಸ ಕೆಡುವುದೆಂದು ಶಿವಲಿಂಗ ಮಧ್ಯದಲ್ಲಿ ನಿಜರೂಪುದೋರಿ ಪಾರ್ವತೀ ಸಹಿತನಾಗಿ ಓಡಿಬಂದು

ಕಂದ॥ ನಂದನೆ ನೊಂದಸಳೆಂದೊ।
ಲ್ದಿಂದು ಧರಂ ಪಿಡಿದು ನೆಗಪಿ ನಿಜಕರದಿನವ॥

ಳ್ತಂದಣ್ಣೆವಾಲನೀಂಟಿದ।
ನಂದಂ ಮಿಗೆ ಭಕ್ತ ವತ್ಸಲಂ ಬಳಿಕಾಗಳ್॥

ವೃಷಭೇಂದ್ರ ವಿಜಯ ಅ. ೯. ಪ. ೮೨.

ಜಗನ್ನಿಯಾಮಕನೂ ಸರ್ವಜ್ಞ ಸರ್ವ ಚೈತನ್ಯ ಸರ್ವೇಶ್ವರನೂ ಆದ ಸರ್ವ ಮಂಗಲಾಧವನ ಆ ಅಸದೃಶ ರೂಪವನ್ನು ನೋಡಿ ಸುಕುಮಾರಿಯಾದ ಕೊಡಗೂಸು ಚಕಿತಳಾದಳು. ಮತ್ತು ಮೃತ್ಯುಂಜಯನನ್ನು ಕುರಿತು

ಎಳನಗೆಯುಣ್ಮೆ ಮುದ್ದು ಮೊಗದೊಳ್ಸುಧೆಯಿಂದಭಿಷೇಕಿಪಂತೆಕಂ।
ಬೆಳಗಡರ್ದೊಪ್ಪಿ ಲಿಂಗ ತನುವಂ ಕೊಡಗೂಸು ಮನೋನುರಾಗಸಂ॥
ಮಿಳಿತ ವಿನೋದದಿಂ ಪಸುಳೆಯಾನೆನುತಂ ಸುಧೆಯೀಂಟಲೊಲ್ಲದುಂ।
ಮುಳಮ ನೊಡರ್ಚಿಕಾಡಿದೆಗಡೆಂದೆನೆ ನಕ್ಕನಹೀಂದ್ರಭೂಷಣಂ॥೮೩॥

ಜನಕಂಬಂದೊಡೆ ಪೇಳ್ವಪೆ।
ನಿನಿತೆಲ್ಲಮನಯ್ಯ ಮರೆಯದಿರ್ಬಳಿಕೆನಗಂ॥
ನಿನಗಂ ಸಂವಾದಮದುಂ
ಟೆನುತಂ ಪೊಡಮಟ್ಟು ನಗುತೆ ಮನೆಗೇಳ್ತಂದಳ್ ॥೮೪॥

ವೃಷಭೇಂದ್ರ ವಿಜಯ ಅ. ೯.

ಕೊಡಗೂಸು ಈ ವಿಧವಾಗಿ ಶಂಕರನನ್ನು ಹಂಗಿಸಿ ಮನೆಗೆ ಹೊರಟು ಹೋದಳು. ಇತ್ತ ಸರ್ವ ಮಂಗಲಾದೇವಿಯು ಶಿವನೇ! ಮುಗ್ಧೆಯಾದ ಬಾಲಕಿಯನ್ನು ಈ ಪರಿಯಾಗಿ ಕಾಡಿಸುವುದು ನ್ಯಾಯವೇ, ಕರುಣಾಮಯನೆಂದೂ, ಭಕ್ತಪ್ರಾಣನೆಂದೂ ನಿನ್ನನ್ನು ವೇದಗಳು ಹೊಗಳುವುದು ಸಟಿಯೇ, ಎಂದು ನಿಷ್ಠುರೋಕ್ತಿಯನ್ನಾಡಲು ಉಮಾಪತಿಯು ನಸುನಗೆಯಿಂದ ದೇವಿಗಿರಿಜೆ ಕೇಳು.

ಬಾಲೆಯನುಣ್ಣುಡಿ ಬಟ್ಟಲ।
ಕಾಲಿಂದಿನಿದಾಗೆ ಕಿಲಿಗೆ ಪಾಲ್ಗುಡಿಯದೆಮುಂ॥
ನಾಲಲನೆಯ ಮುಗ್ಧೋಕ್ತಿಯ।
ನಾಲಿಸಿದೆಂ ಮುದದಿನೆಂದನುಮೆಗೆ ಮಹೇಶಂ॥

ವೃಷಭೇಂದ್ರ ವಿಜಯ ಅ. ೯. ಪ. ೮೫.

ಇತ್ತ ಕೊಡಗೂಸು ಬಾಲೆಯು ವೇಳೆಗೆ ಸರಿಯಾಗಿ ಶಿವಾಲಯಕ್ಕೆ ಕಪಿಲೆಯ ಬಳ್ಳ ಹಾಲನ್ನು ಶುಚಿರ್ಭೂತಳಾಗಿ ತಂದು ಶಿವನ ಮುಂದಿ ಡುತ್ತಲೇ ಶಂಕರನು ಪ್ರತ್ಯಕ್ಷನಾಗಿ ಬಂದು ಹಾಲು ಕುಡಿದು ಆ ಬಾಲಿ ಕೆಯನ್ನು ಮುದ್ದಾಡಿ ಮನೆಗೆ ಕಳುಹುವನು.

ಹೀಗೆ ಏಳೆಂಟು ದಿನಗಳು ಕಳೆದವು. ಪ್ರತಿದಿನವೂ ಕೊಡಗೂಸು ಕ್ರಮ ತಪ್ಪದೆ ಶಿವನಿಗೆ ಹಾಲು ಕುಡಿಯಿಸಿ ಹೋಗುತ್ತಿದ್ದಳು. ಎಂಟ ನೆಯ ದಿನ ತಂದೆತಾಯಿಗಳು ಶ್ರೀಶೈಲ ಯಾತ್ರೆಯನ್ನು ಮುಗಿಸಿಕೊಂಡು ಆ ಕಲ್ಲಿನಾಥ ದೇವಾಲಯದ ಮಾರ್ಗವಾಗಿ ಬರುತ್ತಿದ್ದರು. ದೇವರಿಗೆ ಹಾಲು ಕುಡಿಯಿಸಿ ಬರಿಯ ಬಟ್ಟಲನ್ನು ಹಿಡಿದುಕೊಂಡು ಆನಂದದಿಂದ ಮನೆಗೆ ಹಿಂದಿರುಗಿ ಬರುತ್ತಿದ್ದ ತಮ್ಮ ಮಗಳನ್ನು ಸಂಧಿಸಿದರು. ತಂದೆ ತಾಯಿಗಳು ಮಗಳನ್ನು ನೋಡಿ

ಶಿವದೇವಃ— ತಂಗೀ! ಶಿವಾಲಯಕ್ಕೆ ಹೋಗಿದ್ದೆಯಾ ?

ಕೊಡಗೂಸುಃ— ತಂದೆಯೇ, ಶಿವಾಲಯದಿಂದಲೇ ಬಂದೆನು.

ಶಿವದೇವಃ— ಬಟ್ಟಲು ಬರಿದಾಗಿದೆಯಲ್ಲ ನಿವೇದನೆಯಾದ ಹಾಲೆಲ್ಲಿ?

ಕೊಡಗೂಸುಃ— (ಆಶ್ಚರ್ಯದಿಂದ) ನೀವು ಹೇಳಿ ಹೋಗಿದ್ದಂತೆ ಕಲ್ಲಿನಾಥನಿಗೆ ಪ್ರತಿದಿನವೂ ಕಪಿಲೆಯ ಬಳ್ಳ ಹಾಲನ್ನು ಸಲ್ಲಿಸಿ ಬರು ತ್ತಿರುವೆನು.

ಶಿವದೇವಃ— (ಕೋಪ ಮತ್ತು ಆತುರದಿಂದ) ಸಲ್ಲಿಸುವುದೆಂದ ರೇನು ?

ಕೊಡಗೂಸುಃ— ನಾನು ಶಿವನ ಮುಂದೆ ಹಾಲು ಬಟ್ಟಲಿಟ್ಟ ಕೂಡಲೇ ಶಂಕರನು ಎದ್ದು ಬಂದು ಕುಡಿದು ಹೋಗುವನು ಇದೇ ಸಲ್ಲಿಸುವದು.

ಶಿವದೇವಃ— (ಶಿವದೇವನು ಮಗಳ ಮಾತನ್ನು ಸುಳ್ಳೆಂದು ಭಾವಿಸಿ) ಮಗಳೇ! ನಿಜವನ್ನು ಹೇಳು ? ಇಲ್ಲದಿದ್ದಲ್ಲಿ ನಿನ್ನನ್ನು ಶಿಕ್ಷಿಸುವೆನು. ಹಾಲನ್ನು ಚಲ್ಲಿದೆಯೋ ಅಥವಾ ನೀನೇ ಕುಡಿದೆಯೋ? ನಿನ್ನ ಗೆಳತಿ ಯರಿಗೇನಾದರೂ ಕೊಟ್ಟೆಯೋ ?

ಕೊಡಗೂಸುಃ— ನಾನು ಹಾಲನ್ನು ಅನುಪಯೋಗ ಪಡಿಸಲಿಲ್ಲ. ಕಲ್ಲಿನಾಥನಿಗೆ ಕುಡಿಸಿ ಬಂದೆನು.

ಕಲ್ಯಾಣಿಃ— ಮಗಳೇ ನಿಜವನ್ನು ಹೇಳು.

ಕೊಡಗೂಸುಃ – [ಆಶ್ಚರ್ಯಾತಿಶಯದಿಂದ) ಅಮ್ಮಾ ನಿಜವಾಗಿಯೇ ಹೇಳುವೆನು. ನಾನು ನಿಮ್ಮೊಡನೆ ಎಂದಿಗೂ ಸಟೆಯಾಡುವವಳಲ್ಲ. ಬೇಕಾದರೆ ನಾಳೆ ನೀವೇ ಬಂದು ಸ್ವಾಮಿಯನ್ನು ವಿಚಾರಿಸಬಹುದು.

ಶಿವದೇವನು ಮಗಳ ಮಾತನ್ನು ಕೇಳಿ ಬಹಳವಾಗಿ ಚಿಂತಿಸಿದನು. ಏನು ಶಂಕರನು ಈ ಹುಡುಗಿಗೆ ನಿಜರೂಪುದೋರಿದನೆ? ಇಲ್ಲ! ಇಲ್ಲ! ಈಕೆಯು ಸುಳ್ಳು ಹೇಳುವಳು. ಇವಳ ನಿಜವನ್ನು ನಾಳೆ ಪ್ರತ್ಯಕ್ಷವಾಗಿ ಪರೀಕ್ಷಿಸುವೆನು ಎಂದು ನಿಶ್ಚಯಿಸಿ ಪತ್ನೀಪುತ್ರಿಯರೊಂದಿಗೆ ಮನೆಗೆ ಬಂದನು.

ಶಿವದೇವನಿಗೆ ಬೆಳಗಾಗುವದಾವಾಗ ಎಂದು ಚಿಂತೆ ಹತ್ತಿತು. ಹಾಗೂ ಹೀಗೂ ಆ ದಿನವನ್ನು ಕಳೆದನು. ಮರುದಿನ ಸೂರ್ಯೋದಯವಾಯಿತು. ಶಿವಾಲಯಕ್ಕೆ ಹೋಗುವ ಕಾಲವು ಸಮೀಪಿಸಿತು. ಎಲ್ಲರೂ ಸ್ನಾನ ಮಾಡಿ ಮಡಿಯನ್ನುಟ್ಟು ಕಪಿಲೆಯ ಬಳ್ಳ ಹಾಲನ್ನು ಮಗಳ ಕೈಯಿಂದಲೇ ತೆಗೆಯಿಸಿಕೊಂಡು ದೇವಾಲಯಕ್ಕೆ ಹೊರಟರು.

ಶಿವದೇವನು ಈಗ ಬಾಲಕಿಯ ಮಾತನ್ನು ಪರೀಕ್ಷಿಸುವೆನು. ಶಿವನು ನಿಜರೂಪುದೋರದಿದ್ದರೆ ಕೊಡಗೂಸನ್ನು ಅಲ್ಲಿಯೇ ಶಿರಚ್ಛೇದನ ಮಾಡಿ ಬರುವೆನು. ಶಿವವ್ರತ ಭಂಗ ಮಾಡಿದ ಅನೃತವಾದಿಯಾದ ಮಗಳಿದ್ದರೆ ತಾನೆ ಫಲವೇನು, ಎಂದು ತನ್ನ ಅಂತರಂಗದಲ್ಲಿ ಚಿಂತಿಸಿದನು.

ಕೊಡಗೂಸು ಈ ದಿನ ನಮ್ಮ ತಂದೆತಾಯಿಗಳ ಮುಂದೆ ಶಿವನು ಎದ್ದು ಬಂದು ಹಾಲು ಕುಡಿವನು ಎಂದು ಸಡಗರದಿಂದ ಹೊರಟಳು.

ಕಲ್ಯಾಣಿಯು ಶಿವಶಿವಾ ಮುಂದೇನು ಗತಿ, ಹುಡುಗಿಯು ಸುಳ್ಳು ಹೇಳಿದಳು. ಪ್ರಾಣಕಾಂತನು ಶಿವವ್ರತಭಂಗವನ್ನು ಸಹಿಸುವನಲ್ಲ. ಮುಂದೆ ಏನೋ ಪ್ರಮಾದವಾಗುವಂತಿದೆಯಲ್ಲಾ! ಕಲ್ಲಿನಾಥನೇ ಕಾಪಾಡಬೇಕು ಎಂದು ತರ್ಕಿಸಿದಳು.

ಶ್ರೀ ಕಲ್ಲಿನಾಥನ ದೇವಾಲಯವನ್ನು ಮೂರು ಮಂದಿಯೂ ಸೇರಿದರು. ಕೊಡಗೂಸು ಎಂದಿನಂತೆ ಹಾಲಿನ ಪಾತ್ರೆಯನ್ನು ಕಲ್ಲಿನಾಥ ಸ್ವಾಮಿಯ ಮುಂದಿಟ್ಟು ಕೈಜೋಡಿಸಿ ಎಲೈ ಭಕ್ತಪರಾಧೀನ, ನಿತ್ಯ ನಿರ್ಮಳ, ಸುಗುಣಾಭರಣ, ದಿನಂಪ್ರತಿ ಬಂದು ಹಾಲುಕುಡಿಯುತ್ತಿದ್ದಂತೆ ಈ ದಿನವೂ ಬಂದು ಹಾಲು ಕುಡಿ ಎಂದು ಭಕ್ತಿಭಾವದಿಂದ ಪ್ರಾರ್ಥಿಸಿದಳು.

ಕಂದ॥ ಹರನಾ ಭಕ್ತಿಯ ಮಹಿಮೆಯ।
ಪರಿಯಂ ಧರೆಗರಿಪಲೆಂದು ಪಾಲ್ಕುಡಿಯದೆಸ್ಯೆ॥
ತಿರೆ ಸುತೀ ಸುಗಿಗಳಾಗ।
ಳ್ತರಳೆ ಪಿತಂಗಂಡು ಕಾಯ್ಸಿಸಿಂ ಸುತೆಗೆಂದಂ॥
ವೃ. ವಿ. ಅ. ೯ ಪ. ೯೨

ಪರಮೇಶ್ವರನು ಎದ್ದು ಬಂದು ಹಾಲುಕುಡಿಯದಿದ್ದುದನ್ನು ನೋಡಿ ಕ್ರೋಧಾವಿಷ್ಟನಾದ ಶಿವದೇವನು.

ಕುಡಿಕುಡಿದು ನೀನೆ ಸುಧೆಯಂ।
ಪ್ಪೃಡನೀಂಟುಗು ವೆಂದು ನುಡಿವೆ ಪುಸಿಯಂ ನಿನ್ನಂ॥
ಕಡಿದಿಕ್ಕದೆ ಮಾಣ್ಬನೆ ಕೇಳ್।
ಕಡುಪಾತಕಿಯೆಂಬು ತಂದೆಯುರೆಯಟ್ಟಿಲೊಡು ॥೯೩॥
ವೃ. ವಿ. ಅ. ೯ ಪ.

ಎಂಬುದಾಗಿ ಗರ್ಜಿಸಲು ಭಯಕಂಪಿತೆಯಾದ ಕೊಡಗೂಸು ಪರ ಶಿವನನ್ನು ಕುರಿತು ಪ್ರಾರ್ಥಿಸಲು

ಹಾ ಮಹೇಶ್ವರ ಹಾ ಮದೀಶ್ವರ ನೀನೆ ಸದ್ಗತಿ ಕಾವುದೆಂ।
ದಾಮಹಾ ಭಯಕಂಪಿತಾಂಗಿ ಯೊರಲ್ಚಿ ಬಾಯ್ವಿಡೆ ಬೇಗದಿಂ॥
ಸೋಮ ಶೇಖರನಂಜದಿರ್ಕಸುಜಾತೆಯೆಂದಭಯಂಗುಡು।
ತ್ತಾ ಮನೋಜ್ಞಸುಧಾರಸಂಗುಡಿದಂ ಕೃಪಾನಿಧಿ ಶಂಕರಂ॥೯೪॥
ವೃ. ವಿ. ಅ. ೯ ಪ

ಪರಮೇಶ್ವರನು ಲಿಂಗೋದ್ಭವನಾಗಿ ಬಂದು ಮುಂದಿದ್ದ ಹಾಲನ್ನು ಕುಡಿದನು. ಕಲ್ಯಾಣೀ ಶಿವದೇವರು ಈ ಅದ್ಭುತವನ್ನು ನೋಡಿ ಸ್ತಂಭೀ ಭೂತರಾದರು. ಆಗ ಶಿವನು ಕೊಡಗೂಸಿನ ನಿರ್ಮಲವಾದ ಭಕ್ತಿಯನ್ನೂ ಮಾತಾಪಿತೃಭಕ್ತಿಯನ್ನೂ ಸದಾಚಾರ ಸನ್ಮಾರ್ಗವನ್ನೂ ಹೊಗಳಿ ಇನ್ನಾ ವಳೂ ಕೈಲಾಸದಲ್ಲಿರಲು ತಕ್ಕವಳೆಂದು ನಿಶ್ಚಯಿಸಿ.

ಕಂದ ಆ ಕೊಡಗೂಸಂ ಕರುಣಾ।
ಲೋಕನದಿಂ ನೋಡಿ ತೆಗೆದು ಬಿಗಿಯಪ್ಪುತೆ ಗೌ॥
ರೀಕಾಂತಂ ತನ್ನೊಡ ಲೋ।
ಳ್ಗೊಜ್ಜಿಕೆಯಲೊಳಪುಗಿಸೆ ಪೊಗುವಮಗಳಂ ಜನಕಂ ॥೯೫॥
ಕಂಡೆಲೆಪೋಗದಿರೆನುತಂ।
ಚಂಡಿಕೆ ವಿಡಿದೆಳೆಯೆ ಪೊರಗುಳಿದಿರೆಭೂ॥

ಮಂಡಲ ಮಚ್ಚರಿ ಪಡೆಯಂ ।
ಕೊಂಡಾ ಕೊಡಗೂಸು ಲಿಂಗದೊಳಪೊಕ್ಕಿರ್ದಳ್ ॥೯೬॥
ಅಮರ್ದವಳಮುಗ್ಧ ಭಕ್ತಿಯೊ ।
ಳಮರ್ದಂ ತನಗಿತ್ತ ಮುಗ್ಧ ಭಕ್ತೆಗೆ ಸೊಗಯು ॥
ಪ್ಪಮರ್ದನೊಸೆದಿತ್ತನಗಹರಂ ।
ನಮರ್ಪಣಿಗಳ್ಪೊಗಳೆನಲಿಯೆ ಶರಣಸಮೂಹಂ ॥೯೭॥

ಪರಶಿವಮೂರ್ತಿಯು ಆ ಬಾಲಕಿಯನ್ನು ತನ್ನಲ್ಲಡಗಿಸಿಕೊಂಡನು. ತಂದೆತಾಯಿಗಳು ದುಃಖಾಶ್ಚರ್ಯದಿಂದ ಹಿಂತಿರುಗಿದರು.

ನಿಷ್ಕಾಮ ಭಕ್ತಿಪ್ರಭಾವದಿಂದ ಕೊಡಗೂಸು ಮಹಾ ಮಹಾ ಮುನಿಗಳಿಗೂ ಅಲಭ್ಯವಾದ ಶಿವಸನ್ನಿಧಿಯನ್ನೈದಿದಳು. ಈ ಪ್ರಕಾರವಾಗಿ ಕೊಡಗೂಸು ಭಕ್ತಿಮಾರ್ಗದಿಂದ ಯಾರಾದರೂ ಸುಲಭವಾಗಿ ಶಿವಪದವನ್ನು ಸೇರಬಹುದೆಂಬದನ್ನು ಲೋಕಕ್ಕೆ ಬೋಧಿಸಿ ತನ್ನ ಪವಿತ್ರವಾದ ಚರಿತೆಯನ್ನು ಕೀರ್ತಿಮಯವನ್ನಾಗಿ ಮಾಡಿದಳು.

---

# ಬ್ರಹ್ಮಪಕ್ಷಿ.

೧

ಆದಿಯನಾದಿಯು ಆಚೆಗೆ ಆಚೆಗೆ
ನಾದಬಿಂದು ಕಳೆಯಾಚೆಗೆ ಆಚೆಗೆ
ನೋಟಕು ನಿಲುಕದ ನುಡಿಗೂ ಸಿಲುಕದ
ಮಾಟದ ಆಚೆಯ ಮಾಟಕು ಉಲುಕದ
“ಏನೇನಿಲ್ಲಂ” ಎಂಬ ಆ ಪಕ್ಕಿ
ತಾನೇ ತಾನಾಗಿದ್ದಿತು ಉಕ್ಕಿ!

೨

ಬೊಮ್ಮಕ್ಕಿಯದು ಎಂತೋ ಏನೋ
ಸುಮ್ಮನಿರದೆ ಸಲ್ಲೀಲೆಗೆ ಏನೋ
ಹೊಟ್ಟೆವಂದು ತಾ ತನ್ನ ಬಗೆಯೊಳೇ
ಇಟ್ಟಿತು ಅನೇಕ ತತ್ತಿತತ್ತಿಗಳ!
ಒಂದೊಂದರೊಳೇ ಅಗಣಿತ ತತ್ತಿ!
ಕುಂದದೊಳಗಿಹುದು ಜೀವದ ಜ್ಯೋತಿ!

೩

ಗಣನೆಗೆ ಮೀರಿಹ ತತ್ತಿಗಳಿಡುತಲಿ
ಅನಿಶವು ಅವುಗಳ ಮೇಲಿರುತಲಿ
ಮುಗಿಯದ ಪ್ರೇಮದ ಕಾವನು ಕೊಡುತಲಿ
ಒಗೆಯಿಸುತಿದೆ ತನ್ನೊಳಿಹ ಮರಿಗಳ!
ಎರಕದ ಕಾವಿಗೆ ಜೀವವು ಹಿಗ್ಗಿ
ಹೊರಬರಲೆಳಪುದು ಮೇಲಕೆ ನುಗ್ಗಿ!

೪

ತತ್ತಿಯು ಒಳಗಣ ಎನಿತೊ ತತ್ತಿಗಳು
ಮುತ್ತಿದ ಭಾರದ ಭರದ ಕುತ್ತಿನಲಿ
ಕೆಳಕೆಳಗಿಳಿಯಲು ಪ್ರೇಮದ ಬಿಸುಪನು
ತಲುಪಲವಕೆ ತಡವಹುದೆನಿತೋ ದಿನ!
ಕುತ್ತನು ಮೆಟ್ಟುತ ಮೇಲಕ್ಕೆದ್ದ
ತತ್ತಿಗೆ ಕಾವದು ಸಿಗುವದು ಸಿದ್ಧ!

೫

ಕಾವಿನ ಬೆಳಕಲಿ ಒಳಗಣ ಜೀವವು
ಆ ಪಕ್ಕಿಯು ಬೆಳಗುವ ಚಿದ್ರೂಪವ
ದಿಟ್ಟಿಸಿ ನಲಿಯುತಲುಲಿಯಲು ಹಾರಲು
ಥಟ್ಟನೆ ಹೊರಬರುವುದದ ತಾ ಸೇರಲು!
ಈ ಪರಿ ತತ್ತಿಗಳೆಲ್ಲವನೊಡೆದು
ಆ ಪಕ್ಕಿಯು ಜೀವವು ಸೇರುವದು!

೬

ಬೊಮ್ಮಪಕ್ಕಿಯುದು ಅನಂತಕಾಲದಿ
ಬೊಮ್ಮಮರಿಗಳನು ಪುಟ್ಟಿಸೆ ಚಿತ್ತದಿ
ಮೆರೆಯುವ ಬ್ರಹ್ಮಾಂಡವ ತಾನಿಕ್ಕುತ
ಸುರಿಪುದು ಕಾವಿನ ಧಾರೆಯು ಸಂತತ
ಬೊಮ್ಮನ ಮರಿಯಾಗುವ ಜೀವ
ನೆಮ್ಮಲು ಬೇಕಾ ಬಲ್ಗಾವ!

---

# ಸರ್ವಜ್ಞ ಕವಿ.

(ಲೇಖಕ:— ಚಿಚ್ಚಕೋರ.)

---

೧. ಮೊದಲು ಮಾತು:— ಹಿಂದಿನ ತಳಹದಿಯ ಮೇಲೆ ಇಂದಿನ ಸಾಹಿತ್ಯದಿಂದ ಮುಂದಿನ ಮಂದಿರವನ್ನೇರಿಸಬೇಕೆಂದು ಶ್ರೀ ಅರವಿಂದರು ಉಸುರಿರುವರು. ಕನ್ನಡ ನಾಡದೇವಿಗೆ ಭವ್ಯಭುವನವನ್ನು ಕಟ್ಟಲೆಳಸುವ ನಾವು ಈ ಮಹಾತತ್ವವನ್ನು ಎಂದಿಗೂ ಮರೆಯಕೂಡದು. ಗತಕಾಲದ ವಿವಿಧ ವಿಚಾರಗಳೇ ನಮ್ಮ ಪೂಜ್ಯ ಪೂರ್ವಿಕರು ನಮಗಾಗಿ ಕಾದಿಟ್ಟ ಬೆಲೆಯುಳ್ಳ ಸೊತ್ತು. ಅದನ್ನು ಉಪಯೋಗಿಸಿಯೇ ನಾವು ನಮ್ಮ ಏಳ್ಗೆಯನ್ನು ಪಡೆಯಬೇಕು. ಉನ್ನತಿಯ ದಾರಿಯನ್ನು ತುಳಿಯುವ ಪಥಿಕನು ಈ ಬುತ್ತಿಯನ್ನು ಉಪೇಕ್ಷಿಸಿ ನಡೆಯುವಂತಿಲ್ಲ. ತಮ್ಮ ಭೂತಕಾಲವನ್ನು ಅಲ್ಲಗಳೆದು ಘನತೆಗೇರಿದ ರಾಷ್ಟ್ರಗಳ ಉದಾಹರಣೆಗಳನ್ನು ಇತಿಹಾಸ ದರ್ಶನವು ತೋರಿಸುವದಿಲ್ಲ. ಆದುದರಿಂದ ಆತ್ಮೋದ್ಧಾರಕ್ಕಾಗಿ ಕಟಿಬದ್ಧರಾದ ಕನ್ನಡಿಗರು ತಮ್ಮ ಸರ್ವಜ್ಞನ ದಿವ್ಯ ಸಂದೇಶವನ್ನು ಕೇಳುವುದು ಅವಶ್ಯಕ.

೨. ಇದು ಕ್ರಾಂತಿಕಾಲ:— ಮೇಲಾಗಿ ನಾವು ಇರುವುದು ಕ್ರಾಂತಿ ಕಾಲದಲ್ಲಿ. ಜಗತ್ತಿನಲ್ಲಿ ಎಲ್ಲೆಲ್ಲಿಯೂ ಪ್ರಚಂಡವಾದ ವಿಪ್ಲವಗಳು ನಡೆದಿವೆ. ಇವುಗಳ ಹೊಡತಕ್ಕೆ ಈಡಾಗದ ಕ್ಷೇತ್ರವು ಒಂದೂ ಇಲ್ಲ. ಭೂಗರ್ಭದಂತೆ ಸಮಾಜದ ಒಡಲು ಕುದಿಯುತ್ತಲಿದೆ. ಹೊಸ ವಿಚಾರಗಳ ಹೊಡತದಿಂದ ಅದು ಅದರತೊಡಗಿದೆ. ಅಲ್ಲಲ್ಲಿ ಜ್ವಾಲಾಮುಖಿಗಳು ಕೆಂಗಂಡಗಳನ್ನು ಕಾರಿ ಹಳೇ ಪದ್ಧತಿಯನ್ನು ಹಾಳು ಮಾಡಿವೆ. ಹೊಸ ಸೃಷ್ಟಿಗೆ ಅನುವನ್ನುಂಟುಮಾಡಿದೆ.

ಇದು ಜನತೆಯ ಯುಗವು! ಈ ವರೆಗೆ ಮನಬಂದಂತೆ ಕುಣಿದ ಮಂಗರಸರ ಮುಕುಟಗಳು ಜನಸಾಮಾನ್ಯರ ಪ್ರತಿನಿಧಿಗಳನ್ನು ಅಲಂಕರಿಸಿವೆ. ಆಳುಗಳು ಅರಸರಾಗಿ ಅರಸರು ಆಳುಗಳ ಹಾಳು ಬಾಳಿನಲ್ಲಿ ಬಳಲುತ್ತಲಿದ್ದಾರೆ. ಗುಡಿಸಲಿಗೆ ಗೌರವವು ಬಂದು ಅರಮನೆಗಳು ಆಸ್ಪತ್ರೆಗಳಾಗಿವೆ. ಧನಿಕರ ಮದವು ಮಾಯವಾಗುತ್ತಲಿದೆ. ಶಕ್ತಿಯ ಸಂಕ್ರ

ಮಾಣವಾಗಿ ಬಲ್ಲಿದರ ಸ್ಥಾನವನ್ನು ಬಡವರು ಆಕ್ರಮಿಸಿದ್ದಾರೆ. 'ಧನಬಲ'ವು ವೈಭವದಿಂದ ಬೆಳಗಿದ 'ಸಂಘೇ ಶಕ್ತಿಃ ಕಲೇ ಯುಗೇ' ಎಂಬ ವಚನವು ಸಾರ್ಥವಾಗುತ್ತಿದೆ. ಆದ್ದರಿಂದಲೇ ಇದಕ್ಕೆ 'ಜನಯುಗ' ವೆಂಬ ಅಭಿಧಾನವು. 'ಧನಯುಗ' ದ ಸೂರ್ಯನು ಮುಳುಗಿ 'ಜನಯುಗ' ದ ಚಾರುಚಂದ್ರಮನು ಮೂಡಣದಲ್ಲಿ ವೈದಾಳುತ್ತಿರುವನು. ಧನಿಕರ ಕೈಬಿಟ್ಟ ಅಧಿಕಾರಸೂತ್ರಗಳು ಜನಸಾಮಾನ್ಯರನ್ನು ಸೇರಿದ ಮೂಲಕ ಅವರಲ್ಲಿ ಹೊಸ ಹುರುಪು ಹೊರೆಯುತೊಡಗಿದೆ. ನವಯುಗದ ನವ ನಾಗರಿಕತೆಯನ್ನು ನಿರ್ಮಿಸಹತ್ತಿದ್ದಾರೆ.

ಜಗತ್ತಿನಲ್ಲಿ ನಡೆದ ವಿಪ್ಲವಗಳ ಮಾರ್ದನಿಯು ನಮ್ಮ ಭರತಖಂಡದಲ್ಲಿಯೂ ಕೇಳಬರುತ್ತಿದೆ. ಈಗ ಭರತಖಂಡಕ್ಕೂ ಒಂದು ಪರಿವರ್ತನೆಯ ಕಾಲ ಒದಗಿದೆ. ಮಹಾ ವ್ಯಕ್ತಿಗಳು ಮಹಾ ಶಕ್ತಿವಾಹಿನಿಗಳನ್ನು ದೇಶದ ಮೇಲೆ ಹರಿಯಲು ಬಿಟ್ಟಿದ್ದಾರೆ. ಅದೇನು ಸಾಮಾನ್ಯವಾದ ಪ್ರವಾಹವಲ್ಲ; ಪ್ರಚಂಡ ಪ್ರವಾಹ ಆ ಬಲ್ಮೆಯ ಹೊನಲು ದೇಶದ ಮೂಲೆ ಮೂಲೆಗಳಲ್ಲೂ ನುಗ್ಗಿ ಜಡಜೀವನವನ್ನು ಕೊಚ್ಚುತ್ತಿದೆ. ಅದರ ವೈದ್ಯುತ ಸ್ಪರ್ಶದಿಂದ ನಿರ್ಜೀವವಾಗಿದ್ದ ಅಸ್ಥಿಪಂಜರಗಳೂ ಕೂಡ ಸಚೇತನವಾಗಿ ಕಾರ್ಯೋನ್ಮುಖವಾಗಲಾರಂಭಿಸಿವೆ. ಮಲಗಿದ್ದ ನಾಡು ಎಚ್ಚತ್ತಿದೆ; ಕುರಿಗಳಂತೆ ಅರಚುತ್ತಿದ್ದವರು ಸಿಂಹಗಳಂತೆ ಗರ್ಜಿಸುತ್ತಿದ್ದಾರೆ. ಬೀಸುವ ಬಿರುಗಾಳಿಯು ಬೂದಿಮುಚ್ಚಿದ ಕೆಂಡಗಳನ್ನು ಊದಿ ಊದಿ ನುಗ್ಗುತ್ತಿದೆ! ಇದ್ದಲಿಯಂತಿದ್ದವರು ಈಗ ಕೆಂಗೆಂಡಗಳಂತೆ ದೇದೀಪ್ಯಮಾನವಾಗಿದ್ದಾರೆ; ಮೂಕರಾಗಿದ್ದವರು ವಾಗ್ಮಿಗಳಾಗಿದ್ದಾರೆ; ಕುರುಡರಿಗೆ ಕಣ್ಣು ಬಂದಿದೆ; ದುರ್ಬಲರಂತಿದ್ದವರಿಗೆ ಭೀಮಬಲ ಬಂದಿದೆ; ಕ್ಲೈಬ್ಯವು ಮಾಯವಾಗಿ ಎದೆಯಲ್ಲಿ ಕೆಚ್ಚು ಉದಿಸಿದೆ; ಒಗೆಯಲ್ಲಿ ನೆಚ್ಚು ಮೂಡಿದೆ.

ಇದಕ್ಕೆ ಕನ್ನಡನಾಡೇ ಅಪವಾದವಾಗುವದೆಂತು? ಅದೂ ಇದೀಗ ಕಣ್ಣು ತೆರೆಯುತ್ತಲಿದೆ. ಆದರೆ ಎಚ್ಚತ್ತ ತರುಣರು ಒಂದು ಭೀಷಣವಾದ ನೋಟವನ್ನು ಕಾಣುತ್ತಾರೆ. ಕನ್ನಡನಾಡು ತುಂಡುತುಂಡಾಗಿದೆ. ಮತಪಂಥಗಳ ತಿಕ್ಕಾಟದಿಂದುಂಟಾದ ಬೇಗೆಯು ಜನತೆಯನ್ನು ಸುಡುತ್ತಲಿದೆ. ಈ ಕಲಹಾಗ್ನಿಯಲ್ಲಿ ಬೆಂದು ಬೆಂಡಾದ ಕನ್ನಡಿಗರು ತಮ್ಮ ಉಜ್ವಲವಾದ ಇತಿಹಾಸವನ್ನು ಮರೆತು ಎಲ್ಲ ವಿಧದಿಂದಲೂ ದಾಸಾ

ನುದಾಸರಾಗಿದ್ದಾರೆ. ಸ್ವತಂತ್ರವಾಗಿ ವಿಚಾರಮಾಡುವ ಸಾಮರ್ಥ್ಯವನ್ನೂ ಕೂಡ ಕಳೆದುಕೊಂಡು ಅವರು ರೂಢಿಮೂಢರಾಗಿದ್ದಾರೆ. ಈ ಭಯಾನಕ ದೃಶ್ಯದಿಂದ ಬೆಚ್ಚಿ ಬೆರಗಾದ ತರುಣರಲ್ಲಿ ಬಂಧನದ ಜುಗುಪ್ಸೆ ಉಂಟಾಗಿದೆ. ದಾಸ್ಯದ ದಾರುಣ ಸಂಕೋಲೆಗಳನ್ನು ಒಮ್ಮೆಲೇ ಕಡಿದೊಗೆದು ಸ್ವಾತಂತ್ರ್ಯದ ಸ್ವರ್ಗೀಯ ಗಾಳಿಯನ್ನುಸುರಲು ಅವರು ಹಾತೊರೆಯುತ್ತಿರುವರು. ಹಲವೆಡೆಯಲ್ಲಿ ಯೋಗ್ಯವಾದ ಮೇರೆಯನ್ನು ಮೀರಿದ ಮೂಲಕ ಈ ಸ್ವಾತಂತ್ರ್ಯ ಪ್ರೀತಿಯು ಸ್ವೈರವೃತ್ತಿಯನ್ನು ತಾಳುವ ಸಂಭವವಿದೆ. ಇತ್ತೀಚೆಗೆ ಪ್ರಾಶಸ್ತ್ಯವನ್ನು ಪಡೆದ ಪ್ರಕೃತಿ ಜೀವನವು ಪಶುಜೀವನದ ಅಂಧಾನುಕರಣವಾಗಿದೆ. ಈ ಮೇರೆಗೆ ತರುಣರ ಉತ್ಸಾಹವು ಅಡ್ಡದಾರಿಯನ್ನು ಹಿಡಿಯುವ ಅಂಜಿಕೆಯು ಬಹಳವಿದ್ದದರಿಂದ ಈಗಾಗಲೆ ಅದನ್ನು ತಡೆಯಲು ಬೇಕು. ಸಂಪೂರ್ಣವಾದ ಸ್ವಾತಂತ್ರ್ಯದ ಆಸ್ವಾದವನ್ನು ತುಂಬಾ ಸವಿದ ನಮ್ಮ ಪೂಜ್ಯ ಸತ್ಪುರುಷರ ಸಂದೇಶವು ತರುಣರನ್ನು ಶೀಘ್ರವೇ ಮುಟ್ಟುವಂತೆ ಮಾಡುವದೇ ಅದಕ್ಕೆ ತಕ್ಕ ಉಪಾಯ. ಹಿಂದಿನ ಹಿರಿಯರು ಹಿಡಿದ ಸ್ವಾತಂತ್ರ್ಯದ ದಾರಿಯು ಮುಕ್ತಿಪಥವು. ಅವರಿಗೆ ಇಹಪರಗಳೆರಡನ್ನೂ ಸಾಧಿಸಿಕೊಟ್ಟಿತು. ಅವರ ಮೇಲ್ಪಂಕ್ತಿಯು ಇವರಿಗೂ ಹಿತಕರವಾಗಲಾರದೇ ?

೨. ಸರ್ವಜ್ಞನು ಕ್ರಾಂತಿಕರನು:— ಜಗತ್ತಿನಲ್ಲಿಯ ಸತ್ಪುರುಷರೆಲ್ಲರೂ ಒಂದು ಬಗೆಯ ಕ್ರಾಂತಿಕರರೇ! ತಮ್ಮ ಮನಸ್ಸನ್ನು ಹಾಳು ಮಾಡಿ ಅದರಲ್ಲವರು ಆನಂದದ ಅಲರುಗಳನ್ನು ನೆಟ್ಟವರು. ನಿರಂತರವಾಗಿ ಕಂಪನ್ನು ಬೀರುವ ಆ ಬಾಡದ ಹೂಗಳ ಪರಿಮಳವು ಅನ್ಯರ ಮನಸ್ಸಿನಲ್ಲಿಯೂ ಅದೇ ಮಾದರಿಯ ವಿಪ್ಲವನ್ನೆಬ್ಬಿಸಿ ಅವರಿಗೂ ಶಾಶ್ವತವಾದ ಸೌಖ್ಯವನ್ನು ಒದಗಿಸಿಕೊಟ್ಟಿರುವುದು. ಈ ದೃಷ್ಟಿಯಿಂದ ಅವರೆಲ್ಲರೂ ಒಂದೇ ಬಳಗದವರು. ಆದರೂ ವ್ಯಕ್ತಿತ್ವವೆಂಬುದೂ ಅವರನ್ನು ಬಿಟ್ಟಿದ್ದಲ್ಲ. ಅವರ ಉಪದೇಶದ ಮಾದರಿಯು ಅವರವರ ವೈಶಿಷ್ಟ್ಯವನ್ನವಲಂಬಿಸಿದೆ. ಹಲವರ ಉಪದೇಶಪದ್ಧತಿಯು ಸೌಮ್ಯಸ್ವರೂಪದ್ದಿದ್ದರೆ ಹಲವರದು ಜ್ವಾಲಾಮುಖಿಯನ್ನೆಯೆ ಹೋಲುತ್ತಿದೆ. ನಮ್ಮ ಸರ್ವಜ್ಞರು ಎರಡನೆಯ ತರಗತಿಗೆ ಸೇರಿದವನು. ಅವನು ಹುಟ್ಟು ಸ್ವತಂತ್ರನು; ಯಾವ ಬಗೆಯ ಕಟ್ಟಿಗೂ ಒಳಗಾಗದವನು. ಇತಿಹಾಸವು ಅವನ ಕಾರ್ಯದ ವಿಷಯವಾಗಿ ಮೌನವನ್ನು ತಾಳಿದರೂ ಅವನ ವೀರ್ಯವ

ತ್ಯಾದ ವಚನಗಳು ಅವನ ಕೆಲಸದ ಮಹತ್ವವನ್ನು ಸಾರಿಹೇಳುತ್ತಿವೆ. ಸರ್ವಜ್ಞನು ಪ್ರಕೃತಿಮಾತೆಯ ಚೊಚ್ಚಲುಮಗ. ಆಕೆಯ ಮಡಲಲ್ಲಿ ಮನಬಂದಂತೆ ನಲಿದಾಡಿ ಆಕೆಯಿಂದಲೇ ಬುದ್ಧಿಯನ್ನು ಕಲಿತವನು ನಾಡಿನಲ್ಲೆಲ್ಲ ಅಲೆದಾಡಿ ದೊರಕಿಸಿದ ಅನುಭವವೇ ಆತನ ಜಾಣ್ಮೆಯ ಅಡಿಗಲ್ಲು. ಯಾವಬಗೆಯ ದಾಕ್ಷಿಣ್ಯವನ್ನು ಇಡದೆ ಸರ್ವಜ್ಞನು ಕಂಡಂತೆಯೆ ಆಡಿದವನು. ಭೂಮಂಡಲವು ಮುನಿದು ಕೆಂಡದಂತಾದರೂ ಅದರ ಪರಿವೆ ಅವನಿಗಿಲ್ಲ. ಸರ್ವಜ್ಞನು ಮಾಡಿದಂತೆ ಆಡಿದವನು; ನುಡಿದಂತೆ ನಡೆದವನು. ಖಂಡತುಂಡಾದ ಅವನ ನುಡಿಯು ಸಿಡಿಲಿನಂತೆ ಜನರನ್ನು ಹೊಡೆದು ಅವರಲ್ಲಿ ಅಭೂತ ಪೂರ್ವವಾದ ಕ್ರಾಂತಿಯನ್ನುಂಟು ಮಾಡುತ್ತಿರಲಿಕ್ಕೆ ಸಾಕು. ಸರ್ವಜ್ಞನು ಕನ್ನಡ ನಾಡಿನ ಕಡುಗೊಡಲಿ! ಈತನ ಏಟಿನಿಂದ ಮುಳ್ಳುಮರಗಳೆಷ್ಟೋ ಮಣ್ಣುಪಾಲಾಗಿ ಸಮಾಜಕ್ಷೇತ್ರವು ನಿಷ್ಕಂಟಕವಾಯಿತು. ಸರ್ವಜ್ಞನು ಸ್ವಾತಂತ್ರ್ಯಪ್ರಿಯನಿದ್ದರೂ ಸ್ವೈರಾಚಾರಿಯಲ್ಲ; ಕ್ರಾಂತಿಕರನಿದ್ದರೂ ಶಾಂತಿಯನ್ನು ತೊರೆದವನಲ್ಲ. ಇವನು ಮತಪಂಥಗಳ ಗಲಾಟೆಯಲ್ಲಿ ವಿಶೇಷವಾಗಿ ಸಿಲುಕಿದವನಲ್ಲ ಸರ್ವಜ್ಞನು ಜಾತಿಯಿಂದ ವೀರಶೈವನಿದ್ದರೂ ಅವನು ಸರ್ವಸಮ್ಮತವಾದ ಸನಾತನ ತತ್ವಗಳನ್ನೆಯೆ ಹೆಚ್ಚಾಗಿ ಹೇಳಿರುವನು. ಮೇಲಾಗಿ ಸರ್ವಜ್ಞನು ಜನಸಾಮಾನ್ಯರ ಮುಂದಾಳು; ಅವರಿಗಾಗಿ ಅವತರಿಸಿದವನು. ಜನತೆಯನ್ನುದ್ಧರಿಸಲೋಸುಗ ತನ್ನ ಕಿರಿಗನ್ನಡ ನುಡಿಯನ್ನೂ ಅನುಭವಜ್ಞಾನವನ್ನೂ ಧಾರೆಯೆರೆದವನು ಒಂದೇ ಸ್ಥಳದಲ್ಲಿ ಬಹಳ ದಿವಸ ನಿಲ್ಲದೆ ಅಖಂಡವಾಗಿ ಎಲ್ಲೆಡೆಯಲ್ಲಿ ಸಂಚರಿಸಿ ಮಲಗಿದ ಜನರನ್ನು ಬಡದೆಬ್ಬಿಸಿದ ಮಹಾತ್ಮನಿವನು. ಆದ್ದರಿಂದ 'ಜನಯುಗ' ಕ್ಕೆ ತಕ್ಕವನಾದ ಸರ್ವಜ್ಞಮೂರ್ತಿಯ ಸಂದೇಶದ ಮಹತ್ವವು ಈ ಕಾಲದಲ್ಲಿ ಅಷ್ಟಿಷ್ಟೆಂದು ಹೇಳಲಾಸಲ್ಲ! ಅವನ ಹುರಿಗೊಳಿಸುವ ಉಪದೇಶದ ಬೆಳಕಿನಲ್ಲಿ ನಮ್ಮ ತರುಣರು ತಮ್ಮ ಮುಂದಿನ ಏಳ್ಗೆಯ ದಾರಿಯನ್ನು ಕಾಣಲೆಂದೇ ಈ ಸಂದೇಶವನ್ನು ಸಾರಿದುದು!

೪. ಗ್ರಂಥದ ರಚನೆ:— ಸರ್ವಜ್ಞನು ಗ್ರಂಥವೊಂದನ್ನು ಬರೆದು ತನ್ನ ತತ್ವಗಳನ್ನು ಜನರಲ್ಲಿ ಬೀರಲಿಲ್ಲ. ನಿರಂತರ ಸಂಚಾರದಲ್ಲಿ ಕಾಲಕಾಲಕ್ಕೆ ಒದಗಿದ ಸಂದರ್ಭಗಳು ಅವನ ಅದ್ಭುತವಾದ ಪ್ರತಿಭೆಯನ್ನು ಇರಿದು ಕಾವ್ಯದ ಚಿಕ್ಕ ಚಿಕ್ಕ ಸೆಲೆಗಳನ್ನು ಹುಟ್ಟಿಸಿದವು. ನಿರ್ಮಲ

ವಾದ ನೀರಿನಿಂದ ತುಂಬಿದ ಈ ಸಣ್ಣಪುಟ್ಟ ವಾಹಿನಿಗಳು ಸ್ವತಂತ್ರ ವಾಗಿ ಹರಿದು ಪಥಿಕರ ಪಿಪಾಸೆಯನ್ನು ಸಂತೈಸುತ್ತವೆ. ಆದರೆ ಇವು ಗಳ ಹುಟ್ಟು ಹುರುಳುಗಳು ಒಂದೇ ಇದ್ದ ಮೂಲಕ ಇವುಗಳಲ್ಲಿ ಉಪ ದೇಶದ ಒಂದೇ ಸೂತ್ರವನ್ನು ಕಾಣಬಹುದು. ವಿವಿಧ ಕಾಲಕ್ಕೆ ವಿವಿಧ ಸಂದರ್ಭಗಳಲ್ಲಿ ಸ್ಫುರಿಸಿದ ಪದ್ಯಗಳಲ್ಲಿಯೂ ಒಂದೇ ಸಾಧನ ಸೋಪಾ ನವನ್ನು ಕಂಡುಹಿಡಿಯಬಹುದು. ನನ್ನ ಈ ಗ್ರಂಥದಲ್ಲಿ ಈ ಬಗೆಯ ಯತ್ನವು ಮಾಡಲಾಗಿದೆ. ಪರಿವಿಡಿಯನ್ನು ಕಂಡಕೂಡಲೇ ರಚನೆಯ ಕ್ರಮವು ತಾನಾಗಿಯೇ ಗೊತ್ತಾಗುವದು. ಇದರಲ್ಲುಪಯೋಗಿಸಿದುದು ವೇದಾಂತದ ಪರಿಭಾಷೆ. ವೀರಶೈವರ ಷಟ್ಸ್ಥಲಗಳು ವೇದಾಂತಿಗಳ ಮೂರು ಸ್ಥಳದಲ್ಲಿ ಅಡಕವಾಗಿವೆ ಭವಿಯೇ ಬದ್ಧನು ಭಕ್ತ ಮಹೇ ಶ್ವರ ಮುಮುಕ್ಷುಗಳು; ಪ್ರಸಾದಿ ಪ್ರಾಣಲಿಂಗಿಗಳಿಗೆ ಸಾಧಕರೆಂಬ ಹೆಸರು. ಮತ್ತು ಶರಣ ಐಕ್ಯರಿಗೆ ವೇದಾಂತದಲ್ಲಿ ಸಿದ್ಧರೆಂದು ಕರೆಯುವದುಂಟು. ಗ್ರಂಥದ ಉಪಯೋಗವು ಲಿಂಗವಂತರಲ್ಲದ ಜನರಿಗೂ ಆಗಬೇಕೆಂಬ ಉದ್ದೇಶದಿಂ ಈ ತರಹದ ರಚನೆಯನ್ನ ಮಾಡಲಾಗಿದೆ. ಸರ್ವಜ್ಞನು ನುಡಿದುದು ಸರ್ವರಿಗಾಗಿಯಲ್ಲವೇ ?

೫ ಓದುಗರಲ್ಲಿ ಬಿನ್ನಹಃ— ಸರ್ವಜ್ಞನ ಪದ್ಯಗಳಲ್ಲಿ ಶೈವಪರಿಭಾ ಷೆಯಿದೆ. ಶಿವ-ಲಿಂಗಗಳೆಂದರೆ ದೇವ-ಈಶ್ವರನೆಂಬ ಭಾವವನ್ನಿಟ್ಟು ಓದಿ ದರೆ ಅನ್ಯ ಮತಸ್ಥರಿಗೂ ಸರ್ವಜ್ಞನು ಪ್ರಿಯನಾಗದಿರನು. ಮೇಲಾಗಿ ಮತಪಂಥಗಳ ಕಟ್ಟುಗಳನ್ನು ಸಡಲಿಸಿ ಅವುಗಳಲ್ಲಿ ಅನಿಷ್ಟವಾದವುಗಳನ್ನು ಬೀಸಾಟಿ ಸನಾತನ ಸತ್ಯವನ್ನೆಯೆ ಪೂಜಿಸುವ ಕಾಲವಿದು. ಇಂಥ ಸಮಯದಲ್ಲಿ ನಮ್ಮ ಪೂರ್ವಗ್ರಹಗಳನ್ನು ತೊರೆದು ಅರಿವಿನ ಬೆಳಕಿನಿಂದ ನಮ್ಮ ಎದೆಯಲ್ಲಿಯ ಕಗ್ಗತ್ತಲೆಯನ್ನು ದೂಡುವಾ. ಬರೀ ಶಬ್ದಕ್ಕಾಗಿ ಹೆಣಗಾಡದೆ ಅರ್ಥದ ಮಾಧುರ್ಯವನ್ನು ಸವಿಯುವಾ !! By the fruits we shall know them, not by the roots. 'ಸರ್ವಜ್ಞನ ಸಂದೇಶ' ವನ್ನು ಸಾಧ್ಯವಿದ್ದ ಮಟ್ಟಿಗೆ ಆತನ ಮಾತಿನಲ್ಲಿಯೇ ಸಾರಲು ಯತ್ನಿಸಲಾಗಿದೆ. ಅದರ ಬೆಲೆಯನ್ನು ಕಟ್ಟುವದು ಫಲವನ್ನು ಕಂಡು ಮೂಲವನ್ನಲ್ಲ. ಇದೇ ಓದುಗರಲ್ಲಿ ನನ್ನ ಕೊನೆಯ ಬಿನ್ನಹ!

## ಚರಿತ್ರ ಪರಿಚಯ.

೧ ಹಿಂದಿನಿಂದ ಮುಂದೆ:— ನದಿಯ ಮೂಲವನ್ನೂ ಋಷಿಯ ಕುಲವನ್ನೂ ಕಾಣಬಾರದೆಂಬ ಗಾದೆಯು ಎಲ್ಲರಿಗೂ ಗೊತ್ತಿದ್ದರೂ ಅವುಗಳನ್ನು ಕಾಣುವ ಕುತೂಹಲವೇನೂ ಜನತೆಯಲ್ಲಿ ಕಡಿಮೆಯಾಗಿಲ್ಲ. ಹೊಸ ಪುರುಷರು ಮುಂದೆ ಬಂದಾಗ ಅವರ ಇತಿಹಾಸಪರಂಪರೆಯನ್ನು ಅರಿತುಕೊಳ್ಳಲು ಜನರು ಮೊದಲುಮಾಡುವರು. ಅನಂತರವೇ ಅವರು ಹೇಳಿದ್ದನ್ನು ಕೇಳುವರು. ಜನರಲ್ಲಿಯ ಈ ಸಹಜವಾದ ಜಿಜ್ಞಾಸೆಯನ್ನು ಮೂಲೆಗೊತ್ತಿ ಮುಂದುವರಿಯುವದು ಅನುಚಿತವೆಂದು ತಿಳಿದು ಸರ್ವಜ್ಞನ ಚರಿತ್ರಪರಿಚಯವನ್ನು ಸ್ವಲ್ಪದರಲ್ಲಿ ಮಾಡಿಕೊಡಲು ಬಯಸಿದುದು.

೨ ಸರ್ವಜ್ಞನಕಾಲ:— ಸರ್ವಜ್ಞನಿದ್ದ ಕಾಲದ ವಿಷಯದಲ್ಲಿ ಪಂಡಿತರಲ್ಲಿ ಇನ್ನೂ ಐಕಮತ್ಯವಾಗಿಲ್ಲ. ಕಿಟಿಲ್ ಸಾಹೇಬರು ಅದು ೧೫ ನೆಯ ಶತಮಾನವೆಂದೂ ಶ್ರೀಮಾನ್ ಆರ್. ನರಸಿಂಹಾಚಾರ್ಯರವರು ೧೭ನೆಯ ಶತಮಾನವೆಂದೂ ಅಭಿಪ್ರಾಯಪಡುತ್ತಾರೆ. ಶ್ರೀಮಾನ್ ಉತ್ತಂಗಿಯವರ ಮತದಂತೆ ಸರ್ವಜ್ಞನು ೧೬ ನೆಯ ಶತಮಾನದವನು. ಅವರು ಕೊಟ್ಟ ಪ್ರಮಾಣಗಳನ್ನು ವಿಮರ್ಶಿಸಲು ೧೬ ನೆಯ ಶತಮಾನವೇ ಸರ್ವಜ್ಞನಿದ್ದ ಕಾಲವಾಗಿರಬೇಕೆಂದು ತೋರುತ್ತಿದೆ. ನಮ್ಮ ಪೂರ್ವೇತಿಹಾಸವು ಹೇಳುಹೆಸರಿಲ್ಲದಂತಾದ ಮೂಲಕ ಹೆಚ್ಚಿನ ಆಧಾರಗಳು ದೊರಕುವಂತಿಲ್ಲ. ಅಂತೂ ವಿಜಯನಗರ ಸಾಮ್ರಾಜ್ಯದ ಕೊನೆಯ ಭಾಗದಲ್ಲಿ ಸರ್ವಜ್ಞನು ಇದ್ದಿರಬೇಕೆಂದು ಊಹಿಸಲು ಅಡ್ಡಿಯಿಲ್ಲ.

೩ ಸರ್ವಜ್ಞನ ಜನ್ಮ:— ಸರ್ವಜ್ಞನ ಕಾಲದ ವಿಷಯವಾಗಿಯೇ ಇಷ್ಟು ಅನಿಶ್ಚಿತತೆಯಿದ್ದ ಮೇಲೆ ಆತನ ಜನ್ಮತಿಥಿಯು ಗೊತ್ತಾಗುವ ಸಂಭವವೇ ಇಲ್ಲ. ಆದರೆ ಸರ್ವಜ್ಞನೇ ತನ್ನ ತಂದೆತಾಯಿಂದಿರ ವಿಷಯವಾಗಿಯೂ, ಜನ್ಮದ ವಿಷಯವಾಗಿಯೂ ಬರೆದಿಟ್ಟ ಮೂಲಕ, ಅದರ ಅಲ್ಪಸ್ವಲ್ಪ ಪರಿಚಯವನ್ನು ಮಾಡಿಕೊಡುವುದು ಸಾಧ್ಯವಾಗಿದೆ.

ತನ್ನ ಆತ್ಮಚರಿತ್ರೆಯನ್ನು ಹೇಳುವಾಗ, ತಾನು ಕೈಲಾಸಪತಿಯಾದ ವರಶಿವನ ದಾಸನೆಂದೂ, ತನ್ನ ಹೆಸರು ಪುಷ್ಪದತ್ತ ಎಂದೂ ಸರ್ವಜ್ಞನು ಉಸುರಿದ್ದಾನೆ. ಮುಂದೆ ಶಿವನ ಆಜ್ಞೆಯಿಂದ ಲೋಕಸಂಗ್ರಹಕ್ಕಾಗಿ ಅವನು 'ವರರುಚಿಯಾಗಿ' ಜನ್ಮತಾಳಿದನಂತೆ. 'ಸಾಲೆ ಸರ್ವ

ಜ್ಞನಾ' ಗಿ ಹುಟ್ಟಿದುದು ಅವನ—ಮೂರನೆಯ ಜನ್ಮ. ಈ ಪೂರ್ವಜನ್ಮದ ಕಥೆಯನ್ನು ಕೇಳಿ ಸರ್ವಜ್ಞನಲ್ಲಿ ಮೊದಲಿಗೇ ಅವಿಶ್ವಾಸ ಹುಟ್ಟುವ ಸಂಭವವಿದೆ. ಆದರೆ ಕೊಂಚ ವಿಚಾರಮಾಡಿದರೆ ಪೂರ್ವಜನ್ಮದ ಜ್ಞಾನವೂ ಅದರ ಕಥನವೂ ನಮಗೇನು ಅಪರಿಚಿತವಾದವುಗಳಲ್ಲವೆಂಬುದು ಕಂಡುಬರುವುದು. ಗೀತೆಯಲ್ಲಿ ಭಗವಂತನು ತನ್ನ ಪೂರ್ವಜನ್ಮದ ಪರಿಚಯುವನ್ನು ಪಾರ್ಥನಿಗೆ ಮಾಡಿಕೊಟ್ಟಿಲ್ಲವೇ? ಉಪನಿಷತ್ತುಗಳಲ್ಲಿಯು ಮಹರ್ಷಿಯೋರ್ವನು ತಾನು ಹಿಂದೆ 'ವಾಮದೇವ' ನಿದ್ದಬಗ್ಗೆ ಹೇಳಿಲ್ಲವೇ? ಇತ್ತೀಚಿನ ಅಧ್ಯಾತ್ಮವಾದಿಗಳಲ್ಲಿಯು (*Theosophists*) ಹಿರಿಯರಾದ ಹಲವರು ತಮ್ಮ ಪೂರ್ವಜನ್ಮದ ವೃತ್ತಾಂತವನ್ನು ಬರೆದಿಟ್ಟಿದ್ದಾರೆ. ಆದ್ದರಿಂದ ಪೂರ್ವಜನ್ಮಗಳ ವಿಷಯುವು ನಮಗೆ ಹೊಸದಾದ್ದಲ್ಲ. ಹೀಗಿರಲು ಸರ್ವಜ್ಞನ ವಿಷಯದಲ್ಲಿಯೇ ಸಂದೇಹಪಡುವ ಕಾರಣವೇನು?

ಸರ್ವಜ್ಞನ ತಂದೆಯಾದ ಬಸವರಸನೆಂಬ ಬ್ರಾಹ್ಮಣನು ಧಾರವಾಡ ಜಿಲ್ಹೆಗೆ ಸೇರಿದ ಮಾಸೂರ ಗ್ರಾಮದವನು. ಅವನ ಹೆಂಡತಿಯ ಹೆಸರು ಅಕ್ಕಮಲ್ಲಮ್ಮ, ಈ ಉಭಯತರಿಗೆ ಬಹಳ ದಿವಸ ಮಕ್ಕಳಾಗಲಿಲ್ಲ. ಇದರಿಂದ ದುಃಖಿತನಾಗಿ ಬಸವರಸನು ಶ್ರೀ ಕಾಶೀ ಕ್ಷೇತ್ರಕ್ಕೆ ಹೋಗಿ ವಿಶ್ವೇಶ್ವರನ ಆರಾಧನೆಯನ್ನು ಮಾಡತೊಡಗಿದನು. ಅವನ ಅನನ್ಯ ಸೇವೆಯಿಂದ ಸ್ವಲ್ಪಕಾಲದಲ್ಲಿಯೇ ಈಶ್ವರನು ಪ್ರಸನ್ನಾಗಿ ಅವನಿಗೆ ವರವನ್ನಿತ್ತನು ಈಶನ ಪ್ರಸಾದವನ್ನು ಗ್ರಹಿಸಿ ಬಸವರಸನು ಮರಳಿ ತನ್ನ ಊರಿಗೆ ಬರಲು ಹೊರಟನು. ದಾರಿಯಲ್ಲಿ ಒಂದು ದಿನ ಆತನು ಅಂಬಲೂರೆಂಬ ಹಳ್ಳಿಯಲ್ಲಿ ಇಳಕೊಂಡನು. ಮಧ್ಯಾನ್ಹದ ಸಮಯ; ಹೊಟ್ಟೆ ಹಸಿದಿದೆ; ಬಸವರಸನು ಕುಂಬಾರ ಸಾಲೆಗೆ ಹೋಗಿ ಗಡಿಗೆಗಳನ್ನು ಕೊಂಡು ಊರಹೊರಗಿನ ತೋಟದಲ್ಲಿ ಅಡಿಗೆಯನ್ನು ಮಾಡಹತ್ತಿದನು. ಇಷ್ಟರಲ್ಲಿ ಮೋಡ ಮುಸುಕಿ ಭೋರೆಂದು ಮರಮಳೆಯು ಸುರಿಯಹತ್ತಿತು ಅವಸರದಿಂದ ಸಾಹಿತ್ಯವನ್ನು ಕಟ್ಟಿಕೊಂಡು ಅವನು ಮತ್ತೆ ಕುಂಬಾರ ಸಾಲೆಗೆ ಬಂದನು. ಗಡಿಗೆಗಳನ್ನು ಕೊಳ್ಳುವಾಗ ಕುಂಬಾರರ ಪರಿಚಯುವಾಗಿತ್ತು. ಅವರು ಕೆಲಕಾಲ ಆಶ್ರಯ ಕೊಟ್ಟಾರೆಂಬ ಭಾವನೆಯಿಂದ ಬಸವರಸನು ಅಲ್ಲಿಗೆ ಬಂದುದು. ಆಗ ಮನೆಯಲ್ಲಿ ಮಾಳಿಯೆಂಬ ಬಾಲವಿಧವೆಯೋರ್ವಳೆ ಇದ್ದಳು. ಮಾಳಿಯು ಬಸವರಸನನ್ನು ಚನ್ನಾಗಿ ಸತ್ಕರಿಸಿದಳು. ಬಸವರಸನು ಅಡಿಗೆ ಮಾಡಿ ಊಟ

ವನ್ನು ಮುಗಿಸಿದನು. ಮಳೆಯು ಹೊರಗೆ ಸುರಿಯುತ್ತಲೇ ಇದ್ದಿತು. ಸುಂದರಿಯಾದ ಆ ಬಾಲವಿಧವೆ; ಆಕೆಯು ಚಲುವಿನ ನಡತೆ; ಒಲವಿನ ಅತಿಥ್ಯ. ಬಸವರಸನು ಅವುಗಳಿಗೆಲ್ಲ ಮನಸೋತನು. ಮಾಳಿಯು ಕೂಡ ಶಿವ ಪ್ರಸಾದದಿಂದ ಹೊಳೆಯುವ ಆ ಬ್ರಾಹ್ಮಣನಲ್ಲಿ ಅನುರಕ್ತಳಾದಳು. ಈ ಪರಸ್ಪರ ಪ್ರೀತಿಯುಮೂಲಕ ಮಳೆಯಿಂದುಂಟಾದ ಏಕಾಂತದಲ್ಲಿ ಬಸ ವರಸನು ಮಾಳಿಯಲ್ಲಿ ಗರ್ಭವನ್ನಿಟ್ಟು ತನ್ನ ಊರಿಗೆ ಹೊರಟು ಹೋದನು. ಸಕಾಲಕ್ಕೆ ಮಾಳಿಯು ಹಡೆದಳು. ಆಕೆಯಲ್ಲಿ ಹುಟ್ಟಿದ ಮಗುವೇ ಪರ ಶಿವನ ವರಪುತ್ರನಾದ ಸರ್ವಜ್ಞನು!

೪ ಬಾಲ್ಯ ಮತ್ತು ಶಿಕ್ಷಣಃ— ಚಿಕ್ಕಂದಿನಲ್ಲಿಯೆ ಸರ್ವಜ್ಞನ ಕಳೆ ಯನ್ನು ಕಂಡ ಹಿರಿಯರು ಈತನು ಕುಂಬಾರ ಮಾಳಿಯಲ್ಲಿ ಹೇಗೆ ಮೊಳೆತನೆಂದು ಅಚ್ಚರಿಪಡಹತ್ತಿದರು. ಅದರಂತೆಯೇ ಖಂಡಪರಶುವಿನ ವರಪುತ್ರನಾದ ತನ್ನನ್ನು ಮಾಳಿಯು ಮಗನೆಂದು ಕರೆಯುವುದು ಸರ್ವ ಜ್ಞನಿಗೆ ಸೇರಲಿಲ್ಲ. ತನ್ನ ನೈಜವೈಭವದ ನೆನಹಿದ್ದ ದಾವನು ಕೀಳ ಜೀವ ನವನ್ನಂಗೀಕರಿಸುವನು? ಹೀಗಿರಲು ಒಂದು ದಿನ ಮಾಳನೂ ಮಾಳಿಯೂ ಹೆಮ್ಮೆಯಿಂದ ನೀನಾರ ಮಗನೆಂದು ಸರ್ವಜ್ಞನಿಗೆ ಕೇಳಲಾಗಿ. “ನಾನು ಶಿವನ ಮೇಳದವನು; ಬ್ರಾಹ್ಮಣನು ನನ್ನ ತಂದೆಯಲ್ಲ; ಮಾಳಿಯು ತಾಯಿಯಲ್ಲ; ಶಿವನ ವರದಿಂದ ಹುಟ್ಟಿದವನು. ಎಂದವನು ಉತ್ತರ ಕೊಟ್ಟನು. ಅವರ ಅಧ್ಯಾತ್ಮಿಕ ಅರ್ಥವನ್ನರಿಯದೆ ತಂದೆತಾಯಿಂದಿರಿ ಬ್ಬರು ಅತೀವ ಕೋಪಿಸಿಕೊಂಡು ಸರ್ವಜ್ಞನನ್ನು ಕೂಡಲೆ ಮನೆಯು ಹೊರಗಟ್ಟಿದರು.

ಅಂದಿನಿಂದ ಸರ್ವಜ್ಞನು ನಿಜವಾಗಿ ಪ್ರಕೃತಿ ಪಾರ್ವತಿಯ ಮುದ್ದು ಮಗನಾದನು. ಆಕೆಯ ಸೊಬಗನ್ನು ಮನಬಂದಂತೆ ಉಂಡನು. ತೋರಿ ದತ್ತ ತಿರುಗಾಡಿ ಸರ್ವಜ್ಞನು ಗಿರಿಗಳ ಗಾಂಭೀರ್ಯವನ್ನೂ, ನದಿಗಳ ನೈರ್ಮಲ್ಯವನ್ನೂ, ಸಾಗರದ ಸ್ವಾತಂತ್ರ್ಯವನ್ನೂ ಹಾಗೂ ಗಗನದ ವೈಶಾ ಲ್ಯವನ್ನೂ ಸಂಪೂರ್ಣವಾಗಿ ಪಡೆದನು. ವನರಾಜಿಯಲ್ಲಿ ವಿರಾಜಿಸುವ ಹೂಗಳು ಅವನಿಗೆ ಚಾರಿತ್ರ್ಯದ ಸೌರಭವನ್ನು ಕೊಟ್ಟವು; ಮರಗಳು ಮನಸ್ಸಿನ ಔದಾರ್ಯವನ್ನಿತ್ತವು; ಹಕ್ಕಿಗಳು ಅವನ ಬುದ್ಧಿಗೆ ಅಮರರ ಆಕಾಶದಲ್ಲಿ ಅನಿರುದ್ಧವಾಗಿ ಹಾರಲು ಕಲಿಸಿದವು. ಜನಸಂದಣಿಯಲ್ಲಿ ಅಲೆದಾಡಿದಾಗ ಸರ್ವಜ್ಞನಿಗೆ ಒಳಿತು ಕೆಡಕು ಅನುಭವಗಳಿಂದ ಚನ್ನಾಗಿ

ಬೋಧೆಯಾಯಿತು. ಈ ಮೇರೆಗೆ ಶಿಕ್ಷಣವನ್ನು ಹೊಂದಿದ ಸರ್ವಜ್ಞನು ಜನಸೇವೆಯ ಹೊಣೆಯ ಕಾರ್ಯವನ್ನು ನಿರ್ವಹಿಸಲು ಸಿದ್ಧನಾದನು.

೫ ದಿನಚರ್ಯ:— ಇಂಥ ಸುಶಿಕ್ಷಣದಿಂದ ಸಜ್ಜನಾದ ಸರ್ವಜ್ಞನು ಮಂಡೆಯನ್ನು ಬೋಳಿಸಿಕೊಂಡನು. ತುಂಡಗಂಬಳಿಯನ್ನು ಹೊದ್ದು ಯಾವಾಗಲು ಹಿಂಡನಗಲಿದ ಗಜದಂತೆ ಸ್ವತಂತ್ರವಾಗಿ ಇರಹತ್ತಿದನು. ಜನರ ಸಂಸರ್ಗವನ್ನು ಅವನು ಆದಷ್ಟು ತಪ್ಪಿಸುತ್ತಿರಬೇಕು. ನಮ್ಮ ಹಿಂದಾದ ಕನ್ನಡನಾಡಿನಲ್ಲಿ ಹರನನ್ನು ಭಜಿಸುತ್ತ ಹಸಿವಾದಾಗ ಕರದಿ ಕಪ್ಪರವನ್ನು ಹಿಡಿದು, ಹತ್ತೆಂಟು ಮನೆಗಳಲ್ಲಿ ಭಿಕ್ಷೆಯನ್ನು ಬೇಡಿ ಸರ್ವಜ್ಞನು ಜನರ ಸೇವೆಯನ್ನು ಮಾಡುತ್ತಿದ್ದನು. ಇಷ್ಟೇ ಅಲ್ಲ. ಇಂಥ ತಿರಿವರಿಂ ಸಿರಿವಂತರಾರು? ಎಂದು ಒಳ್ಳೇ ಅಭಿಮಾನದಿಂದ ಅವನು ಕೇಳುತ್ತಾನೆ. ನಿಶ್ಚಯುವ ಬಡದೆ ಸರ್ವಜ್ಞನು ಯಾರ ಇಚ್ಛೆಯಂತೆಯೂ ನಡೆಯುತ್ತಿರಲಿಲ್ಲ. ನೆಚ್ಚಿ ಒಂದೇ ಊರಲ್ಲಿ ದೀರ್ಘಕಾಲ ನಿಲ್ಲದೆ, ನಿರಂತರ ಸಂಚಾರದಲ್ಲಿ ಜನರ ಈ ಕುಂದುಕೊರತೆಗಳನ್ನು ಕಂಡು, ನಿಸ್ಪೃಹವೃತ್ತಿಯ ಸರ್ವಜ್ಞನು ಅವರನ್ನು ತನ್ನ ಮಿಂಚಿನ ಮಾತಿನಿಂದ ತಿದ್ದುತ್ತಿದ್ದನು.

೬ ಅಂತರಂಗ:— ಸರ್ವಜ್ಞನಂಥ ಪುಣ್ಯಾತ್ಮರನ್ನೂ ಕುಲಗೆಟ್ಟವನೆಂದು ಹೀಯಾಳಿಸುವ ಹೇಸಿ ಜನರು ಇಂದಿನಂತೆ ಅಂದಿನ ಸಮಾಜದಲ್ಲಿಯೂ ಕಡಿಮೆಯಿರಲಿಲ್ಲ. ಆದರೆ "ದೈವಾಯತ್ತಂ ಕುಲೇ ಜನ್ಮ! ಮದಾಯಾತ್ತಂ ತು ಪೌರುಷಂ" ಜನ್ಮವು ದೈವದ ಆಧೀನವಿದ್ದರೆ ಪೌರುಷವೇನೂ ಅದಕ್ಕೊಳಪಟ್ಟಿದ್ದಲ್ಲ. ಅದು ನನ್ನ ಆಧೀನವಿದೆ! ಎಂದುಸುರಿದ ಕರ್ಣನಂತೆ ಸರ್ವಜ್ಞನ ಭಾವನೆಯಿತ್ತು. ಕುಲಗೆಟ್ಟವರು ಚಿಂತೆಯೊಳಗಿರುವದಿಲ್ಲ. ಕುಲಗೆಟ್ಟ ಋಷಿಗಳು ಪರಮಾತ್ಮನನ್ನು ಮರೆಹೊಕ್ಕು ಪವಿತ್ರರಾಗಲಿಲ್ಲವೇ? ಜೀವವು ಶಿವನ ಕುಲಕ್ಕೆ ಸೇರಿದುದು! ಮಾಂಸದ ಹುತ್ತಾದ, ಎಲುವಿನ ಹಂದರವಾದ ದೇಹಕ್ಕೆ ಕುಲವಾವುದಯ್ಯ, ಎಂದು ಸರ್ವಜ್ಞನು ಕೇಳುತ್ತಾನೆ.

ಸರ್ವಜ್ಞನೆಂಬುದು ಅವನು ತನಗೆ ತಾನೇ ಇಟ್ಟುಕೊಂಡ ಹೆಸರು. ಸರ್ವಜ್ಞನ ಮೂಲ ಹೆಸರು ಆವುದು ಗೊತ್ತಿಲ್ಲ. ಆದರೆ ಅವನು ತನ್ನನ್ನು ಸರ್ವಜ್ಞನೆಂದು ಕರೆದುಕೊಂಡುದು ಹೆಮ್ಮೆಯಿಂದ ಮಾತ್ರ ಅಲ್ಲ. ಸರ್ವಜ್ಞನೆಂದರೆ ಎಲ್ಲವನ್ನು ಬಲ್ಲವನಲ್ಲ; ಎಲ್ಲರಿಂದ ಬಲ್ಲವ! ಸರ್ವರೊಳು ಒಂದೊಂದು ನುಡಿಗಲಿತು ಸರ್ವಜ್ಞನು. ವಿದ್ಯೆಯ ಪರ್ವತನಾದ ಸರ್ವಜ್ಞ,

ನಾದ ಎಂಥ ವಿನೀತವಾದ ಅಭಿಮಾನವಿದು ? 'ನಾನು ಹೇಳಲರಿಯೆನು; ಪನ್ನಗಧರನು ಎನಗೆ ಬುದ್ಧಿಯನ್ನು ದಯಪಾಲಿಸಿದ. ಆತನ ಶರಣ ಆಳು ನಾನು. ಶಿವನು ಹೇಳಿಸಲು ಹೇಳಿದೆನು! ಇದು ಸರ್ವಜ್ಞನ ವಿನಮ್ರ ಭಾವನೆ. ಇದೇ ಎಲ್ಲರ ಭಾವನೆಯಾದರೆ—

## ೨ ಬದ್ಧ-ಸ್ಥಲ.

೧ ಹಿಂದಿನಿಂದ ಮುಂದೆ:— ಇನ್ನು ಸರ್ವಜ್ಞಮೂರ್ತಿಯ ಸರ್ವ ಸಂಗ್ರಾಹಕ ಉಪದೇಶವನ್ನು ಅರಿತುಕೊಳ್ಳುವ; ಬದ್ಧ-ಸ್ಥಲವೆಂದರೆ ಬದ್ಧರ ಸ್ಥಲ; ಉನ್ನತಿಯ ಪಥದಲ್ಲಿ ಅವರಿಗಿದ್ದ ಸ್ಥಾನ; ಅವರ ಮನೆ; ನೆನಹು ಭೂಮಿಕೆ ವಾಸನೆ ಆಕಾಂಕ್ಷೆಗಳ ಸ್ವರೂಪ. ಜನಸಾಮಾನ್ಯರೆಲ್ಲರೂ ಬದ್ಧರೇ! ಅವರು ಈ ಜಾಗತಿಕ ಸುಖಕ್ಕೆ ಅಂಟಿಕೊಂಡಿರುವ ಮೂಲಕ ಇವುಗಳ ಕೂಡ ಸಂಬದ್ಧರಾದ ಮೂಲಕ, ಅವರಿಗೆ ಬದ್ಧರೆಂಬ ಹೆಸರು. ಲಿಂಗ ವಂತರು ಅವರಿಗೆ ಭವಿಗಳೆಂದೂ ಜೈನರು ನಿರ್ಭವ್ಯರೆಂದೂ ಕರೆಯು ವದುಂಟು. ಸರ್ವಜ್ಞನು ಕಂಡು ಹಿಡಿದ ಬದ್ಧರ ಲಕ್ಷಣಗಳನ್ನು ಅವರಿಗೆ ಅವನು ಮಾಡಿದ ಉಪದೇಶವನ್ನೂ ಇಲ್ಲಿ ಕಾಣಿಸಲಾಗಿದೆ.

೨ ಬದ್ಧರ ಲಕ್ಷಣ:— ಈ ಜಗತ್ತಿನಲ್ಲಿ ಎಲ್ಲವನ್ನು ಬಲ್ಲವರು ಆರೂ ಇಲ್ಲ. ಅಲ್ಪ ಸ್ವಲ್ಪ ಬಲ್ಲವರು ಹಲವರಿದ್ದರೂ ಅರಿತದ್ದನ್ನು ಕಾರ್ಯ ರಂಗಕ್ಕಿಳಿಸಲು ಅವರಲ್ಲಿ ಬಲವಿಲ್ಲ. ಬಲವಿದ್ದವರಿಗೆ ಕಾರ್ಯಪೂರ್ತಿಗೆ ಬೇಕಾದ ಸಾಹಿತ್ಯವಿಲ್ಲ. ಆದ್ದರಿಂದ ಯಾವ ಬಗೆಯ ದೊಡ್ಡ ಕೆಲಸವು ಕೈಗೂಡದೆ ಹೀನಾವಸ್ಥೆಯಲ್ಲಿದ್ದ ನಮ್ಮ ಸಮಾಜವು ಏಳ್ಗೆಯನ್ನು ಹೊಂದ ಲಾರದಾಗಿದೆ. ಇಲ್ಲಿಯ ಜನರ ಬಯಕೆಗಳು ತೀರ ಸಂಕುಚಿತವಾದವು ಗಳು. ಬೆಚ್ಚನಾ ಮನೆ, ವೆಚ್ಚಕ್ಕೆ ದುಡ್ಡು, ಇಚ್ಛೆಯರಿಯುವ ಗುಣಿಗ ಳಾದ ಮಡದಿಮಕ್ಕಳಾದರೆ ಇವರ ಮನೀಷೆಯ ಮೇರೆಯಾಯಿತು. ಹೊನ್ನು, ಹೆಣ್ಣು, ಮಣ್ಣುಗಳ ಜೊತೆಗೆ ಮನ್ನಣೆಯನ್ನು ಸೇರಿಸಿದರೆ ಜನಸಾಮಾ ನ್ಯರ ಆಕಾಂಕ್ಷೆಗಳ ಸ್ಫುಟವಾದ ಚಿತ್ರವು ನಮ್ಮೆದುರು ನಿಲ್ಲುವುದು. ಜೊಳ್ಳು ಮನುಜರು ಈ ಸುಳ್ಳು ಸಂಸಾರದ ಜಾಲದಲ್ಲಿ ಸಿಲುಕಿ ಹೊಳ್ಳಾ ಡುತ್ತಿರುವರು. ಆದರೆ ಇದರ ನೈಜ-ಸ್ವರೂಪವು ಅವರಿಗೆ ತಿಳಿಯದಾ ಗಿದೆ. ಮುಕ್ಕಣ್ಣನೊಡ್ಡಿದ ಬಲೆಯಿದು; ಮೂರನೆಯ ಕಣ್ಣು ತೆರೆಯದ ವಿನಃ ಅದು ಕಾಣುವದೆಂತು? ಆದರೆ ಜನರ ಮಾತನ್ನು ಕೇಳಿದರೆ ಈ ಜಗತ್ತೆಲ್ಲ ಸತ್ಪುರುಷರ ಬಿಡಾರವೆಂಬಂತೆ ತೋರುವುದು. ವಚನವಲ್ಲಿ

ಎಲ್ಲರೂ ಶುಚಿ-ವೀರ-ಸಾಧುಗಳು, ಆದರೆ ಹೊನ್ನು ಹೆಣ್ಣಿಂ ಸೋಂಕಲು ಯಾರ ಮನಸ್ಸೂ ಚಲಿಸದೆ ಇರುವದಿಲ್ಲ. ಈ ಮೇರೆಗೆ ಆಟದಲ್ಲಿ ಬಾಲ್ಯ ವನ್ನೂ, ನೋಟದಲ್ಲಿ ತಾರುಣ್ಯವನ್ನೂ, ಚಿಂತೆಯಲ್ಲಿ ವಾರ್ಧಕ್ಯವನ್ನೂ ಕಳೆದು, ಕೊನೆಗೆ ಕಾಲನ ತುತ್ತಾಗುವದೇ ಈ ಜನರು ಹಿಡಿಯುವ ಹಾದಿ. ಇದಕ್ಕೂ ಹೆಚ್ಚಿನ ಆದರ್ಶವಿಲ್ಲ. ಶ್ರೇಷ್ಠತರಗತಿಯ ಸಾಧನೆ ಇಲ್ಲ. ವಿಷಯ-ವಿಷಯವನ್ನು ಸುಖವೆಂದು ಸೇವಿಸಿ ಹಾಳಾದ-ಹಾಳಾ ಗುವ ನಂಜುಂಡರ ಅವಸ್ಥೆಯಿದು! ಇಂಥವರಿಗೂ ಸರ್ವಜ್ಞನು ಬುದ್ಧಿ ಕಲಿಸಿ, ಕೆಲವುಟ್ಟಿಗೆ ಸುಖಿಗಳನ್ನಾಗಿ ಮಾಡಿದ್ದಾನೆ.

೩ ವ್ಯವಹಾರ ಚಾತುರ್ಯ:— ಅಭ್ಯುದಯ ನಿಶ್ರೇಯಸುಗಳು ಧರ್ಮದ ಗುರಿಯ ಎರಡಂಗಗಳು. ಇಹವನ್ನು ಗೆದ್ದು ಪರವನ್ನರಸಬೇ ಕಲ್ಲವೆ? ಸರ್ವಜ್ಞನ ಸಂದೇಶವು ಈ ಉಭಯ ಅಂಗಗಳನ್ನು ಒಳಗೊಂಡ ದ್ದಾಗಿದೆ. ಇಹ ಸುಖವೇ ಗುರಿಯಾಗಿರುವ ಬದ್ಧರಿಗೆ ಸರ್ವಜ್ಞನು ವ್ಯವ ಹಾರಚಾತುರ್ಯವನ್ನು ಕಲಿಸಿದನು. ಪರಸುಖವೇ ಪ್ರಧಾನವಾದ ಮುಮು ಕ್ಷುಗಳಿಗೆ ಮುಕ್ತಿಮಾರ್ಗವನ್ನು ತೋರಿಸಿದನು. ಆದರೆ ಸರ್ವಜ್ಞನ ವ್ಯವ ಹಾರವು ಪರಮಾರ್ಥದ ಪೂರ್ವಸಿದ್ಧತೆ; ಅದನ್ನು ಬಿಟ್ಟದ್ದಲ್ಲ. ಅದಕ್ಕೆ ವಿರುದ್ಧವಾದದ್ದಂತೂ ಅಲ್ಲವೇ ಅಲ್ಲ. ಚಾತುರ್ಯ, ವೀರ್ಯ, ಔದಾರ್ಯ ಮುಂತಾದ ವ್ಯವಹಾರಕ್ಕೆ ಆವಶ್ಯವಿದ್ದ ಸದ್ಗುಣಗಳು ಮನುಷ್ಯನಲ್ಲಿ ಹುಟ್ಟಿದಂದಿನಿಂದಿರಬೇಕಾದರೂ ಅವು ಪ್ರಯತ್ನದಿಂದ ಪ್ರಾಪ್ತವಾಗಲಾರ ವೆಂದಲ್ಲ. ಬರೆವಂಗೆ ಓದು ಬರುವಂತೆ ಅಭ್ಯಾಸಕ್ಕೆ ಅಸಾಧ್ಯವಾದುದು ಯಾವದೂ ಇಲ್ಲವೆಂದು ಸರ್ವಜ್ಞನ ಮತ. ಈ ಸದ್ಗುಣಗಳ ಸಹಾ ಯವಿಲ್ಲದೆ ಇಹಸುಖವು ಸಂಪೂರ್ಣವಾಗಿ ಸಿಗಲಾರದು. ಆದುದರಿಂದ ಅವುಗಳನ್ನು ಪಡೆಯಲು ಪ್ರತಿಯೊಬ್ಬನು ಯತ್ನಿಸಬೇಕೆಂದು ಸರ್ವಜ್ಞನು ಹೇಳುತ್ತಾನೆ.

೪ ವಿದ್ಯೆ:—ಯಾವ ಕಾರ್ಯವು ಕೈಗೂಡಬೇಕಾದರೂ ಮನು ಷ್ಯನ ಬುದ್ಧಿಯು ಚುರುಕಾಗಿರಬೇಕು. ಸೋಲದಾ ಬುದ್ಧಿಯಿರುವವ ನಲ್ಲಿ ಭಾಗ್ಯದ ಕೀಲ ಕಾಣಯ್ಯ! ಎಂದು ಸರ್ವಜ್ಞನ ಹೇಳಿಕೆ. ಈ ಬುದ್ಧಿ ಯನ್ನು ಸಂಸ್ಕಾರಗೊಳಿಸುವ ಕೆಲಸವನ್ನು ವಿದ್ಯೆಯು ಮಾಡುತ್ತಿದೆ. ಆದ್ದ ರಿಂದ ವಿದ್ಯೆಯೇ ಎಲ್ಲರ ತಾಯ್ತಂದೆ. ಇಷ್ಟೇ ಅಲ್ಲ. ವಿದ್ಯಾಧನವನ್ನು ಯಾರೂ ಕದಿಯಲಾರರು. ನಾವು ಇರುವಲ್ಲಿಗೆ ವಿದ್ಯೆಯು ನಮ್ಮೊಡನೆ

ಬಂದು ನಮ್ಮನ್ನು ಸಲುಹುವದು. ಇಂಥ ವಿದ್ಯೆಯನ್ನು ಮಕ್ಕಳಿಗೆ ಕೊಡ್ಡದ ಗುರುಹಿರಿಯರು ಶುದ್ಧವೈರಿಗಳೆಂದು ಸರ್ವಜ್ಞನು ಸಾರುತ್ತಾನೆ.

ಮೇಲಾಗಿ ವಿದ್ಯೆಯನ್ನು ಪಡೆದವನ ಮಾತು ಮುತ್ತಿನ ಹಾರದಂತಿರಬೇಕು. ರಸಿಕರ ಮಾತು ಶಶಿಯುದಿಸಿ ಬಂದಂತೆ ಅಲ್ಲಿ ಕಡುನಗೆಯು ಹುತ್ತು. ಆದರೆ ಅರಸಿಕರ ಮಾತಿನಿಂದ ಹಗೆ-ಕೊಲೆಗಳುಂಟಾಗುವ ಸಂಭವವು ಬಹಳ. ಹೊಲಬನರಿದು ಕಾಲಕ್ಕೆ ಸರಿಯಾಗಿ ಮಾತನಾಡಬೇಕು. ಒಂದು ವೇಳೆ ಮಾತರಿವನು ಸೋತರೂ ಅಡ್ಡಿಯಿಲ್ಲ. ಆದರೆ ಮಾತಿಗೆ ಮಾತು ಮಥಿಸಿ ಕಲಹದ ಕಿಡಿಗಳು ಹಾರಬಾರದು. ಮಾತು ಬಲ್ಲವನು ನುಡಿದಂತೆ ನಡೆದರೆ ಜಗವನ್ನು ಕೂತಲ್ಲಿ ಆಪ್ಪನೆಂದು ಸರ್ವಜ್ಞನು ಎದೆ ತಟ್ಟಿ ಹೇಳುತ್ತಾನೆ.

೫ ವೀರ್ಯ:—ಬುದ್ಧಿಯು ಕಾರ್ಯಸಿದ್ಧಿಯ ದಾರಿಯನ್ನು ತೋರಿಸುತ್ತದೆ. ಆದರೆ ಆ ಹಾದಿಯನ್ನು ಹಿಡಿಶುವ ಸಾಮರ್ಥ್ಯವು ಅದರಲ್ಲಿಲ್ಲ. ಅದು ಉತ್ಸಾಹದ ಕೆಲಸ. ಪ್ರಬಲವಾದ ಭಾವನೆಯಲ್ಲಿಯೇ ಪ್ರೇರಿಸುವ ಶಕ್ತಿಯಿದೆ. ತಿಳಿಯದ ಬುದ್ಧಿಗೆ ಹೊಳೆದ ಸಾಧನೆಯನ್ನು ದೃಢವಾದ ನಂಬಿಕೆಯಿಂದ ಮಾಡದ ಹೊರತು ಸಿದ್ಧಿಯು ಸಿಗಲಾರದು. ಕಾರ್ಯಕ್ಷೇತ್ರದಲ್ಲಿಳಿದವನು ಮುಂದಿಟ್ಟ ಹೆಜ್ಜೆಯನ್ನು ಹಿಂದೊಯ್ಯಬಾರದು. ಸ್ವಾಮಿಯೂದ ಹಿರಿದಾದ ಕಾರ್ಯದಲ್ಲಿ ಪ್ರಸಂಗ ಬಂದರೆ ಮನುಷ್ಯನು ಮಡಿಯಲೂ ಸಿದ್ಧನಿರಬೇಕು. ಗಮ್ಯಕ್ಕಾಗಿ ಮಡಿಯಲು ಸಿದ್ಧರಿದ್ದವರೇ ಗೆಲವಿನ ಹೂಗಳನ್ನು ಮುಡಿಯುವರು. ಆದುದರಿಂದ ಹುಟ್ಟಿದವನಿಗೆ ಸಾವು ಇಟ್ಟದ್ದೆಂಬದನ್ನು ಜಾತಿವೀರರು ಮರಣಕ್ಕೆ ಶರಣೆನ್ನಲು ಹೆದರುವದಿಲ್ಲ.

೬ ವಿತ್ತ:—ವಿದ್ಯ ವೀರ್ಯಗಳ ಜೊತೆಗೆ ವಿತ್ತವೂ ಅನೇಕ ಸಲ ಕಾರ್ಯಸಿದ್ಧಿಗೆ ಅತ್ಯವಶ್ಯವಿರುತ್ತದೆ. ಈ ಜಗತ್ತಿನಲ್ಲಿ ಧನಿಕನೇ ದಿನಕರನು. ಸಿರಿಯುಣ್ಣವುಳ್ಳವನೇ ಹಿರಿಯಣ್ಣಾ ಬಲ್ಲಿದನ ನುಡಿಯು ಬೆಲ್ಲದಂತೆ ಸಿಹಿ! ಬಡವನ ಸವಿಮಾತು ಕೂಡ ಬೇವಿಗಿಂತ ಕಹಿ! ಹೀಗಿರಲು ಧನವನ್ನು ದೊರಕಿಸುವದು ಎಷ್ಟು ಅಗತ್ಯವೆಂಬುದನ್ನು ಬೇರೆ ಹೇಳುವ ಕಾರಣವಿಲ್ಲ. ಆದರೆ ಸಿರಿಯನ್ನು ಸಂಪಾದಿಸುವುದು ಸಾಲದಿಂದಲ್ಲ, ಉದ್ಯಮದಿಂದ. ಉದ್ಯೋಗಿಯನ್ನು ಲಕ್ಷ್ಮಿಯು ತಾನಾಗಿಯೇ ವರಿಸುವಳು. ಎಲ್ಲ ಉದ್ಯಮಗಳಲ್ಲಿ ಒಕ್ಕಲತನವು ಮೇಲಾದದ್ದು. ಯಾಕಂ

ದರೆ ಮೇಟಿಯಿಂದ ರಾಟಿಯು ನಡೆದು ಜನರಿಗೆ ಅನ್ನವಸ್ತ್ರಗಳು ದೊರ ಕುತ್ತಿವೆ. ಅದಿಲ್ಲದೆ ಹೋದರೆ ದೇಶದ ಆಟವೇ ಸಾಗುವಂತಿಲ್ಲ.

ಇನ್ನು ಉದ್ಯೋಗದಿಂದ ದೊರಕಿಸಿದ ದುಡ್ಡಿನ ವಿನಿಯೋಗವು ಚನ್ನಾಗಿ ಆಗಬೇಕು. ಉಳ್ಳಲ್ಲಿ ಉಣದವನ ಹಾಗೂ ದಾನವೀಯುದ ವನ ಒಡವೆಯು ಕಳ್ಳರಿಗೆ ಅಥವಾ ಅರಸರಿಗೆ ಸಿಗುವುದು ಖಂಡಿತ. ಇದೂ ಗೊತ್ತಿದ್ದರೂ ಧನವನ್ನು ಮಣ್ಣಿನಲ್ಲಿಡುವ ಮೋಹವು ಮಾನವ ರಿಗೆ ಬಿಡುವದಿಲ್ಲ. ಕೊಡದೆ ಉಣ್ಣದೆ ಹೂಳಿಟ್ಟ ಹಣವು ಸತ್ತಮೇಲೆ ಹಿಂಬಾಲಿಸುವದೇ? ಎಷ್ಟು ಮರುಳರೀ ಮಾನವರು? ದಾನವನ್ನು ಕೊಡಿ ಎನಲು ಕನಲುವರು. ಆದರೆ ದಂಡವನ್ನು ಸುಮ್ಮನೆ ಗುಣುಗುಟ್ಟದೆ ಕೂಡುವರು. ಕಳ್ಳರಿಗೆ, ಸುಳ್ಳರಿಗೆ, ಡಾಂಭಿಕರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು. ಎಲೈ! ಹುಟ್ಟುವಾಗೀ ಧನವನ್ನು ಮೊಟ್ಟೆಗಟ್ಟಿ ತಂದಿ ರುವಿರಾ? ಕಟ್ಟಕಡೆಗೆ ಕೊಂಡೊಯ್ಯುವಿರಾ? ಯಾಕೆ ವೃಥಾ ದುರಾಶೆ. ಕೊಡಿ! ದಾನದಿಂದ ಸಕಲ ಪದವು ದೊರಕುವುದು. ಲೋಕದಲ್ಲಿ ದಾನ ಮಾಡದವನು ಕೆಟ್ಟ ಕಾಣಾ! ಎಂದು ಸರ್ವಜ್ಞನು ಕಳವಳದಿಂದ ಹೇಳುತ್ತಾನೆ ದುಡ್ಡಿನ ವಿಷಮವಿಭಾಗದಿಂದ ಸಮಾಜದಲ್ಲುಂಟಾಗುವ ಅಸ್ವಾಸ್ಥ್ಯವನ್ನು ದೂರೀಕರಿಸಲು ನಮ್ಮ ಹಿರಿಯರ ದಾನಪದ್ಧತಿಯು ಇಂದಿನ ಆಸುರ ಪದ್ಧತಿಗಿಂತ ಮೇಲಾದದ್ದಲ್ಲವೆ?

೭ ನಿಸ್ಪೃಹತೆ :—ಯಾವಾಗಲೂ ಪರಾವಲಂಬಿಯಾದ ಜೀವನವು ಹೇಯವಾದದ್ದು. ಜಗದಿ ಸ್ವಾತಂತ್ರ್ಯವೇ ಲೇಸೆಂದು ಸರ್ವಜ್ಞನು ಹೇಳು ವನು. ಸ್ವಾತಂತ್ರ್ಯವೇ ಸಕಲ ಸೌಭಾಗ್ಯಗಳ ತವರುಮನೆ. ದಾಸ್ಯದ ಲ್ಲಿಯ ಸುಖವು ನಿಜವಾದ ಸುಖವೇ ಅಲ್ಲ. ಅಪಮಾನದ ಸವಿಯೂ ಟಕ್ಕಿಂತ ಉಪವಾಸವಿರುವದು ಉತ್ತಮ. ನಿಂದ್ಯ ಅರಮನೆಗಿಂತ ವಂದ್ಯ ವಾದ ಎಲೆಮನೆಯೇ ಒಳಿತಲ್ಲವೇ? ಹಂಗಿನ ಹಾಲಿಗಿಂತ ಅಂಬಲಿಯು ತಿಳಿಯು ಸಾವಿರಪಾಲು ಸವಿಯಾದದ್ದು. ಆದ್ದರಿಂದ ದೇಹಸುಖಕ್ಕಾಗಿ ಆತ್ಮನನ್ನು ದಾಸ್ಯದ ಮರಣಕ್ಕೀಡು ಮಾಡುವುದು ಸರ್ವಥಾ ಯೋಗ್ಯ ವಲ್ಲವೆಂದು ಸರ್ವಜ್ಞನ ಅಭಿಪ್ರಾಯ. ಆದರೆ ಮನುಷ್ಯನು ನಿಸ್ಪೃಹನಿ ದ್ದರೂ ಗರ್ವಿಷ್ಠನಿರಕೂಡದು. ಅವನು ವಿನೀತನಿರತಕ್ಕದ್ದು. ಯಾಕಂ ದರೆ ಆಳಾಗಬಲ್ಲವನೇ ಅರಸಾಗಿ ಆಳುವನು. ಯಾವನಿಗೆ ಈ ಬಗೆ

ಯಾಗಿ ಆಳಾಗಿ ಬಾಳಲು ಬರುವದಿಲ್ಲವೊ ಅವನು ಬೇಗನೆ ಹಾಳಾಗುವನು.

೮ ಅನ್ಯಗುಣಗಳು:— ಅನುಭವಿಯು ವೇದವೇ ನಿಜವಾದ ವೇದವಿದ್ದ ಕಾರಣ ಅವನನ್ನುಳಿದು ಅನ್ಯ ಕೈಲಾಗದವರನ್ನು ನಂಬಿ ಕೆಡಬಾರದು. ಕುಂತೀದೇವಿಯಂಥವಳು ಹಿರಿಮಗನನ್ನು ಕೊಲಿಸಿದಳು. ಹೀಗಿರಲು ಸಾಮಾನ್ಯ ಜನರನ್ನು ನಂಬುವುದೆಂತು? ಪ್ರತಿಯೊಬ್ಬನು ಮುಂಜಾಗ್ರತೆಯುಳ್ಳವನಿರಬೇಕು. ತಾಗುವಾ ಮುನ್ನವೇ ತಲೆಯನ್ನು ಬಾಗಿಸಬೇಕು. ತಾಗಿ ತಲೆಯೊಡೆದ ಬಳಿಕ ಬಾಗುವಲ್ಲೇನು ಜಾಣ್ಮೆ? ಮಹತ್ವದ ಹಂಚಿಕೆಗಳನ್ನು ಲೋಕಾಂತದಲ್ಲಿ ಮಾಡದೆ ಏಕಾಂತದಲ್ಲಿ ಮಾಡುತ್ತಿರಬೇಕು. ಇಬ್ಬರೊಳಗಣ ಕಿಚ್ಚು ಒಬ್ಬರನ್ನುಳಿದು ಒಬ್ಬರನ್ನು ಸುಡುವದಿಲ್ಲ ಎಂಬುದನ್ನರಿತು ಯಾವಾಗಲೂ ಕಲಹವನ್ನು ಮಾಡಬಾರದು. ಆನೆ ಬೀದಿಲಿ ಬರಲು ನಾಯಿಯು ಬೊಗಳುವದು. ಅದು ಅದರ ಸಹಜ ಸ್ವಭಾವ. ಆದರೆ ಆ ನಾಯಿಯಂತೆ ಆನೆ ಬೊಗಳಿದರೆ ಅದು ಆನೆಯ ಮಾನಹಾನಿಯೇ ಸರಿ! ಆದುದರಿಂದ ನಿಂದಕರ ಬಿರುನುಡಿಗಳನ್ನು ಶಾಂತವೃತ್ತಿಯಿಂದ ಸಹಿಸಬೇಕು.

ಮನುಷ್ಯನಿಗೆ ಯಾವ ಬಗೆಯ ವ್ಯಸನವು ಇರಕೂಡದು. ದಾಸಿಯನು ಹೋಗುವಗೆ ಹೇಸಿ ಜಯಲಕ್ಷ್ಮಿಯು ತೊಲಗುವಳು. ಆತನ ಆಯುಷ್ಯವು ನಾಶವಾಗುವುದು. ಮದ್ಯದಲ್ಲೆಲ್ಲವನು ನೀಡಿ ನಾರಸಾರಿಯರಲ್ಲಿ ಬಿದ್ದುಬರುವವನ ಕೀರ್ತಿಯು ಅಡಗಿ ಅವನು ಸಂತಾನಹೀನನಾಗುವನು. ಭಂಗಿಯನ್ನು ಸೇದುವವನು ಮಂಗನಂತೆ ಮಂಕಾಗುವನು. ಆದ್ದರಿಂದ ವ್ಯಸನದಿಂ ದೇಹವನು ಮಸಣದಲ್ಲಿಟ್ಟಿದೆ. ಅದನ್ನು ತೊರೆದು ಹಸನಾಗಿ ದುಡಿದರೆ ಅಶನ ವ್ಯಸನಗಳು ದೊರಕುವವೆಂದು ಸರ್ವಜ್ಞನು ಹೇಳುತ್ತಾನೆ.

೯ ವಿವಿಧ ವಿಷಯ:— ದೇವರಲ್ಲಿ ಕುಲಭೇದವಿಲ್ಲದಾಗ ನಾವೇ ಅದನ್ನೆತ್ತುವುದು ಮರುಳತನವಲ್ಲವೇ? ಎಲ್ಲ ಮನುಜರು ನಡೆಯುವುದು ಒಂದೇ ಭೂಮಿ; ಕುಡಿಯುವುದು ಒಂದೇ ನೀರು; ನಮ್ಮನ್ನವನ್ನು ಬೇಯಿಸುವುದು ಒಂದೇ ಬೆಂಕಿ. ನಡುವೆ ಕುಲಗೋತ್ರವೆತ್ತಣದು? ಸತ್ತ ಕತ್ತೆಯನು ಹೊತ್ತವನು ಹೊಲೆಯನಲ್ಲ. ಹೆರವಿತ್ತವನ್ನು ಹೊತ್ತವನು ಹೊಲೆಯ. ಇದನ್ನರಿತು ಸ್ಪರ್ಶಾಸ್ಪರ್ಶದ ಗೊಂದಲವನ್ನೆಬ್ಬಿಸ

ಬಾರದು. ಸ್ವರ್ಗದ ದಾರಿಯಾದ ನಾರಿಯನ್ನು ಮನ್ನಿಸಬೇಕು. ಮನೆಗೊಬ್ಬ ಅಜ್ಜಿಯೇ ಲೇಸಲ್ಲವೇ? ನಾಲಿಗೆಯಲ್ಲಿ ಎರಡು ನುಡಿ ಇರಕೂಡದು. ಆಡಿ ತಪ್ಪಿದರೆ ಅಲ್ಲಿಯೇ ಇರಬಾರದು. ಕರೆಯುದೆ ಎಲ್ಲಿಯೂ ಹೋಗಬೇಡ; ಜಗಳವಾಡುವವಳ ನೆರೆ ಬೇಡ. ಕನ್ನಡಿಗನ ಕಳೆಯುನ್ನು ಸಂಪಾದಿಸು. ಯಾಕಂದರೆ ನಂಬಿದವರನ್ನು ಪ್ರಾಣಹೋದರೂ ಕನ್ನಡಿಗನು ತೊರೆಯುವದಿಲ್ಲ. ಅವನ ಗೆಳತನವು ಕೈಯಲ್ಲಿಯ ಅಲಗವಿದ್ದಂತೆ. ಅದನ್ನು ಬಿಡುವದು ಆತ್ಮಘಾತಕವೇ ಸರಿ! ಎಂದು ಹೇಳಿ ಸರ್ವಜ್ಞನು (ಆ ಕಾಲದ) ಕನ್ನಡಿಗರ ಹಿರಿತನವನ್ನು ಸಾರಿರುವನು. ಬದ್ಧರಿಗೆ ಉಪಯುಕ್ತವಾದ ಅನೇಕ ಸಂಗತಿಗಳನ್ನು ಸರ್ವಜ್ಞನು ಹೇಳಿರುವನು. ಆದರೆ ಅವೆಲ್ಲವುಗಳನ್ನು ವಿವರಿಸಲು ಇಲ್ಲಿ ಸ್ಥಳವಿಲ್ಲ. ಆದ್ದರಿಂದ ಈಗ ಇಷ್ಟೇ ಸಾಕು.

## ೪ ಮುಮುಕ್ಷು ಸ್ಥಲ.

ಹಿಂದಿನಿಂದ ಮುಂದೆಃ— ಮುಕ್ತನಾಗಲು ಬಯಸುವನು ಮುಮುಕ್ಷುವು. ಸಂಸಾರದ ತಾಪವನ್ನು ತಾಳಲಾರದೆ ಅದರಿಂದ ಬಿಡುಗಡೆ ಹೊಂದಲು ಅವನು ಹಾತೊರೆಯುತ್ತಾನೆ. "ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಮಾಡಿ, ತನ್ನ ನೂಲು ತನ್ನ ಸುತ್ತಿ ಸಾವತೆರನಂತೆ ಮನಬಂದಂತೆ ಬಯಸಿ ಬೇವುತ್ತಿದ್ದೇನೆ ಅಯ್ಯ! ಎನ್ನ ಮನದ ದುರಾಶೆಯ ಮೋಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ!!" ಎಂದು ಮಹಾದೇವಿಯಕ್ಕನಂತೆ ವ್ಯಾಕುಲರಾಗಿರುವ ಮುಮುಕ್ಷುಗಳು ಸಾವಿರಕ್ಕೆ ಒಬ್ಬರೂ ದೊರಕುವದಿಲ್ಲ. ಮೇಲಾಗಿ ಮುಕ್ತಿಯ ಇಚ್ಛೆಯು ಬದ್ಧನಲ್ಲಿ ಒಮ್ಮೆಲೇ ಮೂಡುವದಿಲ್ಲ. ಅದಕ್ಕೆ ಹಲವು ಸಂದರ್ಭಗಳು ಒದಗಬೇಕು. ಅವುಗಳಲ್ಲಿ ಸತ್ಸಂಗವು ಪ್ರಮುಖವಾದುದು

ಸತ್ಸಂಗಃ— ಸತ್ಸಂಗದಿಂದಲೇ ಸನ್ಮಾರ್ಗವೆಂಬುದು ಸನಾತನ ತತ್ತ್ವವು! ತ್ರಿವಿಧ ತಾಪದಿಂದ ಬಳಲಿದ ಬದ್ಧನಲ್ಲಿ ಸತ್ಸಂಗದಿಂದ ವಿವೇಕವು ಉದಿಸಿ ಅವನಿಗೆ ಚಿರಸುಖದ ಹೆದ್ದಾರಿಯು ಸ್ಪಷ್ಟವಾಗಿ ಕಾಣುವುದು. ಆದರೆ ಜಗತ್ತಿನಲ್ಲಿ ದುರುಳರ ಸಂತೆಯೇ ಎಲ್ಲೆಲ್ಲಿಯೂ ನೆರೆದ ಮೂಲಕ ಸಜ್ಜನರನ್ನು ಕಾಣುವದೇ ಕಷ್ಟಸಾಧ್ಯವಾಗಿದೆ. ಮೇಲಾಗಿ ದುರುಳರು ಸತ್ಪುರುಷರ ಸೋಗುಹಾಕಿ ಅತ್ತಿತ್ತ ಮೆರೆಯುತ್ತಾರೆ. ಕಲ್ಲುಪ್ಪು ಕರ್ಪೂರದಂತೆ ಕಾಣುವದಿಲ್ಲವೆ? ಒಡಲಲ್ಲಿ ವಿಷವನ್ನಿಟ್ಟುಕೊಂಡು ಇಟ್ಟಿಯ

ಹಣ್ಣು ಕೆಂಪಾಗಿ ತೋರುವದಿಲ್ಲವೇ? ಬೊಗ್ಗಿದ ಬೆತ್ತು ಮರಳಿ ಮೀಟು ವಂತೆ ಸಾಧುಗಳಂತೆ ನಟಿಸುವ ಸ್ವಾರ್ಥ ಸಾಧುಗಳು ತಕ್ಕ ಸಮಯ ಒದಗಿದಾಗ ತಮ್ಮ ಕರಾಲರೂಪವನ್ನು ತಾಳಲು ಹೇಸುವದಿಲ್ಲ. ಮಳೆ ಗಂಜಿ ಮರದ ಆಶ್ರಯುವನ್ನು ಕೈಕೊಂಡರೆ ಮಳೆಯು ನಿಂತರೂ ಮರದ ಹನಿಯು ಬಿಡದು. ದುರುಳರ ನೆರಳೂ ಇಂತಹದೇ! ತೆರೆದ ಕೇಡವ ಮೆಟ್ಟಿದರೆ ಮರುಗಬೇಕಾಗುವಂತೆ ದುರುಳರ ಕೂಟವು ತನ್ನನ್ನು ತಾನೇ ಇರಿದುಕೊಂಡಂತೆ. ಹೀಗಿದ್ದರೂ ತಿಳಿಗೇಡಿಯಾದ ಜನರು ಅವರನ್ನೆಯೇ ಹಿಂಬಾಲಿಸುತ್ತಾರೆ. ಗಂಧವನು ತೇವಲ್ಲಿ ಒಂದು ನೊಣವೂ ಬರುವ ದಿಲ್ಲ. ಮಲವನ್ನು ಮುತ್ತುವಾಗ ನೊಣಗಳು ಹಿಂಡುಗಟ್ಟಿ ನಾ ಮುಂದೆ ನೀ ಮುಂದೆ ಎಂದು ಸಾಗುತ್ತಿವೆ! ಮನೆಗೆ ತಂದ ಹಾಲನ್ನು ಕೊಳ್ಳದ ಮಾನವರು ಸರಾಯಿಕೆದ್ದು ಹಾರುವರು. ಆದ್ದರಿಂದ ದುರುಳರ ಅನುಯಾ ಯಿಗಳ ತಂಡು ಬಲು ದೊಡ್ಡದಾಗಿದೆ. ಮತು ಜಗತ್ತಿನಲ್ಲೆಲ್ಲ ಅವರ ಗೊಂದಲವೇ ನಡೆದಿದೆ. ಆದರೆ ಸತ್ಯವಂತರೂ ಸತ್ತರೆಂದು ತಿಳಿಯು ಬೇಡಿರಿ. ಹೆತ್ತಮ್ಮ ಮಗನ ಕರೆವಂತೆ ಅವರು ನಿಮ್ಮನ್ನೆತ್ತಿಕೊಂಬವರು ಹೆದರಬೇಡಿರಿ! ಎಂದು ಸರ್ವಜ್ಞನ ಆಶ್ವಾಸನವು. ದಂತಸಂಕ್ತಿಯು ನಡುವೆ ನಾಲಿಗೆಯು ಇರುವಂತೆ ದುರ್ಜನರ ಒಳಸಿನಲಿ ಸಜ್ಜನರಿರುವರು. ಸತ್ಪು ರುಷರಿರುವದೇ ನಿಜವಾದ ತೀರ್ಥ. ಕಪ್ಪೆ ಮೀನುಗಳ ಮನೆಯಾದ ಹರಿವ ನೀರು ಎತ್ತಣದ ತೀರ್ಥವಯ್ಯಾ? ಸತ್ಯರಾ ನುಡಿ ತೀರ್ಥ; ಸತ್ಯರಾ ನಡೆ ತೀರ್ಥ, ಹಾಗೂ ಉತ್ತಮರ ಸಂಗವದು ತೀರ್ಥ! ಆದ್ದ ರಿಂದ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಪುಣ್ಯವನ್ನು ಪಡೆಯಲು ಬಯ ಸುವವರು ಒಂದು ಕ್ಷಣಮಾತ್ರವಾದರೂ ಸಜ್ಜನರ ಸಹವಾಸದಲ್ಲಿ ನಿಲ್ಲ ಬೇಕು. ಒಳ್ಳಿದನ ಸಂಗದಲ್ಲಿ ಕಳ್ಳನೂ ಒಳ್ಳಿದನಾಗುತ್ತಾನೆ. ಹೃದಯ ಶೂನ್ಯರ ಒಲವಿನಿಂದ ಅರಿದವರ ಕದನವೇ ಲೇಸು. ನಿಂದೆಯನು ಮಾಡಿದರು ಸಂದ ಸಜ್ಜನನು ಒಳ್ಳೆಯವನು. ಹೀಗಿದ್ದ ಮೂಲಕ ಉನ್ನತಿಗೆಯ್ಯಲೆಳಸುವ ಪ್ರತಿಯೊಬ್ಬನು ಏನಾದರೂ ಕೊಟ್ಟು ಜ್ಞಾನಿಯ ಕೆಳೆಯನ್ನು ಕೊಳ್ಳಬೇಕು. ಸತ್ಪುರುಷರ ಒಡನಾಟದಿಂದ ಪೊರಬೊ ಮ್ಮನು ಮುಂದೆ ಬಂದು ನಿಲ್ಲುವನು. ಭಕ್ತರೊಡಗೂಡಿ ಭಕ್ತಿಯಲ್ಲಿ ಎಡೆ ಬಿಡದೆ ಬೆರೆದಿರ್ದ ಮನುಜನು ತತ್ಕಾಲ ಮುಕ್ತನಾಗುವನು. ಆದುದ ರಿಂದ ಲಜ್ಜೆಯನು ತೊರೆದು ಶಿವಶರಣರ ಹೆಜ್ಜೆಯಲ್ಲಿ ನಡೆಯಬೇಕು.

೨ ತಪಸ್ಸುಃ— ಈ ಮೇರೆಗೆ ಸತ್ಪುರುಷರ ಸಹವಾಸದಿಂದ ಏಳ್ಗೆಯ ದಾರಿಯು ಕಾಣುವದರಲ್ಲಿ ಸಂದೇಹವಿಲ್ಲ. ಆದರೆ ಆ ದಾರಿಯಿಂದ ನಾವೇ ಹೋಗಬೇಕಲ್ಲವೇ ? ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಿ ಬಹುದೇ! ಎಂದು ಶ್ರೀ ಬಸವಣ್ಣನವರು ಕೇಳಿದಂತೆ ನಮ್ಮ ಉನ್ನತಿಗಾಗಿ ನಾವೇ ಹೆಣಗಾಡಬೇಕಲ್ಲವೆ? ಶರಣರೆಂದರೆ ಮೇಲ್ಮೆಯ ದಾರಿಯಲ್ಲಿದ್ದ ದೀಪಸ್ತಂಭಗಳು. ಅವರು ನಮಗೆ ಯೋಗ್ಯವಾದ ಸಾಧನವನ್ನು ಹೇಳಬಹುದು. ಆದರೆ ಆದನ್ನು ಮಾಡುವವರು ನಾವೇ! ಅನ್ಯರಲ್ಲ. ಆ ಸಾಧನೆಗೆ ತಪಸ್ಸೆಂಬ ಹೆಸರು. ತಪಸ್ಸೆಂದರೆ ಅನೇಕರಿಗೆ ಹೆದರಿ ಮನೆ ಮಾರುಗಳನ್ನು ತೊರೆದು ಅಡವಿಯಲ್ಲಿ ನಿಂತು ದೇಹವನ್ನು ಸವಿಸುವದು ತಪಸ್ಸೆಂದು ಅವರ ಭಾವನೆ. ಆದರೆ ಒಮ್ಮೊಮ್ಮೆ ತಪಸ್ಸು ಈ ಭೈರವ ರೂಪವನ್ನು ತಾಳಿದರೂ ಅದಕ್ಕೆ ಸೌಮ್ಯರೂಪವೂ ಒಂದು ಇರುವದು. ಭಗವಾನ್ ಶ್ರೀಕೃಷ್ಣನಿಗೆ ಅಭಿಪ್ರೇತವಾದುದು ಅದೇ ! 'ಹುತ್ತು ಬಡಿದರೆ ಹಾವು ಸಾಯಬಲ್ಲದೆ ? ಅಘೋರತಪ ಮಾಡಿದಡೇನು. ಆತ್ಮಶುದ್ಧಿಯಾಗುವತನಕ ? ಈ ಆತ್ಮಶುದ್ಧಿಗಾಗಿ ಆಚರಿಸಬೇಕಾದ ತಪಸ್ಸು ಕಾಯಿಕ. ವಾಚಿಕ ಮತ್ತು ಮಾನಸಿಕವೆಂಬ ಮೂರು ವಿಧವಾದದ್ದು ಸತ್ಪುರುಷರ ಸಂಗದಿಂದ ತಿಳಿಯಾದ ಮನಸ್ಸಿನ ಮುಮುಕ್ಷುಗಳು ಕೆಚ್ಚಲೊಳಿದ್ದು ನೊರೆ ಹಾಲನ್ನುಣ್ಣದ ಉಣ್ಣೆಗಳಂತಿರದೆ ಅವರ ಬೋಧಸುಧೆಯನ್ನು ಸವಿದು ಅಮರರಾಗಲು ಯತ್ನಿಸಬೇಕು.

೩ ಶಾರೀರ ತಪಃ— ಮುಮುಕ್ಷುವು ಗುರುಹಿರಿಯರಿಗೆ ಶಿರಬಾಗಿ ವಂದಿಸಬೇಕು. ಅತಿಥಿಗಳನ್ನು ಯೋಗ್ಯರೀತಿಯಿಂದ ಸತ್ಕರಿಸಬೇಕು. ಜಗತ್ತಿನಲ್ಲಿ ಅನ್ನವೇ ಪ್ರಾಣವಿದ್ದಕಾರಣ ಹಸಿದವಗೆ ಅನ್ನವನ್ನಿತ್ತು ನನ್ನಿಯನ್ನು ನುಡಿಯಬೇಕು. ತನ್ನಂತೆ ಪರರ ಬಗೆದು ಆಗ ಬಾ, ಈಗ ಬಾ ಎನ್ನದೆ ಧರ್ಮ ಮಾಡಬೇಕು. ಮರಣವು ಯಾರಿಗೂ ಬಿಟ್ಟದ್ದಲ್ಲ. ಆದ್ದರಿಂದ ಕೆಟ್ಟಕೆಲಸದಲ್ಲಿ ದುಡ್ಡು ಹಾಳುಮಾಡದೆ ದಾನಮಾಡುವದು ಶ್ರೇಷ್ಠವಾದದ್ದು. ಕುದಿಯದೆ, ಆಡಿಕೊಳದೆ ಸದ್ಬುದ್ಧಿಯಿಂದಿತ್ತ ಈ ಗುಪ್ತದಾನವು ಸಾತ್ವಿಕತೆಯನ್ನು ಬೆಳಿಸುತ್ತಿದೆ.

ಆಹಾರಶುದ್ಧಿಯು ಮುಮುಕ್ಷುವು ಮಾಡಬೇಕಾದ ಎರಡನೆಯ ಮಾತು. 'ಆಹಾರಶುದ್ಧೌ ಸತ್ವಶುದ್ಧಿಃ' ಶುದ್ಧವಾದ ಸಾತ್ವಿಕಾಹಾರದಿಂದ ಮನಸ್ಸು ಸತ್ವಪ್ರಧಾನವಾಗುತ್ತಿದೆ. ಆದಕ್ಕಾಗಿ ಯಾವಾಗಲೂ

ಅದನ್ನೇ ಸೇವಿಸಬೇಕು. ಹಸಿವಿಲ್ಲದುಣಬಾರದು; ಹಸಿದು ಮಾತ್ರ ಕೂಡದು ಬಿಸಿ ಕೂಡ ತಂಗಳುಣತಕ್ಕದ್ದಲ್ಲ. ಉಂಡು ಶತಪದ ನಡೆದು ಎಡ ಮಗ್ಗುಲಲಿ ಮಲಗಿದರೆ ವೈದ್ಯನ ತಾಪವೇ ಇಲ್ಲ. ಒಮ್ಮೆ ಉಂಡವನು ತ್ಯಾಗಿಯು ಎರಡುಸಲ ಉಂಡವನು ಭೋಗಿಯು ಆದರೆ ಅನೇಕಸಲ ಊಟ ಮಾಡುವವನು ರೋಗಿಯೆಂದು ಸರ್ವಜ್ಞನು ಉಸುರುತ್ತಾನೆ. ರುಚಿಗಳನು ಸೆರೆಗಳೆದು ನಾಲಿಗೆಯನ್ನು ಕಟ್ಟಿದವನ ವಚನವು ಬೆಳಗಿ ಅವನು ಕಾಲನಿಗೆ ದೂರನಾಗುತ್ತಾನೆ.

ಆಹಾರಶುದ್ಧಿಯ ಜೊತೆಗೆ ಮುಮುಕ್ಷುವು ಬ್ರಹ್ಮಚರ್ಯವನ್ನು ಪಾಲಿಸಬೇಕು. ಕಾಮನನ್ನು ಹರನು ಹಿಂದೇ ಕೊಂದಿರುವನು. ಅವನ ಕಾಟವು ನಮಗೆ ಇಲ್ಲವೆಂದು ತಿಳಿಯಕೂಡದು. ಯಾಕೆಂದರೆ ಇಂದುವದನೆಯರ ಕಡೆಗಣ್ಣಿನ ನೋಟದಲ್ಲಿ ಅನಂಗನು ಇನ್ನೂ ವಾಸಿಸುತ್ತಿರುವನು. ಪರಸ್ತ್ರೀಯನ್ನು ಮುಟ್ಟಿದವನು ಕೆಟ್ಟು ಅವನಿಗೆ ಪರಲೋಕದ ಹಾನಿಯಾಗುವದು. ಪುರುಷರಿಗೆ ಪರಸ್ತ್ರೀಯರು ಹೇಯವಿರುವಂತೆ ಸ್ತ್ರೀಯರಿಗೆ ಪರಪುರುಷರು ನಿಂದ್ಯರು. ಇಲ್ಲಿಯ ಉಪದೇಶವು ಪುರುಷರಿಗಿದ್ದದರಿಂದ ಸ್ತ್ರೀಯರ ನಿಂದೆಯಾದಂತೆ ಕಂಡರೂ ಅದು ಅವರ ನಿಂದೆಯಲ್ಲ. ಕಾಮವಿಕಾರದ ನಿಂದೆ ಎಂಬದನ್ನಾರೂ ಮರೆಯಕೂಡದು. ಆದ್ದರಿಂದ ವೀರ್ಯವನ್ನು ತಡೆದವನೇ ಪರಬೊಮ್ಮನನ್ನು ಪಡೆಯಲು ಪಾತ್ರನಾಗುತ್ತಾನೆ.

ಮುಕ್ತಿಯನ್ನು ಹೊಂದಲೆಳಸುವ ಮನುಜರು ಹಿಂಸೆಯನ್ನೆಂದಿಗೂ ಮಾಡಕೂಡದು. ತಾನು ನೊಂದರೂ ಅನ್ಯರನ್ನು ಅವನು ನೋಯಿಸಬಾರದು. ಒಂದಾಡ ಕೊಂದವನು ಸ್ವರ್ಗವ ಹೊಂದಿದರೆ ಯಾವಾಗಲೂ ಆಡುಗಳನ್ನೇ ತಿನ್ನುವ ಕಟಕನು ಇಂದ್ರನಾಗಬೇಕಲ್ಲ? ಯಾರಿಗೂ ಕೇಡನ್ನು ಬಯಸಬೇಡ. ಯಾರ ಮೇಲೂ ಸಿಟ್ಟಿಗೇಳಬೇಡ ಅವರು ಮುನಿದರೂ ನೀನು ಮುನಿಯಬೇಡೆಂದು ಸರ್ವಜ್ಞನು ಮುಕ್ತಿಕಾಮಿಗಳಿಗೆ ಉಪದೇಶಿಸುತ್ತಾನೆ.

೪ ವಾಙ್ಮಯ ತಪಃ— ಇಹಪರದಿ ಸತ್ಯಕ್ಕೆ ಜಯವಿದ್ದ ಕಾರಣ ಮುಮುಕ್ಷುವು ದಿಟವನ್ನೆ ನುಡಿಯುತ್ತಿರಬೇಕು. ಸತ್ಯರಿಗೆ ಧರೆಯಲ್ಲಿ ಮಸ್ತಕದಿ ಎರಗುವದು. ಹೆತ್ತ ತಾಯಿಯು ತನ್ನ ಮಗುವನ್ನು ಕರೆವಂತೆ ದೇವರು ಅವನನ್ನು ಎತ್ತಿಕೊಂಬುವನು. ಹುಸಿಯ ಹೇಳುವದರಿಂದ

ಹಸಿದು ಸಾಯುವದು ಲೇಸಾದುದು. 'ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್' ಎಂಬಂತೆ ಪ್ರಿಯವಾದ ಸತ್ಯವನ್ನು ಆಡಬೇಕು. ಮಾತಿನ ಘಾಯವು ಸತ್ತರೂ ಮಾಯುವದಿಲ್ಲವಾದ್ದರಿಂದ ಬಿರುನುಡಿಗಳನ್ನೆಂದಿಗೂ ಉಪಯೋಗಿಸಕೂಡದು. ಸುಮ್ಮನೆ ಭೂಮಂಡಲವನ್ನು ರೇಗಿಸಿ ಏನು ಪ್ರಯೋಜನ? ಕೇಳುವವರಿದ್ದರೆ ಬುದ್ಧಿಯನು ಹೇಳುವದು. ಅದರಂತೆಯೇ ಮುಕ್ತಿಕಾಮನು ತನ್ನ ಸ್ವಾಧ್ಯಾಯವನ್ನು ಮರೆಯಬಾರದು. ಅರ್ಥದ ಮರ್ಮವನರಿದು ಓದುತ್ತಿರಬೇಕು. ಯಾಕಂದರೆ ಓದಿನಿಂ ಒಡಲನರಿದಡೆ ಸಿಪ್ಪಿಯು ಕಬ್ಬಾದಂತೆ ಎಂದು ಸರ್ವಜ್ಞನು ಹೇಳುವನು.

೫ ಮಾನಸ ತಪಃ— ಮುಕ್ತಿಕಾಮನ ಮನಸ್ಸು ಯಾವಾಗಲೂ ಪ್ರಸನ್ನವಾದದ್ದಿರಲಿಕ್ಕೆ ಸಾಕು. ಮನೆಯು ಸುಟ್ಟರೂ ಒಳಗಿನ ಮನುಜನು ಬೆಯ್ಯದಂತೆ ಕಡುತಾಪಗಳು ಮುತ್ತಿದರೂ ಆತನ ಮನಸ್ಸು ತಣ್ಣಗಿರಬೇಕು. ಎಲ್ಲರೂ ಒಯ್ದು ಕಲ್ಲು ಕೊಂಡು ಒಗೆದರೂ ಅವರ ಮೇಲೆ ಕೋಪಿಸಬಾರದು. ಶ್ವಾನನ ಬೊಗಳಿಕೆ ಆನೆಗೆ ಗಾನವಿರುವಂತೆ ಹೀನನ ನಿಂದೆಯು ಮುಮುಕ್ಷುವಿಗೆ ಆನಂದವನ್ನೇ ಕೊಡಬೇಕು. ಹೀಗೆ ಚಿತ್ತ ಚಿತ್ತಸಮರಸವಿಲ್ಲದೊಡೆ ವೇದಶಾಸ್ತ್ರಾಗಮಗಳ ಅಭ್ಯಾಸವು ಬರೇ ಬೂದಿಯಲ್ಲಿಯ ಹೋಮ. ಆದರಿಂದ ಯಾವ ಪ್ರಯೋಜನವೂ ಇಲ್ಲ.

ಈ ರೀತಿ ಮನಸ್ಸು ಸ್ಥಿರವಾಗಬೇಕಾದರೆ ಆತ್ಮಸಂಯಮನವು ಅಗತ್ಯ. ಪಂಚೇಂದ್ರಿಯಗಳನ್ನು ತನ್ನ ವಶಕೆ ತಂದಾತನು ನಿಜವಾಗಿ ಧನ್ಯನು. ಕಣ್ಣು, ನಾಲಿಗೆ, ಮನವು ತನ್ನದಲ್ಲ. ಇವು ಮೂರು ತಮ್ಮನ್ನು ಕೊಲ್ಲುವ ವೈರಿಗಳು. ಆದುದರಿಂದ ಕಚ್ಚಿ ಕೈ ಬಾಯಿಗಳನ್ನು ಇಚ್ಛೆಯೊಳಟ್ಟು ಹೆಣ್ಣು ಹೊನ್ನು ಮಣ್ಣುಗಳನ್ನು ಬಿಟ್ಟರೆ ಮನಸ್ಸು ಅಚಲವಾಗಿ ನಿಲ್ಲುವದು.

ಅಂತೂ ಈ ತಪಸ್ಸನ್ನೂ ಅದರಂತೆಯೇ ಎಲ್ಲ ಕಾರ್ಯಗಳನ್ನು ಆಡದೇ ಮಾಡುವವನು ಉತ್ತಮನು. ತನ್ನ ನಡೆನುಡಿಗಳಲ್ಲಿ ವಿವೇಕವನಿಟ್ಟು ಪ್ರತಿಯೊಂದು ಹೆಜ್ಜೆಯನ್ನು ಎಚ್ಚರದಿಂದಿಡುವ ಜಾಣನು ಲೋಕಕ್ಕೆ ಆರಾಧ್ಯನಾಗುತ್ತಾನೆಂದು ಸರ್ವಜ್ಞನು ಖಂಡಿತವಾಗಿ ಸಾರುತ್ತಾನೆ.

೬ ಸಚ್ಛಿಷ್ಯನು:— ಈ ತ್ರಿವಿಧ ತಪಸ್ಸಿನಿಂದ ಪೂತನಾದ ಮುಮುಕ್ಷುವು ಸಚ್ಛಿಷ್ಯನಾಗಲು ಯೋಗ್ಯನಾಗುವನು. ಯಾಕಂದರೆ ತನುವನ್ನು

ಮೀಸಲಿಟ್ಟು ಈಶನನ್ನು ನೆನೆದರೆ ಕೈಲಾಸವು ಸಮೀಪಿಸುವದು. ಇಂದ್ರಿಯಗಳನ್ನು ಬಿಗಿಹಿಡಿಯದ ಉಂಡಾಡಿಗಳಿಗೆ ಸ್ವರ್ಗವು ಸಿಗಬೇಕಾದರೆ ಅದನ್ನೇನು ರಂಡೆಯಾಳುವಳೇ? ಎಂದು ಸರ್ವಜ್ಞನು ಕೇಳಿರುವನು. ಹಸಿಯ ಸಮಿಧೆಗಳನ್ನು ಹೊಸೆದರೆ ಕಿಚ್ಚಾಗದಂತೆ ವಿಷಯಂಗಳುಳ್ಳವನಿಗೆ ಗುರುಕರುಣವು ದೊರೆಯಲಾರದು. ಭಕ್ತಿ ಇಲ್ಲದ ಶಿಷ್ಯನಿಗೆ ಒತ್ತಿ ಉಪದೇಶವನ್ನು ಕೊಟ್ಟು ಉಪಯೋಗವಿಲ್ಲ. ಸಚ್ಛಿಷ್ಯನು ಸುರಧೇನುವಿನಂತಿದ್ದ ಗುರುವನ್ನು ಕರೆದು ಉಂಡು ಶಾಶ್ವತವಾದ ಆನಂದವನ್ನು ಪಡೆಯತಕ್ಕದ್ದು.

೭. ಸದ್ಗುರು— ಯಾವದೇ ಶಾಸ್ತ್ರವನ್ನು ಕಲಿಯಬೇಕಾದರೂ ಅದಕ್ಕೆ ಗುರುವಿಲ್ಲದೆ ಸಾಗುವದಿಲ್ಲ. ಹೀಗಿರಲು ಎಲ್ಲ ಶಾಸ್ತ್ರಗಳ ತಳಹದಿಯಾದ ಅಧ್ಯಾತ್ಮ ಶಾಸ್ತ್ರವನ್ನು ಗುರುವಿಲ್ಲದೆ ಅರಿತುಕೊಳ್ಳುವದು ಹೇಗೆ ಸಾಧ್ಯವಾದೀತು? ಮುಂಡೆ ಬೋಳಿಸಿಕೊಂಡು ಕೈಯಲ್ಲಿ ದಂಡವನ್ನು ಹಿಡಿದು ಹೆಂಡತಿಯ ಬಿಟ್ಟು ತೆರಳಿದರೆ ಆತ್ಮಜ್ಞಾನವು ಪ್ರಾಪ್ತವಾಗುವಂತಿಲ್ಲ. ಅದಕ್ಕೆ ಗುರುಮುಖವೇ ಬೇಕು. ಒಳ್ಳೆಯ ಗುರುವಿನುಪದೇಶವಿಲ್ಲದೆ ಮುಕ್ತಿಯು ಸಿಗಲಾರದು. ಮರದೊಳಗಿನ ಬೆಂಕಿಯು ತನ್ನ ತಾನರಿಯದಂತೆ ದೇವರು ತನ್ನಲ್ಲಿದ್ದರೂ ಸದ್ಗುರು ತೋರದೆ ಅದು ತಿಳಿಯುವದಿಲ್ಲ. ಸಂಸಾರತಾಪದಿಂದ ಬಳಲುತ್ತಿದ್ದವರು ಗುರುವಿಗೆ ಶರಣು ಹೋದರೆ ಅವರ ಆಪತ್ತು ಅಳಿದು ಕರ್ಪುರದ ಬೆಟ್ಟ ಸುಡುವಂತೆ ಅವರ ಪೂರ್ವ ಕರ್ಮವು ಸುಟ್ಟುಹೋಗುವದು. ಇಂಥ ಗುರುವಿನ ವಿಸ್ತಾರವನ್ನು ಎಷ್ಟೆಂದು ಬಣ್ಣಿಸಬೇಕು? ಅವನು ಬ್ರಹ್ಮಾಂಡದಲ್ಲಿ ಒಳಗೆ ಹೊರಗೆ ಬೆಳಗಿ ಮೆರೆಯುತ್ತಿರುವನು. ಸಾಮಾನ್ಯ ಬಂಧುಗಳು ಬಂದು ಉಂಡು ಹೋಗುವರು. ಅವರು ಬಂಧನವನ್ನು ಕಳೆಯಲರಿಯರು. ಜಗಕೆಲ್ಲ ಮುಕ್ತಿಯನ್ನು ಕೊಡುವ ಗುರುವಿಂದ ಮಿಗಿಲಾದ ಬಂಧುಗಳುಂಟೇ? ಹರಭಕ್ತಿಯುಳ್ಳ ಗುರುವಿಗೆ ನರದೇವನೆಂದೆನ್ನಬಹುದು. ತನ್ನ ಪರರೂಪಲ್ಲಿ ನಿಂದು ನರರಿಗೆ ನೆರವೀಯಲು ಅರಿಯದೆ ದೇವನು ಗುರುವಿನ ರೂಪವನ್ನು ತಾಳುತ್ತಾನೆ. ಇಂಥವನಿಗೆ ಈ ಜಗತ್ತಿನಲ್ಲಿ ಸರಿಯಾದವರಾರು? ಸುರತರುವು ಮರವಲ್ಲ. ಸುರಭಿಯು ಆಕಳಲ್ಲ. ಪರುಷವು ಪಾಷಾಣವಲ್ಲ. ಅದರಂತೆಯೇ ಗುರುದೇವನು ಸಾಮಾನ್ಯ ಮನುಷ್ಯನಲ್ಲ.

---

ಮುಂದೆ ಸಾಗುವದು.

ಭಕ್ತನ ಮನೆಗೆ ಆವನಾದರೊಬ್ಬ ಲಿಂಗಪೂರಿತನಾದ ಜಂಗಮವು ಬಂದ ಕಾಲಕ್ಕೆ ಅವನ ಸಮಯಾಚಾರ ಸಮಯ ಭಕ್ತಿಯನ್ನು ಅರಿತು ಅದ ರಂತೆ ನಡಿಸಿ ಆದರ ಮೂಲಕ ತನ್ನ ಆಚಾರ ಮತ್ತು ತನ್ನ ಭಕ್ತಿ ಯನ್ನು ದೃಢಪಡಿಸಿಕೊಳ್ಳಬೇಕೆಂದು ವಚನಕಾರನು ಇಲ್ಲಿ ಅಭಿಪ್ರಾಯ ತಾಳಿದ್ದಾನೆ. ಸಮಯಾಚಾರ ಸಮಯಭಕ್ತಿ ಎಂದರೆ ಷಟ್‌ಸ್ಥಲದ ಪ್ರಕಾರ ಪ್ರತಿಯೊಬ್ಬನ ಭಕ್ತಿ ಮತ್ತು ಆಚಾರ ಇವುಗಳಲ್ಲಿ ಪ್ರಗತಿಯು ಉಂಟಾದ ಹಾಗೆ ಅವನಲ್ಲಿ ಸ್ಥಿತ್ಯಂತರವು ಪ್ರಾಪ್ತವಾಗುವದುಂಟು. ಈ ಸ್ಥಿತ್ಯಂತರದ ತರಹವನ್ನು ಭಕ್ತನು ಜಂಗಮನಿಂದ ಅರಿತುಕೊಂಡು ತನ್ನ ಮನಸ್ಸಿನ ಸ್ಥಿತಿಯಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳುತ್ತ ಹೋಗ ಬೇಕು. ಇದೇ ಸಮಯಾಚಾರವನ್ನು ಅರಿತು ವರ್ತಿಸುವದು ಇದೆ. ಹೀಗೆ ಮಾಡುವದೇ ಲಿಂಗಪೂಜೆಯು ಅಥವಾ ತನ್ನಲ್ಲಿ ಲಿಂಗವನ್ನು ಬರಮಾಡಿಕೊಳ್ಳುವಿಕೆಯು. ಈ ರೀತಿಯನ್ನು ಬಿಟ್ಟುಕೊಟ್ಟು ತನ್ನಷ್ಟಕ್ಕೆ ತಾನೆ ಲಿಂಗಪೂಜೆಯನ್ನು ಮಾಡಿಕೊಂಡರೆ, ಇದು ಸತ್ಯರು ನಡೆಯ ತಕ್ಕ ನ್ಯಾಯವಾದ ಪದ್ಧತಿಯಲ್ಲ. ಲಿಂಗಿಯು ತನ್ನಷ್ಟಕ್ಕೆ ತಾನೇ ಪೂಜೆಮಾಡಿ ಕೊಂಡು ಲಿಂಗಧ್ಯಾನದಲ್ಲಿದ್ದರೆ ಫಲಕಾರಿಯಲ್ಲವೆಂದು ಷಟ್‌ಸ್ಥಲದ ತತ್ವ ಗಳಿವೆ. ಅವನು ಗುರುಲಿಂಗಜಂಗಮದ ಉಪಯೋಗಮಾಡಿಕೊಳ್ಳತ ಕ್ಕದ್ದು. ಇವು ಅವನ ಆಚಾರಕ್ಕೆ ಅವಶ್ಯವಾದವುಗಳು. ಅಂದರೆ ಅವನು ಗುರುಲಿಂಗಜಂಗಮದೊಡನೆ ಶಿವಾನುಭವದಲ್ಲಿದ್ದುಕೊಂಡು ತನ್ನ ಹೆಚ್ಚು ವಿಕೆಯನ್ನು ಮಾಡಿಕೊಳ್ಳಬೇಕು. ಹೀಗೆ ಮಾಡದೆ ಹೋದರೆ ಪ್ರತ್ಯಕ್ಷ ವಾಗಿ ಕಣ್ಣಮುಂದೆ ದ್ರವ್ಯದ ನಿಧಿಯು ಇರುತ್ತಿರಲಿಕ್ಕೆ ಅದನ್ನು ಕಾಣದೆ ಸಂದಿಗೊಂದಿಗಳಲ್ಲಿ ಅದನ್ನು ಹುಡುಕಲಿಕ್ಕೆ ಹೋಗುವ ಕುರುಡನಂತೆಯೇ ಇವನ ಸ್ಥಿತಿಯು ಎಂದು ಹೇಳಿರುವನು.

**ವಚನಃ**— ೧೨೦. ನೇಮಸ್ತನೇನು ಬಲ್ಲನಯ್ಯ ಲಿಂಗದ ಕುರುಹ? ಸೂಳೆಯ ಮಗನೇನು ಬಲ್ಲನಯ್ಯ ತಂದೆಯ ಕುರುಹ? ಜಂಗಮದ ಅಸುವ ತೊತ್ತಿನ ಮಗನೇನು ಬಲ್ಲನಯ್ಯ? ಇಂತಪ್ಪ ಅಂಗವೆ ಲಿಂಗ ಲಿಂಗವೆ ಅಂಗ, ಲಿಂಗವೆ ಜಂಗಮವು ಜಂಗಮವೆ ಲಿಂಗವೆಂದರಿಯದ ವನು ಭಕ್ತರೆಂದರೆ ಅಘೋರ ನರಕವೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ:**— ನೇಮಸ್ತನು ತಾನು ಆಚರಿಸುವ ನೇಮದ ಅಂತರಂಗವನ್ನು ಅರಿಯದೆ ಅದನ್ನು ಪಾಲಿಸುವದುಂಟು. ಸೂಳೆಯ ಮಗನು ತಾನು ಯಾರಿಗೆ ಹುಟ್ಟಿದೆನೆಂಬದನ್ನು ಹ್ಯಾಗೆ ಅರಿಯಲಾರನೋ ಹಾಗೆಯೇ ಈ ನೇಮಸ್ತನ ಇರವು. ಇವನು ತಾನು ಪಾಲಿಸುವ ನೇಮಗಳ ಹದವನ್ನು ಅರಿಯನು. ಹಾಗೆಯೇ ಜನರು ಬರೇ ಜಂಗಮ ಜಂಗಮವೆಂದು ಅನ್ನುವರು. ಆದರೆ ಇವರು ತೊತ್ತಿನ ಮಕ್ಕಳು. ಇವರಿಗೆ ಜಂಗಮದ ಅನುವು ತಿಳಿಯದು ಎಂದು ವಚನಕಾರನು ನಿಷ್ಠುರವಾಗಿ ಅಂದು ಅನ್ನುವದೇನೆಂದರೆ, ಅಂಗವು ಎಂದರೆ ಶರೀರದ ಬಾಹ್ಯ ಕ್ರಿಯೆಗಳು ಇವೇ ಲಿಂಗವಾಗಿವೆ, ಲಿಂಗವೇ ಅಂಗವಾಗಿದೆ, ಈ ಬಗೆಯ ಲಿಂಗವೇ ಜಂಗಮವು, ಜಂಗಮವೇ ಲಿಂಗವು ಹೀಗಿದ್ದು ಇದನ್ನು ತಿಳಿಯದವರು ಭಕ್ತರೆಂದರೆ ಅಘೋರ ನರಕವೆಂಬು ವಚನಕಾರನು ಅನ್ನುತ್ತಾನೆ. ಎಂದರೆ ಅಂಗ, ಲಿಂಗ, ಜಂಗಮ ಇವೆಲ್ಲವನ್ನು ತನ್ನಲ್ಲಿ ಸಾಮರಸ್ಯವನ್ನು ಮಾಡಿ ಆಚರಿಸಬೇಕೆಂದು ವಚನಕಾರನ ಮುಖ್ಯ ಭಾವವು. ಅಂಗವು ಬಾಹ್ಯ ಆಚರಣೆಗೆ ಸಂಬಂಧಪಡುತ್ತದೆ. ಲಿಂಗವು ಸೂಕ್ಷ್ಮ ಆಚರಣೆಗೆ ಸಂಬಂಧಪಡುತ್ತದೆ. ಇವೆರಡೂ ಅತ್ಯಂತ ನಿಕಟಸಂಬಂಧವಾದವುಗಳು. ಆದ್ದರಿಂದ ಅವುಗಳಲ್ಲಿ ಪರಸ್ಪರ ಸಂಬಂಧವನ್ನಿಟ್ಟು ಆಚರಿಸಿದ್ದಾದರೆ ಅಂಗಲಿಂಗದ ಗುಣಗಳು ತನ್ನಲ್ಲಿ ದೃಢಪಡುತ್ತ ಹೋಗುವವು. ಹೀಗೆ ದೃಢಪಟ್ಟು ಲಿಂಗದಲ್ಲಿ ಅತ್ಯುಚ್ಚತೆಯನ್ನು ಹೊಂದಿದವನಲ್ಲಿ ಲಿಂಗ ಜಂಗಮಗಳು ಸಾಮರಸ್ಯದಿಂದ ವರ್ತಿಸಹತ್ತುವವು. ಈ ಸ್ಥಿತಿಯನ್ನು ಅರಿತು ಆಚರಿಸದ ಭಕ್ತನಿಗೆ ನರಕವೆಂದು ವಚನಕಾರನು ಅಂದಿದ್ದಾನೆ.

**ವಚನ:**— ೧೨೧. ನೇಮಸ್ತನೇನ ಬಲ್ಲನಯ್ಯ ಲಿಂಗದ ಕುರುಹ? ಸೂಳೆಯ ಮಗನೇನ ಬಲ್ಲನಯ್ಯ ತಂದೆಯ ಕುರುಹ? ಭಕ್ತನಲ್ಲದವನ ಬಳಿಗೆ ಜಂಗಮ ಹೋದರೆ ಆ ಸೂಳೆಯ ಮಗನೇನ ಬಲ್ಲನಯ್ಯ ಜಂಗಮದ ಕುರುಹ? ಲಿಂಗಧ್ಯಾನ, ಜಂಗಮಧ್ಯಾನ ಇಂತೀ ಉಭಯವನರಿಯದವರ ಬಾಯಲ್ಲಿ ನಮ್ಮ ಪಡಿಹಾರಿ ಉತ್ತಣ್ಣಗಳ ಎಡದ ಪಾದರಕ್ಷೆಯಲಿ ಅವನ ಅಂಗುಳ ಮುಟ್ಟಿ ಹೊಡಿ ಎಂದಾತ ನಮ್ಮ ಅಂಬಿಗರಚೌಡಯ್ಯ.

**ಭಾವ:**— ಇದು ೧೨೦ ನೇ ವಚನದ ಭಾವವನ್ನೇ ಹೇಳುತ್ತಿದೆ. ಲಿಂಗ ಜಂಗಮವನ್ನು ಅರಿಯಬೇಕಾದಲ್ಲಿ ಲಿಂಗ ಧ್ಯಾನ ಜಂಗಮ ಧ್ಯಾನ

ಮಾಡಬೇಕೆಂದು ಹೇಳಿರುವನು. ಇಲ್ಲಿ ಲಿಂಗ ಜಂಗಮವೆಂದರೆ ತನ್ನಲ್ಲಿ ರುವ ಉಚ್ಚ ವಸ್ತುಗಳೆಂದು ವಚನಕಾರನ ಭಾವವು.

**ವಚನಃ**— ೧೨೨. ಗುರುವಿನೊಳಡಗಿರ್ದ ಭಕ್ತ ಪರವ ಕಂಡುದಿಲ್ಲ! ಲಿಂಗದೊಳಡಗಿರ್ದ ಭಕ್ತ ಜಂಗಮವ ಕಂಡುದಿಲ್ಲ! ಇವರಿಬ್ಬರ ಭಕ್ತಿ ಎಂತಾಯಿತ್ತೆಂದೊಡೆ. ಹುರಿ ಮಾಡಿದ ಹಗ್ಗದಂತಾಯಿತ್ತು ನೋಡಾ. ಅರುಹು ಆಚಾರವಿಡಿದು ಆಚರಿಸುವ ಸದ್ಭಕ್ತನು ಗುರುಲಿಂಗ ಜಂಗಮ ವನು ನೆರೆ ಕಂಡು 'ಸಮ್ಮತವಾಗಿ ಇಹಪರವೆಂಬ ಉಭಯ ಸಂಕಲ್ಪವ ನರಿತುದಿಲ್ಲ ಎಂದಾತ ನಮ್ಮ ಅಂಬಿಗರಚೌಡಯ್ಯನು.

**ಭಾವಃ**— ಭಕ್ತನು ಗುರುವಿನೊಳಗಡಗಿರಬೇಕು. ಭಕ್ತನು ಲಿಂಗ ದೊಳಗಡಗಿರಬೇಕು. ಗುರುವು ಬಾಹ್ಯ ಕ್ರಿಯೆಗೆ ಸಂಬಂಧಪಟ್ಟವನು. ಮತ್ತು ಲಿಂಗವು ಅಂತರಿಂದ್ರಿಯಗಳಿಗೆ ಸಂಬಂಧಪಟ್ಟದ್ದು ಇದ್ದು ಇವೆ ರಡರಲ್ಲಿ ಮಗ್ನನಾದ ಭಕ್ತನು ಹುರಿಮಾಡಿದ ಹಗ್ಗದಂತೆ ಆಗುವನೆಂದು ಅನ್ನುತ್ತಾನೆ. ಅಂದರೆ ಅವನು ಅಷ್ಟು ಬಲಶಾಲಿಯಾಗುವನು. ಭಕ್ತನು ಗುರುವಿನ ಮೂಲಕ ಕ್ರಿಯೆಗಳ ರೀತಿಯನ್ನು ಅರಿಯಬೇಕು, ಲಿಂಗದ ಮೂಲಕ ಅರುಹನ್ನು ಅರಿಯಬೇಕು. ಹೀಗೆ ಇವುಗಳನ್ನು ತಿಳಿದು ಆಚ ರಿಸುವವನಾದ್ದರಿಂದ ಭಕ್ತನು ಗುರುಲಿಂಗ ಜಂಗಮವನ್ನು ತನ್ನಲ್ಲಿ ಒಳ ಕೊಳ್ಳುವನು. ಹೀಗೆ ಇವುಗಳನ್ನು ಕಂಡದ್ದಾದರೆ ಅವನಿಗೆ ಇಹವೂ ಇಲ್ಲ. ಪರವೂ ಇಲ್ಲ. ಅವನು ನಿಂವಯ ಸ್ಥಿತಿಯನ್ನು ಹೊಂದುವನೆಂದು ವಚನಕಾರನು ಗುರುಲಿಂಗ ಜಂಗಮರ ವಿವರವನ್ನು ವಿವರಿಸಿರುವನು.

**ವಚನಃ**— ೧೨೩. ಜಂಗಮದ ಪಾದತೀರ್ಥವು ಎನ್ನಂಗದೋಷವ ಕಳೆಯಿತಯ್ಯ. ಜಂಗಮದ ಪಾದತೀರ್ಥವು ಲಿಂಗಕ್ಕೆ ಪ್ರಾಣಪ್ರತಿಷ್ಠೆಯಾ ಯಿತಯ್ಯ. ಜಂಗಮದ ಪಾದತೀರ್ಥವು ಸಂಗನ ಶರಣರಿಗೆ ಮುಕ್ತಿಪಥವ ತೋರಿತಯ್ಯ. ಇಂತಪ್ಪ ಜಂಗಮದ ಪಾದತೀರ್ಥಕ್ಕೆ ಅಂತಪ್ಪ ಹಿರಿ ಯರು ತಮ್ಮ ಗರುವಿಕೆಯ ಬಿಟ್ಟು ದೀರ್ಘದಂಡ ನಮಸ್ಕಾರವ ಮಾಡಿ ಜಂಘೆಯನಿಕ್ಕಿ ನಡೆದುಬಂದು ಕೊಂಡೊಡೆ, ಆತನೇ ಕಂಗಳ ಮೂರುಳ್ಳ ದೇವನೆಂಬೆ. ಹಾಗಲ್ಲದೆ ಅಂಧಕನಂತೆ ಪಂಗುಳನಂತೆ ತಾನಿದ್ದಲ್ಲಿ ಅಂಗೈ ಯಾಂತು ಕೊಂಬ ಚೆಂಗಿ ಮೂಳ ಮುಕೊರೆಯ ಹೊಲೆಯರ ಕಂಡರೆ ನೆತ್ತಿಯ ಮೇಲೆ ಟೊಂಗ ಟೊಂಗನೆ ಹೊಡೆ ಎಂದಾತ ಅಂಬಿಗರಚೌಡಯ್ಯ.

**ಭಾವ:—** ಜನರು ಜಂಗಮದ ಪಾದತೀರ್ಥ ಪ್ರಸಾದವನ್ನು ತೆಗೆದು ಕೊಳ್ಳಬೇಕೆನ್ನುವರು. ಜಂಗಮವನ್ನು ಸಲಿಸಬೇಕೆನ್ನುವರು. ಪಡಕೊಳ್ಳ ಬೇಕೆನ್ನುವರು. ವೀರಶೈವರಲ್ಲಿ ಈ ಪಾದೋದಕದ ವಿಧಾನವು ಬಹು ವಿಶಿಷ್ಟತೆರನಾಗಿರುತ್ತದೆ. ಈ ಗುರುಲಿಂಗ ಜಂಗಮನ್ನೆಲ್ಲ ತನ್ನಲ್ಲಿ ಒಳಗು ಮಾಡುವಂತೆ ಈ ವಿಧಾನದ ರಚನೆಯು ಇರುತ್ತದೆ. ಇದರ ಮಾರ್ಗ ವನ್ನು ಭಕ್ತನು ತಿಳಿದು ಆಚರಿಸಬೇಕು. ಹೀಗೆ ಆಚರಿಸಿದ್ದಾದರೆ ಜಂಗ ಮದ ಈ ಪಾದ ತೀರ್ಥವು ಅಂಗದ ದೋಷಗಳನ್ನು ಕಳೆಯುವದು. ಭಕ್ತನಲ್ಲಿ ಪ್ರಾಣಪ್ರತಿಷ್ಠೆಯಾದಂತೆ ಆಗುವದು. ಅಂದರೆ ಅವನಲ್ಲಿ ಅತ್ಯಂತ ಚೈತನ್ಯವು ಉತ್ಪನ್ನವಾಗುವದು. ಹೀಗೆ ಪಾದತೀರ್ಥವು ನಿಜವಾದ ಶರಣ ರಿಗೆ ಮುಕ್ತಿ ಮಾರ್ಗವನ್ನು ತೋರಿಸುವದು. ಇತರ ಅಂಗವಿಕಾರಿಗಳಿಗೆ ತೋರಿಸಲಾರದೆಂದು ವಚನಕಾರನ ಭಾವವು. ಇಂಥ ಪಾದೋದಕಕ್ಕೋ ಸ್ಕರ ಭಕ್ತರು ಎಂಥ ದೊಡ್ಡ ಸ್ಥಾನದಲ್ಲಿದ್ದರೂ, ಅವರು ತಮ್ಮ ದೊಡ್ಡ ಸ್ತಿಕೆಯನ್ನು ಬಿಟ್ಟುಕೊಟ್ಟು ವಿನೀತಭಾವರಾಗಿ ಜಂಗಮನಿಗೆ ಶರಣುಹಾಕಿ ಪಡೆದುಕೊಳ್ಳಬೇಕು. ಇಂಥವರು ಪರಮಾತ್ಮನ ಸ್ವರೂಪವು. ಹೀಗಿಲ್ಲ ದಿದ್ದರೆ ಅವರು ಕುರುಡರು, ಪಂಗುಳರು. ಸೊಕ್ಕಿನಿಂದ ಜಂಗಮರ ಕೂಡ ನಡೆದವರನ್ನು ಪರಮಾತ್ಮನು ಶಿಕ್ಷಿಸುವನೆಂದು ವಚನಕಾರನು ಅಂದಿದ್ದಾನೆ.



## ಅರ್ಪಣ ಮಾಡುವುದು.

**ವಿವರಣೆ:—** ವಚನಕಾರರು ಜಂಗಮನಿಗೆ ಬಹಳ ಮಹತ್ವಕೊಟ್ಟು ಆತನಿಗೆ ಅರ್ಪಿಸಬೇಕೆಂದು ಬಹಳವಾಗಿ ಉಪದೇಶಿಸುವರು. ಆದರೆ ಹೀಗೆ ಸ್ವೀಕರಿಸತಕ್ಕ ಜಂಗಮನ ಸ್ಥಿತಿಯ ವಿಷಯದಲ್ಲಿ ಮತ್ತು ಆತನ ಸ್ವರೂಪದ ವಿಷಯದಲ್ಲಿ ಅವರಲ್ಲಿ ಉಚ್ಚ ವಿಚಾರಗಳಿವೆ. ಹೀಗೆ ವರ್ತಿಸುವವರಿಗೆ ಮಾತ್ರ ಅರ್ಪಣಮಾಡಬೇಕೆಂದು ಅವರು ಒತ್ತಿ ಹೇಳುತ್ತಾರೆಯೇ ಹೊರತು, ಇತರ ಜಂಗಮರು ಇದಕ್ಕೆ ಅಪಾತ್ರರೆಂತಲೇ ಅವರ ಅಭಿಪ್ರಾಯವದೆ. ಸರಿಯಾಗಿ ನಡೆಯದ ದುರ್ವರ್ತನೆಯುಳ್ಳ ಜಂಗಮರನ್ನು ಅವರು ಅತ್ಯಂತ ಕಟುವಾದ ಶಬ್ದಗಳಿಂದ ತಮ್ಮ ವಚನಗಳಲ್ಲಿ ಹೀಯಾಳಿಸಿರುವರು. ಸರಿಯಾಗಿ ನಡೆಯುವ ಜಂಗಮನ ಮುಖವೇ ಲಿಂಗವೆಂದು ಅವರ ಹೇಳಿಕೆಯು. "ಲಿಂಗದ ಮುಖ ಜಂಗಮ" ಅಥವಾ "ಜಂಗಮ ಮುಖ ಲಿಂಗ" ವೆಂದು ಅವರು ಆಗಿಂದಾಗ್ಗೆ ಹೇಳುವದುಂಟು. ಜಂಗಮನು ಸದಾಚಾರಿಯಾಗಿ ಕಾಯಕವನ್ನು ಮಾಡುತ್ತ ಅದರ ಸಹಾಯದಿಂದಲೇ ಅವನು ಲೋಕೋದ್ಧಾರ ಕಾರ್ಯಗಳನ್ನು ಮಾಡತಕ್ಕದ್ದು. ಪೂರ್ವದ ವಚನಕಾರರ ಕಾಲದಲ್ಲಿ ಇದೇ ಜಂಗಮರ ರೀತಿಯಾಗಿತ್ತು. ಅವರು ಕೇವಲ ಭಿಕ್ಷುಕರಾಗಿರಲಿಲ್ಲ. ಹೀಗೆ ವರ್ತಿಸುವವರಿಗೆ ಮಾತ್ರ ಅರ್ಪಣಮಾಡಿ ಸಹಾಯ ಮಾಡುವದು ಭಕ್ತರ ಕರ್ತವ್ಯವಾಗಿದೆ. ಕಾಯಕದ ಜಂಗಮನು ಉಚ್ಚ ಧ್ಯೇಯವನ್ನಿಟ್ಟುಕೊಂಡು ಒಂದು ಕಾಯಕವನ್ನು ಮಾಡಿ ಆ ಕಾಯಕದಿಂದ ದೊರೆತ ಹಣದಿಂದ ತನ್ನ ಧ್ಯೇಯಕ್ಕೋಸ್ಕರ ದುಡಿಯುವವನಾಗಿರುವನು. ವಚನಕಾರರಲ್ಲಿ ಕಾಯಕವೆಂದರೆ ಜನರನ್ನು ಒಂದು ವಿಧದಿಂದ ಕಾಡಿಬೇಡುವದಿಲ್ಲ. ಕಾಯಕವು ಉಪಜೀವನದ ಹೋರೆಯಾಗಿದ್ದು ಆ ಹೋರೆಯಿಂದ ದೊರೆಕಿಸಿದ್ದನ್ನು ಲಿಂಗಾರ್ಥವಾಗಿ ಉಪಯೋಗಿಸತಕ್ಕದ್ದು. ಇದೇ ಕಾಯಕವೆನಿಸಿಕೊಳ್ಳುವದು. ಹೀಗೆ ವರ್ತಿಸುವವರೇ ಜಂಗಮಮುಖಲಿಂಗ ಎಂಬ ಅಭಿಧಾನಕ್ಕೆ ಪಾತ್ರರು. ಅರ್ಪಿಸಿದ್ದನ್ನು ಕೈಕೊಳ್ಳಲು ಯೋಗ್ಯರೆಂದು ವಚನಕಾರರ ಅಭಿಪ್ರಾಯವಿದೆ.

**ವಚನ:—** ೧೨೪. ಮೊಟ್ಟೆ ಮೊಟ್ಟೆ ಪತ್ರೆಯ ತಂದು ಒಟ್ಟಿ ಪೂಜಿಸಿದರೇನು, ಮನಶುದ್ಧವಿಲ್ಲದನ್ನಕ್ಕರ? ಮನ ಮಗ್ನವಾಗಿ ಶಿವಧ್ಯಾ

ನದಲ್ಲಿ ಕೂಡಿ ಒಂದೇ ದಳವ ಧರಿಸಿದರೆ ಶಿವನು ಒಲಿಯನೆ? ಇಂತು ಪೂಜೆಯ ಮಾಡುವದಕಿಂತಲು ಅದೇ ತೊಪ್ಪಲವನು ಕುದಿಸಿ ಪಾಕವ ಮಾಡಿದಲ್ಲಿ ಆ ಲಿಂಗವು ತೃಪ್ತಿಯಾಯಿತ್ತು. ಬರಿದೆ ಲಿಂಗವ ಪೂಜಿಸಿ ಜಂಗಮಕ್ಕೆ ಅನ್ನವ ಕೊಡದೆ ಲಿಂಗದ ಮುಖವು ಜಂಗಮವು ಎಂದು ತಿಳಿಯದೆ ತನು ಮನ ಧನವನು ಗುರುಲಿಂಗಜಂಗಮಕ್ಕೆ ಸವಿಸದೆ ಬಾಗಿಲಿಗೆ ಕಾವಲಿಕ್ಕಿ ಹೆಂಡಿರು ಮಕ್ಕಳು ಕೂಡಿಕೊಂಡು ತನ್ನ ತಾನೇ ತಿಂಬುವಂಥ ನೀಚ ಹೊಲೆಯರ ಮೂಗ ಸವರಿ ಮೆಣಸಿನ ಹಿಟ್ಟು ತುಪ್ಪವ ತುಂಬಿ ಪಡಿಹಾರಿ ಉತ್ತಣ್ಣಗಳ ಪಾದುಕೆಯಿಂದ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.

**ಭಾವಃ**— ಲಿಂಗವನ್ನು ಪೂಜಿಸಬೇಕೆಂದು ಅನೇಕರು ಪುಷ್ಪಗಳನ್ನು ಬುಟ್ಟಿ ಬುಟ್ಟಿ ತುಂಬ ತುಂಬಿಸಿ, ಬಹುವೇಳೆ ಅದರಲ್ಲಿ ಕಳೆಯುವರು. ಆದರೆ ಇವರ ಮನಸ್ಸು ಶುದ್ಧವಾಗಿರದಿದ್ದರೆ ಹೀಗೆ ಮಾಡಿದ ಪೂಜೆಯೆಲ್ಲ ವ್ಯರ್ಥವಾದುದೆಂದು ವಚನಕಾರನ ಭಾವವು. ಪೂಜೆಮಾಡುವಲ್ಲಿ ಮನಸ್ಸನ್ನು ಪರಮಾತ್ಮನಲ್ಲಿ ಇರಿಸಿ ಒಂದೇ ದಳವನ್ನು ಲಿಂಗದ ಮೇಲೆ ಇಟ್ಟರೆ ಸಾಕು, ಅದರಿಂದ ಪರಮಾತ್ಮನು ಒಲಿಯುವನು. ಭಕ್ತನು ಕಷ್ಟಪಟ್ಟು ಪೂಜೆ ಮಾಡುವದರಕಿಂತಲೂ ಕಾಯಕದಿಂದ ದುಡಿದು ದೊರೆದದ್ದು ಒಂದು ತೊಪ್ಪಲಲಾದರೂ ಚಿಂತೆ ಇಲ್ಲ, ಅದನ್ನು ಕುದಿಸಿ ತಿಂದರೆ ಲಿಂಗವು ತೃಪ್ತಿಯಾಗುವದು. ಆದ್ದರಿಂದ ವ್ಯರ್ಥವಾಗಿ ಲಿಂಗ ಪೂಜೆಯಲ್ಲಿ ಕಾಲಕಳೆಯಬಾರದು. ಆದರೆ ಅವನು ಜಂಗಮನಿಗೆ ಆಹಾರವನ್ನು ನೀಡಬೇಕು. ಯಾಕಂದರೆ ಲಿಂಗಕ್ಕೆ ಮುಖವು ಜಂಗಮವಿದೆ. ಆದ್ದರಿಂದ ಆತನಿಗೆ ಸಲ್ಲಿಸಿದ್ದು ಲಿಂಗಕ್ಕೆ ಹೋಗಿ ಮುಟ್ಟುವದು. ಅದರಂತೆಯೇ ಗುರುಲಿಂಗಜಂಗಮಕ್ಕೆ ಭಕ್ತನು ತನ್ನ ತನುಮನಧನಗಳನ್ನು ಅರ್ಪಿಸಬೇಕು. ಹೀಗೆ ಮಾಡದೆ ಭಕ್ತನು ತನ್ನ ಮನೆಯ ಬಾಗಿಲವನ್ನು ಹಾಕಿಕೊಂಡು ಯಾರಿಗೂ ಏನೂ ಕೊಡದೆ ತನ್ನ ಮಕ್ಕಳು ಮರಿಗಳೊಂದಿಗೆ ಗುಪ್ತವಾಗಿ ತಿಂದದ್ದಾದರೆ ಅವನು ಕಠಿಣವಾದ ಶಿಕ್ಷೆಗೆ ಪಾತ್ರನಾಗುವನೆಂದು ವಚನಕಾರನು ಅಂದಿದ್ದಾನೆ.

**ವಚನಃ**— ೧೨೫. ಹಾಡಿಮಾಡುವ ಹರಿಕೆಯು ಕೇಳು. ಕೂಡಿ ಮಾಡುವ ಕೂಡಿಕೆಯು ಕೇಳು. ಹಾಡಿ ಮಾಡಿ, ಕೂಡಿ ಮಾಡಿ, ಬದುಕಿಗೆ ಕೇಡು ತಂದುಕೊಳ್ಳಲೇತಕ್ಕೋ? ತನ್ನ ಬೇಡಲಿಕ್ಕೆ ಬಂದ ಲಿಂಗ

ಜಂಗಮದ ಇರವನರಿತು ನೀಡ ಕಲಿತರೆ ರೂಢಿಯೊಳಗೆ ಆತನೇ ಜಾಣ ನೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಅನೇಕರು ಪದಗಳನ್ನು ಮತ್ತು ಸ್ತೋತ್ರಗಳನ್ನು ಅನ್ಯತ್ರ ಹರಿಕೆ ಹೊತ್ತು ಪೂಜೆ ಮಾಡುವರು. ಬೇರೆ ಅನೇಕರು ಬಹುಜನರಿಗೆ ಊಟಕ್ಕೆ ಹೇಳಿ ಜನರನ್ನು ಕೂಡಿಸಿ ಅಟ್ಟಹಾಸದಿಂದ ಬಲು ಸಮಾರಂಭದಿಂದ ಪೂಜಾದಿ ಕಾರ್ಯಗಳನ್ನು ನೆರವೇರಿಸುವರು. ಹೀಗೆ ಮಾಡುವದೆಲ್ಲವೂ ವ್ಯರ್ಥ, ದುಡ್ಡಿನ ವ್ಯಯವೆಂದು ವಚನಕಾರನು ಅಂದಿರುವನು. ಜನರು ಹೀಗೆ ಯಾಕೆ ಮಾಡಬೇಕು? ಹೀಗೆ ಮಾಡದೆ ಲಿಂಗವೆಂದರೇನು ಜಂಗಮವೆಂದರೇನು ಎಂಬುದನ್ನು ಅವರು ಅರಿಯಬೇಕು. ಇದನ್ನು ಅರಿತು ಮಾಡಿದ್ದಾದರೆ, ಜಗತ್ತಿನಲ್ಲಿ ಜಾಣರೆನಿಸಿಕೊಳ್ಳುವರೆಂದು ವಚನಕಾರನು ಅಂದಿರುವನು.

**ವಚನ:**— ೧೨೬. ಸ್ವಲ್ಪ ಅಮೃತಾನ್ನವನೊಯ್ದು ಹುತ್ತವೆಂದು ಬಿಲದ್ವಾರದಲ್ಲಿ ಹೊಯ್ವ ತೊತ್ತಿಗೆಲ್ಲಿಯದೋ ಶಿವಾಚಾರ? ಅದು ಎಂತೆಂದೊಡೆ, ಕಲ್ಲನಾಗರ ಕಂಡರೆ ಹಾಲು ಹೊಯ್ಯೆಂಬಳು. ಬದುಕಿದ ನಾಗರ ಕಂಡರೆ ಕೊಲ್ಲು ಕೊಲ್ಲು ಎಂಬಳು. ಉಂಬ ದೇವರು ಬಂದರೆ ಇಲ್ಲವೆಂದು ಅಟ್ಟುವಳು. ಉಣ್ಣದ ಕಲ್ಲು ಪ್ರತಿಮೆಯ ಮುಂದಿಟ್ಟು ಉಣ್ಣು ಉಣ್ಣು ಎಂಬಳು. ಇಂಥ ವೇಷದ ಡಂಭ ತೊತ್ತಿಗೆ ವಿಚಾರಿಸದೆ ಲಿಂಗವ ಕೊಡಲಾಗದೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:**— ಅನೇಕರು ನಾವು ದಾನಮಾಡುವೆವೆಂದು ಸಕ್ಕರೆ ಬೆರಿಸಿದ ಅನ್ನವನ್ನು ಒಯ್ದು ಇರಿವೇ ಹುತ್ತಿನ ಮೇಲೆ ಇಡುವರು. ಇದು ಏತರ ದಾನ? ಜನರು ತಾವು ನಾಗರಹಾವಿನ ಪೂಜೆ ಮಾಡುವೆವೆಂದು ಜೀವವಿಲ್ಲದ ಕಲ್ಲನಾಗರ ಮೇಲೆ ಹಾಲು ಹೊಯ್ದು ಹೋಗುವರು. ಆದರೆ ಅವರು ಜೀವಂತ ಒಂದು ನಾಗರ ಹಾವನ್ನು ಕಂಡರೆ ಕೊಲ್ಲು ಕೊಲ್ಲು ಎಂದು ಕೋಲನ್ನು ತೆಗೆದುಕೊಳ್ಳುವರು. ಹಾಗೆಯೇ ಉಣ್ಣುವ ಜಂಗಮರು ಬಂದರೆ, ಇಲ್ಲವೆಂದು ಹೊರಗೆ ಅಟ್ಟುವರು. ಆದರೆ ಉಣ್ಣದ ಲಿಂಗದ ಪ್ರತಿಮೆಯ ಮುಂದೆ ನೈವೇದ್ಯವನ್ನು ಇಟ್ಟು ಉಣ್ಣೆಂದು ಅನ್ನುವರು. ಇದು ಏತರ ದಾನ? ಹೀಗೆ ಆಚರಿಸುವವರು ಲಿಂಗಧಾರಣಕ್ಕೆ ಅಯೋಗ್ಯರು. ಇವರು ವೇಷಧಾರಿಗಳಾದ ಡಂಭಾಚಾರಿಗಳೆಂದು ವಚನಕಾರನು ಅಂದಿರುವನು.

**ವಚನ:**— ೧೨೭. ದೇಹಾರವ ಮಾಡುವಣ್ಣಗಳಿರಾ, ಅಣ್ಣಗಳಿರಾ, ಒಂದು ತುತ್ತು ಆಹಾರವನಿಕ್ಕಿರಯ್ಯಾ! ದೇಹಾರಕ್ಕೆ ಆಹಾರವೇ ನಿಚ್ಚಣಿಕೆ. ದೇಹಾರವ ಮಾಡುತ್ತೆ ಆಹಾರವನಿಕ್ಕದಿರ್ದೊಡೆ, ಆಹಾರವಿಲ್ಲೇದನಂಬಿಗ ಚೌಡಯ್ಯ.

**ಭಾವ:**— ಅತ್ಯಂತ ಆಡಂಬರದಿಂದ ಸಮಾರಂಭಗಳನ್ನು ಮಾಡಬೇಕೆಂದು ಬಯಸುವ ಅಣ್ಣಗಳಿರಾ, ಹೀಗೆ ಮಾಡುವದಿದ್ದರೆ ಒಂದು ತುತ್ತು ಅನ್ನದಾನ ಮಾತ್ರ ಮಾಡಿದರೆ ಸಾಕು. ಅನ್ನದಾನವಿಲ್ಲದಿದ್ದರೆ ಆಡಂಬರಗಳು, ಸಮಾರಂಭಗಳು ವ್ಯರ್ಥವಿವೆ.

**ವಚನ:**— ಉದಯದಲೆದ್ದು ಪತ್ರೆಪುಷ್ಪಗಳಿಗೆ ಹೋಗುವ ಅಣ್ಣಗಳು ನೀವು ಕೇಳಿರೊ. ನೀವು ಗಿಡದ ವೈರಿಗಳೋ? ಗಿಡದ ದಾಯಾದ್ಯರೋ? ಹಸಿಯ ತೊಪ್ಪಲನೆ ತಂದು ಆ ದೇವರ ಮಸ್ತಕದ ಮೇಲೊಟ್ಟುವ ಆ ತೊಪ್ಪಲನೆ ತಂದು ಬಿಸಿಮಾಡಿ ಪಶುಪತಿ ಎಂಬ ಜಂಗಮಕ್ಕೆ ನೀಡಿದೊಡೆ ಆ ಜಂಗಮದ ಬಸಿರು ತುಂಬಿದೊಡೆ ಲಿಂಗದ ಹಸುವಡಗಿತೆಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವ:**— ಅನೇಕರು ನೇಮನಿಷ್ಠೆಯುಳ್ಳವರಾಗಿ ಉದಯಕಾಲದಲ್ಲಿ ಎದ್ದು ಲಿಂಗಪೂಜೆಗೆಂದು ಪತ್ರೆ ಪುಷ್ಪಗಳನ್ನು ತಂದಿಟ್ಟುಕೊಳ್ಳುವರು. ಈ ಪ್ರಕಾರ ಆ ಗಿಡಗಳೊಡನೆ ಹಗೆತನವೇಕೆಂದು ವಚನಕಾರನು ಅಂದಿರುವನು. ಹೀಗೆ ಮಾಡುವ ಪೂಜೆ ವ್ಯರ್ಥವೆಂದು ಆತನ ಭಾವವು. ಹೀಗೆ ಮಾಡುವದರಕಿಂತಲೂ ಹಸಿಯ ತೊಪ್ಪಲನ್ನೇ ಬಿಸಿ ಮಾಡಿ ಜಂಗಮಕ್ಕೆ ನೀಡಿ ಅವನ ಹಸಿವನ್ನು ಹೋಗಲಾಡಿಸಿದರೆ, ಲಿಂಗದ ಹಸಿವು ಹೋಗುವದು ಮತ್ತು ಪರಮಾತ್ಮನು ತೃಪ್ತಿಗೊಳ್ಳುವನು. ಭಕ್ತನಾದವನು ಸ್ವಾರ್ಥಿಯಾಗದೆ ದಾನಮಾಡಬೇಕೆಂದು ವಚನಕಾರನ ಮುಖ್ಯ ಭಾವವು.

**ವಚನ:**— ೧೨೮. ದೊಡ್ಡ ದೊಡ್ಡ ಶೆಟ್ಟಿಗಳ ಕಂಡು, ಅಡ್ಡಗಟ್ಟಿ ಹೋಗಿ ಶರಣಾರ್ಥಿ ಎಂಬ ಎಡ್ಡುಗಳ್ಳತನಕ್ಕೆ ತಮ್ಮ ಮಠಕ್ಕೆ ಬನ್ನಿ ಕುಡಿಯರೇ ಎಂಬರು. ಹೋಗಿ ಶರಣಾರ್ಥಿ ಭಕ್ತನೆಂದೊಡೆ ಕೇಳದ ಹಾಗೆ ಅಡ್ಡ ಮೋರೆಯನಿಕ್ಕಿಕೊಂಡು ಸುಮ್ಮನೆ ಹೋಗುವ ಹೆಡ್ಡ ಮೂಳರಿಗೆ ದುಡ್ಡೇ ಪ್ರಾಣವಾಯಿತ್ತು. ದುಡ್ಡಿಸ್ತರ, ಕುರುಹನರಿಯದೆ ಮೊಳ

ಪಾದದ ಮೇಲೆ ಹೊಡಕೊಡಕೊಂಡು ನಗುತಿರ್ದಾತ ನಮ್ಮ ಅಂಬಿಗರಚೌಡಯ್ಯ.

**ಭಾವಃ**— ಜಂಗಮನು ದೊಡ್ಡ ದೊಡ್ಡ ವರ್ತಕರನ್ನು ಕಂಡು ಅವರೆದುರಿಗೆ ಹೋಗಿ ಶರಣಾರ್ಥಿ ಎಂದೆನ್ನುವನು. ಆಗ ಆ ವರ್ತಕನು ಅವನಿಗೆ ತನ್ನ ಮನೆಗೆ ಬರಬೇಕೆಂದು ಠಕ್ಕುತನದಿಂದ ಅನ್ನುವನು. (ಭಕ್ತನ ಮನೆಗೆ ಎಂತವೆಂಬ ಹೆಸರು ಇಲ್ಲಿದೆ.) ಅದಕ್ಕೆ ಆ ಜಂಗಮನು ಆಶೆಬಟ್ಟು ಅವನ ಮನೆಗೆ ಹೋಗಿ ಎಲೋ ಭಕ್ತನೇ ಶರಣಾರ್ಥಿ ಎಂದೆನ್ನುವನು. ಇದಕ್ಕೆ ಶೆಟ್ಟಿಯು ಕೇಳಿಯೂ ಕೇಳದ ಹಾಗೆ ಅಡ್ಡ ಮೋರೆಯು ಹಾಕಿ ಸುಮ್ಮನೇ ಹೊರಟು ಹೋಗುವನು. ಇಂಥ ಭಕ್ತನಿಗೆ ದುಡ್ಡೇ ಪ್ರಾಣವು. ಲಿಂಗವು ಪ್ರಾಣವಲ್ಲ. ಹಾಗೆಯೇ ಈ ಜಂಗಮನು ಈ ಸಿರಿವಂತನ ತರಹವನ್ನು ಅರಿಯದೆ ಬೆನ್ನುಹತ್ತುತ್ತಾನೆ. ಇದೂ ಹಾಸ್ಯಾಸ್ಪದವೆಂದು ವಚನಕಾರನು ಅಂದಿದ್ದಾನೆ. ಈ ಉಭಯತರನ್ನೂ ವಚನಕಾರನು ಇಲ್ಲಿ ಹಳಿದಿರುವನು.

**ವಚನಃ**— ೧೩೦. ಕರದಲ್ಲಿ ಲಿಂಗವ ಪಿಡಿದುಕೊಂಡು ಕಣ್ಣು ಮುಚ್ಚಿ ಸರ ಜಪಮಾಲೆಯು ಬೆರಳಿಂದ ಎಳೆದೆಳೆದು ಎಣಿಸುತ್ತ ಗುರುಮೂರ್ತಿಯು ಧ್ಯಾನಿಸುತ್ತ ಕಂಡೆನೆಂಬುತ್ತ ಇರುವರೆ ಮೂಳರಿರಾ? ನಿಮಗೆಲ್ಲಿಯದೋ ಗುರುಧ್ಯಾನ? ವರ ಪರವಸ್ತುವಿಂಗೆ ಸರಿ ಎನಿಸಿಕೊಂಬ ಗುರುಸ್ವಾಮಿ ನಿಮ್ಮ ನೆರೆಹೊರೆ ಸರಿಸಮೀಪ ಗ್ರಾಮದಲ್ಲಿರಲು ಅವರನು ಲೆಕ್ಕಿಸದೆ ಉದಾಸೀನವ ಮಾಡಿ ಕಂಡು ನಿನ್ನ ಉಂಬ ಉಡುವ ಸಿರಿ ಸಂಪತ್ತಿನೊಳು ಅವರನು ಸತ್ಕರಿಸದೆ ಕರದಲ್ಲಿ ನೋಡಿ ಕಂಡಿಹೆನೆಂದು ಸಿರವಂ ಬಿಗಿದು ಕಣ್ಣನೆ ತೆರೆಯದೆ ಸ್ವರದಲಾಗ ಪಿಟಿ ಪಿಟ ಎನ್ನುತ್ತ ಅರಿದೆನೆಂಬ ಅರುವಿಂಗೆ ಸಿರದೂಗಿ ಬೆರಗಾಗಿ ನಗುತಿರ್ದ ನಮ್ಮ ಅಂಬಿಗರಚೌಡಯ್ಯನು.

**ಭಾವಃ**— ಅನೇಕರು ಕರದಲ್ಲಿ ಲಿಂಗವನ್ನು ಹಿಡಿದು ಕಣ್ಣುಮುಚ್ಚಿ ಜಪಮಾಲೆಯನ್ನು ಎಣಿಸುತ್ತ ಗುರುಮೂರ್ತಿಯ ಧ್ಯಾನಿಸುತ್ತ ಅವನನ್ನು ಕಂಡೆನೆಂದು ಹೇಳಿಕೊಂಡು ಸಮಾಧಾನ ಪಡುವರು. ಆದರೆ ಇವರಿಗೆಲ್ಲಿಯದು ಗುರುಧ್ಯಾನ? ಇವರಿಗೆ ಗುರುವು ದೊರಕಲಾರನು. ಆದರೆ ಆ ಶ್ರೇಷ್ಠ ವಸ್ತುವಾದ ಗುರುವು ತನ್ನ ಸಮೀಪವಲ್ಲಿಯೇ ಇರಲು ಆತ

೧೧೦

ನನ್ನು ಈಕ್ಷಿಸದೆ ಅವನ ಬೋಧಾಮೃತವನ್ನು ಸೇವಿಸದೆ ತನ್ನ ಶ್ರೀಮಂತಿಕೆಯಲ್ಲಿ ಅವನನ್ನು ಏನೂ ಸತ್ಕರಿಸದೆ, ಬರೇ ಲಿಂಗಮೂರ್ತಿಯನ್ನು ದಿಟ್ಟಿಸಿ ನೋಡುತ್ತ, ಶಿರಸ್ಸನ್ನು ಬಿಗಿಹಿಡಿದು ಪಿಟಿ ಪಿಟಿ ಎಂದು ಮಂತ್ರವನ್ನು ಉಚ್ಚರಿಸುತ್ತ ಪರಮಾತ್ಮನ ಜ್ಞಾನವಾಯಿತು ಎಂದು ಹೇಳಿಕೊಳ್ಳುವರು. ಇಂಥ ಮೂರ್ಖರನ್ನು ನೋಡಿ ನಾನು ಬೆರಗಾಗಿ ನಗುತ್ತಿದ್ದೆನೆಂದು ಅಂಬಿಗರ ಚೌಡಯ್ಯನು ಅಂದಿದ್ದಾನೆ.



## ಜಂಗಮನ ಆಚರಣೆ.

**ವಿವರಣೆಃ—** ವೀರಶೈವರು ಜಂಗಮನಿಗೆ ಅತ್ಯಂತ ಮಹತ್ವ ಕೊಟ್ಟಿರುವರು. ಆದ್ದರಿಂದ ಆತನು ಅತ್ಯುಚ್ಚ ವರ್ತನೆಯುಳ್ಳವನಿರಬೇಕೆಂದು ಅವರು ಆಗಿಂದಾಗ್ಗೆ ಒತ್ತಿ ಹೇಳುವದುಂಟು. ಮತ್ತು ಹೀಗೆ ನಡೆಯುದ ಜಂಗಮರನ್ನು ಅವರು ಅತ್ಯಂತ ಕಟುವಾದ ಶಬ್ದಗಳಿಂದ ದೂಷಿಸುತ್ತಾರೆ. ಜಂಗಮನಿಂದಲೇ ಇತರ ಭಕ್ತರಲ್ಲಿ ಧಾರ್ಮಿಕ ತಿಳುವಳಿಕೆಯು ಉಂಟಾಗಬೇಕಾದ್ದರಿಂದ ವಚನಕಾರರು ಈ ಪ್ರಕಾರ ಜಂಗಮರ ವಿಷಯವಾಗಿ ಅನ್ನುವದು ಸ್ವಾಭಾವಿಕವಾಗಿದೆ. ವಚನಕಾರರು ಹೊರ ವೇಷಕ್ಕೆ ಎಂದೂ ಮಹತ್ವ ಕೊಟ್ಟಿಲ್ಲ. ಆದರೆ ಆ ವೇಷಕ್ಕೆ ಸರಿಯಾಗಿ ವರ್ತನೆ ಇರಬೇಕೆಂದು ಹೇಳುವರು. ಈ ವರ್ತನೆ ಇಲ್ಲದವನು ಜಂಗಮವೆನ್ನಿಸಿಕೊಳ್ಳಲಾರನು. ಜಂಗಮವು ಕೇವಲ ಜನ್ಮದಿಂದ ಬಂದುದಲ್ಲ. ಉಚ್ಚ ಧಾರ್ಮಿಕ ವೃತ್ತಿಯಿಂದಲೇ ಅದು ಅವನಲ್ಲಿ ಬರತಕ್ಕದ್ದಾಗಿರುವದು.

**ವಚನಃ—** ೧೩೧. ಕಂಥೆ ತೊಟ್ಟವ ಗುರುವಲ್ಲ; ಕಾವಿ ಹೊತ್ತವ ಜಂಗಮವಲ್ಲ; ಶೀಲ ಕಟ್ಟಿದವ ಶಿವಭಕ್ತನಲ್ಲ; ನೀರು ತೀರ್ಥವಲ್ಲ; ಕೂಳು ಪ್ರಸಾದವಲ್ಲ. ಹೌದೆಂಬುವನ ಬಾಯ ಮೇಲೆ ಅರ್ಧಮಣದ ಪಾದರಕ್ಷೆಯ ತೆಗೆದುಕೊಂಡು ಮಾಸಿ ಕಡಿಮೆ ಇಲ್ಲದೆ ತೂಗಿ ತೂಗಿ ಟೊಂಕನೆ ಹೊಡೆ ಎಂದಾತ ನಮ್ಮ ಅಂಬಿಗರ ಚೌಡಯ್ಯ.

**ಭಾವಃ—** ಬಾಹ್ಯ ಚಿನ್ಹಗಳಿಂದ ಗುರುವಾಗುವದಿಲ್ಲ ಅಥವಾ ಜಂಗಮವಾಗುವದಿಲ್ಲ. ಅಥವಾ ಔಪಚಾರಿಕ ಹೊರಗಿನ ಕ್ರಿಯೆಗಳಿಂದಲೂ ಭಕ್ತನಾಗುವದಿಲ್ಲ. ಆದರೆ ಮನಸ್ಸಿನ ಪಾವಿತ್ರ್ಯದಿಂದಲೇ ಮನುಷ್ಯನು ಉಚ್ಚಸ್ಥಿತಿಗೆ ಬರುತ್ತಾನೆ. ಆದರಂತೆಯೇ ನೀರು ಮತ್ತು ಆಹಾರ ಇವುಗಳಲ್ಲಿಯೂ ಸ್ವತಃ ಸಿದ್ಧವಾದ ಪೂಜ್ಯತ್ವವು ಇರುವದಿಲ್ಲ. ಅವು ತೀರ್ಥ ಮತ್ತು ಪ್ರಸಾದವೆನ್ನಿಸಿಕೊಳ್ಳಬೇಕಾದರೆ ಮನುಷ್ಯನ ಭಾವಿಕತನದ ಮೇಲೆ ಅವಲಂಬಿಸಿದೆ. ಅಂದರೆ ಮನುಷ್ಯನ ಉಚ್ಚತರದ ಮನಸ್ಸಿನ ಸ್ಥಿತಿಯಿಂದಲೇ ಪಾವಿತ್ರ್ಯವು ಉತ್ಪನ್ನವಾಗುತ್ತದೆಂದು ವಚನಕಾರನ ಮುಖ್ಯ ಅಭಿಪ್ರಾಯವಿದೆ.

**ವಚನ**:--೧೩೨. ಈಶ ಲಾಂಛನವ ತೊಟ್ಟು ವ ನದ ವೇಷ ಲಾಂಛನವ ತೊಡಲೇತಕ್ಕೆ? ಇದು ನಿಮ್ಮ ನುಡಿ ನಡೆಗೆ ನಾಚಿಕೆಯಲ್ಲವೆ? ಅಂದಣ ಛತ್ರಾಭರಣ ಕರಿತುರಗಂಗಳ ಗೊಂದಣವೇತಕ್ಕೆ? ಅದು ಘನಲಿಂಗದ ಮೆಚ್ಚಲ್ಲೆಂದನಂಬಿಗ ಚೌಡಯ್ಯ.

**ಭಾವ**:-- ಪರಮಾತ್ಮನ ಚಿಹ್ನಗಳನ್ನು ಧರಿಸಿದ ಬಳಿಕ ಮನವಾದರೂ ಶುದ್ಧವಾಗಿರಬೇಕು. ಮನುಷ್ಯನು ಶುಚಿತ್ವದ ಬಾಹ್ಯ ಚಿಹ್ನಗಳನ್ನು ಮಾತ್ರ ಹೊರಬಾರದು. ಅವನಲ್ಲಿ ಕಾಪಟ್ಯಭಾವವಿದ್ದರೆ, ಅದು ಆತನ ನಡೆನುಡಿಗೆ ನಾಚಿಕೆಯಾದದ್ದು. ಮಠಾಧಿಪತಿಗಳು ಪಲ್ಲಕ್ಕಿ, ಛತ್ರ, ಆನೆ, ಕುದುರೆಗಳ ಆಡಂಬರವನ್ನು ಬಯಸುವರು ಈ ತೋಂದರೆಗಳು ಅವರಿಗೆ ಏತಕ್ಕೆ? ಇವುಗಳನ್ನು ಅವರು ಬಯಸಬಾರದು. ಇವುಗಳನ್ನು ಬಯಸುವದರಿಂದ ಶ್ರೇಷ್ಠವಾದ ಮಹಾಲಿಂಗವು ಅವರಲ್ಲಿ ಎಂದೂ ಒವಗಲಾರದು.

**ವಚನ**:— ೧೩೩ ಬ್ರಹ್ಮಕ್ಕೆ ಬಾಯ್ದೆರೆದು ಮಾತನಾಡಿ ಪರಬೊಮ್ಮದ ವೇಷವ ನುಡಿದು ಒಮ್ಮನ ಅಂಬಲಿಯನಿಕ್ಕೆಂದು ಹಂಬುತ ಹೊಲಬುಗೆಟ್ಟವರ ಕಂಡು ಅವರಿಗೆ ಒಲವರವಿಲ್ಲೆಂದ ಅಂಬಿಗರ ಚೌಡಯ್ಯ.

**ಭಾವ**:-- ಜಂಗಮರು ಬ್ರಹ್ಮದ ಮಾತನ್ನು ಬಹುವಾಗಿ ಜನರ ಮುಂದೆ ನುಡಿಯುವರು. ಹೀಗೆ ನುಡಿದು ಕಡೆಗೆ ಹೊಟ್ಟೆಗೆಂದು ಕ್ಷುದ್ರ ಜನರನ್ನು ಕಂಡು ಅವರನ್ನು ಯಾಚಿಸುವರು. ಇವರಿಗೆ ಪರಮಾತ್ಮನ ಒಲವು ಉಂಟಾಗಲಾರದು. ಜಂಗಮರು ಭಿಕ್ಷುಕರಾಗಿ ವರ್ತಿಸಿದರೆ, ಅವರ ಮಾನಕ್ಕೆ ಹಾನಿಯು. ಅವರು ಒಂದು ಕಾಯಕವನ್ನು ಹಿಡಿದು ವರ್ತಿಸಿದ್ದಾದರೆ ಸ್ವತಂತ್ರ ಜೀವಿಗಳಾಗಿ ಸುಖವಾಗಿ ಬಾಳುವರು. ಮತ್ತು ಅವರಿಗೆ ಪರಮಾತ್ಮನೂ ಒಲಿಯುವನು.

**ವಚನ**:— ೧೩೪. ಸಹಜವಯ್ಯ ಶಿವಗಣಂಗಳ ನುಡಿ ಸತ್ಯವು. ಪಾಷಂಡಿ ಪ್ರಪಂಚಿಗಳ ದಾಸಿವೇಶಿಯರ ಕಾಸಿಗಾಸೆ ಮಾಡುವ ಮೂಷಕರ ಪಶುರಕ್ಷಕರನೆಂತು ಮಹಂತಿನ ದೇವರೆನಬಹುದಯ್ಯ? ವೇಶಿಯಂತೆ ವೇಷವ ಹಲ್ಲಣಿಸಿಕೊಂಡು ಸರ್ವರಿಗೆ ಸುಮುತ ವಚನವ ನುಡಿದು, ಶಿವಭಕ್ತರನುಣ್ಣಿಸಿ ಬಣ್ಣಿಸಿ ಕಾಸುವೀಸಗಳನಿಸದುಕೊಂಡು ಪಾಶಬದ್ಧರಾಗಿ ಹೇಸಿಕೆಯ ಕಿಸುಕುಳದ ಮೂತ್ರದ ಕುಳಿಯಲ್ಲಿ ಹೊರಳುವ ಧೂರ್ತಲಾಂಛನಿಗಳು ಯಮಪುರದಲ್ಲಿ ಲೋಲರಾಗಿಪ್ಪರೆಂದಾತನಂಬಿಗ ಚೌಡಯ್ಯ.

**ಭಾವ:**— ಇಲ್ಲಿ ವಚನಕಾರನು ಹಿರೇಮಠದವರೆಂದು ಅಂದುಕೊಂಡು ದುರಾಚಾರದಲ್ಲಿರುವವರನ್ನು ನಿಂದಿಸಿರುವನು. ಇವರು ಪ್ರಾಪಂಚಿಕರಾಗಿ ವರ್ತಿಸುತ್ತ, ದಾಸಿವೇಶಿಯರ ಸಂಗಮಾಡುತ್ತ ಕಾಸಿಗಾಗಿ ಆಶೆಮಾಡುತ್ತ ಇರುತ್ತಾರೆ. ಇವರು ನಿಜವಾಗಿ ದನಕಾಯುವವರು. ಇವರಿಗೆ ಹಿರೇಮಠದವರೆಂದು ಹೇಗೆ ಅನ್ನಬೇಕು? ಹೇಗೆ ವೇಶ್ಯಾಸ್ತ್ರೀಯು ಅಂದಚಂದ ಮಾಡಿಕೊಂಡು ಒಯ್ಯಾರದಿಂದ ಇರುತ್ತಾಳೋ ಹಾಗೆ ಇವರು ಮಠಸ್ಥರ ವೇಷ ಹಾಕಿಕೊಂಡು ಜನರ ಮುಂದೆ ವಚನಗಳನ್ನು ಹೇಳುತ್ತ ಹಿಂದಿನ ಭಕ್ತರ ಚರಿತ್ರೆಗಳನ್ನು ಬಣ್ಣಿಸುತ್ತ ಭಿಕ್ಷವನ್ನು ಇಸಿದುಕೊಂಡು ಹೋಗುವರು. ಮತ್ತು ಹೀಗೆ ದೊರಕಿಸಿದ ಹಣವನ್ನು ವ್ಯಭಿಚಾರದಲ್ಲಿ ಹಾಳು ಮಾಡುವರು. ಇವರು ಕಡೆಗೆ ಯಮಪುರಕ್ಕೆ ಹೋಗುವದೇ ನಿಶ್ಚಯವು.

**ವಚನ:**— ೧೩೫. ಬ್ರಹ್ಮದ ಮಾತನಾಡಿ ಕನ್ನೆಯರ ಕಾಲದೆಸೆಯಲ್ಲಿ ಕುಳಿತಲ್ಲಿ ಪರಬೊಮ್ಮದ ಮಾತು ಅಲ್ಲಿ ನಿಂದಿತ್ತೆಂದನಂಬಿಗ ಚೌಡಯ್ಯ.

**ಭಾವ:**— ಜಂಗಮರು ಬರಿಯ ಬ್ರಹ್ಮದ ಮಾತನಾಡಿ ವ್ಯಭಿಚಾರ ಮಾಡುತ್ತ ತಿರುಗುವರು. ಇವರಿಗೆ ಆ ಬ್ರಹ್ಮದ ಮಾತು ಅಲ್ಲಿಯೇ ನಿಂತಿತು. ಆದರಿಂದ ಏನೂ ಉಪಯೋಗವಿಲ್ಲೆಂದು ವಚನಕಾರನ ಭಾವವು.

**ವಚನ:**— ೧೩೬. ರತಿಯಿಂದ ರತ್ನ, ಗತಿಯಿಂದ ವಾದ್ಯ, ಸದ್ಗತಿಯಿಂದ ಮುಕ್ತಿ, ನಿರ್ಗತಿಯಿಂದ ವಿರಕ್ತಿ, ಈ ನಾಲ್ಕರ ಮತಿಯ ತಿಳಿಯಬೇಕೆಂದ ನಂಬಿಗಚೌಡಯ್ಯ.

**ಭಾವ:**— ಮನಸ್ಸಿನ ಪ್ರೀತಿಯ ಮೂಲಕ ರತ್ನಕ್ಕೆ ಬೆಲೆಯು ಉಂಟಾಗುತ್ತದೆ. ಸರಿಯಾದ ಬಡಿಯುವಿಕೆಯಿಂದ ವಾದ್ಯದಲ್ಲಿ ಸೊಗಸಾದ ನಾದವು ಉತ್ಪನ್ನವಾಗುತ್ತದೆ. ಸತ್ಕಾರ್ಯಗಳನ್ನು ಮಾಡುವದರಿಂದ ಮುಕ್ತಿಯಾಗುತ್ತದೆ. ನಿರ್ಲೇಪ ಭಾವದಿಂದ ವಿರಕ್ತಿಯುಂಟಾಗುತ್ತದೆ. ಈ ನಾಲ್ಕರ ಹದವನ್ನು ಅರಿಯಬೇಕೆಂದು ವಚನಕಾರನು ಅಂದಿರುವನು. ವಿರಕ್ತನು ಏತರಲ್ಲಿಯೂ ಬೆರಿಸದೆ ವರ್ತಿಸಬೇಕೆಂದು ಅವನ ಮುಖ್ಯ ಭಾವವು.

**ವಚನ:**— ೧೩೭. ವೇದ ವೇದಾಂತರ ಶಾಸ್ತ್ರಸಂಪದರ ಆಗಮಕ್ಕತೀತರ ಪರಬ್ರಹ್ಮ ಸ್ವರೂಪರ ಪರಮವಿರಕ್ತರ ಕೂಡಿಕೊಂಡಿರುವ,

ತಾನರಿವಲ್ಲಿ ಅರಿವ, ಕೇಳುವಲ್ಲಿ ಎಡೆದೆರಪಿಲ್ಲದ, ಪದ ಪದಾರ್ಥಂಗಳಿಂದೆ ಕ್ರಿ ಕ್ರಿಯಾರ್ಥದಿಂದೆ ತತ್ವ ತತ್ವಾರ್ಥಂಗಳಲ್ಲಿ ಪದಚ್ಛೇದವ ಮಾಡುವ, ಪಾರಮಾರ್ಥಿಕರ ಪಾದವೇ ಪದವೆಂದನಂಬಿಗಚೌಡಯ್ಯ.

**ಭಾವಃ—** ಪರಮಾರ್ಥಿಕರಾದ ಜಂಗಮರು ಹೇಗೆ ನಡೆಯಬೇಕೆಂಬುದನ್ನು ವಚನಕಾರನು ಇಲ್ಲಿ ಹೇಳಿರುವನು ದುಷ್ಟ ಸಂಗತಿಯಿಂದ ದೂರಾಗಿದ್ದು ವೇದ ವೇದಾಂತಗಳನ್ನು ಅರಿತಂಥ ಶಾಸ್ತ್ರವನ್ನು ಬಲ್ಲಂಥ ಆಗಮಜ್ಞಾನವನ್ನು ಹೊಂದಿ ಅದಕ್ಕೆ ಮೀರಿ ನಿಂತಂಥ ಪರಬ್ರಹ್ಮಜ್ಞಾನವನ್ನು ಹೊಂದಿ ಆ ಜ್ಞಾನವೇ ತಾವಾಗಿರುವಂಥ ಪರಮ ವಿರಕ್ತರನ್ನು ಕೂಡಿಕೊಂಡು ಇರಬೇಕು. ಹಾಗೆಯೇ ಅವರು ಜ್ಞಾನಸಂಪಾದನೆಯನ್ನು ಮಾಡಿಕೊಳ್ಳಬೇಕು. ಜ್ಞಾನಿಗಳ ಅನುಭಾವವನ್ನು ಕೇಳುವಲ್ಲಿ ಏಕಾಗ್ರ ಚಿತ್ತದಿಂದ ಕೇಳಬೇಕು. ಪದ ಪದಾರ್ಥಗಳು ಕ್ರಿ ಕ್ರಿಯಾರ್ಥಗಳು ತತ್ವ ತತ್ವಾರ್ಥಗಳು ಇವುಗಳ ಮರ್ಮವನ್ನು ಅರಿಯಬೇಕು. ಈ ಬಗೆಯ ವೃತ್ತಿಯುಳ್ಳ ಜಂಗಮರ ಪಾದದ ಸಾನ್ನಿಧ್ಯವೇ ನಿಜವಾದ ಪದವೆಂದು ಅಂಬಿಗರ ಚೌಡಯ್ಯನು ಇಲ್ಲಿ ಅಂದಿರುವನು.

**ವಚನಃ—** ೧೩೮. ಅಯ್ಯಾ ನಾವು ಪರಮ ವಿರಕ್ತರು, ಪಟ್ಟದಯ್ಯನವರು, ಚರಮೂರ್ತಿಗಳು, ಪರದೇಶಿಗಳು, ಎಂದು ಶಂಖಗಿಳಿಲು ದಂಡಾಗ್ರ ಎಂಬ ಬಿರಿದು ಪಿಡಿದು, ಕಾವಿ ಕಾಷಾಯಾಂಬರವ ಹೊತ್ತು ಸರ್ವ ಕಾರ್ಯದಲ್ಲಿ ಶ್ರೇಷ್ಠರೆಂದು ಗರ್ವರಲ್ಲಿ ಕೊಬ್ಬಿ ಕಾಮನಾಟದಲ್ಲ ಕಲಕಿ, ಮನಸ್ಸಿನಲ್ಲಿ ದುರ್ಗುಣವನಿಟ್ಟುಕೊಂಡು ಮಾತಿನಲ್ಲಿ ನೀತಿಯ ಸೇರಿಸುತ್ತ, ಕಪಟವಲ್ಲಿ ಚರಿಸುವಂತಹ ತೊನ್ನ ಹೊಲಿಮಾದಿಗರ ಸಂಗ ಮಾಡಲಾಗದು. ಅವರ ಪ್ರಸಂಗವ ಕೇಳಲಾಗದು. ಅದೇನು ಕಾರಣವೆಂದರೆ ಗುರುಲಿಂಗಜಂಗಮವಾದ ಬಳಿಕ ಅಷ್ಟಾವರಣದಲ್ಲಿ ನಿಷ್ಠಾಪರರಾಗಿರಬೇಕು. ಪರಧನ ಪರಸತಿಯರ ಹಿಡಿಯೆನೆಂಬ ನೇಮದಲ್ಲಿ ಬಲ್ಲಿದರಾಗಿರಬೇಕು. ಶಿವಭಕ್ತರಾದವರ ಭವವ ಗೆಲಿಸಿ ಮೋಕ್ಷವ ಹೊಂದಿಸಬೇಕು. ಶಿವಲಾಂಛನವ ಹೊತ್ತ ಬಳಿಕ ಶಿವನಂತಿರಬೇಕು. ಬರಿದೆ ನಾನು ಮಹೇಶ್ವರನೆಂದು, ನಾನು ಶಿವಭಕ್ತನೆಂದು, ತನ್ನ ಹೃನ್ಮಂದಿರದಲ್ಲಿ ನೆಲಸಿದ ಚಿನ್ಮಯ ಜಂಗಮಲಿಂಗಕ್ಕೆ ತನುಮನಧನವೆಂಬ ತ್ರಿವಿಧ ಪದಾರ್ಥವನರ್ಪಿಸಿ, ತ್ರಿವಿಧ ಪ್ರಸಾದವ ಗರ್ಭೀಕರಿಸಿಕೊಂಡು, ಪ್ರಸನ್ನ ಪ್ರಸಾದವ ಸ್ವೀಕರಿಸಿ, ಪರತತ್ವ ಪ್ರಸಾದದಲ್ಲಿ ತಾನು ತಾನಾಗಲರಿಯದೆ

ಉಚ್ಚಂಗೀ ದುರ್ಗಿಗೆ ಬಿಟ್ಟ ಪೋತರಾಜನಂತೆ, ಮಾರು ಮಾರು ಜಡೆ ಗಳ ಬಿಟ್ಟು ಅಡಿನೊಳಗಿರುವ ಹಿರಿಯ ಹೋತಿನಂತೆ ಮೊಳ ಮೊಳ ಗಡ್ಡಗಳ ಬಿಟ್ಟು, ಡೊಂಬ ಜಾತಿಗಾರನಂತೆ ವೇಷವ ತೊಟ್ಟು, ಮೀಸೆಯ ಬೋಳಿಸಿಕೊಂಡು, ಕೈಪವ ಧರಿಸಿ, ಸಂಸ್ಕೃತ ಗೀರ್ವಾಣ ಭಾಷೆಯ ಕಲಿತು ಕಾಕ ಕುಟಿಲ ಕುಹಕದ ಗಾಳಿಪೂಜೆಯಿಂದ ಬಂದ ಸುಡುಗಾಡ ಸಿದ್ಧ ಯ್ಯಗಳಂತೆ ಗಿಡಮೂಲಿಕೆಗಳು ತಂತ್ರಮಂತ್ರ ಯಂತ್ರದ ಭಾಷೆಗಳ ಕಲಿತುಕೊಂಡು, ಪುರಜನರ ಮೆಚ್ಚಿಸಬೇಕೆಂದು, ಅಯ್ಯಾ ನಾವು ಕೆರೆ ಬಾವಿಯನಗಿಸಬೇಕೆಂದು, ಮಠಗುಡಿಯ ಕಟ್ಟಿಸಬೇಕೆಂದು, ಮಾನ್ಯದಲ್ಲಿ ಬಿಲ್ವಗಿಡಗಳ ಹಚ್ಚಿಸಬೇಕೆಂದು, ಮದುವೆ, ಅಯ್ಯಾಚಾರವ ಮಾಡಬೇ ಕೆಂದು, ಅನ್ನಕ್ಷೇತ್ರ ಅರವಟಿಗೆಯ ಇಡಿಸಬೇಕೆಂದು, ಪುರಾಣಗಳ ಹಚ್ಚಿ ಸಬೇಕೆಂದು, ಇಂತಪ್ಪ ದುರಾಸೆಯ ಮುಂದುಗೊಂಡು ನಾನಾ ದೇಶವ ತಿರುಗಿ, ಅರಸರ ಮದದಂತೆ ಗರ್ವದಿಂದ ಹೆಚ್ಚಿ, ಹೇಸಿ ಹೊಲೆಮಾದಿಗರ ಕಾಡಿ ಬೇಡಿ, ಹುಸಿಯನೆ ಬೊಗಳಿ ಒಬ್ಬನ ಒಲವ ಮಾಡಿಕೊಂಡು, ವ್ಯಾಪಾರ ಮರ್ಯಾದೆಯಲ್ಲಿ ಪೇಟಿಯಲ್ಲಿ ಕುಳಿತು ಅನಂತ ಮಾತುಗ ಳನಾಡುತ್ತ, ಸೆಟ್ಟಿ ಮುಂತಾದ ಅನಂತ ಕಳ್ಳ ಹಾದರಗಿತ್ತಿಯ ಮಕ್ಕಳ ಮಾತಿನಿಂದೊಲಿಸಿ, ಅವರು ಕೊಟ್ಟೊಡೆ ಹೊಗಳಿ, ಕೊಡದಿರ್ದೊಡೆ ಬೊಗಳಿ, ಆ ಭ್ರಷ್ಟ ಹೊಲೆಮಾದಿಗರು ಕೊಟ್ಟ ದ್ರವ್ಯಗಳ ತೆಗೆದುಕೊಂಡು ಬಂದು, ಕಡೆಗೆ ಚೋರರು ಒಯ್ದರೆಂದು ಮಠದೊಳಗೆ ಮಡಗಿಕೊಂಡು ಪರಸ್ತ್ರೀ ಯರ ಹಡಿಕಿ ಯೋನಿಯೊಳಗೆ, ಇಂದ್ರಿಯ ಬಿಟ್ಟು, ಕಾಮಕ್ರೋಧದಲ್ಲಿ ಮುಳುಗಿ ಮತಿಗೆಟ್ಟು, ಶಿವಪಥಕ್ಕೆ ದೂರಾಗಿ, ದುರಾಚಾರವ ಆಚರಿಸಿ, ನಡೆನುಡಿಗಳು ಹೊತರ್ಾಗಿ, ವ್ಯರ್ಥ ಹೊತ್ತುಗಳೆದು, ಸತ್ತುಹೋಗುವ ಜಡದೇಹಿ ಕಡುಪಾತಕ ಕತ್ತೆ ಹಡಿಕರಿಗೆ ಪರಮ ನಿರಂಜನ ಜಂಗಮ ಲಿಂಗ ದೇವರೆಂದು ಕರೆತಂದು, ಪಾದತೀರ್ಥ ಪ್ರಸಾದವ ತೆಗೆದುಕೊಂ ಬುವರಿಗೆ ಇಪ್ಪತ್ತೊಂದು ಯುಗ ಪರಿಯಂತರ ನರಕಕೊಂಡದಲ್ಲಿಕ್ಕುವ, ಇಂತಪ್ಪ ಜಂಗಮವನು ಪೂಜೆ ಮಾಡುವಂತಹ ಶಿವಭಕ್ತನು ಉಭಯ ತರ ಮೂಗ ಸೀಳಿ ಮೆಣಸಿನ ಹಿಟ್ಟು ತುಪ್ಪವ ತುಂಬಿ, ಪಡಿಹಾರಿಗಳೆ ಡದ ಪಾದುಕೆಯಿಂದೆ ಪಡಪಡನೆ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

ಭಾವಃ— ಇಲ್ಲಿ ವಚನಕಾರನು ಮಠಾಧಿಪತಿಗಳ ದುರ್ವರ್ತನೆಗ ಳನ್ನು ವರ್ಣಿಸಿ ಹೀಗೆ ನಡೆಯುವವರನ್ನು ಚನ್ನಾಗಿ ಶಿಕ್ಷಿಸಬೇಕೆಂದು

ಅನ್ನುತ್ತಾನೆ. ಮಠಾಧಿಪತಿಗಳು ತಾವು ಪಟ್ಟದವರು, ಚರಮೂರ್ತಿ-
ಗಳು ವಿರಕ್ತಾಶ್ರಮದವರು, ದೇಶಿಕೇಂದ್ರರು ಎಂದು ಹೇಳಿಕೊಂಡು
ಶಂಖ, ದಂಡ ಮುಂತಾದ ಚಿನ್ಹಗಳನ್ನು ಹಿಡಿದುಕೊಂಡು, ಕಾವಿಕಾ
ಷಾಯಾಂಬರಗಳನ್ನು ಹೊದ್ದುಕೊಂಡು, ತಾವು ಎಲ್ಲರಿಗಿಂತಲೂ ಹೆಚ್ಚಿ
ನವರು ಶ್ರೇಷ್ಠರು ಎಂದು ಹೆಮ್ಮೆ ತಾಳುವರು. ಆದರೆ ಕಾಮವಾಸನೆಗೆ
ಗುರಿಯಾದಂಥ ದುರ್ಗುಣಗಳಲ್ಲಿ ಮುಳುಗಿದಂಥ ಮಾತಿನಲ್ಲಿ ಮಾತ್ರ
ನೀತಿಯನ್ನು ಹೇಳುತ್ತ ತಿರುಗುವಂಥ ಕಪಟಿಗಳ ಸಂಗವನ್ನು ಎಂದೂ
ಮಾಡಲಾಗದು. ಮತ್ತು ಅವರೊಡನೆ ಮಾತುಕಥೆ ಸಹ ಆಡಬಾರದು.
ಯಾಕಂದರೆ ಗುರುಲಿಂಗಜಂಗಮವಾದವರು ಅತ್ಯಂತ ನೀತಿಯಿಂದ ನಡೆ
ಯಬೇಕು. ಭಕ್ತರನ್ನು ಸನ್ಮಾರ್ಗಕ್ಕೆ ಹಚ್ಚಬೇಕು. ಇವರು ತಮ್ಮ
ಹೃದಯಮಂದಿರದಲ್ಲಿರುವ ಚಿನ್ಮಯ ಜಂಗಮಲಿಂಗಕ್ಕೆ ತಮ್ಮನ್ನು ಅರ್ಪಿ
ಸಿಕೊಂಡು ಪರತತ್ವ ಪ್ರಸಾದದಲ್ಲಿ ತಾವೇ ತಾವಾಗಿರಬೇಕು. ಹೀಗೆ
ಆಚರಿಸದೆ, ಉದ್ದುದ್ದ ಜಡೆಗಳನ್ನು ಬಿಟ್ಟುಕೊಂಡು ಗಡ್ಡಬಿಟ್ಟು, ಜಾತಿ
ಕಾರ ಡೊಂಬರಂತೆ ನಾನಾ ವೇಷಗಳನ್ನು ಧರಿಸಿಕೊಂಡು ಕೆಲವು ಸಂಸ್ಕೃತ
ಶ್ಲೋಕಗಳನ್ನು ಕಲಿತು. ಅವುಗಳನ್ನು ಹೇಳುತ್ತ ತಿರುಗುವರು. ಇಲ್ಲವೆ
ಸುಡಗಾಡಸಿದ್ಧರಂತೆ ಗಿಡಮೂಲಿಕೆ, ಯಂತ್ರ ತಂತ್ರಗಳನ್ನು ಕಲಿತು
ಕೊಂಡು ಜನರನ್ನು ಮೋಸಮಾಡುತ್ತ ಹೋಗುವರು. ಇಲ್ಲವೆ ಕೆರೆ
ಬಾವಿಗಳನ್ನು ಅಗಿಸುವೆವೆಂದು ಮಠ ಗುಡಿ ಕಟ್ಟಿಸುವೆವೆಂದು ಅಯ್ಯಾ
ಚಾರಮಾಡಿಸುವೆವೆಂದು ಪುರಾಣಹೇಳಿಸುವೆವೆಂದು ಹೀಗೆ ನಾನಾಪರಿ
ಸುಳ್ಳು ಹೇಳಿ ಹೊಲೆಯರು ವ್ಯಾಪಾರಸ್ತರು ಮುಂತಾದ ಪಾಪಿಷ್ಠ ಜನ
ರನ್ನು ಮಾತಿನಿಂದ ಒಲಿಸಿ ಅವರಿಂದ ದುಡ್ಡು ಎತ್ತಿ ತಮ್ಮ ಮಠದಲ್ಲಿ
ಅದನ್ನು ಹುಗಿದು ಅದನ್ನು ಯಾರೋ ಕಳ್ಳರು ಒಯ್ದರೆಂದು ಸುಳ್ಳು
ಸುದ್ದಿಯನ್ನು ಹರಿವಿ, ಹೀಗೆ ಕೂಡಿದ ಹಣದಿಂದ ಹಾದರಮಾಡುತ್ತ,
ಶಿವಪಥಕ್ಕೆ ದೂರಾಗಿ ದುರಾಚಾರವ ಮಾಡುತ್ತ ವ್ಯರ್ಥ ಸತ್ತುಹೋಗು
ವರು. ಇಂಥ ಜಡದೇಹಿಗಳಾದ ಮಠಾಧಿಪತಿಗಳು ನಿರಂಜನ ಜಂಗ
ಮಲಿಂಗವೇವರೆಂದು ತಿಳಿದು ಅವರನ್ನು ಕರೆತಂದು ಅವರ ಪಾದತೀರ್ಥ
ಪ್ರಸಾದವನ್ನು ಸೇವಿಸುವವರಿಗೆ ನರಕವೇ ಪ್ರಾಪ್ತಿ ಎಂದು ವಚನಕಾರನು
ಇಲ್ಲಿ ಅಂದಿದ್ದಾನೆ.

**ವಚನಃ**— ೧೩೯. ಸೋಮವಾರ ಹುಣ್ಣಿವೆ ಅಮಾವಾಸ್ಯೆ ಎಂದು
ಉಪವಾಸವಿರ್ದು ಶಿವನಿಗೆ ಅರ್ಪಿತ ಎಂದು ನುಡಿವರು. ಕಾಮ ಕ್ರೋಧ

ಮೋಹ ಮದಮತ್ಸರವರನಳಿಯರು. ಶಿವನ ನೆಲೆಯನರಿಯದೆ ಎನಗೆ ಗತಿಕೊಡುವ ಲಿಂಗವಿದೇ ಎಂದು ತಿಳಿಯದೆ ಗ್ರಾಮದ ಹೊರತಾಯ ದಲ್ಲಿರುವ ದೇವರುಗಳು ಅಧಿಕವೆಂದು ಪೂಜಿಸಿ ಅವಕಿಕ್ಕಿದ ಕೂಳ ತಾ ತಿಂಬುವನು. ಇನ್ನು ಸೋಮಧರಗರ್ಪಿತವೆಂದು ಭುಂಜಿಸುವವರ ತೆರ ನಂತೆ, ದೊಡ್ಡ ಗ್ರಾಮದ ಶೂಕರನು ಗಂಗೆಯಲ್ಲಿ ಮಿಂದು ಬಂದು ಅಮೇಧ್ಯವ ಭುಂಜಿಸಿದ ತೆರನಾಯಿತೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

**ಭಾವ**:— ಜಂಗಮರು ತಮ್ಮ ಸ್ಥಲಕ್ಕೆ ಅನುಗುಣವಾದ ಆಚಾರ ಗಳನ್ನು ಅರಿಯದೆ, ಸೋಮವಾರ ಹುಣ್ಣಿವೆ ಅಮಾವಾಸ್ಯೆ ಎಂದು ಉಪ ವಾಸ ಮಾಡುವರು. ಮತ್ತು ಶಿವನಿಗೆ ಅರ್ಪಿತವೆನ್ನುವರು. ಆದರೆ ಷಡ್ರಿಪುಗ ಳನ್ನು ದೂರಮಾಡಲಾರರು. ತಾವು ಧರಿಸಿದ ಇಷ್ಟಲಿಂಗದಲ್ಲಿ ಲಿಂಗಾಂಗ ಸಾಮರಸ್ಯತ್ವವನ್ನು ಹೊಂದಲರಿಯದೆ ಊರ ಹೊರಗಿರುವ ದೇವರುಗಳೇ ಅಧಿಕವೆಂದು ನಂಬಿ ಅವುಗಳನ್ನು ಪೂಜಿಸಿ ಅವಕ್ಕೆ ನೈವೇದ್ಯವನ್ನು ಕೊಟ್ಟು ಅದು ಪ್ರಸಾದವೆಂದು ಭುಂಜಿಸುವರು, ಮತ್ತು ಪರಮಾತ್ಮನಿಗೆ ಅರ್ಪಿತ ವೆಂಬುವರು. ಇಂಥ ಜನರ ಸ್ಥಿತಿಯು ಹಂದಿಯು ಗಂಗಾ ನದಿಯಲ್ಲಿ ಮಿಂದು ಹೇಸಿಕೆಯನ್ನು ತಿಂದಂತೆಯೇ ಸರಿ ಎಂದು ವಚನಕಾರನು ಇಲ್ಲಿ ಅಂದಿರುವನು.

**ವಚನ**:— ೧೪೦. ಕೇಳು ನೀನೆಲೊ ಮಾನವ, ಸೋಮವಾರ ಅಮಾವಾಸ್ಯೆ ಹುಣ್ಣಿವೆ ಎಂಬ ದೊಡ್ಡ ಹಬ್ಬಗಳು ಬಂದಿಹವೆಂದು ಮನೆಯ ಸಾರಿಸಿ ರಂಗವೋಲೆಯನಿಕ್ಕಿ ಆಸನವ ಬಲಿದು ಪತ್ರೆ ಪುಷ್ಪ ಮೊದಲಾದ ಅನಂತ ಸೌರಂಭವ ಸವರಿಸಿ ವಿರಕ್ತನ ಕರೆತಂದು ಪೂಜೆಯ ಮಾಡುವದಕ್ಕಿಂತಲೂ ಹೊರೆಯಲ್ಲಿ ಚರಿಸಾಡುವ ಕಾಳ ಶುನಕನ ತಂದು ಆ ಗದ್ದುಗೆಯಲ್ಲಿ ಪೂಜೆ ಮಾಡುವುದು ಮಹಾ ಲೇಸಯ್ಯ. ಅದೇನು ಕಾರಣವೆಂದಡೆ, ಆಣವಮಲ ಮಾಯಾಮಲ ಕಾರ್ಮಿಕ ಮಲಕ್ಕೆ ಹೊರ ತೆಂದು ಅಷ್ಟಮದ ವಿರಹಿತನೆಂದು ಷಡ್ಗುಣವ ಸಂಹರಿಸಿದವನೆಂದು ಶಾಸ್ತ್ರದಲ್ಲಿ ಸಂಪನ್ನನೆಂದು ಕ್ರಿಯೆಯಲ್ಲಿ ವೀರಶೈವನೆಂದು ನಿರಾಭಾರಿ ಎಂದು ಬಾಯಿಲೆ ಬೊಗಳಿ ಲೌಕಿಕದಲ್ಲಿ ಮಠವ ಮಾಡಿಕೊಂಡು ಮಾನ್ಯವ ಸಂಪಾದಿಸಿಕೊಂಡು ಅಶನಕ್ಕಾಶ್ರಯನಾಗಿ ವ್ಯಸನಕ್ಕೆ ಹರಿದಾಡಿ ವಿಷ ಯದಲ್ಲಿ ಕೂಡಿ ಸರ್ವವು ಎನಗೆ ಬೇಕೆಂದು ತಮೋ ಗುಣದಿಂದ ದ್ರವ್ಯವ

ಕೂಡಿಸಿ ವಿರತಿಸ್ಥಲವು ಹೆಚ್ಚೆಂದು ಕಾವಿಯ ಹೊದೆದು ಕೌಪೀನವ ಕಟ್ಟಿ ವೇಷ ಡಂಭಕದಿಂದೆ ತಿರುಗುವ ಭ್ರಷ್ಟರ ಮುಖವ ನೋಡಲಾಗದು. ಇಂತಪ್ಪ ವಿರತರ ಪೂಜೆಯ ಮಾಡುವದಕ್ಕಿಂತಲೂ ಕರೇ ನಾಯಿಯ ತಂದು ಪೂಜೆಯ ಮಾಡುವುದು ಮಹ ಲೇಸು ಕಂಡಯ್ಯಾ. ಪಂಚಾಮೃತವ ಮುಂದಿಟ್ಟರೆ ಕಣ್ಣ ನೋಡುವುದು, ದ್ರವ್ಯ ಮುಂದಿಟ್ಟರೆ ಕೈಯ್ಯಲಿ ಮುಟ್ಟುವುದು, ಎಂದು ಪೇಳುವ ವಿರತರ ನಾಲಿಗೆಯು ಆ ನಾಯ ಬಾಲಕ್ಕಿಂತಲು ಕರ ಕಷ್ಟವು. ಇಂತಹ ವಿರತರ ಪೂಜೆಯ ಮಾಡುವಾತನು ಆ ಜಂಗಮನು ಉಭಯುತರ ಮೂಗು ಸವರಿ ಕತ್ತಿಯನೇರಿಸಿ ಪಡಿಹಾರಿಗಳ ಪಾದುಕೆಯಿಂದೆ ಪಡಪಡ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯಾ ನಿಜ ಶರಣನು.

ಭಾವ:— ಅನೇಕರು ಲಿಂಗಾಂಗಿಗಳು ಹೇಗೆ ಹೇಗೆ ಆಚರಿಸ ಬೇಕೆಂಬುದನ್ನು ಅರಿಯದೆ ಸೋಮವಾರ, ಅಮಾವಾಸ್ಯೆ, ಹಬ್ಬ, ಹುಣ್ಣಿವೆ ಎಂದು ತಿಳಿದು ಆ ದಿನ ಮನೆಯನ್ನು ಸಾರಿಸಿ ವಿಶೇಷ ಸನ್ನಾಹವನ್ನು ಮಾಡಿ ವಿರಕ್ತರನ್ನು ಕರೆದುಕೊಂಡು ಬಂದು ಪೂಜೆ ಮಾಡುವರು. ಹೀಗೆ ಪೂಜೆಮಾಡುವವಕ್ಕಿಂತಲೂ ಊರಲ್ಲಿ ಚರಿಸಾಡುವ ಕರೇ ನಾಯಿಯನ್ನು ತಂದು ಗದ್ದುಗೆ ಹಾಕಿ ಅದನ್ನು ಪೂಜೆ ಮಾಡುವದು ಒಳಿತು ಎಂದು ವಚನಕಾರನು ಅಂದಿರುವನು. ಈ ವಿರಕ್ತನು ಬಾಯಲ್ಲಿ ಮಾತ್ರ ತಾನು ಷಡ್ರಿಪುಗಳನ್ನು ಸಂಹರಿಸಿದವನೆಂದು ಕ್ರಿಯೆಯಲ್ಲಿ ವೀರಶೈವನೆಂದು ನಿರಾಭಾರಿ ಎಂದು ಬೊಗಳಿಕೊಂಡು ಮಠಮಾನ್ಯಗಳನ್ನು ಹೇಗಾದರೂ ಸಂಪಾದಿಸಿಕೊಂಡು ವಿಷಯಗಳಲ್ಲಿ ಹೊರಳಾಡಿ ವೇಷ ಡಂಭಕದಿಂದ ತಿರುಗುತ್ತಾನೆ. ಇಂಥವನನ್ನು ಎಂದೂ ಪೂಜೆ ಮಾಡಲಾಗದು. ಈ ವಿರಕ್ತರು ವಸ್ತುಗಳನ್ನು ತೆಗೆದುಕೊಳ್ಳುವವರು ತಾವಲ್ಲ, ಆದರೆ ತಮ್ಮ ಕೈ ಅಥವಾ ಕಣ್ಣು ಮಾತ್ರ ಅನುಭವಿಸುತ್ತದೆ, ಎಂದು ಹೇಳುತ್ತಾರೆ. ಹೀಗೆ ಹೇಳುವವರ ನಾಲಿಗೆಯು ಆ ನಾಯ ಬಾಲಕ್ಕಿಂತಲೂ ಕರಕಷ್ಟವಾದದ್ದು. ಇಂಥ ವಿರಕ್ತರ ಪೂಜೆಯನ್ನು ಮಾಡುವವನೂ ಇಂಥ ವಿರಕ್ತರೂ ಚನ್ನಾಗಿ ಶಿಕ್ಷಿಸಲ್ಪಡಲಿಕ್ಕೆ ಯೋಗ್ಯರೆಂದು ವಚನಕಾರನು ಅಂದಿರುವನು.

## ಜಾತಿಭೇದವಿಲ್ಲ.

**ವಿವರಣೆ:—** ವೀರಶೈವರಲ್ಲಿ ಆನುವಂಶಿಕ ಭೇಧಭಾವಗಳಿರುವದಿಲ್ಲ. ಇಂಥ ಭೇದಗಳೆಲ್ಲವೂ ದೀಕ್ಷೆಯಿಂದ ಹೊರಟುಹೋಗುವವು. ವೀರಶೈವನು ದೀಕ್ಷೆಯಿಂದ ಪುನರ್ಜಾತನಾಗಿ ಉಚ್ಚ ವೃತ್ತಿಯಿಂದ ಇರಬೇಕು. ಇಂಥವನಿಗೆ ಕುಲ, ಜಾತಿ, ವರ್ಣಗಳು ಏನೂ ಉಳಿಯಲಾರವು. ಈ ವಿಚಾರಗಳನ್ನು ವಚನಕಾರರೆಲ್ಲರೂ ತಮ್ಮ ವಚನಗಳಲ್ಲಿ ಮೇಲಿಂದಮೇಲೆ ಸಾರುವರು. ಅಂಬಿಗರ ಚೌಡಯ್ಯನಾದರೂ ಕೆಳಗಿನ ವಚನಗಳಲ್ಲಿ ಹೀಗೆಯೇ ವಿವರಿಸಿರುವನು.

**ವಚನ:—** ೧೪೧. ಬೇಡಂಗೆ ಜೇಡಂಗೆ ಡೋಹರಂಗೆ ಹೊಲೆಯಂಗೆ ರೂಢಿಗೀಶ್ವರನೊಲಿದ ಪರಿಯ ನೋಡಾ! ಲೋಕದ ಮಾನವರು ಮಾಡುವರು ಸಮಯಂಗಳನು. ಮಾಡಲಿಕ್ಕೆ ಅವರೇನು ಸ್ವತಂತ್ರರೇ? ಇವನೊಡ್ಡಿದ ಠಾವಿನಲ್ಲಿ ಕಲ್ಲು ಮುಳ್ಳು ಮೂಡುವವೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವ:—** ಪರಮಾತ್ಮನಲ್ಲಿ ಭೇದಭಾವವಿಲ್ಲ. ಮನುಷ್ಯನು ಎಂಥ ಜಾತಿ, ಕುಲ, ಗೋತ್ರ, ವರ್ಣದವನಿದ್ದರೂ ಪರಮಾತ್ಮನ ಪ್ರೀತಿಯು ಮತ್ತು ದಯೆಯು ಎಲ್ಲರ ಮೇಲೂ ಸರಿಯಾಗಿ ಇರುತ್ತದೆ. ಒಬ್ಬನು ಬೇಡನಿರಲಿ, ಜೇಡನಿರಲಿ, ಡೋಹರನಿರಲಿ, ಅವನಲ್ಲಿ ಸದ್ಗುಣ, ಸದಾಚಾರ, ಸದ್ಭಕ್ತಿಗಳಿದ್ದರೆ, ಪರಮಾತ್ಮನು ಅವನಿಗೆ ಒಲಿಯುವನೆಂಬುದು ವಚನಕಾರನ ಭಾವವು. ಹೀಗೆ ಆದ ಉದಾಹರಣೆಗಳು ವೀರಶೈವ ಶರಣರಲ್ಲಿ ಮತ್ತು ಪುರಾತನರಲ್ಲಿ ಅನೇಕವಿವೆ. ಬೇಡರ ಕಣ್ಣಪ್ಪ, ಜೇಡರ ದಾಸಿಮಯ್ಯ, ಡೋಹರ ಕಕ್ಕಯ್ಯ, ಹರಳಯ್ಯ ಮೊದಲಾದವರಿಗೆ ಪರಮಾತ್ಮನು ಒಲಿದದ್ದನ್ನು ನೋಡಿರೆಂದು ವಚನಕಾರನು ಇಲ್ಲಿ ಅಂದಿರುವನು. ಆದರೆ ಜನತೆಯಲ್ಲಿ ಈ ರೀತಿಯು ಇರದೆ ಅನೇಕ ತರದ ಸಮಯಗಳು ತೋರಿಬರುವದುಂಟು. ಇವು ಪರಮಾತ್ಮನಿಗೆ ಒಪ್ಪಿಗೆಯಾದವುಗಳಲ್ಲೆಂದು ವಚನಕಾರನು ಅಂದಿದ್ದಾನೆ. ಅವುಗಳನ್ನು ಲೋಕದ ಮಾನವರು ಮಾಡುವರು. ಹೀಗೆ ಅವುಗಳನ್ನು ಮಾಡಲಿಕ್ಕೆ ಅವರಿಗೇನು ಸ್ವಾತಂತ್ರ್ಯವು ಎಂದು ಇಲ್ಲಿ ಪ್ರಶ್ನೆಮಾಡಿದ್ದಾನೆ. ಈ ಪ್ರಕಾರ ಸಮಾಜದಲ್ಲಿ ಭೇದಭಾವಗಳನ್ನು ಕಲ್ಪಿಸಿದರೆ, ಅಲ್ಲಿ ಕಲ್ಲು, ಮುಳ್ಳುಗಳು

ಮೂಡುವವೆಂದು ಅಂದಿದ್ದಾನೆ. ಅಂದರೆ ಸಮಾಜದಲ್ಲಿ ಪ್ರೀತಿ, ವಿಶ್ವಾಸಗಳು ಹೊರಟುಹೋಗಿ ದ್ವೇಷಾಸೂಯೆಗಳು ಉಂಟಾಗುವವೆಂದು ವಚನಕಾರನ ಭಾವವು.

**ವಚನಃ**— ೧೪೨. ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ ತಿರುಗಿ ಅವನ ಮನೆಯಲ್ಲಿ ಉಣ್ಣಬಾರದೆಂದು ಅಕ್ಕಿ ಕಣಕವ ಕೊಂಡು ಹೋಗುವ ಗುರುವಿನ ಕಂಡರೆ ಕೆಡವಿ ಹಾಕಿ ಮೂಗನೇ ಕೊಯ್ದು ಇಟ್ಟಂಗಿಯ ಕಲ್ಲಿಲೆ ಸಾಸಿವೆಯ ತಿಕ್ಕಿ ಹಿಟ್ಟನೆ ತಳಿದು ಮೇಲೆ ನಿಂಬಿಯ ಹುಳಿಯನೆ ಹಿಂಡಿ ಪಡುವಲ ಗಾಳಿಗೆ ಹಿಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ**— ಅನೇಕರು ಭಕ್ತ ಭಕ್ತರಲ್ಲಿ ಭೇದವನೆಣಿಸಬಾರದು, ಅವರೆಲ್ಲರೂ ಒಂದು, ಆದರೆ ಗುರು ಭಕ್ತ ಇವರಲ್ಲಿ ಭೇದವಿದೆ ಎಂದು ಹೇಳುವದುಂಟು. ಆದರೆ ವೀರಶೈವ ಧರ್ಮದ ಪ್ರಕಾರ ಹೀಗೆ ಭಾವಿಸುವದು ತಪ್ಪೆಂದು ವಚನಕಾರನ ಅಭಿಪ್ರಾಯವಿದೆ. ಗುರು ಶಿಷ್ಯರು ಸಾಮರಸ ಭಾವದಿಂದಲೇ ಆಚರಿಸಬೇಕೆಂದು ಅವನ ಅಭಿಪ್ರಾಯ. ಗುರುವು ಒಬ್ಬನಿಗೆ ಅನುಗ್ರಹ ಮಾಡಿ ದೀಕ್ಷೆಯನ್ನು ಕೊಟ್ಟ ಬಳಿಕ, ಇವನು ಕುಲಹೀನನು, ಕೀಳ ಜಾತಿಯವನು ಎಂದು ತಿಳಿದು ಅವನ ಮನೆಯಲ್ಲಿ ಊಟ ಮಾಡದೆ ಅವನಿಂದ ಅಕ್ಕಿ ಕಣಕ ತೆಗೆದುಕೊಂಡು ಹೋಗಿ ತನ್ನ ಮನೆಯಲ್ಲಿ ಅಡಿಗೆ ಮಾಡಿ ಭುಂಜಿಸುವನು. ಇಂಥ ಗುರುವನ್ನು ಚನ್ನಾಗಿ ಶಿಕ್ಷಿಸಬೇಕೆಂದು ವಚನಕಾರನು ಇಲ್ಲಿ ಅಂದಿರುವನು.

**ವಚನಃ**— ೧೪೩. ಶೀಲವಂತರು ಶೀಲವಂತರು ಎಂದು ಶೀಲದಲ್ಲಿ ಆಚರಿಸುವ ಅಣ್ಣಗಳು ನಿಮ್ಮ ಶೀಲವಾವುದು ಹೇಳಿರೋ. ಅರಿಯದಿದ್ದರೆ ಕೇಳಿರೋ. ಶಿರಸ್ಸಿನಲ್ಲಿ ಶಿವನಿಪ್ಪ, ಕಟಿಯಲ್ಲಿ ವಿಷ್ಣುವಿಪ್ಪ, ಆಧಾರದಲ್ಲಿ ಬ್ರಹ್ಮನಿಪ್ಪ, ಲಲಾಟದಲ್ಲಿ ವಿಭೂತಿ, ರುದ್ರಾಕ್ಷಿ, ಜಿಹ್ವೆಯಲ್ಲಿ ಪಂಚಾಕ್ಷರಿಯು, ಇಂತಪ್ಪ ಅಷ್ಟಾವರಣದಲ್ಲಿ ಸವಿಯದೆ, ಸಂಸಾರವೆಂಬ ಶರಧಿಯಲ್ಲಿ ಮುಳಿಗೇಳುವರು ಶೀಲವಂತರಲ್ಲ. ಬರಿದೆ ನಾವು ಶೀಲವಂತರೆಂಬುವ ಮನುಜ ಕೇಳು. ಕಣ್ಣೇ ಕಂಚಗಾರ, ಕರ್ಣವೇ ಬಣಜಿಗ, ಮೂಗೇ ಈಳಿಗ, ಕೊರಳೇ ಕುಂಬಾರ, ತುಟಿಯೇ ಹೆಂಡಗಾರ, ಹಲ್ಲೇ ಕಲ್ಲುಕುಟಿಗ, ತಲೆಯೇ ಮೋಪುಗಾರ, ಬೆನ್ನೇ ಜೇಡ, ಅಂಗಯ್ಯೇ ಅಕ್ಕಸಾಲಿಗ, ಮುಂಗೈಯೇ ಬಡಿಗ, ಕರವೇ ಕೋಮುಟಿಗ, ಕಣಕಾಲೇ

ಕಾಳಿಂಗಿ, ಕುಂಡಿಯೇ ಕುಡುವೊಕ್ಕಲಿಗ, ಒಳದೊಡೆಯೇ ಸಮಗಾರ, ಹೊರದೊಡೆಯೇ ಮಚ್ಚಿಗ, ಮೇಗಾಡಿ ಹೊಲೆಯ, ಬದ್ದಿಯೇ ಬೈಲಗಂಬಾರ, ಇಂತಪ್ಪ ಕುಲ ಹದಿನೆಂಟು ಜಾತಿ ಎಲು ಮಾಂಸವನು ತುಂಬಿಟ್ಟುಕೊಂಡು, ನನ್ನ ಕುಲ ಹೆಚ್ಚು ನಿನ್ನ ಕುಲ ಕಡಿಮೆ ಎಂದು ಹೊಡೆದಾಡುವಂತಹ ಅಣ್ಣಗಳನ್ನು ಹಿಡಿತಂದು ಮೂಗನೆ ಸವರಿ ಮೆಣಸಿನ ಹಿಟ್ಟು ತುಪ್ಪವ ತುಂಬಿ ನಮ್ಮ ಪಡಿಹಾರಿ ಉತ್ತಣ್ಣನ ವಾಮ ಪಾದುಕೆಯಿಂದ ಪಡಪಡನೆ ಹೊಡಿ ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣನು.

ಭಾವ:— ವೀರಶೈವರು ನಡತೆ ಆಚಾರ ಇವುಗಳಿಗೆ ಮಹತ್ವ ಕೊಟ್ಟಿರುವರು. ಆದರೆ ಅನೇಕರು ಈ ವಿಷಯದಲ್ಲಿ ಅತಿರೇಕವನ್ನು ಮಾಡಿಕೊಂಡು ಅನೇಕ ಬಗೆಯ ಕಠಿಣವಾದ ಶೀಲಗಳನ್ನು ಆಚರಿಸಿ ತಾವು ಶೀಲವಂತರು, ತಾವು ಶ್ರೇಷ್ಠರು, ಎಂದು ಹೆಮ್ಮೆ ಪಡುವರು. ಇಂಥವರನ್ನೂ ಕೂಡ ಅಂಬಿಗರ ಚೌಡಯ್ಯನು ಇಲ್ಲಿ ಹಳಿದಿರುವನು. ಇಂಥವರಾದರೂ ಕೇವಲ ಸಂಸಾರಿಗಳು ಮತ್ತು ಪ್ರಾಪಂಚಿಗಳು ಎಂದು ಅಂದಿರುವನು. ವೀರಶೈವರಾದವರು ಅಷ್ಟಾವರಣಗಳ ಮರ್ಮವನ್ನು ತಿಳಿದು ಆಚರಿಸತಕ್ಕದ್ದು. ಇಂಥವರ ಶಿರಸ್ಸಿನಲ್ಲಿ ಶಿವನಿರುವನು. ಕಟಿಯಲ್ಲಿ ವಿಷ್ಣುವಿರುವನು. ಆಧಾರದಲ್ಲಿ ಬ್ರಹ್ಮನಿರುವನು. ಇವರು ಲಲಾಟದಲ್ಲಿ ವಿಭೂತಿಯನ್ನೂ ಕೊರಳಲ್ಲಿ ರುದ್ರಾಕ್ಷಿಯನ್ನೂ ಧಾರಣ ಮಾಡಿಕೊಂಡು ಜಿಹ್ವೆಯಲ್ಲಿ ಪಂಚಾಕ್ಷರಿಯನ್ನು ಉಚ್ಚರಿಸುವರು. ಆದರೆ ಹೀಗೆ ವರ್ತಿಸದೆ ಬರೇ ಬಾಹ್ಯ ಆಚರಣೆಗಳನ್ನು ಮಾತ್ರ ಆಚರಿಸಿ ಸಂಸಾರವೆಂಬ ಶರಧಿಯಲ್ಲಿ ಮುಳಿಗೇಳುವರು. ಇವರು ಶೀಲವಂತರಲ್ಲ. ವೀರಶೈವರಲ್ಲಿ ಜಾತಿಭೇದಗಳಿರುವದಿಲ್ಲ. ಜಾತಿಭೇದಗಳಿವೆ ಎಂದು ಎಣಿಸಿದರೆ ಆ ಜಾತಿಗಳೆಲ್ಲವೂ ಬೇರೆ ಇಲ್ಲ, ಮನುಷ್ಯನ ದೇಹದಲ್ಲಿಯೇ ಇವೆ ಎಂದು ಅಂದಿರುವನು. ಅದು ಹೇಗೆಂದರೆ, ನಿಮ್ಮ ಕಣ್ಣು ಕಂಚಗಾರ, ಕಿವಿ ಬಣಜಿಗ, ಮೂಗು ಈಳಿಗ, ಕೊರಳು ಕುಂಬಾರ, ತುಟಿ ಹೆಂಡಗಾರ, ಹಲ್ಲು ಕಲ್ಲುಕುಟಿಗ, ತಲೆ ಭಾರಹೊರುವವ, ಬೆನ್ನು ಜೇಡ, ಅಂಗಯ್ಯ ಅಕ್ಕಸಾಲಿಗ, ಮುಂಗಯ್ಯ ಬಡಿಗ, ಕರ ಕೋಮಟಿಗ, ಕಣಕಾಲು ಕಾಳಿಂಗಿ, ಪುಚ್ಛವು ಕುಡುವೊಕ್ಕಲಿಗ, ಒಳದೊಡೆಯು ಸಮಗಾರ, ಹೊರದೊಡೆಯು ಮಚ್ಚಿಗ, ಮೇಗಾಡಿ ಹೊಲೆಯ, ಬದ್ದಿಯು ಬೈಲಗಂಬಾರ ಹೀಗೆ ಅನೇಕ ಕೀಳು ಜಾತಿಗಳು ತನ್ನಲ್ಲಿಯೇ ಇವೆ.

ತ್ಯಾಜ್ಯವಾದ ಎಲುವೂ ಮಾಂಸವೂ ಸಹ ತನ್ನಲ್ಲಿಯೇ ಇವೆ. ಈ ತೆರದ ಸ್ಥಿತಿಯನ್ನು ಲಕ್ಷಿಸದೆ, ನನ್ನ ಜಾತಿ ಹೆಚ್ಚು, ನಿನ್ನ ಜಾತಿ ಕಡಿಮೆ ಎಂದು ಹೊಡೆದಾಡುವ ಜನರನ್ನು ಚನ್ನಾಗಿ ಶಿಕ್ಷಿಸಬೇಕೆಂದು ವಚನ ಕಾರನು ಅಂದಿರುವನು.

**ವಚನಃ**— ೧೪೪. ಕಷ್ಟನ ಮನೆಯಲ್ಲಿ ಸೃಷ್ಟೀಶ್ವರನುಂಬಾಗ ಎತ್ತ ಹೋದವೋ ನಿಮ್ಮ ಶಾಸ್ತ್ರಂಗಳು? ಕೆತ್ತ ಮುಚ್ಚಳು ಬೇಡಂಗೆ ತೆರೆ ವಾಗ ಇಕ್ಕಿದ ಜನ್ನಿವಾರ ಬೀಯವಾದವು! ಮುಕ್ಕುಳಿಸಿದ ನೀರ ತಂದೆರೆ ದಡೆ, ಎತ್ತಲಿದ್ದವು ನಿಮ್ಮ ವೇದಂಗಳು? ನಿಮ್ಮ ದುಃಖ ಬೇಡೆಂದಾತ ಅಂಬಿಗಚೌಡಯ್ಯ.

**ಭಾವಃ**— ಜನರು ಇಂಥಿಂಥವರ ಮನೆಯಲ್ಲಿ ಉಣ್ಣಬಾರದೆಂದು ನಿರ್ಬಂಧಿಸುತ್ತಲಿರುವರು. ಆದರೆ ಅತ್ಯಂತ ಕೀಳುಜಾತಿಯವನಾದ ಮಾದರ ಚನ್ನಯ್ಯನ ಮನೆಯಲ್ಲಿ ಪರಮಾತ್ಮನು ಉಂಡಿರುತ್ತಾನೆ. ಹೀಗೆ ಉಣ್ಣುವ ಕಾಲಕ್ಕೆ ನಿಮ್ಮ ವೇದಗಳು ಎತ್ತ ಹೋದವೆಂದು ವಚನಕಾರನು ಕೇಳು ತ್ತಾನೆ. ಅಡಿಗೆಯ ಮಡಿಕೆಯ ಮುಚ್ಚುಳು ಬೇಡನ ಕಣ್ಣಿಗೆ ತೆರೆಯು ವಾಗ ಹಾಕಿದ ಯಜ್ಞೋಪವೀತಗಳೆಲ್ಲವೂ ನಷ್ಟವಾದವು. ಅಂದರೆ ಬ್ರಾಹ್ಮ ಣರ ಶ್ರೇಷ್ಠತೆಯು ಹೊರಟುಹೋಯಿತು. ಹಾಗೆಯೇ ಬಾಯೊಳಗೆ ಹಾಕಿದ ನೀರಿನಿಂದ ಲಿಂಗದ ಮೇಲೆ ಕಣ್ಣಪ್ಪನು ಅಭಿಷೇಕಮಾಡುವಾಗ ನಿಮ್ಮ ವೇದಂಗಳು ಎಲ್ಲಿ ಇದ್ದವು? ಅಂದರೆ ಜನರು ಬಾಹ್ಯಾಚರಣೆಯ ಸಲು ವಾಗಿ ಬಹಳ ಕಷ್ಟಪಡಬಾರದೆಂದು ವಚನಕಾರನು ಇಲ್ಲಿ ಹೇಳಿರುವನು.

**ವಚನಃ**— ಹೊಲೆಯ ಹೊಲೆಯ ಎಂದಡೆ ಹೊಲೆಯರೆಂತಪ್ಪ ರಯ್ಯ? ಹೊಲೆಯ ಹೊರಕೇರಿಯಲ್ಲಿರುವನು. ಊರೊಳಗಿಲ್ಲವಯ್ಯ ಹೊಲೆ ಯರು? ತಾಯಿಗೆ ಬೈದವನೇ ಹೊಲೆಯ, ತಂದೆಗೆ ಉತ್ತರ ಕೊಟ್ಟವನೇ ಹೊಲೆಯ, ತಂದೆಗೆ ಬೈದವನೇ ಹೊಲೆಯ, ಕೊಡುವ ದಾನಕ್ಕೆ ಅಡ್ಡ ಬಂದವನೇ ಹೊಲೆಯ, ನಡೆವ ದಾರಿಂಗೆ ಮುಳ್ಳ ಹಚ್ಚಿದವನೇ ಹೊಲೆಯ, ಬ್ರಾಹ್ಮಣನ ಕುತ್ತಿಗೆಯ ಕೊಯ್ದವನೇ ಹೊಲಯ, ಹತ್ತು ಆಡಿವರೆ ಒಂದು ನಿಜವಿಲ್ಲದವನೇ ಹೊಲೆಯ, ಅರ್ಥಕ್ಕೆ ಪ್ರಾಣಹತ್ಯ ಮಾಡುವನೇ ಹೊಲೆಯ, ಚಿತ್ತದಲ್ಲಿ ಪರಸತಿಯ ಬಯಸಿದವನೆ ಹೊಲೆಯ, ಲಿಂಗಮು ದ್ರೆಯ ಕಿತ್ತಿದವನೇ ಹೊಲೆಯ, ಲಿಂಗವ ಬಿಟ್ಟು ತಿರುಗುವವನೇ ಹೊಲೆಯ, ಧರ್ಮದ ನಿಂದೆಯ ಮಾಡುವವನೇ ಹೊಲೆಯ, ಧರ್ಮವ ಮಾಡದ

ವನೇ ಹೊಲೆಯು, ಬಸವನ ಕೊಂದವನೇ ಹೊಲೆಯು, ಬಸವನ ಇಂದ ವನೇ ಹೊಲೆಯು, ಲಿಂಗಪೂಜೆಯು ಮಾಡದವನೇ ಹೊಲೆಯು, ಇಂತಪ್ಪ ಹೊಲೆಯರು ಊರ ತುಂಬ ಇರಲಾಗಿ, ಹೊರಕೇರಿಯುವರಿಗೆ ಹೊಲೆಯ ರೆನಬಹುದೆ? ಹೊಲೆಯ ಹುಟ್ಟಿದ ಮೂರು ದಿನಕ್ಕೆ ಪಿಂಡಕ್ಕೆ ನೆಲೆಯಾ ಯಿತ್ತು. ಹಿಪ್ಪೆಯನುಂಡ ತೊಗಲು ಹರಗೋಲವಾಯಿತ್ತು. ಗುರುಗಳಿಗೆ ಚಮ್ಮಾವುಗೆಯಾಯಿತ್ತು ಹೂಡಲಿಕ್ಕೆ ಮಿಣಿಯಾಯಿತ್ತು. ಹೊಡೆಯಲಿಕ್ಕೆ ಬಾರಕೋಲವಾಯಿತ್ತು. ಬಂಡಿಗೆ ಮಿಣಿಯಾಯಿತ್ತು. ಅರಸರಿಗೆ ಮೃದಂ ಗವಾಯಿತ್ತು. ತೊಗಲು ನಗಾರಿಯಾಯಿತ್ತು. ತುಪ್ಪ ತುಂಬಲಿಕ್ಕೆ ಸಿದ್ದ ಲಿಕೆ, ಎಣ್ಣೆ ತುಂಬಲಿಕ್ಕೆ ಬುದ್ದಲಿಕೆ, ಸಿದ್ದಲಿಕೇನ ತುಪ್ಪ, ಬುದ್ದಲಿ ಕೇನ ಎಣ್ಣೆ, ಕಲ್ಲಿ ಶೆಟ್ಟಿ ಮಲ್ಲಶೆಟ್ಟಿಗಳು ಕೂಡಿ, ನಾ ಶೀಲವಂತ, ತಾ ಶೀಲವಂತ ಎಂದು ಶುದ್ಧೈಸಿಕೊಂಡು ತಿಂದು ಬಂದು ಜಗಳ ಬಂದಾಗ ನನ್ನ ಕುಲ ಹೆಚ್ಚು, ನಿನ್ನ ಕುಲ ಹೆಚ್ಚುಕಡಿಮೆ ಎಂದು ಬಡಿದಾಡುವ ಕುನ್ನಿ ನಾಯಿಗಳ ಮೋರೆ ಮೋರೆಯ ಮೇಲೆ ನಮ್ಮ ಪಡಿಹಾರಿ ಉತ್ತ ಣ್ಣಗಳ ವಾಮ ಪಾದುಕೆಯ ಕೊಂಡು ಅವರ ಅಂಗುಳ ಮೆಟ್ಟಿ ಪಡಪ ಡನೆ ಹೊಡಿ ಎಂದಾತ ನಮ್ಮ ದಿಟ್ಟ ಅಂಬಿಗರ ಚೌಡಯ್ಯ ನಿಜಶರ ಣನು.

ಭಾವ:— ಬಹು ಜನರು ಹೊಲೆಯ ಹೊಲೆಯ ಎಂದು ಅತ್ಯಂತ ತಿರಸ್ಕಾರ ಮತ್ತು ಹ್ಯೇಯಭಾವದಿಂದ ನುಡಿಯುವರು. ಹೊಲೆಯರು ಊರ ಹೊರಗಿರುತ್ತಾರೆಂದು ಅನ್ನುವಿರಿ. ಅದು ಹಾಗಲ್ಲ, ಹೊಲೆಯರು ಊರೊಳಗೇ ಇರುತ್ತಾರೆಂದು ವಚನಕಾರನು ಅನ್ನುತ್ತಾನೆ. ಯಾರು ದುರ್ಗುಣವುಳ್ಳವರಾಗಿ ದುರ್ಮಾರ್ಗದಲ್ಲಿ ವರ್ತಿಸಿ ಜನರಿಗೆ ಬೇಡಾಗಿ ಇರು ತ್ತಾರೋ, ಅವರೇ ಹೊಲೆಯರೆಂದು ಅವನು ಇಲ್ಲಿ ನುಡಿದಿರುವನು. ಅಂದರೆ ತಾಯಿ ತಂದೆಗಳಿಗೆ ಬಯ್ಯುವವರು ಮತ್ತು ಇದಿರುತ್ತರ ಕೊಡು ವವರು, ನಡುದಾರಿಗೆ ಮುಳ್ಳುಹಚ್ಚುವವರು, ಬ್ರಾಹ್ಮಣನನ್ನು ಕೊಂದವರು, ಹತ್ತನಾಡಿದರೂ ಅದರಲ್ಲಿ ಒಂದಾದರೂ ನಿಜವಿಲ್ಲದವರು, ದುಡ್ಡಿನಾಶೆ ಗಾಗಿ ಪ್ರಾಣ ಹಿಂಸೆ ಮಾಡುವವರು, ಚಿತ್ತದಲ್ಲಿ ಪರಸತಿಯ ಬಯಸು ವವರು, ಲಿಂಗಮುದ್ರೆಯನ್ನು ಕಿತ್ತಿದವರು, ಲಿಂಗಧಾರಣವಿಲ್ಲದೆ ತಿರುಗು ವವರು, ಧರ್ಮನಿಂದೆ ಮಾಡುವವರು, ದಾನಧರ್ಮ ಮಾಡದವರು, ದನ ವನ್ನು ಕೊಂದವರು, ಮತ್ತು ಹೊಡೆಯುವವರು, ಲಿಂಗಪೂಜೆ ಮಾಡ

ದವರು ಇವರೆಲ್ಲರೂ ಹೊಲೆಯರು ಎಂದು ಹೇಳಿ, ಇಂಥ ಹೊಲೆಯರು ಊರ ತುಂಬ ಇದ್ದಾರೆ, ಇವರೇ ನಿಜವಾದ ಹೊಲೆಯರು ಎಂದು ವಚನಕಾರನು ಅನ್ನುತ್ತಾನೆ. ಅದರಂತೆಯೇ ಜನರು ಸ್ಪೃಶ್ಯಾ ಸ್ಪೃಶ್ಯ ಭಾವವುಳ್ಳವರಾಗಿ ಮುಟ್ಟುಚಟ್ಟನಿಂದ ಆಚರಿಸುತ್ತಾರೆ. ಆದರೆ ಮಾನವರೆಲ್ಲರೂ ಹೊಲೆಯಿಂದಲೇ ಹುಟ್ಟುವದಿಲ್ಲವೇ? ಆದ್ದರಿಂದ ಅವರೆಲ್ಲರೂ ಹೊಲೆಯರೆಂದೆನ್ನಬೇಕಾಗುವದು. ಅದರಂತೆಯೇ ಹೊಲೆಯರು ತೊಗಲು ಹಿಡಿಯುವದರಿಂದ ಅವರು ನೀಚ ಕುಲದವರೆಂದು ಅನ್ನುವದುಂಟು. ಆದರೆ ಆ ತೊಗಲಿನಿಂದಲೇ ಹರಗೋಲಾಗಿ ಅದರಲ್ಲಿ ಜನರು ಕುಳಿತು ಕೊಂಡು ನದಿಯನ್ನು ದಾಟುತ್ತಾರೆ. ತಾವು ಉಚ್ಚ ಸ್ಥಳದವರೆಂದು ಹೇಳಿಕೊಳ್ಳುವ ಗುರುಗಳು ಅದರಿಂದ ಮಾಡಿದ ಮುಚ್ಚೆಗಳನ್ನು ಮೆಟ್ಟಿ ಕೊಂಡು ಅಡ್ಡಾಡುತ್ತಾರೆ. ತೊಗಲು ಹೊಲಗಪ್ಪದಲ್ಲಿ ಹೂಡಲಿಕ್ಕೆ ಮಿಣಿ, ಹೊಡೆಯಲಿಕ್ಕೆ ಬಾರಕೋಲು, ಬಂಡಿಗೆ ಮಿಣಿಯಾಗಿ ಹೀಗೆ ಅದರ ಮೂಲಕ ಹೊಲದಿಂದ ಬಂದ ಧಾನ್ಯವನ್ನು ನಾವು ಉಣ್ಣುತ್ತೇವೆ. ಹಾಗೆಯೇ ಯಾರನ್ನು ನಾವು ಅತ್ಯಂತ ಆದರಭಾವದಿಂದ ಕಾಣುತ್ತೇವೋ ಅಂಥ ಅರಸರಿಗೆ ಅದು ಮೃದಂಗವೂ ನಗಾರಿಯೂ ಆಗುತ್ತದೆ. ಹಾಗೆಯೇ ತುಪ್ಪ ತುಂಬಲಿಕ್ಕೆ ಸಿದ್ದಲಿಕೆ, ಎಣ್ಣೆ ತುಂಬಲಿಕ್ಕೆ ಬುದ್ದಲಿಕೆಯಾಗಿ ಇಂಥ ತುಪ್ಪ ಎಣ್ಣೆಯನ್ನು ಶ್ರೇಷ್ಠ ಕುಲದವರೆಂದು ಹೇಳಿಕೊಳ್ಳುವ ನಮ್ಮ ಶೆಟ್ಟಿಗಳು ತಾವು ಶೀಲವಂತರು ತಾವು ಶೀಲವಂತರು ಎಂದು ಹೆಮ್ಮೆಬಡುತ್ತ ತಿಂದು ಜಗಳ ಬಂದಾಗ ಮಾತ್ರ ನನ್ನ ಕುಲ ಹೆಚ್ಚು ನಿನ್ನ ಕುಲ ಕಡಿಮೆ ಎಂದು ಬಡಿದಾಡುತ್ತಾರೆ. ಇಂಥ ನಾಯಿ ಜಾತಿಯವರನ್ನು ಚನ್ನಾಗಿ ತಳಿಸಬೇಕೆಂದು ವಚನಕಾರನು ಅನ್ನುತ್ತಾನೆ. ಹೀಗೆ ಆಚರಿಸುವವರೇ ಹೊಲೆಯರೆಂದು ಅವನ ಅಭಿಪ್ರಾಯ.

**ವಚನ**:— ೧೪೬. ಶುಕ್ಲಶೋಣಿತ ಪಿಂಡದಲ್ಲಿಯೇ ಉತ್ಪತ್ತಿ. ಚಿತ್ತ ವಾಯು ಪ್ರಾಣ ಅಷ್ಟದಳ ಪದ್ಮದಲ್ಲಿಹುದು. ಮೊಲೆ ಮುಡಿ ಮೂಡಿದರೆ ಹೆಣ್ಣೆಂಬರು. ಗಡ್ಡಮೀಸೆಯಾಗಲು ಗಂಡೆಂಬರು. ನಡುವೆ ಸುಳಿವಾತನು ಹೆಣ್ಣಲ್ಲ ಗಂಡಲ್ಲ. ಇದರಂತುವ ತಿಳಿಯಲ್ಕೆ ಶೃತಿಗಗೋಚರವೆಂದಾತನಂಬಿಗರ ಚೌಡಯ್ಯ.

**ಭಾವ**:— ಯಾವ ಪ್ರಕಾರ ಜಾತಿಭೇದವನ್ನು ವೀರಶೈವರು ಎಣಿಸತಕ್ಕದಲ್ಲವೋ ಹಾಗೆಯೇ ಅವರು ಸ್ತ್ರೀಪುರುಷ ಭೇದವನ್ನೂ ಎಣಿಸಕೂ

ನಿಸ್ಸಾಳಧ್ವನಿ ದಂದಳ ದಳಮೆನೆ
ನಿಸ್ಸೇಷಧ್ವನಿ ಭರದಿಂ ಘೋರಿನೆ
ವಾದ್ಯಧ್ವನಿ ಸೋಜಿಗಮೆನೆ ನೆಗೆದವು
ಚೋದ್ಯಂ ಪುಟ್ಟಲ್ತರದಿಂದೊಗೆದವು
ತಂಪೋಂ ಧಿತ್ತೋಂ ಧೋಂ ಮೆಂದೆನುತಂ
ದಿಂ ದಿಂ ಧಿಮಿಧೀ ಧಿಮಿತೆಂದೆನುತಂ
ಡುಮುಡುಮು ತತ್ತೋಂ ತತ್ತೋಂಗೆನುತಂ
ಚಮುಕಂ ತಕನ ಕತಕ ಎಂದೆನುತುಂ
ಝುಂ ಝುಂ ಝುಂ ಝುಂ ತಕತಕ ಎನುತುಂ
ಝುಂ ಝುಂ ದಿಕ್ಕಟ ತಕ್ಕಟ ಎನುತುಂ
ತಂದ್ರಂ ದಿಕ್ಕಟ ದಿಕ್ಕಟ ಎನುತುಂ
ಝಾಂದ್ರಂಕಟ ಝೊಂದ್ರೊಂಕಟ ಎನುತುಂ
ಸಂಗೀತಧ್ವನಿಯುಮ್ಮಳಿಸುತ್ತಲ್
ಜಂಗಮನಾದಂ ನಭಮಂ ಮುಟ್ಟಲ್
ಜಗ ಪೊಗುೞ್ಡಿಸಲುಘೇ ಎಂದೆನುತುಂ
ಬಗೆ ಮಿಗೆ ಶರಣರ್ಜಯಜಯ ಎನುತುಂ

ಕೈಕೊಳ ರವಕಾರಿಗಳೊಂದೆಸೆಯೊಳ್
ಬೈಕೆಯ ಸತಿಯರ ಸಾಲೊಂದೆಸೆಯೊಳ್
ಚೋಳಾದಿಗಳೊಬ್ಬುಳಿಯೊಂದೆಸೆಯೊಳ್
ಚೋಳ ಸಚಿವ ಸಂತತಿಯೊಂದೆಸೆಯೊಳ್
ತುರುಗಾವಳಿಗಳ್ತ್ತವೊಂದೆಸೆಯೊಳ್
ಕರಿಘಟೆಗಳ್ತರದಿಂದೊಂದೆಸೆಯೊಳ್
ಹೊನ್ನರಥಂಗಳ್ಬೀರೊಂದೆಸೆಯೊಳ್
ರನ್ನದ ನಡೆವನೆ ಬೇರೊಂದೆಸೆಯೊಳ್
ಅರಸು ಮಕ್ಕಳುಂ ನೆರೆದೊಂದೆಸೆಯೊಳ್
ಸಿರಿವಂತರ ನೆರೆ ಒಂದೊಂದೆಸೆಯೊಳ್
ವ್ಯವಹಾರಿಗಳಿರೆ ತಾ ಒಂದೆಸೆಯೊಳ್
ತವೆ ಸಾಹಸದಾಳ್ಗಳು ಒಂದೆಸೆಯೊಳ್

ಬೆಟ್ಟವನೇರಿಯೆ ನೋಡುತಲಿರ್ಪರ್
ಗಟ್ಟದೊಳೆಲ್ಲಂ ನೋಡುತಲಿರ್ಪರ್
ಪಡುಗುಗಳೇರಿಯೆ ನೋಡುತ್ತಿರ್ಪರ್
ನಡೆ ಭೈತ್ರದೊಳುಂ ನೋಡುತ್ತಿರ್ಪರ್
ಮುಗಿಲೇರಿಯೆ ನಡೆ ನೋಡುತ್ತಿರ್ಪರ್
ಮುಗಿಲಂ ಮುಟ್ಟುವ ಮಾಡದೊಳಿರ್ಪರ್
ಮನೆಮನೆಗಳ ನೆಲೆಮಾಡದೊಳಿರ್ಪರ್
ಘನನಿಳಯಂಗಳ ಭದ್ರದೊಳಿರ್ಪರ್
ವೇದಿಕೆಗಳ ಮೇಲಂ ತೀವಿರ್ಪರ್
ವಾದಂತ ರತ್ನಸ್ತಂಭದೊಳಿರ್ಪರ್

ತಿರುವೀಧಿಯೊಳೆಡೆ ಇಲ್ಲೆಡೆ ಯಿಲ್ಲಂ
ಕರುಮಾಡದೊಳೆಡೆ ಯಿಲ್ಲೆಡೆಯಿಲ್ಲಂ
ತರುವನದೊಳಗೆಡೆ ಯಿಲ್ಲೆಡೆಯಿಲ್ಲಂ
ಗಿರಿಕುಲದೊಳಗೆಡೆ ಯಿಲ್ಲೆಡೆಯಿಲ್ಲಂ
ನೆಲದೊಳ್ನಭದೊಳಗಿಲ್ಲೆಡೆ ಇಲ್ಲಂ
ಜಲದೊಳ್ಜಗದೊಳಗಿಲ್ಲೆಡೆ ಇಲ್ಲಂ
ಏನೆಂಬೇಂ ಶಿವಶಿವ ತಿರುನಾಳಂ
ಏನೆಂಬೇಂ ಹರಹರ ತಿರುನಾಳಂ
ಇಂತಿರುತಿರಲೊಪ್ಪಿಡಿದಿಡಿದೆಡೆಯೊಳ್
ಅಂತಿಂತೆನಬಾರದ ಸಂದಣಿಯೊಳ್
ಕೆಲಬಲನರಿಯಲ್ಕೇನೆಂದರಿಯಂ
ತಲೆಯುಳಿಯಲ್ಕೊಡದೇನೆಂದರಿಯಂ
ನೆರೆ ನೆರೆದೀ ಕ್ಷೋಭಂ ನೆರೆ ಮಸಗಲ್
ಹರಹರ ಶಿವನಾನಂದಂ ಮಸಗಲ್
ಮುತ್ತಿನ ಮಂಟಪವತ್ತಿಂತೊಲೆಯಲ್
ಮೆತ್ತನೆ ಮೆಲ್ಲನೆಯೊಂದಡಿ ನಡೆಯಲ್

ಕೈಮುಗಿದುವು ಕಮಳ ವನವಿದೆಂದೆನೆ
ಮೈಮಿಕ್ಕುವು ಪುಳಕಂಗಳಿವೆಂದೆನೆ

ಹೃದಯ ಕಮಲದೊಳಗೆಯ್ತರ್ಪನ್ನಂ
ಹೃದಯ ಕಮಲವಿರಲಾರದೆ ಮುನ್ನಂ
ಮಸ್ತಕದೊಳ್ಬರದಿಂ ಮೂಡಿದವೆನೆ
ಹಸ್ತಂಗಳ್ಮುಗಿದಿರ್ದವು ಬೋಂಕೆನೆ
ಇರೆ ಶಿವನಂ ಸತಿಯರ್ನೆರೆ ಕಾಣುತೆ
ಹರಹರ ಎಡಹುತೆ ತಾಗುತೆ ಪರಿಯುತೆ
ಆಡಿ ಎನ್ನಡಿ ಎಂಬಂದಂ ಗಾಣೋ
ಆಡಿ ಎನ್ನಡಿ ಎನ್ನಿಂದಂ ಗಾಣೋ
ಗುಡಿಗಟ್ಟಿಂ ಗುಡಿಗಟ್ಟಿಂ ಶಿವಶಿವ
ಗುಡಿವಾಳ್ದೇಂ ಗುಡಿವಾಳ್ದೇಂ ಶಿವಶಿವ
ಓಹೋ ಓಹೋ ಕಣ್ಣಿಕ್ಕಿನಿಯನೆ
ಓಹೋ ಓಹೋ ಮನವಿಕ್ಕಿನಿಯನೆ
ಎನುತುಂ ತಮ್ಮೊಳ್ಗುಣುಗುಟ್ಟುತೆ
ಮನದೊಳ್ಮೆಚ್ಚುತೆ ಮೊಗಮಂ ನೋಡುತೆ
ಲೆಕ್ಕಿಸಲಾರದೆ ಶಿವ ಸದ್ರೂಪಂ
ಉಕ್ಕುವ ನೇಹದೊಳಭವನ ರೂಪಂ
ನೋಡುತೆ ಕೆಯ್ಗಳನೆತ್ತುತೆ ಮುಗಿಯುತೆ
ಆಡುತೆ ಪಾಡುತೆ ಶಿವನಂ ಪರಸುತೆ

ಒಪ್ಪುವ ಮುತ್ತೈದೆಯರಿಕ್ಕೆಗಳಿಂ
ಇಪ್ಪಸರದ ಕಪಿಗಳ ತೆಕ್ಕೆಗಳಿಂ
ತಿರುಪಾಡೋದುತೆ ತಲೆದೂಗುವರಿಂ
ಹರಹರ ಎನುತುಂ ಕಳವಳಿಸುವರಿಂ
ಕೆಯ್ಯೆತ್ತಿಯೆ ಕರೆಯುತ್ತಿರ್ಪವರಿಂ
ಮೆಯ್ಯಿಕ್ಕಿಯೆ ಮಣಿಯುತ್ತಿರ್ಪವರಿಂ
ಪುಳಕಾವಳಿಯಿಂ ಹೇರಿರ್ಪವರಿಂ
ಬಳಸುವ ಬೆಮರಿಂ ಗದುಗದಿಸುವರಿಂ
ಆರಲಂ ಸೂಸುತೆ ಪೊಡೆಮಡುವವರಿಂ
ಬೆರಳಂ ಕರ್ಚುತೆ ಲಲ್ಲೈಸುವರಿಂ
ಕಣ್ಣಂ ಕಳೆದು ನಿವಾಳಿಸುವವರಿಂ

ಕಣ್ಣಂ ಕಳೆದಾಗಳೆ ಪಡೆವವರಿಂ
ಆನಂದದ ಜಲ ತೀವಿರ್ಪವರಿಂ
ನಾನಾ ಚೇಷ್ಟೆಗಳಿಂದಿರ್ಪವರಿಂ
ಒತ್ತುವ ಸುತ್ತುವ ದೇವರಡಿಯರಿಂ
ಮುತ್ತುವ ಮಣಿದಾಡುವ ಪಡಿಯರರಿಂ
ಹಿಂದೆ ಚತುರ್ವೇದದ ಹಾದಿಗಳಿಂ
ಮುಂದೆ ಗಣಂಗಳ ತಿರುವೀಧಿಗಳಿಂ
ಕೆಲದೊಳ್ಮೆರೆವ ಮಹಾದೇವಿಯರಿಂ
ಬಲದೊಳ್ಪಯಸುವ ಮಾಹೇಶ್ವರರಿಂ
ಪೊನ್ನಾಂಬಲದಧಿಪತಿಯೊಪ್ಪಿರ್ದಂ
ಪೊನ್ನಾಂಬಲದುನ್ನತಿಯೊಪ್ಪಿರ್ದಂ
ಪೊನ್ನಾಂಬಲದರಸಂ ಮೆರೆದಿರ್ದಂ
ಪೊನ್ನಾಂಬಲನಾಥಂ ಮೆರೆದಿರ್ದಂ

ಇಂತಿರೆ ಮೂಡಣ ಬಾಗಿಲ ದೆಸೆಯೊಳ್
ಸಂತಂ ನೆರೆದುದು ಶಿವಸನ್ನಿಧಿಯೊಳ್
ಧರಣಿಯೊಳಗೆ ಪಿರಿಯರ್ಗಂ ಪಿರಿಯರ್
ಪುರದೊಳ್ನೆರೆ ಪಿರಿಯರ್ಗಂ ಪಿರಿಯರ್
ಹಿರಿಯ ಮಹೇಶ್ವರರೊಂದಾಗಿರುತಿರೆ
ತಿರುನಾಳ್ಸೋಪರ್ಕಣಿದಾಡುತ್ತಿರೆ
ಸುಡಿಸಿದೊಡರಿಯದೆ ಮುಟ್ಟಿದೊಡರಿಯದೆ
ಎಡಹಿದೊಡರಿಯದೆ ತಾಗಿದೊಡರಿಯದೆ
ದೇವರನರಿಯದೆ ತಿರುನಾಳರಿಯದೆ
ಆವುದುಮಂ ಮನದೊಳಗರಿಯದೆ
ನಾನಾ ಪರಮೋತ್ಸಾಹದಿನರಿಯದೆ
ತಾನೆಂದರಿಯದೆ ಇದಿರೆಂದರಿಯದೆ
ಬೀಗುತೆ ಬಿಕ್ಕುತೆ ತೂಗುತೆ ತೊನೆವುತೆ
ತೇಗುತೆ ತಣಿವುತೆ ತವೆ ಸುಖವೇರುತೆ
ಮೂಡಿವೆರಸಿ ಕುಣಿಕುಣಿದಾಡುತ್ತುಂ

ಕೂಡಿದ ಸುಖದಿಂ ಸುಖಿಯಾಗುತ್ತುಂ
ಹೊತ್ತುದು ಹೊರೆ ಚಿತ್ತದೊಳೀಶಂ ನೆರೆ
ಪತ್ತಿ ಜಗಿಲ್ತಿರ್ಪುದು ದೇಹಂ ನೆರೆ

ಇಂತಿರಲಲ್ಲಿಗೆ ನಡೆದಂ ದೇವಂ
ಸಂತಸದಿಂದಂ ದೇವರ ದೇವಂ
ನೋಡಾ ಪಾರ್ವತಿ ಎನ್ನಯ ಭಕ್ತನ
ಕೂಡಿದ ಸುಖಿ ಎರಡರಿಯದ ಭಕ್ತನ
ನೆನೆಯುತೆ ನೆನೆಯುತೆ ತಿರುನಾಳಾದಂ
ನೆನೆಯುತೆ ನೆನೆಯುತಲೆನ್ನಾಳಾದಂ
ಕುರುಹಿನ ಹೊರೆಯುವನವನಿಂತೋರ್ವಂ
ಕುರುಹಿನ ಹೊರೆಯುವನಾನಿಂತೋರ್ವಂ

ಎನುತೋರ್ವಂ ಪೂಜಾರಿಯನಲ್ಲಿಗೆ
ಪಿನಾಕಿ ಕಳುಪಲ್ಸುಖದಿಂದಲ್ಲಿಗೆ
ಪೋದಾತಂ ಮುಟ್ಟಲ್ಕವ್ಕ್ರದೆ ಬರೆ
ಭೇದಾಭೇದವನರಿಯದೆ ನೆರೆ ಬರೆ
ಎನ್ನವರಂ ಮುಟ್ಟಲ್ನೀಂ ಪಡೆವಾ
ಎನ್ನಯ ಭಕ್ತರನರಿಯಲ್ಪಡೆವಾ
ಹೋಗೈ ನಂದೀಶಾ ನೀ ಹೋಗೆನೆ
ರಾಗಂಬೆತ್ತುತ್ಸವದಿಂ ಭೋಂಕೆನೆ
ಬಂದಂ ಬಂದಂ ಬದುಕಿದೆನೆನುತುಂ
ಇಂದುಧರನ ಬೆಸನೆನಗಾಯ್ತೆನುತುಂ
ಬಂದಾ ತಿರುನಾಳ್ಪೋವರನಪ್ಪುತೆ
ಸಂದಣಿಸುವ ಸಂಭ್ರಮದಿಂದಪ್ಪುತೆ
ನೋಡಲ್ಜನನವನಿಳಿಪುವ ತೆರದಿಂ
ಮೂಡೆಯನಿಳಿಪುತೆ ಶರ್ವನ ಬೆಸದಿಂ
ಕೈವಿಡಿದೊಡಗೊಂಡೊಲವಿಂ ಬಂದಂ
ಪವಡಿ ಸುಖದಿಂ ಭಕ್ತಂ ನಿಂದಂ

ನಿಂದಿರೆ ಕಾಣುತ್ತುಂ ಗಿರಿಜೇಶಂ
ಸಂದಣಿಸುವ ಪುಳಕದಿ ಸರ್ವೇಶಂ
ಕೊಂಡದೊಳಗೆ ಮುಳುಗಿಸು ಎಂದೆನುತುಂ
ಕೊಂಡೆನ್ನಲ್ಲಿಗೆ ಬಪ್ಪುದು ಎನುತುಂ
ಭಾವಿಸೆ ಪೊಗಳಲ್ದೇವರ ಕಂಡಂ
ದೇವರ ದೇವಂ ದೇವರ ಗಂಡಂ
ಕೋಟಾಕೋಟಿ ಗಣಂಗಳ್ಸಹಿತಂ
ಕೋಟಾಕೋಟಿ ಬಲಂಗಳ್ಸಹಿತಂ
ಪೊನ್ನಾಂಬಲದರಮನೆಯುಂ ಪೊಕ್ಕಂ
ಪನ್ನಗಭೂಷಣನೊಲವಿಂ ಪೊಕ್ಕಂ

ಇತ್ತಂ ನಂದೀಶಂ ನಲಿದಾಗಳ್
ಚಿತ್ತಜಹರನಿತ್ತಾಜ್ಞೆಯೊಳಾಗಲ್
ತಿರುನಾಳ್ಪೋವರನೊಡಗೊಂಡೊಲವಿಂ
ಹರುಷಂಗೊಂಡಾ ಕೊಂಡದೊಳೊಲವಿಂ
ಕುಲವಂ ಜಲದೊಳಗೆಲೆದೊಳೆವಂತೆ
ಕುಲವಂ ಶಿವಕುಲವಂ ಮಾಳ್ಪಂದದಿ
ತಂದು ಮುಳುಂಗಿಸಿದಂ ನಂದೀಶಂ
ಇಂದುಧರನ ಬೆಸದಿಂ ನಂದೀಶಂ
ತಿರುನಾಳ್ಪೋವರ್ಮುಳುಂಗಿ ನಿಂದಿರೆ
ಹರಹರ ಶಿವಶಿವ ಎನುತುಂ ನಿಂದಿರೆ

ಬೆಳಗಿನ ಬಳಗವದೊರ್ಬುಳಿಗೊಂಡುದೊ
ತೊಳಗುವ ಪುಣ್ಯಂ ಪುಂಜಂಗೊಂಡುದೊ
ಚಂದ್ರಂ ನಿಜ ರೂಪಿಂದಂ ನಿಂದನೊ
ಚಂದ್ರಿಕೆಗವಯುವವಂ ಶಿವನಿತ್ತನೊ
ಶಿವಕಾರುಣ್ಯಂ ತವೆ ರೂಪಾದುದೊ
ಶಿವಸಾಮರ್ಥ್ಯಂ ಸಂದಣಿಗೊಂಡುದೊ
ಎಂಬಂದದ ರೂಪಿಂ ನಿಂದಿರ್ದಂ
ಪೊಂಬಣ್ಣದ ತನುವಂ ತಳೆದಿರ್ದಂ

ಪೊಸ ಜಡೆ ಮಕುಟಂ ಭಾಳದ ಭಸಿತಂ
ಪೊಸ ಕುಂಡಲ ಯುಗಳಂ ದರಹಸಿತಂ
ಸುಲಿಪಲ್ಲೊಪ್ಪುವ ಸುರುಚಿರ ವದನಂ
ನಲವಿಂ ತೀವಿದ ಶಾಂತಿಯ ಸದನಂ
ನಿರ್ಮಳ ನೂತನ ವಸನಾವರಣಂ
ನಿರ್ಮಳ ರುದ್ರಾಕ್ಷಿಗಳಾಭರಣಂ
ತೋರಲ್ಕರಿ ಕಳೆ ಯಿಲ್ಲದ ಶಿವನಂ
ತೋರಲ್ಕರಿಗೊರಲಿಲ್ಲದ ಹರನಂ
ಶೈವ ಪವಿತ್ರಂ ಶೈವಾಕಾರಂ
ಶೈವಕುಲಾರ್ಕಂ ನಿಂದಿರೆ ಧೀರಂ
ಕುಲವಳಿದುದು ಕುಲನಾಮವದಿರ್ದುದು
ತೊಲಗಿತು ತನು ನಿಜ ಜೀವವುದಿರ್ದುದು
ಪುಣ್ಯ ಶರೀರಂ ಪುಟವಿಟ್ಟಿರ್ದುದು
ಪುಣ್ಯಂ ಪುರುಷಾಕಾರಂಗೊಂಡುದು
ಎನಿಪಾ ತಿರುನಾಳ್ಪೋವರನೊಲವಿಂ
ಘನ ಮಹಿಮಂ ನಂದೀಶಂ ನಲವಿಂ
ಕೈಗೊಟ್ಟೊಡಗೊಂಡೊಳಗಂ ಪುಗುತಿರೆ

ಸ್ವೈಗೆಡದೆಲ್ಲಂ ಜಯ ಜೀಯೆನುತಿರೆ
ಒಳಪುಗುತುಂ ಶಿವನೊಳಗಂ ಪೊಕ್ಕಂ
ತೊಳಗುತೆ ಬೆಳಗುತೆ ಬೆಳಗಂ ಮಿಕ್ಕಂ
ತಿರುನಾಳಾಗುತೆ ಹರನಾಳಾದಂ
ಹರನಾಳಾಗುತೆ ತಿರುನಾಳಾದಂ
ಶಿವಲಿಂಗದ ಸಂಗದ ಸುಖಿಯಾದಂ
ಶಿವಭಕ್ತಿಯ ಮುಕ್ತಿಯ ಮುದ್ದಾದಂ

ಇಂತಾಗಲ್ಕರೆದವು ಪೂ ಮಳೆಗಳ್
ಸಂತಂ ಮೊಳಗಿದುವಾ ದುಂದುಭಿಗಳ್
ನೆಗೆದವು ವಿಮಾನವಂಬರ ತಳದೊಳ್
ಒಗೆದವು ತಾರಾದ್ರೀಶನ ಪುರದೊಳ್

ಬಂದರಮನೆಯಃಂ ಪರವಃಂ ಪೊಕ್ಕಂ
ಹೆಂದದ ಹೆಚ್ಚಿದ ಸುಖದೊಳ್ಮಿಕ್ಕಂ
ಸಿಂಹಾಸನನಾಗುತೆ ಸುಖವದನಂ
ಸಿಂಹಾಸನ ಚರ್ಮಾಂಬರ ವಸನಂ
ಹರುಷದಿ ಗಣಪದವಿಯನೊಲವಿಂದಂ
ತಿರುನಾಳ್ಗೋವರಿಗಿತ್ತಾನಂದಂ
ಮಿಗೆ ಸುಖದಿಂ ಶಂಕರನೊಪ್ಪಿರ್ದಂ
ಮೃಗಧರಧರಮಸ್ತಕನೊಪ್ಪಿರ್ದಂ
ಹರಿಯಜಪೂಜಿತಪದನೊಪ್ಪಿರ್ದಂ
ಶರಣವ್ರಜ ಸಂಪದನೊಪ್ಪಿರ್ದಂ
ನಿತ್ಯನಿವಾಸಪ್ರಭು ಒಪ್ಪಿರ್ದಂ
ಸತ್ಯಸುಭಾಷಿತ ವಿಭು ಒಪ್ಪಿರ್ದಂ
ಸುಕುಮಾರ ಶಿಖಾಮಣಿ ಯೊಪ್ಪಿರ್ದಂ
ಸಕಲಪ್ರಮಥಾಗ್ರಣಿಯೊಪ್ಪಿರ್ದಂ
ಸೋಮಕಳಾವಿಳಸಿತನೊಪ್ಪಿರ್ದಂ
ಪ್ರೇಮಕಳಾ ವರ್ಧಿತನೊಪ್ಪಿರ್ದಂ
ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದಂ
ಹಂಪೆಯ ರಾಯಂ ತಾನೊಪ್ಪಿರ್ದಂ

**ಕಂದ॥** ತಿರುನಾಳ್ಗೋವರನೊಲವಿಂ
ಹರುಷಂ ಮಿಗೆ ಮೆರೆದ ಶಂಭುಶಂಕರನಘಕುಲ
ಹರಣಂ ಭಕ್ತಿಯನೆಂದುಂ
ಕರುಣಿಸುತಿರ್ಕೆಮಗೆ ಹಂಪೆಯ ವಿರೂಪಾಕ್ಷಂ ॥

# ತಿರುಕುರುಂಪೆ ತೊಂಡರ ಮಹಾತ್ಮೆ.

ಕಂದ॥ ಪರಮೇಶಂ ಗೌರೀಶಂ
ಕರುಣಾವಾಸಂ ಸುಖಾಂಬುನಿಧಿ ಸರ್ವೇಶಂ
ಧರಣೀತಳದೊಳ್ಮೆರೆದಂ
ತಿರುಕುರುಪೆಯ ತೊಂಟರಂ ವಿರೂಪಾಕ್ಷ ಶಿವಂ

## ರಗಳೆ.

ಧರೆಗೆ ಮೆರೆವ ಕಾಂಚಿಪುರದೊಳೊಪ್ಪುತಿರ್ಪನಲ್ಲಿ
ತಿರುಕುರುಂಪೆತೊಂಡರೆಂಬ ಪರಮ ಭಕ್ತನಿರ್ಪನಲ್ಲಿ
ಅಸಗನೊಂದನೆಸಗನೆತ್ತ ಮಿಸುಕದಭವ ವಶದೊಳಿರ್ಪ
ಎಸೆವ ಶಿವನ ಭಕ್ತರೆಂತು ಬೆಸಸಿದಂತೆ ಸುಖದೊಳಿರ್ಪ
ಆತಸಿರವಿಳಾತಳಕ್ಕೆ ನೂತನಂ ನಮಶ್ಶಿವಾಯ
ಭೂತನಾಥನರಿವನುಳಿದರರಿಯರ್ರೈ ನಮಶ್ಶಿವಾಯ
ಇಂತೆನಲ್ಕೆ ಮುಂತೆ ಜಾವವಾಗಲೆಳ್ದು ನಡೆದು ಬಂದು
ಕಂತುಹರನ ಪೂಜೆಗೋಜೆಯಿಂದೆ ಪೂವನೆಳಸಿತಂದು
ಶಿವನ ಭವನದೊಳ್ವಿರಕ್ತಿ ಎತ್ತಿ ಪತ್ತಿ ಸುತ್ತಿ ಬಂದು
ಅವಿಕೃತ ಸ್ವಭಾವ ಭಕ್ತ ನೆಳಸಿ ಬಾಗಿಲೊಳಗೆ ನಿಂದು
ಪೂವನಭವನಂಘ್ರಿಗಳ್ಗೆ ಭಾವಿಸುತ್ತಲಿತ್ತು ನೋಡಿ
ದೇವರಾಜ ಕಲ್ಪಭೂಜ ದೇವ ಕರುಣಿಸೆಂದು ಬೇಡಿ
ನಿನ್ನ ಬಾಗಿಲಲ್ಲದನ್ಯಡಮನೆಂತು ಬಗೆವುದಿಲ್ಲ
ನಿನ್ನನಲ್ಲದನ್ಯ ಸಂಗವನ್ನು ವೆಂತು ಅರಿವುದಿಲ್ಲ
ಕರುಣಿಸಯ್ಯ ಕರುಣಿಸಭವ ಕರುಣಿಸೆಂದು ಕೈಯ್ಯನೆತ್ತಿ
ಸೆರಗು ಬೆರಗನರಿಯಡಚ್ಚ ಶರಣನಲ್ಲಿ ಭಕ್ತಿ ಎತ್ತಿ
ನಡೆದು ಮನೆಗೆ ಬಂದು ತನ್ನ ಕಾಯಕಕ್ಕೆ ಸಲಲು ನೆನೆದು
ಮೃಡನ ಭಕ್ತರಿತ್ತ ವಸ್ತ್ರಮಂ ನಿಕಾರಿಸಲ್ಕೆ ಬಗೆದು

ಪಾಪವೆಂಬ ಮಲಿನ ಮನದ ಸೀರೆಯಂ ತೆರಳ್ಚಿ ಕಟ್ಟಿ
ಕೋಪವೆಂಬ ಕತ್ತೆ ನಿಲಲು ಬೆನ್ನ ಮೇಲೆ ಮಾಣದೊಟ್ಟಿ

ನಡೆದು ಭವನ ಭಕ್ತಿರಸದ ಹೊಳೆಯು ತಡೆಯು ಬಳಿಗೆ ಬಂದು
ವೃಡನೆ ಶರಣೆನುತ್ತೆ ದೇಹವೆಂಬ ಕಲ್ಲ ಬಳಿಗೆ ಬಂದು
ತಾಪತ್ರಯಗಳೆಂಬ ಕಿಚ್ಚಿನಿಂದೆ ಕುದಿಸೆ ಕುದಿವುತಿರಲು
ತಾಪವಾರೆ ವಸ್ತ್ರಕುಲವನಲ್ಲಿ ಪಿಡಿದು ತೊಳೆವುತಿರಲು
ಒಗೆದನೊಗೆದನವನು ಹರನ ಪರವು ಭಕ್ತಿರಸದೊಳೊಗೆದ
ಒಗೆದನೊಗೆವನಾಹ ದೇಹಭಾವವಳಿದು ಸುಖದೊಳೊಗೆದ
ಒಗೆದ ಧನಿಯನಾಲಿಸಿದರ ಪಾಪ ಓಡಿ ಹೋಗಲೊಗೆದ
ಒಗೆಯೆ ಪಿಡಿದ ಹನಿಗಳೆಯ್ದಿದವರೆ ಮುಕ್ತರಾಗಲೊಗೆದ
ಏಕ ನಿಷ್ಠೆಯಿಂದೆ ತಿರುಹಿ ಮುರುಹಿ ಹಿಳಿದು ಹಿಂಡಿ ಮತ್ತೆ
ಏಕನಭವನೆಂಬ ದಿಟದ ಬಿಸಿಲೊಳೊಣಗಿಸುತ್ತ ಮತ್ತೆ
ಪುರಹರ ಪ್ರಸಾದದಿಂದೆ ರಂಜಿಸಲ್ಕೆ ಗಂಜಿ ಇಟ್ಟು
ಶರಣಸಂಗದಿಂದೆ ಘಟ್ಟಿಸುತ್ತೆ ಹೊಳಹನೊಪ್ಪವಿಟ್ಟು
ಪರಮನಂಪ್ರಿಗಳ್ಗೆ ಇಚ್ಚೆಯಂತೆ ಮಡಿಸಿ ಗಳಿಗೆ ಮಾಡಿ
ತಿರುಕುರುಂಪೆತೊಂಡರೆಸೆವ ಮನದ ಮಡಿಯ ನೊಂದುಗೂಡಿ
ಸಕಲ ಭಕ್ತಜನಕೆ ಮನದ ಮಡಿಯ ನೀವುತಿರ್ಪನಲ್ಲಿ
ಸಕಲ ಶರಣ ಕುಲಕೆ ಸಿಂಗರಂಗಳೀವುತಿರ್ಪನಲ್ಲಿ
ಎನಿತುಪಾಪವಾದೊಡಲ್ಲಿ ಬಳಲದಳಲದೊಗೆವನೊಲ್ದು
ಎನಿತು ಶಕ್ತಿಗುಂದೆ ಕುಂದಲನಿತು ಮಿಗಿಲನೊಗೆವನೊಲ್ದು
ಇಂತು ಪಲವು ಕೆಲವು ದಿವಸವೀ ಚರಿತ್ರದಿಂದಿರಲ್ಕೆ

ಕಂತುಹರನುಮರಿದು ರಜತಗಿರಿಗೆ ಶರಣನಂ ತರಲ್ಕೆ
ನೆನೆದು ದೇವಗಣಕುಲಕ್ಕೆ ಬೆಸಸುತಿರ್ದನಭವನಲ್ಲಿ
ಮನುಜ ಲೊಕದೊಳಗೆ ತೊಳಗಿ ಬೆಳಗಿ ಮೆರೆವ ಚೋಳದೇಶದಲ್ಲಿ
ತಿರುಕುರುಂಪೆ ತೊಂಡರೆಂಬ ಭಕ್ತರಿರ್ಪರಲ್ಲಿ ಪೊಕ್ಕು
ನೆರೆದು ನಡೆದು ಮುಂದುಗೆಡಿಸಿ ಬನ್ನಿಮೆಂದು ಬೆಸಸೆ ಮಿಕ್ಕು

ನಡೆದು ದೇವಕೋಟಿಗಣಸಮೂಹವೆಲ್ಲವೆಯ್ದಿ ಬಂದು
ವೃಡನ ಭಕ್ತ ತಿರುಕುರುಂಪೆತೊಂಡರಲ್ಲಿಗೆಯ್ದಿ ಬಂದು
ಎನಗೆ ತನಗೆ ಮತ್ತೆ ವಸ್ತ್ರವೀಯಲಲ್ಲಿ ಬೆಟ್ಟದಂತೆ
ಘನಕೆ ಘನವೆನುತ್ತೆ ಬೆಳೆಯೆ ಸಂತಸಂಬಡುತ್ತಲಿಂತೆ

ಎನ್ನ ಭಕ್ತರಿತ್ತ ಸೀರೆಯೊಗೆಯಲಾನು ಪಡೆದೆಸೆನುತೆ
ತನ್ನ ಮನದೊಳುತ್ಸವಂ ಬಡುತ್ತಲಿಂತು ಸಂದುದೆನುತೆ

ಒಗೆವುತಿರ್ದ ನೊಗೆವುತಿರ್ದ ನೆನಿತನಿನಿತು ಸವೆಯುವಲ್ಲಿ
ಒಗೆಯಲೊಗೆಯೆ ಮೇಲೆ ಸೀರೆ ರಾಸಿಯಾಗುತಿರ್ದವಲ್ಲಿ
ಒಂದುಪಾಸ ವೆರಡುಪಾಸವಾಗಲೊಗೆವುತಿರ್ದನಲ್ಲಿ
ಸಂದಿಸುತ್ತೆ ಪಲವುಪಾಸವಾಗಲೊಗೆವುತಿರ್ದನಲ್ಲಿ
ಒಗೆದು ಬಳಲೆ ಶಕ್ತಿಗೆಟ್ಟು ಬೀಳುತೇಳ್ದು ಮತ್ತೆಯೊಗೆದು
ಬಗೆಯೊಳಂಜೆನಯ್ಯ ದೇವ ಹೋಗೆನೆನುತ ಮೀರಿಯೊಗೆದು
ಒಗೆವುತೊಗೆವುತಲ್ಲಿ ಬಳಲಿ ಭಕ್ತಿ ಚಿತ್ತದಲ್ಲಿ ಪೊಕ್ಕು
ನೆಗೆದು ನಿಷ್ಠೆ ರೂಪುಗೊಂಡು ಮನದ ಮೊನೆಯೊಳುರ್ಕಿ ಮಿಕ್ಕು
ಮುಟ್ಟೆ ಕೆಲವು ಸೀರೆ ನಿರ್ಮಳಂಗಳಾಗುತಿರ್ದವಲ್ಲಿ
ದಿಟ್ಟಿಸಲ್ಕೆ ಕೆಲವು ಸೀರೆ ನಿರ್ಮಳಂಗಳಾದುವಲ್ಲಿ
ನೆನೆಯೆ ಸೀರೆಯೊಟ್ಟಿಲೆಲ್ಲ ನಿರ್ಮಳಂಗಳಾದವಲ್ಲಿ
ಮನದೊಳಂಜಿ ಗಣಸಮೂಹವರಿದೆನುತ್ತೆ ಚಿತ್ತದಲ್ಲಿ
ಎಮ್ಮ ವಶವಿದಲ್ಲ ಒಲ್ಲೆನುತ್ತೆ ಶಿವನೆ ಬಲ್ಲನೆಂದು
ತಮ್ಮೊಳೊಂದುಗೂಡಿ ರಜತ ಗಿರಿಗೆ ಭೋಂಕನೆಯ್ದಿ ಬಂದು

ದೇವ ದೇವ ಏನನೆಂಬೆವು ದಿವಿಯೊಳಗೆ ತಾನೆಯರಿದು
ಭಾವದೊಳಗೆ ಎಳ್ಳನಿತ್ತು ಚಲನೆ ಇಲ್ಲ ನಿಷ್ಠೆ ಪಿರಿದು
ಎನಿತುಪಾಸವಾಗಲಾಗಲನಿತು ಮಿಗಿಲನೊಗೆವುತಿರ್ದ
ಎನಿತೆನಿತ್ತು ಶಕುತಿಗುಂದೆ ಎನಿತನಿತ್ತು ಒಗೆವುತಿರ್ದ
ಅಭವ ನೀವೆ ಬಲ್ಲಿರಯ್ಯ ನಿಮ್ಮ ಭಕ್ತರಿರವದರಿದು
ವಿಭುವೆ ನೀನೆ ನಡೆದು ಕರುಣದಿಂದಲವರಮನವನೊರೆದು
ಕರುಣಿಸೆಂಬ ಬಿನ್ನಪಕ್ಕೆ ಮೆಯ್ಯನಾಂತು ನಡೆದು ಬಂದು
ಗಿರಿಜೆ ಬಾರ ಬಾರ ನೋಡ ಬಾರ ಬಾರೆನುತ್ತೆ ನಲಿದು ಬಂದು
ನಡೆದು ಬಂದು ಗಗನದೊಳಗೆ ಕಾಣದಂತೆಯುಮೆಯನಿರಿಸಿ

ಪೊಡವಿಗಿಳಿಯುತೊಂದು ರೂಪನಲ್ಲಿ ಮೆಲ್ಲನೊಲ್ದು ಧರಿಸಿ
ಗಜದ ಚರ್ಮವಂ ಜಗಕ್ಕೆ ಕರಿಯ ಕಂಥೆಯಾಗಿಸುತ್ತೆ

ನಿಜದ ರೂಪನಡಗಿಸುತ್ತೆ ಭಕ್ತರೂಪನೊದಗಿಸುತ್ತೆ
ಒಗೆದ ಕಯ್ಗಳೊದ್ದೆಯಾದುವದಕೆ ಮುನ್ನವೆಯ್ದಿ ಬಂದು
ನೆಗೆದ ಘನ ನಿದಾಘದೊಳಗೆ ಹೊಳೆಯತಡೆಯ ಬಳಿಗೆ ಬಂದು
ತಿರುಕುರುಂಪೆತೊಂಡರೆಂಬರಿವರ್ಸೀವೆ ಎಂದು ನುಡಿಯೆ
ಪೊರಳುತಲ್ಲಿ ಮೆಲ್ಲನೇಳ್ದು ದೇವ ದೇವ ಅಡಿಯ ಪಿಡಿಯೆ
ಬಂದಿರೆತ್ತಣಿಂ ಬಿಸಿಲ್ಕರಂ ನೆಳಲ್ಗೆ ಸಾರಿ ದೇವ
ಹಿಂದೆಯೊಗೆದ ಸೀರೆಯೊಟ್ಟಲಿಂದೆ ಘನವ ಕಂಡೆ ದೇವ
ಬಿಸಿಲುಗಳೆಯಲೀಗ ತಂದೆಯೊಗೆದು ಕೊಟ್ಟಪೆಂ ಮಹೇಶ
ಎಸೆವ ಚೆಲ್ವು ಬಿಳಿದು ಮಾಡಿ ಯೊಗೆದು ಕೊಟ್ಟಪೆಂ ಮಹೇಶ
ಎಂದೊಡಭವನಲ್ಲಿ ಮೆಚ್ಚಿ ಬೀಳುಡೆಯನು ಕೊಡುವ ತೆರದಿ
ಮಂದರಾಚಲಕ್ಕೆ ನಡೆವ ಸಂಚಕರವನೀವ ತೆರದಿ
ಕೊಟ್ಟು ನಾಳೆ ಜಾವದೊಳಗೆ ಕುಡುವುದೆಂದು ಪೋಗಲಲ್ಲಿ
ಬಿಟ್ಟು ಬಿದಿರ್ದು ತಿರಿಕುರುಂಪೆತೊಂಡರೊಗೆವುತಿರ್ದರಲ್ಲಿ

ಇತ್ತಲಭವನೊಲ್ದು ಬಂದು ಕಾಳಮೇಘ ತತಿಯನಂದು
ಚಿತ್ತವಂ ಪರೀಕ್ಷಿಪೊಂದು ಬಗೆಯ ನೇಹ ರಸದೊಳೊಗೆದು
ನೆನೆಯೆ ಧರಣಿಯಂ ವಿಯತ್ತಳಂಗಳಂ ತೆರಳ್ಚಿ ತೀವಿ
ಘನನಿಕಾಯವೆಯ್ದೆ ಕರೆದು ಉರದೆ ಧರೆಯೊಳೆಲ್ಲ ತೀವಿ
ಕತ್ತಲಿಟ್ಟು ಕವಿದು ಕರೆವ ಮಳೆಗಳೊಳಗೆ ತೆರಳದಲ್ಲಿ
ಚಿತ್ತವಿಟ್ಟು ತಿರುಕುರುಂಪೆ ತೊಂಡರೊಗೆವುತಿರ್ದರಲ್ಲಿ
ಒಗೆದನೊಗೆದನುದಯದಿಂದೆ ಯಸ್ತಮಾನವಾಗಲೊಗೆದು
ಒಗೆದು ನೋಡಿ ಮತ್ತೆಯೊಗೆದು ಬಿಚ್ಚಿ ನೋಡಿ ಮತ್ತೆ ಯೊಗೆದು
ಕರತಳಂಗಳೊಳಗೆ ಕೆಂಪು ಕೆಚ್ಚಗಟ್ಟಿ ಸುಲಿಯಲೊಗೆದು
ಬೆರಲತುದಿಗಳೊಳಗೆ ಯರುಣಜಲದ ಧಾರೆಯೊಗೆಯಲೊಗೆದು
ಒಗೆಯಲೊಗೆಯಲೊಡೆಯ ಕಲ್ಲು ಕಂಥೆ ಕರ್ರನಾಗಿ ತೋರೆ
ಒಗೆಯೆ ಬಿಳಿದು ಹಾರೆ ಕರಿದು ತೋರೆ ಮಸಿಯ ಬಣ್ಣವೇರೆ
ಕಂಥೆ ಕಾಳದಂತೆ ನೀಲದಂತೆ ಕರ್ರನಾಗಿ ತೋರೆ
ಕಂಥೆ ಕತ್ತಲಿಟ್ಟು ಗರಳದಂತೆ ರಾಹು ಬಣ್ಣವೇರೆ
ಕಂಡು ಖಾತಿಗೊಂಡು ಚಿಂತೆಗೊಂಡು ಮೇಲೆ ನೋಡಿ ಸುಯ್ದು
ಕೊಂಡೆ ನಾವ ಹೊತ್ತಿನೊಳಗಿದೇನೆನುತ್ತೆ ಸುಯ್ದು ಬಯ್ದು

•

ತೆಗೆಯಲಿಲ್ಲ ತಿರುಹಲಿಲ್ಲ ಮುರುಹಲಿಲ್ಲ ಮಾಳಿಗಳೊಳಗೆ
ಒಗೆಯಲಿಲ್ಲ ಹಿಂಡಲಿಲ್ಲ ತೊಳೆಯಲಿಲ್ಲ ಮಾಳಿಗಳೊಳಗೆ
ಎಲ್ಲಿ ಗಳಿಸಿದಂ ಮಹಾತ್ಮನಿಂತಿದಂ ನಮಶ್ಶಿವಾಯ
ಎಲ್ಲಿ ಪೊರ್ದಿತಿವರನಿಂತು ಕಂಥೆ ಇದು ನಮಶ್ಶಿವಾಯ
ಎನುತೆ ಮತ್ತೆ ಯೊಗೆವುತಿರೆ ಸಹಸ್ರ ಕಿರಣನುದಯವಾಗೆ

ಮನದೊಳಲ್ಲಿ ಕಂಥೆ ಧವಳಮಪ್ಪ ಚಿಂತೆ ಘನವದಾಗೆ
ಎಂತು ಮಾಡುವೇಂ ಮಹೇಶ ಭಕ್ತನೀಗಳೆಯ್ದೆ ಬರ್ಪ
ಎಂತು ಸೋಲ್ಪೆನವರ ಮುಖಮನೆಂತು ಶಿವನ ನೋಡಿ ಬರ್ಪ
ಎಂದು ಮತ್ತೆ ಬರ್ಪ ದಾರಿಯಂ ನಿರೀಕ್ಷಿಸುತ್ತಯೊಗೆಯು
ನೊಂದು ಮನದೊಳೇನನೆಂಬೆನೆಂದು ಚಿಂತಿಸುತ್ತಜೊಗೆಯೆ
ಕಂಥೆ ಕರ್ರನಾಗೆ ಶಿವನ ಚಿತ್ತವಲ್ಲಿ ಬಿಳಿಯದಾಗಿ
ಕಂತುಹರನುಮಲ್ಲಿ ದೂರದಿಂದೆ ಭಕ್ತ ವೇಷನಾಗಿ
ಬರುತಿರಲ್ಕೆ ತಿರುಕುರುಂಪೆತೊಂಡರಾಗ ನೋಡಿ ಕಂಡು

ಹರನೆ ಹರನೆ ಬಂದರೀವೆನೇನನೆಂದು ಭೀತಿಗೊಂಡು
ಸತ್ಯವಿಡಿದು ಸಮತೆಗೆಟ್ಟು ಭಕ್ತಿ ಮೀರಿ ಮುಂದುವರಿದು
ನಿತ್ಯ ಪದದ ನಿಷ್ಠೆ ನಿಮಿರ್ದು ನೆತ್ತಿಗೇರಿ ಮೀರಿ ನೆಗೆದು
ಧೈರ್ಯವಳಿದು ಲಜ್ಜೆಯುಳಿದು ಮನದೊಳಲ್ಲಿ ಚಿಂತೆ ಮಾಡಿ
ವೀರ್ಯವೆತ್ತಿ ನೆನಹು ಭಕ್ತಿ ತನು ವಿಸರ್ಜನಕ್ಕೆ ಮೂಡಿ
ಹುಸಿದು ಬರ್ದುಕುವಾಸೆಯಿಂದೆ ಸತ್ತೊಡೊಳ್ಳಿತೆಂಬ ತೆರದಿ
ಎಸೆವ ಕಂಥೆಗೆನ್ನ ತನುವನೊಗೆದು ಕೊಡುವೆನೆಂಬ ತೆರದಿ
ಬಿಳಿದು ಮಾಡಲಾರೆನೆಂದು ಪದತಳಕ್ಕೆ ಬೀಳ್ವ ತೆರದಿ
ತಿಳಿದು ತನಗೆ ತಾನೆ ಮುಳಿದು ತನುವನೊಗೆದು ಕುಡುವ ತೆರದಿ
ಇದಿರೊಳಾಗದೆಂದು ಸೂಕ್ಷ್ಮ ತನುವನೊಗೆದು ಕೊಡುವ ತೆರದಿ
ಅದಿರದಿಂತು ರಜತ ಗಿರಿಯೊಳೊಗೆದು ಕೊಡುವೆನೆಂಬ ತೆರದಿ
ತನ್ನನೊಗೆದುಕೊಂಡನಾಹ ತಿರುಕುರುಂಪೆತೊಂಡರಲ್ಲಿ

ಅನ್ನೆಗಂ ಮಹೇಶನರಿದು ಬೇಡ ಬೇಡೆನುತ್ತಲಲ್ಲಿ
ಬರೆ ಮಹೇಶನಿಂದೆ ಮುನ್ನ ಶಿವನ ಹಸ್ತದಲ್ಲಿ ನೆಗೆದು

ಶಿರವನೆತ್ತಿ ಸಸಿನವೆರಸಿ ಹಸ್ತಮಸ್ತಕಕ್ಕೆ ನೆಗೆದು
ಪುಷ್ಪವೃಷ್ಟಿ ಸುರಿದವಲ್ಲಿ ಪರಮನೊಸಗೆ ಎಸೆದವಲ್ಲಿ
ಪುಷ್ಪಚಾಪ ವಿಪಿನ ದಾವನೆಂಬ ಕಹಳೆ ಕರೆದವಲ್ಲಿ
ಆಗಲಭವನೆಯ್ದಿ ಬಂದು ತನ್ನ ರೂಪನೊಲ್ದು ತೋರಿ
ನಾಗ ಕಟಕನಿಂದುಜೂಟನಯ್ದು ನೊಗವನೆಯ್ದಿ ತೋರಿ
ತವಕಿಸುತ್ತ ದಶಭುಜಂ ತ್ರಿಣೇತ್ರದಿಂದಲೊಪ್ಪಿ ತೋರಿ
ರವಿ ಸಹಸ್ರ ಕಿರಣ ಕೋಟಿಯಿಂದೆ ಮೀರಿ ಬೆಳಗಿ ತೋರಿ
ನೋಡ ಗಿರಿಜೆ ಗಣಸಮೂಹವೆಯ್ದಿ ಬಂದರಾಂತರುಂಟೆ
ನೋಡ ದೇವಲೋಕದೊಳಗೆ ಮಡಿಯನಿಂತು ಮಾಳ್ಪರುಂಟೆ
ಎನ್ನ ಕಂಥೆಗಿಂತು ತನ್ನ ತನುವನೊಗೆದುಕೊಂಡರುಂಟೆ
ಎನ್ನಗೋಸುಗಿಂತು ನಿಂದು ತನ್ನ ತೊರೆದು ಮೆರೆದರುಂಟೆ
ಹುಸಿಯುಲರಿಯದಚ್ಚ ಸತ್ಯ ಶರಣ ಬಾರ ಬಾರೆನುತ್ತೆ
ಹುಸಿಗೆ ಹೇಸಿ ನಿನ್ನನೊಗೆದುಕೊಂಡ ಶರಣ ಬಾರೆನುತ್ತೆ

ಎಂದು ತಿರುಕುರುಂಪೆತೊಂಡರಂ ಮಹೇಶನಪ್ಪಿಯಪ್ಪಿ
ಬಂದ ಗಣನಿಕಾಯಕಕ್ಕೆ ತೋರಿ ಹರುಷದಿಂದಲಪ್ಪಿ
ಧರಣಿಯುಲ್ಲುಘೇ ಎನಲ್ಕೆ ಗಗನ ತಳಕೆ ಮೀರಿ ನೆಗೆದು
ಶರಣನಂ ವಿಮಾನದೊಳಗೆ ಪುಗಿಸಿ ಬಯಲನುಗಿದು ಬಗಿದು
ರಜತಗಿರಿಗೆ ಬಂದು ಸಿಂಹವಿಷ್ಟರ ಪ್ರತಿಷ್ಠನಾಗಿ
ಭುಜಗ ಭೂಷನವರ್ಗೆ ನಿತ್ಯಪದವನಿತ್ತು ನೋಡಿ ಬೀಗಿ

ದೇವವೃಂದದೊಳಗೆ ದೇವದೇವನೊಪ್ಪುತಿರ್ದನಲ್ಲಿ
ದೇವನಿಕರ ಮಕುಟವೇದ್ಯ ಪಾದನೊಪ್ಪುತಿರ್ದನಲ್ಲಿ
ಶರಣಕುಲ ಸರೋಜಬಾಲ ತರಣಿ ಕಿರಣನೆಸೆದನಲ್ಲಿ
ಶರಣಶರಧಿವರ್ಧನಪ್ರಭೂತಚಂದ್ರ ನೆಸೆದನಲ್ಲಿ
ಭಕ್ತಜನಮಯೂರಮೇಘನಿನದನೊಪ್ಪುತಿರ್ದನಲ್ಲಿ
ಭಕ್ತಹೃದಯ ಭಾವ ಭವನ ಚರಿತನೊಪ್ಪುತಿರ್ದನಲ್ಲಿ
ಅಮಮ ವಿಷಧರಪ್ರಸಿದ್ಧ ಮೂರ್ತಿಯೊಪ್ಪುತಿರ್ದನಲ್ಲಿ
ಅಮಮ ಸಕಲದೇವರಾಜನೊಪ್ಪುತಿರ್ದನಲ್ಲಿ
ಕುಂಜರಾಸುರೋಗ್ರ ಚರ್ಮವಸನನೊಪ್ಪುತಿರ್ದನಲ್ಲಿ

ಕಂಜನಯನನಯನ ಕುಜಲಸಿತಭರಣನೆಸೆದನಲ್ಲಿ
ಮಹಾದಾನಿ ಮಹಾಮಾನಿ ಮಹಾದೇವನೊಪ್ಪಿದಂ
ಮಹಾ ಕರುಣಿ ಹಂಪೆಯ ವಿರುಪಾಕ್ಷನಿಂತೊಪ್ಪಿದಂ ॥

**ಕಂದ॥** ಪ್ರಿಯವೊಗೆಯಲೊಗೆದ ತಿರುಕುರುಂ
ಪೆಯತೊಂಡರಭೃತ್ಯನೆಂದು ಶಂಕರನ ಭವಂ
ಜಯಶೀಲಂ ಕುಡು ಶಿವಭ
ಕ್ತಿಯ ನೆನಗೊಲವಿಂದೆ ಹಂಪೆಯ ವಿರೂಪಾಕ್ಷಂ ॥

# ಅರಿವಾಳ್ತಾಂಡರ ಮಹಾತ್ಮೆ.

**ಕಂದ॥** ಅರಿವಾಳ್ತಂಡರನಿಂತೀ
ಧರೆಯರಿಯಲ್ಮೆರೆದನಪ್ರತಿಮನಭವನುಮಾ
ವರನೇಕನದ್ವಿತೀಯಂ
ಪುರಮಥನಂ ಕರುಣಿ ಹಂಪೆಯ ವಿರೂಪಾಕ್ಷಂ

## ರಗಳೆ.

ಪುರಹರನ ಸೆಜ್ಜೆಯೆನಿಸಿದ ಚೋಳದೇಶದೊಳ್
ಧರೆಗೆ ಮೆರೆವುತ್ತಿರ್ಪುದೊಂದು ಪುರ ಒಪ್ಪದೊಳ್
ತಿಣ್ಣಮಂಗಳವೆಂಬ ಪುರದಲ್ಲಿ ಪುಟ್ಟಿದಂ
ಕಣ್ಣವೆನಿಸಿದ ಶಿವನ ಭಕ್ತಿಯಂ ಮುಟ್ಟಿದಂ
ತನ್ನ ಪೆಸರೊಪ್ಪುವರಿವಾಳ್ತಾಂಡರೆಂಬುದದು
ಪನ್ನಗಾಭರಣನ ಕಿವಿಗೆ ಸವಿಯನೀವುದದು
ಕೊಟ್ಟ ಕೂಲಿಗೆ ಕೆಯ್ಗಳಂ ಕೊಯ್ದು ಜೀವಿಪಂ
ದಿಟ್ಟ ಮೂರುಳ್ಳ ಶಂಭುವಿಂಗಿತ್ತು ಸೇವಿಪಂ
ಅಲ್ಲಿ ಬೆಳೆದಿಪ್ಪ ನೆಲ್ಬರಲುಮಾಧೀಶಂಗೆ
ಅಲ್ಲಿ ಬಂದೋಗರವ ನೆಲ್ಲೆಲ್ಲವೀಶಂಗೆ
ಮರನೆಲ್ತನಿಯ ಸದಕದ ನೆಲ್ಬರಬರುತಿರಲ್
ಕರುಣಿಗಂ ತನಗಂ ಪ್ರಸಾದಸುಖಮಾಗಿರಲ್
ನನ್ನಿ ಇಲ್ಲದೆ ಬೇರೆ ನುಡಿಗಳಂ ನುಡಿದರಿಯ
ಅನ್ನಿಯಂಗಳನೆಂದುವುಂ ಮರೆದು ಕೇಳ್ದರಿಯ
ಉದಯದೊಳಗೇಳ್ದು ಕಣ್ಣ ಹೊಸೆವುತೆಯ್ತಂದು
ಮದನಾರಿ ಇರ್ಪ ತಿರುನಲ್ಲೂರ್ಗೆ ನಡೆತಂದು
ನಿಂದು ಕಿವಿವಿಡಿದು ಕೈಮುಗಿದು ಜೊತ್ತಂ ಪೊತ್ತು
ತಂದೆ ನೀಂ ಹೆಚ್ಚಿ ಬಾಳೆಂದು ಹರಕೆಯನಿತ್ತು
ಶಿವ ನಿನ್ನ ಬಾಗಿಲಲ್ಲದೆ ಮತ್ತರಿವುದಿಲ್ಲ
ಶಿವ ನಿನ್ನ ಮುಖವಲ್ಲದಿನ್ನರಿವ ಮುಖವಿಲ್ಲ

ನಿನ್ನ ತಿರುನಾಳಲ್ಲದಿನ್ನರಿವ ನಾಳಿಲ್ಲ
ನಿನ್ನ ಭೇರಿಯ ನಾದವಲ್ಲದಾಲಿಪುದಿಲ್ಲ
ಎನಗೆ ಹೊನ್ನುಂ ನೀನೆ ಎನಗೆ ಚನ್ನುಂ ನೀನೆ
ಎನಗಪ್ಪವಂ ನೀನೆ ಎನಗುಳ್ಳವಂ ನೀನೆ
ಎಂದಿಂತು ಪೊಡಮಟ್ಟು ಹರುಷದಿಂ ನಡೆತರ್ಪ
ಎಂದುವುಂ ನಿತ್ಯ ನೇಮಂ ತಾನಿದಂ ತರ್ಪ
ಅರಸಿ ಕರೆದೊಡೆ ಪೋಪನಲ್ಲದಿರ್ದೊಡೆ ಪೋಗ
ಎರಗನಾಸೆಗೆ ಸಲ್ಲ ನಿಚ್ಚಗುಚ್ಚುಕನಾಗ
ಎಂತಪ್ಪ ಲಾಭಂಗಳೆಲ್ಲ ಉಂಟಾದೊಡಂ
ಕಂತುಹರನಂ ಬಿಟ್ಟು ಪೋಗನೇನಾದೊಡಂ
ನಂಟರುಂ ಶಂಭುವೇ ನಲ್ಲರುಂ ಶಂಭುವೇ
ಉಂಟೆನಿಪ ಬಂಧುವುಂ ಬಳಗವುಂ ಶಂಭುವೇ
ತನಗೆ ಕಣ್ಣುಂ ಗತಿಯುಮೀಶನೇ ಎಂದಿರ್ದು
ತನಗೆ ಧನಮುಂ ಮಾನಮುಮೀಶನೆಂದೇ ಇರ್ದು
ಕೂಲಿಯಿಂದಾದ ಓಗರದ ನೆಲ್ಲಕ್ಕಿಯುಂ
ಮೇಲೆನಿಸಿ ಬೆಳೆದ ಮಾವದು ಕೊಯ್ದು ಕೀರೆಯುಂ
ತಂದು ನಲವಿಂದ ಶಿವನಾರೋಗಣೆಗೆ ಕೊಟ್ಟು
ಸಂದಣಿಪ ಪುಳುಕದಿಂದಂ ಸಂತಸಂಬಟ್ಟು
ಎನ್ನಾಯುವಂ ಕೊಂಡು ಬರ್ದುಕು ನೀನೆಂದೆನುತೆ
ಎನ್ನಯ್ಯ ನೀನೆ ಬೆಳೆ ಸಿರಿವಂತನಾಗೆನುತೆ
ಎಂದು ಪೊರಮಟ್ಟು ತನ್ನೂರ ನಲವಿಂ ಪೊಕ್ಕು
ಇಂದುಶೇಖರನ ಪ್ರಸಾದಕ್ಕೆ ಮನಂ ಮಿಕ್ಕು
ಕೂಲಿಯಾಳ್ಗಳ ನಡುವೆ ಎಂತಂತೆ ನಿಂದಿರ್ಪ
ಆಲೋಕಿಸಲ್ಕಿವನ ಕಣ್ಗೆ ತನ್ನಂತಿರ್ಪ
ಇಂಚೆವೋದಾ ಕೆಯ್ಗಳೊಳಗೆ ಈತಂ ಪುಗಲ್
ವಂಚಿಸದೆ ವಿಪುಳ ಫಲವಾಗಿರ್ಪವತಿ ಮಿಗಿಲ್
ಕೆಯ್ಯೊಡೆಯರುತ್ಸವಂಬಡುವರಾತನನರಿಯ
ಅಯ್ಯಯ್ಯ ಲಾಭವಾಯ್ತೆಂಬರಾತನನರಿಯು
ಇಂತು ಕೂಲಿಗೆ ಕೊಯ್ವನಂತು ಪರಮಂಗೀವ
ಇಂತಿಂತು ಎಂತುವುಂ ಶಿವನತ್ತಲೇ ಭಾವ

ಏನೆಂಬೆನೊಪ್ಪುವರಿವಾಳ್ತಾಂಡರಿರ್ಪುದಂ
ನಾನಾ ವಿಧದ ಶರ್ವನರ್ಚನೆಯೊಳಿರ್ಪುದಂ
ಭಕ್ತರಂ ಕಂಡೊಷಂ ಜೀವ ಬಂದಂದದಿಂ
ಭಕ್ತರಂ ಕಂಡೊಡೆರಗುವನೆರಗದಂಪದಿಂ
ಕೂಲಿಗೊಳ್ಳಂ ನೋಡ ದೇವ ದಾನದ ಕೆಯ್ಗ
ಕೂಲಿಗೊಳ್ವಂ ನೋಡ ಮಿಕ್ಕ ಭವಿಗಳ ಕೆಯ್ಗ
ಇಂತು ಪಲವುಂ ಕೆಲವು ವತ್ಸರಂ ನಡೆಯುತಿರೆ
ಸಂತತಂ ಶಿವಭಕ್ತಿ ಮೀರಿ ದಳವೇರುತಿರೆ

ಒಂದು ದಿನ ಓಗರಪ ನೆಲ್ಬಾರದಡಂದಿಗೆ
ಒಂದುಪಾಸವಾದುದು ಶಿವನ ಭಕ್ತಂಗೆ
ಎರಡನೆಯ ದಿವಸಕಂ ಮತ್ತೆ ನೆಲ್ಬರದಿರಲ್
ಪರಮ ಭಕ್ತಂಗೆರಡುಪಾಸವಾಗುತ್ತಿರಲ್
ಆಹಾ ಮಹಾದೇವ ಬರ್ದುಕಿದೆಂ ಬರ್ದುಕಿದೆಂ
ಆಹ ಉಪವಾಸವಲ್ಲಲ್ಲಯ್ಯ ಬರ್ದುಕಿದೆಂ
ಈ ತೆರವೆ ನಡೆಯಿಸಯ್ಯ ನಿನ್ನನು ಬೇಡುವೆಂ
ಈ ತೆರದೆ ನೇಮವಂ ಕುಂದದಾಂ ಮಾಡುವೆಂ
ಎಂದೆನುತೆ ಉಪವಾಸಮುಂ ತೃಪ್ತಿಯಾಗುತಿರೆ
ಬಂದಕ್ಕಿಯುಂ ಶಿವಂಗಳ್ಕರಿಂದೀಯುತಿರೆ
ಇಪ್ಪತ್ತು ಉಪವಾಸವಾದುದಾ ಭಕ್ತಂಗೆ
ತಪ್ಪದೆ ಶಿವಂಗೆ ಭಾಷೆಗಳನೀವಾತಂಗೆ
ಆಗ ಕೋಡಡೆ ಕೊಂಕದಲುಗದಲ್ಲಾಡದಿರೆ
ರಾಗದಿಂದೊಂದೊಂದು ದಿನಕೆ ಕಳೆ ಏರುತಿರೆ

ಇತ್ತಲಾ ಕೈಲಾಸದೊಳಗೆ ಸರ್ವೇಶ್ವರಂ
ಚಿತ್ತದೊಳಗರಿದು ದಯೆಯಿಂದಂ ಮಹೇಶ್ವರಂ
ಬಾರಾ ಉಮೇ ಎಮ್ಮ ಭಕ್ತನಂ ನೋಡುವೆಂ
ಮೇರೆಗೆಡೆ ಜೀವ ಪರಿಯಂತರಂ ಕಾಡುವಂ
ಆರುವರಿಯದನೋರ್ವ ಗುಪ್ತ ಮಾಹೇಶ್ವರಂ
ಧಾರುಣಿಯೊಳಿರ್ದಪಂ ಸಾತ್ವಿಕ ಮಹೇಶ್ವರಂ

ತೋರಿದಪೆನೀಗಳೀ ಭಕ್ತನ ಗುಣಂಗಳಂ
ಬೀರಿದಪೆನೀಗಳೆ ತುಹೇಶನ ಗುಣಂಗಳಂ
ಎಂದು ಪೇಳುತ್ತೊಡಂಗೊಂಡು ಹರುಷಂ ಮಿಕ್ಕು
ಬಂದು ಚೋಳ ಕ್ಷಿತೀಶ್ವರನ ದೇಶಂ ಪೊಕ್ಕು
ತಿರುನಲದ ದೇವಾಲಯದ ಮುಂದೆ ನಿಂದಿರಲ್
ಗಿರಿಜೆಗೊರೆಯುತುಂ ಗರ್ದ್ದೆಯೊಳಗಂ ನಿಂದಿರಲ್

ಇತ್ತಲರಿವಾಳ್ತಾಂಡರೊಯ್ಯನೊಂದಡಿ ಇಡುತೆ
ಹತ್ತಿರ್ಪತ್ತೊಂದು ಉಪವಾಸದಿಂದಂ ಬರುತೆ
ಕೂಲಿಯೋಗರದಕ್ಕಿ ಕೊಯ್ಸೀರೆಯುಂ ಕೊಂಡು
ಮೇಲೆ ಕಂಪಿಡುವ ಮಾವಡುವನೊಲವಿಂ ಕೊಂಡು
ಒಚ್ಚೆ ರಂಗಿನ ಉಡಿಗೆ ಒಳಗೆ ಕುಡುಗೊಲ್ಮೆರೆಯೆ
ಪಚ್ಚೆ ಪಸಿಯೊಕ್ಕಲ ಮಗಂ ಭಕ್ತಿ ಕಣ್ದೆರೆಯೆ
ಬರೆ ಗಿರಿಜೆ ಕಂಡೀತನೇ ಭಕ್ತನೆಲೆ ದೇವ
ಹರ ನಿಮ್ಮನರ್ಚಿಸಲ್ಬಲ್ಲನೇ ಎಲೆ ದೇವ
ಪಾಡಲಾಡಲ್ಪೊಗಳಲೀತನೇನರಿವನೇ
ನೋಡಲೊಕ್ಕಲ ಮಗಂಗೊಲ್ವೆ ಮೇಲರಿವನೇ

ಎನೆ ವಿರೂಪಾಕ್ಷನೆಂದಂ ಮೇನಕಾಸುತೆಗೆ
ನಿನಗೆ ಪೇಳ್ವೆಂ ಕೇಳು ಕಡು ಹಿತವನಿಂತೆನಗೆ
ಅರ್ಚಿಸಲ್ಕರಿಯನನ್ಯಕ್ಕಳಿಪದಿರಬಲ್ಲ
ಎಚ್ಚತ್ತು ಪೊಗಳಲರಿಯಂ ಹುಸಿಯದಿರಬಲ್ಲ
ಆಡಲರಿಯಂ ಬಲ್ಲವರ್ಬಲ್ಲನೆಲೆ ದೇವಿ
ಪಾಡಲರಿಯಂ ಪಾಡಿ ನರ್ತಿಸಲೀತಂ ದೇವಿ
ಎನ್ನನರಿಯದ ಚಲ್ವು ಶಬುದ ಚಲ್ವೆಲೆ ಗಿರಿಜೆ
ಎನ್ನನರಿಯದ ಪಾಡು ಪಲವಾದಿತೆಲೆ ಗಿರಿಜೆ
ನಡೆ ಇಲ್ಲದನ ಪಾಡ ನಾನೊಲ್ವೆನೇ ದೇವಿ
ನುಡಿದು ಪುಸಿವನ ನುಡಿಯ ನಾನೊಲ್ವೆನೇ ದೇವಿ
ನುಡಿ ಕಿರಿದು ನಡೆ ಪಿರಿದು ನೋಡೆನ್ನ ಭಕ್ತರ್ಗೆ
ನುಡಿಗಳುಂ ನಡೆಗಳುಂ ಪೊರಪೊಣ್ಮವಾತಂಗೆ

ಒಡಲ ಪಿಡಿದಿಹ ಗುಣಗಳಿಲ್ಲವಾ ಭಕ್ತಂಗೆ
ಸಡಗರದ ಸಂಭ್ರಮದ ಬಗೆ ಪೊರ್ದಮೀತಂಗೆ
ಅವನ ಚರಿತವ ಪೊಗಳ್ವಡರಿದು ವೇದಂಗಳಿಗೆ
ಭುವನದೊಳು ನಡೆವ ಮನುಜರ ಪರಿಯು ಅಲ್ಲಿವಗೆ
ತೋರಿದಪೆನೀಗಳುಂ ಭಕ್ತನ ಗುಣಂಗಳಂ
ಮೀರಿ ಮಿರುಗುತಿರ್ಪೇಕ ನಿಷ್ಠನ ಗುಣಂಗಳಂ

ಎನುತಮಿರಲಂತೊಂದು ಬಿರುಗಾಳಿ ಬೀಸಿತ್ತು
ವನದ ತರಗೆಲೆ ಕಾಳ ಧೂಳಿಯುಂ ನೆಗಪಿತ್ತು
ಆಗಳಾ ಗಾಳಿ ಗರಿವಾಳ್ತಾಂಡನಳುಕುತ್ತೆ
ಸಾಗಿಸುತಲಕ್ಕಿ ಕೊಯ್ಕೀರೆಯುಂ ಪಿಡಿವುತ್ತೆ
ಕಣ್ಮುಚ್ಚಿ ಧೂಳಡಸಲೊತ್ತರಿಸಿ ಬರುತಿರಲ್
ಉಣ್ಮಿದುಪವಾಸದಿಂ ಡೆಂಡಣಿಸಿ ಬರುತಿರಲ್
ಮುಂದೊಂದು ಬೀಟೆ ಇರ್ದುದ ಕಾಣದೆಡಹಿದಂ
ನಿಂದು ಗಿರಿಸುತೆ ಶಿವಂ ನೋಡುತಿರಲೆಡಹಿದಂ
ಹರಹರ ನಮಃಶಿವಾಯೆನುತೆ ಬೀಳ್ದಂ ನೋಡ
ಎರೆಯು ಬೀಟೆಗೆ ಹಾಸಿ ಹರಹಿ ಬೀಳ್ದಂ ನೋಡ
ಬೀಳ್ದು ತನ್ನಾಯುವೊಕ್ಕಂತೆ ಹಿರಿದುಂ ಮರುಗಿ
ಎಳ್ದು ಚೆಲ್ಲಿರ್ದಕ್ಕಿಯುಂ ಕಂಡು ಮಿಗೆ ಮರುಗಿ
ಅಯ್ಯೋ ಶಿವನ ಬಾಯ ತುತ್ತ ಎಂತೊಕ್ಕೆನೇ
ಅಯ್ಯೋ ಶಿವದ್ರೋಹವಾಯ್ತಿನ್ನು ಬಾಳ್ವೆನೇ
ಎಂದುಮಿಂತಾಗದಿಂದೇಕಿಂತುಟಾದುದೋ
ಮಂದಭಾಗ್ಯಮಿದೆನಗೆ ಬಂದು ಬಳಿಸಂದುದೋ
ಇನ್ನಾವ ಮೋರೆಯುಂ ಮುಂತಿಟ್ಟು ಪೋದಪೆಂ
ಇನ್ನೆವರ ಹಸಿದಿರ್ಪನಿನ್ನೆಂತು ಪೋದಪೆಂ
ಇರೆನಿನ್ನಿರೆಂ' ಸತ್ಯಮಿದೆ ಸತ್ಯವೆಂದೆನುತೆ
ಅರಿವಾಳನಿರದೆ ಹೆಡತಲೆಗಾಗಿ ಮೋಹಿಸುತೆ
ಸಂಸರದ ಬೇರ್ಗೆ ಕುಡುಗೋಲ್ಗೊಳ್ವ ಮಾಳ್ಕೆಯಿಂ
ಸಂಸರಂ ತಾನಿಲ್ಲದಚಲೈಕ ನಿಷ್ಠೆಯಿಂ
ಘರಿಘರಿಲನರಿಯೆ: ಪಾರ್ವತಿ ಕಂಡು ಸಾಲ್ಗೆನಲ್

ಹರಹರ ಮಹಾದೇವಾ ಮಾಣಿಸೈ ಎನುತಿರಲ್
ಗೋಣರಿಚರೇ ನೋಯದಂಜದಿರು ಎಲೆ ದೇವಿ
ನೀನೇಕೆ ಮರುಗಿದಪೆ ನೋಡು ಪಾರ್ವತಿದೇವಿ
ಎನಲಲ್ಲಿ ಕೈದೆಗೆಯಲನುಮಾನಿಸದೆ ಕರಂ
ಮನನಾರೆಯರಿದು ತಲೆ ಬೀಳ್ವಾಗಲೀಶ್ವರಂ
ಹೋಹೋ ಹೊ ಸಾಕಿನ್ನು ಬಿಡು ಬಿಡರಿವಾಳ್ತಾಂಡ
ಆಹಾಹ ಇಂತು ಮೀರುವರೆ ಯರಿವಾಳ್ತಾಂಡ
ಎನುತೆ ತಲೆದಡಹಿ ಕೈವಿಡಿದೆತ್ತಿ ಶಂಕರಂ

ತನತನಗೆ. ಪೂಮಳೆಗಳೆರಗಿದವನಂತರಂ
ದುಂದುಭಿ ಸ್ವನಮುಣ್ಮಿದವು ಗಗನದೊಳ್ಕೂಡೆ
ಸಂದಣಿಸಿ ಬಂದುದಲ್ಲಲ್ಲಿ ಗಣತತಿ ಕೂಡೆ
ಅಲ್ಲಿಯರಿವಾಳ್ತಾಂಡರಂ ದೇವನಪ್ಪಿದಂ
ಸಲ್ಲೀಲೆಯಿಂ ನೋಡಿ ನೋಡಿ ಮೈವೆರ್ಚಿದಂ
ಇನಿತು ಉಪವಾಸದೊಳಗಿಂತು ಬಂದವರುಂಟೆ
ಇನಿತು ದಿನವೀ ಸೇಮವಂ ಸಲಿಸಿದವರುಂಟೆ
ನಡೆ ಮಗನೆ ಕೈಲಾಸಪುರಕೆ ನೀನೆಂದೆನುತೆ
ತಡೆಯದೇರ್ವೈ ವಿಮಾನವನಿದಂ ನೀನೆನುತೆ

ಒಲ್ಲೆನೊಲ್ಲೆಂ ತಂದೆ ನಾನಿಂತು ಬರ್ಪೆನೇ
ಇಲ್ಲಿ ನೀಯುಣ್ಣದೊಡೆ ಅಲ್ಲಿಗೈತರ್ಪೆನೇ
ಆರೋಗಿಸಲ್ವೇಳ್ಪುದಿಲ್ಲಿ ಈಗಳ್ದೇವ
ಆರಯ್ಯ ನಾಂ ತಂದ ಕೀರೆಯುಂ ಎಲೆ ದೇವ
ನೀವುಂಡೊಡಪ್ಪೆಯಾದೊಡೆ ಬಂದಪೇಂ ದೇವ
ದೇವ ಬಾರೆಂ ಬಾರೆನತಿ ವಿರೋಧವಿದೆನಗೆ
ಎನೆ ಮುದ್ದುತನವ ಸಲಿಸುತ್ತುಂಡನೀಶ್ವರಂ
ಮನವಾರೆ ಕೀರೆ ಮಾವಡುವಿಂದೆ ಶಂಕರಂ
ದನಿಗುಡಲ್ತಾಹ ನಾಂ ಬದುಕಿದೆಂ ಶಿವನುಂಡ
ಎನಗಿನ್ನು ದಾರು ಸರಿ ಎನ್ನೊಡೆಯನೊಲಿದುಂಡ
ಎಂದು ಕೊಂಡಾಡುತಿರೆ ಕಂಡು ಮೆಯ್ವೆರ್ಚುತುಂ

ಇಂದುಮುಖಿ ಪಾರ್ವತಿಗೆ ತೋರಿ ನಲವೇರುತುಂ
ಕೊಂಡಾಡುತುಂ ನವ ವಿಮಾನದೊಳ್ಳುಳ್ಳಿರಿಸಿ
ಕೊಂಡೊಯ್ದು ಕೈಲಾಸಪುರದೊಳಗಲಂಕರಿಸಿ
ಓಗರದ ಕುಡುಗೋಲ ನೋಡು ನೋಡೆಂದೆನುತೆ
ರಾಗದಿಂ ಬಂದ ಗಣವೃಂದಕ್ಕೆ ತೋರಿಸುತೆ
ಗಣಪದವಿಯುಂ ಕೊಟ್ಟು ಸುಖದೊಳರಿವಾಳ್ತಾಂಡ
ಗಣವೃಂದದೊಳ್ಸಂದು ಬಂದರರಿವಾಳ್ತಾಂಡ

ಎಂದು ಗಣಪದವಿಯುಂ ಕೊಟ್ಟು ಕಾರುಣ್ಯದಿಂ
ಇಂದುಧರನಂದು ಕೈಲಾಸದೊಳ್ಪರುಷದಿಂ
ಕಮಲಭವ ವಿಮಲಮಸ್ತಕ ಹಸ್ತನೊಪ್ಪಿದಂ
ಪ್ರಮಥಗಣ ವಾರ್ಧಿವರ್ಧನ ಚಂದ್ರನೊಪ್ಪಿದಂ
ಕಂದರ್ಪ ದರ್ಪದಹನ ಜ್ಯೋತಿಯೊಪ್ಪಿದಂ
ಕುಂದಕುಟ್ಮಳ ಸನ್ನಿಭ ಶರೀರನೊಪ್ಪಿದಂ
ಭರ್ಗನೊಪ್ಪಿದನುಗ್ರತರ ರೂಪನೊಪ್ಪಿದಂ
ದುರ್ಗತ್ರಯಾರಣ್ಯದಾವ ಶಿಖಿಯೊಪ್ಪಿದಂ
ಅಮ್ಮಮ್ಮ ಪಂಪಾಪುರಧೀಶನೊಪ್ಪಿದಂ
ಅಮ್ಮ ಹಂಪೆಯ ವಿರೂಪಾಕ್ಷ ಶಿವನೊಪ್ಪಿದಂ

**ಕಂದ॥** ಅರಿವಾಳ್ತಾಂಡಗೊಲವಿಂ
ಕರುಣಿಸಿ ಗಣಪದವನಿತ್ತ ಶರ್ವಂ ಶಶಿಶೇ
ಖರನೆಮಗೆ ಭಕ್ತಿಯುಂ ಕೂ
ರ್ತುರವಣೆಯಿಂದೀಗೆ ಹಂಪೆಯ ವಿರೂಪಾಕ್ಷಂ



# ಒಲಘಾಂಡ ಮೂರ್ತಿಗಳ ಮಹಾತ್ಮೆ.

**ಕಂದ** ॥ ಒಲಘಾಂಡ ಮೂರ್ತಿಗಳನಾ
ಜ್ವಲನಾರ್ಕೇಂದು ತ್ರಿನೇತ್ರನ ಪ್ರತಿಮಂ ಮತ್
ಕುಲಪತಿ ಮೆರೆದಂ ಧಾತ್ರೀ
ತಳದೊಳ್ಮದನಾರಿ ಹಂಪೆಯ ವಿರೂಪಾಕ್ಷಂ ॥

## ರಗಳೆ.

ವಸುಮತಿಗೆ ತೊಡವೆನೆನಿಪ ಪಾಂಡ್ಯ ದೇಶದೊಳೊಂದು
ಎಸೆವ ಮದುರಾಪುರವೆನಿಪ್ಪವೆಸರಿಂ ಸಂದು
ಮೆರೆದಿರ್ಪುದೊಂದು ಪುರವಾ ಪುರದೊಳೊಪ್ಪುವಂ
ಹೆರೆಸೂಡಿದನ ಭಕ್ತಿಭಾವಮುವನಪ್ಪುವಂ
ತನ್ನ ಪೆಸರೊಲಘಾಂಡಮೂರ್ತಿ ಎಂಬುದು ಧರೆಗೆ
ತನ್ನರ್ಥ ಸಂಖ್ಯೆ ಮಿಗೆ ಘನಘನಕೆ ಊರ್ವರೆಗೆ
ಬಲ್ಲಿದಂ ವ್ಯವಹಾರಿ ಎನಿಸಿರ್ಪನಾ ಪುರಕೆ
ಎಲ್ಲರಿಂದಧಿಕತರನಾಗಿರ್ಪನಾ ಪುರಕೆ
ಶಿವನ ಶರಣರ್ಗೆ ಕಿಂಕರನಾಗಿ ಜೀವಿಪಂ
ಭವನ ಶರಣರ್ಗೆಲ್ಲವಂ ಕೊಟ್ಟು ಸೇವಿಪಂ
ಇಂತಿರ್ದು ಶಿವನ ಭವನವನೊಲ್ದು ನಡೆತಂದು
ಸಂತತಂ ಪುಳಕಂಗಳುರವಣಿಸುತಂ ನಿಂದು
ಒಳಪೊಕ್ಕು ಮಿಗೆ ಚೊಕ್ಕ ನಾಯನಾರ್ಗೊಲ್ದಲ್ಲಿ
ತಿಳಿದಗ್ಗವಣಿಯ ಮಜ್ಜನವನೀವುತ್ತಲ್ಲಿ
ಹೊನ್ನ ಬೆಳ್ಳಿಯ ಮೌಕ್ತಿಕದ ಚಿಪ್ಪಿನೊಳಗಿಕ್ಕಿ
ಭಿನ್ನ ಸೌರಭ್ಯಂಗಳಿಂ ಹೊರೆದು ಕಂಪಿಕ್ಕಿ
ಇರ್ದ ಚಂದನವನೊಲ್ದುದ್ವರ್ತನಂ ಮಾಡಿ
ಹೊರ್ದಿದಿರವಂತಿ ಸಂಪಿಗೆಯಲರ್ಗಳಂ ಸೂಡಿ
ನವ ಧೂಪಮಂ ಕೊಟ್ಟು ಮಂಗಳಾರತಿ ಎತ್ತಿ
ನವನವ ಪ್ರೇಮಂಗಳಿಂದಭವನಂ ಸುತ್ತಿ

ಆರೋಗಿಸಲ್ಕೊಟ್ಟು ವೀಳೆಯಂಗಳನಿತ್ತು
ಸಾರ ಘನಸಾರಮಂ ಪುಳುಕಿಸುತೆ ನಲಿದಿತ್ತು
ಗರ್ಭಗೃಹದಲ್ಲಿ ಚಂದನದ ಸೌದೆಯನಿಕ್ಕಿ
ನಿರ್ಭರದ ಸ್ವೇದ ಪುಳಕಂಗಳಿಂ ಮೈಯಿಕ್ಕಿ
ದೇವ ಚಂದನದ ನೇಮವನಿದಂ ನಡೆಯಿಪುದು
ಆವುದೊಂದರಿದಾದೊಡಂ ದೇವ ಕರುಣಿಪುದು
ಎಂದೆನುತೆ ನಿತ್ಯ ನೇಮಂ ಮಾಡಿ ನಡೆತಂದು
ಇಂದು ಶೇಖರನೆ ಶರಣೆನುತುಂ ಮನೆಗೆ ಬಂದು
ಕುಂದದೆ ವ್ಯವಹಾರವಾಡುತಿರ್ಪಂ ನೋಡ
ಎಂದುವುಂ ಪುಸಿಗಳಂ ಕೇಳ್ದುಮರಿಯಂ ನೋಡ
ಭಕ್ತಿ ಮೊದಲಾಗಿ ಸತ್ಯವೆ ಲಾಭವಾತಂಗೆ
ಭಕ್ತಗೇ ಕುಡುವುದೆ ವ್ಯವಹಾರವಾತಂಗೆ
ಚಂದನದ ನೇಮವೇ ತನಗೆ ಹರಣಂ ನೋಡ
ಬಂದ ಶಿವಭಕ್ತರೇ ಬಂಧುಬಳಗಂ ನೋಡ
ಇಂತು ಚಂದನದ ನೇಮಂ ಹೆಚ್ಚಿ ಹಿಗ್ಗುತ್ತಿರೆ
ಸಂತತಂ ಪಲಕೆಲವು ವತ್ಸರಂ ನಡೆವುತಿರೆ
ಮನವನಾರಯ್ಯಲ್ಕೆ ನೆನೆದನೊಂದಂ ಶಿವಂ
ಧನವನಪಹರಿಸುವುದ್ಯೋಗದಾಶ್ಚರ್ಯವಂ
ನೆನೆಯೆ ಕ್ರಮಂಗಳಿಂಧನವೆಲ್ಲ ತೀರುತಿರೆ
ದಿನದಿನಕೆ ಚಂದನದ ನೇಮ ಪಿರಿದಾಗುತಿರೆ
ಉಳ್ಳ ಹೊನ್ನೆಲ್ಲವುಂ ಚಂದನಕೆ ತೀರುತಿರೆ
ಉಳ್ಳ ವಸ್ತ್ರಾವಳಿಯು ಚಂದನಕೆ ತೀರಿತ್ತು
ಪಡೆದಿರ್ದ ಭೂಮಿಯುಂ ಚಂದನಕೆ ತೀರಿತ್ತು
ತೊಡಿಗೆಯುಂ ತೊತ್ತಿರುಂ ಚಂದನಕೆ ತೀರಿತ್ತು
ಮಾನವುಂ ಮಹಿಮೆಯುಂ ಚಂದನಕೆ ತೀರಿತ್ತು
ನಾನಾ ವಿಳಾಸವುಂ ಚಂದನಕೆ ತೀರಿತ್ತು
ಮದನ ಮದಹರನ ನೇಮಂ ಗಂಧವಂತಿರದೆ
ಸದಮಳನ ಸಂಪದದ ಗಂಧಕ್ಕೆ ಸೈರಿಸದೆ
ಹೆಂಡತಿಯು ಕೊರಳ್ಕೈರದಾಳಿಯೊಂದುಳಿಯಲ್ಕೆ

# ಶಿವಾನುಭವ




ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.



ವಿಜಾಪುರ



ಸಂಪುಟ ೮ ಸಂಚಿಕೆ ೬

ಮಾರ್ಚ

೧೯೩೪

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೪ | ಮಾರ್ಚ ೧೯೩೪ | ಸಂಚಿಕೆ ೬

## ಕ್ರಿಯಾಭಕ್ತಿಜ್ಞಾನಗಳು.

(ಲೇಖಕ:— ಸತ್ಯಾಭಿಮಾನಿ.)

---

ಆತ್ಮವಿಕಾಸವೇ ಎಲ್ಲ ಧರ್ಮಗಳ ಮುಖ್ಯ ಗುರಿಯು. ಆತ್ಮ ವಿಕಾಸವೆಂದರೆ ಆತ್ಮವು ಪರಿಪೂರ್ಣತೆಯನ್ನು ಹೊಂದೋಣವು. ಹಿರಿಯರು ಆತ್ಮವು ಪರಿಪಕ್ವಸ್ಥಿತಿಗೆ ಬರಬೇಕಾದರೆ ಒಂದು ಸೀಮೆಯನ್ನು ಕಲ್ಪಿಸಿದ್ದಾರೆ. ಅದಕ್ಕೇ ಮೋಕ್ಷ ಅಥವಾ ಶಿವಸಾಯುಜ್ಯವೆಂಬ ಹೆಸರು. ನಮ್ಮ ದೇಹವು ಕಾಲಕಾಲಕ್ಕೆ ಭಿನ್ನಭಿನ್ನ ಸಂಸ್ಕಾರಗಳನ್ನು ಹೊಂದಿ ಈಗ ಒಂದು ವಿಶಿಷ್ಟತರದ ಸ್ವರೂಪವನ್ನು ತಾಳಿರುತ್ತದೆ. ನಮ್ಮ ಜೀವನು ನಾನಾ ಜನ್ಮಗಳಲ್ಲಿ ಹುಟ್ಟಿಬರುತ್ತಾನೆಂದರೆ ನಮ್ಮ ತಾಯಿ ತಂದೆಗಳ ರಕ್ತಮಾಂಸ ಮಜ್ಜೆಗಳಷ್ಟೇ ನಮ್ಮ ಶರೀರದಲ್ಲಿರದೆ ಲಕ್ಷಾವಧಿ ವರ್ಷಗಳ ಹಿಂದೆ ಇದ್ದಂಥ ನಮ್ಮ ಸಂಬಂಧಿಕರ ಅಂಶವು ಕೂಡ ನಮ್ಮಲ್ಲಿರುತ್ತದೆಂಬರ್ಥವು. ದೇಹವು ಪರಂಪರಾಗತವಾಗಿ ವೀರ್ಯಾಂಶದಿಂದ ಈಗಿನ ರೂಪವನ್ನು ತಾಳಿದಂತೆ ಆತ್ಮವಾದರೂ ಭಿನ್ನ ಭಿನ್ನ ಸಂಸ್ಕೃತಿಗಳ ಪ್ರಭಾವದಿಂದ ಉತ್ಕ್ರಾಂತಿಯ ಮೂಲಕ ಭಿನ್ನ ಭಿನ್ನ ಸ್ವರೂಪವನ್ನು ಹೊಂದಿ ಕೊನೆಗೆ ಪರಿಪೂರ್ಣವಾಗುವದು. ಇದಕ್ಕೇ ಆತ್ಮವಿಕಾಸವೆನ್ನುವರು. ಅದರ ಸೀಮಾಂತರವು ಅಲ್ಲಿಗೆ ಮುಗಿಯಿತು. ಆ ಸೀಮೆಯನ್ನು ಮುಟ್ಟಿದ ಬಳಿಕ ಜೀವನಿಗೆ ಪುನರ್ಜನ್ಮವಿಲ್ಲ. ಆ ಪರಿಪಕ್ವಸ್ಥಿತಿಗೆ ಮುಟ್ಟುವ ತನಕ ಮನುಷ್ಯನು ಭವದಲ್ಲಿ ಪುನಃ ಪುನಃ ಹುಟ್ಟಿಬರಬೇಕಾಗುತ್ತದೆ. ಶರೀರವು ವ್ಯಾಯಾಮದಿಂದ ಬಲಪಡುವಂತೆಯೂ ಬುದ್ಧಿಯು ಅಭ್ಯಾಸದಿಂದ ಪ್ರಗತಿಯನ್ನು ಹೊಂದುವಂತೆಯೂ ಆತ್ಮವು ಕ್ರಿಯಾಭಕ್ತಿಜ್ಞಾನಗಳೆಂಬ ಸಾಧನಗಳಿಂದ ವಿಕಾಸವನ್ನು ಹೊಂದುವದು. ಶರೀರ ಬುದ್ಧಿ ವಿಕಾಸಗಳೂ ಆತ್ಮವಿಕಾ

ಸವೂ ಏಕಕಾಲಕ್ಕೆ ಆಗಿಬಿಡುವವು. ಮನುಷ್ಯನ ಆತ್ಮವು ಬಲವಾಗಿದ್ದರೆ ಆತನಿಗೆ ಪರವಸ್ತುವಿನ ಸಾನ್ನಿಧ್ಯವು ಲಭಿಸುವದು. ದುರ್ಬಲಾತ್ಮರುಗಳಿಗೆ ಪರಮಾತ್ಮನು ದೂರವಾಗೇ ಇರುತ್ತಾನೆ. ಅಂತೆಯೇ 'ನಾಯಮಾತ್ಮಾ ಬಲಹೀನೇನ ಲಭ್ಯಃ' ಎಂಬ ಶ್ರುತಿವಚನವುಂಟು.

ಲಿಂಗಾಂಗಿಗಳಾದ ಶಿವಶರಣರು ಆತ್ಮಬಲಶಾಲಿಗಳು. ಶಾಪಾನುಗ್ರಹ ಸಮರ್ಥರು, ಪಂಚಪರುಷದನಿಧಿಗಳು. ಅಘಟಿತಘಟನಾ ಶಕ್ತಿಯುಳ್ಳವರು. ಆ ಪುಣ್ಯಾತ್ಮರ ಆತ್ಮವು ಹೇಗೆ ಅಷ್ಟು ಬಲಶಾಲಿಯಾಯಿತು? ಸಾಮಾನ್ಯರಾದ ನಮ್ಮಗಳಿಗೆ ಅವರಂತೆ ಆತ್ಮವಿಕಾಸವನ್ನು ಮಾಡಿಕೊಳ್ಳಲಿಕ್ಕೆ ಬರುತ್ತದೆಯೇ ಹೇಗೆ? ಬರುತ್ತಿದ್ದರ ನಾವು ಹೇಗೆ ನಡೆದುಕೊಳ್ಳಬೇಕು? ಇವು ವಿಚಾರಿಸತಕ್ಕ ವಿಷಯಗಳಾಗಿವೆ.

ಶಿವಶರಣರು ಇಷ್ಟಲಿಂಗವೇ ಪರದೈವವೆಂದು ತಿಳಿದು ಅದರ ನಿತ್ಯಾನುಸಂಧಾನದಿಂದ ಘನತರವಾದ ತೇಜಸ್ಸನ್ನೂ ಓಜಸ್ಸನ್ನೂ ಪಡೆದರು. ಅರ್ಥಾತ್ ಅವರು ಇಷ್ಟಲಿಂಗದ ಬಗ್ಗೆ ತಾಳಿದ ಕ್ರಿಯಾ ಭಕ್ತಿ ಜ್ಞಾನಗಳಿಂದ ಅವರಲ್ಲಿ ಅಂಥ ಸಾಮರ್ಥ್ಯವುಂಟಾಯಿತು. ಅದರಂತೆ ನಾವೂ ಆಚರಿಸಿದರೆ ನಮಗೂ ಅಂಥ ಶಕ್ತಿಯುಂಟಾಗುವದರಲ್ಲಿ ಯಾವ ಸಂದೇಹವೂ ಇಲ್ಲ.

ಇಷ್ಟಲಿಂಗ ಪೂಜೆಯೇ ಕ್ರಿಯೆಯು. ಹರಿದಾಡುವ ಮನಸ್ಸನ್ನು ಏಕಾಗ್ರವಾಗಿ ಮಾಡಲಿಕ್ಕೆ ಇಷ್ಟಲಿಂಗಪೂಜೆಯು ನೇರ್ಪಟ್ಟಿದೆ. ಹರಿದಾಡುವ ನೀರನ್ನು ತಡೆದು ನಿಲ್ಲಿಸುವದು ದುಸ್ಸಾಧ್ಯವು. ಆದರೆ ಅದರ ಪ್ರವಾಹವನ್ನು ಮಾತ್ರ ಬೇರೆ ಕಡೆಗೆ ತಿರುಗಿಸಲಿಕ್ಕೆ ಬರುತ್ತದೆ. ಪಾಪಕ್ಕೆಳಿಸುವ ಮನಸ್ಸನ್ನು ಪುಣ್ಯದ ಕಡೆಗೆ ಹೊರಳಿಸುವದರಿಂದಲೇ ಆತ್ಮದ ವಿಕಾಸವಾಗುತ್ತದೆ. ಆದುದರಿಂದಲೇ ಹೊನ್ನು ಹೆಣ್ಣು ಮಣ್ಣು ಈ ವಿಷಯಗಳ ಕಡೆಗೆ ನಮ್ಮ ಮನಸ್ಸು ಹೋದರೆ ನಾವು ಅಧೋಗತಿಗೆ ಹೋದೆವೆಂದು ತಿಳಿದು ಮಹಾಜ್ಞಾನಿಗಳು ಅದನ್ನು ಲಿಂಗಪೂಜೆ ಮಾಡುವ ಪವಿತ್ರ ಕೆಲಸಕ್ಕೆ ಹಚ್ಚಿದ ಮನಸ್ಸು ಮತ್ತೂ ಅತ್ತಕಡೆಗೇ ಎಳೆದರೆ ಲಿಂಗಪೂಜೆಯಿಂದೇನು ಪ್ರಯೋಜನ?

ಹೊನ್ನು ಹೆಣ್ಣು ಮಣ್ಣುಗಳಿಗೆ ಮರುಳಾಗುವದು ಮನುಷ್ಯನ ಸಹಜಸ್ವಭಾವವು. ಯಾವನಾದರೂ ತಾನು ಮರುಳಾಗಿಲ್ಲವೆಂದು ಹೇಳಿದರೆ ಆತನು ಸುಳ್ಳು ಹೇಳುತ್ತಾನೆಂದು ತಿಳಿಯಬೇಕು. ಅಥವಾ ಅವನಿಗೆ ಮನ

ಸ್ಸೆಂಬುದೇ ಇರಲಿಕ್ಕಿಲ್ಲ. ಮನಸ್ಸಿಲ್ಲದವನು ಮನುಷ್ಯನೇ ಅಲ್ಲ. ಸೌಂದರ್ಯ ಸೊಬಗುಗಳಿಗೆ ಮರುಳಾಗದವರಾರು? ತಮ್ಮನ್ನು ಮರಳುಗೊಳಿಸುವಂಥ ಸೊಬಗು ಸೌಂದರ್ಯಗಳನ್ನೇ ಇಷ್ಟಲಿಂಗದಲ್ಲಿ ಕಲ್ಪಿಸಿ ಅದನ್ನು ಪತ್ರಿ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳಿಂದ ಶೃಂಗರಿಸಿ ಕಾಮಿಗಳು ಅಲಂಕಾರ ಯುಕ್ತಳಾದ ಸ್ತ್ರೀಯಳನ್ನು ನೋಡಿ ಹಿಗ್ಗುವಂತೆ ಲಿಂಗನಿಷ್ಠರು ಲಿಂಗವನ್ನು ನೋಡಿ ಹರ್ಷಪಡುವರು. ಸುಂದರಳಾದ ಸ್ತ್ರೀಯಳು ಕಾಮುಕರನ್ನು ಆಕರ್ಷಿಸುವಂತೆ ಇಂದ್ರನೀಲಮಣಿಯಂತೆ ಕಾಂತಿಯುಕ್ತವಾದ ಲಿಂಗವು ಭಕ್ತಿವಂತರನ್ನು ಆಕರ್ಷಿಸುತ್ತದೆ. ಕಾಮುಕನು ಸ್ತ್ರೀಯಳೊಡನೆ ಬೆರೆದು ರತಿಸುಖವನ್ನು ಹೊಂದುವಂತೆ ಲಿಂಗನಿಷ್ಠನು ಲಿಂಗದ ಕೂಟದಿಂದ ರಮಿಸುವನು. ಅಂತೆಯೇ ಸಮರಸ, ಕೂಟ, ಒಡನಾಟಗಳೆಂಬ ಶಬ್ದಗಳನ್ನು ವಿಷಯಕ್ಕೆ ಅನುಕೂಲಿಸುವಂತೆ ಪಾರಮಾರ್ಥಕ್ಕೂ ಸಂಬಂಧಪಡಿಸಿರುವರು. ಸೌಂದರ್ಯದಲ್ಲಿ ಸತ್ಯಸ್ವರೂಪಿಯಾದ ಪರವಸ್ತುವಿನ ಅಸ್ತಿತ್ವವಿದೆ. ಸೌಂದರ್ಯದಲ್ಲಿ ಆಕರ್ಷಕ ಶಕ್ತಿಯು ಇದೆ. ಕಾರಣ ಇಷ್ಟಲಿಂಗಪೂಜಕನು ಲಿಂಗವು ಒಳ್ಳೆ ಶೋಭಾಯಮಾನವಾಗಿ ಕಾಣುವಂತೆ ಸೌಂದರ್ಯಯುಕ್ತವಾದುದನ್ನಾಗಿ ಮಾಡಬೇಕು.

ಮನಸ್ಸು ಏಕಾಗ್ರವಾಗಲಿಕ್ಕೆ ನಮ್ಮ ಆದರ್ಶವಸ್ತುವು ಸುಂದರವಾಗಿದ್ದರಷ್ಟೇ ಸಾಲದು. ಆ ವಸ್ತುವನ್ನು ಚನ್ನಾಗಿ ನಿರೀಕ್ಷಣೆ ಮಾಡುವ ಶಕ್ತಿಯೂ ನಮಗೆ ಬೇಕಾಗುತ್ತದೆ. ಇಷ್ಟಲಿಂಗವನ್ನು ಶೃಂಗರಿಸಿ ಅಂತೂ ಇಂತೂ ಅದನ್ನು ನೋಡಿ ಬಿಟ್ಟಮಾತ್ರಕ್ಕೆ ನಮ್ಮ ಮನಸ್ಸು ಏಕಾಗ್ರವಾಗಲರಿಯದು. ಅದನ್ನು ಒಂದು ಪದ್ಧತಿಯಿಂದ ನೋಡಬೇಕಾಗುತ್ತದೆ. ಬೆನ್ನುಹುರಿಯನ್ನು ಮಣಿಸದೆ ಸೆಟೆದು ಕುಳಿತು ಎರಡೂ ನೇತ್ರಗಳ ದೃಷ್ಟಿಯನ್ನು ಮೂಗಿನ ಮೇಲೆ ಹಾಕಿ ಲಿಂಗನಿರೀಕ್ಷಣೆಮಾಡಬೇಕು. ಪದ್ಮಾಸನವನ್ನು ಹಾಕಿಕೊಂಡು ಕೂಡ್ರಬೇಕು. ಭಗವದ್ಗೀತೆಯಲ್ಲಿ "ಸಮಂ ಕಾಯ ಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ। ಸಂಪ್ರೇಕ್ಷ್ಯನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್॥" ಅಂದರೆ ಬೆನ್ನು, ಗೋಣು, ತಲೆ ಇವುಗಳನ್ನು ಒಂದೇ ರೇಷೆಯಲ್ಲಿ ನಿಲ್ಲಿಸಿ ಅಲ್ಲಾಡದಂತೆ ಸ್ಥಿರಮಾಡಬೇಕು. ಅತ್ತಿತ್ತ ದಿಕ್ಕುಗಳ ಕಡೆಗೆ ನೋಡದೆ ದೃಷ್ಟಿಯನ್ನು ತನ್ನ ಮೂಗಿನ ತುದಿಯಲ್ಲಿರಿಸಿ ಪರವಸ್ತುವನ್ನು ನಿರೀಕ್ಷಣೆಮಾಡಬೇಕೆಂದು ಹೇಳಿದೆ. ಈ ಮೇರೆಗೆ ಆಸನ ನಿರೀಕ್ಷಣಕ್ರಮಗಳಾದರೂ ಚಿತ್ತೈಕಾಗ್ರತೆಗೆ ಸಾಧನೀ

ಭೂತವಾಗಿವೆ. ಡ್ರಿಲ್ ಶಿಕ್ಷಕರಿಂದ ಕ್ರಮಬದ್ಧವಾದ ನಡಿಗೆ ಶಿಸ್ತುಗಳನ್ನು ಕಲಿತುಕೊಳ್ಳುವಂತೆ ಯೋಗ್ಯ ಗುರುವಿನಿಂದ ಆಸನ ನಿರೀಕ್ಷಣಗಳ ಪರಿಯನ್ನರಿತುಕೊಳ್ಳಬೇಕು.

ಇಷ್ಟಲಿಂಗಪೂಜೆ ಮಾಡುವಾಗ ನಮ್ಮ ಲಿಂಗಮೂರ್ತಿಯು ಸುಂದರವಾಗಿ ಕಾಣಬೇಕು ನಾವು ನಿಯಮಿತನಾದ ಆಸನಬದ್ಧರಾಗಿ ಲಿಂಗ ನಿರೀಕ್ಷಣೆ ಮಾಡಬೇಕು. ಆದರೆ ಇಷ್ಟೆಲ್ಲ ಮಾಡಿ ನಮ್ಮ ದೇಹವೇ ಅಶುಚಿಯಾಗಿದ್ದರೆ. ನಮ್ಮ ಬಟ್ಟೆಗಳು ಮಲಿನವಾಗಿದ್ದರೆ ಲಿಂಗಮೂರ್ತಿಯಲ್ಲಿಯೇ ನಮ್ಮ ಮನಸ್ಸನ್ನು ನಾಟಿಸಲು ಸೊಗಸೆನಿಸದು. ದೇಹಬಟ್ಟೆಗಳು ಪರಿಶುದ್ಧವಾಗಿದ್ದರೆ ಮನಸ್ಸೂ ಪವಿತ್ರವಾಗುತ್ತದೆ ಆದುದರಿಂದ ಶುದ್ಧ ನೀರಿನಿಂದ ಸ್ನಾನಮಾಡುವದೂ ಬಟ್ಟೆಬರಿಗಳನ್ನು ಸ್ವಚ್ಛವಾಗಿಟ್ಟುಕೊಳ್ಳುವದೂ ಚಿತ್ತೈಕಾಗ್ರತೆಗೆ ಬಲವಾದ ಸಾಧನಗಳಾಗಿವೆ. ಇಷ್ಟೆಲ್ಲ ಸಾಹಿತ್ಯಗಳನ್ನಣಿಮಾಡಿಟ್ಟುಕೊಂಡರೂ ಮಂಗ ಮನಸ್ಸು ದುಷ್ಟ ವಿಷಯಗಳ ಕಡೆಗೆ ಧಾವಿಸಿದರೆ ಮಾಡುವದೇನು ?

ಕ್ರಿಯಾಚಾರವು ಆತ್ಮವಿಕಾಸದ ಮೊದಲನೆಯ ಮೆಟ್ಟಲು ಒಳ್ಳೆ ಮಡಿವಂತನಾದ ಮನುಷ್ಯನು ಥಾಳವಾಗಿ ವಿಭೂತಿಯನ್ನು ಧರಿಸಿ ಒಟ್ಟೆ ಒಟ್ಟೆ ಪತ್ರೆಪುಷ್ಪಗಳನ್ನು ಧರಿಸಿ ಲಿಂಗಪೂಜೆ ಮಾಡಿದರೆ ಅಷ್ಟಕ್ಕೇ ಆತನ ಮನಸ್ಸು ಪವಿತ್ರವಾಯಿತೆಂತಲ್ಲ. ನಾವು ಇಷ್ಟೆಲ್ಲ ಮಾಡುವದು ಆ ಲಿಂಗದಲ್ಲಿ ಪ್ರೇಮವನ್ನು ಬೆಳೆಯಿಸುವದಕ್ಕಾಗಿಯೇ. ನಾವು ಕ್ರಿಯೆಯನ್ನು ಮಾಡುತ್ತ ಹೋದಂತೆ ಲಿಂಗದ ಬಗ್ಗೆ ನಮ್ಮ ಪ್ರೇಮವು ಬೆಳೆಯುತ್ತ ಹೋದರೆಮಾತ್ರ ನಮ್ಮ ಕ್ರಿಯಾಚಾರವೆಲ್ಲ ಸಫಲವಾದಂತಾಯಿತು. ಆದರೆ ಕ್ರಿಯೆಯನ್ನು ಮನ ಬಲ್ಲಂತೆ ಬೆಳೆಯಿಸಿ ಜನರನ್ನು ದಂಗುಬಡಿಸಿ ತಮ್ಮ ಮನಸ್ಸಿನ ಪ್ರೇಮವನ್ನು ಹೊನ್ನು, ಹೆಣ್ಣು, ಮಣ್ಣುಗಳಲ್ಲಿರುವ ಕುನ್ನಿ ಡಂಭಕರಿಗೆ ಆತ್ಮವಿಕಾಸವೆಂದಿಗೂ ಆಗಲರಿಯದು. ನಾವು ಮಾಡುವ ಕ್ರಿಯೆಯೆಲ್ಲವೂ ಇಷ್ಟಲಿಂಗದ ಪ್ರೇಮಕ್ಕೆ ಅರ್ಥಾತ್ ಭಕ್ತಿಗೆ ಪೋಷಕವಾಗಿರಬೇಕು. ಕ್ರಿಯೆಯ ಪರ್ಯವಸಾನವೇ ಭಕ್ತಿಯು. ಭಕ್ತಿಯೇ ಕ್ರಿಯೆಯ ಫಲವು. ಭಕ್ತಿಯು ಅತ್ಮವಿಕಾಸದ ಎರಡನೆಯ ಮೆಟ್ಟಲು.

ಭಕ್ತಿಯಲ್ಲಿ ಡಾಂಭಿಕ ಭಕ್ತಿಯೆಂದೂ ಶುದ್ಧ ಭಕ್ತಿಯೆಂದೂ ಎರಡು ಪ್ರಕಾರಗಳುಂಟು. ಇವುಗಳಲ್ಲಿ ಮೊದಲನೆಯದು ಎರಡನೆಯವರನ್ನು

ಮೋಸಗೊಳಿಸಲಿಕ್ಕೂ ಸ್ವಾರ್ಥವನ್ನು ಸಾಧಿಸಿಕೊಳ್ಳಲಿಕ್ಕೂ ಉಪಯೋಗಿಸಲ್ಪಡುತ್ತದೆ. ಡಾಂಭಿಕರು ಆಡಂಬರಕ್ಕೆ ಮರುಳಾಗುವ ಅಜ್ಞರನ್ನು ಬಲೆಯಲ್ಲಿ ಕೆಡವಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವರು. ಆದರೆ ಶುದ್ಧ ಭಕ್ತಿಯುಳ್ಳವರು ತಮ್ಮಿಂದ ತಾವೇ ಉದ್ಧಾರ ಹೊಂದುವುದಲ್ಲದೆ ಅನ್ಯರನ್ನು ಸಹ ತಮ್ಮ ಭಕ್ತಿಯ ಬಲದಿಂದ ಉದ್ಧಾರಮಾಡುತ್ತಾರೆ.

ಇಷ್ಟಲಿಂಗದಲ್ಲಿ ಭಕ್ತಿಯನ್ನಿರಿಸುವದೆಂದರೆ ಲಿಂಗಮೂರ್ತಿಯನ್ನು ಬಿಟ್ಟು ಬಿಡದೆ ಪ್ರಾರ್ಥಿಸುವದು ಸ್ತುತಿಸುವದು ಅಥವಾ ಧ್ಯಾನಮಾಡುವದು ಪ್ರಾರ್ಥನೆಯಲ್ಲಿ ಬಲವಾದ ಸಾಮರ್ಥ್ಯವಿರುತ್ತದೆಂದು ಲಾರ್ಡ ಟೆನಿಸನ್ನನೆಂಬ ಕವಿಯು ಕೆಳಗೆ ಬರೆದ ಪ್ರಕಾರ ಹೇಳಿದ್ದಾನೆ.

More things are wrought by prayer  
Than this world dreams of  
Wherefore, let thy voice rise like a fountain  
For me night and day,  
for what are men better than sheep or goats  
If knowing God, they lift not hands of prayer  
Both for themselves and those who call them friends.

ಕನಸು ಮನಸ್ಸುಗಳಲ್ಲಿಯೂ ಕೂಡ ಕಾಣಲಶಕ್ಯವಾದ ಕಾರ್ಯಗಳು ಪ್ರಾರ್ಥನೆಯಿಂದ ಲಭಿಸುತ್ತವೆ. ಆದ್ದರಿಂದ ನೀನು ಹಗಲಿರಳು ಬಿಟ್ಟುಬಿಡದೆ ಪರಮಾತ್ಮನ ಧ್ಯಾನಮಾಡು. ಪರಮಾತ್ಮನ ಕಡೆಗೆ ನಿನ್ನ ಧ್ವನಿಯು ಕಾರಂಜಿಯಂತೆ ಪುಟಿಯುತ್ತಿರಲಿ. ಯಾರಿಗೆ ಪರಮಾತ್ಮನ ಅಸ್ತಿತ್ವದ ಅರಿವುಂಟೋ ಅವರು ಆತನನ್ನು ಕೈನೀಡಿ ಪಾರ್ಥಿಸಿ ತಮ್ಮ ಹಾಗೂ ತಮ್ಮ ಬಂಧುಗಳ ಹಿತವನ್ನು ಚಿಂತಿಸವೆ ಹೋದರೆ ಅವರು ಕುರಿ ಆಡುಗಳಿಗಿಂತ ಕೀಳಲ್ಲವೇ?

ಯೇಸು ಕ್ರಿಸ್ತನು ಹೇಳಿರುವುದೇನಂದರೆ ನಿನ್ನಲ್ಲಿ ಪರಮಾತ್ಮನ ಬಗ್ಗೆ ಶ್ರದ್ಧೆಯಿದ್ದರೆ ನಿನ್ನೆದುರಿಗೆ ಕಾಣುವ ಗುಡ್ಡಕ್ಕೆ ನೀನು ನಡೆಯೆಂದು ಆಜ್ಞಾಪಿಸು. ಅದು ತತ್‌ಕ್ಷಣವೇ ಸಂಚರಿಸಬಲ್ಲದು. ಮ. ಗಾಂಧಿಯವರಾದರೂ ತಮ್ಮ ಎಲ್ಲ ಶ್ರೇಯಸ್ಸಿಗೂ ಯಶಸ್ಸಿಗೂ ಪರಮಾತ್ಮಲ್ಲಿಟ್ಟ ನಿಸ್ಸೀಮ ಭಕ್ತಿಯೇ ಕಾರಣವೆಂದು ಹೇಳಿದ್ದಾರೆ. ಭಕ್ತಿಯಲ್ಲಿ ಅಂಥ

ಉಜ್ವಲವಾದ ಶಕ್ತಿಯುಂಟು. ಕಾರಣ ಇನ್ನಿಂಗದಲ್ಲಿ ನಾವು ಅನನ್ಯ ಭಕ್ತಿಯನ್ನಿರಿಸಿದ್ದಾದರೆ ನಮಗೂ ಅಂಥ ಸಾಮರ್ಥ್ಯವು ಬಂದೇ ಬರುವದೆಂಬದು ಸಿದ್ಧಾಂತವು.

ಲಿಂಗಪೂಜೆಗಾಗಿ ಅನೇಕ ಕ್ರಿಯೆಗಳನ್ನು ಮಾಡುವ ಮನುಷ್ಯನಲ್ಲಿ ಆ ಲಿಂಗದ ಬಗ್ಗೆ ಭಕ್ತಿಯಿಲ್ಲದಿದ್ದರೆ ವ್ಯರ್ಥವಲ್ಲವೇ? ಅದರಂತೆಯೇ ಲಿಂಗದಲ್ಲಿಯೇ ಪರಮಭಕ್ತಿಯನ್ನಿರಿಸಿದ ವ್ಯಕ್ತಿಯು ತನ್ನ ಪ್ರೇಮವನ್ನು ಪ್ರಮಾದವಶದಿಂದ ಹೊಲ್ಲದ ವಿಷಯಗಳಲ್ಲಿರಿಸಿದರೆ ಹೇಗೆ? ತನ್ನ ಗಂಡನನ್ನೇ ಹೆಚ್ಚಾಗಿ ಪ್ರೀತಿಸುವ ಸ್ತ್ರೀಯಳು ಪರಪುರುಷನನ್ನು ಆಕಸ್ಮಾತ್ ಅಷ್ಟೇ ಪ್ರೇಮದಿಂದ ಕಾಣಲಿಕ್ಕಿಲ್ಲೆಂದು ಹೇಗೆ ಹೇಳಬೇಕು? ಒಂದೇ ಪ್ರೇಮವು ಎರಡು ವಿಷಯಗಳಲ್ಲಿ ಹಂಚಲ್ಪಟ್ಟರೆ ಆತ್ಮವು ಬಲಶಾಲಿಯಾಗದೆ ಶಿಥಿಲವಾಗಲಿಕ್ಕಿಲ್ಲವೇ? ಆದುದರಿಂದ ಮನಸ್ಸನ್ನು ಶಿಥಿಲವಾಗಗೊಡಬಾರದೆಂದೇ ಮಹನೀಯರು ಜ್ಞಾನವೆಂಬ ಮೂರನೆಯ ಮೆಟ್ಟಿಲನ್ನು ಕಲ್ಪಿಸಿದ್ದಾರೆ. ಭಕ್ತಿಯಿಂದ ಪ್ರಸಂಗ ವಶಾತ್ ಏನಾದರೂ ಪ್ರಮಾದವು ಘಟಿಸಬಹುದು. ಆದರೆ ಅರಿವು, ಸದಸದ್ವಿವೇಕ ಬುದ್ಧಿ, ಅಥವಾ ಜ್ಞಾನದಿಂದ ಪ್ರಮಾದವು ಘಟಿಸುವ ಸಂಭವವೇ ಇಲ್ಲ. ಆದುದರಿಂದ ಜ್ಞಾನವೇ ಎಲ್ಲಕ್ಕೂ ಶ್ರೇಷ್ಠವಾದದ್ದು. ಜ್ಞಾನಿಗಳೇ ಎಲ್ಲರಿಗಿಂತಲೂ ಮಿಗಿಲಾದವರು. ಭಕ್ತಿಯ ಕ್ಷೇತ್ರದಲ್ಲಿ ಪ್ರಮಾದವೆಂಬ ಮದ್ದಾನೆಯು ಸಂಚರಿಸಿದರೆ ಜ್ಞಾನವೆಂಬ ಅಂಕುಶವು ಇರಿದು ಅದನ್ನು ದಾರಿಗೆ ತರುವದು. ಭಕ್ತಿಯಲ್ಲಿ ಅಜ್ಞಾನವೆಂಬ ಕತ್ತಲೆಯು ಮುಸುಕಿದರೆ ಸುಜ್ಞಾನವೆಂಬ ಜ್ಯೋತಿಯು ಅದನ್ನು ಧ್ವಂಸ ಮಾಡುವದು. ಭಕ್ತಿಯ ಸಾಮರ್ಥ್ಯವನ್ನು ಸರಿಯಾಗಿ ಕ್ರಮಗೊಳಿಸಲಿಕ್ಕೆ ಜ್ಞಾನದ ಸಹಾಯವು ಅವಶ್ಯ ಬೇಕು. ಜ್ಞಾನದಿಂದಲೇ ನಿಜವಾದ ಆತ್ಮವಿಕಾಸವುಂಟಾಗುವದು.

ಈ ಜಗತ್ತಿನ ವಸ್ತು ಸ್ಥಿತಿಯನ್ನೇ ಬದಲಾಯಿಸಿ ಲೋಕಕ್ಕೆ ಹೊಸ ಮಾರ್ಗವನ್ನು ತೋರಿಸಿಕೊಟ್ಟ ಮಹಾತ್ಮರುಗಳೆಲ್ಲ ಕೇವಲ ಕ್ರಿಯಾಚಾರಿಗಳೂ ಭಕ್ತಿವಂತರೂ ಇರದೆ ಮಹಾಜ್ಞಾನಿಗಳಾಗಿದ್ದರು. ಅವರಿಗೇ ನಾವು ಅವತಾರಿ ಪುರುಷರೆಂದೆನ್ನುತ್ತೇವೆ. ಅವರ ಅನುಕರಣವನ್ನೇ ನಾವು ಮಾಡುತ್ತೇವೆ. ಶ್ರೀ ಕೃಷ್ಣ, ಬುದ್ಧ, ಕ್ರೈಸ್ತ, ಬಸವ, ಮ. ಗಾಂಧಿ ಮೊದಲಾದ ವಿಭೂತಿಗಳು ಕ್ರಿಯೆಯಲ್ಲಿ ನಿರತರೂ ಭಕ್ತಿಯಲ್ಲಿ ಬಲ್ಲಿದರೂ ಜ್ಞಾನದಲ್ಲಿ ಅಧಿಕರೂ ಆಗಿದ್ದುದರಿಂದಲೇ ಜಗತ್ತು ಅವರಿಗೆ ಅಷ್ಟು ಪೂಜ್ಯತೆಯನ್ನು ತೋರಿಸುತ್ತದೆ.

ವೀರಶೈವರು ಇಷ್ಟಲಿಂಗದ ಮುಖಾಂತರವಾಗಿ ಕ್ರಿಯಾ ಭಕ್ತಿ ಜ್ಞಾನಗಳೆಂಬ ಮೂರು ಮೆಟ್ಟಲುಗಳಿಂದ ತಮ್ಮ ಆತ್ಮವಿಕಾಸವನ್ನು ಮಾಡಿಕೊಳ್ಳುವರು. ಉಳಿದವರು ತಮ್ಮ ಇಷ್ಟದೇವತೆಯಲ್ಲಿ ಈ ಪ್ರಕಾರದ ಮೂರು ತರಗತಿಗಳಿಂದ ಪರಿಪೂರ್ಣತೆಯನ್ನು ಹೊಂದುವರು. ಒಟ್ಟಿನ ಮೇಲೆ ಕ್ರಿಯಾ ಭಕ್ತಿ ಜ್ಞಾನಗಳು ಆತ್ಮವಿಕಾಸಕ್ಕೆ ಪ್ರಬಲವಾದ ಸಾಧನಗಳೆಂದು ಎಲ್ಲರೂ ಒಪ್ಪತಕ್ಕ ಮಾತಾಗಿದೆ.

# ಶೂನ್ಯಸಂಪಾದನೆಯ ರಹಸ್ಯ.

ಲೇ:— ಮಿ॥ ಕಲ್ಯಾಣಪ್ಪ ಬ್ಯಾಳಿ ಬಿ. ಎ. ಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ.

ಲೇಖಾಂಕ ೨

## ಗುರುಕರುಣ ಸಂಪಾದನ.

ಶ್ರೀಮನ್ನಿರಂಜನ ಪ್ರಭುದೇವ ಆಯಾಯ ಪ್ರಸಂಗಗಳಲ್ಲಿ ಮಾಡಿದ ಮಹಾನುಭಾವ ಸದ್ಗೋಷ್ಠಿಯಲ್ಲಿ ೨೧ ಸಂಪಾದನೆಗಳು ವಿವರಿಸಲ್ಪಟ್ಟಿವೆ ಅವು ಯಾವವೆಂದರೆ:—

೧ ಗುರುಕರುಣಸಂಪಾದನೆ, ೨ ಮುಕ್ತಾಯಕ್ಕಗಳ ಸಂಪಾದನೆ, ೩ ಸಿದ್ಧರಾಮಯ್ಯದೇವರ ಸಂಪಾದನೆ. ೪ ಬಸವನು ಚನ್ನಬಸವನಿಗೆ ಮಾಡಿದ ಉಪದೇಶಸಂಪಾದನೆ, ೫ ಪ್ರಭುದೇವರು ಕಲ್ಯಾಣಕ್ಕೆ ಬಂದ ಸಂಪಾದನೆ, ೬ ಮರುಳಶಂಕರದೇವರ ಸಂಪಾದನೆ, ೭ ಬಸವೇಶ್ವರನ ಸಂಪಾದನೆ, ೮ ಚನ್ನಬಸವದೇವರ ಸಂಪಾದನೆ, ೯ ಮಡಿವಾಳಯ್ಯಗಳ ಸಂಪಾದನೆ, ೧೦ ಸಿದ್ಧರಾಮಯ್ಯನ ಗುರುಕರುಣಸಂಪಾದನೆ, ೧೧ ಪ್ರಭುದೇವರ ಪೂಜಾಸ್ತುತಿ ಸಂಪಾದನೆ, ೧೨ ಆಯದಕ್ಕಿ ಮಾರಯ್ಯಗಳ ಸಂಪಾದನೆ, ೧೩ ಮೋಳಿಗೆಯ ಮಾರಯ್ಯಗಳ ಸಂಪಾದನೆ, ೧೪ ನುಲಿಯ ಚಂದಯ್ಯಗಳ ಸಂಪಾದನೆ, ೧೫ ಘಟ್ಟಿವಾಳಯ್ಯಗಳ ಸಂಪಾದನೆ, ೧೬ ಉಡುತಡಿ ಮಹಾದೇವಿಯಕ್ಕಗಳ ಸಂಪಾದನೆ, ೧೭ ಪ್ರಭುಪರ್ಯಟನ ಸಂಪಾದನೆ ೧೮ ಪ್ರಭುದೇವರ ಶೂನ್ಯಪೀಠ ಮೂರ್ತಸಂಪಾದನೆ, ೧೯ ಪ್ರಭುವಾರೋಗಣೆಯ ಸಂಪಾದನೆ, ೨೦ ಶರಣರವಸಾನ ಪರಾಮರಿಕೆ ಸಂಪಾದನೆ, ೨೧ ಎಲ್ಲ ಗಣಂಗಳ ನಿರ್ವಯಲ ಸಮಾಧಿ ಸಂಪಾದನೆ.

ಈ ಎಲ್ಲ ಸಂಪಾದನೆಗಳ ವಿಷಯವಾಗಿ ಅನುಕ್ರಮದಿಂದ ಪ್ರತಿಪಾದಿಸಲು ಪ್ರಯತ್ನವನ್ನು ಮಾಡಲಾಗುವದು.

## ೧ ಗುರುಕರುಣ ಸಂಪಾದನೆ.

ಮಾಯಾ ಸಂಸಾರಗಳಿಂದ ನಿರ್ಲಿಪ್ತವಾದ ಆತ್ಮನಿಗೆ ಗುರುಕರುಣವಿಲ್ಲದೆ ಮುಕ್ತಿಯಿಲ್ಲ ಎಂಬೀ ತತ್ವವನ್ನು ಶ್ರೀ ಪ್ರಭುದೇವರು ಗೊಗ್ಗಯ್ಯದೇವರಿಗೆ ಮಾಡಿದ ಉಪದೇಶವೇ ಗುರುಕರುಣಸಂಪಾದನೆಯೆಂದು ಕರೆಯಲ್ಪಡುತ್ತದೆ. ಗೊಗ್ಗಯ್ಯನೆಂಬ ಮಹಾ ಶರಣನೊಬ್ಬನು ಒಂದು ತೋಟದಲ್ಲಿ ಕೆಲಸಮಾಡುತ್ತಿದ್ದುದನ್ನು ಶ್ರೀ ಪ್ರಭುದೇವರು ಕಂಡು ಅದನ್ನು ವಿಡಂಬಿಸಿ ಪಾರಮಾರ್ಥಸೂಚಕವಾದ ತೋಟವನ್ನು ಹೇಗೆ ಮಾಡಬೇಕೆಂಬದನ್ನು ಕೆಳಗಿನ ವಚನದಿಂದ ವಿಶದಪಡಿಸಿದರು.

"ತನುವ ತೋಟವ ಮಾಡಿ, ಮನವ ಗುದ್ದಲಿ ಮಾಡಿ, ಭ್ರಾಂತಿ ಬೇರನಗಿದು, ಸಂಸಾರದ ಹೆಂಟೆಯ ಬಗಿದು ಬಿತ್ತಿದೆನಯ್ಯಾ ಬ್ರಹ್ಮ ಬೀಜವ. ಅಖಂಡಮಂಡಲವೆಂಬ ಬಾವಿ, ಪವನವೆ ರಾಟಾಳ, ಸುಷುಮ್ನದಿಂದುದಕವ ತಿದ್ದಿ, ಬಸವಗಳೈವರು ಹಸಗೆಡಿಸಿಹವೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ ಆವಾಗಳು ಈ ತೋಂಟದಲ್ಲಿ ಜಾಗರವಿದ್ದು ಸಸಿಯ ಸಲುಹಿದೆನು ಕಾಣಾ ಗುಹೇಶ್ವರಾ."

ಅಂದರೆ ಈ ತನುವೆಂಬ ತೋಟದಲ್ಲಿ ಆತ್ಮವೆಂಬ ಸಸಿಯನ್ನು ಸಲುಹಬೇಕಾದರೆ ಇಂದ್ರಿಯ ನಿಗ್ರಹ, ಸಮತೆ, ಸೈರಣೆಗಳಿಂದ ಕೂಡಿದ ಯೋಗಮಾರ್ಗವು ಅವಶ್ಯಕವಾದುದು ಎಂಬರ್ಥ ಆಮೇಲೆ ಪ್ರಭುದೇವರು ಗೊಗ್ಗಯ್ಯನಿಗೆ ಗುರುವಿನ ನಿಲವನ್ನು ಅರುಹಿದರು. ಅದರ ಸಾರಾಂಶವೇನಂದರೆ ನಮ್ಮ ಮೂಲಜ್ಞಾನದಿಂದ ಹೃದಯ ಗುಹೆಯೊಳಗಿನ ಅರಿವು ಜಾಗ್ರತವಾಯಿತ್ತು. ಆ ಅರಿವು ಮೂರ್ತಿಮಂತ ಗುರುವಾಗಿ ಭಾವದಲ್ಲಿ ತೋರಿ ಕರುಣಿಸಿತ್ತು. ಆ ಗುರುವಿನ ಚೈತನ್ಯವೇ ಲಿಂಗರೂಪವಾಗಿ ಕರಸ್ಥಲದಲ್ಲಿ ಬಂದು ನೆಲಸಿತ್ತು. ಆ ಕರಸ್ಥಲದ ಲಿಂಗವನ್ನು ಷಡ್ವಿಧ ಭಕ್ತಿಯಿಂದ ಪೂಜೆಯ ಮಾಡಲು ಸುಜ್ಞಾನ ಜ್ಯೋತಿಯು ಬೆಳಗಿತ್ತು.

ನಾವು ಬಾಹ್ಯದಲ್ಲಿ ಮನ್ನಿಸುವ ಗುರುಲಿಂಗಜಂಗಮ ವಸ್ತುಗಳು ನಮ್ಮಂತರಂಗದಲ್ಲಿ ಬೆಳಗುವ ಅರಿವು, ಪ್ರಾಣ, ಸುಜ್ಞಾನಗಳ ಚಿಹ್ನಗಳಲ್ಲದೆ ಬೇರಲ್ಲ. ವೀರಶೈವರು ಸಾಮಾನ್ಯರಿಗೆ ಈ ತತ್ವಗಳನ್ನು ತಿಳಿಸಬೇ

ಕೆಂದು ಬಾಹ್ಯರೂಪದಲ್ಲಿ ಮೂರ್ತಿಗಳನ್ನು ಕಲ್ಪಿಸಿರುವರೇ ಹೊರತು ಮಹಾಜ್ಞಾನಿಗಳಿಗೆ ಅಂತರೋಪಾಸನೆಯೇ ಮಹತ್ವವಾದುದು. ಅನಾದಿ ಕಾಲದಿಂದ ಆ ಪರವಸ್ತುವಿನಿಂದ ಉಧ್ಭವಿಸಿದ ನಮ್ಮ ಅರಿವೇ ಗುರುವು; ಪ್ರಾಣವೇ ಲಿಂಗವು; ಸುಜ್ಞಾನವೇ ಜಂಗಮವು. ಗುರುಲಿಂಗ ಜಂಗಮ ಗಳೆಂದರೆ ಪರಸ್ಪರ ಭಿನ್ನವಸ್ತುಗಳಲ್ಲ. ದೇಹ ಜೀವಗಳು ಕೂಡಿದ್ದಾ ಗಳೇ ಒಂದು ವಸ್ತುವಿಗೆ ನಾವು ಜೀವಿಯೆಂದು ಕರೆಯುವಂತೆ ಗುರು ಲಿಂಗಜಂಗಮಗಳು ಕೂಡಿದಾಗಳೇ ಆ ಪರವಸ್ತುವಾಗುವದು. ಈಪ್ರಕಾರ ಗುರುಲಿಂಗಜಂಗಮದ ಉತ್ಪತ್ತಿಯನ್ನು ತಿಳಿಸುವದೇ ಗುರುಕರುಣ ಸಂಪಾ ದನೆಯ ರಹಸ್ಯವಾಗಿದೆ.

ಶ್ರೀ ಪ್ರಭುದೇವರು ಮೊದಲು ತಮಗೆ ಗುರುಕರುಣೆಯು ಹೇಗುಂ ಟಾಯಿತೆಂಬದನ್ನು ಗೊಗ್ಗಯ್ಯನವರಿಗೆ ತಿಳಿಸಿದರು. ಅದರ ಮುಖ್ಯಾಂಶ ವೇನಂದರೆ:—

ಶ್ರೀ ಪ್ರಭುದೇವರು ಮೂಲಜ್ಞಾನದೃಷ್ಟಿಯಿಂದ ತಮ್ಮ ಹೃದಯ ವೆಂಬ ಗುಹೆಯಲ್ಲಿ ಮಿನಗುವ ಅರಿವೆಂಬ ಜ್ಯೋತಿಯನ್ನು ಕಂಡರು. ಆ ಅರುವಿಗೆ ಮೂರ್ತಸ್ವರೂಪವನ್ನು ಕೊಟ್ಟು ಗುರುವೆಂದು ಭಾವಿಸಿ ಅನಿಮಿಷದೇವರೆಂದು ಹೆಸರಿಟ್ಟರು. ಆ ಗುರುದರ್ಶನದಿಂದ ಆನಂದಪರ ವಶರಾಗಿ ಅವರನ್ನು ಮನವಾರೆ ಕೊಂಡಾಡಿ ಆ ಗುರುವಿನ ಚೈತನ್ಯ ವನ್ನು ತಮ್ಮ ಪ್ರಾಣದಲ್ಲಿ ಅಳವಡಿಸಿಕೊಂಡರು. ಆ ಮೇಲೆ ಅರಿವು ಪ್ರಾಣಗಳ ಸಂಕಲನದಿಂದುಂಟಾದ ಪ್ರಾಣಲಿಂಗಾನುಸಂಧಾನದಿಂದ ಆ ಪ್ರಾಣಕ್ಕೆ ಮೂರ್ತಸ್ವರೂಪಗೊಳಿಸಿ ಇಷ್ಟಲಿಂಗವೆಂದು ಹೆಸರಿಟ್ಟು ಕರ ಸ್ಥಲವಲ್ಲಿ ನೆಲಿಸಿಕೊಂಡರು. ಆ ಇಷ್ಟಲಿಂಗವನ್ನು ವಿಶ್ವಾಸ, ನಿಷ್ಠೆ, ಸಾವಧಾನ, ಸ್ವಾನುಭವ, ಸಮರಸ, ಆನಂದಗಳೆಂಬ ಷಡ್ವಿಧ ಭಕ್ತಿ ಯಿಂದ ಆರಾಧಿಸಿ ಮಹಾ ಜ್ಞಾನವೇ ತಾವಾಗಿ ನಿಂದರು. ಈ ಸ್ಥಿತಿಗೆ ಜಂಗಮಸ್ಥಲವೆಂದೆನ್ನುವರು. ಈ ಪ್ರಕಾರ ಮೂಲಜ್ಞಾನ, ಸುಜ್ಞಾನ, ಮಹಾಜ್ಞಾನಗಳಿಂದ ಇಷ್ಟ ಪ್ರಾಣ ಭಾವಲಿಂಗಗಳಲ್ಲಿ ಹೇಗೆ ಬೆರೆಯ ಬೇಕೆಂಬುವದನ್ನು ತಿಳಿಸುವದೇ ಗುರುಕರುಣಸಂಪಾದನೆಯೆನಿಸಿಕೊಳ್ಳುತ್ತದೆ ನಮ್ಮ ಆತ್ಮವು ಅರಿವು (ಗುರು,) ಪ್ರಾಣ (ಲಿಂಗ) ಸುಜ್ಞಾನ (ಜಂಗಮ) ಗಳಿಂದ ಹೇಗೆ ಉಜ್ವಲಗೊಳ್ಳುವದೆಂಬದನ್ನು ಶ್ರೀ ಪ್ರಭುದೇವರ ದೃಷ್ಟಾಂ ತದಿಂದ ಇದರಡಿಯಲ್ಲಿ ವಿವರಿಸಲಾಗಿದೆ.

## ಗುರು.

ಗುರುವೆಂದರಾರು? ನಮ್ಮಂತೆ ಸ್ಥೂಲಕಾಯದ ಮೂರ್ತಿಯಲ್ಲ. ಈ ವಿಷಯದಲ್ಲಿ ಪ್ರಭುದೇವರು ಅಪ್ಪಣೆಕೊಡಿಸಿದ್ದೇನಂದರೆ:— "ಕಾಯದಲಾದ ಮೂರ್ತಿಯಲ್ಲ. ಜೀವದಲಾದ ಮೂರ್ತಿಯಲ್ಲ, ಪ್ರಾಣದಲಾದ ಮೂರ್ತಿಯಲ್ಲ" ಗುರುವೆಂದರೆ ಹೃದಯವೆಂಬ ಗುಹೆಯಲ್ಲಿ ನಿಜಸಮಾಧಿಯೋಳ್ ಮೂರ್ತಿಗೊಂಡಿಪ್ಪ ಅರಿವು. ಪ್ರಭುದೇವರು ತಮ್ಮಂತರಂಗದ ಬೋಧಾಮೂರ್ತಿಯನ್ನು ಗುರುವೆಂದು ನಿಶ್ಚಯಿಸಿದರು. "ಆದಿಯಿಂದತ್ತತ್ತ ನೀನು ನನಗೆ ಗುರುವಯ್ಯಾ. ಅನಾದಿಯಿಂದತ್ತತ್ತ ನೀನೆನಗೆ ಗುರುವಯ್ಯಾ" ಎಂದು ಪ್ರಭುದೇವರು ಸಂಬೋಧಿಸಿದ್ದರ ಮೇಲಿಂದ ಅನಾದಿಸಂಸಿದ್ಧವಾದ ಆ ಪರವಸ್ತುವಿನಿಂದುದ್ಭವಿಸಿದ ಅರಿವೇ ಗುರುವಲ್ಲದೆ ಬೇರೆಯಲ್ಲ. ಇಂಥ ಗುರುದರ್ಶನವನ್ನು ಪ್ರಭುದೇವರು ಭಾವದಲ್ಲಿ ಹೊಂದಿದರು. ಆ ಗುರುವಿಗೆ ಅನಿಮಿಷದೇವರೆಂದು ಕರೆದರು. ಆ ಅನಿಮಿಷದೇವರು ಪದ್ಮಾಸನದಲ್ಲಿ ಕುಳಿತುಕೊಂಡು, ಕರಸ್ಥಲದಲ್ಲಿ ಅಮೃತಲಿಂಗವ ಹಿಡಿದು, ಆ ಲಿಂಗದೊಳು ಆಲಿಂಗನವಾಗಿ, ಕರಣಂಗಳೆಲ್ಲ ನಿಃಕರಣವನೈದಿ, ದೃಷ್ಟಿ ನೈಷ್ಠಿಸಿ, ಎವೆ ಹಳಚದೆ, ಅರಿವು ಕರಿಗೊಂಡು, ತಾನೆಂಬದು ತರಹರವಾಗಿ, ನೀನೆಂಬದು ನಿಷ್ಪತ್ತಿಯಾಗಿ ಪರಮಕಾಷ್ಠಿಯೊಳು ಪರವಶವಾಗಿ ನಿಜಸಮಾಧಿಯೊಳು ಮೂರ್ತಿಗೊಂಡಿರುವುದನ್ನು ನೋಡಿ ಶ್ರೀ ಪ್ರಭುದೇವರು ಆನಂದಪರವಶರಾಗಿ ನುಡಿದುದೇನಂದರೆ:—

> ಪುಣ್ಯವುಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು ತಪ್ಪದು ನೋಡಯ್ಯಾ! ಮಣ್ಣು ಹೊನ್ನಪ್ಪುದು. ಮುನ್ನ ಮುನ್ನವೆ ಅಚ್ಚೊತ್ತಿದ ಭಾಗ್ಯವೆನ್ನ ಕಣ್ಣಮುಂದೆ ಕಾಣಬಂದಿತ್ತು ನೋಡಾ! ಮಣ್ಣ ಮರೆಯ ದೇಗುಲದೊಳಗೊಂದು ಮಾಣಿಕ್ಯವ ಕಂಡಬಳಿಕ ಇನ್ನು ಮುನ್ನಿನಂತಪ್ಪುದೇ ಗುಹೇಶ್ವರಾ ॥

ಈ ಪ್ರಕಾರ ಗುರುವನ್ನು ಕೊಂಡಾಡಿ ಅವರ ಚರಣಾರವಿಂದಗಳಿಗೆ ಪೊಡಮಟ್ಟು ಅವರನ್ನು ಅನೇಕ ಪ್ರಕಾರವಾಗಿ ಕೊಂಡಾಡಿದರು. ಪ್ರಥಮದಲ್ಲಿ ಗುರುದರ್ಶನವಾದ ಬಳಿಕ ಪ್ರಭುದೇವರು ತಾವು ಶಿಷ್ಯತ್ವವನ್ನು ವಹಿಸಿದರು. ತಾನು ಬೇರೆ ಗುರುವು ಬೇರೆಂಬ ದ್ವೈತಭಾವವು ಅವರಲ್ಲಿ ಮೊದಲು ಉತ್ಪನ್ನವಾಯಿತು. ಬರಬರುತ್ತ ಜ್ಞಾನವು ಜಾಗ್ರತ

ವಾಗಲು ಗುರುವೂ ತಾನೂ ಒಂದೆಂಬ ಭಾವವು ಅವರಲ್ಲಿ ಪ್ರಾದುರ್ಭ ವಿಸಿತು ಜ್ಞಾನೋದಯವಾಗಲು ಗುರುವಿನ ಸ್ಥೂಲಮೂರ್ತಿಯು ನಿರ್ವ ಯಲಾಯಿತ್ತು ಆಗ ಗುರು ವಿರಹದಿಂದ ಅನುತಾಪಬಡುತ್ತಿದ್ದ ಪ್ರಭುದೇ ವರಿಗೆ ಆ ಗುರುವಿನ ಚೈತನ್ಯವು ಅವರ ಪ್ರಾಣದಲ್ಲಿ ಅಳವಟ್ಟು ಮುಂದೆ ಕರಸ್ಥಲದಲ್ಲಿ ನೆಲಿಸಿತು. ಪುನಃ ಕರಸ್ಥಲದ ಲಿಂಗವು ಪ್ರಾಣಸಂಬಂಧಿ ಯಾಗಿತ್ತು. ಪ್ರಾಣಲಿಂಗವು ಭಾವದಲ್ಲಿ ಬೆರೆದಿತ್ತು. ಆಗ 'ಕೀಟೋಪಿ ಭ್ರಮರಾಯತೇ' ಎಂಬ ತತ್ವಕ್ಕನುಸರಿಸಿ ಪ್ರಭುದೇವರು ಸಾಕ್ಷಾತ್ ಗುರುವೇ ತಾವಾದರು. ಆಗ ಅವರ ದ್ವೈತಭಾವವಡಗಿ ಅದ್ವೈತವುಂ ಟಾಯಿತು.

ಮೊದಲು ನಿರಾಕಾರಜ್ಞಾನದಿಂದ ಸಾಕಾರ ಗುರುವನ್ನು ಮಾಡಿ ಕೊಂಡು ಗುರುಶಿಷ್ಯನೆಂಬ ದ್ವೈತಭಾವವನ್ನು ತಳೆದು ಪುನರ್ಜ್ಞಾನದಿಂದ ಸಾಕಾರ ಗುರುವನ್ನು ಕಣ್ಮರೆಮಾಡಿ ನಿರಾಕಾರರೂಪಿಯಾದ ಆತನ ಚೈತ ನ್ಯವನ್ನೇ ಸಾಕಾರಗೊಳಿಸಿ ಇಷ್ಟಲಿಂಗವನ್ನು ಮಾಡಿಕೊಂಡು ಮುಂದೆ ಅದನ್ನು ನಿರಾಕಾರವಾದ ಪ್ರಾಣಭಾವಲಿಂಗಗಳಲ್ಲಿ ಲಯಗೊಳಿಸಿ ಕೊನೆಗೆ ಸಾಕಾರಗುರುವೇ ತಾವಾಗಿ ಬಿಟ್ಟರು. ಈ ಮೇರೆಗೆ ಸಾಕಾರ ನಿರಾ ಕಾರಗಳು ಬೆಳಕು ಕತ್ತಲೆಗಳಂತೆ ಆಧ್ಯಾತ್ಮಿಕ ಜೀವನದಲ್ಲಿ ಒಂದನ್ನೊಂದು ಹೇಗೆ ಹಿಂಬಾಲಿಸುತ್ತಿರುವವೆಂಬದು ವ್ಯಕ್ತವಾಗುತ್ತದೆ.

## ಲಿಂಗ.

ಶ್ರೀ ಗುರುವಿನ ಚೈತನ್ಯವೇ ಇಷ್ಟಲಿಂಗವಾಗಿ ತಮ್ಮ ಕರಸ್ಥಳದಲ್ಲಿ ಅಳವಡಲು ಪ್ರಭುದೇವರು ಆ ಲಿಂಗವನ್ನು ಷಡ್ವಿಧಭಕ್ತಿಯಿಂದ ಪೂಜಿ ಸಿದರು. ಅದೆಂತೆಂದೊಡೆ:—

> ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇ ಶ್ವರನಾಗಿ ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭವದೊಳಗಿನ ಅರುವಿನಿಂ ಶರಣನಾಗಿ ಆ ಅರಿವು ನಿಜದಲ್ಲಿ ಸಮರಸವನೈದಲು ಐಕ್ಯಸ್ಥಲವಾದುದು ಗುಹೇಶ್ವರಾ ॥

ಷಡ್ವಿಧ ಭಕ್ತಿಯ ಮುಖಾಂತರವಾಗಿ ಷಟ್‌ಸ್ಥಲಜ್ಞಾನವನ್ನು ಪ್ರಭು ದೇವರು ನಿರೂಪಿಸಿದರು.

ಗುರುವೆಂಬ ಪ್ರಣತಿಯಲ್ಲಿ ಲಿಂಗವೆಂಬ ಬತ್ತಿಯನಿಟ್ಟು ಜ್ಞಾನವೆಂಬ ಜ್ಯೋತಿಯನ್ನು ಪ್ರಜ್ವಲಗೊಳಿಸಬೇಕಾದರೆ ಭಕ್ತಿಯೆಂಬ ತೈಲವು ಅತ್ಯಾವಶ್ಯಕವಾದುದು. ತಾನು ಜ್ಞಾನಿಯೆಂದು ಹೇಳಿಕೊಳ್ಳುವವನು ಭಕ್ತಿಯನ್ನಾಚರಿಸದಿದ್ದರೆ ಎಣ್ಣೆಯಿರದ ದೀಪದಂತೆ ಆತನ ಜ್ಞಾನಜ್ಯೋತಿಯು ನೊಂದಿಹೋಗುವದು. ಅದು ಕಾರಣ ಷಟ್‌ಸ್ಥಲಗಳಲ್ಲಿ ಶ್ರೀ ಪ್ರಭುದೇವರು ಷಡ್ವಿಧಭಕ್ತಿಯನ್ನು ನಿರೂಪಿಸಿದ ವಿವರವನ್ನು ಕೆಳಗೆ ಕೊಡಲಾಗಿದೆ:—

೧ ಭಕ್ತಸ್ಥಲ:—ಮುಂದುಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ, ಸುಪ್ರಭಾತದಲೆದ್ದು ಶಿವಭಕ್ತರ ಮುಖವ ನೋಡುವದು ಹುಟ್ಟಿದುದಕ್ಕೆ ಸಫಲ ನೋಡಾ. ಸತ್ಯವಚನವಿಂತೆಂದುದು. ಇದಿಲ್ಲದವರನೊಲ್ಲೆ ಗುಹೇಶ್ವರಾ ॥

೨ ಮಹೇಶ್ವರ ಸ್ಥಲ:— ಅಷ್ಟ ವಿಧಾರ್ಚನೆ ಷೋಡಶೋಪಚಾರಂಗಳ ಹಂಗುಹರಿಯಿಲ್ಲದೆ ಮಾಡುವೆ. ನಾ ಮಾಡುವ ಕ್ರಿಯೆಗಳೆಲ್ಲವು ನೀನೆಯಾದ ಕಾರಣ ಗುಹೇಶ್ವರಾ ನಿಮ್ಮಲ್ಲಿ ತದ್ಗತವಾದೆನು ॥

೩ ಪ್ರಸಾದಿಸ್ಥಲ:— ಅರ್ಪಿತ ಅನರ್ಪಿತವನಾರು ಬಲ್ಲರಯ್ಯಾ. ಅರ್ಪಿಸಿಕೊಂಬುದು ಅನರ್ಪಿತ; ಅರ್ಪಿಸದೆ ಕೊಂಬುದು ಅರ್ಪಿತ. ಅರ್ಪಿಸಿ ಅರ್ಪಿಸದೆ ಕೊಳಬಲ್ಲರೆ ಗುಹೇಶ್ವರ ನಿಮ್ಮ ಪ್ರಸಾದಿ॥

೪ ಪ್ರಾಣಲಿಂಗಸ್ಥಳ:— ನವದ್ವಾರ ಶಿವಾಲಯದ ಆದಿ ಮಧ್ಯಸ್ಥಾನದಲ್ಲಿ ಗುಹೇಶ್ವರನೆಂಬ ಲಿಂಗವು ನಿಂದಿತ್ತು. ಕಂಗಳ ಬೆಳಗ ಕಲ್ಪಿಸಬಾರದು. ಕರ್ಣದನಾದ ವರ್ಣಿಸಬಾರದು. ಜಿಹ್ವೆಯ ರುಚಿಗೆ ಪ್ರತಿಯಿಲ್ಲವೆಂದಿತ್ತು. ಮತಿಗೆ ಮಹಾ ಘನವಪ್ಪ ಸುಷುಮ್ನನಾಳದ ಸುಯಿಧಾನವ ಪ್ರಮಾಣಿಸಬಾರದು ಅಣುರೇಣುತೃಣಕಾಷ್ಠದೊಳಗೆ ಸೂಕ್ಷ್ಮನಕ್ಷಯ ನಿಂದ ನಿರಾಳ ಗುಹೇಶ್ವರಾ ॥

೫ ಶರಣಸ್ಥಲ:—ನೆನಹು ಸತ್ತಿತ್ತು, ಭ್ರಾಂತಿ ಬೆಂದಿತ್ತು, ಅರಿವು ಮರೆಯಾಯಿತ್ತು. ಕುರುಹುಗೆಟ್ಟಿತ್ತು. ಅಲ್ಲಿ ಗತಿಯ ನರಸಲುಂಟೆ? ಮತಿಯ ನರಸಲುಂಟೆ? ಅಂಗವೆಲ್ಲ ನಷ್ಟವಾಗಿ, ಲಿಂಗದಲ್ಲಿ ಲೀಯ್ಯವಾಗಿ ಕಂಗಳಂಗದ ಕಳೆಯು ಬೆಳಗಿನ ಭಂಗ ಹಿಂಗಿತ್ತು ಗುಹೇಶ್ವರಾ ॥

೬ ಐಕ್ಯಸ್ಥಲ:—ನಿಜವನರಿದ ನಿಶ್ಚಿಂತನೇ, ಮರಣವ ಗೆಲಿದ ಮಹಂತನೇ, ಅರಿವನೊಳಗೊಂಡ ಪರಿಣಾಮಿಯೇ, ಬಯಲಲ್ಲಾದ ಭರಿತನೇ, ಗುಹೇಶ್ವರಲಿಂಗ ನಿರಾಳವನೊಳಕೊಂಡ ಸಹಜನೇ ॥

## ಜಂಗಮ.

ಈ ಪ್ರಕಾರ ಷಟ್‌ಸ್ಥಲಗಳ ಮುಖಾಂತರವಾಗಿ ಷಡ್ವಿಧ ಭಕ್ತಿಯ ನ್ನಾಚರಿಸಿ ಸರ್ವಾಚಾರ ಸಂಪತ್ತು ನಿಷ್ಪತ್ತಿಯಾಗಿ ಮಹಾಜ್ಞಾನವೇ ತಾನಾಗಿ ಪ್ರಭುದೇವರು ಪರಿಶೋಭಿಸಿದರು. ಸುಜ್ಞಾನ ಪ್ರಭೆಯೊಳಗೆ ಸುಳಿದಾಡುವ ಮಹಿಮನ ಮಹಾತ್ಮೆಯನ್ನು ಪ್ರಭುದೇವರು ಕೊಂಡಾಡಿದ ಸಾರಾಂಶವೇನಂದರೆ:— ಆ ಶಿವಜ್ಞಾನಿಗೆ ಸುಜ್ಞಾನವೆ ಶೃಂಗಾರ, ಮಹಾ ಬೆಳಗೆ ವಿಭೂತಿ, ಪಂಚಬ್ರಹ್ಮವೇ ದರುಶನ, ನಿಂದುದೇ ನಿವಾಸ, ತ್ರಿಭು ವನವೆಂಬ ಗಿರಿಯನೇರಿ, ಕಾಯವೆಂಬ ಕದಳಿಯ ಹೊಕ್ಕು ಸುಳಿದಾ ಡುವ ಮಹಾಮಹಿಮಂಗೆ ಇಹಲೋಕವೇನು ? ಪರಲೋಕವೇನು ? ಗುಹೇ ಶ್ವರಾ ನಿಮ್ಮನರಿತ ಮಹಾಮಹಿಮಂಗೆ ನಮೋ ನಮೋ ಎಂಬೆನು.

ಇಂಥ ನಿರಂಜನ ಜಂಗಮವು ಕಂಡುದೆಲ್ಲ ಪಾವನ. ಕೇಳಿದ್ದೆಲ್ಲ ಪರಮ ಬೋಧೆ, ಮುಟ್ಟಿದೆಲ್ಲವೂ ಪರುಷದ ಸೋಂಕು. ಒಡನೆ ಕೂಡಿದ ವರೆಲ್ಲರು ಸದ್ಯೋನ್ಮುಕ್ತರು. ಸುಳಿದ ಸುಳುಹೆಲ್ಲ ಜಗತ್ಪಾವನ. ಮುಟ್ಟಿದ ಧರೆ ಎಲ್ಲವು ಅವಿಮುಕ್ತಿ ಕ್ಷೇತ್ರ. ಸೋಂಕಿದ ಜಲವೆಲ್ಲ ಪುಣ್ಯತೀರ್ಥಂಗಳು ಶರಣೆಂದು ಭಕ್ತಿಯ ಮಾಡಿದವರೆಲ್ಲರು ಸಾಯುಜ್ಯರು ಗುಹೇಶ್ವರ ನಿಮ್ಮ ಸುಳುಹಿನ ಸೊಗಸ ಉಪಮಿಸಬಾರದು.

ಈ ಪ್ರಕಾರ ಪ್ರಭುದೇವರು ಗುರುಕರುಣದಿಂದುಂಟಾದ ಸ್ವಾನುಭವ ಸಾರವನ್ನು ಗೊಗ್ಗಯ್ಯನಿಗೆ ಉಪದೇಶಿಸಿದರು. ಗುರುಕರುಣ ಸಂಪಾದ ನೆಯಲ್ಲಿ ಗುರು, ಲಿಂಗ, ಜಂಗಮಗಳು ಹೇಗೆ ಪರಸ್ಪರ ಸಂಬಂಧವುಳ್ಳವು ಗಳಾಗಿರುವವೆಂಬದನ್ನು ತೋರಿಸಿಕೊಡುವದೇ ಮುಖ್ಯೋದ್ದೇಶವಾಗಿದೆ.



# ಮಂತ್ರ.

ವಾ. ಷ. ಮನದೊಳಗೆ ಜಪಿಸಲ್ಕೆ ಪೇಳಿದಂ ಗುರುಮೂರ್ತಿ
ಮನವರಿತು ನೆನೆದೊಡದು ದೂರುವದು ಮಾಯೆಯನು
ಇನಿತೊಂದರಿಂದಧಿಕವಾದ ಪಂಚಾಕ್ಷರದ ಮಂತ್ರಮಂ ಸಲೆ
ಪ್ರೇಮದಿಂ ॥

ಅನುದಿನಂ ಮನದೊಳಗೆ ಜಪಿಸುತಿಹ ಮಾನವಂ
ಘನವಾದ ಸಾಮರ್ಥ್ಯಮಂ ಪೊಂದಿ ಶಿವನಲ್ಲಿ
ಅನುರಾಗದಿಂ ಬೆರೆದು ಸುಖಿಸುವನು ಚಿರಕಾಲ ಸತ್ಯವೀನುಡಿ ಶರಣರಾ

ಮಂತ್ರವು ಅಷ್ಟಾವರಣಗಳಲ್ಲಿ ಎಂಟನೆಯದು. ಮಂತ್ರವೆಂದರೇನು:- "ಮನಃ ತ್ರಾಯತೇ ಇತಿ ಮಂತ್ರಃ" ಅಂದರೆ ಮನಸ್ಸನ್ನು ರಕ್ಷಣೆ ಮಾಡುತ್ತದಾದ್ದರಿಂದ ಅದಕ್ಕೆ ಮಂತ್ರವೆಂಬ ಹೆಸರು. ಮನಸ್ಸನ್ನು ರಕ್ಷಣೆ ಮಾಡುವ ವಸ್ತುವಿರದಿದ್ದರೆ ಅದು ನಮ್ಮನ್ನು ಯಾವ ಸ್ಥಿತಿಗೆ ಒಯ್ಯುತ್ತದೆಂಬದರ ನಿಯಮವಿಲ್ಲ. ''ಕಣ್ಣು ಮನ ನಾಲಿಗೆಯು ತನ್ನವೆಂದೆನಬೇಡ" ಅನ್ಯರು ಕೊಂದರೆನಬೇಡ ಇವು ಮೂರು ತನ್ನನೇ ಕೊಲ್ಲುವವು ಸರ್ವಜ್ಞ॥ ಎಂದು ಸರ್ವಜ್ಞ ಮೂರ್ತಿಯು ಹೇಳಿರುವನು 'ಮನವೆಂಬ ಮರ್ಕಟವ ತಡೆಯಲಾರೆನು ದೇವ। ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ.' ಎಂದು ಸರ್ಪಭೂಷಣ ಶಿವಯೋಗಿಗಳು ಹಾಡಿಕೊಂಡಿರುವರು. 'ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವದೆನ್ನ ಮನವು, ನಿಂದಲ್ಲಿ ನಿಲಲೀಯದೆನ್ನ ಮನವು, ಹೊಂದಿದಲ್ಲಿ ಹೊಂದಲೀಯದೆನ್ನ ಮನವು, ಮನವೆಂಬ ಮರ್ಕಟನ ನೆನವೆಂಬ ಪಾಶದಲ್ಲಿ ಕಟ್ಟಿ ಎನ್ನನುಳುಹಿಕೊಳ್ಳಾ ಕೂಡಲ ಸಂಗಮದೇವಾ ॥ ಎಂದು ಬಸವಣ್ಣನವರು ಹೇಳಿದ್ದಾರೆ. ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ ಇಂದ್ರಿಯಗಳೆಂಬ ಶಾಖೆ ಶಾಖೆಗೆ ಹಾರಿ ವಿಷಯಂಗಳೆಂಬ ಹಣ್ಣು ಫಲಗಳಂ ಗ್ರಹಿಸಿ, ಭವದತ್ತ ಮುಖವಾಗಿ ಹೋಗುತ್ತದೆ ನೋಡಾ. ಈ ಮನವೆಂಬ ಮರ್ಕಟನ ನಿಮ್ಮ ನೆನವೆಂಬ ಪಾಶದಲ್ಲಿ ಕಟ್ಟಿ, ಎನ್ನನುಳುಹಿಸಿಕೊಳ್ಳಯ್ಯಾ ಅಖಂಡೇಶ್ವರಾ" ಎಂದು ಷಣ್ಮುಖ ಸ್ವಾಮಿಗಳು ವಿವರಿಸಿದ್ದಾರೆ. ಅನೇಕ ಶಿವಶರಣರು ಮನದ ಚಾಂಚಲ್ಯದ ಬಗ್ಗೆ ತಮ್ಮ

ಅನುಭವಗಳನ್ನು ವ್ಯಕ್ತಪಡಿಸಿದ್ದಾರೆ. ಮನುಸ್ಮೃತಿಯಲ್ಲಿ 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಮನಸ್ಸೇ ನಮ್ಮ ಬಂಧನೆಗೂ ಬಿಡುಗಡೆಗೂ ಕಾರಣವಾಗಿದೆ ಎಂದು ಪ್ರತಿಪಾದಿಸಿದೆ. ಶ್ರೀ ಭಗವದ್ಗೀತೆಯಲ್ಲಿ "ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ । ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೆ ॥ ಮನಸ್ಸು ನಿಸ್ಸಂಶಯವಾಗಿಯೂ ಚಂಚಲವಾದುದೂ ನಿಗ್ರಹಿಸಲಿಕ್ಕೆ ಕಠಿಣವಾದುದೂ ಆಗಿರುತ್ತದೆ. ಅದನ್ನು ಸಾಧನೆಯಿಂದಲೂ ವೈರಾಗ್ಯದಿಂದಲೂ ವಶಮಾಡಿಕೊಳ್ಳಬೇಕು. ಮನಸ್ಸು ತಾರಾಯಂತ್ರ, ವಿಮಾನ, ಈಥರ ಮೊದಲಾದವುಗಳಿಗಿಂತಲೂ ತೀವ್ರಗತಿಯುಳ್ಳದ್ದಾಗಿದೆ. ನಿಮಿಷಮಾತ್ರದಲ್ಲಿಯೇ ಅದು ಲಕ್ಷಾಂತರ ಮೈಲುಗಳನ್ನು ಸಂಚರಿಸಬಲ್ಲದು. ಇಂಥ ಚಂಚಲವೂ ತೀವ್ರಗಾಮಿಯೂ ಆದ ಮನಸ್ಸನ್ನು ಬಿಗಿಹಿಡಿಯುವ ಬಗೆ ಹೇಗೆ? ಅನೇಕರು ಅನೇಕ ವಿಧವಾಗಿ ಮನಸ್ಸನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಇಂದ್ರಿಯ ಪ್ರವೃತ್ತಿಗಳನ್ನು ತಡೆಯುವದರಿಂದ ಮನೋವೃತ್ತಿಯು ಕುಗ್ಗುವದೆಂದು ಕೆಲವರು ಉಪವಾಸ, ವನವಾಸ, ತಪಶ್ಚರ್ಯ ಪ್ರತಿಜ್ಞಾದಿ ವ್ರತಗಳನ್ನಾಚರಿಸಿ ದೇಹವನ್ನು ದಂಡಿಸುವರು. ಬೇರೆ ಕೆಲವರು ಇಂದ್ರಿಯಗಳ ಪ್ರವೃತ್ತಿಯು ಕೆಟ್ಟ ವಿಷಯಗಳ ಕಡೆಗೆ ಇದ್ದರೆ ಅದನ್ನು ಒಳ್ಳೆಯದರ ಕಡೆಗೆ ತಿರುಗಿಸಲಿಕ್ಕೆ ಪ್ರಯತ್ನಿಸುವದರಿಂದ ಮನಸ್ಸು ದುರ್ಮಾರ್ಗದಿಂದ ಹೋಗುವದಿಲ್ಲವೆಂದು ಭಾವಿಸುತ್ತಾರೆ. ಸದ್ವಿಷಯಗಳನ್ನು ನೋಡುವದು; ಸದ್ವಿಷಯಗಳನ್ನು ಕೇಳುವದು; ಸಾತ್ವಿಕ ಪದಾರ್ಥಗಳನ್ನು ಸೇವಿಸುವದು; ಪವಿತ್ರವಾದ ವಸ್ತುಗಳನ್ನು ಘ್ರಾಣಿಸುವದು ಮತ್ತು ಸ್ಪರ್ಶಿಸುವದು ಇವೇ ಮೊದಲಾದವುಗಳಿಂದ ಮನಸ್ಸಾದರೂ ಪುನೀತವಾಗುವದು ಸಹಜವು. ಬೇರೆ ಕೆಲವರು ಎಲ್ಲರೂ ತಮ್ಮ ತಮ್ಮ ವ್ಯವಸಾಯಗಳಲ್ಲಿ ನಿರತರಾದರೆ ಮನಸ್ಸಿನ ದುಷ್ಟ ಪ್ರವೃತ್ತಿಗೆ ಅವಕಾಶವಿಲ್ಲವೆನ್ನುವರು. ಉದಾಹರಣಾರ್ಥ ಒಕ್ಕಲಿಗರು ಒಕ್ಕಲತನದಲ್ಲಿ, ವ್ಯಾಪಾರಸ್ಥರು ವ್ಯಾಪಾರದಲ್ಲಿ, ನೇಕಾರರು ನೇಗೆಯ ಕೆಲಸದಲ್ಲಿ, ಶಿಕ್ಷಕರು ಕಲಿಸುವದರಲ್ಲಿ, ಗಣಿತಜ್ಞರು ಬೀಜಗಣಿತ ಹಾಗೂ ಭೂಮಿತಿಯೊಳಗಿನ ಸಮಸ್ಯಗಳನ್ನು ಬಿಡಿಸುವದರಲ್ಲಿ ಕಾಲ ಕಳೆದರೆ, ನಿಜವಾಗಿಯೂ ಅವರ ಮನಸ್ಸಿಗೆ ಬೇರೆ ಕಡೆಗೆ ಹೋಗಲಿಕ್ಕೆ ಅವಕಾಶವಾಗುವದಿಲ್ಲ. ಆದರೆ ಇವೆಲ್ಲವುಗಳಲ್ಲಿ ತೊಡಗಿದ್ದರೂ ದುಷ್ಟ ಮನಸ್ಸು

ಒಂದಿಲ್ಲೊಂದು ದುಷ್ಟ ಯೋಚನೆಯನ್ನು ಬೇಕಾದ ಹಾಗೆ ಮಾಡಬಲ್ಲುದು. ಆದರೆ ಮನಸ್ಸನ್ನು ವಶಪಡಿಸಿಕೊಳ್ಳಲಿಕ್ಕೆ ಧ್ಯಾನ, ಪ್ರಾರ್ಥನೆ, ಚಿಂತನೆ, ಮಂತ್ರಾದಿಗಳು ಬಹು ಶ್ರೇಷ್ಠವಾದವುಗಳು. ಆದರೆ ಮಂತ್ರವೆಂಬುದು ಪ್ರತಿನಿಮಿಷವೂ ತಪ್ಪದೆ ಉಚ್ಚರಿಸಲಿಕ್ಕೆ ಬರುತ್ತಿರುವದಾದ್ದರಿಂದ ಮನಸ್ಸನ್ನು ಏಕೀಕರಿಸಲಿಕ್ಕೆ ಅದು ಸರ್ವೋತ್ಕೃಷ್ಟವಾದ ಉಪಾಯವು.

ಮಂತ್ರದ ಮಹತ್ವವೇನು? ಮಂತ್ರಪಠಣದಿಂದ ಹರಿದಾಡುವ ಮನಸ್ಸು ಏಕಾಗ್ರವಾಗುತ್ತದೆ. ಏಕಾಗ್ರತೆಯಿಂದ ಮನಸ್ಸು ಪವಿತ್ರವಾಗುತ್ತದೆ. ಪವಿತ್ರತೆಯಿಂದ ವಿಚಿತ್ರವಾದ ಶಕ್ತಿಯುಂಟಾಗುತ್ತದೆ. ಆ ಶಕ್ತಿಯಿಂದ ಮನುಷ್ಯನು ಅಘಟಿತ ಘಟನಾ ಕಾರ್ಯವನ್ನು ಮಾಡಬಲ್ಲನು. ಆತನಿಗೆ ಪರಮಾತ್ಮನ ಸಂಬಂಧವು ತೀರ ಸಮೀಪವಾಗುತ್ತದೆ. ಮನಸ್ಸಿನ ಶಕ್ತಿಗಳೆಲ್ಲ ಅತ್ತಿತ್ತ ಚಲ್ಲವರಿದು ಹಬ್ಬಿದಾಗ ಅವುಗಳಲ್ಲಿ ಅಂಥ ಶಕ್ತಿಯೇನೂ ಕಂಡು ಬರುವದಿಲ್ಲ. ಆದರೆ ಮಂತ್ರದ ಮೂಲಕ ಆ ಶಕ್ತಿಗಳನ್ನೆಲ್ಲ ಒತ್ತಟ್ಟಿಗೆ ಏಕೀಕರಿಸಿದರೆ ಒಂದು ವಿಚಿತ್ರತರವಾದ ಶಕ್ತಿಯುದ್ಭವಿಸುವದು. ನೂಲಿನ ಎಳೆಗಳು ಬೇರೆ ಬೇರೆಯಾದಾಗ ಅವುಗಳಲ್ಲಿ ಹೆಚ್ಚಿನ ಶಕ್ತಿಯೇನೂ ಕಂಡು ಬರುವದಿಲ್ಲ. ಆದರೆ ಅವುಗಳನ್ನೆಲ್ಲವನ್ನೂ ಕೂಡಿಸಿ ಹೊಸೆದು ಹಗ್ಗ ಮಾಡಿದರೆ ಅವಕ್ಕೆ ಬಹು ಬಲಾಢ್ಯವಾದ ಆನೆಯನ್ನು ಕಟ್ಟುವ ಸಾಮರ್ಥ್ಯ ಬರುತ್ತದೆ. ಕೆಲವರು ಚೇಳಿನ ಮಂತ್ರ, ಹಾವಿನ ಮಂತ್ರ, ವೇತಾಳ ಮಂತ್ರ, ವಶೀಕರಣ ಮಂತ್ರ ಮುಂತಾದವುಗಳನ್ನು ಸಾಧಿಸಿಕೊಳ್ಳಬೇಕಾದರೆ ಅವರು ಮೊದಲು ಆಯಾಯ ಮಂತ್ರಗಳಿಂದ ತಮ್ಮ ಮನಸ್ಸಿನ ಶಕ್ತಿಗಳನ್ನೆಲ್ಲ ಒತ್ತಟ್ಟಿಗೆ ಏಕೀಕರಿಸಿ ಆ ತರಹದ ಸಾಮರ್ಥ್ಯವನ್ನು ಪಡೆದುಕೊಂಡಿರಬಹುದಲ್ಲವೇ? ಆದುದರಿಂದ ಪರಮಾತ್ಮನನ್ನೊಲಿಸಿಕೊಳ್ಳಬೇಕಾದರೆ ಆತನ ನಾಮಸ್ಮರಣೆಯೇ ಅರ್ಥಾತ್ ಮಂತ್ರವೇ ಅತ್ಯವಶ್ಯಕವಾದುದು. ಅಂತೆಯೇ ಶ್ರೀ ಭಗವದ್ಗೀತೆಯಲ್ಲಿ 'ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೆ ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ" । ಅಂದರೆ ಯಾವಾಗಲೂ ನನ್ನ ಹೆಸರನ್ನೇ ಧ್ಯಾನಮಾಡುತ್ತಿರುವಂಥ ಜನರ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆಂದು ಶ್ರೀ ಕೃಷ್ಣ ಪರಮಾತ್ಮನು ಆಶ್ವಾಸನ ಕೊಟ್ಟಿದ್ದಾನೆ. ಯಾರೇ ಆಗಲಿ ತಮ್ಮ ಇಷ್ಟದೇವತೆಯನ್ನು ಆದರ್ಶವಾಗಿಟ್ಟುಕೊಂಡು ನಿರಂತರವೂ ಆ ಪರವಸ್ತುವಿನ ಚಿಂತನೆ ಮಾಡಹತ್ತಿದರೆ ನಿಜವಾಗಿಯೂ ಅವರಲ್ಲಿ ಅಸಾಧಾರಣವಾದ ಶಕ್ತಿಯುಂಟಾಗು

ವದು. ಮತ್ತು ಆ ಇಷ್ಟದೇವತೆಯು ಅವರನ್ನು ನಿಶ್ಚಯವಾಗಿಯೂ ರಕ್ಷಿಸುವದು. ತಾನು ಯಾವ ದೇವರನ್ನು ಪ್ರಾರ್ಥಿಸುವನೋ ಅದೇ ದೇವರೇ ಸರ್ವೋತ್ತಮವೆಂದು ಭಾವಿಸಬೇಕು. ಅಂದರೆ ಸರ್ವಶಕ್ತಿವಂತನಾದ ದೇವರೊಬ್ಬನೇ ಎಂಬ ಕಲ್ಪನೆಯು ಅವರಲ್ಲುಂಟಾಗುವದು. ಶೈವರು ಶಿವನೇ ಸರ್ವೋತ್ತಮನೆಂದೂ, ವೈಷ್ಣವರು ವಿಷ್ಣುವೇ ಸರ್ವೋತ್ತಮನೆಂದೂ ಗಾಣಪತ್ಯರು ಗಣಪತಿಯೇ ಸರ್ವೋತ್ತಮನೆಂದೂ ಭಾವಿಸಿ ಧ್ಯಾನ ಮಾಡಿದರೆ ಅವರಿಗೆ ಅಭಿವೃದ್ಧಿಯಾಗುವದರಲ್ಲಿ ಸಂದೇಹವಿಲ್ಲ. ತನ್ನ ದೇವರು ಶ್ರೇಷ್ಠವೆಂದು ಉಳಿದ ದೇವರುಗಳನ್ನು ತುಚ್ಛೀಕರಿಸಿಬಿಡುವದಾಗಲಿ ಅಪಹಾಸ್ಯ ಮಾಡುವದಾಗಲಿ ಮೂರ್ಖರ ಲಕ್ಷಣವು. ಅನ್ಯದೇವರುಗಳ ಬಗ್ಗೆಯೂ, ಅವುಗಳನ್ನು ಆರಾಧನೆ ಮಾಡುವವರ ಬಗ್ಗೆಯೂ ಸಹಾನುಭೂತಿಯನ್ನು ವ್ಯಕ್ತಗೊಳಿಸುವದು ಸಜ್ಜನರ ಲಕ್ಷಣವು. ಈ ತರಹದ ಸ್ವಭಾವವು ಪಾಶ್ಚಾತ್ಯರಲ್ಲಿ ಹೆಚ್ಚಾಗಿದ್ದಂತೆ ತೋರುತ್ತದೆ. ಯಾಕಂದರೆ ಒಂದು ಮನೆಯಲ್ಲಿ ಗಂಡನು ಒಂದು ದೇವರನ್ನಾರಾಧಿಸುತ್ತಿದ್ದರೆ ಹೆಂಡತಿಯು ಮತ್ತೊಂದು, ಮಗನು ಬೇರೊಂದು ದೇವರನ್ನು ಪ್ರಾರ್ಥಿಸುವರು. ಆದಾಗ್ಯೂ ಅವರು ಪರಸ್ಪರ ಬಹು ಪ್ರೇಮದಿಂದಲೂ ಒಕ್ಕಟ್ಟಿನಿಂದಲೂ ವರ್ತಿಸುವರು. ಆದರೆ ನಮ್ಮ ದೇಶದಲ್ಲಿ ಪರಸ್ಪರ ಧರ್ಮದವರನ್ನು ದೂಷಿಸುವದೊತ್ತಟ್ಟಿಗಿರಲಿ, ಅವರ ಪವಿತ್ರವಾದ ದೇವರುಗಳನ್ನು ನಿಂದಿಸುವರು. ಇದೆಂಥ ನಾಚಿಕೆಗೇಡಿತನವು? ಕೆಲವರು ಒಬ್ಬನೇ ದೇವರಿರುವನೆಂತಲೂ, ಆತನ ನಾಮರೂಪಗಳು ಇಂತಹದಿರುವವೆಂತಲೂ ಭಾವಿಸಿ ಧ್ಯಾನಿಸುವರು. ಬೇರೆ ಕೆಲವರು ಎಲ್ಲ ದೇವರುಗಳು ಪರಮಾತ್ಮನ ಸ್ವರೂಪಗಳೆಂದು ತಿಳಿದು ಕಂಡ ದೇವರಿಗೆ ಕೈಮುಗಿಯುತ್ತ ತಿರುಗುವರು. ಇವರಿಬ್ಬರಲ್ಲಿ ಮೊದಲನೆಯವರ ಏಕಾಗ್ರತೆಯು ಒತ್ತಟ್ಟಿಗೆ ನೆಲೆಗೊಳ್ಳುವದರಿಂದ ಅವರಿಗೆ ಅಪಾರವಾದ ಶಕ್ತಿಯುಂಟಾಗುತ್ತದೆ. ಎರಡನೆಯವರ ಏಕಾಗ್ರತೆಯು ಎಲ್ಲ ದೇವರುಗಳಲ್ಲಿ ಹರಿದು ಹಂಚಿಹೋಗುವದರಿಂದ ಅವರಲ್ಲಿ ಹೆಚ್ಚಿನ ಶಕ್ತಿಯು ಬರಲಾರದು. ಆದುದರಿಂದ ನಮಗೆ ಇಷ್ಟವಾದ ಒಂದೇ ಒಂದು ದೇವತೆಯ ಧ್ಯಾನಮಾಡುವದು ಮಿಗಿಲಾದದ್ದು.

ಮೊದಲು ತನ್ನ ಇಷ್ಟದೇವತೆಯನ್ನು ಧ್ಯಾನಮಾಡಬೇಕಾದರೆ ಸಾಕಾರವುಳ್ಳ ಒಂದು ಮೂರ್ತಿಯನ್ನು ಕಲ್ಪಿಸಿಕೊಂಡು ಅವರಲ್ಲಿಯೇ ಚಿತ್ತ

ವಿಟ್ಟು ಧ್ಯಾನಿಸಬೇಕು. ಮೂರ್ತಿಯೊಂದಿರದಿದ್ದರೆ ನಮ್ಮ ಮನಸ್ಸನ್ನು ಯಾವುದರ ಮೇಲಿಟ್ಟು ಧ್ಯಾನಿಸಬೇಕೆಂಬುದರ ಬಗ್ಗೆ ಗೊಂದಲ ಬೀಳುತ್ತದೆ. (ಆ ಬಗ್ಗೆ ವೀರಶೈವರು ಲಿಂಗವನ್ನು ಕಲ್ಪಿಸಿದ್ದಾರೆ.) ಆದುದರಿಂದಲೇ ಶ್ರೀ ಭಗವದ್ಗೀತೆಯಲ್ಲಿ ಹೇಳಿರುವದೇನಂದರೆ—

"ಕ್ಲೇಶೋಽಧಿಕ ತರಸ್ತೇಷಾ ಮವ್ಯಕ್ತಾಸಕ್ತ ಚೇತಸಾಂ"।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೆ॥

ನಿರಾಕಾರ ವಸ್ತುವಿನ ಉಪಾಸನೆಯು ದೇಹಧಾರಿಗಳಿಗೆ ಕಠಿಣವಾದುದು. ಹಾಗೆ ಮಾಡುವವರು ದುಃಖಕ್ಕೀಡಾಗುತ್ತಾರೆ. ಆದುದರಿಂದ ಭಗವಂತನು ದೇಹಧಾರಿಗಳಿಗೆ ಉಪದೇಶಿಸುವದೇನಂದರೆಃ— "ಮನ್ಮನಾ ಭವ ಮದ್ಭಕ್ತೋ ಮದ್ಯಾಜೀಮಾಂ ನಮಸ್ಕುರು। ಮಾವೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ"॥ ಅಂದರೆ ಸಾಕಾರ ಮೂರ್ತಿಯಾದ ನನ್ನಲ್ಲಿ ಮನವನ್ನಿರಿಸು. ನನ್ನ ಭಕ್ತನಾಗು. ಅಂದರೆ ನೀನು ನನ್ನ ಬಳಿಗೆಯೇ ಬರುವಿ. ಇದು ಸತ್ಯವೆಂದು ನಾನು ಪ್ರತಿಜ್ಞಾಪೂರ್ವಕವಾಗಿ ಹೇಳುವೆನು. ನೀನು ನನಗೆ ಪ್ರಿಯಕರನಿರುವಿ. ಇನ್ನು "ಸಾಕಾರವಿಡಿದೇ ನಿರಾಕಾರವುದಯಿಸಿತಲ್ಲದೆ ನಿರಾಕಾರವೆಂಬುದು ಬೇರೆಯಿಲ್ಲ ಕಾಣಿರೋ" ಎಂಬ ಶಿವಶರಣರ ವಚನಕ್ಕನುಸರಿಸಿ ಸಾಕಾರ ವಸ್ತುವಿನ ಸಾಕ್ಷಾತ್ಕಾರವಾದ ಬಳಿಕ ನಿರಾಕಾರವಾದ ಪರವಸ್ತುವಿನಲ್ಲಿ ಬೆರೆಯಬೇಕೆಂಬದೊಂದು ಹೆಚ್ಚಿನ ಅವಸ್ಥೆಯು ಮನುಷ್ಯನಿಗೆ ಪ್ರಾಪ್ತವಾಗುವದು. ಸಾಕಾರನಿರಾಕಾರೋಪಾಸನೆಗಳಿಗೆ ಮಂತ್ರವೇ ಮೂಲಾಧಾರವಾಗಿರುವದು.

ಪರಮಾತ್ಮನ ಪೂಜೆಯು ಬುಡದಿಂದ ತುದಿಯ ವರೆಗೂ ಮಂತ್ರದಿಂದ ಕೂಡಿಕೊಂಡಿರುವದು. ಸ್ನಾನ ಮಾಡುವಾಗ ಮಂತ್ರ, ಆಸನದಲ್ಲಿ ಕುಳಿತುಕೊಳ್ಳುವಾಗ ಮಂತ್ರ, ದಿಗ್ಬಂಧನಮಂತ್ರ, ಭಸ್ಮ, ಗಂಧ, ಪುಷ್ಪ, ಪತ್ರಿ, ಧೂಪ, ದೀಪ, ನೈವೇದ್ಯ ನಮಸ್ಕಾರಾದಿಗಳಿಗೆಲ್ಲ ಮಂತ್ರಗಳಿರುವವು. ಅಂದರೆ ಪ್ರತಿಯೊಂದು ಆ ಪವಿತ್ರವಸ್ತುಗಳಲ್ಲಿ ಮನಸ್ಸನ್ನಿರಿಸಿ ಆ ಸೂತ್ರವಿಡಿದೇ ಪರಮಾತ್ಮನೆಡೆಗೆ ನಮ್ಮ ನಮ್ಮ ಮನಸ್ಸನ್ನು ಕಳಿಸಬೇಕು. ಮಂತ್ರಗಳು ಕೆಲವು ವೈದಿಕವಾಗಿಯೂ, ಕೆಲವು ಪೌರಾಣಿಕವಾಗಿಯೂ ಇರುವವು. ಪುರಾಣ ಮಂತ್ರಗಳಿಗಿಂತಲೂ ವೇದಮಂತ್ರಗಳು ಶ್ರೇಷ್ಠವಾದವುಗಳೆಂದು ಶಾಸ್ತ್ರಿಗಳು ಹೇಳುವರು. ಆದರೆ ನಿಜವಾಗಿ ವಿಚಾರ ಮಾಡಿದರೆ ಮಂತ್ರಗಳಲ್ಲೇನೂ ತಾರತಮ್ಯಗಳಿರುವದಿಲ್ಲ.

ನಿಜವಾದ ತಾರತಮ್ಯವು ಭಾವನೆಯಲ್ಲಿರುತ್ತದೆ. ವೇದಗಳು ಪುರಾತನ ದವೂ ಪೂಜ್ಯವಾದವುಗಳೂ ಎಂದು ನಮ್ಮ ಭಾವನೆಯು ರೂಢವಾಗಿರು ವದರಿಂದ ಪುರಾಣಮಂತ್ರಗಳಿಗೆ ನಮ್ಮ ಮನಸ್ಸೆಳೆಯದು. ಸಾಮಾನ್ಯ ಜನರಿಗೆ ವೇದಮಂತ್ರಗಳೂ ಬರುವದಿಲ್ಲ. ಪುರಾಣಮಂತ್ರಗಳೂ ಬರು ವದಿಲ್ಲ. ಆದರೆ ಅವರಲ್ಲಿ ಪವಿತ್ರವಾದ ಶ್ರದ್ಧೆಯೂ ಭಾವನೆಯೂ ಇರು ವದರಿಂದ ಅವರು ಪರಮಾತ್ಮನನ್ನು ಹೇಗೆಯೇ ಕರೆದರೂ ಅದು ಪ್ರಣವ ಮಂತ್ರವೇ ಆಗುವದು. ಅಂತಃಕರಣದಿಂದ ಉಕ್ಕಿ ಬಂದ ಶಬ್ದವೇ ಮಂತ್ರವು. ಅದೇ ವೇದವಾಕ್ಯವು. ಎನ್ನಯ್ಯ ಎನ್ನವನೆಯೆಂಬದೇ ಶಿವ ಮಂತ್ರ। ಎನ್ನಯ್ಯ ಎನ್ನಯ್ಯ ನುಡಿದುದೇ ಶಿವಮಂತ್ರ॥ ಹರೀಶ್ವರ ರಗಳೆ. ಅದು ಹೀಗೆಯೇ ಇರಬೇಕೆಂದು ನಿರ್ಬಂಧಗೊಳಿಸುವದು ಕ್ರಮದ ದೃಷ್ಟಿ ಯಿಂದ ವಿಹಿತವಿದ್ದರೂ ಅಧ್ಯಾತ್ಮಿಕ ದೃಷ್ಟಿಯಿಂದ ಒಳಿತಲ್ಲ. 'ಮಂತ್ರವು ಹೀಗೇ ಇರಬೇಕು, ಇಷ್ಟೇ ಇರಬೇಕು, ಇದೇ ದಾಟಿಯಿಂದಲೇ ಅನ್ನ ಬೇಕೆಂಬ ನಿರ್ಬಂಧಗಳು ಸ್ವತಂತ್ರಾತ್ಮರಿಗಾಗಲಿ ಅಜ್ಞಾನಿಗಳಿಗಾಗಲಿ ಸರಿ ಬೀಳವು. ಯಾವ ಶಬ್ದವನ್ನು ತಾನು ಧ್ಯಾನಿಸುವದರಿಂದ ತನ್ನ ಹೃದ ಯವು ಪವಿತ್ರವಾಗಬಹುದೆಂದು ಮನುಷ್ಯನಿಗೆ ಅನಿಸುತ್ತದೆಯೋ ಅದೇ ಮಂತ್ರವು.

ಮಂತ್ರವನ್ನು ಗೌಪ್ಯವಾಗಿಡುವದರ ರಹಸ್ಯವೇನು? "ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು" ಎಂಬ ಗಾದೆ ಯುಂಟು. ಎಲ್ಲಿಯ ವರೆಗೆ ನಾವು ಯಾವದಾದರೊಂದು ಮಾತನ್ನು ಗುಪ್ತವಾಗಿಡುತ್ತೇವೆಯೋ ಅಲ್ಲಿಯ ವರೆಗೂ ಅದಕ್ಕೆ ಒಳ್ಳೆ ಮಹತ್ವ ಬರು ತ್ತದೆ. ಆದರೆ ಅದನ್ನು ಬಿಚ್ಚಿಯಾಡಿದರೆ ಅದರಲ್ಲೇನೂ ಸಾರಸ್ಯವುಳಿ ಯುವದಿಲ್ಲ. ಗೌಪ್ಯವಾದ ಮಾತುಗಳಲ್ಲಿ ವಿಶಿಷ್ಟತರವಾದ ಶಕ್ತಿಯಿರು ತ್ತದೆ. ಹಳೆಯ ಜನರು ತಮಗೆ ಗೊತ್ತಿದ್ದ ವಿದ್ಯೆಯನ್ನಾಗಲಿ ಮಂತ್ರ ವನ್ನಾಗಲಿ ಎಲ್ಲರಿಗೂ ಬಹಿರಂಗವಾಗಿ ಹೇಳಿಬಿಟ್ಟರೆ ಅದು ಹುಸಿ ಹೋಗು ತ್ತದೆಂದು ತಿಳಿದು ತಮ್ಮ ವಿಶ್ವಾಸಿಕರಾದ ಒಬ್ಬಿಬ್ಬರಿಗಷ್ಟೇ ಅದನ್ನು ಹೇಳುತ್ತಿರುತ್ತಾರೆ. ಆದರಿಂದ ಅಂಥ ಅಲ್ಪಸಂಖ್ಯಾಕರೇ ಅಭಿಮಾನಿಗಳೂ ಗೌರವಶಾಲಿಗಳೂ ಆಗಿ ಇತರರಿಗಿಂತ ಹೆಚ್ಚು ಮನ್ನಣೆಯನ್ನು ಹೊಂದಿ ಮೆರೆಯುತ್ತಿದ್ದಾರೆ. ಯಾವದಾದರೊಂದು ವಸ್ತುವು ಬಹು ಪ್ರಸಾರವಾ ಗದೆ ಅಲ್ಲಲ್ಲಿಯೇ ಗೌಪ್ಯವಾಗಿದ್ದಾಗ ಅವಕ್ಕೆ ಹೆಚ್ಚು ಮಹತ್ವ ಬರು

ತ್ತದೆ. ವಸ್ತುವು ಗೌಪ್ಯವೂ ಅಪರೂಪವೂ ಆದಷ್ಟು ಅದರಲ್ಲಿ ಹೆಚ್ಚು ಶ್ರದ್ಧೆಯು ಕೂಡ್ರುತ್ತದೆ. ಆ ಶ್ರದ್ಧೆಯಿಂದಲೇ ವ್ಯಕ್ತಾಲು ಪಾಲು ಲಾಭವಾಗುವದು. ಉದಾಹರಣಾರ್ಥವಾಗಿ ಒಬ್ಬ ವೈದ್ಯನು ರೋಗಿಗೆ ಗಿಡಮೂಲಿಕೆಯ ಹೆಸರನ್ನೇನೂ ಹೇಳದೆ ಗುಪ್ತವಾಗಿ ಬೇಕಾದಂಥ ರೋಗವಿದ್ದರೂ ಆ ಮೂಲಿಕೆಯು ಗುಣಮಾಡುತ್ತದೆಂದು ಹೇಳಿ ಆ ರೋಗಿಗೆ ಕೊಟ್ಟರೆ ರೋಗಿಯು ಅದರ ಮೇಲೆ ತುಂಬಾ ವಿಶ್ವಾಸವಿಡುವದರಿಂದ ಆ ಔಷಧಿಗಿಂತಲೂ ಆತನ ವಿಶ್ವಾಸವು ರೋಗ ವಾಸಿ ಮಾಡಲಿಕ್ಕೆ ಹೆಚ್ಚಿನ ಸಾಧನವಾಗುತ್ತದೆ. ಆದರೆ ಆ ಔಷಧದ ಹೆಸರು ಹೇಳಿ ಬಿಟ್ಟರೆ ಅದರಲ್ಲೇನಿದೆ ಮಣ್ಣು ? ಎಂಬೀ ಭಾವನೆಯುಂಟಾಗಿ ಅಂಥ ಭಾವನೆಯ ಮೂಲಕ ಗಿಡಮೂಲಿಕೆಯಲ್ಲಿದ್ದಂಥ ಸತ್ವವು ಕೂಡ ನಾಶವಾಗಿ ಹೋಗುವದು. ಗುಪ್ತ ಮಾತಿನಲ್ಲಿಲ್ಲ ಮಹತ್ವವಿರುತ್ತದೆಂಬ ಬಗ್ಗೆ ಒಂದು ಚಿಕ್ಕ ದೃಷ್ಟಾಂತವಿದೆ. ಒಬ್ಬ ಹಾದಿಕಾರನು ಹೊಳೆಯನ್ನು ದಾಟಬೇಕಾಗಿದ್ದಿತು. ಆ ಹೊಳೆಯ ದಂಡೆಯ ಮೇಲೆ ಒಬ್ಬ ಸನ್ಯಾಸಿಯು ಕುಳಿತಿದ್ದನು. ಆ ಹಾದಿಕಾರನು ಸನ್ಯಾಸಿಗೆ ನಮಸ್ಕರಿಸಿ ಹೊಳೆ ದಾಟುವಂತೆ ಕೃಪೆ ಮಾಡಬೇಕೆಂಬುದಾಗಿ ಬೇಡಿಕೊಂಡನು. ಆಗ ಸನ್ಯಾಸಿಯು 'ಜಯ ಶಂಕರ' ಎಂಬ ಶಬ್ದವನ್ನು ಒಂದು ಕಾಗದದ ಮೇಲೆ ಬರೆದು ಆ ಚೀಟಿಯನ್ನು ಆತನ ರಟ್ಟೆಗೆ ಕಟ್ಟಿ "ನೀನು ಬೇಕಾದ ಹಾಗೆ ಹೊಳೆಯನ್ನು ದಾಟಬಹುದು. ಈ ಚೀಟಿಯು ನಿನ್ನನ್ನು ರಕ್ಷಿಸುತ್ತದೆ. ಆದರೆ ಅದನ್ನು ನೀನು ಕಳೆಯದೆ ಚನ್ನಾಗಿ ಜೋಪಾನ ಮಾಡು, ಮತ್ತು ಅದನ್ನು ಬಿಚ್ಚಿ ಅದರಲ್ಲೇನಿದೆಯೆಂದು ಸರ್ವಥಾ ನೋಡಬೇಡ." ಎಂದು ಹೇಳಿದನು. ಅದೇ ಪ್ರಕಾರ ಆ ದಾರಿಕಾರನು ಆ ಚೀಟಿಯ ಮೇಲೆ ಅತ್ಯಂತ ವಿಶ್ವಾಸವನ್ನಿಟ್ಟು ಅರ್ಧಕ್ಕಿಂತ ಹೆಚ್ಚು ಹೊಳೆಯನ್ನು ದಾಟಿ ಹೋದನು. ಆದರೆ ಮುಂದೆ ಈ ಚೀಟಿಯಲ್ಲಿ ಅಂಥ ಶಕ್ತಿಯೇನಿರುವದೋ ನೋಡಬೇಕೆಂಬ ಕುತೂಹಲವು ಅವನಲ್ಲುತ್ಪನ್ನವಾಯಿತು. ಆಗ ಅವನು ಸನ್ಯಾಸಿಯು ಹೇಳಿದುದನ್ನು ಗಣನೆಗೆ ತಾರದೆ ಅದರೊಳಗಿದ್ದ 'ಜಯ ಶಂಕರ' ಎಂಬ ಶಬ್ದವನ್ನು ನೋಡಿದನು. 'ಅಹಹ! ಇಷ್ಟೇ ಅಲ್ಲವೇ? ಈ ಶಬ್ದದೊಳಗೇನು ಅಷ್ಟು ಮಹತ್ವವಿದೆ? ನಾನು ಹೊಳೆಯದ್ನು ಹ್ಯಾಗಾದರೂ ದಾಟಿಯೇ ದಾಟುತ್ತಿದ್ದೆನು ! ಎಂದು ಅಂದುಕೊಂಡು ಅದರಲ್ಲಿದ್ದ ವಿಶ್ವಾಸವನ್ನು ಕಳೆದುಕೊಂಡು ಆ ಚೀಟಿಯನ್ನು ಬಿಸುಡಿಬಿಟ್ಟನು. ಆ ವಿಶ್ವಾಸವು ನಷ್ಟವಾದ ಕೂಡಲೆ ಆತನು ತಾನು ಮೊದಲು ಎಷ್ಟು ಜಾಗರೂ

ಕತೆಯಿಂದ ಹೆಜ್ಜೆಯಿಡುತ್ತಿದ್ದನೋ ಅದನ್ನು ಬಿಟ್ಟು ವೈಸೊಕ್ಕಿನಿಂದ ಬಡಬಡ ನಡೆಯಲಾರಂಭಿಸಿದನು. ಅನಂತರ ಸ್ವಲ್ಪ ನಿಮಿಷಗಳಲ್ಲಿಯೇ ವೈಮರೆತು ಕಾಲು ಮೇಲಕ್ಕೆ ಹಾರಿ ಆತನು ಸೆಳವಿಗೆ ಬಿದ್ದು ಹೊಳೆ ಯಲ್ಲಿ ಮುಳುಗಿ ಸತ್ತು ಹೋದನು. ಆ ಚೀಟಿಯಲ್ಲಿ ಮೊದಲಿನಂ ತೆಯೇ ವಿಶ್ವಾಸವಿದ್ದರೆ ಆತನು ಜಾಗರೂಕತೆಯಿಂದ ಹೊಳೆಯನ್ನು ದಾಟೇ ದಾಟುತ್ತಿದ್ದನು. ಎಲ್ಲಿಯ ವರೆಗೆ ಆತನಲ್ಲಿ ಆ ಗುಪ್ತ ಮಾತಿ ನಲ್ಲಿ ಶ್ರದ್ಧೆಯಿದ್ದು ಅದನ್ನು ಬಚ್ಚಿಟ್ಟಿದ್ದನೋ ಅಲ್ಲಿಯ ವರೆಗೂ ಆತನಲ್ಲಿ ಒಂದು ವಿಶಿಷ್ಟತರವಾದ ಶಕ್ತಿಯುಂಟಾಗಿದ್ದಿತು. ಆದರೆ ಆ ಗುಪ್ತ ಮಾತಿ ನಲ್ಲಿ ಆತನು ವಿಶ್ವಾಸವನ್ನು ಕಳೆದುಕೊಂಡಾಕ್ಷಣವೇ ಅವನ ವಿನಾಶ ಕಾಲವು ಸಮೀಪಿಸಿತು. ಅದರಂತೆಯೇ ಮಂತ್ರವನ್ನಾದರೂ ಗುಪ್ತವಿ ಟ್ಟಷ್ಟು ನೆಟ್ಟಗೆ. ಅಂತೆಯೇ ಗುರುವು ಕಿವಿಯಲ್ಲಿ ಮಂತ್ರೋಪದೇಶ ಮಾಡುವನು. ಮತ್ತು ಅದನ್ನು ಬಹಿರಂಗವಾಗಿ ಉಚ್ಚರಿಸಬಾರದೆಂದು ಸುರುವನು. ಯಾವ ಮಂತ್ರದಲ್ಲಿಯೇ ಯಾಕಾಗಲೊಲ್ಲದು, ದೃಢವಾದ ವಿಶ್ವಾಸವಿದ್ದರೇನೇ ಮನುಷ್ಯನಲ್ಲಿ ಅಸಾಧಾರಣವಾದ ಶಕ್ತಿಯುಂಟಾಗು ವದೇ ವಿನಃ ಅರ್ಧಮರ್ಧ ಅಧೈರ್ಯದ ವಿಶ್ವಾಸವಿದ್ದರೆ ನಮ್ಮ ಕೆಲಸ ದಲ್ಲಿ ಜಯವು ಸಿಗಲಾರದು. ಒಬ್ಬ ಗುರುವು ತನ್ನ ಶಿಷ್ಯನಿಗೆ 'ಶಿವ ಶಿವಾ ಎಂದರೆ ಬೇಕಾದಂಥ ವಿಘ್ನಗಳು ಬಂದರೂ ನೀನು ದಾಟುವಿ' ಎಂದು ಉಪದೇಶಿಸಿದ್ದನು. ಆದರೆ ಆ ಶಿಷ್ಯನು ಅಧೈರ್ಯವುಳ್ಳವನಾ ದ್ದರಿಂದ ಆ ಮಾತಿನಲ್ಲಿ ಪೂರಾ ವಿಶ್ವಾಸವಿಡಲಿಲ್ಲ. ಆದರೆ ಆ ಭಕ್ತನು ಒಂದು ತುಂಬಿ ಹರಿಯುವ ನದಿಯನ್ನು ದಾಟಿ ಹೋಗಬೇಕಾಗಿದ್ದಿತು. ಅಲ್ಲಿ ಹರಗೋಲಿನವರಾಗಲಿ ಸಿಂಗಡಿಯವರಾಗಲಿ ಇದ್ದಿದ್ದಿಲ್ಲ. ಅತ್ತಿತ್ತ ನೋಡಲಾಗಲಿ ಒಬ್ಬ ಎಲ್ಲಮ್ಮನ ಜೋಗತಿಯು ತನ್ನ ಹಡಲಿಗೆಯನ್ನೇ ಹರಗೋಲು ಮಾಡಿ 'ಉದೋ ಉದೋ' ಎಂದು ಮಂತ್ರೋ ಚ್ಚಾರವನ್ನು ಪಠಿಸುತ್ತ ಹೊಳೆಯನ್ನು ದಾಟಲುಪಕ್ರಮಿಸಿದಳು. ಅದನ್ನು ನೋಡಿ ಆ ಶಿಷ್ಯನು ತನ್ನ ಗೊಂಗಡಿಯನ್ನು ಹೊಳೆಯ ಮೇಲೆ ಹಾಸಿ ಅದರ ಮೇಲೆ ಕುಳಿತುಕೊಂಡು 'ಶಿವಶಿವಾ' ಎಂದು ಅವಳ ಬೆನ್ನ ಹಿಂದೆ ಸಾಗಿದನು. ಆದರೆ ಆ ಜೋಗತಿಯ ವಿಶ್ವಾಸವು ಆ ಶಿಷ್ಯನ ವಿಶ್ವಾಸಕ್ಕಿಂತಲೂ ಅಧಿಕವಾದುದರಿಂದ ಆಕೆಯು ಅವನಿಗಿಂತಲೂ ಭರ ದಿಂದ ಮುಂದಕ್ಕೆ ಸಾಗಿದಳು. ಆಗ ಶಿಷ್ಯನ ಎದೆಯು ಡವ ಡವ ಹಾರ ಹತ್ತಿತು. 'ಶಿವಶಿವಾ' ಎನ್ನುವದನ್ನು ಬಿಟ್ಟು ತಾನೂ ಉದೋ ಉದೋ

ಎಂದರೆ ಶೀಘ್ರವಾಗಿ ದಾಟಬಹುದು ಎಂದು ಭಾವಿಸಿ 'ಉದೋ ಉದೋ' ಎಂದು ಪಠಿಸಲಾರಂಭಿಸಿದನು. ಅವನ ಅಧೈರ್ಯವು ಹೆಚ್ಚಿ ವಿಶ್ವಾಸವು ಕಡಿಮೆಯಾಗುತ್ತ ಹೋದಂತೆ ಕಂಬಳಿಯು ಸಾವಕಾಶವಾಗಿ ಕೆಳಗೆ ಇಳಿಯುತ್ತ ಹೋಯಿತು. ಆಗ ಅವನು ಗಾಬರಿಗೊಂಡು ಒಮ್ಮೊಮ್ಮೆ 'ಶಿವಶಿವಾ' ಒಮ್ಮೊಮ್ಮೆ 'ಉದೋ ಉದೋ' ಎಂದು ಗದ್ಗದ ಧ್ವನಿಯಿಂದ ಒದರಲಾರಂಭಿಸಿದನು. ಇಷ್ಟರಲ್ಲಿ ಏಕನಿಷ್ಠೆಯುಳ್ಳ ಜೋಗತಿಯು ಹೊಳೆದಾಟಿ ಹೋಗಿದ್ದಳು. ಆದರೆ ಶಿಷ್ಯನು ತಾನು ಸಾಯುವದು ನಿಶ್ಚಯವೆಂದು ತಿಳಿದು ಎದೆಯೊಡೆದು ಯಾವ ಮಂತ್ರವನ್ನೂ ಉಚ್ಚರಿಸದೆ ಸ್ತಬ್ಧನಾದನು. ಆ ಮೇಲೆ ಆತನು ಶೀಘ್ರವೇ ಜಲಸಮಾಧಿಯನ್ನು ಹೊಂದಿದನು. ಇದರ ಮೇಲಿಂದ ನಮಗೆ ಗೊತ್ತಾಗುವದೇನಂದರೆ ಯಾವದೇ ಮಾತಿನಲ್ಲಿ ನಮಗೆ ದೃಢತರವಾದ ವಿಶ್ವಾಸವೊಂದಿದ್ದರೆ ಬೇಕಾದಂಥ ಗಂಡಾಂತರಗಳನ್ನು ಸಹ ನಾವು ದಾಟಿಹೋಗುವದು ಶಕ್ಯವು. ಆದರೆ ನಾವು ವಿಶ್ವಾಸಶೂನ್ಯರಾದರೆ ಮಾತ್ರ ಯಾವ ಧಡಕ್ಕೂ ಮುಟ್ಟಲಾರೆವು. ಆದುದರಿಂದಲೇ ಶ್ರೀ ಭಗವದ್ಗೀತೆಯಲ್ಲಿ "ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ" ಅಂದರೆ 'ಶ್ರದ್ಧೆಯಿಲ್ಲದ ಅಜ್ಞಾನಿಯು ಸಂಶಯ ಗ್ರಸ್ತನಾಗಿ ನಾಶಹೊಂದುತ್ತಾನೆ.' ಎಂದು ಹೇಳಿದೆ. "ಶ್ರದ್ಧಾವಾಂಲ್ಲಭತೇ ಜ್ಞಾನಂ" ಅಂದರೆ ಶ್ರದ್ಧೆಯುಳ್ಳಾತನೇ ಜ್ಞಾನವನ್ನು ಪಡೆಯುತ್ತಾನೆಂಬ ಗೀತಾವಚನವಿರುವದು.

ವೀರಶೈವರಲ್ಲಿ ಪಂಚಾಕ್ಷರಿ ಮತ್ತು ಷಡಕ್ಷರಿಗಳೆಂದು ಎರಡು ಪ್ರಕಾರದ ಮಂತ್ರಗಳಿರುತ್ತವೆ. ಪ್ರಣವವನ್ನು ಬಿಟ್ಟರೆ ಪಂಚಾಕ್ಷರಿಯಾಗುವದು, ಹಿಡಿದರೆ ಷಡಾಕ್ಷರಿಯಾಗುವದು. ಈ ಮಂತ್ರಗಳನ್ನು ಮನವಲ್ಲಿಯೇ ಪಠಿಸಬೇಕೆಂದು ಶ್ರೀ ಗುರುವು ಶಿಷ್ಯನ ಕಿವಿಯಲ್ಲಿ ಹೇಳುವನು. ಈ ಮಂತ್ರಗಳು ಗೌಪ್ಯವಾಗಿರಬೇಕೆಂತಲೂ ಕೇವಲ ಗುರುಗಳ ಮುಖದಿಂದಲೇ ಕೇಳಲ್ಪಡಬೇಕೆಂತಲೂ ಬಂಧುರವಾದ ನೇಮವು ಎಷ್ಟೋ ದಿವಸಗಳಿಂದ ನಡೆಯುತ್ತ ಬಂದಿದ್ದರೂ ಈಗಿನ ಮನ್ವಂತರದಲ್ಲಿ ಅವು ಯಾವ ಕಾರಣದಿಂದಲೋ ಬಹಿರಂಗವಾಗಿ ಉಚ್ಚರಿಸಲ್ಪಡುತ್ತ ಇರುವದರಿಂದ ಅವುಗಳ ಪಠಣ ಮಾಡಿದರೆ ಯಾವ ಲಾಭವೂ ಇಲ್ಲೆಂದು ಜನರಿಗೆ ಭಾಸವಾಗಿ ಬಿಟ್ಟಿದೆ. ಎಲ್ಲಿಯ ವರೆಗೆ ಜನರಲ್ಲಿ ಆ ಮಂತ್ರಗಳಗಳ ಬಗ್ಗೆ ಶ್ರದ್ಧೆಯೂ ಭಕ್ತಿಯೂ ನೆಲೆಗೊಂಡಿದ್ದವೋ ಅಲ್ಲಿಯ ವರೆಗೂ

ಅವರು ಉಜ್ವಲವಾದ ಶಕ್ತಿಯನ್ನು ಪಡೆಯುತ್ತಿದ್ದರು. ಆದರೆ ಆ ಪವಿತ್ರವಾದ ಮಂತ್ರಗಳು ಬೈಲಿಗೆ ಬಿದ್ದಂದಿನಿಂದ 'ಅವುಗಳಲ್ಲೇನಿದೆ?' ಎಂಬ ಶಿಥಿಲ ಕಲ್ಪನೆಯೇ ಜನರಲ್ಲುಂಟಾಗಿ ಅವುಗಳೊಳಗೆ ಏನೂ ಮಹತ್ವವಿಲ್ಲದಂತಾಗಿದೆ. ಮನುಷ್ಯನಿಗೆ ಭಜನೆ, ಸ್ತೋತ್ರ, ಪ್ರಾರ್ಥನೆ, ಧ್ಯಾನ, ಮಂತ್ರಗಳು ಉತ್ತರೋತ್ತರ ಶ್ರೇಯಸ್ಸನ್ನುಂಟುಮಾಡತಕ್ಕವುಗಳಾಗಿವೆ. ಮಂತ್ರವೆಂಬುದು ಇವೆಲ್ಲವುಗಳಿಗಿಂತಲೂ ಅಧಿಕವಾದುದು. ತಾಳತಪ್ಪಡಿ ತಂಬೂರಿಗಳಿಂದ ದೇವರ ವಿಷಯವಾಗಿ ಪದಗಳನ್ನು ಹಾಡುವದಕ್ಕೆ ಭಜನೆಯನ್ನುತ್ತಾರೆ. ಇದು ಮನುಷ್ಯನಲ್ಲಿ ಪವಿತ್ರ ಭಾವನೆಯನ್ನು ಬೆಳೆಯಿಸುವ ಮೊದಲನೆಯ ಮೆಟ್ಟಲು. ಸ್ತೋತ್ರ ಅಥವಾ ಸ್ತವನವೆಂದರೆ ಸ್ವತಃ ರಚಿಸಿದ ಇಲ್ಲವೆ ಮಹನೀಯರು ರಚಿಸಿದ ಶ್ಲೋಕಗಳಿಂದ ಪರಮಾತ್ಮನನ್ನು ಗಟ್ಟಿಯಾಗಿ ಹೊಗಳಿ ಆನಂದಪಡುವದು. ಇದು ಮನಸ್ಸನ್ನು ಪರಿಶುದ್ಧಗೊಳಿಸುವ ಎರಡನೆಯ ಮೆಟ್ಟಲು. ಪ್ರಾರ್ಥನೆಯೆಂದರೆ ಕ್ಲಪ್ತವಾದ ವೇಳೆಯ ವರೆಗೆ ಕಣ್ಣುಮುಚ್ಚಿ, ಮೊಳಕಾಲೂರಿ, ಮುಖ ಮೇಲಕ್ಕೆತ್ತಿ ಇಲ್ಲವೆ ಆಸನ ಹಾಕಿಕೊಂಡು ಕುಳಿತು ದೀನವಾಣಿಯಿಂದಾಗಲಿ ಮೌನದಿಂದಾಗಲಿ ಪರಮಾತ್ಮನೆದುರಿಗೆ ತನ್ನ ಪಾಪಗಳನ್ನೊಪ್ಪಿಕೊಂಡು ರಕ್ಷಿಸಬೇಕೆಂದು ಬೇಡಿಕೊಳ್ಳುವದೇ ಆತ್ಮಪಾವಿತ್ರ್ಯತೆಯ ಮೂರನೆಯ ಮೆಟ್ಟಲು. ಪರಮಾತ್ಮನ ನಾಮಸ್ಮರಣೆ ನಿರಂತರ ಬಹಿರಂಗದಲ್ಲಿಯೂ ಅಂತರಂಗದಲ್ಲಿಯೂ ಭಕ್ತಿಪೂರ್ವಕವಾಗಿ ಪಠಿಸುವದೇ ಧ್ಯಾನವು. ಇದರಿಂದ ಮನಸ್ಸು ಅಲ್ಲದ ವಿಷಯಗಳ ಕಡೆಗೆ ಹರಿಯದೆ ವಿಶೇಷತಃ ಪರಮಾತ್ಮನ ಕಡೆಗೆಯೇ ಎಳೆಯುತ್ತಿರುತ್ತದೆ. ಗುರುವು ಹೇಳಿದ ಗೌಪ್ಯ ಮಂತ್ರವನ್ನು ಭಯಭಕ್ತಿಯಿಂದ ಮನದಲ್ಲಿಯೇ ಯಾವಾಗಲೂ ಧ್ಯಾನಿಸುವದೇ ಮಂತ್ರವು. ಇದರಿಂದ ನಮ್ಮ ಮನಸ್ಸು ಸದೈವ ಪರಮಾತ್ಮನಲ್ಲಿಯೇ ಒಳಪಡುವದಲ್ಲದೆ ಅದಕ್ಕೆ ಬೇರೆ ಕಡೆಗೆ ಹರಿದಾಡಲು ಸ್ವಲ್ಪೂ ಅವಕಾಶ ದೊರೆಯುವದಿಲ್ಲ. ಈಗ್ಯೂ ಸಹ ಕೆಲಕೆಲವು ಮಂತ್ರಗಳನ್ನು ಗೌಪ್ಯವಾಗಿಟ್ಟುಕೊಂಡು ಅದ್ಭುತ ಸಾಮರ್ಥ್ಯವನ್ನು ಪಡೆಯುತ್ತಿರುವಂಥ ಜನರೆಷ್ಟೋ ಇರುವರು. ಆದರೆ ನಾವು ನೆನಪಿನಲ್ಲಿಡತಕ್ಕ ಮುಖ್ಯ ಸಂಗತಿಯೇನಂದರೆ ಯಾವ ಮಂತ್ರದಲ್ಲಿಯೂ ನಿಜವಾಗಿ ಏನೂ ಅರ್ಥವಿಲ್ಲ. ಆದರೆ ನಾವು ಅದರಲ್ಲಿಟ್ಟಂಥ ಶ್ರದ್ಧೆ ಮತ್ತು ಭಾವನೆಗಳಿಂದಲೇ ನಮ್ಮಲ್ಲಿ ದಿವ್ಯವಾದ ಶಕ್ತಿಯು ಬರುತ್ತದೆ. ಎಲ್ಲರಿಗೂ ಬಹಿರಂಗವಾಗಿ ಗೊತ್ತಿದ್ದ ಯಾವದಾದರೊಂದು ಮಾತಿನ ಬಗ್ಗೆ ನಮ್ಮಲ್ಲಿ ಅಷ್ಟು ವಿಶ್ವಾಸವಾಗಲಿ,

ಪೂಜ್ಯಭಾವನೆಯಾಗಲಿ ಹುಟ್ಟುವದು ಅಸಂಭವವು. ಆದರೆ ನಮ್ಮ ಪರಮ ಪವಿತ್ರವಾದ ಪಂಚಾಕ್ಷರಿ ಷಡಾಕ್ಷರಿ ಮಂತ್ರಗಳು ಇಷ್ಟೇ ಏಕೆ? ಬಹುತರ ಎಲ್ಲ ಮಂತ್ರಗಳೂ ಬಹಿರಂಗವಾಗಿವೆ. ಅಂದಮೇಲೆ ನಮ್ಮ ಭಾವನೆಯನ್ನು ಹೇಗೆ ಪವಿತ್ರಗೊಳಿಸಬೇಕು? ಆ ಮಂತ್ರಗಳನ್ನೇ ವ್ಯತ್ಯಾಸಪಡಿಸಬೇಕೋ? ಅಥವಾ ಬಹಿರಂಗವಾಗಿದ್ದರೂ ಆಗಿಲ್ಲವೆಂಬ ಮುಗ್ಧ ಭಾವನೆಯಿಂದ ಅವಕ್ಕೇನೋ ಅಂಟಿಕೊಳ್ಳಬೇಕೋ? ಒಟ್ಟಿನ ಮೇಲೆ ನಿಜವಾದ ಗುರುವು ಅಥವಾ ತನ್ನರಿವು ರಹಸ್ಯವಾಗಿ ಹೇಳಿಕೊಟ್ಟ ಮಹಾಮಂತ್ರಕ್ಕನುಸರಿಸಿ ನಡೆದುಕೊಳ್ಳುವದು ಕ್ಷೇಮಕರವು.

---

## ಸರ್ವಜ್ಞ ಕವಿ.

**(ಲೇಖಕ— ಚಿಕ್ಕಕೋರ)**

(ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು)

ಹೀಗಿದ್ದ ಮೂಲಕ ಗುರುವಿನಲ್ಲಿ ಜಾತಿಯನ್ನು ಎಣಿಸಬಾರದು. ದೇವನೊಲಿದಾತನೇ ನಿಜವಾದ ಜಾತನು. ಮೇಲಾಗಿ ಜಾತಿಹೀನರ ಮನೆಯ ಜ್ಯೋತಿ ತಾ ಹೀನವೆ? 'ಊರಿಗೆ ದಾರಿಯನ್ನು ಯಾರು ತೋರಿದಡೇನು?' ಆದರೂ ಸದ್ಗುರುವಿನ ಲಕ್ಷಣವನ್ನು ಹೀಗೆ ಹೇಳಬಹುದು. ಪರಮಾತ್ಮನು ತನ್ನೊಳಗೆ ಎರವಿಲ್ಲದೆ ಇದ್ದರೂ ಯಾವನು ಪರದೇಶಿಯಂತಿರುವನೋ ಆತನೇ ಪರಮ ಗುರುವು. ಇಂಥ ಗುರುವಿನ ವಚನವೇ ಪರಮಾರ್ಥ. ಇಂಥವನನ್ನೇ ನಂಬುವುದು! ಎತ್ತಾಗಿ, ತೊತ್ತಾಗಿ, ಪಾದದ ಕೆಳಗಾಗಿ ಇಂಥ ಗುರುವಿನನ್ನು ಸೇವಿಸಬೇಕು. ಈ ಮೇರೆಗೆ ಸದ್ಗುರು ಸಚ್ಛಿಷ್ಯರು ಒತ್ತಟ್ಟಿಗೆ ಸೇರಲು ಅಧ್ಯಾತ್ಮಪ್ರಕಾಶವು ಹೊರಚಿಮ್ಮುವದು. ಕಟ್ಟಿಗೆಗಳೆರಡನ್ನು ಕಟ್ಟಿಡದೆ ಗಟ್ಟಾಗಿ ಮಥನಿಸಿದರೆ ದೊಡ್ಡ ಬೇಗೆಯು ಬೆಳಗುವಂತೆ ಗುರುಶಿಷ್ಯಸಂಗಮದ ಪರಿಣಾಮ ಪರುಸವು ಲೋಹವನ್ನು ಕೂಡಲೆ ಬಂಗಾರವನ್ನಾಗಿ ಮಾಡುವಂತೆ ಸದ್ಗುರುವಿನ ದರುಶನವೇ ಶಿಷ್ಯನನುದ್ಧರಿಸುತ್ತಿವೆ.

### ೫. ಸಾಧಕಸ್ಥಲ.

೧. ಹಿಂದಿನಿಂದ ಮುಂದೆ:—ಸದ್ಗುರುವಿಗೆ ಶರಣು ಹೋಗಿ ಅವರು ಹೇಳಿದ ಸಾಧನವನ್ನು ನಿಷ್ಠೆಯಿಂದ ಮಾಡುವ ಮುಮುಕ್ಷುವು ಸಾಧಕ

ನೆಂದೆನಿಸಿಕೊಳ್ಳುವನು. ಸತ್ಪುರುಷರ ಸಹವಾಸದಲ್ಲಿ ತಪಸ್ಸನ್ನು ಮಾಡಿದ ಮೂಲಕ ಅವನಲ್ಲಿ ಸದ್ವೃತ್ತಿಯು ಕೆಲಮಟ್ಟಿಗೆ ಬೆಳೆದಿರುತ್ತದೆ. ಮುಂದೆ ಗುರುಗಳು ಉಪದೇಶಿಸಿದ ಆತ್ಮಜ್ಞಾನವನ್ನು ದೃಢಮಾಡುವದಕ್ಕಾಗಿ ಅವನು ಸಾಧನವನ್ನು ಮಾಡುವನು. ದೇವರನ್ನು ಕಾಣುವದೇ ಸಾಧಕನು ತನ್ನೆದುರಿಗಿಟ್ಟ ಹಿರಿಗುರಿಯು; ಅದನ್ನು ಸಾಧಿಸುವದಕ್ಕಾಗಿಯೇ ಅವನ ಅಖಂಡ ಯತ್ನ. ದೇವರ ದರ್ಶನಕ್ಕಾಗಿ ಅವನು ಎಲ್ಲ ಸೌಖ್ಯವನ್ನು ತೊರೆದು ಶ್ರವಣ, ಮನನ, ನಿಧಿಧ್ಯಾಸದಿಂದವನು ದೇವರನ್ನು ಕಾಣಲು ಬಯಸುವನು.

ಶ್ರವಣಃ— ಕೇಳಿಕೆಯೇ ತಿಳುವಳಿಕೆಗೆ ಆಧಾರವೆಂಬುದು ಎಲ್ಲರಿಗೆ ಗೊತ್ತಿದ್ದ ವಿಷಯ. ಆದ್ದರಿಂದ ಎಲ್ಲ ಸಾಧನಗಳಲ್ಲಿ ಶ್ರವಣವೇ ಹಿರಿದಾದುದು. ಗುರುವಿನ ಅಡಿಯ ಬಳಿ ಕುಳಿತು ಸಾಧಕನು ದೇವರಾರು, ಅವನನ್ನು ಭಜಿಸುವದೇತಕ್ಕೆ, ಹೇಗೆ, ಇಂತು ಮುಂತಾದ ಸಂಗತಿಗಳನ್ನರಿತುಕೊಳ್ಳುವನು. ಜೀವ ಜಗತ್ತು ಜಗದೀಶ್ವರರ ಪರೋಕ್ಷಜ್ಞಾನವು ಚನ್ನಾಗಿ ಆದಮೇಲೆ ಅದರ ಅಪರೋಕ್ಷಾನುಭೂತಿಗಾಗಿ ಅವನು ಮುಂದಿನ ಸಾಧನವನ್ನು ಪ್ರಾರಂಭಿಸುವನು. ಇವುಗಳ ವಿಷಯವಾಗಿದ್ದ ಸರ್ವಜ್ಞನ ಸಂದೇಶವು ಮನನೀಯವಾದುದು ಇರುತ್ತದೆ.

೧. ದೇವರಾರು :— ಮೊದಲು ಸರ್ವಜ್ಞನು ದೇವರ ವಿಷಯವಾಗಿ ಏನು ಹೇಳುತ್ತಾನೆ ಕೇಳುವ. ಸರ್ವಜ್ಞನಾದ ದೇವರು ಜಗಕೆ ಒಬ್ಬನಲ್ಲದೆ ಇಬ್ಬರುಂಟೇ ಎಂದು ಕೇಳಿ ಭುವನ ಪ್ರಾಣಿಗಳಿಗಾದ ನಿಜವಾದ ದೇವನು ಒಬ್ಬನೇ ಎಂದು ಸರ್ವಜ್ಞನು ಅಭಿಪ್ರಾಯಪಡುತ್ತಾನೆ. ಆಕಾಶದಂತೆ ಅಡಗಿರುವ ಪರಬ್ರಹ್ಮನು ಕಾಣುವದಿಲ್ಲ. ಅವನಿಗೆ ಯಾವ ತರಹದ ಆಕಾರವು ಇಲ್ಲ. ದೇವರಿಲ್ಲದ ಸ್ಥಳವಿಲ್ಲ. ನಾವಿರುವ ಈ ಜಗತ್ತು ಆತನಲ್ಲಿಯೇ ಅಡಗಿರುವುದು. ಮೇಲಾಗಿ ಪರಬ್ರಹ್ಮನಲ್ಲಿ ಯಾವ ಬಗೆಯ ಭೇದವಿಲ್ಲ. ತಾನೇ ತಾನಾಗಿ ಇರುತಿಪ್ಪ ಆತನ ಯಥಾರ್ಥವಾದ ಜ್ಞಾನವು ಹರಿಹರಬ್ರಹ್ಮರಿಂದ ಆಗುವದಿಲ್ಲ.

ಈ ಒಂದೇಒಂದಾದ ಪರಬ್ರಹ್ಮನಿಂದ ಜಗತ್ತು ಹುಟ್ಟಿದ ಕಾರಣ ಅವನ ಜ್ಞಾನವಾದೊಡನೆ ಜಗತ್ತು ಕಣ್ಣಮುಂದೆ ನಿಲ್ಲುವದು. ಸಮುದ್ರದಲ್ಲಿ ಅಲೆಗಳು ಮೈದಾಳುವಂತೆ ಚಿನುಮಯನಾದ ದೇವನಲ್ಲಿ ಮೂರೂ ಲೋಕಗಳು ಜನಿಸಿರುತ್ತವೆ. ಚಿತ್ರಕ್ಕೆ ಭಿತ್ತಿಯು ಹಿನ್ನೆಲವಿದ್ದಂತೆ ಜಗ

ತ್ಯಕ್ಕೆ ದೇವನೇ ಆಧಾರ. ಕಂಕಣವು ಕನಕದ ವಿಕಾರವಿರುವಂತೆ ನಾಮ ರೂಪಾತ್ಮಕ ಸೃಷ್ಟಿಯು ಪರಮಾತ್ಮನ ವಿಕಾರವು. ನವಿಲಿನೊಳು ಚಿತ್ರ ವನ್ನೂ ಎಲೆಯುಲರಗಳಲ್ಲಿ ವಿವಿಧ ಬಣ್ಣಗಳನ್ನೂ ತೆಂಗಿನಲ್ಲಿ ಎಳೀ ನೀರನ್ನೂ ಕೋಗಿಲೆಯ ಕಂಠದಲ್ಲಿ ಇನಿದಾದ ಗಾಯನವನ್ನೂ ತುಂಬಿ ದವರು ದೇವರನ್ನುಳಿದು ಇನ್ನಾರು?

ಆನೆಯು ಕನ್ನಡಿಯಲ್ಲಿ ಅಡಗುವಂತೆ ಜಾಣರ ಎದೆಯಲ್ಲಿ ಹುಟ್ಟು ಸಾವುಗಳಿಲ್ಲದ ಪರಮಾತ್ಮನು ಅಡಗಿರುವನು. ಚಂದನದ ಮರದಲ್ಲಿ ಗಂಧವು ಇರುವಂತೆ ಶರಣರ ಹೃದಯದಲ್ಲಿ ಪರಶಿವನು ವಾಸಿಸಿರುವನು. ಹಾಲಿನಲ್ಲಿ ಬೆಣ್ಣೆಯೂ ನೀರಿನಲ್ಲಿ ಬೆಂಕಿಯೂ ಗೂಢವಾಗಿರುವಂತೆ ದೇವರು ಎಲ್ಲರಲ್ಲಿ ಆರಿಗೂ ತೋರದೆ ಸಾರಿಹನು. ಜಗತ್ತಿನಲ್ಲಿ ಈ ಮೇರೆಗೆ ತುಂಬಿತುಳುಕುವನು ತಮ್ಮಲ್ಲಿ ಇರಲಾರನೇ? ಆದ್ದರಿಂದ ವಾರಾಣಸಿಗೆ ಹೋಗುವ ಕಾರಣ ವೇನು? ಕಾರಣ ಪುರುಷನು ತನ್ನೊಳು ಇರುತಿರಲು ಮುಕ್ತಿಗಾಗಿ ಎಲ್ಲೆ ಲ್ಲಿಯೂ ಅಲೆದಾಡುವ ಕಾರಣವಿಲ್ಲ ಎಂದು ಸರ್ವಜ್ಞನು ಉಸುರುತ್ತಾನೆ.

೮. ಭಜಿಸುವದೇತಕ್ಕೆ:— ಸಂಸಾರವೆಂಬುದು ನೀರ ಬೊಬ್ಬುಳಿ ಯಂತೆ ಕ್ಷಣಭಂಗುರವಾದದ್ದು. ಅದೊಂದು ಜಾವಕ್ಕೆ ಹರಿದು ಹೋಗುವ ಹಿರಿದಾದ ಸಂತೆ. ಇಂಥ ಅಸ್ಥಿರವಾದ ಸಂಸಾರದಲ್ಲಿಯೂ ತನ್ನ ಬಳಿಯಲ್ಲಿ ಭೋಗಗಳಿದ್ದರೆ ಸತಿಸುತರು ನಗುತಿಹರು. ಅವು ಮಾಯವಾದ ಮರುದಿನವೇ ನಗೆ ಹೋಗಿ ಹೊಗೆಯಾಗುವದು. ನಮ್ಮ ಶರೀರವೂ ಕೂಡ ಒಂದು ಅರಗಳಿಗೆಯಲ್ಲಿ ಕರಗುವ ಒಡವೆ. ಅದರ ಸಾರವನ್ನರಿಯದೆ ಸುಖಪಡುವದು ಮರುಳತನವಲ್ಲವೆ? ಉರಗನ ಮುಖ ದಲ್ಲಿ ಸಿಲುಕಿದ ಕಪ್ಪೆಯು ತನ್ನ ಮರಣವನ್ನು ಲೆಕ್ಕಿಸದೆ ಹಾರುವ ನೊಣಕೆ ಎರಗುವಂತೆ ಸಂಸಾರ ಸುಖದ ಇರವು ಕಾಣಯ್ಯ ಎಂದು ಸರ್ವಜ್ಞನು ಹೇಳುತ್ತಾನೆ.

ಮೇಲಾಗಿ ಮರಣವು ಆವ ಮಾನವನಿಗೂ ಬಿಟ್ಟದ್ದಲ್ಲ. ಮನು ಜನು ವಾರಾಣಸಿಯಲಿರಲಿ, ವಾರಿಧಿಯ ನಡುವಿರಲಿ, ವೀರಭದ್ರನ ನೆರೆ ಯಲಿರಲಿ, ಅಂತಕನು ಅವನನ್ನು ಕೊಲ್ಲದೆ ಎಂದೂ ಬಿಡುವದಿಲ್ಲ. ಕಡ ಲೇಳುಗಳ ಮಧ್ಯದಲ್ಲಿ ಲೋಹದ ಕೋಟೆಯಲ್ಲಿದ್ದ ಪರಿಕ್ಷಿತಿಯನ್ನು ವಿಧಿ ಯಹಿಡಿತದಿಂದ ಬಿಡಿಸಲು ಯಾರಾದರೂ ಸಮರ್ಥರಾದರೇ? ಮೃತ್ಯು

ದೇವತೆಯು ಜನರನ್ನು ಕೆಲಕಾಲ ಅತ್ತಿತ್ತಾಡಿಸಿ ಕೊನೆಗೆ ಎಲ್ಲರನ್ನೂ ತನ್ನ ಉದರದಲ್ಲಿ ಚೆಲ್ಲುತ್ತಾಳೆ.

ಆದುದರಿಂದ ದೇವರನ್ನು ನೆನೆದು ಆತನ ಕೃಪೆಯನ್ನು ಪಡೆಯದೆ ಜಗತ್ತಿನಲ್ಲಿ ನಿಲ್ಲುವದೇ ಕಷ್ಟ. ದೇವರನ್ನು ನೆನೆವಂಗೆ ಭಾವಿಸಿದುದು ದೊರಕುತ್ತದೆ. ಆತನನ್ನು ನೆನೆಯದ ಧಮಂಗೆ ಇಹಪರದಲ್ಲಿ ಯಾವದೂ ಸಿಗುವದಿಲ್ಲ. ತೆಪ್ಪವನ್ನು ನಂಬಿ ತಪ್ಪದೆ ತೀರಕ್ಕೆ ಮುಟ್ಟುವಂತೆ ಸರ್ವಭೂಷಣನನ್ನು ನಂಬಿದಡೆ ಭವ-ಭಯವು ತಪ್ಪಿ ಹೋಗುತಿದೆ. ಹಸುರಿನಲ್ಲಿದ್ದ ಕಂಬನಿಯು ಬಿಸಿಲಿಗೆ ಹಾರುವಂತೆ ಬಸವನೆಂದರೆ ಪಾಪವು ದೆಸಗೆಟ್ಟು ಓಡುವುದು. ಮಾರಸಂಹರನ ನೆನವು ಮೃತ್ಯು ದೇವತೆಯನ್ನು ದೂರ ಅಟ್ಟುವುದು. ಎಲ್ಲರೂ ಶಿವನ ನೆನೆದರೆ ಕೈಲಾಸವು ಇಲ್ಲಿಯೇ ಬರುವುದು. ಆದುದರಿಂದ ಯೌವ್ವನದಲ್ಲಿ ಲೋಲನಾಗಬೇಡ. ಮಾಯಾ ಮೋಹವನೆಚ್ಚಿ ವ್ಯರ್ಥ ಆಯಾಸಗೊಳಬೇಡ. ದೇವರು ನಿನಗೆ ಕಣ್ಣು-ನಾಲಿಗೆ ಮನಸ್ಸುಗಳನ್ನೂ ದಯಪಾಲಿಸಿರುವನು. ಅದಕ್ಕಾಗಿ ಮನ್ಮಂದಿರವನ್ನು ಚನ್ನಾಗಿ ತೆರೆದಿಟ್ಟು ಆ ದೇವ ದೇವನನ್ನು ನೆನೆಯು. ನಾಳೆ ಸತ್ತು ಹೋದರೆ ನಿನಗೆ ಮುಕ್ತಿ ದೊರಕಲಿಕ್ಕಿಲ್ಲ. ಸಾಯುವ ಮುನ್ನವೇ ಅದರ ಗೊತ್ತುಗುರಿಗಳನ್ನು ತಿಳಿ ಎಂದು ಸರ್ವಜ್ಞನು ಮನಸ್ಸನ್ನು ಕರಗಿಸುವ ಮಾತಿನಲ್ಲಿ ಎಲ್ಲರನ್ನು ಬಿನ್ನವಿಸುತ್ತಾನೆ.

೫. ರಾಗ ವಿರಾಗಗಳು— ಈ ಮೇರೆಗೆ ಸಾಧಕನು ದೇವರಲ್ಲಿ ಭಕ್ತಿಯನ್ನಿಟ್ಟು ಅವನನ್ನು ಪಡೆಯುವ ಯುಕ್ತಿಯನ್ನೂ ಶಕ್ತಿಯನ್ನೂ ದೊರಕಿಸಬೇಕು. ನಿಜವಾದ ನಿಷ್ಠೆಯಿಂದ ಭಜಿಪನಿಗೆ ಶಿವನು ಒಲಿಯುವನು. ನಿಲ್ಲದೆ ಹರಿಸಿದರೆ ಕಲ್ಲು ಕೂಡ ಕರಗುತ್ತದೆ. ಭಕ್ತಿಯಿಂದ ಪೂಜಿಸಿದ ದೇವರು ಒಲಿಯುವದರಲ್ಲೇನಾಶ್ಚರ್ಯ? ಸಾಧಕನಲ್ಲಿ ಭಕ್ತಿಯಂತೆ ವಿರಕ್ತಿಯೂ ಬೇಕು. ವೈರಾಗ್ಯದ ಬಲದಿಂದ ಧೀರರನೇಕರು ಈ ಭವಸಾಗರವನ್ನು ದಾಟಿರುವರು. ಎಲ್ಲ ಆಶೆಯ ಬಿಟ್ಟರೆ ಇಲ್ಲಿಯೇ ಕೈಲಾಸ. ಆಶೆಯ ಬಲೆಯಲ್ಲಿ ಶಿಲುಕಿದರೆ ನರಕವು ಇಲ್ಲಿಯೇ ನೋಡಾ. ಆದುದರಿಂದ, ಲಿಂಗದಿಚ್ಚೆಗೆ ಹರಿದು ಭಗಗೊಳದಿರು. ವಿಷಯಕ್ಕೆ ಕುದಿಯದೆ ಶಿವನಡಿಯು ಬಿಡದಿರು. ದೇವನು ನಿನಗೆ ಕೂಡಲೇ ವಶವಾಗುವನು. ಅದಕ್ಕಾಗಿ ಆಶೆಯನ್ನು ಮೆಟ್ಟಿ ಇಂದ್ರಿಯಗಳನ್ನು ಕಟ್ಟಿ ಸಮತೆಯನ್ನು ತೊಟ್ಟು ಶಿವಪದವನ್ನು ಮುಟ್ಟಪ್ಪದಯ್ಯ ಎಂದು ಸರ್ವಜ್ಞನ ಹಾರೈಕೆ.

೬. ಸ್ಮರಣ:— ಪರಮಾತ್ಮನ ನಾಮಸ್ಮರಣವು ಸಾಧನ ಮಾರ್ಗ ದಲ್ಲಿಯ ಒಂದು ಮೆಟ್ಟಲು. ಜಗತ್ತಿನಲ್ಲಿಯ ಯಾವತ್ತು ಸತ್ಪುರುಷರೆಲ್ಲರು ಅದನ್ನು ತಮ್ಮ ಅನುಯಾಯಿಗಳಿಗೆ ಹೇಳಿರುವರು. ನಾಮಸ್ಮರಣದ ಸಾಧನವಿಲ್ಲದ ಧರ್ಮವೇ ಪ್ರಪಂಚದಲ್ಲಿ ಇಲ್ಲವೆಂದರೂ ಸಲ್ಲುವುದು. ಈ ಭವಮಾಲೆಯನ್ನು ಪರಿಹರಿಸಬೇಕೆಂದರೆ ಶಿವನಾಮವನ್ನು ಸ್ಮರಿಸಲೇಬೇಕು. ಏಕಾಂತದಲ್ಲಿ ಧರ್ಭಾಸನದಲ್ಲಿ ಕುಳಿತು ದೃಷ್ಟಿಯನ್ನು ನಾಸಾಗ್ರದಲ್ಲಿಡಬೇಕು. ತಜ್ಞರಾದ ಗುರುಗಳಿಂದ ಪ್ರಾಣಾಯಾಮವನ್ನು ಕಲಿತು ಅದರೊಡನೆ ನಾಮವನ್ನು ಜಪಿಸಿ ಸೂಸುವ ಮನವನ್ನು ಘನದಲ್ಲಿರಿಸಲು ಸಾಧಕರು ಯತ್ನಿಸತಕ್ಕದ್ದು. ಮುಕ್ತಿಗೆ ಶಿವ ಎಂಬ ಎರಡಕ್ಷರಗಳೇ ಸಾಕು. ನಾಮ ಸ್ಮರಣೆಯನ್ನು ಯಾವಾಗಲೂ ಚಿತ್ತವಿಟ್ಟು ಮಾಡತಕ್ಕದ್ದು. ಬೆರಳು ಎಣಿಸುವಾಗ, ಜಿಹ್ವೆಯು ಗುಣಿಸುವಾಗ, ಮನವು ನಾಮವನ್ನುಳಿದು ಅನ್ಯವಸ್ತುವನ್ನು ನೆನೆಯಬಾರದು. ಮನಮುಟ್ಟಿ ಶಿವನ ನೆನೆವನು ಮನೆಯಲ್ಲಿದ್ದರೂ ಅಷ್ಟೇ, ಮಠದಲ್ಲಿದ್ದರೂ ಅಷ್ಟೇ. ಇಂಥ ಸಾಧಕನು ಮನೆಮಾರುಗಳನ್ನು ತೊರೆದು ವನಕ್ಕೆ ತೆರಳುವ ಕಾರಣವಿಲ್ಲ. ನಾಮಸ್ಮರಣಕ್ಕೆ ಅಯೋಗ್ಯವಾದ ಕಾಲವು ಯಾವದೂ ಇಲ್ಲ. ಎಂಜಲವು ಶೌಚವು ಸಂಜೆಯೆಂದೆನ್ನದೆ ಕುಂಜರವು ವನವ ನೆನೆವಂತೆ ಸಾಧಕನು ನಿರಂಜನವನ್ನು ನೆನೆಯತಕ್ಕದ್ದು ಆದರೂ ಕೋಳಿ ಕೂಗದ ಮುನ್ನ ಎದ್ದು ದಯಾಳು ದೇವರನ್ನು ಭಕ್ತಿಯಿಂದ ನೆನೆಯುವದು ಉತ್ತಮ. ಅಂಥವರನ್ನುದ್ಧರಿಸಲು ದೇವರು ಸದೈವ ಸಿದ್ಧನಿರುತ್ತಾನೆ ಎಂದು ಸರ್ವಜ್ಞನ ಅಭಿಪ್ರಾಯ.

೭. ಅರ್ಚನ:— ನಾಮ ಸ್ಮರಣೆಯಂತೆಯೇ ಪರಮಾತ್ಮನ ಪೂಜೆಯನ್ನು ಚಿತ್ತವಿಟ್ಟು ಮಾಡಬೇಕು. ಎತ್ತು ಗಾಣವನ್ನು ಹೊತ್ತಂತೆ ಚಿತ್ತವಿಲ್ಲದೆ ದೇಗುಲವ ಸುತ್ತಿ ಫಲ್ಲವಿಲ್ಲ. ನಿಷ್ಠೆ ನೆಲೆಗೊಳದೆ ಮಾಡಿದ ಅಷ್ಟವಿಧ ಅರ್ಚನೆಯು ನಷ್ಟವೆಂದು ತಿಳಿಯಬೇಕು. ಮನಸ್ಸಿನಲ್ಲಿ ಪಾಪವಾಸನೆಯನ್ನಿಟ್ಟು ಪೂಜ್ಯ ಸಾಹಿತ್ಯದ ಬಾಹ್ಯಾಡಂಬರವನ್ನುಳಿಸುವವನು ಹೊಲೆಯ ಕಾಣಯ್ಯ! ಕಲ್ಲುಗುಂಡಿನ ಮೇಲೆ ಮಲ್ಲಿಗೆಯ ಅರಳುಗಳನ್ನಿಟ್ಟು ನಿಲ್ಲದೆ ಹಣೆಯನ್ನು ಬಡಿವ ಕಲ್ಲುಮನುಜನಿಗೆ ಬುಗುಟಿಯ ಹೊರತು ಇನ್ನೇನೂ ಸಿಗಲಾರದು. ದೇವರು ಕಲ್ಲಿನಲ್ಲಿರದೆ ಅದರಲ್ಲಿ ಚೈತನ್ಯವನ್ನು ತುಂಬಿದ ಗುರುವಿನ ಮಂತ್ರದಲ್ಲಿರುವನು. ಇದನ್ನರಿಯದೆ ಕಲ್ಲಿನ ಪ್ರತಿಮೆಗಳಿಗೆರಗುವದು ಅನ್ಯಾಯ. ನಿಜವಾಗಿ ದೇಹವೇ ದೇವಾಲಯವು.

ಜೀವನೇ ಶಿವಲಿಂಗ. ಭಾವಪುಷ್ಪಗಳಿಂದದನ್ನು ಭಜಿಸುವವನಿಗೆ ಮುಕ್ತಿಯು ಸಂದೇಹವೇ ಬೇಡ. ಸಾಧಕನು ಆತ್ಮಲಿಂಗದ ಪೂಜೆಯನ್ನು ಒಮ್ಮನಸ್ಸಿನಿಂದ ಮಾಡಬೇಕು. ಅದನ್ನು ಮಾಡುವಾಗ ಯಾವ ಬಗೆಯ ಕಾಮನೆಯನ್ನು ಇಡಕೂಡದು. ತಾನು ಭೋಗಿಸುವ ಒಡವೆಗಳನ್ನೆಲ್ಲ ಪರಮಾತ್ಮನಿಗರ್ಪಿಸಿ ಕಿಂಕರತೆಯನ್ನು ಕೈಕೊಂಡ ಸಾಧಕನು ಯಾವಾಗಲೂ ದೇವರ ಇಚ್ಛೆಯಿಂದ ವರ್ತಿಸಬೇಕು.

ಅಧ್ಯಾಸಃ— ಈ ರೀತಿ ಮಾನಸ ಪೂಜೆಯನ್ನು ಅನನ್ಯಭಾವದಿಂದ ಮಾಡುವ ಸಾಧಕನು ಮುಂದೆ ಪರಮಾತ್ಮನ ಧ್ಯಾನದಲ್ಲಿ ತಲ್ಲೀನನಾಗ ತಕ್ಕದ್ದು. ದೇವರ ಜ್ಞಾನವಾದರೂ ಅದರಲ್ಲಿ ಅವನ ಧ್ಯಾನವು ಕೂಡಿದರೆ ಸಾಕ್ಷಾತ್ಕಾರವು ಕೂಡಲೇ ಆಗದು. ಮೌನದ ತಿಳಿದುಪ್ಪಿನಲ್ಲಿ ಧ್ಯಾನದ ಹೊಸಬಲೆಯನ್ನು ಹಚ್ಚಿದರೆ ಸ್ವಾನುಭವದ ಬೆಳಕು ಬಿದ್ದು ಸಾಧಕನ ಮರವು ಮಾಯವಾಗುವದು. ಪ್ರಾಣವನ್ನು ನೆತ್ತಿಯ ಕೊನೆಯ ವರೆಗೆತ್ತಿ ಚಿತ್ತದ ಮರ್ಮವನ್ನರಿಯಬೇಕು ಧ್ಯಾನದಲ್ಲಿ ಮನಸ್ಸು ದೇವರಲ್ಲಿ ಬೆರೆತರೆ ಪ್ರಪಂಚದಲ್ಲಿನ ಮಾತುಗಳೆಲ್ಲ ಸಾಧಕನಿಗೆ ತಿಳಿಯುತ್ತವೆ.

೯. ಸಾಕ್ಷಾತ್ಕಾರಃ— ಅನುಭಾವಿಗಳಾದ ಪ್ರೊ. ರಾನಡೆಯವರು ಸಾಕ್ಷಾತ್ಕಾರವನ್ನು ಈ ಬಗೆಯಾಗಿ ಬಣ್ಣಿಸಿರುತ್ತಾರೆ.

Mysticism denotes that attitude of mind which involves a direct immediate first hand intuition apprehension of God!

ಸಾಕ್ಷಾತ್ಕಾರವು ಒಂದು ಮನಸ್ಸಿನ ಸ್ಥಿತಿ. ಆ ಸ್ಥಿತಿಯಲ್ಲಿ ನಮ್ಮ ಅಂತರದೃಷ್ಟಿಗೆ (*intuition*) ದೇವರ ಪ್ರತ್ಯಕ್ಷವಾದ ಅರಿವು ಉಂಟಾಗುತ್ತದೆ. ಇದಾಗಬೇಕಾದರೆ ಮೇಲ್ಕಾಣಿಸಿದ ಸಾಧನಗಳಿಂದ ಮನಸ್ಸು ತಿಳಿಯಾಗಬೇಕು ಈ ಆತ್ಮಶುದ್ಧಿಯನ್ನು ಪಡೆದ ಸಾಧಕನು ಮೊದಲು ಬೆಳಕಿನ ಬಿಂದುಗಳನ್ನು ಕಾಣುವನು. ದಿವ್ಯನಾದಗಳನ್ನು ಕೇಳುವನು. ತನ್ನ ನಾಭಿಯ ಕೆಳಗಿದ್ದ ಚಕ್ರದಲ್ಲಿ ವಹ್ನಿಮಂಡಲವನ್ನು ನೋಡುವನು. ಸುಷುಮ್ನಾ ನಾಡಿಯಲ್ಲಿ ಅವನ ಜಾಗ್ರತಳಾದ ಕುಂಡಲಿನಿಯು ಅಲೆದಾಡತೊಡಗುವಳು. ಹೃದಯದಲ್ಲಿದ್ದ ಅಷ್ಟದಲ ಕಮಲದಲ್ಲಿ ಹಂಸನು ಆತ ಹೆತ್ತುವನು. ಉತ್ತುಂಗವಾದ ಮಾಣಿಕದ ಮಂಟಪದಲ್ಲಿ ಸಾಧಕನಿಗೆ ನಿತ್ಯ

ನಿರ್ಮಲವಾದ ನಿಜವು ತೋರುವದು. ಮುಂದೆ ಬಿಂದುನಾದಗಳನ್ನು ನುಂಗಿ ಇಂದು ರವಿಗಳನ್ನು ನುಂಗಿ ಸಾಧಕನು ಆತ್ಮದ ನೆಲೆಯನ್ನು ಚೈತನ್ಯಮಯವಾದ ಪರಬ್ರಹ್ಮನನ್ನು ಅರಿತುಕೊಳ್ಳುವನು ಯಾಕಂದರೆ ತನ್ನ ತಾನರಿಯದ ವಿನಃ ದೇವರನ್ನರಿಯಲು ಬರುವದಿಲ್ಲವಂತೆ. ತರುವಾಯ ದೇವರಲ್ಲಿ ನೋಟ ಕೂಟ ನುಡಿಯಾಗಿ ಸಾಧಕನಿಗೆ ಸರ್ವ ಸುಖಗಳ ಭೋಗವಾಗುವದು. ಬರಬರುತ್ತ ಮನವು ಘನದಲ್ಲಿ ಬೆರೆತು ಈ ಭವಮಾಲೆಯು ಹರಿಯಿತೆಂದು ಆತನಿಗೆ ಅನಿಸತೊಡಗುವದು. ಆತ್ಮಗಂಗೆಯಲ್ಲಿ ಮಿಂದು ಜ್ಯೋತಿಲಿಂಗವನ್ನು ಕಂಡ ಸಾಧಕನ ಪಾಪಗಳೆಲ್ಲವೂ ತೊಳೆದು ಹೋಗುವವು. ಆಕಾಶಪಥವನ್ನು ಮೀರಿ ಏಳುವ ಸ್ತುವ ತಿಳಿದ ಯೋಗಿಯು ಅದರೊಡನೆ ಸಮರಸನಾಗುತ್ತಾನೆ. ನಾನಾ ಭ್ರಮೆಗಳನ್ನತಿಗಳೆದು ನಾನು ನೀನೆಂಬ ಭೇದವನ್ನು ಬಿಟ್ಟು ಸಾಧಕನು ಲಿಂಗೈಕ್ಯನಾಗುವನು. ಇದೇ ಸರ್ವಜ್ಞನು ತೋರಿದ ಅನುಭಾವದ ಸಾಕ್ಷಾತ್ಕಾರದ ಕೊನೆಯ ಮೆಟ್ಟಲು.

## ೬. ಸಿದ್ಧಸ್ಥಲ.

೧. ಹಿಂದಿನಿಂದ ಮುಂದೆ:— ಕಳೆದ ಅಧ್ಯಾಯಗಳಲ್ಲಿ ಕಾಣಿಸಿದ ಸೋಪಾನವನ್ನು ಹತ್ತಿ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದ ಅನುಭಾವಿಗಳೇ ಸಿದ್ಧರು. ಇವರು ಜಗದಿ ಧ್ಯಾನದಲ್ಲಿ ಅರಳಿದ ಕಂಪಿನಲರುಗಳು. ಪ್ರತಿಯೊಂದು ಹೂವಿನ ಇಂಪು ಕಂಪುಗಳು ಬೇರೆ ಇರುವಂತೆ ಈ ಸಿದ್ಧಪುರುಷರ ಗುಣಕರ್ಮಗಳು ಭಿನ್ನವಾದವುಗಳು. ಹೊವುಗಳು ಅರಳುವದು ಕಂಪನ್ನು ಬೀರುವದಕ್ಕಾಗಿ, ಸುಖಗಳನ್ನು ಸುರಿಸುವದಕ್ಕಾಗಿ. ಅದರಂತೆಯೇ ಈ ಮಾನವ ಕುಸುಮಗಳು ದೇವರ ದಿವ್ಯಸ್ಪರ್ಶದಿಂದ ವಿಕಸಿತವಾಗಿ ತಮ್ಮ ಮಕರಂದ ಸೌರಭಗಳಿಂದ ಜನರ ಮನಸ್ಸನ್ನು ತಣಿಸುತ್ತಿವೆ. ಅವುಗಳನ್ನು ಉನ್ನತ ಪದವಿಗೆ ಏರಿಸುತ್ತಿವೆ. ಆದರೆ ಲೋಕೋದ್ಧಾರವನ್ನು ಮಾಡುವ ಅವರ ಕಾರ್ಯಪದ್ಧತಿಯು ಮಾತ್ರ ಅವರವರ ಪ್ರಕೃತಿಯನ್ನವಲಂಬಿಸಿರುವ ಮೂಲಕ ಅದು ಬೇರೆಬೇರೆಯಾಗಿರುವದು ತೀರ ಸಹಜ. ಆದರೂ ಕೆಳಗೆ ಕಾಣಿಸಿದ ಗುಣಗಳು ಎಲ್ಲರಲ್ಲೂ ಸಮಾನವಾದವುಗಳೆಂದು ತಿಳಿಯಲು ಅಡ್ಡಿ ಇಲ್ಲ.

೨. ಸಿದ್ಧರ ಗುಣಗಳು:— ಸದ್ಗುರುವಿನ ಮುಖದಿಂದ ತತ್ವಮಸಿಯನ್ನರಿತು ಆವರ ಅನುಭವವನ್ನು ಪಡೆದ ಜ್ಞಾನಿಗೆ ಪುನರ್ಜನ್ಮವಿಲ್ಲ

ಆತನಿಗೆ ಯಾವ ಬಗೆಯ ಸಂದೇಹವು ಸೋಂಕುವದಿಲ್ಲ. ಆತ್ಮನ ನಿಜ ವನರಿದಾತನಿಗೆ ಏತರ ಚಿಂತೆ? ಜ್ಞಾನವೆಂಬ ಅಂಜನವು ಇರುತ್ತಿರಲು ಅವ ನಿಗೂ ಯಾತರ ಭಯ? ಅನುಭಾವಿಗೆ ಜಾತಿಮಿತ್ತಗಳಿಲ್ಲ. ಮೂಲತತ್ತ್ವವನ್ನ ರಿತು ಲೀಲೆಯಿಂದ ಆಡುತ್ತಿರುವ ಶರಣನು ಸುಂದರವಾದ ಅಂಗನೆಯ ರನ್ನು ಎಲುವಿನ ಹಂದರವೆಂದು ಕಾಣುತ್ತಾನೆ. ಅನುಭಾವಿಯು ಸಂಸಾರ ದಲ್ಲಿ ಆಸಕ್ತನಾಗಿರುವದಿಲ್ಲ. ತರಣಿಗೆ ತಿಮಿರದ ಆವರಣವು ಅಂಟಿಕೊ ಳ್ಳುವದೇ? ನೀರೊಳು ಹುಟ್ಟಿದ ಮುತ್ತು ಮತ್ತೆ ನೀರನ್ನಪ್ಪುವುದೇ? ತಿಳಿ ಯಾಗಿ ಕಾಸಿದ ತುಪ್ಪ ಮರಳಿ ಹಾಲಾಗಬಹುದೇ? ಅದರಂತೆಯೇ ಕಳೆ ಬೆಳಗನರಿದ ಶಿವಯೋಗಿಯು ಮತ್ತೆ ಸಂಸಾರದಲ್ಲಿ ಸಿಲಕುವನೇ? ಇಲ್ಲ. ಉನ್ನತವಾದ ಜಗವನ್ನೇರಿರುವವನನ್ನು ಕುನ್ನಿಯು ಕಚ್ಚದಂತೆ ತನ್ನ ತಾನ ರಿದಂಗೆ ಮಾಯೆಯು ಮುಸುಕಲರಿಯಳು. ಭಾನುವು ಮೋಡದಲ್ಲಿ ಹೊಳೆ ವಂತೆ ಜ್ಞಾನಿಯು ಸಂಸಾರದಲ್ಲಿ ಮೆರೆಯುವನು.

ಮೇಲಾಗಿ ಸತ್ಯವನ್ನರಿದ ಜ್ಞಾನಿಯು ಸತ್ತಹಾಗಿರುತ್ತಾನೆ. ಎಲ್ಲ ವನ್ನು ಬಲ್ಲರೂ ಆತನು ಬಲ್ಲೆನೆಂದೆನ್ನುವದಿಲ್ಲ. ಆತನು ಕನ್ನಡಿಯಂತಿರು ವನು ಅನುಭಾವಿಗೆ ಲೋಕದ ಗುದ್ದಾಟವಿಲ್ಲ. ಯಾಕಂದರೆ ಅದ್ವೈತ ನಾದ ಮೇಲೆ ಯುದ್ಧವನ್ನಾರೊಡನೆ ಮಾಡುವುದು? ತಾನಾಗಿ ತನ್ನ ನರಿದಿಪ್ಪ ಜ್ಞಾನಿಯು ದೊರಕಿಸಿದ್ದನ್ನು ಉಣ್ಣುವನು. ದೊರಕಿಸಿದ್ದನ್ನು ಉಡುವನು. ದೊರಕಿದಲ್ಲಿ ಶಯನಗೈಯ್ಯುವನು. ಜಗವೆಲ್ಲ ತಾನೇ ಅದ್ದರಿಂದ ಅವನು ತನ್ನಂತೆ ಪರರನ್ನು ಕಾಣುವನು. ಯಾಕಂದರೆ ತನ್ನ ತಾನರಿದಂಗೆ ಭಿನ್ನ ಭಾವನೆಯಿಲ್ಲ. ತನ್ನವರಿಲ್ಲ, ಪರರಿಲ್ಲ. ತ್ರೈಭುವನವೇ ಆತನೊಳಗಿ ಹುದು. ಕರಗಿಸಿದ ಚಂದನವು ಪರಿಮಳವನ್ನೇ ಬಿಡುವಂತೆ ಇಂಥ ಮಹಾತ್ಮನು ನೊಂದರೂ ಪರೋಪಕಾರವನ್ನೇ ಮಾಡುತ್ತಾನೆ.

೨. ಸಿದ್ಧನ ಕರ್ಮಗಳು:—ಸಿದ್ಧನು ಮಾಡುವ ಕರ್ಮಗಳ ವಿಷ ಯವಾಗಿ ಸರ್ವಜ್ಞನು ವಿವರವಾಗಿ ಹೇಳಿಲ್ಲ. ಆದರೂ ಸರ್ವಜ್ಞನ ಆಚ ರಣೆಯು ಅವನು ಈ ವಿಷಯವಾಗಿದ್ದ ಮತವನ್ನರಿತುಕೊಳ್ಳುವ ಬಲ ವಾದ ಸಾಧನವಿದೆ. ಸರ್ವಜ್ಞನು ಆಚರಿಸಿದುದು, ಕರ್ಮಯೋಗವನ್ನು ಮಾಡಿದುದು, ಜನರ ಉದ್ಧಾರಕ್ಕಾಗಿ ಆದ್ದರಿಂದ ಅನಾಸಕ್ತ ಬುದ್ಧಿ ಯಿಂದ ಸಿದ್ಧ ಪುರುಷರು ಜನ ಸೇವೆಯನ್ನು ಕೈಕೊಳ್ಳಬೇಕೆಂದು ಸರ್ವ ಜ್ಞನ ಅಭಿಪ್ರಾಯವಿರಬಹುದೆಂದು ಊಹಿಸಲು ಪ್ರತ್ಯವಾಯವಿಲ್ಲ.

## ೭. ಉಪಸಂಹಾರ.

೧. ಹಿಂದಿನಿಂದ ಮುಂದೆ:—ಈ ವೇರೆಗೆ ಸರ್ವಜ್ಞನ ದಿವ್ಯಸಂದೇಶವನ್ನು ಅವನ ಸಿಡಿಲಿನ ನೀರು ಬೆರಸಿಹ ಸರಸ ಮಾತುಗಳಲ್ಲಿಯೇ ಯಥಾಶಕ್ತಿ ಸಾರಿದ್ದಾಯಿತು. ನಾವು ಇನ್ನೂ ಭೇದಗಳನ್ನು ಬಿಟ್ಟಿಲ್ಲ. ನಮ್ಮಲ್ಲಿಯ ಒಳಜಗಳು ನಮ್ಮ ಬಲವನ್ನು ಕುಗ್ಗಿಸುತ್ತಿದೆ. ಅಸ್ಪೃಶ್ಯತೆಯಿಂದ ಅನೇಕ ಸಮಸ್ಯಗಳು ದೆವ್ವಿನಂತೆ ನಮ್ಮೆದೆಯ ಮೇಲೆ ಕುಳಿತಿವೆ. ಇಂಥ ಸಮಯದಲ್ಲಿ ನಮ್ಮ ಸರ್ವಜ್ಞನ ಸಂದೇಶವು ಜನರಲ್ಲಿ ನವಚೈತನ್ಯವನ್ನು ಹುಟ್ಟಿಸಲೆಂದು ಇಲ್ಲಿದರ ವಿಮರ್ಶಾತ್ಮಕ ವಿವರವನ್ನು ಕೊಡುವ ಗೊಡವೆಗೆ ಹೋಗಿಲ್ಲ. ಆಧುನಿಕ ಅನುಭಾವ ವಾದದಲ್ಲಿ ಸರ್ವಜ್ಞನಿಗೂ ಆತನ ಉಪದೇಶಕ್ಕೂ ಇದ್ದ ಸ್ಥಾನವನ್ನು ಮುಂದೆ ಬರೆಯಲಿರುವ ಕನ್ನಡಿಗರ ಅನುಭಾವವೆಂಬ ಗ್ರಂಥದಲ್ಲಿ ಕಾಣಿಸಬಹುದು. ಅಲ್ಲಿಯವರೆಗೆ ನನ್ನ ತರುಣ ಬಂಧುಗಳು ಈ ಅಲ್ಪ ಸೇವೆಯನ್ನೇ ಸ್ವೀಕರಿಸುವಿರೆಂದು ನಂಬಿಗೆ. ಇನ್ನು ಅನುಭಾವದ ಮಹತ್ವವನ್ನು ಕುರಿತು ಸ್ವಲ್ಪ ವಿಚಾರಿಸಿ ಈ ಉಪಸಂಹಾರವನ್ನು ಮುಗಿಸುತ್ತೇನೆ.

೨. ದೇವರ ಬೆಂಬಲ:—ದೇವರೇ ಜಗತ್ತಿನ ಜೀವಾಳವಿದ್ದ ಕಾರಣ ಆತನ ಬೆಂಬಲವಿಲ್ಲದೆ ಯಾವ ಮಹತ್ಕಾರ್ಯವೂ ಕೈಗೂಡುವದು ಸಾಧ್ಯವಿಲ್ಲ. ಇದರ ಅರಿವು ಮರವು ಮುಸುಕಿದ ಮಾನವನಿಗೆ ಇನ್ನೂ ಸಾಕಷ್ಟು ಆಗಿಲ್ಲ. ತನ್ನ ಕ್ಷುದ್ರ ಸಾಮರ್ಥ್ಯದ ಬಗ್ಗೆ ಅವನ ಅಭಿಮಾನವು ಮೇರೆ ಮೀರಿದೆ. ಇತ್ತೀಚೆಗೆ ಮಾನವನು ತನ್ನ ಬುದ್ಧಿಬಲದಿಂದ ಹಲವು ಶೋಧನೆಗಳನ್ನು ಮಾಡಿ ಪ್ರಕೃತಿದೇವಿಯನ್ನು ಕೆಲಮಟ್ಟಿಗೆ ಅಧೀನದಲ್ಲಿಟ್ಟುಕೊಂಡಿರುವನು. ಆದರೆ ಅದಕ್ಕಾಗಿ ಅವನು ಕೊಚ್ಚುವ ಜಂಭವನ್ನು ಕಂಡರೆ ಅವನ ತಿಳಿಗೇಡಿತನಕ್ಕಾಗಿ ಕನಿಕರ ಹುಟ್ಟುತಿದೆ. ಪ್ರಕೃತಿ ಮಾತೆಯನ್ನು ಕೈವಶಮಾಡಿಕೊಂಡಿರುವುದು. ಆಕೆಯ ನಿಯಮಗಳನ್ನು ಪಾಲಿಸದಿದ್ದರೆ ಇಲ್ಲವೇ ಆಕೆಯ ಕಟ್ಟಳೆಗಳನ್ನು ಅಲ್ಲಗಳೆದರೆ ಮಾನವನ ಅವಸ್ಥೆ ಏನಾಗುವದು? ಅವನು ಕ್ಷಣಮಾತ್ರವಾದರೂ ಬಾಳಲರಿಯನೇ? ಹೀಗಿರಲು ಜಂಭಕ್ಕವಕಾಶವುಂಟೇ? ಮೇಲಾಗಿ ಈತನ ಶಕ್ತಿಯಾದ ಪ್ರಕೃತಿ ಮಾತೆಯ ಸಾಮರ್ಥ್ಯದ ನೆಲೆಯನ್ನು ಕಂಡವರಾರು? ಆದುದರಿಂದ ನಾವು ಯತ್ನಿಸುವುದು ಆಕೆಯ ನಿಯಮಗಳನ್ನರಿಯಲು ವಿನೀತನಾದ ಶಾಸ್ತ್ರಜ್ಞನು ಪ್ರಕೃತಿಯ ಒಡಲಲ್ಲಿ ಬೆರೆತು ಹೊಸಕಟ್ಟಳೆಗಳನ್ನು ಹುಡುಕಿ ಅವುಗ

ಳನ್ನು ಜನಹಿತಕ್ಕಾಗಿ ಉಪಯೋಗಿಸುವಂತೆ ಸಮಾಜ ಸೇವಕನು, ಅಹಂ ಕಾರವನ್ನು ತೊರೆದು ಈ ಆದಿ ಶಕ್ತಿಯ ಒಡೆಯನನ್ನೇ ಒಲಿಸಿಕೊಂಡು. ಅವನ ಬೆಂಬಲದಿಂದ ಜನರಿಗೇ ಆನಂದ ಮಂದಿರಕ್ಕೆ ಒಯ್ಯಲು ಹವ ಣಿಸಬೇಕಲ್ಲವೇ ?

೪. ಪರಮಾತ್ಮರ ಕಾರ್ಯ:— ಪ್ರಪಂಚದಲ್ಲಿ ಈ ವರೆಗೆ ಅವತ ರಿಸಿದ ಮಹಾತ್ಮರೆಲ್ಲರು ಇದನ್ನಯೇ ಮಾಡಿದರು. ತಮ್ಮ ಉಜ್ವಲವಾದ ತಪಸ್ಸಿನಿಂದ ದೇವ ದೇವನ ಪ್ರಸಾದವನ್ನು ಪಡೆದು, ತರುವಾಯ ಅವರು ತಮ್ಮ ಜೀವನ ಕಾರ್ಯಕ್ಕೆ ಕೈಹಾಕಿದರು. ಆದ್ದರಿಂದಲೇ ಅವರು ಜನ ಸಾಮಾನ್ಯರಿಗೇ ಅದ್ಭುತವೆನಿಸುವ ಕೆಲಸಗಳನ್ನು ಸಹಜ ರೀತಿಯಿಂದ ಜರುಗಿಸಲು ಸಮರ್ಥರಾದರು. ಸಮಾಜದ ಉದ್ಧಾರವೆಂದರೆ ಅದೇನು ಸಾಮಾನ್ಯ ಕೆಲಸವಲ್ಲ. ಅದೊಂದು ಪ್ರಚಂಡವಾದ ಕಾರ್ಯ. ಜೊಳ್ಳು ಮನುಜರು ಮಾಡುವ ಪೊಳ್ಳು ಕಾರ್ಯವದಲ್ಲ. ಅದಕ್ಕೆ ಬೇಕಾದುದು ಅದ್ಭುತವಾದ ಶಕ್ತಿ. ಆ ಶಕ್ತಿಯು ನೆಲೆವೀಡಾದ ದೇವರನ್ನು ಕಾಣದೆ. ಆತನಿಂದ ಸಾಮರ್ಥ್ಯವನ್ನು ಪಡೆಯದೆ ಅದು ಹೇಗಾಗಬೇಕು ? ಕೆಲ ಕಾಲ ಕೆಲಸ ಮಾಡಿ ಹತಾಶರಾದ ನಿರುತ್ಸಾಹಿಗಳಾದ ಈಗಿನ ಹಲವು ಸಮಾಜ ಸೇವಕರನ್ನು ಕಂಡರೆ ಈ ಮಾತಿನ ಸತ್ಯತೆಯ ಬಗ್ಗೆ ಸಂದೇಹ ಉಳಿಯಲಿಕ್ಕಿಲ್ಲ. ಅದಕ್ಕಾಗಿ ನಮಗೆ ಬೇಕಾದವರು ಸರ್ವಜ್ಞನಂಥ ಅನು ಭಾವಿಗಳಾದ ಕರ್ಮಯೋಗಿಗಳು !

೪. ಕೊನೆಯ ಮಾತು:—ಇನ್ನು ಕೊನೆಗೆ ಶ್ರೀ ಅರವಿಂದರು. ಈ ವಿಷಯವಾಗಿ ಪಡುವ ಅಭಿಪ್ರಾಯವನ್ನು ಕೇಳಿ ವಿವರಿಸುವಾ. ಅವರು ತಮ್ಮ ದಿವ್ಯವಾಣಿಯಿಂದ ಹೇಳುವದೇನಂದರೇ—

Is it God that is born in you? Have you realized that you are thereby an instrument of God? That your bodies are not your own? If you have realized that, then you are true nationalist; then alone will you be able to restore this great nation; Darkness will have you runod; disappointments will cross your path; slander will pur–sue you from behind; but you are to depend on yourself and yourself alone.

ನಮ್ಮೆದೆಯಲ್ಲಿ ಪರಮಾತ್ಮನು ಅವತರಿಸಿರುವನು. ನಿಮ್ಮ ಶರೀರಗಳ ಒಡೆಯರು ನೀವಲ್ಲ. ಅವು ದೇವರ ಕೈಯಲ್ಲಿಯ ಆಯುಧಗಳು ಎಂಬ ದನ್ನು ನೀವು ಅರಿತಿರುವಿರಾ? ಹಾಗಾದರೇನೇ ನೀವು ನಿಜವಾದ ರಾಷ್ಟ್ರ ಪುರುಷರು. ನಿಮ್ಮಿಂದ ಈ ವಿಶಾಲವಾದ ರಾಷ್ಟ್ರದ ಉದ್ಧಾರವು ಆಗು ವುದು. ಕಗ್ಗತ್ತಲೆಯು ಎಲ್ಲೆಡೆಯಿಂದ ನಿಮ್ಮನ್ನು ಮುಸುಕಬಹುದು. ನಿರಾ ಶೆಯು ದಾರಿಯಲ್ಲಿಯೇ ನಿಮ್ಮನ್ನಡ್ಡಗಟ್ಟಬಹುದು ನಿಂದೆಯು ನಿಮ್ಮನ್ನು ಹಿಂದಿನಿಂದ ಹಿಂಬಾಲಿಸಬಹುದು. ಆದರೆ ನೀವು ನಿಮ್ಮನ್ನುಳಿದ ಯಾರನ್ನೂ ಆಶ್ರಯಿಸಕೂಡದು!

## ಪ್ರಸಾದ.

ವಾ. ಷ. ಅನ್ನವೆಮ್ಮಯ ಜನ್ಮದಾಶ್ರಯವು ನಿಜವೆಂದು
ನನ್ನಿಯಿಂ ಭಕ್ಷಿಸುವ ಲೋಗರ್ಗೆ ಸುಖಮುಂಟೆ
ಅನ್ನಮದು ಪ್ರಸಾದ ಮೆಂದರಿದು ಸೇವಿಸಿದೊಡಾ ಸೌಖ್ಯ ಕೆಣೆ
ಯಿಸುರ್ಗದೇ।

ಬನ್ನಬಡುವೀ ಜನ್ಮ ಸುಖಿಸಲ್ಕೆ ಶಿವಯೋಗಿ
ಸನ್ನುತ ಪ್ರಸನ್ನತೆಯ ನೆರೆ ನೀಡಿ ಸಂತತದೊ
ಳನ್ನಮಯ ಪ್ರಾಣವನ್ನಾತ್ಮಮಯ ಲಿಂಗಮಂ ಮಾಳ್ಪೆಗೆನ್ನೀ
ಜನ್ಮದೋಳ್॥

ಪ್ರಸಾದವು ಅಷ್ಟಾವರಣಗಳಲ್ಲಿ ಐದನೆಯದು. ಪ್ರಸಾದವೆಂಬ ದೇನು? ಪ್ರಸಾದವೆಂದರೆ ನಾವು ಪ್ರತಿನಿತ್ಯ ತೆಗೆದುಕೊಳ್ಳುವ ಪವಿತ್ರ ವಾದ ಸಾತ್ವಿಕಾಹಾರವು. ಅಂತರಂಗದಲ್ಲಿ ಪ್ರಸಾದವು ಪ್ರಸನ್ನ ಚಿತ್ತ ವೆನಿಸುತ್ತದೆ. ಹಸಿದವರ ಮುಖವು ಬಾಡಿದಂತಾಗಿರುತ್ತದೆ. ಆದರೆ ಉಂಡವರ ಮುಖಮುದ್ರೆಯು ಪ್ರಸನ್ನ ಕಳೆಯಿಂದ ತುಂಬಿರುತ್ತದೆ. ಆದುದ ರಿಂದ ಆಹಾರಕ್ಕೂ ಪ್ರಸನ್ನ ಮುಖಮುದ್ರೆಗೂ ನಿಕಟ ಸಂಬಂಧವಿರುತ್ತದೆಂ ದಂತಾಯಿತು. 'ಅನ್ನಮಯ ಪ್ರಾಣಂ' ಎಂದು ಹೇಳಿರುವದರಿಂದ ಆಹಾ ರವು ನಮ್ಮ ದೇಹದ ರಕ್ಷಣೆ, ಧಾರಣೆ, ಪೋಷಣೆಗಳಿಗೆ ಅವಶ್ಯಕವಾಗಿ ಬೇಕೆಂದು ಬೇರೆ ಹೇಳಬೇಕಾಗಿಲ್ಲ. ಆಹಾರದಿಂದಲೇ ರಕ್ತ; ಆಹಾರ

ದಿಂದಲೆ ವೀರ್ಯ; ಆಹಾರದಿಂದಲೇ ಮನಸ್ಸು; ಆಹಾರದಿಂದಲೇ ಸಪ್ತ ಧಾತುಗಳು ಸಮುದ್ಭವಿಸುವದರಿಂದ ಆಹಾರವು ಅತ್ಯಂತ ಮಹತ್ವವಾದ ಪದಾರ್ಥವಾಗಿದೆ. ವೀರಶೈವರು ಆಹಾರಕ್ಕೂ ಆಹಾರ ಸೇವಿಸುವ ಕ್ರಮಕ್ಕೂ ಕೊಟ್ಟಷ್ಟು ಪ್ರಾಮುಖ್ಯತೆಯನ್ನು ಬೇರೆ ಯಾವ ಧರ್ಮದವರೂ ಕೊಟ್ಟಿಲ್ಲವೆಂದರೂ ಅಡ್ಡಿಯಿಲ್ಲ. ವೀರಶೈವರು ಪರಸ್ಪರ ಪ್ರಶ್ನೆ ಮಾಡುವಾಗ 'ನಿಮ್ಮ ಊಟವಾಯಿತೇ? ನಿಮ್ಮ ಭೋಜನ ತೀರಿತೇ' ಎಂದು ಕೇಳಲಿಕ್ಕೆ ಸಹ ಹಿಂಜರಿಯುತ್ತಾರೆ. ನಿಮ್ಮ ಪ್ರಸಾದವು ಪೂರ್ತಿಯಾಯಿತೇ? ಎಂದು ಸವಿನಯ ಸಯುಕ್ತಿಕವಾದ ಪ್ರಶ್ನೆ ಮಾಡುವರು. ಅನ್ನ, ಕೂಳು, ಆಹಾರ ಈ ಶಬ್ದಗಳು ಗ್ರಾಮ್ಯ ಅಜ್ಞಜನರ ಬಾಯಿಯಿಂದ ಬರುವವೇ ಹೊರತು ನಿಜವಾದ ವೀರಶೈವರು ಪ್ರಸಾದವೆನ್ನದ ಹೊರತು ಮಾತಿಲ್ಲ. ನಮ್ಮ ಜೀವನ ಧಾರಣೆಗೆ ಪ್ರಸಾದವೇ ಮುಖ್ಯವಾಗಿರುವದರಿಂದ ನಾವು ಎಂಥ ಪ್ರಸಾದವನ್ನು ಸ್ವೀಕರಿಸಬೇಕು? ಹೇಗೆ ತೆಗೆದುಕೊಳ್ಳಬೇಕು? ಎಷ್ಟು ಪ್ರಮಾಣದಿಂದ ಸ್ವೀಕರಿಸಬೇಕು? ಯಾರ ಕಡೆಯಿಂದ ಅಡಿಗೆ ಮಾಡಿಸಿಕೊಳ್ಳಬೇಕು? ಯಾರ ಕಡೆಯಿಂದ ಎಡೆ ಮಾಡಿಸಿಕೊಳ್ಳಬೇಕು? ಈ ಪ್ರಶ್ನೆಗಳು ಅತ್ಯಂತ ಮಹತ್ವವಾದವುಗಳು. ವೀರಶೈವರು ಪ್ರಾರಂಭ ದಿಂದಲೂ ಶಾಕಾಹಾರಿಗಳೆಂಬದನ್ನು ಸರ್ವಥಾ ಮರೆಯಲಾಗದು. ಅವರು ನಾಲಿಗೆಯ ರುಚಿ ದುರಾಶೆಗಳಿಗಾಗಿ ಪ್ರಸಾದವನ್ನು ಸೇವಿಸುವದಿಲ್ಲ. ಏನೇ ದೊರೆಯಲಿ, ಎಷ್ಟೇ ದೊರೆಯಲಿ, ಅದು ಪರಶಿವನ ಮಹಾ ಪ್ರಸಾದವೆಂದರಿದು ಕೇವಲ ಕ್ಷುಧಾ ಶಾಂತಿಗಾಗಿ ಬಹು ಭಕ್ತಿಯಿಂದ ಅದನ್ನು ಸೇವಿಸುವರು. ಪ್ರಸಾದಿಗೆ ಒಣ ರೊಟ್ಟಿ ಚಟ್ಣಿಯು ಅಷ್ಟೇ; ಪಂಚ ಪಕ್ವಾನ್ನಗಳೂ ಅಷ್ಟೇ. ಇದು ರುಚಿ ಅದು ಅರುಚಿಯೆಂದು ಪ್ರಸಾದಿಯು ತಿಳಿಯಲಾಗದು. ನನಗೆ ಇದು ಬೇಕು, ಇನ್ನೊಂದು ಬೇಕು, ಮತ್ತೊಂದು ಬೇಕು, ಮಗದೊಂದು ಬೇಕೆಂದು ಆಶೆ ಮಾಡು ವವನು ಪ್ರಸಾದಿಯಲ್ಲ. ಇಂಥಾದ್ದೇ ಬೇಕೆಂದು ಜೋತುಕೊಂಡು ಕುಳಿತವರು ಆ ವಸ್ತುವು ಪ್ರಾಪ್ತವಾಗದಿದ್ದಾಗ ವಿಷಾದಪಡಬೇಕಾಗುತ್ತದೆ. ಆದರೆ ಯಾವ ಪದಾರ್ಥದ ಮೇಲೆಯೂ ಆಶೆಯಿಲ್ಲದವರು ಯಾವದೇ ಪದಾರ್ಥವು ಎಷ್ಟೇ ದೊರೆತರೂ ಅಷ್ಟರಿಂದಲೇ ತೃಪ್ತಿಬಡುತ್ತಾರೆ. ಒಬ್ಬ ಶಿವಶರಣರು ಒಂದು ಬಟ್ಟಲ ಹಣಜಿಯ ರಸವನ್ನು ಹಿಂಡಿ ಅದೇ ಮಹಾಪ್ರಸಾದವೆಂದು ಸ್ವೀಕರಿಸುತ್ತಿದ್ದರಂತೆ. ಈಗ್ಯೂ ಕೆಲವು ಮಹಾ ತ್ಮರು ಗುಹೆಗಳಲ್ಲಿ ವಾಸ ಮಾಡಿಕೊಂಡು ಕಾಡಸೊಪ್ಪನ್ನೇ ಜೇಯಿಸಿ

ಅದನ್ನೇ ಮಹಾಪ್ರಸಾದವೆಂದು ಸೇವಿಸುತ್ತ ಕಾಲಹರಣ ಮಾಡುತ್ತಿರುವರು. ಆದಾಗ್ಯೂ ಅವರಿಗೆ ಅಸಮಾಧಾನವೆಂಬದು ಕನಸು ಮನಸ್ಸಿನಲ್ಲಿ ಗೊತ್ತಿರುವದಿಲ್ಲ. ಇದರ ಮೇಲಿಂದ ಶಿರಿವಂತರಾದವರು ತಿಂದುಂಡು ಸುಖಿಸಬಾರದೆಂತಲ್ಲ. ಆದರೆ ಶ್ರೀಮಂತರಿಗೆ ಪ್ರಸಂಗ ವಶಾತ್ ಬಡತನ ಪ್ರಾಪ್ತವಾದಾಗ ಶಿರಿವಂತಿಗೆಯ ಊಟ ದೊರೆಯಲಿಲ್ಲೆಂದು ಅಸಮಾಧಾನಪಡದೆ ಬಡತನದ ರೊಟ್ಟಿ ಚಟ್ಣಿಯನ್ನೇ ಪಂಚಾಮೃತವೆಂದು ತಿಳಿದು ಸೇವಿಸಬೇಕು. ಅಂದರೇನೇ ಅವರು ನಿಜವಾದ ಪ್ರಸಾದಿಗಳು. ಮಡಿಹುಡಿ ಸ್ನಾನವಿಲ್ಲದೆ ಸಿದ್ಧಗೊಳಿಸಿದ ಆಹಾರವು ಪ್ರಸಾದವೆನಿಸಲಾರದು. ವೀರಶೈವರಲ್ಲದವರು ಶುದ್ಧ ಮಡಿಯಿಂದ ಮಾಡಿ ಕೊಟ್ಟ ಆಹಾರವೂ ಪ್ರಸಾದವಾಗಲರಿಯದು. ಭವಿಯು ಮುಟ್ಟಿದ ಅದೇಕೆ ನೋಡಿದಂಥ ಆಹಾರವು ಸಹ ಪ್ರಸಾದವೆಂದೆಣಿಸಲ್ಪಡುವದಿಲ್ಲ. ಅಪಥ್ಯಕರವಾದ, ನಿಷಿದ್ಧವಾದ, ತಂಗುಳವಾದ, ಮಲಿನವಾದ ಆಹಾರ ಪದಾರ್ಥಗಳು ಪ್ರಸಾದವೆನಿಸಲಾರವು. ಹೆಚ್ಚೆಚ್ಚಿಗೆ ಇಕ್ಕಿಸಿಕೊಂಡು ಹೊಟ್ಟೆಯೊಡೆಯುವಂತೆ ತಿಂದು ಕಕ್ಕಸಬಟ್ಟರೆ ಅಂಥ ಆಹಾರವೂ ಶುದ್ಧವಿದ್ದರೂ ಪ್ರಸಾದವೆನಿಸದು. ಹಾಗೆ ತಿನ್ನುವ ಕೂಳಬಕ್ಕನೂ ಪ್ರಸಾದಿಯಲ್ಲ. ದುರ್ಗುಣಿಯೂ ದುರಾಚಾರಿಯೂ ಆದ ಮನುಷ್ಯನು ನೋಡುವ ಮತ್ತು ನೀಡುವ ಆಹಾರವೂ ಪ್ರಸಾದವಲ್ಲ. "ಕುಕ್ಷೌ ತಿಷ್ಠತಿ ಯಸ್ಯಾನ್ನಂ ತಸ್ಯ ಭಾವೋಪಜಾಯತೇ" ಎಂಬ ಉಕ್ತಿಯಿರುವದರಿಂದ ದುಷ್ಟನ ಮನೆಯ ಆಹಾರವೂ ಪ್ರಸಾದವೆನಿಸುವದಿಲ್ಲ. ದುರ್ವಾಸ ಮಹರ್ಷಿಗಳು ದುರ್ಯೋಧನನ ಮನೆಯ ಆಹಾರವನ್ನು ಒಂದೇ ದಿವಸ ಭುಂಜಿಸಿದರೂ ಕೂಡ ನಿರಪರಾಧಿಗಳಾದ ಪಾಂಡವರ ವಿಷಯದಲ್ಲಿ ಅವರಿಗೆ ದುರ್ಬುದ್ಧಿ ಹುಟ್ಟಲಿಲ್ಲವೇ ? ಆದಕಾರಣ ಸದಾಚಾರಿಗಳಾದ ವೀರಶೈವರೇ ಪರಿಶುದ್ಧ ಮಡಿಯಿಂದ ಸಿದ್ಧಗೊಳಿಸಿದ ನವೀನ ಆಹಾರವನ್ನು ಸದಾಚಾರಿಗಳೂ ಮಡಿವಂತರೂ ಆದವರಿಂದ ಎಡೆ ಮಾಡಿಸಿಕೊಂಡು ಬಹು ಪ್ರೀತಿಯಿಂದ ಶಿವಸ್ಮರಣೆ ಮಾಡುತ್ತ ಸೇವಿಸುವವರೇ ನಿಜವಾದ ಪ್ರಸಾದಿಗಳು.

ಹಸಿವೆಯಿಂದ ಬಳಲುವ ಮನುಷ್ಯನು ಆಹಾರ ಸೇವನೆಯಿಂದ ಸಂತೋಷಬಡುವಂತೆ ನಿಜವಾದ ಪ್ರಸಾದಿಯು ಬರೇ ಆಹಾರಕ್ಕಾಗಿ ಹಸಿಯದೆ ಮಹಾನುಭಾವರ ಪ್ರಸಾದ ವಾಣಿಗೆ ಹಸಿದು ಅವರ ವಚನ ಪ್ರಸಾದವನುಂಡು ತಣಿದು ಹರ್ಷಗೊಳ್ಳುವನು. ಈ ತರಹದ ಪ್ರಸಾದಿ

ಯಾಗಬೇಕೆಂದೇ ಮಿತಾಹಾರವನ್ನು ಪೂಜ್ಯಭಾವನೆಯಿಂದ ಸೇವಿಸಬೇಕಾಗುತ್ತದೆ. ನಾಲಿಗೆಗೆ ನಾವು ಬೇಕಾದ ಹಾಗೆ ಅವಕಾಶ ಕೊಟ್ಟರೆ ಇಂದ್ರಿಯುಗಳ ಹಾವಳಿಗೆ ಪರಿವೆಯೇ ಇಲ್ಲದಂತಾಗಿ ಮಹಾನುಭಾವರ ಗೋಷ್ಠಿಯು ಅಮೃತ ತುಲ್ಯವಾಗದೆ ವಿಷಕಾರಕವಾಗಿ ಪರಿಣಮಿಸುವದು. ಇದರ ರಹಸ್ಯವನ್ನರಿಯದೆ ಎಷ್ಟೋ ಜನಗಳು ತಾಬಂಡಿಯಲ್ಲಿ ಸ್ವಲ್ಪು ಬಿಡದೆ ಸಂಪೂರ್ಣವಾಗಿ ನೆಕ್ಕಿಬಿಡುವವರೇ ಕೇವಲ ಪ್ರಸಾದಿಗಳೆಂದು ತಿಳಿದು ಕೊಂಡಿದ್ದಾರೆ ಪ್ರಸಾದಕ್ಕೆ ಇಷ್ಟೇ ಸೀಮೆಯನ್ನು ಗೊತ್ತುಪಡಿಸಿದರೆ ಅದರಲ್ಲಿ ಅಷ್ಟು ಮಹತ್ವವು ಉಳಿಯುತ್ತಿರಲಿಲ್ಲ. ಹಾಗೆ ಮಾಡುವದು ಕೇವಲ ಗೌಣಪಕ್ಷವು. ಆದರೆ ಮಹಾನುಭಾವಿಗಳ ವಚನ ಪ್ರಸಾದವನ್ನು ಸೇವಿಸುವದೇ ನಿಜವಾದ ಪ್ರಸಾದಿಯ ಲಕ್ಷಣವು. ಇದೇ ಪ್ರಧಾನ ಪಕ್ಷವು. ಈ ಮಾತನ್ನೇ ಪ್ರಾಮುಖ್ಯವಾಗಿಟ್ಟುಕೊಂಡು ಪ್ರತಿಯೊಬ್ಬ ವೀರಶೈವನು ಆಚರಿಸಬೇಕಲ್ಲದೆ ಕೇವಲ ಗೌಣವಾದುದಕ್ಕೇ ಅಂಟಿಕೊಂಡು ತಮ್ಮ ಪ್ರತಿಷ್ಠೆಯನ್ನು ಬೆಳೆಯಿಸುವದು ಮೂರ್ಖತನವು.

ಹಿರಿಯರು ಗುರುಲಿಂಗಜಂಗಮದ ಪ್ರಸಾದವನ್ನು ಸ್ವೀಕರಿಸಬೇಕೆಂದು ನಮಗೆ ಉಪದೇಶಿಸುವರು. ಅಂದರೆ ಗುರುವಿನ ಮನೆಯಿಂದ ಪ್ರಸಾದವನ್ನು ತಂದು ಸೇವಿಸಬೇಕೆಂತಲ್ಲ. ಆದರೆ ಗುರುವನ್ನೇ ಮನೆಗೆ ಕರೆಯಿಸಿ ಯೋಗ್ಯತಾನುಸಾರ ಅವರಿಗೆ ಪ್ರಸಾದವನ್ನು ನೀಡಿ ಮಿಕ್ಕ ಪ್ರಸಾದವನ್ನು ತಾನು ಸೇವಿಸಬೇಕೆಂದರ್ಥ. ಗುರುವನ್ನು ಕರೆಯಿಸಿ ಬರೇ ಊಟಉಪಚಾರ ಮಾಡಿಸಿದರೆ ತೀರಲಿಲ್ಲ; ಗುರುವಿನ ಪ್ರಸಾದ ಮುಖದಿಂದ ಲಿಂಗಾರ್ಚನಾ ವಿಧಾನವನ್ನರಿತುಕೊಂಡು ಆನಂದಬಡುವದೇ ಗುರುಪ್ರಸಾದವೆನಿಸುತ್ತದೆ. ಪ್ರತಿನಿತ್ಯ ಊಟ ಮಾಡುವಾಗ ಎಡೆಯನ್ನು ಲಿಂಗಕ್ಕೆ ತೋರಿಸಿ ಲಿಂಗಾರ್ಪಿತವಾದ ಬಳಿಕ ವೀರಶೈವರು ತಾವು ಪ್ರಸಾದ ಸೇವನೆ ಮಾಡುವರು. ಅಥವಾ ಲಿಂಗ ನಿರೀಕ್ಷಣೆಯಿಂದುಂಟಾದ ನಿರ್ಮಳಾನಂದವೇ ಲಿಂಗಪ್ರಸಾದವೆನಿಸುವದು. ಜಂಗಮವನ್ನು ಭಕ್ತಿಪೂರ್ವಕವಾಗಿ ಮನೆಗೆ ಬರಮಾಡಿಕೊಂಡು ತಮ್ಮಲ್ಲಿದ್ದುದನ್ನು ನೀಡಿ ಮಿಕ್ಕ ಪ್ರಸಾದವನ್ನು ಕೊಂಬುವದೇ ಜಂಗಮ ಪ್ರಸಾದವು. ಇದರ ಜೊತೆಗೆ ಜಂಗಮದ ಪ್ರಸಾದ ವಾಣಿಯಿಂದ ಲಿಂಗಾಂಗ ಸಾಮರಸ್ಯಜ್ಞಾನವನ್ನರಿತುಕೊಳ್ಳುವದೂ ಜಂಗಮ ಪ್ರಸಾದವೇ.

ಪ್ರಸಾದದ ಮಹತ್ವವೇನು? "ಪ್ರಸಾದೇ ಸರ್ವ ದುಃಖಾನಾಂ ಹಾನಿರಸ್ಯೋಪಜಾಯತೆ" ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವ

ತಿಷ್ಠತಿ ” ಎಂದು ಶ್ರೀ ಭಗವದ್ಗೀತೆಯಲ್ಲಿ ಹೇಳಿದೆ. ಪ್ರಸಾದ ಸೇವಿಸುವದರಿಂದ ಅರ್ಥಾತ್ ಪ್ರಸನ್ನಚಿತ್ತನಾಗಿರುವದರಿಂದ ಎಲ್ಲ ದುಃಖಗಳೂ ಹಿಂಗಿ ಹೋಗುವವು. ಮನುಷ್ಯನು ಪ್ರಸಾದವನ್ನು ಕೇವಲ ತನ್ನ ಹೊಟ್ಟೆಗಾಗಿಯೂ ತನ್ನ ಕುಟುಂಬದ ಸಲುವಾಗಿಯೂ ಸೇವನೆ ಮಾಡುವದು ಮಹಾಪಾಪವು. “ ಕಾಗೆಯೊಂದಗಳು ಕಂಡರೆ ಕರೆಯದೆ ತನ್ನ ಬಳಗವನು, ಕೋಳಿಯೊಂದು ಗುಟುಕು ಕಂಡರೆ ಕೂಗಿ ಕರೆಯದೆ ತನ್ನ ಬಳಗವನೆಲ್ಲವನು ಶಿವಭಕ್ತನಾಗಿ ಗುರ ಲಿಂಗಜಂಗಮಕೆ ನೀಡದೆ ತಾನೇ ತಿನ್ನುವವನು ಕಾಗೆ ಕೋಳಿಗಿಂತ ಕರಕಷ್ಟ ಕಾಣಾ ಕೂಡಲ ಸಂಗಮದೇವಾ ” ಎಂಬುದಾಗಿ ಶ್ರೀಬಸವಣ್ಣನವರು ಹೇಳಿದ್ದಾರೆ. ವೀರಶೈವನು ಪ್ರಸಾದಕ್ಕೆ ಕುಳಿತ ಸಮಯದಲ್ಲಿ ಮತ್ತೊಬ್ಬ ವೀರಶೈವನನ್ನು ಕಂಡರೆ ಆತನನ್ನು ಬಿಟ್ಟು ಎಂದಿಗೂ ಪ್ರಸಾದ ಸೇವಿಸಲಾಗದೆಂದು ಆದ್ಯರ ವಚನ. ಈಗ್ಯೂ ಸಹ ಅನೇಕ ವೀರಶೈವರಲ್ಲಿ ಊಟಕ್ಕೆ ಕುಳಿತ ಸಮಯದಲ್ಲಿ ಮನೆಗೆ ಯಾರಾದರೂ ಬಂದರೆ ಊಟ ಮಾಡೋಣ ಬನ್ನಿರಿ ಎಂದು ಕರೆಯುವ ಪರಿಪಾಟು ಬಿದ್ದಿದೆ. ಬಂದಂಥವರು ಬಹಳ ಮಂದಿಯಾಗಲಿ ತೆಗೆದು ಕೊಳ್ಳಿರಿ ಎಂದು ಹೇಳುವ ರೂಢಿಯೂ ಉಂಟು ಅಂದರೆ ಹಿಂದಿನ ಕಾಲಕ್ಕೆ ಮನೆಗೆ ಬಂದ ಅತಿಥಿಗಳನ್ನು ಮೊದಲು ಪ್ರಸಾದಕ್ಕೆ ಬನ್ನಿರೆಂದು ಕರೆಯದೆ ಎಂದಿಗೂ ಬಿಡುತ್ತಿದ್ದಿಲ್ಲ. ಅವರ ಅತಿಥಿ ಸತ್ಕಾರವು ಮಿಗಿಲಾಗಿದ್ದಿತು. ತಾವು ಒಂದು ವೇಳೆ ಉಪವಾಸವಾದರೂ ಬೀಳುತ್ತಿದ್ದರು. ಆದರೆ ಬಂದಂಥವರ ಆರೈಕೆ ಮಾಡುವದರಲ್ಲಿಯೇ ಹೆಚ್ಚು ಮನಮಗ್ನವಾಗುತ್ತಿದ್ದರು. ಪ್ರಸಂಗವಶಾತ್ ಏನಾದರೂ ಕೊರತೆಯಾದರೆ ಬಹು ನೊಂದು ಕೊಳ್ಳುತ್ತಿದ್ದರು ಮತ್ತು ಅತ್ಯಂತ ದೀನ ಮುಖಮುದ್ರೆಯಿಂದಲೂ, ದೀನ ವಾಣಿಯಿಂದಲೂ ತಮ್ಮ ಕುಂದು ಕೊರತೆಗಳ ಬಗ್ಗೆ ಅತಿಥಿಗಳೆದುರಿಗೆ ಕ್ಷಮಾಪಣೆ ಬೇಡಿಕೊಳ್ಳುತ್ತಿದ್ದರು ಅತಿಥಿಗಳು ಸಂತೋಷ ಬಟ್ಟರೆ ತಾವು ಉಂಡದ್ದಕ್ಕಿಂತಲೂ ಹೆಚ್ಚೆಂದು ಭಾವಿಸುತ್ತಿದ್ದರು. ಬಂದಂಥ ಅತಿಥಿಗಳಾದರೋ ಉಂಡ ಮನೆಯ ಜಂತೆಯನ್ನೆಣಿಸುವ ಸ್ವಭಾವದವರಾಗಿರದೆ ಮುಂದೆ ಸುಮ್ಮನಿದ್ದು ಹಿಂದೆ ಬಯ್ಯುವ ಮಂಗಚೇಷ್ಟೆಯವರಾಗಿರದೆ ಎಲ್ಲ ಕುಂದು ಕೊರತೆಗಳು ತಮ್ಮವೇ ಎಂದು ತಿಳಿದು ನೀಡಿದಂಥ ಆಹಾರವನ್ನು ಶಿವಪ್ರಸಾದವೆಂದು ಪೂಜ್ಯಭಾವನೆಯಿಂದ ಸ್ವೀಕರಿಸುತ್ತಿದ್ದರು. ಒಂದು ವೇಳೆ ಇವರಿಗೆ ಹಸಿವೆಯಾಗಿರದಿದ್ದರೆ ತಾವು ಹೋದಂಥ ಮನೆಯ ಜನರಿಗೆ

ನಿಮ್ಮ ಮನೆಯಲ್ಲಿ ನಮ್ಮಂಥ ಅತಿಥಿಗಳು ಬಹಳ ಜನರು ಊಟ ಮಾಡಲಿ ಎಂಬ ಆಶೀರ್ವಾದಾತ್ಮಕವಾದ ಅಪ್ಪಣೆ ಕೊಡಿಸಿ ಅವರು ಪ್ರಸಾದವನ್ನು ಸಾಗಿಸುವಂತೆ ಮಾಡುತ್ತಿದ್ದರು ಈಗ ಈ ಮಾದರಿಯ ಯಜಮಾನರಾಗಲಿ ಅತಿಥಿಗಳಾಗಲಿ ದೊರೆಯುವದು ದುರ್ಲಭ. ಹಳ್ಳಿ ಪಳ್ಳಿಗಳಲ್ಲಿ ತೀರ ವಯಸ್ಸಾದ ಮುದುಕರಲ್ಲಿ ಈ ತರಹದ ಆದರ ಸತ್ಕಾರದ ಸ್ವಭಾವವು ವ್ಯಕ್ತವಾಗುತ್ತದೆ. ಮುಪ್ಪಿನವರು ಮನೆಗೆ ಬಂದವರಿಗೆ ಊಟಕ್ಕೆ ಬನ್ನಿರೆಂದು ಆಗ್ರಹ ಮಾಡುವರು ಮಧ್ಯಮ ವಯಸ್ಸಿನವರು ಶಿಷ್ಟಾಚಾರಕ್ಕಾಗಿ ಕರೆದು ಬಂದರೆ ನಿರ್ವಾಹವಿಲ್ಲದೆ ಮನಸ್ಸಿಲ್ಲದಿದ್ದರೂ ಅತಿಥಿಗಳಿಗೆ ಊಟ ಮಾಡಿಸಿ ಕಳಿಸುವರು; ಬಾರದಿದ್ದರೆ ನೆಟ್ಟಗಾಯಿತು ಪೀಡೆ ಹೋಯಿತು; ಕಾಟ ತಪ್ಪಿತೆಂದು ಹಿಗ್ಗುವರು ಆದರೆ ತರುಣರು ಮಾತ್ರ ತಾವು ಊಟಕ್ಕೆ ಕುಳಿತಾಗ ಯಾರಾದರೂ ಬಂದರೆ ನಾನು ಈಗ ಊಟಕ್ಕೆ ಕುಳಿತಿದ್ದೇನೆ ನೀವು ಸ್ವಲ್ಪ ತಡೆದು ಬನ್ನಿರಿ ಅಥವಾ ಖಾನಾವಳಿಯಲ್ಲಿ ನಿಮ್ಮ ಊಟವನ್ನು ತೀರಿಸಿಕೊಂಡು ಬಂದು ಬಿಟ್ಟರೆ ಮತ್ತಿಷ್ಟು ನೆಟ್ಟಗೆ" ಎಂದು ಸ್ಪಷ್ಟವಾಗಿ ಹೇಳಿಕಳಿಸುವರು. ಇವರ ಭಾವನೆಯು ಬಹಳೇ ಕೊಳೆತಿರುತ್ತದೆ ಇಂಥವರು ಅತಿಥಿಗಳನ್ನು ಉಪಚರಿಸುವದೊತ್ತಟ್ಟಿಗಿರಲಿ ತಮ್ಮ ಮಿತ್ರರನ್ನೂ ಗುರ್ತಿನವರನ್ನೂ ಬಂಧುಬಳಗದವರನ್ನೂ ಸಹ ಸ್ವೀಕರಿಸಿಬಿಡಲಿಕ್ಕೆ ಹೇಸುವದಿಲ್ಲ. ಪೇಟೆಯ ಊರುಗಳಲಂತೂ ಖಾನಾವಳಿಗಳು ಹೆಚ್ಚಾಗಿರುವದರಿಂದ ಯಾರಾದರೂ ಪೇಟೆಯಲ್ಲಿ ತಮ್ಮ ಪರಿಚಿತರಮನೆಗೆ ಹೋದರೆ ಅವರು ಖಾನಾವಳಿಗಳ ಕಡೆಗೆ ಬೊಟ್ಟು ಮಾಡಿ ತೋರಿಸುತ್ತಾರೆ. ಹಾಗೆ ಹೇಳಲಿಕ್ಕೆ ಅವರಲ್ಲಿ ಯಾವ ಸಂಕೋಚವೂ ಉತ್ಪನ್ನವಾಗುವದಿಲ್ಲ ಹಾಗೆ ಹೇಳಿ ಹೇಳಿ ಅವರಿಗೆ ಅದೇ ರೂಢಿ ಬಿದ್ದಿರುತ್ತದೆ. ಅತಿಥಿ ಸತ್ಕಾರದ ಭಾವನೆಯಂತೂ ಅವರಲ್ಲಿ ಸಂಪೂರ್ಣ ನಾಶವಾಗಿ ಬಿಟ್ಟಿರುತ್ತದೆ ಹಿಂದಕ್ಕೆ ಆದರ ಸತ್ಕಾರಗಳೂ ದಾಸೋಹಗಳೂ ನಡೆಯುವಂಥ ಮಠಗಳು ಈಗ ಖಾನಾವಳಿಗಳಾಗಿ ಬಿಟ್ಟವೆ ದೇಶಕಾಲ ಪರಿಸ್ಥಿತಿಗನುಸರಿಸಿ ಖಾನಾವಳಿಗಳಿದ್ದದೇ ಕ್ಷೇಮಕರವೆಂದು ಅನೇಕರಿಗೆ ಭಾವನೆಯಾಗಿ ಬಿಟ್ಟಿದೆ" ಸುಮ್ಮಸುಮ್ಮನೆ ಇಲ್ಲದ ಭಿಡೆಯನ್ನೆಲ್ಲ .ನಾವು ಕೂಳಿಗಾಗಿ ವೆಚ್ಚ ಮಾಡೋಣ ನಾಲ್ಕು ಆಣೆ ಕೊಟ್ಟನೇನೋ; ನಂಬರ ಮನೆಯಲ್ಲುಂಡನೇನೋ; ತನ್ನ ದಾರಿ ಹಿಡಿದು ಕೊಂಡು ನಡೆದನೇನೋ." ಎಂದು ಜನರು ಮಾತಾಡುವರು. ಇದು ವ್ಯಾಪಾರದ ಯುಗವಾಗಿರುವದರಿಂದ ಪ್ರತಿಯೊಬ್ಬರಲ್ಲಿಯೂ ಸ್ವಾರ್ಥ

ಪರವಾದ ಲೆಕ್ಕಾ ಹಾಕುವ ಗುಣವು ಬೆಳೆದು ಒಬ್ಬರನ್ನೊಬ್ಬರು ಊಟಕ್ಕೆ ಕರೆಯಬೇಕಾದರೆ ಹಿಂದುಮುಂದು ನೋಡುತ್ತಾರೆ. ಆದರೆ ಸ್ವಾರ್ಥ ಬುದ್ಧಿಯು ಅಡಗಿ ಪರೋಪಕಾರ ಬುದ್ಧಿಯು ಜನರಲ್ಲಿ ಹೆಚ್ಚಾದಾಗಳೇ ಖಾನಾವಳಿಗಳಿಗೆ ಅಳಿಗಾಲವು ಪ್ರಾಪ್ತವಾಗಿ ಒಬ್ಬರಿಗೊಬ್ಬರು ಬಂಧು ಪ್ರೇಮದಿಂದ ಆದರ ಸತ್ಕಾರಾದಿಗಳನ್ನು ಮಾಡಹತ್ತುವರು. ವೀರಶೈವ ಸಮಾಜದಲ್ಲಿ ಖಾನಾವಳಿಗಳಿರುವದು ಸಮಾಜಕ್ಕೆ ಬಹು ದೊಡ್ಡ ಅಪ ಮಾನವು; ಕಲಂಕವು. ಆದರ ಸತ್ಕಾರ ಮೊದಲಾದ ಉದಾತ್ತ ಧ್ಯೇಯ ಗಳನ್ನೊಳಕೊಂಡ ಪರಮ ಪವಿತ್ರವಾದ ವೀರಶೈವ ಧರ್ಮವೆತ್ತ? ರೊಕ್ಕ ತೆಗೆದುಕೊಂಡು ಪ್ರಸಾದವನ್ನು ಮಾರುವ ನೀಚತನವೆತ್ತ? ಖಾನಾವಳಿಗಳು ನಾಮಶೇಷವಾದಾಗಳೇ ವೀರಶೈವ ಮತದ ಶುಭೋ ದಯವಾಗುವದೆಂದು ತಿಳಿಯಬೇಕು. ಅತ್ಯಂತ ಪವಿತ್ರವಾದ ಪ್ರಸಾ ದವು ವ್ಯಾಪಾರದ ವಸ್ತುವಾಗಬಹುದೇ? ಖಾನಾವಳಿಗಳನ್ನು ನಿರ್ಮೂಲ ಮಾಡಬೇಕೆಂಬುದು ಅವಿವೇಕಿತನದ ಆಲಾಪವೆಂದು ಅನೇಕರಿಗೆ ಅನಿಸು ತ್ತಿರಬಹುದು. ಆದರೆ ಅವುಗಳು ಪವಿತ್ರವಾದ ವೀರಶೈವ ಧರ್ಮಕ್ಕೆಂಥ ಕಲಂಕವನ್ನುಂಟು ಮಾಡುತ್ತವೆಂಬದನ್ನು ವಿಚಾರಿಸುವವರು ವಿರಳ. ಒಂದುವೇಳೆ ವಿಚಾರಿಸಿದರೂ ಮಾಡುವದೇನು? ಜಗತ್ತಿನ ಓಘವೇ ಭೌತಿಕ ಪ್ರಗತಿಯಲ್ಲಿ ಓಡಾಡುತ್ತಿರುವಾಗ ಹಳೇ ಜನರ ತಿಳಿಮಾತು ಗಳನ್ನು ಲಕ್ಷಗೊಟ್ಟು ಕೇಳುವವರಾರು? ಇಂಥ ಪ್ರಸಂಗದಲ್ಲಿ ಸಾಕ್ಷಾತ್ ಪರಮಾತ್ಮನೇ ಅವತರಿಸಿ ಧರ್ಮ ರಕ್ಷಣೆ ಮಾಡಬೇಕಲ್ಲದೆ ಮಾನವರ ಪಾಡೇನು? ನಾವೆಲ್ಲರೂ ಧರ್ಮದಲ್ಲಿ ಸುಧಾರಣೆಯಾಗಲೆಂದು ಬಯಸು ವವರಷ್ಟೇ. ಏನು ಕಲಿಕಾಲದ ಮಹಿಮೆಯೋ ಏನೋ ಸದ್ಯಕ್ಕಂತೂ ವೀರಶೈವರಲ್ಲಿ ಅತಿಥಿ ಸತ್ಕಾರದ ಭಾವನೆಯು ಸಂಪೂರ್ಣ ಲೋಪ ವಾಗಿ ಬಿಟ್ಟದೆ. ಗುರುತಿನವರು ಕಂಡರೆ 'ಚಟಕ್ಕೆ ಶರಣಾರ್ಥಿ ಮಠಕ್ಕೆ ದಯ ಮಾಡಿಸಿರಿ' ಎಂಬುವವರೇ ಬಹಳ ಮಂದಿ. ಶ್ರೀ ಭಗವದ್ಗೀತೆ ಯಲ್ಲಿ ತಮಗಾಗಿಯೇ ಅಟ್ಟುಣ್ಣುವವರು ಪಾಪವನ್ನೇ ಭಕ್ಷಣ ಮಾಡು ತ್ತಾರೆಂದು ಹೇಳಿದೆ. "(ಭುಂಜತೇ ತೇ ತ್ವಘಂ ಪಾಪಾಯೇ ಪಚಂ ತ್ಯಾತ್ಮಕಾರಣಾತ್)" ಪ್ರಸಾದವನ್ನು ತಾನು ಪೂಜ್ಯ ಭಾವನೆಯಿಂದ ಸೇವಿಸುವದಲ್ಲದೆ, ಮಹಾನುಭಾವರ ವಚನ ಪ್ರಸಾದವನುಂದು ತಣಿದು ಹಸಿದು ಮನೆಗೆ ಬಂದಂಥ ಅತಿಥಿಗಳಿಗೆ ಕುಲಗೋತ್ರವನ್ನೆಣಿಸದೆ ಪ್ರಸಾ ದವನ್ನಿಕ್ಕುವಾತನೇ ಮಹಾಪ್ರಸಾದಿಯು. ಹಸಿದು ಬಳಲುವ ಯಾವ

ಪ್ರಾಣಿಯನ್ನೂ ಕಣ್ಣಿನಿಂದ ನೋಡಬಾರದು ಅವರ ದೀನ ಸ್ವರವನ್ನು ಕಿವಿಯಿಂದ ಕೇಳಲಾಗದು. ತಾನುಣ್ಣುವದನ್ನು ಬಿಟ್ಟು ಮೊದಲು ಅವರನ್ನು ತೃಪ್ತಿಬಡಿಸಬೇಕೆಂಬುದೇ ವೀರಶೈವ ಧರ್ಮವು ಸಾರುತ್ತದೆ. ಹಾಗೆ ಮಾಡುವಂಥ ಮಹನೀಯರೇ ಪ್ರಸಾದಿಗಳೆಂದು ಕರೆಯಲ್ಪಡಲಿಕ್ಕೆ ಯೋಗ್ಯರು. ಅಂತಹದೇ ಮಹಾಪ್ರಸಾದವಲ್ಲದೆ ಕೇವಲ ತನ್ನ ಹೊಟ್ಟೆ ಹರಿದುಕೊಳ್ಳಲಿಕ್ಕೆ ತಿನ್ನುವ ಆಹಾರವು ಪ್ರಸಾದವೆನಿಸದು. ಹಸಿದ ಪ್ರಾಣಿಗಳ ಬಳಲಿಕೆಯನ್ನು ಕಳೆಯುವಂಥ ಆಹಾರಕ್ಕೇನೇ ಪ್ರಸಾದವೆಂಬ ಹೆಸರು ಸಲ್ಲುವದು.

ಪ್ರಸಾದವೆಂದರೆ ಪ್ರಸನ್ನಚಿತ್ತವೆಂದು ಹಿಂದೆ ಹೇಳಿದೆಯಷ್ಟೇ. ಪ್ರಸನ್ನಚಿತ್ತವುಳ್ಳವರ ಬುದ್ಧಿಯು ಸುಸ್ಥಿರವಾಗಿರುತ್ತದೆಂದು ಭಗವದ್ಗೀತೆಯು ಸಾರುತ್ತವಲ್ಲವೇ ? ಆದುದರಿಂದ ಯಾವಾಗಲೂ ಪ್ರಸನ್ನ ಮುಖಮುದ್ರೆಯಿಂದಿರುವದು ಪ್ರಸಾದಿಯ ಲಕ್ಷಣವಾಗಿದೆ. ವೀರಶೈವರು ಉದಾಸೀನರೂ ಉರಿ ಮೋರೆಯವರೂ ಎಂದಿಗೂ ಇರಕೂಡದು. ಯಾವಾಗಲೂ ಉಲ್ಹಾಸವೃತ್ತಿಯಿಂದ ಕುಲುಕುಲು ನಗುತ್ತಿರಬೇಕು. ಆದರೆ ಆ ಉಲ್ಹಾಸವು ಭೌಕ್ತಿಕಮಯವಾಗಿರದೆ ಆಧ್ಯಾತ್ಮಿಕ ಪ್ರಕಾಶದಿಂದ ಹೊಳೆಯುತ್ತಿರಬೇಕು.

ನಾವು ಪ್ರಸಾದವನ್ನು ಬಾಯಿಯಿಂದ ಸೇವಿಸುತ್ತೇವೆ. ಅದೇ ಬಾಯಿಯಿಂದಲೇ ಮಾತುಗಳನ್ನಾಡುತ್ತೇವೆ. ಪ್ರಸಾದಕ್ಕೂ ವಾಕ್ಕಿಗೂ ಬಾಯಿಯೇ ಮುಖ್ಯಸ್ಥಾನವಾಗಿರುವದರಿಂದ ನಾವು ಅದನ್ನು ಎಷ್ಟು ಸ್ವಚ್ಛವಾಗಿಯೂ ಪವಿತ್ರವಾಗಿಯೂ ಇಟ್ಟುಕೊಳ್ಳಬೇಕೆಂಬದನ್ನು ನೀವೇ ವಿಚಾರಿಸಿರಿ. ಬಾಯಿಯನ್ನು ಸ್ವಚ್ಛವಾಗಿ ತೊಳೆದಿಟ್ಟುಕೊಂಡರೆ ಪ್ರಸಾದವು ರುಚಿಯಾಗಿಯೂ ಆರೋಗ್ಯಕರವಾಗಿಯೂ ಪರಿಣಮಿಸುವದು. ನಾವು ಬಾಯಿಯಿಂದ ಅವಾಚ್ಯ ಶಬ್ದಗಳನ್ನುಚ್ಚರಿಸದೆ ಮೃದು ಶಬ್ದಗಳನ್ನೇ ನುಡಿಯುವ ಅಭ್ಯಾಸವನ್ನಿಟ್ಟರೆ ಮುಂದೆ ಅದೇ ಪ್ರಸಾದವಾಣಿಯಾಗುವದು. ನಾವು ಯಾವ ಬಾಯಿಯಿಂದ ಪವಿತ್ರ ಪ್ರಸಾದವನ್ನು ಸೇವಿಸುತ್ತೇವೆಯೋ ಅದೇ ಬಾಯಿಯಿಂದ ಸುವಾಚ್ಯವಾದ ನುಡಿಯನ್ನು ನುಡಿಯುತ್ತಿರಬೇಕು. ಮಹಾನುಭಾವರ ಪ್ರಸಾದ ವಚನ ಶ್ರವಣ ಮಾಡುವದು ಪ್ರಸಾದಿಯ ಕರ್ತವ್ಯವಾದಂತೆ ಆ ಪ್ರಸಾದ ವಚನವನ್ನು ತಾನು ಸ್ವತಃ ನುಡಿಯುವದಾದರೂ ತನ್ನ ಕರ್ತವ್ಯವೆಂಬದನ್ನು ಪ್ರಸಾದಿಯು

ಸರ್ವಥಾ ಮರೆಯಲಾಗದು. ಶ್ರೀ ಬಸವಣ್ಣನವರು 'ಮೃದು ವಚನಂಗಳೇ ಸಕಲ ಜಪಂಗಳಯ್ಯಾ। ಮೃದು ವಚನಂಗಳೇ ತಪಂಗಳಯ್ಯಾ। ಎಂದು ಹೇಳಿಲ್ಲವೇ?

ಪ್ರಸಾದವನ್ನು ಎಡೆಯಲ್ಲಿ ಬಿಡಬಾರದೆಂಬದೇನೋ ಒಳ್ಳೆಯ ನಿಯಮ. ಹೆಚ್ಚಿಗೆ ನೀಡಿಸಿಕೊಳ್ಳದೆ ಮಿತಾಹಾರಿಯಾಗಿರಬೇಕೆಂಬುದೇ ಅದರ ಉದ್ದೇಶ ಆದರೆ ಕೆಲವು ಪ್ರಸಾದಿಕರೆನಿಸಿಕೊಳ್ಳುವವರು ತುತ್ತು ಹೆಚ್ಚಾದರೆ ಕುತ್ತು ಬಪ್ಪುದೆಂಬ ನಾಣ್ಣುಡಿಯನ್ನುಲ್ಲಂಘಿಸಿ ಸಾಕುಸಾಕಾಗಿದ್ದರೂ ಹೆಚ್ಚಿಗೆ ನೀಡಿಸಿಕೊಂಡು ಹೊಟ್ಟೆಯುಬ್ಬಿ ಕಕ್ಕಸ ಬಡುತ್ತಿದ್ದರೂ ಆ ಎಡೆಯನ್ನೆಂದಿಗೂ ಬಿಡುವದಿಲ್ಲ. ಇಂಥವರು ಪ್ರಸಾದಿಗಳಲ್ಲ. ನಾಲಿಗೆಯ ರುಚಿಗಾಗಿ ಯಥೇಚ್ಛವಾಗಿ ತಿನ್ನುವ ಕೂಳಬಕ್ಕರು. ಆ ಆಹಾರವಾದರೂ ಅವರಿಗೆ ಪ್ರಸಾದವಾಗದೆ ಕೂಳಾಗುವದು. ಕೆಲವು ಮಹನೀಯರು ಕುತ್ತಿಗೆಮಟ ತಿಂದು ಎಲ್ಲಿಯೂ ಹೆಚ್ಚಿಗೆ ಸ್ಥಳ ದೊರೆಯದಂಥ ದುರ್ಧರ ಪ್ರಸಂಗ ಬಂದರೆ ಹೆಚ್ಚಾದ ಪ್ರಸಾದವನ್ನು ಸುಡಿಸುವರು ಇಲ್ಲವೆ ಹೂಳುವರು. ಇದೆಲ್ಲಿಯ ನ್ಯಾಯ? ತಕ್ಕಷ್ಟು ನೀಡಿಸಿಕೊಳ್ಳದಿರುವದೇ ಮೊದಲನೆಯ ತಪ್ಪು. ಪ್ರಸಾದಿಕರೆಂದಾದರೂ ಹದಗೇಡಿಗಳಾಗಬಹುದೇ ? ಪ್ರಸಾದಿಕರಾದವರೊಡನೆ ನೀಡುವವರೆಂದಾದರೂ ಚೇಷ್ಟೆಗಾಗಿ ಹೆಚ್ಚಿಗೆ ನೀಡಬಹುದೇ? ಇಂಥ ಚೇಷ್ಟೆಖೋರರಿಂದ ಎಡೆ ಮಾಡಿಸಿಕೊಳ್ಳುವವರು ಪ್ರಸಾದಿಕರಲ್ಲ. ಪ್ರಸಾದಿಕರಿಗೆ ಪ್ರೇಮದಿಂದಾಗಲಿ, ಆಗ್ರಹದಿಂದಾಗಲಿ ಉದ್ದೇಶಪಟ್ಟಾಗಲಿ ಅವರ ಮನಸ್ಸಿಲ್ಲದಿದ್ದರೂ ಹೆಚ್ಚಿಗೆ ನೀಡುವವರು ಮಹಾಪಾಪಿಗಳು. ಆ ಹೆಚ್ಚಿನ ಅನ್ನದಿಂದ ಮತ್ತೊಂದು ಜೀವಿಯು ಬದುಕುತ್ತಿದ್ದರೆ ಅದನ್ನು ಹಾರಿಬಡೆದ ಪಾಪವು ಅವರಿಗೆ ತಟ್ಟುತ್ತದೆ. ಹೆಚ್ಚಾಗಿ ಊಟ ಮಾಡುವವರಿಗೂ ಆ ಪಾಪವು ತಟ್ಟದೆ ಹೋಗುವದಿಲ್ಲ. ಏನೋ ಪ್ರಸಂಗವಶಾತ್ ಎಡೆಯಲ್ಲಿ ಕ್ರಿಮಿಗಳಾಗಲಿ ಮಲಿನ ಪದಾರ್ಥಗಳಾಗಲಿ ಕಂಡರೆ ಕೆಲವು ಅರಣ್ಯಪಂಡಿತರು ಅವುಗಳನ್ನೂ ಸಹ ಪ್ರಸಾದವೆಂದೇ ಭಾವಿಸಿ ಕಡೆಗೆ ತೆಗೆದೊಗೆಯದಲೆ ಹಾಗೆಯೇ ಸೇವಿಸಿ ಬಿಡುವರು. ಈ ಮಹನೀಯರು ಪ್ರಸಂಗ ಬಂದರೆ ಉತ್ಪೊತ್ತಿಯ ಬೀಜಗಳನ್ನೂ ಮಾವಿನ ಒಟ್ಟೆಪ್ಪಗಳನ್ನೂ ಪ್ರಸಾದವೆಂದು ನುಂಗಿದರೂ ನುಂಗಬಹುದು. ಇದು ಪ್ರಸಾದದ ಬಗ್ಗೆಯಿರುವ ಮೂರ್ಖಕಲ್ಪನೆಯ ಪರಮಾವಧಿಯು; ಅಜ್ಞಾನಾಂಧಕಾರದ ಮೊಟ್ಟೆಯು. ಇಂಥ

ವರು ನಿಜವಾದ ಪ್ರಸಾದಿಗಳಾಗಿರದೆ ತಿಳಿಗೇಡಿಗಳಾಗಿರುವರು. ಪ್ರಸಾದವು ಹೆಚ್ಚಾದರೇನು ಮಾಡಬೇಕು ? ಅದನ್ನಾದರೂ ಭಕ್ತಿಯಿಂದ ಸೇವಿಸುವವರಿದ್ದರೆ ಅವರಿಗೆ ಕೊಡುವದುತ್ತಮ ಪಕ್ಷ. ಆದರೆ ಅವರು ಹೇಸಿಕೊಂಡರಾಗಲಿ ತಮ್ಮ ಮನಸ್ಸು ಹಾಗೆ ಮಾಡಲೊಪ್ಪದಿದ್ದರಾಗಲಿ ಆ ಪ್ರಸಾದವನ್ನು ಆಕಳ ಅಥವಾ ಆಕಳ ಕರುವಿಗೆ ಕೊಡುವದು ಮಧ್ಯಮ ಪಕ್ಷ. ಅದೂ ಸಾಧಿಸದಿದ್ದರೆ ಬೇರೆ ಪಶುಪಕ್ಷಿಗಳಿಗಾಗಲಿ ಬಿಕ್ಕೆ ಬೇಡುವವರಿಗಾಗಲಿ ಕೊಡುವದು ಕನಿಷ್ಟ ಪಕ್ಷ. ಆದರೆ ಅದನ್ನು ಸುಡುವದಾಗಲಿ ಹುಗಿಯುವದಾಗಲಿ ಸರ್ವಥಾ ಕೆಲಸದ್ದಲ್ಲ. ಪ್ರಸಾದವು ಜೀವಿಗಳ ತೃಪ್ತಿಗಾಗಿಯೇ ಇರುತ್ತದಲ್ಲದೆ ಸುಡಿಸಿಕೊಂಡಾಗಲಿ ಹೂಳಿಸಿಕೊಂಡಾಗಲಿ ಸಾಯುವದಕ್ಕಿರುವದಿಲ್ಲ. ಹೆಚ್ಚು ಮಾಡಿದ ಆಹಾರವು ಪ್ರಸಾದವೆಂದಿಗೂ ಎನಿಸಲಾರದು. ಅದು ಕೂಳೇ ಅಹುದು. ಸಾಮಾನ್ಯ ಜನರು ಕೂಳು ಹೆಚ್ಚಾದರೆ ಯಾವ ಪ್ರಕಾರ ವರ್ತಿಸುವರೋ ಅದರಂತೆಯೇ ಪ್ರಸಾದಿಕರೆನಿಸಿಕೊಳ್ಳುವವರೂ ಮಾಡಿದರೆ ಯಾವ ದೋಷವೂ ಇಲ್ಲ. ಹೆಚ್ಚಾಗಿ ತಿನ್ನುವದಾಗಲಿ ಹೆಚ್ಚು ಮಾಡುವದಾಗಲಿ ಪ್ರಸಾದಿಯ ಲಕ್ಷಣವೇ ಅಲ್ಲ. ಹೆಚ್ಚು ನೀಡಿಸಿಕೊಳ್ಳಬಾರದೆಂಬದರ ಅರ್ಥವು ಮಿತಿಯಿಂದ ಪ್ರಸಾದಸೇವನೆ ಮಾಡಬೇಕೆಂಬದಿಷ್ಟೇ ಇರುತ್ತದಲ್ಲದೆ ಸುಡಿಸಬೇಕು ಇಲ್ಲವೆ ಹುಗಿಯಬೇಕೆಂದು ಎಂದು ಹೇಳುವದಿಲ್ಲ.

ನಿತ್ಯ ಪ್ರಸಾದಿಗಳಿಗೆ ಉಪವಾಸಾದಿ ವ್ರತಗಳನ್ನು ಪಾಲಿಸಬೇಕೆಂಬ ನಿಯಮವಿಲ್ಲ. ದಿನಾಲು ಅಳತೆಗೆಟ್ಟುಣ್ಣುವ ಜನಗಳು ಪಕ್ಷಕ್ಕೊಂದಾವರ್ತಿ ಉಪವಾಸ ಮಾಡಿದರೆ ಜೀರ್ಣ ಕ್ರಿಯೆಯು ಚನ್ನಾಗಿ ನಡೆದು ದೇಹವು ಆರೋಗ್ಯದಿಂದಿರುವದೆಂದು ಏಕಾದಶಿಯ ಉಪವಾಸವನ್ನಿಟ್ಟಿರುವರು. ಆದರೆ ಪ್ರಸಾದಿಯು ದಿನಾಲು ಮಿತಾಹಾರವನ್ನೇ ಸೇವಿಸುತ್ತಿರುವನಾದ್ದರಿಂದ ಅನಾರೋಗ್ಯಕ್ಕೆ ಆಸ್ಪದವೇ ಇಲ್ಲ. ಅಂದಬಳಿಕ ಪ್ರಸಾದಿಗೆ ಉಪವಾಸಾದಿ ವ್ರತಗಳೇಕೆ ? ಪ್ರಸಾದಿಯು ಪ್ರತಿನಿತ್ಯ ಗುರುಲಿಂಗ ಜಂಗಮ ತೃಪ್ತಿಗಾಗಿಯೂ ಹಸಿದು ಬಂದಂಥ ಅತಿಥಿ ಹಾಗೂ ಸಜೀವ ಪ್ರಾಣಿಗಳ ತೃಪ್ತಿಗಾಗಿಯೂ ವ್ರತವನ್ನು ಕೈಕೊಂಡಿರುವದರಿಂದ ಮಹತ್ವವಾದ ಪ್ರಸಾದ ವ್ರತವನ್ನು ಬಿಟ್ಟು ಬೇರೆ ವ್ರತವನ್ನೇಕೆ ಕೈಕೊಳ್ಳುವನು ? ನಿಜವಾದ ಪ್ರಸಾದಿಗಳಿಗೆ ಪ್ರತಿನಿತ್ಯವೂ ಶಿವರಾತ್ರಿಯು. "ನಿಚ್ಚಲುಂ ಶಿವರಾತ್ರಿಯುಂ ಅಚ್ಚಳಿಯದೆ ಮಾಳ್ಪನೆಂಬ ಭಾಷೆ" ಎಂಬು

ದಾಗಿ ಮಹಾನುಭಾವರಾದ ಬಸವಣ್ಣನವರು ಕಾಡಿಕೊಂಡಿರುವರು. 'ಉಂಡು ಉಪವಾಸಿಯಾಗಿರು' ಎಂಬ ಅನುಭಾವಿಗಳ ವಚನವಿರುವದು. ಉಂಡ ಮೇಲೆ ಉಪವಾಸವಿದ್ದಂತೆ ಹ್ಯಾಗಾಯಿತು? ಅದರ ಅರ್ಥವು ಹೀಗಲ್ಲ. ಮಹಾನುಭಾವರ ಪ್ರಸಾದ ವಚನವನ್ನುಂಡು ಅಂದರೆ ಶ್ರವಣ ಮಾಡಿ ಇನ್ನೂ ಕೇಳಬೇಕೆಂಬ ಹಸಿವು ಉಳ್ಳವರು ಅಂದರೆ ಹಂಬಲ ವುಳ್ಳವರು ಆಗಿರಬೇಕೆಂಬರ್ಥ. ಬಂದಂಥ ರೋಗವನ್ನು ಗುಣಪಡಿಸಿ ಕೊಳ್ಳುವದಕ್ಕಿಂತ ರೋಗವು ಬಾರದಂತೆ ಮಾಡುವದೇ ಶ್ರೇಯಸ್ಕರ ವಲ್ಲವೇ? ಅದರಂತೆ ಉಪವಾಸ ಮಾಡಿ ರೋಗವನ್ನು ಕಳೆದುಕೊಳ್ಳುವ ದಕ್ಕಿಂತಲೂ ಮಿತಾಹಾರದ ಪ್ರಸಾದಿಯಾಗಿ ರೋಗಾದಿಗಳಿಂದ ದೂರಾ ಗಿರುವದು ಲೇಸಲ್ಲವೇ?

ಒಂದು ನಾಲಿಗೆಯನ್ನು ಬಿಗಿ ಹಿಡಿಯುವದರಿಂದ ಜಗತ್ತಿನಲ್ಲಿ ಮಹತ್ತರವಾದ ಕೆಲಸಗಳು ಜರಗುತ್ತವೆ. ನಾಲಿಗೆಯನ್ನು ಹರಿಬಿಡುವ ದರಿಂದ ಹೇಳಲಸದಳವಾದ ಅನರ್ಥಗಳು ಸಂಭವಿಸುತ್ತವೆ. ನಾಲಿಗೆ ಯನ್ನು ಬಿಗಿ ಹಿಡಿಯುವದೆಂದರೆ ಅವಾಚ್ಯ ಶಬ್ದಗಳನ್ನಾಡದಿರುವದು; ಮತ್ತು ರುಚಿ ದುರಾಶೆಯಿಂದ ಕಂಡಕಂಡ ಪದಾರ್ಥಗಳನ್ನು ಸೇವಿಸ ದಿರುವದು. 'ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ' ಎಂದು ಶ್ರೀಬಸವಣ್ಣನವರು ಹೇಳಿದ್ದಾರೆ. 'ಮಾತಿಂಗೆ ಮಾತು ಮಥಿ ಸಲ್ಕೆ ವಿಧಿ ಬಂದು ಆತುಕೊಂಡಿಹುದು ಸರ್ವಜ್ಞ' ಎಂಬ ಸರ್ವಜ್ಞನ ವಚನವುಂಟು. ಕೆಲವರು ನಾಲಿಗೆಯನ್ನು ಬಿಗಿಹಿಡಿಯುವದೆಂದರೆ ಮೌನ ವ್ರತವನ್ನು ಧಾರಣ ಮಾಡುವದೆಂದು ಹೇಳುವರು. ಆದರೆ ಆ ಮೌನ ವ್ರತದ ಆಟವು ಪ್ರಪಂಚದಲ್ಲಿ ನಡೆಯುವದಿಲ್ಲ. ಮೌನಿಯಾಗಿರುವದ ಕ್ಕಿಂತಲೂ ಮೃದು ಭಾಷಿಯಾಗಿರುವದೇ ಮೇಲು. ಮೌನದಿಂದಾಗಲಿ, ಮೃದು ಭಾಷೆಯ ಸಾಧನದಿಂದಾಗಲಿ ನಮ್ಮ ವಾಣಿಯು ಪ್ರಸಾದ ವಾಣಿಯಾಗುವದು. 'ಬನ್ನಿರಿ ಬನ್ನಿರಿ ಹದುಳವಿದ್ದಿರಿ ಎಂದರೆ ನಿಮ್ಮ ಸೈಸಿರಿ ಹಾರಿಹೋಹುದೇ?' ಎಂದು ಶ್ರೀಬಸವಣ್ಣನವರು ಅಪ್ಪಣೆ ಕೊಡಿಸಿದ್ದಾರೆ. ಪ್ರಸಾದ ವಾಣಿಯನ್ನು ಪಡೆಯುವದು ಪ್ರಸಾದಿಯ ಲಕ್ಷಣವು. ನಾಲಿಗೆಯ ರುಚಿಗಾಗಿ ಕಂಡಕಂಡದ್ದನ್ನೆಲ್ಲ ಸೇವಿಸದೆ ಶಾಸ್ತ್ರ ದೃಷ್ಟಿಯಿಂದ ಪರಿಶುದ್ಧವೂ ಸಾತ್ವಿಕವೂ ಆದ ಪ್ರಸಾದವನ್ನೇ ಪ್ರಸಾ ದಿಯು ಮಿತಿಯಿಂದ ಸೇವಿಸಬೇಕು. ಉಳಿದ ಜಾತಿಯವರಲ್ಲಿ ಆಹಾ ರಕ್ಕೆ ಸ್ಪರ್ಶ ದೋಷವೊಂದೇ ಉಂಟು; ಆದರೆ ವೀರಶೈವರ ಪ್ರಸಾದ

ವನ್ನು ಭವಿಗಳು ನೋಡಲಾಗದು; ಮುಟ್ಟುವದಂತೂ ದೂರೇ ಉಳಿಯಿತು. ಈ ಪ್ರಕಾರ ದೃಷ್ಟಿ ದೋಷ ಸ್ಪರ್ಶ ದೋಷಗಳಿಂದ ನಿರ್ಲಿಪ್ತವಾದ ನಿರ್ಮಲ ಪ್ರಸಾದವನ್ನು ಪಡೆದ ವೀರಶೈವನೇ ಪರಮ ಧನ್ಯನು.

---

## ವಿಭೂತಿ.

ವಾ. ಷ. ಭಸಿತ ಭಸ್ಮ ವಿಭೂತಿ ಕ್ಷಾರ ರಕ್ಷೆಗಳೆಂಬ
ಮಿಸುಪೈದು ಪೆಸರಿನಿಂ ಮೆರೆವುದಾ ಪರಭಸ್ಮ
ವಸುವತಿಯೊಳಾರ್ತರಂ ರಕ್ಷಿಪುದು ಸುಜ್ಞಾನ ಜ್ಯೋತಿಯಂ
ಸಲೆ ತೋರ್ಪುದು।
ಭಸಿತದಾ ಮಹಿಮೆಯಿಂ ನಶಿಸಲೆನ್ನಯ ಪಾಪ
ಪುಸಿಯಾದ ಸಂಸಾರ ಬಾಧೆ ತಪ್ಪಲಿಯೆನ್ನ
ವಿಸಸುಪ ಸರ್ವಾಂಗವನು ನೀಡುವೆನು ಮುದದಿಂದಲೆಸೆವ
ಚಿದ್ಘನ ಭಸ್ಮಕೆ॥

ವಿಭೂತಿಯು ಅಷ್ಟಾವರಣಗಳಲ್ಲಿ ಆರನೆಯದು. ವಿಭೂತಿಯೆಂದರೇನು? ವಿಭೂತಿಯೆಂದರೆ ಸಂಪತ್ತು ಮತ್ತು ಭಸ್ಮಗಳೆಂದು ಎರಡು ಅರ್ಥಗಳಾಗುತ್ತವೆ. ಸಂಪತ್ತೆಂದರೆ ಭೌತಿಕ ಸಂಪತ್ತಲ್ಲ; ಆಧ್ಯಾತ್ಮಿಕ ಸಂಪತ್ತು. ಭಸ್ಮವೆಂದರೆ ಒಲೆಯೊಳಗಿನ ಬೂದಿಯಲ್ಲ; ಔಷಧಕ್ಕಾಗಿ ತಯಾರಿಸಿದ ಭಸ್ಮವಲ್ಲ. ಆದರೆ ಪವಿತ್ರವಾದ ಗೋಮಯದಿಂದ ಶುದ್ಧವಾದ ಭಸ್ಮವನ್ನು ತಯಾರಿಸಿ ಪಾದೋದಕ ಮಂತ್ರಾದಿಗಳಿಂದ ಶುದ್ಧಿಗೊಳಿಸುದುದೇ ವಿಭೂತಿಯು. ಜ್ಞಾನಾಗ್ನಿಯಿಂದ ಕಾಮಕ್ರೋಧಾದಿಗುಣಗಳನ್ನು ದಹಿಸುವದರಿಂದುಂಟಾದ ವೈಭವವೇ ವಿಭೂತಿಯು. ಪರಶಿವನು ಅಗ್ನಿ ನೇತ್ರದಿಂದ ಮನ್ಮಥನನ್ನು ಧ್ವಂಸ ಮಾಡಿ ಆ ಬೂದಿಯನ್ನು ಮೈಗೆ ಪೂಸಿಕೊಂಡಂತೆ ವೀರಶೈವರು ತಾವೂ ಕಾಮಕ್ರೋಧಾದಿ ಷಡ್ರಿಪುಗಳನ್ನು ಅಳಿದಿರುವೆವೆಂಬದನ್ನು ತೋರಿಸಲಿಕ್ಕೆ ಭಸ್ಮವನ್ನು ಧಾರಣ ಮಾಡುತ್ತಾರೆ. ವಿಭೂತಿ ಧಾರಣವೇ ಷಡ್ರಿಪುಗಳನ್ನಳಿದದ್ದರ ಗುರುತು. ಈ ಕಾಮಕ್ರೋಧಾದಿಗಳನ್ನಳಿಯುವ ಗುಣವೇ ಅಸಾಧಾರಣವಾದ ಆಧ್ಯಾತ್ಮಿಕ ಸಂಪತ್ತು. ಐಹಿಕ ಪ್ರಪಂಚವನ್ನು ಸಾಗಿಸಿಕೊಂಡು ಹೋಗ

ಲಿಕ್ಕೆ ಭೌತಿಕ ಸಂಪತ್ತು ಯಾವ ಪ್ರಕಾರ ಸಹಾಯಕಾರಿಯಾಗಿರುವದೋ ಅದೇ ಪ್ರಕಾರ ಪಾರಮಾರ್ಥ ಮಾರ್ಗವನ್ನು ತೋರಿಸಲು ಈ ಆಧ್ಯಾತ್ಮಿಕ ಸಂಪತ್ತು ಪ್ರಬಲವಾದ ಸಾಧನವಾಗಿದೆ. ಈ ಆಧ್ಯಾತ್ಮಿಕ ಸಂಪತ್ತನ್ನು ಪಡೆದವರೇ ಜಗತ್ತಿನಲ್ಲಿ ಮಹಾವಿಭೂತಿಗಳಾಗುವರು. ಬರೇ ಢಾಳವಾಗಿ ಹಣೆಗೆ ಭಸ್ಮವನ್ನು ಪೂಸಿಕೊಂಡು ಕಾಮಕ್ರೋಧಾದಿ ದುರ್ಗುಣಗಳನ್ನಳಿಯದಿದ್ದರೆ ಅವರಿಗ ಯಾರೂ ಎಂದಿಗೂ ವಿಭೂತಿಗಳೆನ್ನಲಾರರು.

ಅಗ್ನಿಪೂಜೆಗೂ ಭಸ್ಮಪೂಜೆಗೂ ಮಹದಂತರವಿದೆ. ಅಗ್ನಿಪೂಜೆಯು ಪ್ರವೃತ್ತಿ ಮಾರ್ಗದ್ಯೋತಕವಾಗಿದೆ. ಭಸ್ಮಪೂಜೆಯು ನಿವೃತ್ತಿ ಮಾರ್ಗವನ್ನು ಸೂಚಿಸುತ್ತದೆ. ಅಗ್ನಿಯು ಭೋಗಕ್ಕೆ ಅನುಕೂಲವಾಗಿದೆ. ಭಸ್ಮವು ತ್ಯಾಗಕ್ಕೆ ಕಾರಣವಾಗಿದೆ. ಭೋಗವು ವಿಷ್ಣುವಿನದು; ತ್ಯಾಗವು ಶಿವನದು; ಅಂತೆಯೇ ವಿಷ್ಣು ಮೂರ್ತಿಯನ್ನು ನಾನಾವಿಧವಾದ ಅಲಂಕಾರಗಳಿಂದಲೂ ಬಹು ಬೆಲೆಯ ವಸ್ತ್ರಗಳಿಂದಲೂ ಮುತ್ತು ರತ್ನಾದಿಗಳಿಂದಲೂ ಅಲಂಕರಿಸುವರು. ಸಾಕ್ಷಾತ್ ಲಕ್ಷ್ಮೀ ದೇವಿಯನ್ನೇ ಆತನ ಮಡದಿಯನ್ನಾಗಿ ಮಾಡಿರುವರು. ಶಿವನು ಬೂದಿಯನ್ನು ಬಡೆದುಕೊಂಡು ಸ್ಮಶಾನದಲ್ಲಿ ಪಿಶಾಚಿಗಳೊಡನೆ ವಾಸಿಸುವನು. ಅಗ್ನಿಪೂಜಕರು ಅಗ್ನಿಕುಂಡದಲ್ಲಿ ಇಂದ್ರಾದಿ ದೇವತೆಗಳಿಗೆ ಆಹುತಿಗಳನ್ನು ನೀಡಿ ಮಳೆ ಬೆಳೆಗಳನ್ನು ಬೇಡಿಕೊಂಡು ಸಮೃದ್ಧವಾಗಿ ಜೀವಿಸುವರು. ಅಗ್ನಿಯಿಂದಲೇ ಪ್ರತಿದಿನದ ಪಾಕವು ಸಿದ್ಧವಾಗುತ್ತದೆ ಅಗ್ನಿಯಿಂದಲೇ ಹಡಗ, ಗಾಡಿ, ಮೋಟಾರ ಮೊದಲಾದ ಭೋಗ್ಯವಸ್ತುಗಳು ನಡೆಯುತ್ತವೆ. ಅಗ್ನಿಯು ಘೃತವನ್ನುನುಂಗಿ ಪ್ರಜ್ವಲಿಸುವಂತೆ ಅಗ್ನಿಪೂಜಕನು ಎಲ್ಲ ಭೋಗ್ಯವಸ್ತುಗಳನ್ನು ಅನುಭೋಗಿಸಿ ಹರ್ಷಿಸುವನು. ಅಗ್ನಿಯ ಸೊಕ್ಕು ಮುರಿದಾಗಳೇ ಭಸ್ಮವು ಉದ್ಭವಿಸುವದು. ಭೋಗವು ತಲೆಬೇಸರವಾದಾಗಳೇ ತ್ಯಾಗ ಬುದ್ಧಿಯು ಹುಟ್ಟುವದು. ಈಗ ಅಮೇರಿಕಾ, ಇಂಗ್ಲಂಡ, ಜರ್ಮನಿ, ಜಪಾನ ಮೊದಲಾದ ರಾಷ್ಟ್ರಗಳು ಭೌತಿಕೋನ್ನತಿಯ ಶಿಖರಕ್ಕೇರಿರುವದರಿಂ ಅವರಲ್ಲಿ ಅವಿಶ್ರಾಂತತೆಯು ಅಧಿಕವಾಗಿ ನಿಜವಾದ ಶಾಂತತೆಯು ಅವರ ಪಾಲಿಗೆ ಶೂನ್ಯವಾಗಿ ಬಿಟ್ಟದೆ. ಆದುದರಿಂದ ಅವರು ಶಾಂತತೆಯ ಉಗಮಸ್ಥಾನವಾದ ಆಧ್ಯಾತ್ಮಿಕವನ್ನವಲಂಬಿಸಲುಪಕ್ರಮಿಸಿದ್ದಾರೆ. ಭೋಗಬುದ್ಧಿಯು ಮೊದಲನೆಯ ಅವಸ್ಥೆಯು; ತ್ಯಾಗ ಬುದ್ಧಿಯು

ಎರಡನೆಯ ಅವಸ್ಥೆಯು. ಭೋಗಕ್ಕೆ ಆಸುರೀ ಸಂಪತ್ತೆನ್ನುವರು. ತ್ಯಾಗಕ್ಕೆ ದೈವೀ ಸಂಪತ್ತೆನ್ನುವರು. ಆಸುರೀ ಸಂಪತ್ತು ಸ್ವಾರ್ಥಕ್ಕಾಗಿ ವೆಚ್ಚವಾಗುತ್ತದೆ; ದೈವೀಸಂಪತ್ತು ಪರಾರ್ಥಕ್ಕೆ ಸಲ್ಲುತ್ತದೆ. ಅಂತೆಯೇ ಶ್ರೀ ಭಗವದ್ಗೀತೆಯಲ್ಲಿ "ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ, ಎಂದು ಹೇಳಿದೆ. ಸಂಪತ್ತು ಸಮೃದ್ಧಿಸಿದಾಗ ಹುಟ್ಟಿದ ತ್ಯಾಗ ಬುದ್ಧಿಯೇ ನಿಜವಾದ ತ್ಯಾಗ ಬುದ್ಧಿಯು; ಏನೂ ಇಲ್ಲದ ದರಿದ್ರನು ತ್ಯಾಗ ಮಾಡುವನೆಂದು ಹೇಳಿದರೆ ಅದು ಕೇವಲ ನಗೆಗೇಡು. ಶ್ರೀರಾಮಚಂದ್ರನೂ ಗೌತಮಬುದ್ಧನೂ ನಿಜವಾದ ತ್ಯಾಗಬುದ್ಧಿಯುಳ್ಳವರು. ಈಗಿನ ಕಾಲದಲ್ಲಿ ಕೈ.ವಾ. ದೇಶಬಂಧು ದಾಸರೂ, ಮಹಾತ್ಮಾ ಗಾಂಧಿಯವರೂ ನಿಜವಾದ ತ್ಯಾಗವೀರರು. ನಮ್ಮ ಸಮಾಜದಲ್ಲಿ ಧರ್ಮವೀರ ಶಂಕರಣ್ಣನವರೂ ತ್ಯಾಗವೀರ ಶಿರಸಂಗಿ ಲಿಂಗರಾಜ ಪ್ರಭುಗಳೂ ತ್ಯಾಗ ಬುದ್ಧಿಯಿಂದ ಕೀರ್ತಿಶೇಷರಾಗಿ ಹೋಗಿದ್ದಾರೆ. ಲೌಕಿಕರು ಭೋಗದಲ್ಲಿ ಆನಂದಬಡುವಂತೆ ಮಹಾತ್ಮರು ತ್ಯಾಗದಲ್ಲಿ ಹರ್ಷಗೊಳ್ಳುವರು. 'ಸ್ವಾರ್ಥೋಯಸ್ಯ ಪರಾರ್ಥ ಏವ ಸ ಪುಮಾನ್ ಲೋಕೇ ಸತಾಮಗ್ರಣೀ' ಅಂದರೆ ಲೋಕದಲ್ಲಿ ಪರೋಪಕಾರವೇ ತನ್ನ ಸ್ವಾರ್ಥವೆಂದು ತಿಳಿದು ವರ್ತಿಸುವಾತನೇ ಸಜ್ಜನಶ್ರೇಷ್ಠನು 'ಅಸ್ಥಿರಂ ಜೀವಿತಂ ಲೋಕೇ ಧರ್ಮಕೀರ್ತಿದ್ವಯಂ ಸ್ಥಿರಂ' ಅಂದರೆ ನಮ್ಮ ಜೀವಿತವು ಅಸ್ಥಿರವಾದದ್ದು; ಧರ್ಮ ಮತ್ತು ಕೀರ್ತಿಯನ್ನು ನಾವು ಗಳಿಸಿದರೆ ಅದೇ ಸ್ಥಿರವಾಗಿ ಉಳಿಯುತ್ತದೆ. ಯಾರಾದರೂ ಪ್ರಪಂಚ ಪರಿತ್ಯಾಗಮಾಡಿ ಮೈಗೆ ಬೂದಿಯನ್ನು ಬಡೆದುಕೊಂಡು ಹೊರಟರೆ ಅವನಿಗೆ ಬೈರಾಗಿ ಅಥವಾ ಸನ್ಯಾಸಿಯೆಂದೆನ್ನುವರು. ಭಸ್ಮವನ್ನು ಧರಿಸುವದು ತ್ಯಾಗಬುದ್ಧಿಯ ಚಿಹ್ನೆವು. ವೀರಶೈವರಾಗಿ ದಾನಧರ್ಮ ಪರೋಪಕಾರಾದಿಗಳನ್ನು ಮಾಡಿದರೇನೇ ಅವರು ವಿಭೂತಿಧಾರಣ ಮಾಡಿದ್ದು ಸಾರ್ಥಕವು. ಇದು ಗೃಹಸ್ಥರಿಗೆ ಸಂಬಂಧಿಸಿದ ಮಾತು. ಯಾವದರ ಮೇಲೆಯೂ ಸ್ವಲ್ಪೂ ಆಶೆಯಿಲ್ಲದೆ ಸರ್ವಸಂಗ ಪರಿತ್ಯಾಗಮಾಡುವದೇ ಸನ್ಯಾಸಿಯ ಲಕ್ಷಣವು. ಸನ್ಯಾಸಿಗಳು ವಿಭೂತಿಯನ್ನು ಧರಿಸುವದೆಂದರೆ ಅಂಥ ವೈರಾಗ್ಯಸಂಪನ್ನರಾಗಬೇಕೆಂಬರ್ಥ ಹಿಂದಿನಕಾಲದ ಶಿವಶರಣರು ಗೃಹಸ್ಥರಾಗಿದ್ದರೂ ವೈರಾಗ್ಯಶಾಲಿಗಳಾಗಿ ಕಾಲಹರಣಮಾಡಿದರು. ಅವರು ತಮ್ಮ ಸಲುವಾಗಿಯಾವರೂ ನಾಳಿಗೆ ಬಂದೀತೆಂದು ಯಾವ ವಸ್ತುವನ್ನೂ ಸಂಗ್ರಹಿಸಿಡುತ್ತಿದ್ದಿಲ್ಲ. ಇಂದಿ

ನದು ನಾಳಿಗೆ ತಂಗುಳವೆಂದು ಭಾವಿಸುತ್ತಿದ್ದರು. 'ಇಂದಿಗೆಂದು ನಾಳಿಗೆಂದು ಚಿಂತಿಸಲೇಕೆ? ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ' ಎಂಬುದಾಗಿ ದೇವರ ದಾಸಿಮಯ್ಯನವರು ಹಾಡಿಕೊಂಡಿದ್ದಾರೆ. ನಮ್ಮ ಪುರಾತನರು ಧರ್ಮಕೀರ್ತಿಸಾಧನೆಗಾಗಿ ತ್ಯಾಗವನ್ನಾಚರಿಸುತ್ತಿದ್ದರು; ಅರ್ಥಾತ್ ಪರಿಶುದ್ಧಕಾಯಕದಿಂದ ಬಂದ ಹಣದಲ್ಲಿ ಗುರು ಲಿಂಗ ಜಂಗಮ ದಾಸೋಹವನ್ನು ಮಾಡಿ ಮಿಕ್ಕ ಪ್ರಸಾದವನ್ನು ತಾವು ಸೇವಿಸುತ್ತಿದ್ದರು. ಈಗಿನ ಭಕ್ತರು ಶಿವಶರಣರಂತೆ ಆಚರಿಸುವದು ವಿಹಿತ. ವಿರಕ್ತರು ಶ್ರೀ ಮುಪ್ಪಿನ ಷಡಾಕ್ಷರ ಮಹಾಸ್ವಾಮಿಗಳು ಹಾಡಿರುವ 'ಧರೆಯುಸುಖದ ಭೋಗವೆನಗೆ। ಹರಿದುಹೋಗಲಯ್ಯ ನಿಮ್ಮ। ಚರಣಕಮಲದಲ್ಲಿ ಮನವು ಮಗ್ನವಾಗಲೈ'॥ ಮತ್ತು 'ಎನಗೆ ಭೋಗಭಾಗ್ಯ ಬೇಡ ಎನಗೆ ಜಪವು ತಪವು ಬೇಡ। ಎನಗೆ ನಿಮ್ಮ ತೊತ್ತುಸೇವೆ ನಿತ್ಯವಾಗಲೈ'। ಈ ಎರಡು ಪದಗಳನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡರೆ ವಿಭೂತಿಧಾರಣಮಾಡಿದುದಕ್ಕೆ ಸಾರ್ಥಕವು. ಭಕ್ತರಲ್ಲಿ ದಾನಧರ್ಮಗುಣವೂ ಸ್ವಾಮಿಗಳಲ್ಲಿ ನಿರಾಶೆಯೂ ಹೆಚ್ಚಾದರೆ ನಮ್ಮ ವೀರಶೈವ ಸಮಾಜದೇಳ್ಗೆಗೆ ಕೊರತೆಯೇ?

'ಯದ್ಯದ್ವಿಭೂತಿ ಮತ್ಸತ್ವಂ ಶ್ರೀಮದೂರ್ಜಿತಮೇವವಾ।
ತತ್ತದೇವಾವಗಚ್ಛತ್ವಂ ಮಮ ತೇಜೋಂಶಸಂಭವಂ॥" ಎಂಬ ಗೀತಾವಾಕ್ಯದಂತೆ ಯಾವ ಯಾವ ವಸ್ತುವು ಜಗತ್ತಿನಲ್ಲಿ ಘನತೆಯನ್ನೂ ಸೌಭಾಗ್ಯವನ್ನೂ ಕೀರ್ತಿಯನ್ನೂ ಹೊಂದಿರುವದೋ ಅದೆಲ್ಲ ಸಾಕ್ಷಾತ್ ಪರಮಾತ್ಮನ ಅಂಶವೆಂದೇ ತಿಳಿಯಬೇಕು. ಮಹಾತ್ಮರಿಗೆ ವಿಭೂತಿಗಳೆಂತಲೂ ಹೆಸರು. ವಿಭೂತಿಗಳು ಪರಮಾತ್ಮನ ಅಂಶದಿಂದ ಹುಟ್ಟಿದವರೆಂದು ನಾವು ತಿಳಿಯುತ್ತೇವೆ. ಆ ವಿಭೂತಿಗಳು ಬೇಕಾದ ದೇಶದಲ್ಲಿ ಹುಟ್ಟಬಹುದು; ಬೇಕಾದ ಜಾತಿಯಲ್ಲಿ ಜನಿಸಬಹುದು. ನಾವು ವಿಭೂತಿಯನ್ನು ಧರಿಸುವದೆಂದರೆ ಆಯಾಯ ಮಹಾ ವಿಭೂತಿಗಳಲ್ಲಿರುವ ಉತ್ಕೃಷ್ಟ ಗುಣಗಳನ್ನು ಗ್ರಹಣ ಮಾಡಬೇಕೆಂಬರ್ಥ. ಶ್ರೀರಾಮ, ಕೃಷ್ಣ, ಭೀಷ್ಮ ಧ್ರುವ, ಪ್ರಲ್ಹಾದ, ಕ್ರೈಸ್ತ, ಬುದ್ಧ, ಮಹಮ್ಮದ ಪೈಗಂಬರ, ಟಾಲಸ್ಟಾಯ್, ಶ್ರೀರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಗ್ಯಾರಿಬಾಲ್ಡಿ, ಮಹಾತ್ಮಾಗಾಂಧಿ ಮೊದಲಾದ ಮಹಾ ವಿಭೂತಿಗಳ ಸದ್ಗುಣಗಳನ್ನಂಗೀಕರಿಸಿ ಅದರಂತೆ ಆಚರಿಸಿದರೆ ವಿಭೂತಿ ಧಾರಣ ಮಾಡಿದ್ದರ

ಶ್ರೇಯಸ್ಸು ನಮಗುಂಟಾಗುವದು. ಮಹಾತ್ಮರ ಹೆಜ್ಜೆ ಹಿಡಿದು ನಾವು ನಡೆದರೆ ನಾವೂ ಮಹಾತ್ಮರಾಗಬಲ್ಲೆವು. ನಮ್ಮನ್ನು ನೋಡಿ ಅನ್ಯರೂ ಬುದ್ಧಿಗಲಿಯುವರು. ಈ ವಿಷಯದಲ್ಲಿ ಲಾಂಗಫೆಲೋ ಎಂಬ ಆಂಗ್ಲ ಕವಿಯು ಹೇಳಿರುವದೇನಂದರೆ.

Lives of great men all remind us
We can make our lives sublime
And departing leave behind us
Foot prints on the sands of time.

ಮಹಾತ್ಮರ ಚರಿತ್ರಗಳು ನಾವೂ ಅದರಂತೆ ಉದಾರರಾಗಬೇಕೆಂಬದನ್ನು ನೆನಪಿಗೆ ತಂದುಕೊಡುತ್ತವೆ. ಅವರಂತೆ ನಾವು ಆಚರಿಸಿದರೆ ನಾವು ಸತ್ತಬಳಿಕ ನಮ್ಮ ಮುಂದಿನ ಪೀಳಿಗೆಯು ನಮ್ಮನ್ನು ಅನುಕರಣ ಮಾಡುವದು.

ವಿಭೂತಿಯ ಮಹತ್ವವೇನು? ಶರೀರಕ್ಕೆ ಆಭರಣಗಳನ್ನು ಧರಿಸಿಕೊಂಡರೆ ಕಾಯವು ಶೋಭಾಯಮಾನವಾಗಿ ಕಾಣುವಂತೆ ಹಣೆಗೆ ತ್ರಿಪುಂಡ್ರ ಧಾರಣ ಮಾಡಿದರೆ ಮುಖವು ಸಲಕ್ಷಣವಾಗಿಯೂ ತೇಜಃಪುಂಜವಾಗಿಯೂ ಕಾಣುವದು. ಬರೇ ಹಣೆಯಿದ್ದರೆ ಅಮಂಗಳದ ಮಟ್ಟಿಯು ಸುರಿಯುತ್ತಿರುತ್ತದೆ. ಬ್ರಾಹ್ಮಣರಿಗೆ ಅಕ್ಷತೆಯೂ ನಿಡಿನಾಮವೂ ಒಪ್ಪುವಂತೆ ವೀರಶೈವರಿಗೆ ತ್ರಿಪುಂಡ್ರ ಧಾರಣವು ಪರಿಶೋಭಿಸುತ್ತದೆ. ಕೇವಲ ಊಟಕ್ಕೆ ಕೂಡ್ರುವಾಗ ಮಾತ್ರವೇ ಬ್ರಾಹ್ಮಣರು ಅಕ್ಷಂತಿ ನಾಮಗಳನ್ನು ಧರಿಸುವಂತೆ ವೀರಶೈವರು ಧರಿಸುವದಿಲ್ಲ. ಅವರ ಮುಖದ ಮೇಲೆ ವಿಭೂತಿಯು ಮುಂಜಾನೆ ಎದ್ದಂದಿನಿಂದ ಹಿಡಿದು ರಾತ್ರಿ ಮಲಗುವ ವರೆಗೂ ವಿರಾಜಿಸುತ್ತದೆ. ಹುಟ್ಟಿದಂದಿನಿಂದ ಸಾಯುವ ವರೆಗೂ ಶೋಭಿಸುತ್ತದೆ. ಬರೇ ಚಂದವಾಗಿ ಕಾಣುತ್ತದೆಂದು ತಿಳಿದು ಹಣೆಗೆ ಭಸ್ಮ ಧಾರಣ ಮಾಡಿದರೆ ನಮ್ಮ ಕರ್ತವ್ಯವು ಪೂರೈಸಿದಂತಾಗಲಿಲ್ಲ. ನಾವು ಯಾವ ಉದ್ದಿಶ್ಯವಾಗಿ ಭಸ್ಮವನ್ನು ಧರಿಸುತ್ತೇವೆಯೋ ಆ ಉದ್ದೇಶವು ನೆರವೇರಿದಾಗಳೇ ಭಸ್ಮ ಧಾರಣವು ಸಫಲವಾದಂತಾಗುವದು. ಭಸ್ಮವನ್ನು ತಳೆಯುವದೆಂದರೆ ಕಾಮಕ್ರೋಧಾದಿ ಗುಣಗಳನ್ನು ಸುಟ್ಟು ಬೂದಿ ಮಾಡುವದು. ಕಾಮವೆಂದರೆ ಹೊನ್ನು ಹೆಣ್ಣು ಮಣ್ಣುಗಳ ಮೇಲಿನ ಆಶೆಯು. ಹೊನ್ನು ಹೆಣ್ಣು ಮಣ್ಣಿನಾಶೆಗಾಗಿ ಹಿಂದಕ್ಕೆ ಎಷ್ಟೋ ಜನರು ಹೇಳಹೆ

ಸರಿಲ್ಲದೆ ಹಾಳಾಗಿ ಹೋಗಿರುವರು; ಈಗ್ಯೂ ಹಾಳಾಗುತ್ತಲಿದಾರೆ, ಇನ್ನು ಮುಂದಾದರೂ ಹಾಳಾಗುವರು. ಇವುಗಳಿಗಾಗಿ ಕೊಲೆಸುಲಿಗೆಗಳೂ, ಯುದ್ಧಗಳೂ, ಅವಿಶ್ರಾಂತಿಯೂ ಹೆಚ್ಚುತ್ತವೆ ತನ್ನಿಂದ ಹುಟ್ಟಿದ ಕ್ರೋಧಾಗ್ನಿಯು ತನ್ನನ್ನೇ ಸುಡುವದಲ್ಲದೆ ಅನ್ಯರನ್ನು ನಾಶಗೊಳಿಸಲಾರದು. ಆಶೆಯೇ ದಾಸತ್ವ; ನಿರಾಶೆಯೇ ಪ್ರಭುತ್ವ ಯಾವದಾದರೊಂದು ವಸ್ತುವಿನ ಮೇಲೆ ನಮಗೆ ಆಶೆಯುಂಟಾದರೆ ನಾವು ಆ ವಸ್ತುವಿನ ಸಂಪಾದನೆಗಾಗಿ ಅದರ ದಾಸಾನುದಾಸರಾಗಬೇಕಾಗುತ್ತದೆ ಮೋಹವು ಅಜ್ಞಾನದ ಕುರುಹು. ಯಾವದಾದರೊಂದು ವಸ್ತುವಿನ ಮೇಲೆ ನಮಗೆ ಮೋಹ ಉಂಟಾದರೆ ಆ ವಸ್ತುವು ನಷ್ಟವಾದ ಬಳಿಕ ನಾವು ದುಃಖಾಂಧಕಾರದಲ್ಲಿ ಮುಳುಗುತ್ತೇವೆ. ಮನುಷ್ಯನಿಗೆ ತನ್ನ ಸೊಕ್ಕು ತನಗೇ ಮುಳುವಾಗುತ್ತದೆ. ಗುರುಹಿರಿಯರನ್ನೂ ಬಂಧುಬಳಗದವರನ್ನೂ ಲೆಕ್ಕಿಸದೆ ಸ್ವೇಚ್ಛೆಯಿಂದ ನಡೆಯುವವನು ಆಪತ್ತು ಬಂದಾಗ ತನಗೆ ಯಾರೂ ನೆರವಾಗದಿದ್ದರೆ ಆ ಮೇಲೆ ಆತನಿಗೆ ಪಶ್ಚಾತ್ತಾಪವಾಗುತ್ತದೆ ಅನ್ಯರ ಏಳ್ಗೆಯನ್ನು ನೋಡಿ ಸಹಿಸದೆ ನಾವು ಹೊಟ್ಟೆಕಿಚ್ಚು ಬಡುವದರಿಂದ ನಮ್ಮಲ್ಲಿ ತಾಪವು ಹೆಚ್ಚಿ ನಮ್ಮನ್ನೇ ವ್ಯಥೆಪಡಿಸುವದು ಈ ಪ್ರಕಾರ ಕಾಮ, ಕ್ರೋಧ, ಮದ, ಮೋಹ, ಲೋಭ, ಮತ್ಸರಗಳು ನಮಗೆ ಪ್ರಬಲವಾದ ವೈರಿಗಳಾಗಿ ಗಂಟು ಬಿದ್ದಿರುವವು. ಇವು ನೈಸರ್ಗಿಕ ಗುಣಗಳಾಗಿರುವದರಿಂದ ಇವುಗಳನ್ನು ನಾಶಮಾಡುವದು ಯಾರಿಂದಲೂ ಶಕ್ಯವಿಲ್ಲ. ಇವುಗಳನ್ನಳಿಯುವದೆಂದರೆ ಇವುಗಳ ದುಷ್ಟಪ್ರವೃತ್ತಿಯನ್ನು ತೆಗೆದು ಹಾಕಿ ಒಳ್ಳೆಯದರ ಕಡೆಗೆ ತಿರುಗಿಸುವದು. ಈ ವಿಷಯದಲ್ಲಿ ಶ್ರೀ ಚನ್ನಬಸವಣ್ಣನವರು ಅಪ್ಪಣೆ ಕೊಡಿಸಿರುವದೇನಂದರೆ "ಶಿವಭಕ್ತಿಯುಳ್ಳವಂಗೆ ಕಾಮ ಬೇಕು, ಕ್ರೋಧ ಬೇಕು, ಲೋಭ ಬೇಕು, ಮದ ಬೇಕು, ಮತ್ಸರ ಬೇಕು; ಶಿವಭಕ್ತಿಯುಳ್ಳವಂಗೆ ಕಾಮ ಬೇಡ ಕ್ರೋಧ ಬೇಡ, ಲೋಭ ಬೇಡ, ಮೋಹಬೇಡ, ಮದ ಬೇಡ, ಮತ್ಸರ ಬೇಡ. ಬೇಕೆಂಬುವದಕ್ಕಾವ ಗುಣ? ಬೇಡವೆಂಬುವದಕ್ಕಾವ ಗುಣ? ಕಾಮಬೇಕು ಅಂಗದಲ್ಲಿ; ಕ್ರೋಧಬೇಕು ಕರಣಂಗಳಲ್ಲಿ, ಲೋಭಬೇಕು ಪಾದೋದಕ ಪ್ರಸಾದದಲ್ಲಿ, ಮೋಹಬೇಕು ಗುರುಲಿಂಗ ಜಂಗಮದಲ್ಲಿ; ಮದಬೇಕು ಶಿವಾಚಾರದಿಂ ಘನವಿಲ್ಲವೆಂದು; ಮತ್ಸರ ಬೇಕು ಹೊನ್ನು ಹೆಣ್ಣು ಮಣ್ಣಿನಲ್ಲಿ; ಇಂತೀ ಷಡ್ಗುಣವಿರಬೇಕು. ಬೇಡವೆಂಬುವದಕ್ಕಾವ ಗುಣ? ಕಾಮ ಬೇಡ ಪರಸ್ತ್ರೀಯರಲ್ಲಿ; ಕ್ರೋಧ ಬೇಡ ಗುರುವಿನಲ್ಲಿ; ಲೋಭ ಬೇಡ ತನು

ಮಾನ ಧನದಲ್ಲಿ; ಮೋಹ ಬೇಡ ಸಂಸಾರದಲ್ಲಿ; ಮದ ಬೇಡ ಶಿವ ಭಕ್ತರಲ್ಲಿ; ಮತ್ಸರ ಬೇಡ ಸಕಲ ಪ್ರಾಣಿಗಳಲ್ಲಿ; ಇಂತೀ ಷಡ್ಗುಣವ ನರಿದು ನಡೆಯ ಬಲ್ಲೊಡೆ ಆತನೇ ಸಹಜ ಭಕ್ತ ಕಾಣಾ ಕೂಡಲ ಚನ್ನಸಂಗಮ ದೇವಾ" ಬಸವಪ್ಪ ಶಾಸ್ತ್ರಿಯು ಬರೆದ ಕನ್ನಡ ಶಾಕುಂತಲ ನಾಟಕದಲ್ಲಿ ಅರಿ ಷಡ್ವರ್ಗಗಳ ಪ್ರವೃತ್ತಿಯನ್ನು ಲೌಕಿಕರು ಒಳ್ಳೆಯದರ ಕಡೆಗೆ ಹೇಗೆ ತಿರುಗಿಸಬೇಕೆಂಬ ವಿಷಯದಲ್ಲಿ ಹೇಳಿರುವದೇನಂದರೆ—
"ಕಾಮ ನಿಜ ದಾರದೊಳು। ಕ್ರೋಧ ಸ್ತೋಮ ದುರ್ಮಾರ್ಗದೊಳು। ಲೋಭದ ಸೀಮೆ ಪುಣ್ಯಂಗಳೊಳು। ಮೋಹವು ಸಾಧು ಜನರೊಡನೆ। ಆ ಮಹಾ ಮದ ಗರ್ವಿತರೊಳು."

ವೀರಶೈವತ್ವಕ್ಕೆ ಮಂಗಲಸ್ವರೂಪವೂ, ಅರಿಷಡ್ವರ್ಗದ ವಿನಾಶಕಾರಿಯೂ, ತ್ಯಾಗಬುದ್ಧಿಯ ತವರುಮನೆಯೂ, ವಿಭೂತಿಗಳ ಗುಣರತ್ನ ಪ್ರದಾಯಿನಿಯೂ, ಆತ್ಮಯಜ್ಞದ ದ್ಯೋತಕವೂ ಆದ ವಿಭೂತಿಯ ಮಹಿಮೆಯು ಸಾಮಾನ್ಯವೇ? ಊದಿನ ಕಡ್ಡಿಯು ತನ್ನನ್ನು ತಾನು ಸುಟ್ಟುಕೊಂಡು ಬೂದಿಯಾಗಿ ಪರರಿಗೆ ಸುಗಂಧವನ್ನು ಬೀರುವದು. ಬೂದಿಯಾಗುವದು ಆತ್ಮ ಯಜ್ಞದ ಕುರುಹು. ಆ ಪವಿತ್ರವಾದ ಭಸ್ಮವನ್ನು ಧರಿಸುವ ವೀರಶೈವರು ಸಕಲ ಚರಾಚರ ವಸ್ತುಗಳ ಹಿತಾರ್ಥವಾಗಿ ಆತ್ಮಯಜ್ಞವನ್ನು ಮಾಡುವದೇ ಪರಮ ಶ್ರೇಯಸ್ಕರವಾದ ಕರ್ತವ್ಯವೆಂಬದನ್ನು ಎಂದಿಗೂ ಮರೆಯಬಾರದು. ಇವೆಲ್ಲ ಕಾರ್ಯಗಳು ಆಚರಣೆಯಲ್ಲಿ ಬಂದಾಗಳೇ ಭಸ್ಮಧರಿಸಿದ್ದಕ್ಕೆ ಸಾರ್ಥಕವು. ಕೇವಲ ಆಡಂಬರಕ್ಕಾಗಲಿ ಶೋಭೆಗಾಗಲಿ, ಅಂಧಶ್ರದ್ಧೆಯಿಂದಾಗಲಿ, ಥಾಳವಾಗಿ ವಿಭೂತಿಪಟ್ಟವನ್ನು ಬಡೆದುಕೊಂಡರೆ ಅದರಲ್ಲೇನೂ ಮಹತ್ವ ಉಳಿಯುವದಿಲ್ಲ.

ವಿಭೂತಿಯನ್ನೆಲ್ಲಿ ಧರಿಸಬೇಕು? ಶಾಸ್ತ್ರರೀತಿಯಿಂದ ವಿಚಾರಿಸಲಾಗಿ ಅಂಗುಷ್ಠದಿಂದ ಮಸ್ತಕದ ವರೆಗೂ ಸರ್ವಾಂಗವನ್ನು ಭಸ್ಮದಿಂದ ಸ್ನಾನಮಾಡಿಸಬೇಕೆಂದು ಹೇಳುವರು. ಆದರೆ ಜನರು ಸಾಧಾರಣವಾಗಿ ಹಣೆಗೂ, ಕೊರಳಿಗೂ, ತೋಳುಗಳಿಗೂ ಭಸ್ಮವನ್ನು ತೊಡೆದುಕೊಂಡು ನಂತರ ಲಿಂಗಕ್ಕೆ ಧರಿಸುವ ಪರಿಪಾಠ ಉಂಟು. ಮೊದಲು ಲಿಂಗಕ್ಕೆ ವಿಭೂತಿಯನ್ನು ಧರಿಸಿ ನಂತರ ತನ್ನ ಅಂಗಕ್ಕೆ ವಿಭೂತಿಯನ್ನು ಪೂಸಿಕೊಳ್ಳಲಾಗದು. ಮೊದಲು ತಾನು ಪರಿಶುದ್ಧನಾಗಿ ದೇವರ ಪೂಜೆಮಾಡುವದು ನೆಟ್ಟಗಲ್ಲವೇ? ತಾನು ಮೊದಲು ಉಂಡು ಹಿಂದುಗಡೆ ದೇವರಿಗೆ ನೈವೇದ್ಯ ಹಿಡಿಯಬಹುದೇ? ಅಂತೆಯೇ ರುದ್ರನಾಗಿ ರುದ್ರನ ಪೂಜೆ

ಮಾಡಬೇಕೆನ್ನುವರು. ರುದ್ರನಾಗಬೇಕೆಂದರೆ ಮೊದಲು ಭಸ್ಮೋದ್ಧೂಲಿತ ವಿಗ್ರಹನಾಗಬೇಕು. ನಮ್ಮ ಪೂರ್ವಜರು ಮೈಗೆಲ್ಲ ಭಸ್ಮವನ್ನು ಲೇಪಿಸಿ ಕೊಳ್ಳುತ್ತಿದ್ದುದರ ರಹಸ್ಯವೇನು? ಈಗಿನವರಂತೆ ನಮ್ಮ ಹಿರಿಯರು ಮೈತುಂಬ ಬಟ್ಟೆಗಳನ್ನು ಧರಿಸಿಕೊಂಡು ಗಾದಿ ತಕ್ಕೆ ಪಲ್ಲಂಗ ಶಾಲು ಮೊದಲಾದವುಗಳನ್ನುಪಯೋಗಿಸುತ್ತಿದ್ದಿಲ್ಲವೆಂಬಂತೆ ತೋರುತ್ತದೆ. ಅವರು ಋಷಿಗಳಂತೆ ಪರ್ಣಕುಟೀರಗಳಲ್ಲಿ ವಾಸವಾಗಿದ್ದುಕೊಂಡು ಜಟಾವಲ್ಕಲ ಧಾರಿಗಳಾಗಿ ಸನ್ಯಾಸವೃತ್ತಿಯಿಂದ ಜೀವಿಸುತ್ತಿರಬಹುದು. ಅಂತೆಯೇ ಅವರು ತಮಗೆ ಚಳಿಯ ಬಾಧೆ ತಟ್ಟಬಾರದೆಂದು ಮೈತುಂಬ ಭಸ್ಮವನ್ನೂ ತಳೆದುಕೊಳ್ಳುತ್ತಿರಬಹುದು. ಅದೇ ಭಸ್ಮದಲ್ಲಿಯೇ ಅವರು ಪವಿತ್ರವಾದ ಭಾವನೆಯನ್ನು ಕಲ್ಪಿಸಿ ಶುದ್ಧಿಮಾಡಿ ವಿಭೂತಿಯೆಂಬ ಹೆಸರಿನಿಂದ ಕರೆಯಹತ್ತಿದರು. ಅವರು ಗೋವುಗಳನ್ನು ಹೆಚ್ಚಾಗಿ ಸಾಕುತ್ತಿದ್ದಂತೆ ತೋರುತ್ತದೆ. ಅಂತೆಯೇ ಗೋಮಯದ ಕುಳ್ಳುಗಳಿಂದ ಬೆಂಕಿಯನ್ನು ಮಾಡಿ ಅದರ ಭಸ್ಮವನ್ನೇ ಮೈಗೆ ಹಚ್ಚಿಕೊಂಡು ಚಳಿಯ ಬಾಧೆಯನ್ನು ತಪ್ಪಿಸಿ ಕೊಳ್ಳುತ್ತಿದರು. ಆದುದರಿಂದ ಈಗ್ಯೂ ಸಹ ಗೋಮಯದ ಬೂದಿಯನ್ನೇ ಭಸ್ಮಕ್ಕಾಗಿ ಉಪಯೋಗಿಸಬೇಕೆಂದು ಹೇಳುವರು. ಆದರೆ ವೀರಶೈವ ಧರ್ಮವು ಸಮಾಜಸ್ವರೂಪವನ್ನು ಹೊಂದಿದ ಬಳಿಕ ಮೈಯೊಳಗಿನ ಉಷ್ಣತೆಯನ್ನು ಕಾಯ್ದುಕೊಳ್ಳಲಿಕ್ಕೆ ಬೇಕಾದಷ್ಟು ಸೌಕರ್ಯಗಳುಂಟಾಗಿದ್ದರೂ ಪೂರ್ವಜರ ಪವಿತ್ರವಾದ ರೂಢಾಚಾರವು ಇನ್ನೂ ಬಳಕೆಯಲ್ಲಿದೆ. ತಣ್ಣೀರು ಸ್ನಾನ ಮಾಡುವದರಿಂದ ಮೈಯೆಲ್ಲ ತಂಪಾದಂತಾಗಿ ಉಷ್ಣತೆಯು ಕಡಿಮೆಯಾಗುವದು. ಆಗ್ಗೆ ಮೈತುಂಬ ಭಸ್ಮವನ್ನು ಲೇಪಿಸಿಕೊಂಡರೆ ಒಳಗಿನ ಉಷ್ಣತೆಯು ಹೊರಗೆ ಹೋಗುವದಿಲ್ಲ. ಆರೋಗ್ಯ ದೃಷ್ಟಿಯಿಂದ ಭಸ್ಮಧರಿಸುವದು ಹಿತಕರವಾದಂತೆ ಆಧ್ಯಾತ್ಮಿಕ ದೃಷ್ಟಿಯಿಂದಲೂ ಫಲಪ್ರದವು. ಪಾತ್ರೆಗೆ ಭಸ್ಮವನ್ನು ತಿಕ್ಕಿದರೆ ಅದು ಲಕಲಕ ಹೊಳೆದು ಸ್ವಚ್ಛವಾಗುವಂತೆ ತನುವಿಗೆ ಭಸ್ಮವನ್ನು ತೊಡೆಯಲು ಅದು ಪರಿಶುದ್ಧವಾಗಿ ಕಂಗೊಳಿಸುವದು. ತನು ಶುದ್ಧವಾದರೆ ಮನಭಾವಗಳು ಕ್ರಮೇಣ ಪವಿತ್ರವಾಗತೊಡಗುವವು. ಭಸ್ಮವನ್ನು ತಳೆದ ಮೇಲೆ ಕಾಮಕ್ರೋಧಾದಿಗಳಿಗೊಳಗಾಗಬಾರದೆಂಬ ಭಾವನೆಯಿಂದ ಮನಸ್ಸು ಪವಿತ್ರವಾಗುವದು. ವಿಭೂತಿಯನ್ನು ಧರಿಸಿ ತಾನು ವಿಭೂತಿಯಾಗಿ ಮಹಾ ವಿಭೂತಿಯಾದ ಪರಮಾತ್ಮನಾಗಬೇಕೆಂಬ ಉದ್ದೇಶದಿಂದ ಭಾವನೆಯು ಪರಿಶುದ್ಧವಾಗುವದು.

ಬೂದಿಯಲ್ಲಿ ಏನೋ ಒಂದು ವಿಚಿತ್ರವಾದ ಶಕ್ತಿಯಿದ್ದಂತೆ ತೋರುತ್ತದೆ. ಕೆಲವರು ಬೂದಿಯಿಂದ ಬೇತಾಳವನ್ನು ಬಿಡಿಸುವರು. ಬೂದಿಯನ್ನು ಮಂತ್ರಿಸಿಕೊಟ್ಟು ರೋಗಾದಿಗಳನ್ನೂ ಬೇನೆ ಬೇಸರಿಕೆಗಳನ್ನೂ ಕಳೆಯುವರು. ಮನೆಯೊಳಗೆ ಚಿಕ್ಕಮಕ್ಕಳು ಹಟಮಾಡಿ ಅತ್ತರೆ ತಾಯಿ ತಂದೆಗಳು ಒಲೆಯೊಳಗಿನ ಬೂದಿಯನ್ನು ಹುಡುಗರ ಮೋರೆಯ ಮೇಲೆ ನಿವಾಳಿಸಿ ಹೊರಗೆ ಚಲ್ಲುವರು. ವೈದ್ಯರು ಧಾತುಗಳಿಂದಲೂ ವನಸ್ಪತಿಗಳಿಂದಲೂ ಭಸ್ಮವನ್ನೂ ಕ್ಷಾರವನ್ನೂ ಸಿದ್ಧಗೊಳಿಸಿ ಅದನ್ನು ರೋಗಾದಿಗಳ ನಿವಾರಣಾರ್ಥವಾಗಿ ಉಪಯೋಗಿಸುವರು. ಗುಡಿಗುಂಡಾರದೊಳಗೆ ಧೂಪಾರ್ತಿಯಲ್ಲಿದ್ದ ಬೂದಿಯನ್ನೇ ಅಂಗಾರವೆಂಬ ಪೂಜ್ಯ ಭಾವನೆಯಿಂದ ತೆಗೆದುಕೊಂಡುಹೋಗಿ ಮನಸ್ಸಿನಲ್ಲಿ ಒಂದು ತರದ ಪ್ರಸನ್ನತೆಯನ್ನುಂಟುಮಾಡಿಕೊಳ್ಳುವರು. ರೋಗಿಯ ಕೈಕಾಲುಗಳು ತಣ್ಣಗಾಗಿ ಮನೆಯವರೆಲ್ಲರೂ ಗಾಬರಿಗೊಳ್ಳಲು ಅಂಗಾಲಿಗೆ ಮತ್ತು ಅಂಗೈಗಳಿಗೆ ಬೂದಿಯನ್ನು ತಿಕ್ಕಲಾಗಿ ಉಷ್ಣತೆಯು ಹುಟ್ಟುವದು. ಬೂದಿಯ ಸಹಾಯದಿಂದ ಮಂತ್ರತಂತ್ರಗಾರರು ಮಾಟ ಮೊದಲಾದ ಆಟಗಳನ್ನು ಹೂಡುವರು. ಅದೇ ಬೂದಿಯನ್ನೇ ವೀರಶೈವರು ಭಸ್ಮವನ್ನಾಗಿ ಮಾಡಿಕೊಂಡು ತಮ್ಮ ಇಷ್ಟಾರ್ಥವನ್ನು ಪಡೆಯುಕೊಳ್ಳುವರು. ಆದರೆ ನಿಜವಾಗಿ ವಿಚಾರಮಾಡಲಾಗಿ ವಿಭೂತಿಯು ಬೂದಿಯೇ ಅಹುದು. ಅದರಲ್ಲೇನೂ ಅಂಥ ಸಾಮರ್ಥ್ಯವು ಇಲ್ಲವೇ ಇಲ್ಲ. ಆದರೆ ಭಿನ್ನ ಭಿನ್ನ ಜನರು ಭಿನ್ನ ಭಿನ್ನ ಭಾವನೆಯಿಂದ ಅದರಲ್ಲಿ ಶ್ರದ್ಧೆಯನ್ನಿಟ್ಟು ತಮ್ಮ ಇಷ್ಟದಂತೆ ಉಪಯೋಗಿಸಿಕೊಳ್ಳುತ್ತಿರುವದರಿಂದ ಅವರಲ್ಲಿ ಅಂಥ ಶಕ್ತಿಯು ಬರುತ್ತದೆಂಬ ಮಾತು ಸತ್ಯವು. ಭಾವನೆಯಲ್ಲಿಯೇ ಸತ್ವವಿರುತ್ತದೆ. ಆದರೆ ಇದರ ನಿಜವನ್ನು ನಾವು ಅರಿಯದೆ ಅದನ್ನು ಆ ವಸ್ತುವಿನ ಮೇಲೆ ಆರೋಪಮಾಡಲಿಕ್ಕೆ ಹೋಗುತ್ತೇವೆ. ವಸ್ತುವಿನಲ್ಲಿ ಅಲ್ಪಸ್ವಲ್ಪ ಶಕ್ತಿಯಿದ್ದರೂ ಅದರ ಎಷ್ಟೋ ಪಟ್ಟು ಸಾಮರ್ಥ್ಯವು ಭಾವನೆಯಲ್ಲಿರುತ್ತದೆ. ಎಂಥ ಔಷಧದಿಂದಲೂ ಗುಣವಾಗದ ಕೆಲವು ರೋಗಗಳು ಕೇವಲ ಭಾವನೆಯಿಂದ ಗುಣವಾದ ಉದಾಹರಣೆಗಳೆಷ್ಟೋ ಉಂಟು.

ಭಸ್ಮವನ್ನು ಹೇಗೆ ಸಿದ್ಧಗೊಳಿಸುವರು ಮತ್ತು ಅದನ್ನು ಹೇಗೆ ಶುದ್ಧಮಾಡುವರು? ಕೆಲವರು ಕಟ್ಟಿಗೆಯ ಬೂದಿ ಸುಣ್ಣ ಕಟಗ ಮುಂತಾದ ದ್ರವ್ಯಗಳಿಗೆ ಹದಹಾಕಿ ಭಸ್ಮದ ಘಟ್ಟಿಗಳನ್ನು ಸಿದ್ಧಗೊಳಿಸುವರು. ಇದು ತಪ್ಪುದಾರಿಯು. ಇಂಥ ವಸ್ತುಗಳಲ್ಲ ಮೊದಲಿಗೇನೇ ನಮ್ಮಲ್ಲಿ ಪೂಜ್ಯಭಾವ

ನೆಯಿರುವದಿಲ್ಲವಾದ್ದರಿಂದ ಇವುಗಳಿಂದ ಸಿದ್ಧವಾದ ಘಟ್ಟಿಗಳಲ್ಲಿ ಭಾವನೆಯುನ್ನು ಕಲ್ಪಿಸಿಕೊಳ್ಳುವದು ಕಷ್ಟಸಾಧ್ಯವು. ಕಣ್ಣುಕಾಣದೆ ಯಾವದೇಯಾಕಾಗಲೊಲ್ಲದು. ಭಕ್ತಿಯಿಂದ ಧರಿಸುವದೇ ದೊಡ್ಡದು ಎಂದು ತಿಳಿದದ್ದಾದರೆ ಅಜ್ಞಾನಮಿಶ್ರಿತವಾದ ಈ ಶ್ರದ್ಧೆಯು ಒಳಿತಲ್ಲ. ತಿಳಿಯದೆ ಮಾಡುವದಕ್ಕಿಂತಲೂ ತಿಳಿದು ಮಾಡುವದರಲ್ಲಿ ಹೆಚ್ಚು ಶ್ರೇಯಸ್ಸಿರುತ್ತದೆ. ಗೋವುಗಳೆಲ್ಲ ಭಾರತೀಯರಿಗೂ ಅತ್ಯಂತ ಪೂಜ್ಯವಾದವುಗಳಷ್ಟೇ. ಗೋಮೂತ್ರ ಗೋಮಯಗಳು ಸಹ ಪವಿತ್ರವಾದವುಗಳೆಂದೇ ಎಣಿಸಲ್ಪಡುವವು. ಗೋಮೂತ್ರವು ಅಭಿಷೇಕಕ್ಕೆ ಬರುತ್ತದೆ; ಗೋಮಯದಿಂದ ಸಾರಿಸಿದ ಭೂಮಿಯು ಪವಿತ್ರಮಯವಾಗಿರುತ್ತದೆ. ಇಂಥ ಪವಿತ್ರವಾದ ಗೋಮಯದಿಂದ ಕುಳ್ಳುಗಳನ್ನು ಸಿದ್ಧಗೊಳಿಸಿ ಅವುಗಳ ಬೂದಿಯನ್ನು ಹದಗೊಳಿಸಿ ಶುಭ್ರವಾದ ಗಟ್ಟಿಗಳನ್ನು ಮಾಡಬೇಕು. ಗೋವಿನಮೇಲಿರುವಷ್ಟೇ ಪೂಜ್ಯಬುದ್ಧಿಯು ಗೋಮಯದಿಂದ ಸಿದ್ಧವಾದ ವಿಭೂತಿಯ ಗಟ್ಟಿಗಳಲ್ಲಿಯೂ ಹುಟ್ಟುವದು. ಅದು ಕಾರಣ ಪ್ರತಿಯೊಬ್ಬ ವೀರಶೈವರು ಭಸ್ಮವನ್ನು ಸಂಗ್ರಹಿಸಿಟ್ಟುಕೊಂಡಿರುವಂತೆ ಭಸ್ಮಕ್ಕೆ ಮೂಲಾಧಾರವಾದ ಗೋವುಗಳನ್ನೂ ಸಾಕಬೇಕೆಂಬದನ್ನು ಬೇರೆ ಹೇಳಬೇಕಾಗಿಲ್ಲ. ಭಸ್ಮಧಾರಿಗಳಾದವರೆಲ್ಲರು ಗೋರಕ್ಷಕರಾಗಿರಲೇಬೇಕು ಆಹಾರವನ್ನೂ ಬಟ್ಟೆಯನ್ನೂ ಮನೆಯಲ್ಲಿಯೇ ಸಿದ್ಧಪಡಿಸಿಕೊಳ್ಳುವದು ಪ್ರಾಪಂಚಿಕ ದೃಷ್ಟಿಯಿಂದ ಎಷ್ಟು ಹಿತಕರವೋ ಅಷ್ಟೇ ಭಸ್ಮವನ್ನು ಮನೆಯಲ್ಲಿಯೇ ಮಾಡಿಟ್ಟುಕೊಳ್ಳುವದಕ್ಕೆ ಗೋವುಗಳನ್ನು ಸಾಕುವದು ಆಧ್ಯಾತ್ಮಿಕ ದೃಷ್ಟಿಯಿಂದ ಕ್ಷೇಮಕರವಾಗಿದೆ. ತಾನು ಮಾಡಿದ ಭಸ್ಮಕ್ಕಿಂತಲೂ ಕೊಂಡುತಂದ ಭಸ್ಮದಲ್ಲಿ ಹೆಚ್ಚಿಗೆ ಭಕ್ತಿಯು ಹುಟ್ಟಲಾರದು; ಮತ್ತು ಅದು ಅಷ್ಟು ಪವಿತ್ರವೂ ಆಗಲಾರದು. ಪವಿತ್ರವಾದ ವಸ್ತುಗಳನ್ನು ಕ್ರಯಕ್ಕೆ ಹಚ್ಚುವದು ಲಾಂಛನಾಸ್ಪದವು. ಅದನ್ನು ಆಶೀರ್ವಾದವಮಾಡುವದರಲ್ಲಿ ಹೆಚ್ಚು ಶ್ರೇಯಸ್ಸಿರುತ್ತದೆ. ಆದುದರಿಂದ ಪೀಠಕ, ಶಿವದಾರ, ವಿಭೂತಿ ಮುಂತಾದ ಅಮೌಲ್ಯ ವಸ್ತುಗಳಿಗೆ ಬೆಲೆ ಕಟ್ಟಲಿಕ್ಕೆ ಹೋಗಬಾರದು. ೧ ಬಿಲ್ಲಿಯ ವಿಭೂತಿಗಿಂತಲೂ ೧ ರೂಪಾಯಿಯ ವಿಭೂತಿಯು ನೆಟ್ಟಗೆಂದು ತಿಳಿದರೆ ವಿಭೂತಿಯಲ್ಲಿ ಭೇದವನ್ನೆಣಿಸಿದಂತಾಗುವದು; ವ್ಯಾಪಾರೀ ಭಕ್ತಿಯುಳ್ಳವರಲ್ಲಿ ಪವಿತ್ರ ಭಾವನೆ ಎಂದಿಗೂ ಉಳಿಯುವದಿಲ್ಲ. ವೀರಶೈವ ಧರ್ಮವು ಪವಿತ್ರವೆಂದು ನಂಬುವ ಪದಾರ್ಥಗಳೆಲ್ಲವೂ ಪೂಜ್ಯರಿಂದ ಆಶೀರ್ವಾದ ರೂಪವಾಗಿಯೇ ಸಲ್ಲಬೇಕು.

---

# ಒಂದು ಹಾಡು!

ತನುವು ಶರಪುಂಜದಲಿ,
ಮನವು ದಿವಕಂಜದಲಿ,
ಹರಿಯುತಿದೆ! ಹರಿಯುತಿದೆ!! ಬಿದ್ದು, ಎದ್ದು!
ಬುದ್ಧಿಯುರಿಪಂಜಿನಲಿ,
ಭಾವವಹ! ಮಂಜಿನಲಿ,
ಬೀಳುತಿದೆ! ಸೀಳುತಿದೆ!! ತೊಳಲಿ, ಬಳಲಿ!
ಧ್ವನಿಯು ಒಳ್ಮಾಲೆಯಲಿ,
ನುಡಿಯು ಮುಳ್ಬೇಲಿಯಲಿ,
ತಂಟುತಿದೆ! ಕುಂಟುತಿದೆ!! ತಡೆದು, ಕೆಡೆದು!
ಈ ಧ್ವಾಂತಪೂರ್ಣೆಯಲಿ,
ಕಣ್ಕೆಟ್ಟ ಪೇರ್ಮೆಯಲಿ
ನಿಂತ ಜ್ಞಾನವು ಹಳಚದೊಂದೆಮೆಯನು!
ಆಸೆಗಳು ಹರಿಯುತಿವೆ!
ಅವತೆಗಳು ತರಿಯುತಿವೆ!
ಒಂದೊಂದಕೂ ತಾಳಮೇಳವಿಲ್ಲ!
ಬಸಿರು ನವಶಕ್ತಿಗಿದೊ,
ಬಗೆಯು ಹೊಂಗನಸಿಗದೊ,
ಬಾಯ್ಬಿಸ್ಫುರಿಸುತಿಹವು! ವ್ಯರ್ಥ! ವ್ಯರ್ಥ!!
ಸಾನುಭೂತಿಯು ಬಂದು
ಸಹಾಯ ಪೂರ್ತಿಗೆ ಸಂದು
ಮೆರೆಯುದಲೆ ಬಾಯೊಳೇ ಗೊಣಗುತಿಹುದು!
ಮುಗಿಲ ಚಂದಿರನೆಡೆಗೆ
ಕಲ್ಪನೆಯು ಎದ್ದಿಹುದು!
ಪಾತಾಳದಾಳದೆಡೆ
ಚೇತನವು ಬಿದ್ದಿಹುದು!
ಹಾ! ನಿರಾಶೆಯು ನಡುವೆ ನಿಂತಿರುವದು!
ನೃತ್ಯವೆಸಗುತ ಮೃತ್ಯು ಮುಂತಿರುವದು!!

# ಕೋಮಲತೆ.

೧

ವಿಶ್ವದೆಳೆತನದೊಳಗೆ
ಮುಗುಳುನಗೆ ಮೊಗದೊಳಗೆ
ನಲಿದ ಕೋಮಲತೆ, ಈಗಿರುವದೆಲ್ಲಿ?
ನಿನ್ನ ಕೈಸೋಂಕಿನಲಿ
ಮುಳ್ಳುಗಳ ಕೊಂಕಿನಲಿ
ಸೊಬಗೊಂದು ಚಿಗಿದು ಒಗೆಸೆಳೆವುದಲ್ಲೇ?

೨

ಎಳೆತನವು ಮರೆಯಾಗಿ
ಬೆಳವಣಿಗೆ ಹೊರೆಯಾಗೆ,
ಮೆಲ್ಲನೇ ಕಾಲ್ದೆಗೆಯುತೆನ್ನ ತೊರೆದೆ!
ಎಳೆತನವಿ ನಿನ ಕಂಡ
ಬಗೆಯಿಂದು ಬಲು ಬೆಂಡು!
ಬಾಳುವೆಯು ಸೊಬಗೆಲ್ಲ ಬರಿದು! ಬರಿದು!!

೩

ನೀನಿಲ್ಲದಲೆ ತಾಯೆ,
ಬೆಳೆದ ಜಗವಿದೊಬಾಯ
ಬಿಡುತಲಿದೆ! ಮತ್ತದಕೆ ನಗೆಯೂಡಿಸು!
ನಿನ್ನ ರಸದೊಳಗದ್ದಿ
ಜಗದ ಬಗೆಗಳ, ತಿದ್ದಿ,
ಮರಳಿ ನಿಜಸುಖದ ಸೊಬಗನು ಮೂಡಿಸು

ಶಿವಾನುಭವ ಗ್ರಂಥಮಾಲಾ ನಂ॥ ೪೦

# ಅಂಬಿಗರ ಚೌಡಯ್ಯನ

## ವಚನಗಳು.



ಸಂಪಾದಕರು

ರಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಏ. ಎಲ್. ಎಲ್. ಬಿ. ವಕೀಲ.

ವಿಜಾಪುರ.



ಬೆಲೆ ೧೪ ಆಣೆ.

# ಪ್ರಸ್ತಾವನೆ.



ಅಂಬಿಗರ ಚೌಡಯ್ಯನ ಈ ವಚನಗ್ರಂಥವನ್ನು ನಾವು ಬೇರೆ ಬೇರೆ ವಚನ ಸಂಗ್ರಹಗಳಲ್ಲಿ ದೊರೆದ ವಚನಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಸಿದ್ಧಿಸಿದ್ದೇವೆ. ಈತನ ಸಮಗ್ರ ವಚನಗಳು ಒತ್ತಟ್ಟಿಗೆ ಎಲ್ಲಿಯೂ ಯುವದಿಲ್ಲ. ಅಂಬಿಗರ ಚೌಡಯ್ಯನ ವಚನಗಳೆಂದು ಅಚ್ಚುಹಾಕಿದ ಒಂದು ಪ್ರತಿಯು ಈಗ ದೊರೆಯುತ್ತಿದೆ. ಆದರೆ ಅದರಲ್ಲಿ ಕೆಲವು ವಚನಗಳು ಮಾತ್ರ ಈತನವು ಇದ್ದು ಉಳಿದವುಗಳೆಲ್ಲ ಬೇರೆ ಬೇರೆ ವಚನಕಾರರ ವಚನಗಳಿವೆ.

ನಮಗೆ ದೊರೆದ ವಚನಗಳನ್ನು ನಾವು ಶಕ್ಯವಿದ್ದಷ್ಟರ ಮಟ್ಟಿಗೆ ವಿಷಯಾನುಸಾರ ಸಂಗ್ರಹಿಸಿ ಈ ಪ್ರತಿಯನ್ನು ಸಿದ್ಧಪಡಿಸಿರುತ್ತೇವೆ. ಇದರಲ್ಲಿ ಪ್ರತಿಪಾದಿತವಾದ ವಿಷಯಗಳು ಪ್ರೌಢವೂ ಗಹನವೂ ಇರುತ್ತವೆ. ಅವು ಗಹನವಿದ್ದರೂ ಅವುಗಳನ್ನು ವಚನಕಾರನು ಅತ್ಯಂತ ಸ್ಫುಟವಾದ ರೀತಿಯಿಂದ ವಿವರಿಸಿರುತ್ತಾನೆ. ಅಂಬಿಗರ ಚೌಡಯ್ಯನ ವಚನಗಳು ವಚನ ಗ್ರಂಥಗಳಲ್ಲಿ ಅತ್ಯಂತ ಶ್ರೇಷ್ಠಸ್ಥಾನವನ್ನು ಹೊಂದಿರುತ್ತವೆ.

ಈ ವಚನಗಳಿಗೆ ಭಾವವನ್ನು ಬರೆಯುವದು ಬಹಳ ಅವಶ್ಯ ತೋರಿದ್ದರಿಂದ ಆ ಪ್ರಕಾರ ನಾವು ಪ್ರತಿಯೊಂದು ವಚನದ ಕೆಳಗೆ ಆದಷ್ಟು ಸಂಕ್ಷಿಪ್ತವಾಗಿ ಅದನ್ನು ಬರೆಯಲು ಪ್ರಯತ್ನಿಸಿದ್ದೇವೆ. ಈ ಮಹತ್ವದ ವಚನ ಗ್ರಂಥವು ಎಲ್ಲರಿಗೂ ಪ್ರಿಯವಾಗುವದೆಂದು ಹಾರೈಸಿದ್ದೇವೆ.

ವಿಜಾಪುರ
ತಾ|| ೧೭.೩-೧೯೩೪

ಫ. ಗು. ಹಳಕಟ್ಟಿ
ಸಂಪಾದಕ.

ಡದು. ಉಭಯತರೂ ಸಮಾನರೆಂದು ಭಾವಿಸಬೇಕೆಂಬುದು ವಚನಕಾರನ ಮುಖ್ಯ ಅಭಿಪ್ರಾಯವಿದೆ. ಜನರು ಮೊಲೆ ಮುಡಿ ಬಂದರೆ ಹೆಣ್ಣೆನ್ನುವರು. ಗಡ್ಡ ಮೀಸೆ ಬಂದರೆ ಗಂಡೆನ್ನುವರು. ಉಭಯತರ ಪ್ರಾಣವೆಲ್ಲವೂ ಅಷ್ಟದಳ ಪದ್ಮದಲ್ಲಿಯೇ ಸಂಚರಿಸುತ್ತದೆ! ಆದರೆ ಲಿಂಗಾಂಗಿಗಳಾದ ಸ್ತ್ರೀಪುರುಷರು ಹೆಣ್ಣೂ ಅಲ್ಲ, ಗಂಡೂ ಅಲ್ಲ. ಯಾಕೆಂದರೆ ಅವರ ಪ್ರಾಣವು ಅಷ್ಟದಳ ಪದ್ಮದ ಮಧ್ಯಸ್ಥವಾಗಿ ಅಲ್ಲಿಯೇ ವಾಸಿಸುತ್ತದೆ. ಈ ಬಗೆಯಾಗಿ ಆಚರಿಸುವ ಸ್ತ್ರೀಪುರುಷರಲ್ಲಿ ಭೇದಭಾವವನ್ನು ಎಣಿಸಬಾರದೆಂದು ವಚನಕಾರನ ಮುಖ್ಯ ಅಭಿಪ್ರಾಯ. ಇದರ ನಿಜ ಸ್ಥಿತಿಯನ್ನು ತಿಳಿಯುವದು ಶೃತಿಗಳಿಗೆ ಸಹ ಆಗದೆಂದು ಇಲ್ಲಿ ಅಂದಿದ್ದಾನೆ.

# ಲಿಂಗಾಂಗ ಸಾಮರಸ್ಯ

**ವಿವರಣೆಃ—** ಲಿಂಗಾಂಗ ಸಾಮರಸ್ಯವು ವೀರಶೈವನ ಧ್ಯೇಯವಾಗಿರುವದು. ಷಟ್‌ಸ್ಥಲದ ಪ್ರಕಾರ ನಡೆದದ್ದಾದರೆ, ಈ ಸಾಮರಸ್ಯವು ನಿಶ್ಚಯವಾಗಿ ಒದಗುವದೆಂದು ವಚನಕಾರನ ಮತವು. ವೀರಶೈವಾಚರಣೆಯಿಂದ ಮನುಷ್ಯನ ಉತ್ತರೋತ್ತರ ವಿಕಾಸವು ಉಂಟಾಗುತ್ತ ಹೋಗಿ ಕಡೆಗೆ ಈ ಪರಿಪಕ್ವ ಸ್ಥಿತಿಯು ಪ್ರಾಪ್ತವಾಗುತ್ತದೆ. ಈ ಸ್ಥಿತಿಯು ಒದಗಿದ ಕೂಡಲೆ ಹುಟ್ಟುಮರಣಗಳು ಮನುಷ್ಯನಿಗೆ ಉಳಿಯುವದಿಲ್ಲ. ಈ ಪರಿಪಾಕ ಕಾಲದಲ್ಲಿ ಇಂಥಿಂಥ ಸ್ಥಲಗಳಿವೆ ಎಂದು ಗುರುತಿಟ್ಟು ಹೇಳಲಿಕ್ಕೆ ಬರಲಾರದು. ಲಿಂಗದ ಚಲನೆಯು ಅಥವಾ ಚೈತನ್ಯವು ಭಕ್ತನಲ್ಲಿ ಕ್ರಮೇಣ ಒಳಕೊಳ್ಳುತ್ತ ಹೋಗುವದು. ಮತ್ತು ಕಡೆಗೆ ಮನುಷ್ಯನು ಲಿಂಗವೇ ತಾನಾಗಿ ಅದರಲ್ಲಿ ಸಂಪೂರ್ಣ ಬೆರೆದವನಾಗಿ ಇಹಲೋಕ ಯಾತ್ರೆಯನ್ನು ಮುಗಿಸುವನು. ಇದೇ ಮೋಕ್ಷಪದವು, ಲಿಂಗಾಂಗ ಸಾಮರಸ್ಯವು, ಎಂದು ಹೇಳಲ್ಪಡುತ್ತದೆ.

**ವಚನಃ—** ೧೪೭೭. ಸ್ಥಲಂಗಳ ನೋಡಿ ಕಂಡಿಹೆನೆಂದಡೆ ಅಡಕಿಲ ಮಡಿಕೆಯಲ್ಲ. ಆಚಾರದಲ್ಲಿ ನೋಡಿ ಕಂಡಿಹೆನೆಂದಡೆ ಸಂಕಲ್ಪ ದೇಹಿಯಲ್ಲ ಆಗಮಂಗಳಲ್ಲಿ ನೋಡಿ ಕಂಡಿಹೆನೆಂದಡೆ ಮಾತಿನ ಮಾಲೆಯವನಲ್ಲ. ತನುವ ದಂಡಿಸಿ ಕಂಡಿಹೆನೆಂದಡೆ ಬಂಧನದವನಲ್ಲ. ಯಾತರಲ್ಲಿಯೂ ತೊಡಕಿಲ್ಲಬೆ ಸರ್ವವನೇ ತಿಗಳಿಯರೆ ಅಜಾತನಾಗಿ ನಿಂದವಂಗೆ ಆತನೇತರಲ್ಲಿಯೂ ಸುಖಿ ಎಂದನಂಬಿಗಚೌಡಯ್ಯ.

**ಭಾವಃ—** ಅನೇಕರು ಲಿಂಗಾಂಗ ಸಾಮರಸ್ಯ ಭಾವವು ಆಯಾಯ ಮೆಟ್ಟಲುಗಳನ್ನು ಅಥವಾ ಪಾವಟಿಗೆಗಳನ್ನು ಏರಿದ ಹಾಗೆ ಅದು ತಾನಾಗಿಯೇ ಬರುವದೆಂದು ತಿಳಿಯುವರು ಇದು ತಪ್ಪು ತಿಳಿವಳಿಕೆಯು. ಯಾಕಂದರೆ ಸ್ಥಲಗಳೆಂದರೆ ಅಡಕಿಲ ಮಡಕೆಗಳಲ್ಲ. ಮನುಷ್ಯನ ವಿಕಾಸಭಾವದಲ್ಲಿ ಅವನ ಎಲ್ಲ ಶಕ್ತಿಗಳು, ಅವನಿಗೆ ತಿಳಿಯದಂತೆ ಶ್ರೇಷ್ಠತೆಯನ್ನು ಹೊಂದುತ್ತ ಹೋಗುತ್ತವೆ. ಇದರಲ್ಲಿ ಕಣ್ಣಿಗೆ ಕಾಣುವಂಥ ಹೆಜ್ಜೆಗಳಿಲ್ಲ ಅಥವಾ ಪಾವಟಿಗೆಗಳಿಲ್ಲ ಇನ್ನು ಅನೇಕರು

ಬಾಹ್ಯ ಆಚರಣೆಗಳನ್ನು ಆಚರಿಸುತ್ತ ಆ ಕಡೆಯ ಪದವನ್ನು ಹೊಂದು ವೆವೆಂದೆನ್ನುವರು. ಇದೂ ತಪ್ಪು ತಿಳುವಳಿಕೆಯು. ಯಾಕಂದರೆ ಸಾಮ್ಯ ಶ್ಯಭಾವವು ಸಂಕಲ್ಪಿಸಿದ್ದಲ್ಲ. ಆದರೆ ಆಚಾರಗಳು ಕೇವಲ ಸಂಕಲ್ಪಮಾತ್ರ ವಾಗಿರುತ್ತವೆ. ಇಂಥವುಗಳನ್ನು ಬರೀ ಕಠಿಣ ರೀತಿಯಿಂದ ಆಚರಿಸಿದರೆ ಸಾಮ್ಯಶ್ಯತ್ವವು ಪ್ರಾಪ್ತವಾಗಲಾರದು. ಅದೇ ಮೇರೆಗೆ ಇನ್ನು ಅನೇಕರು ಆಗ ಮಗಳನ್ನು ಓದಿ ಕಾಣುವೆವೆಂದು ಭರವಸೆ ತಾಳಿರುವರು ಇದೂ ತಪ್ಪು. ಯಾಕಂದರೆ ಪರಮಾತ್ಮನು ಮಾತಿನ ಮಾಲೆಯುವನಲ್ಲ. ಬೇರೆ ಕೆಲವರು ಉಗ್ರ ತಪಸ್ಸು ಮಾಡಿ ಶರೀರವನ್ನು ದಂಡಿಸಿ ಅವನನ್ನು ದೊರಕಿಸುವೆ ವೆಂದು ಭಾವಿಸಿರುವರು ಇದೂ ತಪ್ಪಾದದ್ದು. ಯಾಕಂದರೆ ಪರಮಾ ತ್ಮನು ಇಂಥ ಬಂಧನಗಳಿಗೆ ಒಳಪಟ್ಟವನಲ್ಲ. ಒಟ್ಟಿಗೆ ಪರಮಾತ್ಮನು ಬಾಹ್ಯ ಸೃಷ್ಟಿಗೆ ತೊಡಕಿಕೊಂಡವನಲ್ಲ. ಆದ್ದರಿಂದ ಅವನು ಹೀಗೆ ಸಿಗಲಾರನು. ಅವನು ಹೀಗೆ ಸೃಷ್ಟಿಯಲ್ಲಿ ತೊಡಕಿಕೊಳ್ಳದಿದ್ದರೂ ಅದನ್ನು ಬಿಟ್ಟೂ ಇದ್ದವನಲ್ಲ. ಈ ರೀತಿಯನ್ನು ಅರಿತು ಮನುಷ್ಯನು ಷಟ್‌ಸ್ಥಲವನ್ನು ಆಚರಿಸಿದ್ದಾದರೆ, ಅವನಿಗೆ ಹುಟ್ಟುಸಾವುಗಳು ಉಳಿಯುವದಿಲ್ಲ. ಅವನು ಎಂಥ ಸ್ಥಿತಿಯಲ್ಲಿದ್ದರೂ ಸುಖಪಟ್ಟು ಲಿಂಗಾಂಗ ಸಾಮರಸ್ಯವನ್ನು ಹೊಂದು ವನು. ಲಿಂಗಾಂಗ ಸಾಮರಸ್ಯಪ್ರಾಪ್ತಿಗೆ ಇದೇ ಹಾದಿಯು ಎಂದು ವಚ ನಕಾರನು ಇಲ್ಲಿ ಹೇಳಿರುವನು.

## ಶೂನ್ಯ.

**ವಚನಃ**— ೧೪೮. ಗುರುವೆಂದೆಂಬೆನೆ? ಹಲಬರ ಮಗ. ಲಿಂಗವೆಂದೆಂಬೆನೆ? ಕಲುಕುಟಿಗನ ಮಗ. ಪ್ರಸಾದವೆಂದೆಂಬೆನೆ? ಒಕ್ಕಲಿಗನ ಮಗ. ಪಾದತೀರ್ಥವೆಂದೆಂಬೆನೆ? ದೇವೇಂದ್ರನ ಮಗ. ಈಸುವನು ಹಿಡಿಯಲಿಲ್ಲ ಬಿಡಲಿಲ್ಲ. ತನ್ನೊಳಗೆ ನೋಡೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ**— ಅನೇಕರು ಗುರುವಿನಿಂದ ಪರಮಾತ್ಮನನ್ನು ಕಾಣುವೆವೆಂದು ಭಾವಿಸಿರುವರು. ಇದು ತಪ್ಪು ತಿಳುವಳಿಕೆಯು. ಯಾಕಂದರೆ ಗುರುವು ಬೇರೆ ಜನರಿಂದ ಉತ್ಪನ್ನನಾಗಿರುವನು. ಅವನಿಗೆ ಮೂಲವಿದೆ. ಹೀಗೆ ಜಾತನಾದವನು ಅಜಾತನನ್ನು ತೋರಿಸುವ ಬಗೆ ಹೇಗೆ? ಹಾಗೆಯೇ ಅನೇಕರು ಲಿಂಗದಿಂದ ಪರಮಾತ್ಮನನ್ನು ಕಾಣುವೆವೆಂದು ಭಾವಿಸಿರುವರು. ಇದೂ ತಪ್ಪು. ಲಿಂಗವು ಕಲ್ಲುಕುಟಿಗನಿಂದ ಹುಟ್ಟಿದ್ದು. ಇಂಥದು ಅಜಾತನನ್ನು ತೋರಿಸುವದು ಅಶಕ್ಯವು. ಬೇರೆ ಅನೇಕರು ಪ್ರಸಾದವನ್ನು ಸೇವಿಸಿ ಪರಮಾತ್ಮನನ್ನು ಕಾಣುವೆವೆಂದು ಭಾವಿಸಿರುವರು. ಇದೂ ತಪ್ಪು. ಯಾಕಂದರೆ ಈ ಪ್ರಸಾದವು ಒಕ್ಕಲಿಗನು ಕಷ್ಟಪಟ್ಟು ದುಡಿದದ್ದರಿಂದ ಹುಟ್ಟಿದ್ದು. ಇಂಥದು ಪರಮಾತ್ಮನನ್ನು ತೋರಿಸಲಾರದು. ಬೇರೆ ಅನೇಕರು ಪಾದೋದಕವನ್ನು ಸ್ವೀಕರಿಸಿ ಪರಮಾತ್ಮನನ್ನು ಕಾಣುವೆವೆಂದು ಅನ್ನುವರು. ಇದೂ ತಪ್ಪು ತಿಳುವಳಿಕೆಯು. ಯಾಕಂದರೆ ಈ ಪಾದೋದಕವು ಇಂದ್ರನಿಂದ ಉತ್ಪನ್ನವಾದ ನೀರು ಇರುತ್ತದೆ. ಇದು ಪರಮಾತ್ಮನನ್ನು ತೋರಿಸಲಾರದು. ಆದರೆ ಈ ಬಗೆಯ ಪದಾರ್ಥಗಳನ್ನು ಮನುಷ್ಯನು ಹಿಡಿಯಲೂ ಬಾರದು, ಬಿಡಲೂ ಬಾರದು. ಈ ರೀತಿಯನ್ನು ಷಟ್‌ಸ್ಥಲದ ಮೂಲಕ ಅರಿದು ಮನುಷ್ಯನು ಆಚರಿಸಬೇಕು. ಆಚರಿಸಿದ್ದಾದರೆ ತನ್ನೊಳಗೆ ಅರಿವು ಉತ್ಪನ್ನವಾಗಿ ಪರಮಾತ್ಮನನ್ನು ತನ್ನಲ್ಲಿಯೇ ಕಾಣುವನೆಂದು ಅಂಬಿಗರ ಚೌಡಯ್ಯನು ಇಲ್ಲಿ ಹೇಳಿರುವನು.

**ವಚನಃ**— ೧೪೯. ಎಲ್ಲರೊಳಗೆ ಗೆಲ್ಲ ಸೋಲಕ್ಕೆ ಹೊರಬಂದನೆ? ಬೆಲ್ಲವ ಮೆದ್ದಡೆ ತಮ್ಮ ತಮ್ಮ ಬಾಯಲ್ಲಿಗೆ ಸಿಹಿ. ಬಲ್ಲವನಾದ ಮೇಲೆ ನಾಡೆಲ್ಲರೂ ಕೂಡಿ ಬಾಳದ ಹೆಣ್ಣಿಂಗೆ ನ್ಯಾಯುವನಾಡುವಂತೆ ಅರಿದರಿ

ನಿಂಗೆ ಮರೆದ ಮರವೆಗೆ ತನ್ನಲ್ಲಿದ್ದು ಕರಿಗೊಂಡವನೇ ಸಾಕ್ಷಿ ಎಂದ ನಂಬಿಗಚೌಡಯ್ಯ.

**ಭಾವಃ**— ಲಿಂಗಾಂಗ ಸಾಮ್ಯೈಕ್ಯತ್ವವನ್ನು ಹೊಂದಿದವನು ಎಲ್ಲರಿಗೆ ಸಂಬಂಧಿಸಿದ ಗೆಲವು ಮತ್ತು ಸೋಲು ಇವುಗಳನ್ನು ಹೊಂದಿರುವದಿಲ್ಲ. ಅವುಗಳಿಗೆ ಅವನು ಮೀರಿರುತ್ತಾನೆ. ಮನುಷ್ಯನು ಒಂದು ಪದಾರ್ಥವನ್ನು ರುಚಿಸುವದೇನೋ ನಿಜವು. ಆದರೆ ಅದರ ರುಚಿಯು ಅವನಿಗೇ ಗೊತ್ತು. ಇತರರು ಅದನ್ನು ಅರಿಯಲಾರರು. ಜ್ಞಾನಿಯಾದವನು ಸ್ವತಂತ್ರನು. ಹ್ಯಾಗೆ ಬಾಳ್ವೆ ಮಾಡಲು ಒಪ್ಪದ ಹೆಣ್ಣು ಸ್ವತಂತ್ರಳೋ ಹಾಗೆಯೇ ಅವನು ಸ್ವತಂತ್ರನು. ಇಂಥ ಹೆಣ್ಣನ್ನು ಸಂಸಾರಕ್ಕೆ ಹಚ್ಚಬೇಕೆಂದು ನಾಡೆಲ್ಲ ಕೂಡಿ ಹೇಳಿದರೂ ಹ್ಯಾಗೆ ಅಶಕ್ಯವೋ ಹಾಗೆಯೇ ಜ್ಞಾನಿಯನ್ನು ಸಂಸಾರಕ್ಕೆ ಹಚ್ಚಬೇಕೆಂದು ಪ್ರಯತ್ನಿಸಿದರೆ ಅದು ಅಶಕ್ಯವು. ಲಿಂಗಾಂಗ ಸಾಮರಸ್ಯವನ್ನು ಹೊಂದಿದವನಿಗೆ ಅವನ ಅರಿವು ಮತ್ತು ಅವನ ಮರವು ಅವನಲ್ಲಿಯೇ ಲಯವಾಗುವವು. ಹೀಗೆ ಲಯವಾದದ್ದನ್ನು ತಿಳಿಯುವವನು ಅವನೇ ಹೊರತು ಹೆರರು ಅಲ್ಲ ಎಂದು ವಚನಕಾರನು ಹೇಳಿರುವನು.

**ವಚನಃ**— ೧೫೦. ಗಿಳಿ ಇಲ್ಲದೆ ಹಂಜರ ಹಲವು ಮಾತನಾಡಬಲ್ಲುದೇ ? ದೇವರಿಲ್ಲದ ದೇಗುಲಕ್ಕೆ ಮಂತ್ರಾಭಿಷೇಕ ಉಂಟೇ? ಅರುಹು ನಷ್ಟವಾಗಿ ಕುರುಹಿನ ಹಾವಚೆಯನರಿಯನೆಂದಾತ ನಮ್ಮ ಅಂಬಿಗರ ಚೌಡಯ್ಯನು.

**ಭಾವಃ**— ಸಾಮರಸ್ಯ ಭಾವವು ಒದಗಿದಲ್ಲಿ ಗಿಳಿ ಇಲ್ಲದ ಪಂಜರದಂತಾಗುವದು. ಆಗ ಇಂಪಾದ ಶಬ್ದವು ಹೊರಡದು. ದೇವರಿಲ್ಲದ ದೇಗುಲದಂತೆ ಆಗುವದು. ಆಗ ಮಂತ್ರಾಭಿಷೇಕವಿಲ್ಲ. ಅರುಹು ನಷ್ಟವಾಗುವದು, ಕುರುಹೂ ಹೋಗಿಬಿಡುವದು. ಇದೇ ಶೂನ್ಯ ಸ್ಥಿತಿಯು.

ಕಂಡುದಿಲ್ಲಂ ಶಿವನ ಚಂದನಕೆ ತೀರಲ್ಕೆ
ಇನ್ನಿದೇತರ ತಾಳಿ ನೇಮವರಿದಾಗುತಿರೆ
ಇನ್ನಿದೇತರ ಬಾಳ್ಕೆ ಚಂದನಂ ಸಲ್ಲದಿರೆ

ಎಂದು ಪಶುವಿನ ಕೊರಲ ಪಾಶವಂ ಪರಿವಂತೆ
ನಿಂದು ಸಂಸಾರ ವಿಸ್ತಾರವಂ ಪರಿವಂತೆ
ಹರಿದನಾಗಳೆ ತಾಳಿಯುಂ ಕುಲದ ಪಾಳಿಯುಂ
ಮರೆದನಾಗಳೆ ಲಜ್ಜೆಯುಂ ಬಿರದಾಳಿಯುಂ
ತಂದು ಮಾರಿದನೈದು ಹಣವಿಂಗೆ ಸಂತಸದೆ
ಚಂದನವನೆಯ್ದೆ ಕೊಂಡಂ ಮನೆಗೆ ಚಿಂತಿಸದೆ
ಉಪವಾಸದಿಂ ಬಂದು ಚಂದನಮನೀಯುತುಂ
ಕೃಪೆ ಮಾಡು ಶಿವ ಎನುತೆ ನೇಮವಂ ಸಲಿಸುತುಂ
ಹತ್ತೈದು ದಿನದ ನೇಮಂ ಸಂದುದಾತಂಗೆ
ಹತ್ತೈದು ದಿನದುಪಾಸಂ ಪತ್ತಿತಾತಂಗೆ

ಆಗ ಶಿವನಲ್ಲಿಗಯ್ತಂದು ಭಕ್ತಂ ನಿಂದು
ಏಗೈವೆನಭವ ಗಂಧಂ ತೀರಿತಿನ್ನೆಂದು
ನಾಳಿಂಗೆ ನೇಮಕ್ಕೆ ಗಂಧವಿನಿತಿಲ್ಲಯ್ಯ
ಶೂಲಿ ನಿನ್ನಯ ಚಿತ್ತವಿರ್ದಂತೆ ಮಾಡಯ್ಯ
ಎಂದೆನುತ್ತುಂ ಮನೆಗೆ ಬಂದಿರುಳ್ಪಟ್ಟಿರಲ್
ಚಂದನದ ನೇಮದೊಳ್ಸಿರೆ ಮನಂ ಮುಟ್ಟಿರಲ್
ಕನಸಿನೊಳ್ಬಂದೀಶ್ವರಂ ನುಡಿದನಾತಂಗೆ
ಮನಸಿನೊಳ್ಮತ್ತೊಂದನರಿಯದ ಮಹೇಶಂಗೆ
ಚಂದನಕ್ಕುಮ್ಮಳಿಸಲೇಕೆ ನೀನೆಲೆ ಮಗನೆ
ಚಂದನಂ ನಿನ್ನ ಮೊಳಕೆಯ್ಯಲಾಗದೆ ಮಗನೆ

ಎನಲೆಳ್ದು ಬೆಳಗಾಗೆ ನೆನೆದು ನೋಡಿದನಂದು
ಕನಸಿನೊಳಗೀಶ್ವರಂ ಬೆಸಸಿದನಿದೇನೆಂದು
ಮೊಳಕೆಯ್ಯನಲ್ಲಿ ಮೆಲ್ಲನೆ ಮುಟ್ಟಿ ನೋಡುತಂ
ತಿಳಿಯದಿದು ಗಂಧವಿಲ್ಲಿಲ್ಲೆನುತೆ ಬಾಡುತಂ

ನೋಡುವೇಂ ತೇವೆನಿಂತಿದು ಗಂಧವಾಗದೊಡೆ
ಮಾಡುವೇಂ ಹೊಸ ಪರಿಯನೊಳ್ಗಂಪಿದಾಗದೊಡೆ

ಎನುತೆ ಬಂದಂ ಬಂದನಂದು ಶಿವನಿಳಯಕ್ಕೆ
ಮನಸಿಜ ಹರಂ ನೋಡುತಿರೆ ಶಿವನಿವಾಸಕ್ಕೆ
ಬಂದಿದೇನೆನ್ನ ಮೊಳಕೆಯ್ಯಮಂ ತೇಯ್ವೆಂದೆ
ಚಂದನವಿದಪ್ಪುದೇ ಹೇಳಯ್ಯ ಎಲೆ ತಂದೆ
ಅದಕೇನೆನುತ್ತೆ ಮಜ್ಜನಕೆರೆದನಂತರಂ
ಮುದದಿಂದೆ ತೊಳೆದನಾ ಸಾಣೆಕಲ್ಲಂ ಕರಂ
ದೇವನಂ ನೋಡುತುಂ ಮೊಳಕೆಯ್ಯ ತೊಳೆವುತುಂ
ಭಾವದೊಳ್ವೀರರಸದಗ್ಗಳಿಕೆ ಏರುತುಂ
ದೇವಾ ಇದೇನೆಂದೆ ಚರ್ಮವಲ್ಲಾ ತಂದೆ
ದೇವಾ ಇದೇನೆಂದೆ ನೆತ್ತರಲ್ಲಾ ತಂದೆ
ನೋಡುವೇಂ ತೇದು ನೋಡುವೆನಿದರ್ಕೇಂ ಎನುತೆ
ನೋಡಿಕೊಳ್ವೆಂ ಕೊಳ್ವೆನಿಲ್ಲಿ ಬಳಿಕೇನೆನುತೆ
ಹರಭಕ್ತಿಗೊಲ್ದೆಳಸಿ ಕೆಯ್ಯಿಕ್ಕುವಂದದಿಂ
ವರ ಮುಕ್ತಿಗೊಮ್ಮಳಂ ಮಿಗಿಲಿದೆಂಬಂದದಿಂ
ಕುಸಿದು ಮೊಳಕಾಲಿಕ್ಕಿ ಬಲದ ಮೊಳಕೆಯ್ಯೂರಿ
ಎಸೆವ ಮಣಿಕಟ್ಟನೆಡಗೆಯ್ಯಿಂ ಪಿಡಿದು ಮೀರಿ
ಕೊಂಕಿರ್ದ ಚಿತ್ತಮುಂ ವೃತ್ತಮುಂ ಮಾಳ್ಪಂತೆ
ಶಂಕರನನರ್ಚಿಸಲ್ಕೈಗೆ ಬೆಸನೀವಂತೆ
ಕೆಯ್ಯ ಮೇಲೇ ಗಂಧವಂ ಪಡೆಯಲೋಸುಗಂ
ಕೆಯ್ಯ ಮೇಲೇ ಭಕ್ತಿಯುಂ ಪಡೆಯಲೋಸುಗಂ
ತೇದನೊಲವಿಂದೆ ಮೊಳಕೆಯ್ಯನಾನಂದದಿಂ
ಸಾದರಂ ಮಿಗೆ ಶಿವನನರ್ಚಿಪುದ್ಯೋಗದಿಂ
ತೇಯೆ ಕೆಯ್ತೇದು ಪಲ್ಲವಿಸಿತ್ತು ಪರಿಮಳಂ

ತೇಯೆ ಬಾವನ್ನಮುಂ ಮೀರಿತ್ತು ಪರಿಮಳಂ
ಹರಿವುತಿರ್ಪುದು ಕರಂ ನೆರೆವುತಿರ್ಪುದು ಗಂಧ
ಒರೆವುತಿರ್ಪುದು ಶಿವನ ಭಕ್ತಿ ಪರಿಮಳ ಗಂಧ

ಇಂತಿರಲ್ಕಾಣುತೊಲಘಾಂಡಮೂರ್ತಿಗಳಂದು
ಇಂತು ಕೆಟ್ಟೆನೆ ಇನಿತು ಕಾಲವರಿಯದೆ ಬೆಂದು
ಮುನ್ನವೇ ಹೇಳದಿಂತಿರ್ಪರೇ ಶಂಕರಾ
ಇನ್ನೆವರವಿನಿತು ಸವೆದೇಂ ವೃಥಾ ಶಶಿಧರಾ
ಹೊರಗೆ ಗಂಧವನೆಳಸಿ ಯಾನಿಂತು ಕೆಟ್ಟೆನೇ
ನೆರೆ ತೇದುಕೊಂಡು ನಾ ನಿನಗಾಗಿ ಸವೆದೆನೇ
ಒಲ್ಲೆನರಿದೆಂ ದೇಹವುಳ್ಳನ್ನೆಗಂ ತೇವೆ
ಒಲ್ಲೆನೊಲ್ಲೆಂ ಬೇರೆ ಗಂಧಮುಮನಾನೀವೆ
ಎನುತೆ ಕೆಯ್ಯಂ ಸಪುರ ಸೀರೆಯಿಂ ಮುದ್ರಿಸಲ್
ಮನಸಿಜಹರಂ ದಯಾಮುದ್ರೆಯಂ ಸಡಿಲಿಸಲ್

ತೋರಿತ್ತು ಶಿವಲಿಂಗದೊಳಗೆ ಶರ್ವನ ರೂಪು
ಮೀರುತಿರ್ದುದು ಸದಾಶಿವನಂಗದೊಳ್ರೂಪು
ದಶಭುಜಂ ಪಂಚವಕ್ತ್ರಂ ತ್ರಿನೇತ್ರಂಗಳಿಂ
ಶಶಿಕಲೆ ಜಟಾಭರಂ ನಾಗಾಜಿನಂಗಳಿಂ
ಬೆಳಗುತಿರೆ ರವಿಕೋಟಿ ತೇಜಮಂ ಮುಸುಳಿಸುತೆ
ತೊಳಗುತಿರೆ ಶಶಿಕೋಟಿ ತೇಜಮುಮನೇಳಿಸುತೆ
ಅಲ್ಲಿ ಶಿವನೊಲಘಾಂಡಮೂರ್ತಿಯಂ ತೆಗೆದಪ್ಪಿ
ಸಲ್ಲೀಲೆಯಿಂದೆ ಕೊಂಡಾಡುತ್ತೆ ಯುಮರ್ದಪ್ಪಿ
ನೋಡಯ್ಯ ನಂದೀಶ ಎನ್ನ ಸದ್ಭಕ್ತನಂ
ನೋಡ ಮೊಳಕೆಯ್ಯ ಗಂಧವನಿತ್ತ ಭಕ್ತನಂ
ಹರವರಿಯ ಭಕ್ತಿಯಂ ಸವಿಗಂಡ ಭಕ್ತನಂ
ಉರವಣಿಪ ನಿಷ್ಠೆಯಂ ಕೆಯ್ಕೊಂಡ ಭಕ್ತನಂ
ತನ್ನ ವಧುವಿನ ತಾಳಿಯಂ ಹರಿದರಿಂತುಂಟೆ
ಎನ್ನ ನೇಮಕ್ಕೆ ತನ್ನಂ ಸವಿಸಿದವರುಂಟೆ

ಎಂದೆನುತೆ ನವ ವಿಮಾನದೊಳಾತನಂ ಪುಗಿಸಿ
ತಂದು ದಿವ್ಯಾಭರಣ ಜಾಲದಿಂ ಸಿಂಗರಿಸಿ
ಪೂಮಳೆಗಳೆರಗಿ ದುಂದುಭಿನಾದಮುಣ್ಮುತಿರೆ

ವ್ಯೋಮಕ್ಕೆ ನೆಗೆದನೀ ಧರಣಿ ಬೆರಗಾಗುತಿರೆ
ಬಂದು ಕೈಲಾಸಮಂ ಹರುಷದಿಂದಂ ಪೊಕ್ಕು
ಮುಂದಣರಮನೆಯು ಪುಗುತುಂ ಮಿಗೆ ಮನಂ ಮಿಕ್ಕು
ಮಣಿಖಚಿತ ಸಿಂಹಾಸನಾರೂಢನಾಗಿರ್ದು
ಗಣ ಸಮೂಹದ ನಡುವೆ ಸಲವಿಂದೆ ಕುಳ್ಳಿರ್ದು
ಒಲಘಾಂಡ ಮೂರ್ತಿಗಂ ಗಣಪದವಿಯುಂ ಕೊಟ್ಟು
ಲಲನೆ ಗಿರಿಜೆಗೆ ಪೇಳ್ದು ಹರುಷದಿಂ ಮುಂದಿಟ್ಟು
ವೊಳಕೆಯ್ಯ ಮುದ್ರೆಯುಂ ಬಿಡಿಸಿ ತಲೆದೂಗುತಂ
ತಳೆದ ಪುಳಕಂಗಳಿಂ ದಳವೇರಿ ಬೀಗುತುಂ
ಪಂಚಶರ ಮತ್ತಗಜ ಪಂಚಮುಖನೊಪ್ಪಿದಂ
ಪಂಚಾಕ್ಷರೀ ಗೇಹನೆನಿಪ ಶಿವನೊಪ್ಪಿದಂ
ಅತಿ ಬಲ ಜಲಂಧರಾಸುರವಿಜಯನೊಪ್ಪಿದಂ
ಶೃತಿಗತರ್ಕ್ಯಂ ಶರಣಸನ್ನಿಹಿತನೊಪ್ಪಿದಂ
ಅಪ್ರತಿಮನತುಳಬಳನತ್ಯುಗ್ರನೊಪ್ಪಿದಂ
ಆಪ್ರತಿಹತ ಪ್ರಬಳ ಪುಣ್ಯನಿಧಿಯೊಪ್ಪಿದಂ
ಶರಣಜನಕಮಳವಿಮಳಾರ್ಕನೊಪ್ಪಿದಂ
ಶರಣಕುಲಕುಮುದವನ ಪೂರ್ಣೇಂದು ಒಪ್ಪಿದಂ
ಶ್ರೀ ಮಹಾಮಹಿಮನಾದ್ಯಂತಹರನೊಪ್ಪಿದಂ
ಕಾಮಾರಿ ಹಂಪೆಯು ವಿರೂಪಾಕ್ಷನೊಪ್ಪಿದಂ

**ಕಂದ||** ವೊಳಕೆಯ್ಯಗಂಧಮಂ ತಾ
ನಳವಳಿಯದೆ ತೇದು ನೇಮಮಂ ಸಲಿಸಿದ ನಿ
ರ್ಮಳನೊಲಘಾಂಡ ಶಿಶುವೆಂ
ದಿಳೆಯೊಳ್ಕರುಣಿಸುಗೆ ಹಂಪೆಯ ವಿರೂಪಾಕ್ಷಂ ||

# ಮುರುಘರ ಮಹಾತ್ಮೆ.

**ಕಂದ॥** ಶಿವನಪ್ರತಿಮಂಭರ್ಗಂ
ಭವನನುಪಮದಾನಿಶಶಿಕಳಾಧರನಗಜಾ
ಧವನೊಲ್ದುಂಮೆರೆದುನಮಃ
ಶಿವಾಯಮುರುಘರನೆ ಹಂಪೆಯ ವಿರೂಪಾಕ್ಷಂ ॥

## ರಗಳೆ.

ಚೋಳದೇಶದೊಳಗೆ ತಿರಿಪಗಲ್ಪುರಂ ನಮಃಶಿವಾಯ
ಕೇಳು ಮೆರೆವುತಿರ್ಪುದಲ್ಲಿ ಪುಟ್ಟಿದಂ ನಮಃಶಿವಾಯ
ಮುರಘನೆಂಬ ನಾಮದಿಂದೆ ಯೊಪ್ಪುತಿರ್ಪನಾ ಪುರಕ್ಕೆ
ಹರನ ಭಕ್ತಿಭಾವ ನಿರತನೆನಿಸಿ ಮೆರೆದನಾ ಪುರಕ್ಕೆ
ಸತ್ಯನುತ್ತಮ ಪ್ರಭಾವ ಭರಿತ ಚರಿತನೆನಿಸಿ ಮೆರೆದು
ನಿತ್ಯ ಭಕ್ತಿ ಯುಕ್ತ ಸತ್ಯ ಮನದ ಧನದ ನೆನಿಸಿ ಮೆರೆದು
ಶಿವನ ಪೂಜೆಗೆಂದು ಸಕಲ ಪುಷ್ಪವಾಟಿಯೊಳಗೆ ಪೊಕ್ಕು
ನವನವಪ್ರಸೂನ ಕುಲವನೆಯ್ದೆ ಕೊಯ್ದು ಭಕ್ತಿ ಮಿಕ್ಕು
ಕೊಂಡು ನಡೆದು ಶಿವ ನಿವಾಸ ರಂಗಮಂಟಪಕ್ಕೆ ಬಂದು
ತಂಡದಿಂದೆ ಪುಳಕ ತೆಕ್ಕೆಗೊಂಡು ಬೆಳೆದು ಮೆರೆಯೆ ನಿಂದು
ಇಂದು ಶೇಖರಂಗೆ ಮಜ್ಜನಕ್ಕೆ ಕೊಟ್ಟು ನಿಷ್ಠೆವಡೆದು
ತಂದೆತಾಯಿ ಬಂಧು ನೀನೆ ಎಂದು ನೇಹದಿಂದೆ ನುಡಿದು
ಪೂಜೆ ಮಾಡಿ ನೋಡಿ ನಲಿದು ಸೋಜಿಗಕ್ಕೆ ಸೊಗಸನಿತ್ತು
ಓಜೆಗೆಟ್ಟು ಮುಂದುಗೆಟ್ಟು ಮುದ್ದುಗೈದು ಮುನಿಸನಿತ್ತು
ಧೂಪವಿಕ್ಕಿ ಬೆಳಗನೆತ್ತಿ ಸವಿಯನೂಡಿ ನಲಿದು ನಚ್ಚಿ
ರೂಪುಗರೆದು ರುಚಿಯನಿತ್ತು ರಾಗದಿಂದೆ ಹಿಗ್ಗಿ ಹೆಚ್ಚಿ
ನನೆದು ತೊನೆದು ಒಲಿದು ನಲಿದು ಕೆಲೆದು ಮೀರಿ ಮಲೆತು ನೋಡಿ
ಕುಸಿದು ಕೂಗಿ ಕುಸಿದು ಮುಸುಕಿ ಕೊರಗಿ ತಿರುಗಿ ಆಡಿ ಪಾಡಿ
ಒಸೆದು ಕಣ್ಗಳಿಂದೆ ಸುಖದ ರಸದ ಹೊನಲ್ಪರಿದು ಹೆಚ್ಚಿ
ಎಸೆಯೆ ಬೆಮರ ಬಿಂದು ಬಂದು ತನುವನೆಯ್ದೆ ಮುಸುಗಿ ಮುಚ್ಚಿ

ಪುಳಕದೊಳಗೆ ಪುಳಕವೇಳುತಂಗರುಚಿಯೊಳೊಂದಿ ಬೆಳಗೆ
ಹೊಳೆವ ಗದುಗದ ಸ್ವರಂ ನಮಃಶಿವಾಯದೊಳಗೆ ತೊಳಗೆ
ಕಂಪನಂ ಕೊನರ್ತು ತಳಿತು ಕಂಪನೆಯ್ದೆ ಮೆರೆದು ಪೊಗಳೆ
ಸೊಂಪು ಸೊಗಸಿ ಲೀಲೆಯುಕ್ಕಿ ಮನವನೊಕ್ಕು ಮಿಕ್ಕು ನೆಗಳೆ
ಭವನ ಭಾವವೆಯ್ದೆ ಹೃದಯ ಕಮಳದೊಳಗೆ ತೊಳಗಿ ಬಳೆದು
ಶಿವನೆ ಶಿವನೆ ಶಿವನೆ ಎನುತೆ ಬೇಗಿ ಕೂಗಿ ಬಿಕ್ಕಿ ಬಿರಿದು
ನೋಡಿ ನಿಲ್ಲದೆಯ್ದಿ ಬಂದು ಬಿಂಕದಿಂದ ಭೋಂಕನಪ್ಪಿ
ಕೂಡಿ ತಣಿವುತೊರಗಿ ಮೀರಿ ಮರೆದು ಮೂರ್ಛೆಯಾಗುತಪ್ಪಿ
ಮನವನಂಬಿಕಾವರಂಗೆ ಮಾರುಗೊಟ್ಟು ಸೂರೆಗೊಟ್ಟು
ತನುವನೀಶ್ವರಂಗೆ ಹಿಂಗದರ್ಪಿಸುತ್ತ ತೊತ್ತುಗೊಟ್ಟು
ಇರೆ ಪುರಾರಿ ಕರುಣದಿಂದೆ ಎಚ್ಚರಿತ್ತು ನಲಿದು ನೋಡಿ
ಮುರಿದು ಮೆಲ್ಲನೇಳ್ದು ಹರ ನಮಃಶಿವಾಯ ಎಂದು ಪಾಡಿ
ಶಿವನ ರೂಪು ಮನದೊಳೆರಗಿ ಯೊಳಗೆ ಹೊರಗೆ ತೀವಿ ತೋರೆ
ಭವನೆ ಭರ್ಗ ಭೀಮ ಭಾಳನಯನನೆಂದು ಕರೆದು ಸಾರೆ
ಇಂತು ಶಿವನನೊಕ್ಕು ನಿಕ್ಕಿ ಪೂಜೆಗೆಯ್ದು ಪುಳುಕಿಸುತ್ತೆ
ಮುಂತೆ ಶಿವನೆ ಶಿವನೆ ಎನುತೆ ಬೀಗಿ ಕೂಗಿ ಬೆಮರಿಡುತ್ತೆ
ಎಳ್ದು ಶಿವನ ಮುಂದೆ ನಿಂತು ಭಕ್ತಿ ಭಾವ ಭರಿತನಾಗಿ
ಬಿಳ್ದು ಪದತಳಕ್ಕೆ ಹರುಷವೇರಿ ಮೀರಿ ತಣಿದು ಕೂಗಿ

ದೇವ ಹರಿವಿರಿಂಚಿಗಳ್ಗಗಮ್ಯನೆನಿಪ ನಾಮಲಿಂಗ
ದೇವ ಸಕಲ ಭಕ್ತಜನ ಕಣ್ಣ ಮೊದಲೊಳಿರ್ಪ ಲಿಂಗ
ದೇವ ಸರ್ವ ನಿಗಮ ನಿಕರ ದುರ್ಲಭ ಪ್ರಭಾವ ಮೂರ್ತಿ
ದೇವ ಶರಣ ನಿಚಯ ಚಿತ್ತವಲ್ಲಭ ಪ್ರಸಿದ್ಧ ಮೂರ್ತಿ
ದೇವ ದನುಜ ಮನುಜ ಖಚರ ಪೂಜಿತ ಪ್ರಮೋದ ಚರಣ
ದೇವ ತರುಣ ತರಣಿ ಕೋಟಿಗುನ್ನತ ಪ್ರತಾಪ ಕಿರಣ
ದೇವ ಕೋಟಿ ಶಶಿಕುಲಕ್ಕೆ ಶರ್ಮನೆನಿಪ ಶಾಂತ ರೂಪ
ದೇವ ನಿರುಪಮಪ್ರಕಾಶ ನಿತ್ಯ ನಿರ್ಗುಣಸ್ವರೂಪ
ಎಂದು ತುತಿಯ ನುತಿಸುತಿರ್ಪ ನಿತ್ಯ ನೇಮದಿಂದೆ ಬರ್ಪ
ಬಂದು ಇದುವೆ ನೇಮವಾಗಿ ಕುಂದದಚ್ಚ ಸುಖದೊಳಿರ್ಪ

ಅರಿವುದುಂ ನಮಃಶಿವಾಯ ಮರೆವುದುಂ ನಮಃಶಿವಾಯ
ಉರಿವುದುಂ ನಮಃಶಿವಾಯ ಮಹಿಮೆಯುಂ ನಮಃಶಿವಾಯ
ಮನದೊಳುಂ ನಮಃಶಿವಾಯ ಬುದ್ಧಿಯೊಳು ನಮಃಶಿವಾಯ
ನೆನಹಿನೊಳುಂ ನಮಃಶಿವಾಯ ಚಿಂತೆಯೊಳು ನಮಃಶಿವಾಯ
ನುಡಿವುದುಂ ನಮಃಶಿವಾಯ ನಡೆವುದುಂ ನಮಃಶಿವಾಯ
ಉಡುವುದುಂ ನಮಃಶಿವಾಯ ಉಣ್ಬುದುಂ ನಮಃಶಿವಾಯ
ಕರೆವುದುಂ ನಮಃಶಿವಾಯ ಕಾಣ್ಬುದುಂ ನಮಃಶಿವಾಯ
ಪೊರೆವುದುಂ ನಮಃಶಿವಾಯ ನೆರೆವುದುಂ ನಮಃಶಿವಾಯ
ಬರ್ಪುದುಂ ನಮಃಶಿವಾಯ ಬಾಳ್ವುದುಂ ನಮಃಶಿವಾಯ
ಇರ್ಪುದುಂ ನಮಃಶಿವಾಯ ಪೋಪುದುಂ ನಮಃಶಿವಾಯ
ಅಂದವುಂ ನಮಃಶಿವಾಯ ಚಂದವುಂ ನಮಃಶಿವಾಯ
ಹಿಂದಯುಂ ನಮಃಶಿವಾಯ ಮುಂದೆಯುಂ ನಮಃಶಿವಾಯ
ಕೆಲದೊಳುಂ ನಮಃಶಿವಾಯ ಬಲದೊಳುಂ ನಮಃಶಿವಾಯ
ನೆಲದೊಳುಂ ನಮಃಶಿವಾಯ ನಭದೊಳುಂ ನಮಃಶಿವಾಯ
ಆಯುಮುಂ ನಮಃಶಿವಾಯ ದಾಯುಮುಂ ನಮಃಶಿವಾಯ
ಕಾಯುಮುಂ ನಮಃಶಿವಾಯ ನಿತ್ಯಮುಂ ನಮಃಶಿವಾಯ
ಸತ್ಯಮುಂ ನಮಃಶಿವಾಯ ಶಬ್ದಮುಂ ನಮಃಶಿವಾಯ
ನಿತ್ಯಮುಂ ನಮಃಶಿವಾಯ ನಿರ್ಮಳಂ ನಮಃಶಿವಾಯ
ಚಿತ್ತಮುಂ ಚರಿತ್ರಮುಂ ವಿಚಿತ್ರಮುಂ ನಮಃಶಿವಾಯ
ವೃತ್ತಿಯುಂ ವಿಳಾಸಮುಂ ವಿಚಾರಮುಂ ನಮಃಶಿವಾಯ
ಸಂಜೆಯುಂ ಸಮಾಧಿಯುಂ ಸ್ವರೂಪುಮುಂ ನಮಃಶಿವಾಯ
ರಂಜಿಸಿರ್ಪ ಮಂಗಳಂ ಮನೋರಥಂ ನಮಃಶಿವಾಯ
ಕಾಮುಮುಂ ನಮಃಶಿವಾಯ ಕೋಪಮುಂ ನಮಃಶಿವಾಯ
ನೇಮುಮುಂ ನಮಃಶಿವಾಯ ನಿತ್ಯಮುಂ ನಮಃಶಿವಾಯ
ಉಗ್ರಮುಂ ನಮಃಶಿವಾಯ ಶಾಂತಮುಂ ನಮಃಶಿವಾಯ
ಸ್ವರ್ಗಮುಂ ನಮಃಶಿವಾಯ ಮೋಕ್ಷಮುಂ ನಮಃಶಿವಾಯ

ಇಂತು ಪಂಚವರ್ಣಮುಂ ಶರೀರವಾಗಿ ಬೀಗಿ ಬಳೆದು
ಸಂತತಂ ನಮಃಶಿವಾಯವಿಡಿದು ತೀವಿ ತುಳ್ಕಿ ತಳೆದು
ಮರೆದು ಸೋಂಕೆ ಭವಿಗಳೆಲ್ಲ ಭಕ್ತರಾಗುತಿರ್ಪರಲ್ಲಿ

ಅರಿದು ಸೋಂಕೆ ಭಕ್ತರೆಲ್ಲ ಭವನೊಳೊಂದುತಿರ್ಪರಲ್ಲಿ
ಲೋಗರೇನನೆಂದೊಡಂ ನಮಃಶಿವಾಯವಾಗಿ ತನಗೆ
ಆಗಳೇನನೆಂದೊಡಂ ನಮಃಶಿವಾಯವಾಗೆ ತನಗೆ
ಉಲಿವ ಹಕ್ಕಿಯುಲಿವು ಪಂಚವರ್ಣದಂತೆ ತಾಗೆ ಕಿವಿಗೆ
ಕೆಲಿವ ವೃಷಭನಾದಮುಂ ನಮಃಶಿವಾಯವಾಗೆ ತನಗೆ
ಕಣ್ಣೊಳಂ ನಮಃಶಿವಾಯವೆಂಬ ಲಿಖಿತವಿರ್ದ ತೆರದೆ
ಕಣ್ಣ ಮೊದಲ ರೂಪು ಪಂಚವರ್ಣವಾಗಿ ತೋರಲುರದೆ
ಪಲವು ಕೆಲವು ದಿವಸವಿಂತು ಹರನನರ್ಚಿಸುತಿರಲ್ಕೆ

ನಲಿದು ಶಂಭು ತನ್ನ ಪದಕೆ ಭಕ್ತಿಯುಕ್ತನಂ ತರಲ್ಕೆ
ನೆನೆದು ಬಯಸಿ ಬಂದು ಭಕ್ತನನುವನರಿದು ಮುಂದೆ ನಿಂದು
ಕನಸಿನೊಳಗೆ ಮಗನೆ ಬರ್ಪುದೆಂದು ಬೆಸಸೆ ಪೋಗಲಂದು
ಎಳ್ದು ನೆನೆದು ಪುಳುಕಿಸುತ್ತೆ ಹರ್ಷರಸದ ಶರಧಿಯೊಳಗೆ
ಬಿಳ್ದು ಬಯಸಿ ಕೊರ್ವಿ ಯುರ್ವಿ ಆಡಿ ಪಾಡಿ ಭಕ್ತಿ ಬೆಳಗೆ
ಭಸಿತಮುಂ ಶರೀರದೊಪ್ಪುವಂಗದೊಳಗೆ ತೊಳಗೆ ತೀವಿ
ಎಸೆವ ರುದ್ರನೇತ್ರಮುಂ ತನು ಸ್ಥಳಂಗಳಲ್ಲಿ ಓವಿ
ನಡೆದು ಬಂದು ಪೂವನೆಳಸಿ ಕೊಯ್ವುತುಂ ನಮಃಶಿವಾಯ
ತಡೆಯದಗ್ಗವಣಿಯನಾಂತು ನಡೆವುತುಂ ನಮಃಶಿವಾಯ
ಬರುತೆ ರಂಗಮಂಟಪ ಪ್ರದೇಶದೊಳ್ ನಮಃಶಿವಾಯ
ಹರುಷದಿಂದಲಗ್ಗವಣಿಯನಿಳಿಪುತುಂ ನಮಃಶಿವಾಯ
ಬಂದು ಮಜ್ಜನಕ್ಕೆ ಮಾಣದೆರೆವುತುಂ ನಮಃಶಿವಾಯ
ನಿಂದು ಪೂಜೆ ಮಾಡಿ ನೋಡಿ ನಲಿವುತುಂ ನಮಃಶಿವಾಯ
ಎಂದು ಹೊರಗೆ ಸಾರ್ದು ಕುಣಿದು ಕೂಗಿ ಕರುಣಿಸೆಂದೆನುತ್ತೆ
ಇಂದುಮೌಳಿ ನೀನೆ ಬೆಸಸಿದಂತೆ ಮಾಡು ಮಾಡೆನುತ್ತೆ
ಸವಿಯೆ ಕಣ್ಣೆ ಗತಿಯೆ ಮತಿಯೆ ಸುಖವೆ ಕರುಣಿಸೆಂದೆನುತ್ತೆ
ತವರೆ ತಾಯಿ ತಂದೆ ಬಂಧು ಕುಲವೆ ಕರುಣಿಸೆಂದೆನುತ್ತೆ
ಗುರುವೆ ಕಲ್ಪತರುವೆ ದಯದಿರವೆ ಕರುಣಿಸೆಂದೆನುತ್ತೆ
ಪರವೆ ಪರಕೆ ಪರವೆ ಶಾಂತದಿರವೆ ಕರುಣಿಸೆಂದೆನುತ್ತೆ
ಪುಳಕವಡರೆ ನೋಟವಮರೆ ನುಡಿ ಹೊರಳ್ದು ತೊದಳನೆಳಸಿ
ತಿಳಿವುತೀವೆ ಮಾಯೆ ಮುಸುಳೆ ಬೆಳಗು ಒಳಗೆ ತೊಳಗಿ ಮಸಗೆ

ಬಯುಗೆ ಬೆಳೆಯೆ ತವಕವೇಳೆ ಮನದ ಲಲ್ಲಿ ಮುಂದುವರಿಯೆ
ಜಯತು ಜಗುಳೆ ಜಾಣ್ಮೆಯುಗುಳೆ ಎಚ್ಚರಿಚ್ಚೆಗಕ್ಕೆ ಸರಿಯೆ
ಮುತ್ತಿ ಚಂದ್ರಕಾಂತಮಂ ಜಿಗುಲ್ತು ಜೊನ್ನವಪ್ಪುವಂತೆ
ಹತ್ತಿ ಸಾದುರ್ ಸೊಗಸು ಸೆಳೆಯೆ ಭಕ್ತಿ ಮುಕ್ತಿಯಪ್ಪುವಂತೆ
ನಮಃ ನಮಃಶಿವಾಯ ಎನುತೆ ಗದ್ಗದಕ್ಕೆ ಕಂಠ ಸಾದುರ್
ನೆನಸು ಕನಸು ಕನಸು ನೆನಸೆನಿಪ್ಪ ಭಾವವಳಿದು ಸಾದುರ್
ಶಿವನನಪ್ಪಿದಂ ನಮಃಶಿವಾಯ ಮುರುಘನೊಲ್ಮೆಯಿಂದೆ
ಭವನನಪ್ಪಿದಂ ನಮಃಶಿವಾಯ ನೇಹದುರ್ಕಿನಿಂದೆ
ಮನಸಿನಪ್ಪು ಚಿತ್ತವಪ್ಪೆ ತನುವಿನಪ್ಪಿನೊಳಗೆ ಬೆರಿಸಿ
ನೆನಹು ನಿಲ್ಕೆ ಕಳೆಯು ಕೂಡೆ ಲಿಂಗದೊಳಗೆ ಲಿಂಗವೆನಿಸಿ
ಮನದ ಮತ್ಸರಕ್ಕೆ ತನು ನಮಃಶಿವಾಯವಾಗಿ ಕರಗೆ
ತನುವ ಮಜ್ಜನಕ್ಕೆ ಮಾಡಿ ಯುಗ್ಗವಣಿಯನೆನಿಸಿ ಕರಗೆ
ಎರಡುವಲ್ಲದೊಂದುವೆನಿಸಿದಂತು ಹರನೊಳೊಂದುಗೂಡಿ
ಕರಗಿ ಕಳೆದು ಭಾವವಳಿದು ಲಿಂಗದೊಳಗೆ ಬೆರಸಿ ಕೂಡಿ
ಜೀವನು ನಮಃಶಿವಾಯ ಪರಮನುಂ ನಮಃಶಿವಾಯ
ಆವನೇನನೆಂಬನೆಂಬುದೆಲ್ಲವುಂ ನಮಃಶಿವಾಯ
ವಾಗಿ ಕೂಡಿ ಕರಗಿದಂ ನಮಃ ಶಿವಾಯ ಮುರುಘನಾಹ

ಆಗಳೊಗೆದವಲ್ಲಿ ದುಂದುಭಿ ಸ್ವನಂಗಳೆಲ್ಲವಾಹ
ಹರನ ಕರುಣ ವೃಷ್ಟಿಯೊಡನೆ ಪುಷ್ಪವೃಷ್ಟಿ ಸುರಿದವಲ್ಲಿ
ಹರನ ಪೊಗಳ್ವ ನಾದದೊಳಗೆ ಶಂಖನಾದ ಒಗೆದುದಲ್ಲಿ
ಮೇಲೆ ತೋರಿದಂ ಶಿವಂ ನಿಜಸ್ವರೂಪ ಕಳೆಯನಲ್ಲಿ
ನೀಲಗಳದ ಹತ್ತು ಭುಜದ ಪಂಚಮುಖದ ಮುಖಮನಲ್ಲಿ
ತೋರುತುಂ ನಮಃಶಿವಾಯ ನಂದಿನಾಥ ನೋಡೆನುತ್ತೆ
ಮೀರಿದಂ ಮಹೇಶನಿರವಿದರಿದು ಧರಣಿಗರಿದೆನುತ್ತೆ
ನೇಮವಳಿದು ಪೂಜೆ ಪಂಚವರ್ಣವಾದರೀಗಳುಂಟೆ
ಸೀಮೆಗೆಟ್ಟು ಚಿತ್ತವಿಟ್ಟು ನಾಮವಾಗಿ ನಿಂದರುಂಟೆ
ನಾಮರಸದೊಳಿಂತು ನೆನೆದು ಬಿರಿದು ಕರಗಿ ಹರಿದರುಂಟೆ
ಪ್ರೇಮರಸದ ಮಳೆಯನೆನ್ನ ಮೇಲೆ ಕವಿಸು ಕರೆದರುಂಟೆ

ಘಾಪುರೇ ನಮಃಶಿವಾಯ ಮುರುಘ ಘಾಪು ಘಾಪೆನುತ್ತೆ
ಘಾಪು ಮಝುರೆ ಪೂತುರಾವುದೇವು ಮುರುಘ ಲೇಸೆನುತ್ತೆ

ಬಂದ ನವ ವಿಮಾನದೊಳಗೆ ಮೋಹದಿಂದಲಿರಿಸಿ ನೋಡಿ
ಮುಂದೆ ಕುಣಿವ ಗಣಸಮೂಹದಿಂ ಸುಖಾಶ್ರುವೇರೆ ನೋಡಿ
ನಡೆದು ಬಂದು ರಜತ ಗಿರಿಯನೆಯ್ದಿ ಮೋಹದಿಂದೆ ಪೊಕ್ಕು
ನುಡಿಯಲೆಯ್ದಿ ಸೊಗಯಿಸುತ್ತೆ ಗಿರಿಜೆಗರುಪಿ ಲೀಲೆ ಮಿಕ್ಕು
ಗಣಪದಂಗಳೊಳ್ನಮಃಶಿವಾಯ ಮುರುಘರೊಪ್ಪವಿರಿಸಿ
ತ್ರಿಣಯನುಂ ನಮಃಶಿವಾಯ ಮುರುಘರಂ ನಿಜಕ್ಕೆ ಸಲಿಸಿ
ಮೇರುಗಿರಿ ನಿವಾಸದೊಳಗೆ ಮಾರಮಥನನೆಸೆದನಲ್ಲಿ
ಚಾರುತರ ಗಣಂಗಳೊಳ್ಪುರಾರಿ ಯೊಪ್ಪುತಿರ್ದನಲ್ಲಿ
ಸಕಲ ಭಕ್ತ ಭಾವ ಭರಿತ ಚರಿತನೊಪ್ಪುತಿರ್ದನಲ್ಲಿ
ಸಕಲ ದೇವ ಮಕುಟ ಮಣಿ ವಿಳಾಸ ಚರಣನೆಸೆದನಲ್ಲಿ
ನಿತ್ಯ ನಿರುಪಮ ಪ್ರಕಾಶ ಭೂಷನೊಪ್ಪುತಿರ್ದನಲ್ಲಿ
ಸತ್ಯ ಶರಣ ಕರುಣಿ ಹಂಪೆಯರಸನೊಪ್ಪುತಿರ್ದನಲ್ಲಿ

**ಕಂದ**|| ಭುವನಂ ನೆರೆ ಮೆಚ್ಚೆ ನಮ ।
ಶ್ಶಿವಾಯ ಮುರುಘ ನೆರೆ ಮೆರೆದ ಶಂಕರನೊಲವಿಂ ||
ದವೆ ಭಕ್ತಿ ಸುಖಮನೆಸಗೀ ।
ಗವಿರಳ ಕರುಣಾಬ್ಧಿ ಹಂಪೆಯ ವಿರೂಪಾಕ್ಷಂ ||

# ಅಯ್ಯಾಡಿಯರ ಮಹಾತ್ಮೆ.

ಕಂದ॥ ಚರಿತದಿ ಅಯ್ಯಾಡಿಯರ್ಗಂ।
ಪರಮಸುಖೋದಯಮನಿತ್ತು ಮೆರೆದ ಮಹೇಶಂ
ಕರುಣದಿನೆಮಗತಿ ಭಕ್ತಿಯ॥
ನಿರದೆ ವಿರೂಪಾಕ್ಷದೇವನೀಗನವರತಂ॥

## ರಗಳೆ.

ಶ್ರೀಪಲ್ಲವಕ್ಷಿತಿಯ ನಡುಮೆಯೊಪ್ಪಂ ಮಿಗಲ್
ಭೂಪ ಕುಲತಿಲಕನಾಗುತ್ತ ತೇಜಂ ಮಿಗಲ್
ಮೆರೆವ ನೃಪವಂಶಮೆಂಬಧಿಕ ದುಗ್ಧಾಬ್ಧಿಯೊಳ್
ನೆರೆ ಪೂರ್ಣ ಚಂದ್ರನಂತುದಯಿಸಿದ ಕಾಂತಿಯೊಳ್
ಮೆರೆವನಯ್ಯಾಡಿ ಎಂಬ ಪೆಸರಿಂ ದಯಾಪರಂ
ಕರಿಕಂಠ ಭಕ್ತ್ಯಂಗನಾ ಸುಖಪ್ರದ ವರಂ
ಆತನುರು ಧರ್ಮಪ್ರತಾಪಂಗಳಿಂತಲ್ಲಿ
ಖ್ಯಾತ ಕಲಿಕಾಲ ರಿಪುಗಳ ನೂಂಕಿ ತಾನಲ್ಲಿ
ಶೈವಸಿದ್ಧಾಂತ ಸಾಮ್ರಾಜ್ಯ ಮಣಿಪೀಠದೊಳ್
ಭಾವದಿಂ ಶಿವಧರ್ಮದಂತಿರ್ದು ತೇಜದೊಳ್
ಸರ್ವೋರ್ವಿಯಂ ಪಾಲಿಸುತ್ತಿರಲ್ ವಿಭವದೊಳ್
ಪೂರ್ವ ಮನುಧರ್ಮಮಂ ಬಿಡದಾತನಾತ್ಮನೊಳ್
ಕುಲ ಪರಂಪರೆಯಿಂದಲೈತಂದ ಕೀರ್ತಿಯಂ
ಕುಲಗಿರಿ ತಟಂಗಳೊಳಗಿರಿಸಿ ಸತ್ಕೀರ್ತಿಯಂ
ಇಂತು ಭುಜಬಲದಿಂದ ರಾಜ್ಯವಂ ಪಾಲಿಪಂ
ಸಂತತಂ ಸರ್ವ ಜನರಂ ನೋಡಿ ರಕ್ಷಿಪಂ
ಸರ್ವ ವೇದಂಗಳಿಗೆ ಸಾರಮಾಗಿರುತಿರ್ಪ
ಸರ್ವ ಸಜ್ಜನರ ಸಂತೋಷದಿಂದಿರುತಿರ್ಪ
ಎಲ್ಲೆಡೆಯೊಳುಂ ವೈದಿಕಾಚಾರ ವಿಪ್ರರುಂ

ಎಲ್ಲೆಡೆಯೊಳುಂ ಯೋಗ ಸತ್ಕ್ರಿಯಾ ಯುಕ್ತರುಂ
ಎಲ್ಲೆಡೆಯೊಳುಂ ಸರ್ವ ವೇದ ಘೋಷಂಗಳುಂ
ಎಲ್ಲೆಡೆಯೊಳುಂ ಶೈವಶಾಸ್ತ್ರ ರವಂಗಳುಂ
ಇಂತಿರಲ್ಕಾತನಧಿಕೋರ್ವಿಯಂ ಪಾಲಿಸುತೆ

ಕಂತುಹರನಾಜ್ಞೆಯಿಂ ವೈರಾಗ್ಯದೊಳ್ಸಲುತೆ
ಜನನಿ ಜನಕನು ಪುತ್ರ ಮಿತ್ರ ಸತಿ ಎಂಬವರು
ಕನಸಿನ ಸಿರಿಯು ಮಂಜು ಮೇಘದೊಡ್ಡಣೆ ಇವರು
ಸ್ಥಿರವೆಂದು ಶಿವಭಕ್ತಿಯುಳ್ಳವರು ನಂಬುವರೆ
ಎರವಿನ ಸಿರಿಯನಿಂತು ಹಿರಿದಾಗಿ ನಂಬುವರೆ
ಸತಿ ಸುತರು ಇರ್ದಂತೆ ಬಯಲಾದುದಂ ಕಂಡೆ
ಗತಿಮತಿಯು ಶಿವನಲ್ಲದಿಲ್ಲೆಂದು ನಿಜಗಂಡೆ
ಇನ್ನು ಮಾಯದ ಮೋಹದೊಳು ನಿಲುವುದಲ್ಲೆಂದು
ಚನ್ನಾಗಿ ನಿಶ್ಚೈಸಿ ಮನಮುಮಂ ತಾಂ ಬಲಿದು

ಕುಲಧುರ್ಯನಪ್ಪ ನಿಜ ಪುತ್ರನಂ ರಾಜ್ಯದೊಳ್
ಲಲಿತಮತಿ ಪಟ್ಟಮಂ ಕಟ್ಟಿ ಶಿವದಾಸ್ಯದೊಳ್
ಬಂದು ಭೂಮಿಯೊಳುಳ್ಳ ಶಿವನ ತಾಣಂಗಳೊಳ್
ಬಂದು ವಂದಿಸಿ ಪೊಗಳ್ದು ಪಾಡಿ ಹರ್ಷಂಗಳೊಳ್
ಸ್ತುತಿಮಾಲೆಗಳನರ್ಚಿಸಲ್ನೆನೆದು ಬೇಗದಿಂ
ನುತಮಪ್ಪ ಪೊನ್ನಾಂಬಲಕೆಯ್ದಿ ರಾಗದಿಂ
ಅಲ್ಲಿ ರುದ್ರಸ್ತೋತ್ರದಿಂ ಶಿವನನರ್ಚಿಸುತೆ
ಸಲ್ಲೀಲೆಯಿಂದಿಂತು ಹರನನುರೆ ಪೂಜಿಸುತೆ
ಪಲಕೆಲವು ಕಾಲನಲ್ಲಿಯೆ ಸುಖದಿನಿರುತಿರಲ್
ಪಲವು ಶಿವತೀರ್ಥಂಗಳಲ್ಲಿ ಶೋಭಿಸುತಿರಲ್
ಬಲ್ಲಂದದಿಂ ಭರ್ಗನಂ ಪೊಗಳ್ದು ಬಣ್ಣಿಸುತೆ
ಎಲ್ಲಂದದಿಂ ಶಿವನ ಸೇವೆಯಂ ಭಾವಿಸುತೆ
ಇಂತು ಬಹು ವಿಧದ ಶಿವ ಕಾರ್ಯರತ ತಾನಾಗಿ
ಕಂತುಹರ ಸಂಭೃತ್ಯ ಭಾವ ಸಂಯುತನಾಗಿ

ಇರುತಿರಲ್ ಶಿವನೊಲ್ದು ಕೈಲಾಸ ಗಿರಿಯಲ್ಲಿ
ಪರಿಪರಿಯ ಭಕ್ತಿಯುಂ ಗಾನವುಂ ಪೇಳ್ದಲ್ಲಿ
ನೆನೆದು ನಂದಿ ಪ್ರಮುಖ ರುದ್ರಗಣವುಂ ನೋಡಿ
ಘನ ಶಿವಂ ಬೆಸಸಿದನವರ್ಗೆ ಕರುಣಂ ಗೂಡಿ
ಎನ್ನ ಸದ್ಭಕ್ತನಂ ತರ್ಪುದತಿ ವೇಗದಿಂ
ಮನ್ನಣೆಯ ಮದ್ಭಾವ ಯುಕ್ತನಂ ರಾಗದಿಂ
ಎಂದೆನಲ್ಶಿವನಾಜ್ಞೆಯಿಂದವರ್ನಡೆತಂದು
ಸಂದಿಲ್ಲದಿದರ್ದರಯ್ಯಡಿಯರ್ಗಳೊಳ್ನಿಂದು
ಇಂದುಶೇಖರನಾಜ್ಞೆಯಂ ತಿಳುಪಿ ಪೇಳುತುಂ
ತಂದ ಪುಷ್ಪಕದೊಳಗೆ ಕುಳ್ಳಿರಿಸಿ ಪೊಗಳುತುಂ
ತಳರಲೊಡನದು ರಜತಗಿರಿಯ ಸಭೆಯೊಳ್ನಿಲಲ್
ಘಳಿಲನೇ ಪುಷ್ಪಕದೊಳಿಳಿದು ನಿಂದಿರಲ್
ಶಿವನಧಿಕ ಕರುಣದಿಂ ನೋಡಿ ಕೊಂಡಾಡುತುಂ
ಭವನಾತನಂ ಗಿರಿಜೆಗರುಪಿ ಕೊಂಡಾಡುತಂ
ಎನ್ನ ಮೇಗಣ ಮೋಹದಿಂದ ರಾಜ್ಯವ ಬಿಟ್ಟು
ಮನ್ನಣೆಯ ಭಕ್ತನಿವನೆಂದು ಹರುಷಂಬಟ್ಟು
ಗಣಪದವಿಯೊಲಿದಿತ್ತ ಅತ್ಯಧಿಕ ಭೋಗದಿಂ
ಫಣಿಕಂಕಣಂ ರಜತಗಿರಿಯೊಳನುರಾಗದಿಂ
ಕಾಲಹರ ದುರಿತಭಂಜನ ಭರ್ಗನೊಪ್ಪಿದಂ
ಶೂಲಧರ ಭವಭಯ ಧ್ವಾಂತ ರವಿಯೊಪ್ಪಿದಂ
ಇಂತೆಮ್ಮ ಪಂಪಾಪುರಾಧೀಶನೊಪ್ಪಿದಂ
ಸಂತತಂ ಹಂಪೆಯ ವಿರೂಪಾಕ್ಷನೊಪ್ಪಿದಂ

**ಕಂದ||** ಅಯ್ಯಡಿಯರ ಭಕ್ತಿಗೊಲವಿಂ ।
ಮೆಯ್ಯಾನುತೆ ರುದ್ರಪದವನಿತ್ತುರೆ ಮೆರೆದಂ ॥
ಅಯ್ಯನೆನಗೀಗೆ ಭಕ್ತಿಯ ।
ನಯ್ಯಡಿಯರ ಭೃತ್ಯನೆಂದು ಹಂಪೆಯದೇವಂ ॥

# ಮಾನಕಂಜರ ಮಹಾತ್ಮೆ.

ಕಂದ॥ ಐದೆ ಧರೆ ಪೊಗಳೆ ಭಕ್ತಿಯೊ।
ಳಯ್ದುಂ ಮೊಗದೀಶ್ವರಂಗೆ ತನಯಳ ಮುಡಿಯಂ
ಕೊಯ್ದಿತ್ತ ಮಾನಕಂಜರ।
ನೊಯ್ದಂ ಕೈಲಾಸಪುರಕೆ ಹಂಪೆಯ ರಾಯಂ

## ರಗಳೆ.

ಎಂತೆನಲ್ಚೋಳದೇಶದೊಳೊಂದು ಪುರಮುಂಟು
ಸಂತತಂ ಕುಂಜಾರೆನಿಪ್ಪ ನಾಮಮುದುಂಟು
ತನಗಾಗಿ ಮೆರೆವದು ಪುರದೊಳಿರ್ಪಂ ನೋಡ
ವಿನುತ ನಾಮಂ ಮಾನಕಂಜರೆಂಬುದು ನೋಡ
ಸತ್ಯವೇ ತಾಯಿ ಶಿವಜ್ಞಾನವೇ ಪಿತ ತನಗೆ
ನಿತ್ಯಸಖಿ ದಯೆ ಧರ್ಮ ಒಡಹುಟ್ಟಿದಂ ತನಗೆ
ಬೇರೆ ಬಂಧುಗಳಿಲ್ಲ ಬಂಧು ಶಿವಭಕ್ತರುಂ
ಬೇರಾಪ್ತ ಜನರಿಲ್ಲ ಆಪ್ತರೇ ಶರಣರುಂ
ತನ್ನ ಸಂಪದವಭವ ಭಕ್ತರ್ಗೆ ಸಂಪದಂ
ತನ್ನ ಧನವೀಶಭಕ್ತರ್ಗಂ ದಯಾಸ್ಪದಂ
ಇಲ್ಲೆನೆ ಕುಬೇರಂಗೆ ಕಡನನೀವಂ ನೋಡ
ಬಲ್ಲಿದಂ ವ್ಯವಹಾರಿ ಎನಿಸಿ ಮೆರೆವಂ ನೋಡ
ಹೊನ್ನುವುಂ ತನ್ನವುಂ ಕೊಟ್ಟು ಸದ್ಭಕ್ತಿಯುಂ
ತನ್ನತ್ತ ತೆಗೆದುಕೊಳ್ವಂ ಶಿವನ ಭಕ್ತಿಯುಂ
ಸಮಯಾಸಮಯವಿಲ್ಲ ಭವನ ಭಕ್ತರ್ಬರಲ್
ಸಮಯಂಗಳಿಲ್ಲ ಚೋಳಾದಿ ಭೂಪರ್ಬರಲ್
ಧನವನೀವಂ ತನ್ನನೀವನಾ ಭಕ್ತರ್ಗೆ
ತನುವನೀವಂ ಮನವನೀವನಾ ಭಕ್ತರ್ಗೆ
ಭಕ್ತರಿಲ್ಲದ ದಿನದ ತೃಪ್ತಿಯುಪವಾಸವದು
ಭಕ್ತರೊಡಗೂಡಿದುಪವಾಸವೇ ತೃಪ್ತಿಯದು

ಇಂತಿರುತೆ ನಿತ್ಯ ಲಿಂಗಾರ್ಚನೆಗೆ ನಡೆತಂದು
ಸಂತತಂ ಕುಂಜಾರ ದೇವರಲ್ಲಿಗೆ ಬಂದು
ಸಂದ ಕಸ್ತೂರಿ ಚಂದನ ಗಂಧ ವೃಂದದಿಂ
ಒಂದುಗೂಡಿರ್ದ ನವ ಕುಸುಮ ಸಂದೋಹದಿಂ
ಪೂಜೆಯಂ ಮಾಡುತುಂ ನಲವಿಂದೆ ನೋಡುತುಂ
ಓಜೆಯಂ ಮೀರುತುಂ ತೆಗೆದು ತಳ್ಕೈಸುತುಂ
ಕೆಲಬಲದೊಳೆಸೆವ ಮಾಣಿಕ ದಿಂಡೆಯಂ ಕಟ್ಟಿ
ನಲಿನಲಿದು ಹೊಸ ಮುತ್ತಿನಿಂಡೆಯಂ ಸಮುಕಟ್ಟಿ
ಅಲ್ಲಿ ಭಕ್ತರು ಬರಲ್ಬಯಸಿದುದನೀವುತುಂ
ಸಲ್ಲೀಲೆಯಿಂದೆ ಶಿವಭಕ್ತಿಯುಮನೀವುತುಂ
ಪಾದೋದಕ ಪ್ರಸಾದಂಗಳಿಂ ತಣಿವುತುಂ
ಸಾದರಂ ಮಿಗೆ ಭಕ್ತಿಗೋಷ್ಠಿಯಿಂ ಪೇರ್ಚುತುಂ
ತನ್ನರಮನೆಗೆ ಬಂದು ಸಕಲ ಸುಖದಿಂದಿರಲ್
ತನ್ನರಸಿಯುಂ ತಾನುಮಳ್ತಿಯಿಂದಿರುತಿರಲ್

ವನಿತೆ ಇಂತೆಂದಳೊಂದುಂ ಕೊರತೆ ಎಮಗಿಲ್ಲ
ತನಯನೋರ್ವಂ ನೋಳ್ಪುದಲ್ಲದೊಪ್ಪದಿದೆಲ್ಲ
ದೇವರಂ ಬೇಡಿರೇ ಸೀವೋರ್ವ ಪುತ್ರನಂ
ಭೂವಳಯಮುಮನಾಳ್ವ ಮಂಗಳ ಚರಿತ್ರನಂ
ಎನೆ ಕಿವಿಗಳಂ ಮುಚ್ಚಿ ಶಿವಶಿವಿಂತೆಂಬರೇ
ಮನದೊಳಂ ದೇವರಂ ಬೇಳ್ಪುದಂ ಕಲಿವರೇ
ಬೇಡಲಾಗದು ಶೂಲಿಯೊಲಿವುದಂ ಬಲ್ಲವಂ
ಮಾಡಿತಂ ನೋಡುತಿರ್ಪುದು ಶಂಭುವೆಲ್ಲವಂ
ಶಿವನಿಚ್ಚೆಯಲ್ತೆ ಬೇರೊಂದಿಚ್ಚೆ ಎಮಗುಂಟೆ
ಶಿವನಿರಿಸಿದಂತಲ್ಲದೆಂತು ಬೇರಿರವುಂಟೆ
ಎಂದೆನಲ್ಕಾಣದಾ ವನಿತೆ ಪೇಳುತ್ತಿರಲ್
ಕುಂದದಂದಂದಿಂಗೆ ಬಿಡದೆ ಈಯುತ್ತಿರಲ್

ಒಂದು ಮನವಲ್ಲದೆ ಮನದೊಳೊಂದು ದಿವಸದೊಳ್
ಇಂದುಮುಖಿ ಇಚ್ಚೆಯಂ ಸಲಿಸುವ ನಿಹಾರದೊಳ್
ಶಿವನಿಳಯಮಂ ಪೊಕ್ಕು ನಿತ್ಯ ನೇಮಂ ಮಾಡಿ

ಶಿವನನಾಗಳೆ ಬೇಡಲೆಂದು ಮನಮಂ ಮಾಡಿ
ಬೇಡುವದೆ ಕಷ್ಟವಯ್ಯೋ ಭಕ್ತಿ ಇಂತಾಯ್ತು
ಬೇಡಲಾನೊಲ್ಲೆನೆನ್ನವಳ ಮನ ಎಂತಾಯ್ತು
ಎಂದು ಬೇಡಲ್ಕೆ ಬೇಡದಿರಲ್ಕೆಯುಂಜುತ್ತೆ
ಬಂದು ಭಯದಿಂ ಕುಗ್ಗಿ ತಡಬಡಂಬೋಗುತ್ತೆ
ಪುತ್ರಿಯುಂ ಕೊಡು ದೇವ ಎಂದು ಕೈಮುಗಿದಿರ್ದು
ಪುತ್ರನಂ ಕೇಳ್ವುದಂ ಮರೆದು ಭೀತಿಯೊಳಿರ್ದ
ಪೊಡಮಟ್ಟು ತೀರ್ಥಜಲಮಂ ಕೊಳ್ವ ಸಮಯದೊಳ
ಮೃಡನಿರಿಸಿದಂ ಪ್ರಸಾದತ್ವಮಂ ಹರುಷದೊಳ್
ಶಿವನಿರಿಸೆ ಲಲನಾ ಜನನ ಬೀಜ ಬಿಂದುವಂ
ಅವುಗೂಡಿ ಪಾದೋದಕ ಪ್ರಸಾದತ್ವವಂ
ಕೈಕೊಂಡು ಬಂದನುಮ್ಮಳಿಸುತುಂ ನಿಳಯಕ್ಕೆ
ಏಕೆ ಬೇಡಿದೆನೀಶನೇನೆಂಬೆನಿನಿತಕ್ಕೆ
ಎಂದೆನುತೆ ಬಂದು ವನಿತೆಗೆ ಪೇಳೆ ನಲವಿಂದೆ
ಇಂದುಮುಖಿ ಸಂತಸಂಬಡುತೆ ಮನದೊಲವಿಂದೆ

ಇರೆ ಶಿವನ ಕಾರುಣ್ಯ ಸಂದ ಸುಖಫಲದಿಂದೆ
ಸರಸಿಜಾನನೆಗೆ ಗರ್ಭಂದೋರೆ ಚಲ್ವಿಂದೆ
ಬರಬರಲ್ ನಳನಳಿಸಿ ನವಮಾಸವಾಗುತಿರೆ
ತರುಣಿಯಂ ಪಡೆದಳ್ ಜನೋತ್ಸಾಹಮುಣ್ಮುತಿರೆ
ಹರುಷದಿಂದಾಡುತುಂ ಜಾತಕರ್ಮಂ ಮಾಡಿ
ತಿರುಮುಡಿಯೊಡೆಯಳೆಂದು ನಾಮಕರಣಂ ಮಾಡಿ
ಶಿವನ ಸದ್ಭಕ್ತರ್ಗೆ ಹೊನ್ನಮಳೆಯಂ ಗರೆದು
ಭವನ ಭಕ್ತರ್ಗೆ ಬೇಡಿದನಿತ್ತು ನೆರೆ ಮೆರೆದು
ತಂದೆ ತಾಯ್ಗಳು ನೋಡಿ ಹರ್ಷದಿಂ ಹಿಗ್ಗುತಿರೆ
ಬಂದ ಭಕ್ತರ ಪಾದಜಲದಿಂದ ಸಲಹುತಿರೆ
ಶಿವನ ಪ್ರಸಾದದಿಂ ಪೊಲಿಪಾಲನೀಂಟುತುಂ
ನವನವ ಪ್ರೇಮದಿಂ ಬಾಲ್ಯಮಂ ದಾಂಟುತುಂ
ಬೆಳೆವುತಿರ್ದಳ್ ಚಂದ್ರಕಳೆಯಂತೆ ತಳತಳಿಸಿ
ಬೆಳೆವುತಿರ್ದಳ್ ಕಲ್ಪಲತೆಯಂತೆ ನಳನಳಿಸಿ

# ಉರಿಲಿಂಗ ಪೆದ್ದಿಗಳ ವಚನಗಳು.

## ದೇವರ ಸ್ವರೂಪು.

**ವಿವರಣೆ:**— ಈ ವಿಷಯುವನ್ನು ವಿವರಿಸುವ ಮುಂದಿನ ವಚನಗಳು ಅತ್ಯಂತ ಮಹತ್ವದವವೆ. ಇವುಗಳಲ್ಲಿ ಪರಮಾತ್ಮನೆಂದರೇನು, ಪರಮಾತ್ಮನಿಗೂ ಜಗತ್ತಿಗೂ ಏನು ಸಂಬಂಧವಿದೆ, ಅಂಗ, ಲಿಂಗಗಳೆಂದರೇನು, ಪರಮಾತ್ಮನು ಜಗತ್ತಿನಲ್ಲಿ ಹ್ಯಾಗೆ ವ್ಯವಹರಿಸುತ್ತಾನೆ, ಪರಮಾತ್ಮನಿಗೆ ಜೀವಾತ್ಮನಿಗೂ ಏನು ಸಂಬಂಧವಿದೆ ಈ ಮಹತ್ವದ ವಿಷಯುಗಳು ವಿವರಿಸಲ್ಪಟ್ಟಿವೆ. ಹಾಗೂ ಮೋಕ್ಷವೆಂದರೇನು, ಅದನ್ನು ಹ್ಯಾಗೆ ಪಡೆಯಬೇಕು ಎಂಬುದೂ ಕೂಡ ನಿರ್ದೇಶಿಸಲ್ಪಟ್ಟಿದೆ.

**ವಚನ:**— ೧. ಒಂದೇ ವಸ್ತು ತನ್ನ ಲೀಲೆಯಿಂದ ಪರಮಾತ್ಮ ಜೀವಾತ್ಮನಾಯಿತ್ತು. ಪರಮಾತ್ಮನೇ ಲಿಂಗ, ಜೀವಾತ್ಮನೇ ಅಂಗ, ಸಂಗವೇ ಏಕಾತ್ಮ. ತತ್‌ಪದವೆ ಪರಮಾತ್ಮ, ತ್ವಂ ಪದವೇ ಜೀವಾತ್ಮ, ಅಸಿಪದವೇ ತಾದಾತ್ಮ್ಯವಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:**— ಪರಮಾತ್ಮನೊಬ್ಬನೇ ಇದ್ದಾನೆ, ಅನೇಕ ದೇವತೆಗಳಿಲ್ಲೆಂದು ವಚನಕಾರರು ಯಾವಾಗಲೂ ಅಭಿಪ್ರಾಯಪಡುವದುಂಟು. ಆದ್ದರಿಂದ ಜಗತ್ತನ್ನು ನಿರ್ಮಾಣಮಾಡಿದವನು ಒಬ್ಬನೇ ದೇವನು ಎಂದು ಅವರು ನಂಬಿದ್ದಾರೆ. ಈತನನ್ನು ಅವರು ಪರಶಿವ, ಲಿಂಗ, ಪರಮಾತ್ಮ, ಶೂನ್ಯ, ಬಯಲು, ನಿರವಯ, ಶಿವ, ಪರಬ್ರಹ್ಮ ಎಂದು ಮೊದಲಾದ ಹೆಸರುಗಳಿಂದ ಕರೆದಿದ್ದಾರೆ.

ಈ ಪರಬ್ರಹ್ಮ ವಸ್ತುವಿನ ಒಂದು ಲೀಲೆಯ ಮೂಲಕ ಅದೇ ಎರಡು ತೆರನಾಗುತ್ತದೆ. ಒಂದನ್ನು ಪರಮಾತ್ಮನೆಂತಲೂ ಎರಡನೆಯದನ್ನು ಜೀವಾತ್ಮನೆಂತಲೂ ಇಲ್ಲಿ ಉರಿಲಿಂಗ ಪೆದ್ದಿಗಳು ಕರೆದಿದ್ದಾರೆ. ಈ ಎರಡು ಶಬ್ದಗಳಿಗೆ ಷಟ್‌ಸ್ಥಲದಲ್ಲಿ ಅನುಕ್ರಮವಾಗಿ ಲಿಂಗ ಮತ್ತು ಅಂಗ ಎಂಬ ಹೆಸರುಗಳೂ ಇವೆ.

ಈ ಅಂಗಲಿಂಗಗಳು ಒಂದನ್ನೊಂದು ಬಿಟ್ಟು ಜಗತ್ತಿನಲ್ಲಿ ವ್ಯವಹರಿಸಲಾರವು. ಜಗತ್ತಿನಲ್ಲಿ ನಡೆದಿರುವ ಕಾರ್ಯಗಳೆಲ್ಲ ಇವೆರಡೂ ಕೂಡಿ ನಡೆದದ್ದರ ಮೂಲಕವಾಗಿಯೇ ಉಂಟಾಗುತ್ತವೆ.

ಹೀಗೆ ವ್ಯವಹರಿಸುವಲ್ಲಿ ಅಂಗವು ತಾನೆಲ್ಲಿಂದ ಬಂದಿದೆಂಬದನ್ನು ಲಕ್ಷಿಸದೆ ವರ್ತಿಸಿದ್ದಾದರೆ ಅದು ಅನೇಕ ಯಾತನೆಗಳನ್ನು ಅನುಭವಿಸುತ್ತ ಜನ್ಮಾಂತರಗಳನ್ನು ಹೊಂದುತ್ತ ಹೋಗುವದು. ಆದರೆ ಅದು ತಾನಾರೆಂಬದನ್ನು ತಿಳಿದುಕೊಂಡು ಲಿಂಗಾಭಿಮುಖವಾಗಿದ್ದುಕೊಂಡು ಕಾರ್ಯಗಳನ್ನು ಮಾಡುತ್ತ ಹೋದರೆ, ಲಿಂಗದ ಗುಣಗಳು ಅದರಲ್ಲಿ ಬಂದು ಕಡೆಗೆ ಅದು ಲಿಂಗವೇ ಆಗುವದು.

ಈ ವಿಷಯವನ್ನು ವಚನಕಾರನು ವಚನದ ಅಂತ್ಯಭಾಗದಲ್ಲಿ ತತ್ತ್ವಮಸಿ ಎಂಬ ವಾಕ್ಯದ ಮೂಲಕ ಸೂಚಿಸಿರುವನು. ತತ್ ಎಂದರೆ ಪರಮಾತ್ಮ ಅಥವಾ ಲಿಂಗ, ತ್ವಂ ಎಂದರೆ ಜೀವಾತ್ಮ ಅಥವಾ ಅಂಗ, ಅಸಿ ಎಂದರೆ ಈ ಉಭಯ ವಸ್ತುಗಳ ಸಾಮ್ಯೈಕ್ಯತ್ವವನ್ನು ಸೂಚಿಸುವ ಶಬ್ದ ಎಂದು ಹೇಳಿರುವನು.

ವಚನಕಾರನು ಈ ವಚನದಲ್ಲಿ ಪರಮಾತ್ಮನು ಒಬ್ಬನೇ ಇದ್ದು ಅವನಿಂದಲೇ ಸೃಷ್ಟಿಯು ಆಯಿತು. ಮತ್ತು ಮನುಷ್ಯನಿಗೆ ಅಂತಿಮ ಧ್ಯೇಯವು ಲಿಂಗಾಂಗ ಸಾಮ್ಯೈಕ್ಯವೆಂಬುದಿರಬೇಕೆಂತಲೂ ಇದರಲ್ಲಿ ಸೂಚಿಸಿರುವನು.

**ವಚನ:**— ೨. ಜಲದೊಳಗಣ ಸೂರ್ಯನಂತೆ ಇರ್ಪನಯ್ಯಾ ಶಿವನು. ಲೋಕಾದಿಲೋಕಂಗಳೊಳಗಿರ್ದೊಡೇನು? ಜಗದ ಪುಣ್ಯಪಾಪ ಸ್ವರ್ಗ ನರಕ ಬಂಧ ಮೋಕ್ಷಕ್ಕೆ ಒಳಗಾದಾತನೇ? ಅಲ್ಲ. ಅದೆಂತೆಂದೊಡೆ, ಜಲದೊಳಗಣ ಪ್ರಕೃತಿ ವಿಕೃತಿಗಳು ಜಲಕ್ಕಲ್ಲದೆ ಸೂರ್ಯಂಗಿಲ್ಲವಾಗಿ. ಲೋಕದ ಸ್ಥಿತಿಗತಿ ಲೋಕಕ್ಕಲ್ಲದೆ, ಶಿವಂಗಿಲ್ಲವಾಗಿ. ಅನಂತಕೋಟಿ ಬ್ರಹ್ಮಾಂಡಗಳು ತನ್ನ ಒಡಲೊಳಗಿರ್ಪವೆಂದೊಡೆ, ತಾ ಹೊರಗಾಗಿ, ಅಡಗಲೆಡೆಯುಂಟೇ? ಇದು ಕಾರಣ ನಮ್ಮ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ವಿಶ್ವದೊಳಗೆ ಹೊದ್ದಿಯೂ ಹೊದ್ದದಿರಬಲ್ಲ. ವಿಶ್ವಾಧಿಪತಿಯಾಗಲೂ ಬಲ್ಲ.

**ಭಾವ:**— ಹಿಂದಿನ ವಚನದಲ್ಲಿ ಅಂಗಲಿಂಗಗಳು ಹ್ಯಾಗೆ ಉದ್ಭವಿಸಿದವೆಂಬದನ್ನು ವಚನಕಾರನು ಹೇಳಿರುವನು. ಈ ವಚನದಲ್ಲಿ ಅಂಗಲಿಂಗ

ಗಳು ಜಗತ್ತಿನಲ್ಲಿ ಯಾವ ಬಗೆಯ ಸಂಬಂಧವುಳ್ಳವೆಂಬದನ್ನು ಹೇಳಿರುವನು. ಇವುಗಳಲ್ಲಿ ಅಂಗವು ಅನೇಕ ನ್ಯೂನತೆಗಳುಳ್ಳದ್ದಿರುತ್ತದೆ. ಆದ್ದರಿಂದ ಲಿಂಗಕ್ಕೂ ಕೂಡ ಇದೇ ಸ್ಥಿತಿಯೋ ಹ್ಯಾಗೆ, ಮತ್ತು ಅವೆರಡೂ ಪರಸ್ಪರ ಕೂಡಿಕೊಂಡು ವ್ಯವಹರಿಸುವದು ಹ್ಯಾಗೆ ಶಕ್ಯವು ಎಂಬ ಸಂಶಯವು ಉತ್ಪನ್ನವಾಗುತ್ತದೆ. ಈ ಸಂಶಯದ ಪರಿಹಾರವನ್ನು ವಚನಕಾರನು ಈ ವಚನದಲ್ಲಿ ಮಾಡಿರುವನು. ಅವನು ಈ ವಿಷಯದಲ್ಲಿ ಅನ್ನುವದೇನೆಂದರೆ, ಜಲದಲ್ಲಿ ಹ್ಯಾಗೆ ಸೂರ್ಯನು ಪ್ರತಿಬಿಂಬಿಸಿ ಅದರಲ್ಲಿ ಕಾಣುತ್ತಾನೋ, ಹಾಗೆಯೇ ಲಿಂಗವೂ ಕೂಡ ಅಂಗದಲ್ಲಿ ಪ್ರತಿಬಿಂಬಿಸಿ ಹೊಳೆಯುತ್ತದೆ. ಜಲದಲ್ಲಿ ಹ್ಯಾಗೆ ಸೂರ್ಯನ ಸ್ವರೂಪವನ್ನು ಕಾಣಬಹುದೋ ಹಾಗೆಯೇ ಅಂಗದಲ್ಲಿ ಲಿಂಗದ ಸ್ವರೂಪವನ್ನು ಕಾಣಬಹುದು. ಯಾವ ಬಗೆಯ ಸಂಬಂಧವು ಜಲ ಮತ್ತು ಸೂರ್ಯ ಇವುಗಳ ಮಧ್ಯದಲ್ಲಿ ಇರುತ್ತದೋ ಅದೇ ಬಗೆಯ ಸಂಬಂಧವು ಅಂಗ ಲಿಂಗದಲ್ಲಿ ಅಥವಾ ಜಗತ್ತು ಮತ್ತು ಪರಮಾತ್ಮ ಇವುಗಳಲ್ಲಿ ಇರುತ್ತದೆಂದು ಹೇಳಿರುವನು.

ಈ ಸಂಬಂಧವನ್ನು ಕುರಿತು ಅವನು ಅನ್ನುವದೇನೆಂದರೆ, ಶಿವನು ಮೇಲ್ಕಂಡ ರೀತಿಯಿಂದ ಅನಂತ ಲೋಕಗಳಲ್ಲಿ ಇದ್ದರೂ, ಆ ಲೋಕಗಳಿಗೆ ಇರುವ ಬಂಧಮೋಕ್ಷಗಳೂ ಅವುಗಳಲ್ಲಿಯ ಪಾಪಪುಣ್ಯಗಳೂ ಸ್ವರ್ಗ ನರಕಗಳೂ ಪರಶಿವನಿಗೆ ಉಂಟಾಗುವದಿಲ್ಲ. ನೀರಿನ ಪ್ರಾಕೃತಿಕ ಗುಣಗಳು ಹ್ಯಾಗೆ ಸೂರ್ಯನಿಗೆ ಸಂಬಂಧಪಡುವದಿಲ್ಲವೋ ಅದೇ ಮೇರೆಗೆ ಲೋಕದಲ್ಲಿಯ ಕುಂದುಕೊರತೆಗಳು ಲೋಕಕ್ಕೆ ಮಾತ್ರ ಸಂಬಂಧಪಡುತ್ತವೇ ಹೊರತು ಪರಮಾತ್ಮನಿಗೆ ಸಂಬಂಧಪಡುವದಿಲ್ಲ. ಲೋಕದ ಸ್ಥಿತಿಗತಿಗಳು ಲೋಕಕ್ಕಲ್ಲದೆ ಶಿವಂಗೆ ಇರಲಾರವು.

ಬ್ರಹ್ಮಾಂಡಗಳು ಅನಂತಕೋಟಿ ಇದ್ದು ಅವು ಎಷ್ಟು ವಿಸ್ತೀರ್ಣವಾಗಿದ್ದರೂ ಅವೆಲ್ಲವೂ ಪರಮಾತ್ಮನ ಕುಕ್ಷಿಯೊಳಗೆ ಮಾತ್ರ ಇರುತ್ತವೆ. ಪರಮಾತ್ಮನು ಬಾಹ್ಯ ಸೃಷ್ಟಿಗೆ ಅತೀತನಾಗಿರುತ್ತಾನೆ. ಆದ್ದರಿಂದ ಇಂಥವನು ಈ ಸೃಷ್ಟಿಯೊಳಗೆ ಒಂದು ವಿಶಿಷ್ಟ ಸ್ಥಾನದಲ್ಲಿ ಇರುತ್ತಾನೆಂತಲೂ ಅನ್ನಲಿಕ್ಕೆ ಬರಲಾರದು. ಹೀಗೆ ತಿಳಿಯುವದು ತಪ್ಪು ಇರುತ್ತದೆ. ಯಾಕಂದರೆ, ಬಹು ವಿಸ್ತೀರ್ಣವಾದ ಪರಮಾತ್ಮನು ಕಿಂಚಿತ್ತಾದ ಸೃಷ್ಟಿಯಲ್ಲಿ ಇರಲಿಕ್ಕೆ ಇದರಲ್ಲಿ ಸ್ಥಳವೆಲ್ಲಿದೆ ?

ಆದ್ದರಿಂದ ಪರಮಾತ್ಮನು ಜಗತ್ತಿನಲ್ಲಿ ಕೇವಲ ಪ್ರತಿಬಿಂಬರೂಪನಾಗಿ ವಾಸಿಸುತ್ತಾನೆ. ಅವನು ಜಗತ್ತಿನ ಬಂಧಮೋಕ್ಷಗಳಿಗೆ ಹೊರಗಾಗಿರು

ತ್ತಾನೆ. ಮತ್ತು ಅವನು ಜಗತ್ತಿಗೆ ಮೀರಿದವನಾಗಿರುತ್ತಾನೆ. ಮೀರಿದವನಾದರೂ ಜಗತ್ತನ್ನು ಬಿಟ್ಟಿಲ್ಲ. ಅದರಲ್ಲಿಯೇ ಇದ್ದಾನೆ. ಅದರಲ್ಲಿ ಇದ್ದರೂ ಅದರಲ್ಲಿ ಬೆರಿಸದೆ ಇದ್ದಾನೆ. ಬೆರಿಸದೆ ಇದ್ದರೂ ಜಗತ್ತನ್ನು ತನ್ನ ಅಂಕಿತದಲ್ಲಿಟ್ಟುಕೊಂಡಿರುತ್ತಾನೆ. ಜಗತ್ತಿನ ವ್ಯಾಪಾರಗಳೆಲ್ಲವೂ ಪರಮಾತ್ಮನ ಅಧೀನತೆಯಲ್ಲಿಯೇ ಸಾಗಿರುತ್ತವೆ ಎಂದು ವಚನಕಾರನು ಹೇಳಿರುವನು.

**ವಚನಃ**— ೩. ಶಿವ ತನ್ನ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು. ರಚಿಸಿದವನು ವಿಶ್ವಕ್ಕೆ ಹೊರಗಾಗಿರ್ದನೇ? ಇಲ್ಲ. ವಿಶ್ವಮಯ ತಾನಾದನು. ವಿಶ್ವವೆಲ್ಲವೂ ತಾನಾದೊಡೆ ವಿಶ್ವದುತ್ಪತ್ತಿ ಸ್ಥಿತಿ ಲಯಕ್ಕೊಳಗಾದನೇ? ಇಲ್ಲ. ಅದೇನುಕಾರಣವಂದೊಡೆ, ಅಜಾತನಾಗಿ ಉತ್ಪತ್ತಿ ಇಲ್ಲ. ಕರ್ಮರಹಿತನಾಗಿ ಸ್ಥಿತಿಗೊಳಗಲ್ಲ ಮರಣರಹಿತನಾಗಿ ಲಯಕ್ಕೊಳಗಲ್ಲ. ಇಂತೀ ಗುಣತಯಂಗಳ ಹೊದ್ದಲರಿಯ ತಾನಲ್ಲದೆ ವಿಶ್ವಕ್ಕಾಧಾರವಿಲ್ಲಾಗಿ ದೂರಸ್ಥನಲ್ಲ ತನ್ನಲ್ಲಿ ತಾನಲ್ಲದೆ ಅನ್ಯವು ತೋರಲರಿಯದಾಗಿ ಇದಿರಿಲ್ಲ. ಇದಿರಿಲ್ಲಾಗಿ ವಿಶ್ವಮಯ ತಾನಾದುದೇ ಸತ್ಯ. ಅರಸು ಕಾಲಾಳಾಗ ಬಲ್ಲ ತನ್ನ ವಿನೋದಕ್ಕೆ ಮರಳಿ ಅರಸಾಗಬಲ್ಲ. ನಿಮ್ಮ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲನಯ್ಯಾ.

**ಭಾವಃ**— ವಚನಕಾರನು ಹಿಂದಿನ ವಚನದ ಭಾವವನ್ನು ಹೆಚ್ಚಿಗೆ ಸ್ಪಷ್ಟವಾಗಿ ಇಲ್ಲಿ ಉಲ್ಲೇಖಿಸಿರುವನು ಪರಮಾತ್ಮನು ತನ್ನ ವಿನೋದಕ್ಕೆ ಈ ಅನಂತವಾದ ವಿಶ್ವವನ್ನು ರಚಿಸಿದ್ದಾನೆ. ಹೀಗೆ ರಚಿಸಿದ ಪರಮಾತ್ಮನು ವಿಶ್ವಕ್ಕೆ ಹೊರಗಾಗಿಲ್ಲ. ಅವನು ವಿಶ್ವಮಯನಾಗಿ ಇದ್ದಾನೆ. ಅಂದರೆ ವಿಶ್ವದಲ್ಲೆಲ್ಲ ತುಂಬಿಕೊಂಡಿರುವನು. ಹೀಗೆ ಅವನು ವಿಶ್ವದಲ್ಲೆಲ್ಲ ತುಂಬಿಕೊಂಡರೂ ವಿಶ್ವದ ಉತ್ಪತ್ತಿ ಸ್ಥಿತಿ ಲಯಕ್ಕೆ ಒಳಗಾಗಿರುವದಿಲ್ಲ. ಅದು ಹ್ಯಾಗೆಂದರೆ ಪರಮಾತ್ಮನಿಗೆ ತಂದೆ ತಾಯಿಗಳಿಲ್ಲಾದ್ದರಿಂದ ಅವನಿಗೆ ಉತ್ಪತ್ತಿ ಇಲ್ಲ. ಹಾಗೆಯೇ ಅವನು ಕರ್ಮರಹಿತನಾಗಿರುವನು. ಆದ್ದರಿಂದ ಅವನಿಗೆ ಸ್ಥಿತಿಯು ಇಲ್ಲ. ಅವನಿಗೆ ಮರಣವೂ ಇಲ್ಲ. ಆದ್ದರಿಂದ ಲಯವೂ ಇಲ್ಲ.

ಅದೇ ಪ್ರಕಾರ ಪರಮಾತ್ಮನು ವಿಶ್ವದಿಂದ ದೂರನಿಲ್ಲ. ಆದಕ್ಕೆ ಅವನ ಸಂಬಂಧವದೆ. ಈ ಸಂಬಂಧವು ಇಲ್ಲದೆ ಹೋದದ್ದಾದರೆ ವಿಶ್ವವು ನಡೆಯಲಾರದು. ಅದು ನಿಂತುಹೋಗುವದು. ಯಾಕಂದರೆ ವಿಶ್ವದಲ್ಲಿ ಸ್ವತಂತ್ರತ್ವವು ಇಲ್ಲ.

ಆದರಂತೆಯೇ ಪರಮಾತ್ಮನಿಗೆ ಇದಿರಿಲ್ಲ. ಅಂದರೆ ಅವನನ್ನು ಸರಿಗಟ್ಟಿ ಅವನು ಮಾಡುವ ಕಾರ್ಯಗಳನ್ನು ಮಾಡಿ ಜಗತ್ತಿನಲ್ಲಿ ವ್ಯವಹರಿಸುವ ಬೇರೊಂದು ವಸ್ತುವಿಲ್ಲ ಪರಮಾತ್ಮನಲ್ಲಿ ತೋರತಕ್ಕ ವಸ್ತುವು ಪರಮಾತ್ಮನ ಹೊರ್ತು ಬೇರೆ ಯಾವದಿರಬಹುದು? ಅವನಲ್ಲಿ ಅವನ ಹೊರ್ತು ಬೇರೆ ಯಾವ ವಸ್ತುವೂ ಇರಲಾರದು.

ಹೀಗೆ ಪರಮಾತ್ಮನಿಗೆ ಇದಿರೆಂಬುದು ಇಲ್ಲದ್ದರಿಂದ ಪರಮಾತ್ಮನು ವಿಶ್ವಮಯನಾಗಿರುವನೆಂದು ತಾನಾಗಿಯೇ ಸಿದ್ಧವಾಗುತ್ತದೆಂದು ವಚನಕಾರನು ಹೇಳುತ್ತಾನೆ

ಈ ಪ್ರಕಾರ ವಚನಕಾರನು ತನ್ನ ಅಭಿಪ್ರಾಯವನ್ನು ಹೇಳಿ ಅದನ್ನು ಸ್ಪಷ್ಟಪಡಿಸಲಿಕ್ಕೆ ಒಂದು ಉದಾಹರಣೆಯನ್ನು ಕೊಟ್ಟಿರುವನು ಅರಸಾದವನು ಅರಸನಂತೆ ವ್ಯವಹರಿಸುವದಲ್ಲದೆ. ಕಾಲಾಳಿನಂತೆಯೂ ವ್ಯವಹರಿಸಬಲ್ಲನು. ಅವನು ಹೀಗೆ ತನ್ನ ವಿನೋದಕ್ಕಾಗಿ ವ್ಯವಹರಿಸಬಹುದು. ಆದರೆ ಹೀಗೆ ವ್ಯವಹರಿಸಿದಾಕ್ಷಣಕ್ಕೆ ಅರಸನೆಂಬ ಅವನ ಮಹತ್ವಕ್ಕೆ ಚ್ಯುತಿಯು ಬರಲಾರದು. ಯಾಕಂದರೆ ಅವನು ತನ್ನ ಮನಸ್ಸಿಗೆ ಬಂದಾಗ ಕಾಲಾಳಿನ ಸ್ಥಿತಿಯನ್ನು ಬಿಟ್ಟು ಅರಸನ ಸ್ಥಿತಿಯನ್ನು ಕೂಡಲೆ ತಾಳಬಹುದು. ಇದೇ ಪ್ರಕಾರ ಲಿಂಗಕ್ಕೂ ಅಂಗಕ್ಕೂ ಪರಮಾತ್ಮನಿಗೂ ಜಗತ್ತಿಗೂ ಸಂಬಂಧವಿದೆ ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ

**ವಚನಃ—** ೪. ಲಿಂಗದ ಮರ್ಮವನರಿವುದರಿದು. ಲಿಂಗದ ಸಂಜ್ಞೆಯರಿವುದರಿದು. ಲಿಂಗವಂತಹದಿಂತಹದೆಂದರಿವುದರಿದು ನೋಡಾ! ಲಿಂಗದಲ್ಲಿಯೇ ಆಗಮುವಯ್ಯ. ಭೂಮಿಯೇ ಪೀಠಿಕೆ, ಆಕಾಶವೇ ಲಿಂಗವೆಂದರಿದಾತನು ಲಿಂಗವನರಿದವನಲ್ಲ. ಲಿಂಗದಲ್ಲಿಯೇ ಆಗಮುವಯ್ಯ. ಲಿಂಗದಾದಿ ಬ್ರಹ್ಮ, ಮಧ್ಯ ವಿಷ್ಣು, ಅಂತ್ಯ ರುದ್ರ. ಇಂತು ತ್ರೈಲಿಂಗವೆಂದರಿದಾತನು ಲಿಂಗವನರಿವನಲ್ಲ. ಲಿಂಗದಲ್ಲಿಯೇ ಆಗಮುವಯ್ಯ. ಲಿಂಗಮಧ್ಯೇ ಜಗತ್ಸರ್ವಂ ಎಂಬ ಭಾವರಹಿತ ಲಿಂಗ. ಬ್ರಹ್ಮಾ ವಿಷ್ಣು ಸ್ಸರ್ವೇ ದೇವೈರಪ್ಯಗೋಚರಂ ಎಂದು, ಮಹೇಶ್ವರ ಜ್ಯೋತಿರಾಪಾತಾಳೆ ವ್ಯವಸ್ಥಿತಾ। ಅತೀತಂ ಸತ್ಯ ಲೋಕಾದಿರನಂತ ದಿವ್ಯಮೀಶ್ವರಂ। ಇಂತಾದನು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನೆಂದರಿದ ಶರಣಂಗೆ ಸುಲಭ. ಮಿಕ್ಕಿನವರ್ಗೆ ಅಸುಲಭ.

**ಭಾವಃ—** ಈ ವರೆಗೆ ವಚನಕಾರನು ಅನೇಕ ಬಗೆಯ ಸಾದೃಶ್ಯಗಳನ್ನು ಹೇಳಿ ದೇವರ ಸ್ವರೂಪವನ್ನು ತಿಳಿಸಲಿಕ್ಕೆ ಪ್ರಯತ್ನಿಸಿದನು. ಆದರೆ ಹೀಗೆ ಹೆರವರಿಗೆ ತಿಳಿಸುವದು ಕಷ್ಟವು ಮತ್ತು ಹೀಗೆ ತಾನು ಜ್ಞಾನಮಾಡಿಕೊಳ್ಳುವದೂ ಕಷ್ಟವೆಂದು ಈ ವಚನದಲ್ಲಿ ಹೇಳಿರುವನು. ಅವನು ಇಲ್ಲಿ ಅನ್ನುವದೇನೆಂದರೆ, ಲಿಂಗದ ಮರ್ಮವನರಿಯುವದು ಕಠಿಣವು. ಲಿಂಗದ ಗುರ್ತುಗಳನ್ನು ಕಂಡುಹಿಡಿಯುವದು ಅಸಾಧ್ಯವು. ಮತ್ತು ಲಿಂಗವು ಅಂತಹದು ಇಂತಹದು ಎಂದು ಗೊತ್ತುಮಾಡಿಕೊಳ್ಳುವದೂ ಆಗದ ಮಾತು. ಅನೇಕರು ಆಗಮ ಗ್ರಂಥಗಳಿವೆ, ಅವುಗಳಿಂದ ದೇವರನ್ನು ತಿಳಿಯಬಹುದು ಎಂದು ತಿಳಿಯುತ್ತಾರೆ. ಆದರೆ ನಿಜವಾದ ಆಗಮಗಳು ಲಿಂಗದಲ್ಲಿಯೇ ಇವೆ. ಅಂದರೆ ಪರಮಾತ್ಮನ ಜ್ಞಾನವು ಪುಸ್ತಕದಲ್ಲಿ ಇಲ್ಲ. ಲಿಂಗದಲ್ಲಿಯೇ ತಿಳಿಯಬೇಕೆಂದು ವಚನಕಾರನ ಅಭಿಪ್ರಾಯವು. ಬೇರೆ ಕೆಲವರು ಪರಮಾತ್ಮನ ಸ್ವರೂಪವನ್ನು ಹೇಳುವಲ್ಲಿ ಅವನಿಗೆ ಭೂಮಿಯೇ ಪೀಠ, ಆಕಾಶವೇ ಲಿಂಗ ಎಂದು ಹೇಳುತ್ತಾರೆ. ಬೇರೆ ಕೆಲವರು ಲಿಂಗದ ಆದಿ ಬ್ರಹ್ಮ, ಲಿಂಗದ ಮಧ್ಯ ವಿಷ್ಣು ಎಂದು ಮೊದಲಾಗಿ ಹೇಳುವದುಂಟು. ಮತ್ತು ಈ ವಿಧಾನಗಳಿಗೆ ಆಗಮದ ಆಧಾರಗಳನ್ನೂ ಕೊಡುವದುಂಟು. ಆದರೆ ಇದು ಲಿಂಗದ ತಿಳುವಳಿಕೆಯಲ್ಲ. ಲಿಂಗದ ಒಳಗೆ ಹೀಗೆ ಇದೆ ಹೊರಗೆ ಹೀಗೆ ಇದೆ, ಅದರಲ್ಲಿ ಜಗತ್ತು ಇದೆ ಎಂದು ವಿವರಿಸಲಿಕ್ಕೆ ಬರಲಾರದು. ಯಾಕಂದರೆ ಇಂಥ ವಿಚಾರಗಳಿಗೆ ಲಿಂಗವು ಅತೀತವಾಗಿರುವದು. ನಿಜವಾಗಿ ಲಿಂಗವು ಬ್ರಹ್ಮ ವಿಷ್ಣು ಮತ್ತು ಇತರ ದೇವತೆಗಳಿಗೆ ಅಗೋಚರವಾಗಿರುವದು. ಅದು ಲೋಕಾದಿ ಲೋಕಗಳನ್ನು ಮೀರಿರುವದು. ಅದು ಅನಂತವಾಗಿರುವದು. ಅದು ಪರಾ ವಸ್ತುವು. ಈ ರೀತಿ ಅದರ ಸ್ವರೂಪವು. ಇದನ್ನು ತಿಳಿದುಕೊಂಡು ವರ್ತಿಸುವವನೇ ಶರಣನು. ಇಂಥವನಿಗೆ ಮಾತ್ರ ಲಿಂಗವು ಸುಲಭವಾಗುವದು, ಉಳಿದವರಿಗೆ ಕಠಿಣವಾಗುವದೆಂದು ಹೇಳಿರುವನು.

**ವಚನಃ—**೫. ತನ್ನ ತಾನರಿದಿಹವೆ ಪರಮಾತ್ಮಯೋಗ. ತನ್ನ ತಾ ಮರೆದಿಹವೆ ಮಾಯಾಸಂಬಂಧ. ಅಂತರಂಗ ಬಹಿರಂಗ ಪರಮಾಕಾಶ ಮಧ್ಯದಲ್ಲಿ ಪರಮಾತ್ಮನು ಪರಬ್ರಹ್ಮ ಸ್ವರೂಪನು ನಿತ್ಯನಿರಂಜನವು ಉಪಮಾತೀತ ನಿಃಪತಿ ಕೇವಲ ನಿಷ್ಕಲ ಸ್ವರೂಪನು. ಭ್ರೂಮಧ್ಯದಲ್ಲಿ ಪರಮಾತ್ಮನೆ ಅಂತರಾತ್ಮನಾಗಿ ಸಕಲ ನಿಷ್ಕಲನಾಗಿಪ್ಪನು. ಹೃದಯಸ್ಥಾನದಲ್ಲಿ ಆ ಪರಮಾತ್ಮನೆ ಜೀವಾತ್ಮನಾಗಿ ಕೇವಲ ಸಕಲನಾಗಿಪ್ಪನು. ಬ್ರಹ್ಮರಂ

ಧ್ರಸ್ಥಾನದಲ್ಲಿ ನಿಷ್ಕಲ ಗುರುಮೂರ್ತಿಲಿಂಗ, ಭ್ರೂಮಧ್ಯಸ್ಥಾನದಲ್ಲಿ ಸಕಲ ಪರಂಜ್ಯೋತಿರ್ಲಿಂಗ, ಹೃದಯಸ್ಥಾನದಲ್ಲಿ ಕೇವಲ ಸಕಲ ಜಂಗಮಲಿಂಗ. ಇಂತು ಪರಮಾತ್ಮನೆ ಅಂತರಾತ್ಮ, ಪರಮಾತ್ಮನೆ ಜೀವಾತ್ಮ, ಪರಮಾತ್ಮನೆ ಗುರುಲಿಂಗ, ಪರಮಾತ್ಮನೆ ಶಿವಲಿಂಗ, ಪರಮಾತ್ಮನೆ ಜಂಗಮಲಿಂಗ, ಇಂತು ಪರಬ್ರಹ್ಮವೆ ಪರಮಾತ್ಮ, ಪರಮಾತ್ಮನೆ ಸರ್ವಾತ್ಮ ಪರಮಾತ್ಮನೆ ಸರ್ವಗತ, ಪರಮಾತ್ಮನೆ ಆತ್ಮಗತ. ಇದು ಕಾರಣ ಪರಮಾತ್ಮನೆ ಅಂತರಂಗ ಬಹಿರಂಗ ಭರಿತ ಪ್ರಾಣಲಿಂಗ. ಇಂತು ಅರಿದುದೆ ಪರಮಾತ್ಮಯೋಗ, ಮರವೆಯೇ ಮಾಯಾಸಂಬಂಧವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಇದರಲ್ಲಿ ವಚನಕಾರನು ತನ್ನನ್ನು ತಾನು ಅರಿಯುವದು ಹೇಗೆ? ಹೀಗೆ ಅರಿಯತಕ್ಕ ಪರಮಾತ್ಮನ ಸ್ವರೂಪು ತನ್ನಲ್ಲಿ ಅವುದು ಎಂಬದನ್ನು ಹೇಳಿರುವನು.

ಮನುಷ್ಯನಲ್ಲಿ ಮುಖ್ಯ ಸ್ಥಾನಗಳು ಮೂರು ಇವೆ. ಅವು ಹೃದಯ, ಭ್ರೂಮಧ್ಯ, ಮತ್ತು ಬ್ರಹ್ಮರಂಧ್ರ ಹೀಗೆ ಇವೆ. ಇವು ಮನುಷ್ಯನ ಮುಖ್ಯ ಕೇಂದ್ರಸ್ಥಾನಗಳೆಂದು ತಿಳಿಯಬಹುದು. ಪರಮಾತ್ಮನು ಈ ಮೂರೂ ಸ್ಥಾನಗಳಲ್ಲಿ ಇರುತ್ತಾನೆ. ಇವುಗಳಲ್ಲಿ ಅವನನ್ನು ಕಾಣುವದೇ ತನ್ನನ್ನು ತಾನು ತಿಳಿಯುವದು. ಇದೇ ಪರಮಾತ್ಮಯೋಗವೆನಿಸುವದು. ತಿಳಿಯದೆ ಹೋದರೆ ಮಾಯಾಸಂಬಂಧವೆಂದು ವಚನಕಾರನು ಹೇಳುತ್ತಾನೆ.

ಬ್ರಹ್ಮರಂಧ್ರಕ್ಕೆ ವಚನಕಾರನು ಇಲ್ಲಿ ಪರಮಾಕಾಶವೆಂಬ ಹೆಸರನ್ನು ಕೊಟ್ಟಿರುವನು. ಇದರ ಮಧ್ಯದಲ್ಲಿ ಪರಮಾತ್ಮನು ವಾಸಿಸುತ್ತಿದ್ದು ಅಲ್ಲಿ ಅವನು ಪರಬ್ರಹ್ಮಸ್ವರೂಪನು, ನಿತ್ಯನು, ನಿರಂಜನನು ಎಂದರೆ ಅತ್ಯಂತ ಶುದ್ಧನು, ಹಾಗೂ ಉಪಮಾತೀತನು, ನಿಃಪತಿಯು ಎಂದರೆ ಜೋಡಿಲ್ಲದವನು, ಮತ್ತು ಕೇವಲ ನಿಷ್ಕಲ ಸ್ವರೂಪನು ಆಗಿರುತ್ತಾನೆ. ಎಂದರೆ ಪರಮಾತ್ಮನು ಜಗತ್ತಿನ ಆರಂಭಸ್ಥಿತಿಯಲ್ಲಿ ಯಾವ ಬಗೆಯಾಗಿ ಕಲಾರಹಿತನಾಗಿ ಇರುತ್ತಾನೋ ಅದೇ ಬಗೆಯಾಗಿ ಅವನು ಈ ಬ್ರಹ್ಮರಂಧ್ರದಲ್ಲಿ ವಾಸಿಸುತ್ತಾನೆ. ಅವನು ಭ್ರೂಮಧ್ಯದಲ್ಲಿಯೂ ಇದ್ದು ಅಲ್ಲಿ ಸಕಲನಿಷ್ಕಲ ಸ್ವರೂಪನಾಗಿರುತ್ತಾನೆ. ಎಂದರೆ ಇಲ್ಲಿ ಅವನು ಕೇವಲ ನಿಷ್ಕಲನೂ ಅಲ್ಲ ಕೇವಲ ಸಕಲನೂ ಅಲ್ಲ, ಉಭಯ ಸ್ಥಿತಿಗಳನ್ನು ಕೂಡಿಕೊಂಡು ಇರುತ್ತಾನೆ. ಅಲ್ಲಿ ಅವನಿಗೆ ಅಂತರಾತ್ಮನೆಂಬ ಹೆಸರು. ಹೃದಯಸ್ಥಾನದಲ್ಲಿ ಪರಮಾತ್ಮನು ಕೇವಲ ಸಕಲ ರೂಪನಾಗಿ

ಇರುತ್ತಾನೆ. ಅಲ್ಲಿ ಅವನಿಗೆ ಜೀವಾತ್ಮನೆಂಬ ಹೆಸರು. ಈ ಜೀವಾತ್ಮನು ಅಲ್ಲಿ ಜಗತ್ತಿಗೆ ಸಂಬಂಧಪಟ್ಟವನಾಗಿ ವ್ಯವಹರಿಸುತ್ತಾನೆ.

ಈ ಮೂರು ಸ್ಥಳಗಳಲ್ಲಿ ಲಿಂಗದ ಸ್ವರೂಪು ಯಾವ ಬಗೆಯಾಗಿ ಇರುತ್ತದೆಂಬದನ್ನು ಅವನು ಈ ವಚನದಲ್ಲಿ ವಿವರಿಸಿದ್ದು ಹ್ಯಾಗೆಂದರೆ, ಅವನು ಬ್ರಹ್ಮರಂಧ್ರದಲ್ಲಿ ನಿಷ್ಕಲ ಗುರುಮೂರ್ತಿ ಲಿಂಗವಾಗಿರುವನು. ಎಂದರೆ ಬೋಧಾಶಕ್ತಿಯುಳ್ಳವನಾಗಿ ಉಚ್ಚತಮ ಸ್ಥಿತಿಯಲ್ಲಿ ಕೇವಲ ನಿಷ್ಕಲಸ್ವರೂಪನಾಗಿ ಇರುತ್ತಾನೆ. ಭ್ರೂಮಧ್ಯದಲ್ಲಿ ಜ್ಯೋತಿರ್ಲಿಂಗ ರೂಪದಿಂದ ಇರುತ್ತಾನೆ. ಇದು ಅತ್ಯಂತ ಪ್ರಕಾಶಮಾನವಾದ ಸ್ಥಿತಿಯು. ಅದು ಅಲ್ಲಿ ಓಂಕಾರರೂಪವು. ಅದಕ್ಕೆ ಮಹಾಲಿಂಗವೆಂತಲೂ ಹೆಸರುಂಟು. ಹೃದಯಸ್ಥಾನದಲ್ಲಿ ಪರಮಾತ್ಮನು ಜಂಗಮಲಿಂಗವೆಂಬ ಹೆಸರನ್ನು ಪಡೆದಿದ್ದಾನೆ. ಈ ಲಿಂಗವು ಚೈತನ್ಯಾತ್ಮಕವಾದದ್ದು. ಇದು ಶರೀರದ ಬಹಿರಂಗದ ವ್ಯಾಪಾರಗಳಿಗೆ ಸಂಬಂಧಪಟ್ಟದ್ದಿರುತ್ತದೆ.

ಈ ಪ್ರಕಾರ ಈ ಸ್ಥಾನಗಳಲ್ಲಿ ಪರಮಾತ್ಮನು ಎರಡು ಬಗೆಯ ಸ್ಥಿತಿಗಳಲ್ಲಿ ಕೂಡಿಕೊಂಡಿರುತ್ತಾನೆ. ಮನುಷ್ಯನು ತನ್ನನ್ನು ಸಂಬಂಧಿಸಿ ಮಾಡುವ ಕಾರ್ಯಗಳು ಹಾಗೂ ಜಗತ್ತನ್ನು ಸಂಬಂಧಿಸಿ ಮಾಡುವ ಕಾರ್ಯಗಳು ಹೀಗೆ ಎರಡು ವಿಧವಾಗಿವೆ. ಇವೆರಡೂ ಪರಸ್ಪರ ಸಂಬಂಧವುಳ್ಳವು. ಹ್ಯಾಗೆಂದರೆ, ಜೀವಾತ್ಮನು ಜಂಗಮಲಿಂಗ ಸ್ವರೂಪನಾಗಿ, ಅಂತರಾತ್ಮನು ಮಹಾಲಿಂಗಸ್ವರೂಪನಾಗಿ, ಪರಮಾತ್ಮನು ಕೇವಲ ನಿಷ್ಕಲ ಲಿಂಗಸ್ವರೂಪನಾಗಿ ಇರುತ್ತಾನೆ. ಈ ಮರ್ಮವನ್ನು ತಿಳಿದು ವರ್ತಿಸಿದಾಗಲೇ ಪರಮಾತ್ಮಯೋಗವೆಂದು ವಚನಕಾರನು ಅಂದಿದ್ದಾನೆ.

ಈ ಪ್ರಕಾರ ವಚನಕಾರನು ಹೇಳಿ ಈ ಬಗೆಯ ವಿಚಾರಗಳಿಂದ ಪರಮಾತ್ಮನಲ್ಲಿ ಭಿನ್ನತೆಯನ್ನು ಕಲ್ಪಿಸಿದಂತಾಗಲಿಲ್ಲ ಎಂದು ಅಂದಿದ್ದಾನೆ. ಎಂದರೆ ಪರಮಾತ್ಮನೇ ಅಂತರಾತ್ಮನು ಮತ್ತು ಜೀವಾತ್ಮನು. ಪರಮಾತ್ಮನೇ ಗುರುಲಿಂಗ ಶಿವಲಿಂಗ ಜಂಗಮಲಿಂಗರೂಪಾದಾತನು. ಪರಬ್ರಹ್ಮನು ಮನುಷ್ಯನಲ್ಲಿ ಪರಮಾತ್ಮಸ್ವರೂಪನಾಗಿ ವಾಸಿಸುತ್ತಾನೆ. ಮತ್ತು ಜಗತ್ತಿನಲ್ಲೆಲ್ಲ ಸರ್ವಾತ್ಮನಾಗಿ ಸರ್ವಗತನಾಗಿ ಆತ್ಮಗತನಾಗಿ ಇರುತ್ತಾನೆ. ಜಗತ್ತಿನ ಒಳಗೂ ಹೊರಗೂ ಅವನು ಪ್ರಾಣಲಿಂಗನಾಗಿ ಇದ್ದಾನೆ ಎಂದು ಇಲ್ಲಿ ಹೇಳಿರುವನು.

## ಬಸವೇಶ್ವರ

# ಷಟ್‌ಸ್ಥಲ ವಚನದ ಕಥಾಸಾರ.

### ೨ ನೆಯ ವಚನದ ಕಥೆ. (೧-೧) *

**ಕಂಕಾಳ.**

ಕಂಕಾಳೀ ಶೋಡಶಂ ಭವೇತ್ ಸ್ಕಂದಪುರಾಣದಲ್ಲಿಯ ಕಾಶೀಕಾಖಂಡ ದಲ್ಲಿ ಸೂತಮುನಿ ನೈಮಿಷಾರಣ್ಯವಾಸಿಗಳಿಗೆ-ಬಲಿಯು ಭಾಗೀರಥಿಯ ತೀರದಲ್ಲಿ ಒಂದು ಕಡಿಮೆ ನೂರು ಯಜ್ಞವ ಮಾಡಿ ಮತ್ತೊಂದಂ ಮಾಡ ಬೇಕೆಂಬಾಗ ಇಂದ್ರನು ವಿಷ್ಣುವಿನ ಕೂಡೆ ನನ್ನ ಪದವ ಕೊಡಿಸು ಎನಲು, ಆಗ ಹರಿಯು ಗದೆ, ಚಕ್ರ, ಬಿಲ್ಲು ಇವ ಕೂಡೆ ಬಲಿಯ ವಧಿಸು ಎನಲು ಅದು ನನ್ನ ಕಯ್ಯಲಾಗದೆನಲು ಆಗ ತಾನೆ ಅದಿತಿ ಯಲ್ಲಿ ವಾಮನನಾಗಿ ಹುಟ್ಟಿ ವೇದವನೋದುತ್ತ ಬಲಿಯ ಯಜ್ಞದ ಸಮೀಪಕ್ಕೆ ಬರಲು ಅವರಾರೆಂದು ಚಂಡ, ಅರ್ಕರೆಂಬ ದೂತರ ಕಳು ಹಲು ಅವರು ನೋಡಿ ಒಬ್ಬ ಗಿಡ್ಡ ಹಾರುವನೆಂದು ಹೇಳಲು ತಾ ಬಂದು ಕರೆದುಕೊಂಡು ಹೋಗಿ ಏನು ಬಂದಿರೆಂದು ಕೇಳಲು ತೊಳಚಿಯ ಬಿತ್ತುವುದಕ್ಕೆ ಮೂರಡಿ ಭೂಮಿ ಬೇಕೆನಲು, ಆಗ ಬಲಿ ಮೂರಡಿ ಹೆಜ್ಜೆಯ ಕೋ ಎನಲು ಒಂದು ಹೆಜ್ಜೆಯಾಗುವಂತೆ ಭೂಮಿಯ ಮೆಟ್ಟಿ ಒಂದು ಹೆಜ್ಜೆಯ ಆಕಾಶಕ್ಕೆ ಇರಿಸಿ ಇನ್ನೊಂದು ಹೆಜ್ಜೆಯ ಭೂಮಿಯ ತಾ ಅಂದು ತಲೆಯ ಮೇಲೆ ಮತ್ತೊಂದು ಹೆಜ್ಜೆಯನಿಡಲು ಬಲಿ ಪಾತಳಕ್ಕಿಳಿದನು. ಅತ್ತ ಆಕಾಶಕ್ಕೆ ನೀಡಿದ ಹೆಜ್ಜೆ ಬ್ರಹ್ಮನ ಬಳಿಗೆ ಹೋಗಲು ಇದು ಶಿವನ ಪಾದವಾದರೆ ಅಭಿಷ್ಟವಾಗಲಿ ಮತ್ತೊಬ್ಬರದಾದೊಡೆ ಕೆಡಲಿ ಎಂದು ಕಮಂಡಲದುದಕವ ತಳಿಯಲು ಕತ್ತರಿಸಿ ಬಿತ್ತು. ಆ ಮೋಟಗಾಲಿಂದ ಬ್ರಹ್ಮಾಂಡ ತನ್ನ ಕಾಲು ಬೆಳೆದು ಲೋಕವ ಬಾಧಿಸುವಾಗ ಭೈರವ

---

* ಅಚ್ಚುಹಾಕಿದ "ಬಸವೇಶ್ವರನ ವಚನಗಳು" ೨ ನೇ ಆವೃತ್ತಿ ಇದರ ಪುಟ ಮತ್ತು ಪುಟದಲ್ಲಿಯ ವಚನ ಸಂಖ್ಯೆ ಇವುಗಳು ಕಂಸಿನಲ್ಲಿ ತೋರಿಸಲ್ಪಟ್ಟಿವೆ.

ಗಣೇಶ್ವರ ಬಂದು ಎದೆ ಮೇಲೆ ಹಾಯ್ದು ಕೆಡಹಿ ಬೆನ್ನೆಲುವನು ಚರ್ಮ
ವನು ತೆಗೆದು ಶಿವನ ಮುಂದೆ ಮಡುಗಲು ಅಸ್ಥಿಯ ಕಂಕಾಳವ ಮಾಡಿ
ಹಿಡಿದು ಚರ್ಮವನುಟ್ಟುಕೊಂಡು ಶಿವನೊಪ್ಪಿದನು.

## ತ್ರಿಪುರ

ನವಮಂ ತ್ರಿಪುರಾರಿಚ್ಚ ಲೈಂಗ್ಯಪುರಾಣದೊಳಂ ಸೂತಮುನಿಗಳಿಗೆ
ದೇವತೆಗಳಿಗೆ ನಿರೂಪ ವೀರ ವಿದ್ಯುನ್ಮಾಲಿ ತಾರಕರು ತಪವ ಮಾಡು
ವಾಗ ಬ್ರಹ್ಮ ಬಂದು ಏನು ಬೇಕೆಂದು ಕೇಳಲು. ನಿತ್ಯತ್ವವ ಕೊಡು
ಎನಲು ನಮಗೆ ನಿತ್ಯತ್ವವಿಲ್ಲ ನಿಮಗೆ ಹೇಗೆ ಕೊಟ್ಟೆನೆನಲು, ಹಾಗಾದರೆ
ಮೂರು ಪುರಗಳ ಮಾಡಿ ಕೊಡು ಎನಲು ರಕ್ಕಸರ ಬಡಗೆಯಾದ
ಮಯನಿಗೆ ಹೇಳಿ ಬ್ರಹ್ಮ ಹೋಗಲು ಇತ್ತ ಮಯನು ಭೂಮಿಗಂತರ
ದಲ್ಲಿ ಕಬ್ಬಿಣದ ಪುರ, ಆಕಾಶದಲ್ಲಿ ಬೆಳ್ಳಿಯ ಪುರ, ಸ್ವರ್ಗದಲ್ಲಿ ಚಿನ್ನದ
ಪುರಂಗಳ ಮಾಡಿಕೊಡಲು ಆ ಮೂರು ಪುರದಲ್ಲಿ ಮೂವರು ಇರುತ್ತಿ
ರಲು ಮಯ ಏನೆಂದನು. ನೀವು ಬ್ರಹ್ಮನ ನಿತ್ಯತ್ವ ಬೇಡುತ್ತಿದ್ದಿರಿ
ಲಿಂಗವ ಧರಿಸಿದರೆ ನಿತ್ಯತ್ವವಲ್ಲವೇ ಎನಲು, ಹಾಗಾದರೆ ನಮಗೆ
ಲಿಂಗವ ಧರಿಸಿ ಎನಲು ಮಯನು ಅವರಿಗೆ ಲಿಂಗಧಾರಣವ ಮಾಡಿ
ಹೋಗಲು, ಇತ್ತ ಈ ಮೂವರು ಶಿವನ ಕೆಯ್ಯಲ್ಲಿ ಕಾಮಧೇನು
ಕಲ್ಪವೃಕ್ಷವ ಪಡೆದು ಸುಖದಲ್ಲಿರುವಾಗ್ಗೆ, ಬ್ರಹ್ಮವಿಷ್ಣ್ವಾದಿಗಳು ಹೇಳಿದ
ಚಾಕರಿಯ ಮಾಡದಿದ್ದರೆ ತಮ್ಮ ಪುರ ಸಹವಾಗಿ ಹೋಗಿ ಅವರಿಗೆ ಪೆಟ್ಟ
ಹಾಕಿ ಬರುವರು. ಹೀಗೆ ದಿವ್ಯ ಸಾವಿರ ವರುಷವಿರುತಿರಲು ಆಗ ಬ್ರಹ್ಮ
ವಿಷ್ಣುಗಳು ತ್ರಿಪುರದ ರಕ್ಕಸರ ಬಾಧೆ ಬಹಳವೆಂದು ಶಿವನಿಗೆ ದೂರು
ಹೇಳಲು ಲಿಂಗಭಸಿತ ರುದ್ರಾಕ್ಷಿಗಳ ಧರಿಸಿದವರ ಮೇಲೆ ಹೇಗೆ ಕೈ
ಮಾಡಲಿ, ನೀವೆ ಕಾದಿ ಕೊಲ್ಲಿ ಎನಲು, ಆಗಲಾ ಬ್ರಹ್ಮವಿಷ್ಣುಗಳು
ಮಾರಣ ಯಜ್ಞವ ಮಾಡಿ ಭೂತಗಳ ಹುಟ್ಟಿಸಿ ತ್ರಿಪುರದವರ ಮೇಲೆ
ಕಳುಹಲು ಅವು ಹೋಗಿ ರಕ್ಕಸರ ಅಂಗದ ಮೇಲೆ ಲಿಂಗವ ಕಂಡು
ಹೆದರಿ ಬಂದು ನಮ್ಮ ಕೈಲಾಗದೆಂದು ವಿಷ್ಣುವಿಗೆ ಹೇಳಲು ಬಳಿಕ
ಹರಿಯು ನಾರದರ ಕರಕೊಂಡು ತ್ರಿಪುರದಲ್ಲಿ ಕುಳಿತುಕೊಂಡು ಮಣ್ಣನ್ನೇ
ಚಿನ್ನವ ಮಾಡಿ ತೋರುತ ನಾರದ ಹೆಳೆಯುರುವಿಯನೆ ಚಿನಿಚೀನಾಂಬ
ರವ ಮಾಡಿ ತೋರುತ ಕಪಟದಿಂದ ಲಿಂಗಧಾರಣಂಗಳ ಬಿಡಿಸಿ ಅಲ್ಲಿ
ಬುದ್ಧಿಮೋಹಿ ಎಂಬ ತನ್ನ ಬೌದ್ಧನ ಮಡಗಿ ತಾವಿಬ್ಬರು ಹೋಗಿ

ಮಾನಸ ಸರೋವರದಲ್ಲಿ ಕೊರಳುದ್ದುದ್ದ ಉದಕದೊಳಗೆ ನಿಂತು ಮೊರೆ
ಇಡಲು ಶಿವನು ಕೇಳಿ ನಂದೀಶ್ವರನ ಕಳುಹಲು ಬಂದು ಯಾಕೆ ಕೂಗಿ
ದಿರೆಂದು ಕೇಳಲು ರಕ್ಕಸರು ಲಿಂಗಗಳ ಬಿಟ್ಟರು, ಇನ್ನಾದರೂ ಅವರ
ಕೊಲ್ಲಬಾರದೇ ಎನಲು ನಂದೀಶ್ವರ ಹಾಗೆ ಬಂದು ಶಿವಂಗೆ ಹೇಳಲು
ಆ ಮಾತಿಗೆ ಶಿವನು ರಥವ ಮುಸ್ತೈದೆ ಮಾಡಿ ಎನಲು ಬಳಿಕ ಬ್ರಹ್ಮ
ವಿಷ್ಣುಗಳು ವಿಶ್ವಕರ್ಮನ ಕರಸಿ ಭೂಮಿಯೇ ರಥ, ಚಂದ್ರಸೂರ್ಯ
ಗಳು ಗಾಲಿಗಳು, ವಿಂಧ್ಯಗಿರಿ ಅಚ್ಚು, ಕೆಸರಗಿರಿ ಈಸು, ಕ್ಷಣಮುಹೂ
ರ್ತಂಗಳು ಕೀಲಗಳು, ವೇದಗಳೇ ಕುದುರೆಗಳು, ಬ್ರಹ್ಮ ಸಾರಥಿ, ಓಂ
ಕಾರವೇ ಚಬುಕ, ಇಂತು ರಥ ಮುಸ್ತೈದೆಯಾಗಿ ಇರಲು ಅಂತಹ
ಶಿವನು ಮೇರುವೆ ಬಿಲ್ಲು, ಶೇಷನೇ ಹೆದ, ಚಂದ್ರ ಅಂಬಿನ ಗಣೆ,
ವಾಯು ಹಿಳಿಕು, ವಿಷ್ಣುವೇ ಅಲಗು, ಅದರ ತುದಿಯೇ ಅಗ್ನಿ, ಇಂತಹ
ಬಿಲ್ಲಂಬ ಹಿಡಿದುಕೊಂಡು ಶಿವನು ರಥವನೇರಲು ಆ ರಥ ಭೂಮಿಯಲ್ಲಿ
ಳಿಯಲು ವಿಷ್ಣು ವೃಷಭರೂಪಿನಿಂದೆತ್ತುವಾಗ ಶಿವನು ಸಾಮರ್ಥ್ಯವ
ಕೊಡಲು ಮೇಲಕ್ಕೆ ತಂದನು. ಬಳಿಕಾ ರಥವ ನಡಿಸಿ ತ್ರಿಪುರದ ಹತ್ತಿ
ರಲ್ಲಿ ನಿಲಿಸಿ ಆಗ ಶಿವನು ಬಿಲ್ಲಕೊಪ್ಪಿಗೆ ಹೊರಗೆ ಕೊಂಡು ಮುಗುಳು
ನಗೆಯಿಂದ ತ್ರಿಪುರವ ನೋಡಲು ನೊಸಲಕಣ್ಣು ಕಿಡಿ ಹೋಗಿ ತ್ರಿಪು
ರವ ಸುಡಲು ಆಗ ವಿಷ್ಣು ಅಂಬಾಗಿ ವ್ಯರ್ಥವಾದೆನಲ್ಲಾ ಎನಲು ಆಗ
ಬಿಲ್ಲನೇರಿಸಿ ಎಸೆಯಲು ತಿಗುರಿಯಂತೆ ತಿರುಗುವ ಮುಪ್ಪುರಗಳ ಕೀಲು
ಕಳಚಿ ಉರಿದು ಬಿದ್ದವು. ಮೂರು ಪುರದಲ್ಲಿದ್ದ ಪರಮ ಯೋಗಿ ಏಕ
ಶಿಲ ವಿರಕ್ತ ಇವರು ವಿಷ್ಣುವಿನ ಮಾಯೆಗೆ ಒಳಗಾಗದ ಕಾರಣ
ಉಳಿದು ಬಂದು ಶಿವನಿಗೆ ನಮಸ್ಕರಿಸಲು ಏನು ಬೇಕೆನಲು ನಿಮ್ಮ
ಕೈಲಾಸದ ಅಂತಃಪುರದ ಬಾಗಿಲಲ್ಲಿ ಇದ್ದೆವೆನಲು ಹಾಗಾಗಲೆಂದು ಮಾಡ
ಗಿಕೊಂಡರು. ತ್ರಿಪುರವ ಸುಟ್ಟ ಮೇಲೆ ದೇವತೆಗಳೆಲ್ಲ ಸುಖದಲ್ಲಿದ್ದರು.

## ಹರಿವಿರಿಂಚಿಗಳು.

ಲಿಂಗೋದ್ಭವ ಸ್ವರೂಪಂ ತು ಪಂಚವಿಂಶತ್ ಪ್ರಕೀರ್ತಿತಂ ಶೈವ
ಪುರಾಣ ಧರ್ಮಸಂಹಿತೆಯಲ್ಲಿ ನಂದೀಶ್ವರನು ಸನತ್ಕುಮಾರಂಗೆ ನಿರೂಪ
ಒಂದು ವೇಳೆ ಬ್ರಹ್ಮ ವಿಷ್ಣುಗಳು ನಾ ಘನ ತಾ ಘನವೆಂದು ವಾದಿಸು
ವಾಗ ಆಕಾಶವಾಣಿ ನುಡಿದುದು. ಇಲ್ಲಿ ಒಂದು ಲಿಂಗ ಮೂಡಿತು.
ಅದರಡಿ ಮುಡಿಯ ಕಂಡು ಬಂದರೆ ನೀವೆ ದೊಡ್ಡವರೆನಲು ಆಗ ಉರಿ

ಲಿಂಗ ಮೂಡಲು ವಿಷ್ಣು ಸೂಕರನಾಗಿ ಸಪ್ತ ಪಾತಾಳಕ್ಕೆ ಹೋಗಿ ಪಾದವ ಕಾಣದೆ ತಿರುಗಿದನು. ಬ್ರಹ್ಮ ಹದ್ದಾಗಿ ಬ್ರಹ್ಮಾಂಡ ತನಕ ಹೋಗುತ್ತಿರಲು, ಆಗ ಕೇದಗೆ ರಾಜನು ಕಾಮಧೇನುವು ಕಂಡು ಪಕ್ಷಿಯೇ ಎಲ್ಲಿಗೆ ಹೋದೆ ಎನಲು ಶಿವನ ಮುಕುಟವ ಕಾಂಬುವುದಕ್ಕೆ, ನಲುಗಿ ಕಾಣಲಾರೆ ತಿರುಗಿ ಎನಲು, ವಿಷ್ಣುವಿನ ಕೂಡೆ ವಾದಿಸಿ ಬಂದೆನೆನಲು ಕಂಡೆನೆಂದು ನುಡಿ ಎನಲು ತಿರುಗಿ ಬರಲು ದೇವತೆಗಳೆಂದರು, ಬ್ರಹ್ಮ ಮುಕುಟವ ಕಂಡೆಯಾ ಎನಲು ಕಂಡೆನೆಂದನು. ಅವರು ಸತ್ಯವೇ ಎನಲು, ಆಗ ಕೇದಗೆರಾಜನು ಕಾಮಧೇನುಗಳಿಬ್ಬರೂ ಕಂಡನಹುದು ಎನಲು, ಆಗ ಆಕಾಶವಾಣಿ ಕೇಳಿ ಮೂವರ ವಾಕ್ಯವು ಸಟೆ ಎನಲು ಆಗ ದೇವತೆಗಳು ಕೇದಗೆಯೇ ಪೂಜೆಗೆ ಸಲ್ಲಬೇಡ, ಬ್ರಹ್ಮ ನೀನು ಗುಡಿಯಲ್ಲಿ ಪೂಜೆಗೊಳಬೇಡ, ವಿಷ್ಣುವೇ ನೀನು ಸತ್ಯವನಾಡಿದೆ, ನಿನಗೆ ಪೂಜೆಯಾಗಲಿ.

ಬಳಿಕ ಇತ್ತ ಕಲ್ಯಾಣದಲ್ಲಿ ಬಿಜ್ಜಳಗೆ ಕೇದಿಗೆ ಪುಷ್ಪಗಳು ಕಾಣಿಕೆ ಬರಲು ಒಂದೆಸಳ ಬಸವೇಶ್ವರಗೆ ಕೊಡಲು ಅದರೊಳೊಂದೆಸಳ ತಮ್ಮ ಲಿಂಗಕ್ಕೆ ಧರಿಸಲು ಆಗ ಬಿಟ್ಟೆಸಳ ಸಲ್ಲದುದ ಹೇಗೆ ಧರಿಸಿದಿರೆನಲು ಭಕ್ತ ತಂದರ್ಪಿಸಿದ ವಸ್ತುವ ಶಿವ ಕೈಕೊಂಬುತಾನೆ ಎನಲು ಅದ ತೋರಿ ಎನಲು, ಆಗ ಬಿಜ್ಜಳ ಸಹವಾಗಿ ಲಿಂಗಗಳ ನೋಡಲು, ಎಲ್ಲಾ ಲಿಂಗಗಳ ಮೇಲೆ ಒಂದೊಂದೆಸಳಿರಲು ಬಿಜ್ಜಳ ತಲೆದೂಗಿದನು.

## ಉಮೆಯ ಕಲ್ಯಾಣ.

ವೈವಾಹಂ ಪಂಚಮಂ ಎಂದ್ಯ ಶಿವನು ನಂದೀಶ್ವರಂಗೆ ನಿರೂಪಿಸಿದರು, ನಂದಿಕೇಶ್ವರನು ಸನತ್ಕುಂವರಾರಂಗೆ ನಿರೂಪಿಸಿದರು, ಸನತ್ಕುಮಾರ ವೇದವ್ಯಾಸಂಗೆ, ವ್ಯಾಸ ಸೂತಂಗೆ ನಿರೂಪಿಸಿದರು. ಅತ್ತ ಓಷಧೀಪ್ರಸ ಪುರದಲ್ಲಿ ಗಿರಿರಾಜ ಮೇನಕಾ ದೇವಿಯರು ತಮಗೆ ಮಗಳಾಗಬೇಕೆಂದು ತಪವ ಮಾಡುತ್ತಿರಲು ದೇವಿಯರ ತಪಕ್ಕೆ ಮೆಚ್ಚಿ ಮಾನಸ ಸರೋವರದಲ್ಲಿದ್ದ ನೈದಿಲೆ ಪುಷ್ಪದೊಳಗೆ ಶಿಶು ರೂಪಾಗಿ ಕಾಣಿಸಿಕೊಂಡು ಬಳಿಕ ಚತುರ್ಮುಖ ಅಷ್ಟಭುಜವ ತೋರಲು ಅದ ಕಂಡು ಹೆದರಲು ಮತ್ತೆ ಶಿಶುವಾದಳು. ಆಗ ಎತ್ತಿಕೊಂಡು ಹೋಗಿ ಮೇನಕಾದೇವಿಯು ಕೈಯ್ಯಲ್ಲಿ ಕೊಡಲು ಆಕೆ ಸಲಹಿದಳು. ಬಳಿಕ

ಜನ್ಮನವಾಗಲು ಕಶ್ಯಪ, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತುವು, ಜಮದಗ್ನಿ, ವಸಿಷ್ಠರೆಂಬ ಈ ಸಪ್ತಋಷಿಗಳ ಕೆಯ್ಯಕೇಳಿಸಿ ಶಿವನು ಪಾರ್ವತಿಯು ಮದುವೆಯಾಗಿ ಕೈಲಾಸದಲ್ಲಿದ್ದರು.

---

## ೪ ನೆಯ ವಚನದ ಕಥೆ. (೧-೩)

### ಬಸವ.

ಬಸವೇಶ್ವರನು ಜನನಿಯು ಮೊಲೆಹಾಲು ಹಾಲು ಬೆಣ್ಣೆಗೆ ಬಾಯ್ದೆರೆಯದೆ ಲಿಂಗ ಪ್ರಸಾದದ ಸಂತೋಷದಲ್ಲಿ ಸುಮ್ಮನಿರ್ದರು.

### ನಂದೀಶ್ವರ.

ನಂದೀಶ್ವರನ ಉತ್ಪತ್ತಿ-ಬ್ರಹ್ಮಂಗೆ ನಾಲ್ಕು ಯುಗವು ನಾಲ್ಕು ಸಾವಿರ ಬಾರೆ ತಿರುಗಲು ಒಂದು ದಿನ. ಅಂತಹ ದಿನ ಮುನ್ನೂರರು ವತ್ತಾದರೆ ಒಂದು ವರುಷ. ಅಂತಹ ವರುಷ ನೂರಾದರೆ ಬ್ರಹ್ಮಂಗೆ ಮರಣ. ಅವನ ನೂರು ವರುಷ ವಿಷ್ಣುವಿಂಗೆ ಒಂದು ದಿನ. ಅಂತಹ ದಿನ ಮುನ್ನೂರುವತ್ತಾದರೆ ಒಂದು ವರುಷ. ಆ ವರುಷ ನೂರಾದರೆ ವಿಷ್ಣುವಿಂಗೆ ಮರಣವೆಂದರಿವುದು. ಎನುತಂ ಆ ಶಿವನಂತರಂಗದಲ್ಲಿರ್ದ ಧರ್ಮವು ಶಿವನಪ್ಪಣೆಯಿಂದ ಬ್ರಹ್ಮಾಂಡದಲ್ಲಿ ಸಂಚರಿಸುತ್ತಿರ್ದ ಬ್ರಹ್ಮ ವಿಷ್ಣುಗಳ ಪ್ರಳಯಮಂ ಕಂಡಂಜಿ ಶಿವನ ಸಮೀಪಕ್ಕೆ ಬಂದು ಮೊದಲಂತೆ ನಿನ್ನ ಕುಕ್ಷಿಯೊಳಗಿರ್ದೆನೆಂದು ಪೇಳಲು ಆಗ ಶಿವನು ಮಹಾ ಪರಾಕ್ರಮವ ತೊಟ್ಟ ವೃಷಭ ರೂಪಿನಿಂದೆ ನಮ್ಮ ವಾಹನ ವಾಗು, ನಂದೀಶ್ವರನೆಂಬ ನಾಮದಿಂದೆ ಗಣಾಗ್ರಣಿಯಾಗಿರು ಎಂದರು. ಬಳಿಕ ನಂದೀಶ್ವರನುತ್ಪತ್ತಿ ಎಂತೆಂದೊಡೆ— ಶಾಲಂಕಾಯನ ಋಷಿಯ ಕುಮಾರನಾದ ಶಿಲಾದ ಮುನಿಯು ಪುತ್ರನಾಗಬೇಕೆಂದು ತಪವ ಮಾಡುವಾಗ ಮಂಜಿನ ಹನಿ ಗಡ್ಡೆ ಬೇರು ಪರ್ಣ ಹಣ್ಣು ನೀರು ಗಾಳಿ ಸೂರ್ಯಕಿರಣ ಚಂದ್ರಕಿರಣ ಮೊದಲಾದವ ಸೇವಿಸಿ ಮೂರು ಕೋಟಿ ವರುಷ ತಪದಲ್ಲಿರ್ಪ ತೋರ ಶಿಲೆಯ ಸೇವಿಸಿಕೊಂಡು ನೂರು ಕೋಟಿ ವರುಷ ಇದ್ದರು. ಆಗ ಶಿವ ಮೆಚ್ಚಿ ಬೇಡು ಎನಲು ಅದಕ್ಕೆ ಶಿಲಾದ ಮುನಿಯು ಭಕ್ತಿಯುಳ್ಳ ಅಯೋನಿಜನಾದ ಪುತ್ರನಾಗಬೇಕೆನಲು ಅಂತಹವನೆ ಆಗುವ

ನೆಂದು ಶಿವ ನಿರೂಪಿಸಲು ಬಳಿಕ ಶಿಲಾದ ಮುನಿ ತನ್ನಾಶ್ರಮಕ್ಕೆ ಬಂದು ಯಜ್ಞವ ಮಾಡಬೇಕೆಂದು ಭೂಮಿಯ ಶುದ್ಧವ ಮಾಡಲು ಆದಕ್ಕೆ ಚಿನ್ನದ ನೇಗಿಲ ಹೂಡುವಾಗ ತ್ರಿಲೋಚನ ಕೆಂಜೆಡೆಗಳಿಂ ಶಿಶು ರೂಪಾಗಿ ನಂದೀಶ್ವರನು ಕಾಣಿಸಿಕೊಳ್ಳಲು ಶಿಲಾದ ಮುನಿ ಸಂತೋಷ ಪಟ್ಟನು. ಆಗ ಶಿವ ಬಂದು ಆ ಶಿಶುವಿಂಗೆ ರತ್ನ ಕಿರೀಟವ ಧರಿಸಿ ಜಟಾ ಮುಕುಟ ಗಂಗೆಯಿಂದಭಿಷೇಕವ ಮಾಡುವಾಗ ಕಿರೀಟದಿಂದ ಬಿಂದುದಕವು ಸುವರ್ಣದ ನದಿ ಜಾಂಬುನದಿಗಳಾಗಿ ಹರಿದವು. ಜಟಿ ಯಿಂದಿಳಿದ ಗಂಗೆ ಜಟಾನದಿ ಎನಿಸಿತ್ತು. ಆ ವೃಷಭೇಶ್ವರ ಡುರುಕೆಯ ಹಾಕಲು ವೃಷಭಧ್ವನಿ ಎಂಬ ನದಿಯಾಯಿತ್ತು. ದೇವಿಯರ ಮೊಲೆ ತೊರೆದು ಸುರಿಯೆ ಕುಚಕ್ಷಿಕೆ ಪ್ರಾತಸ್ವನಿಗಳೆಂಬ ನದಿಗಳಾಗಿ ಹರಿದವು. ಆಮೇಲೆ ಶಿಲಾದಮುನಿಯು ಶಿಶುವನೆತ್ತಿಕೊಂಡು ತನ್ನಾಶ್ರಮಕ್ಕೆ ಹೋಗಿ ನಂದೀಶ್ವರನೆಂಬ ಹೆಸರಿಟ್ಟು ಸುಖದಲ್ಲಿದ್ದರು.

## ಸ್ಕಂದ.

ತ್ರೇತಾ ಯುಗದಲ್ಲಿ ಪರಶಿವನು ತ್ರಿಪುರದಹನವ ಮಾಡುವಲ್ಲಿ ಸ್ಕಂದನೆಂಬ ಗಣೇಶ್ವರನಾಗಿರ್ದನು ಬಸವಣ್ಣನು.

## ನೀಲಲೋಹಿತ.

ಪರಶಿವನು ಅಂಧಕಾಸುರನ ಕೊಲ್ಲುವಲ್ಲಿ ನೀಲಲೋಹಿತನೆಂಬ ಗಣೇಶ್ವರನಾಗಿರ್ದನು ಬಸವಣ್ಣನು.

## ಮನೋಹರ.

ಘಂಟಾಕರ್ಣನು ನಿರ್ಮಾಲ್ಯ ಪುಷ್ಪವ ಸೂರ್ಯನ ಆಕರ್ಷಿಸಿದನೆನೆ ಕುಷ್ಟ ರೋಗಿಯಾಗೆಂದು ಶಾಪಿಸಿ ಮನೋಹರ ಗಣೇಶ್ವರನ ಪಾದಾಂಬುವಿಂದ ಸೂರ್ಯನು ತನ್ನ ತೇಜಸ್ಸವ ಪಡೆದನು.

## ಕಾಲಲೋಚನ.

ಪರಶಿವನು ಉಮೆಯ ಕಲ್ಯಾಣದಲ್ಲಿ ಕಾಲಲೋಚನನೆಂಬ ಗಣೇಶ್ವರನಾಗಿರ್ದ ಬಸವಣ್ಣನು.

## ವೃಷಭ.

ತೃತೀಯಂ ವೃಷಭಾರೂಢಂ ಸ್ಕಂದ ಪುರಾಣದಲ್ಲಿಯು ಕಾಳಿಕಾ ಖಂಡದಲ್ಲಿ ಷಣ್ಮುಖನು ಆಗಸ್ತ್ಯರಿಗೆ ನಿರೂಪ. ಸಕಲ ತತ್ವಲಯ

ಕಾಲದಲ್ಲಿ ಹೇಳಿದ ಸದ್ಧರ್ಮರೂಪ ವೃಷಭನನ್ನೆ ವಾಹನವಾಗಿ ಧರಿಸಿದನು.

## ಬಸವ.

ಶ್ರೀಮತ್ಪರಮೇಶ್ವರನ ಒಡ್ಡೋಲಗದಲ್ಲಿ ಸಮಸ್ತರು ಒಡ್ಡೋಲಗಂಗೊಟ್ಟಿರಲು ನಾರದನ ದರುಶನ ಲೋಕಂಗಳಲ್ಲಿ ಶಿವಾಚಾರ ಮಸುಳಿಸಿದ್ದಿತ್ತು. ನೀವು ಚಿತ್ತೈಸಬೇಕೆಂದು ಬಿನ್ನವಿಸೆ, ನಾನೆಂದಡೂ ನಂದೀಶ್ವರನೆಂದಡೂ ಒಂದೇ ಎಂದು ನಂದಿಕೇಶ್ವರಂಗೆ ಆಜ್ಞಾಪಿಸಲು, ಇಂಗುಳೇಶ್ವರ, ಬಾಗವಾಡಿಯು ಮಂಡಿಗೆಯು ಮಾದಿರಾಜನ ಭಾರ್ಯೆ ಮಾದಲಾಂಬಿಕೆ ವೃಷಭನ ನೋಂತು ಸುತನ ಕೊಡೆಂದು ವಂದಿಸಿ ಅವರಿಗೆ ಆ ವೃಷಭೇಶ್ವರನ ಬಸವನಾಮದಲ್ಲಿ ಅಯೋನಿಜವಾಗಿ ಸಂಗಮೇಶ್ವರನೆ ಗುರುವಾಗಿ ಉಪದೇಶವನೀಯಲು ಬಾಲಲೀಲೆಯಲ್ಲಿ ಅನಂತ ಪವಾಡವಂ ಮೆರೆವುತ್ತ ಪೂರ್ವ ಶ್ರೀಯುವಂ ತೊರೆದು ವೀರಶೈವಾಚಾರದಿಂದಿರೆ ಬಲದೇವ ಮಂತ್ರಿಯು ತನ್ನ ತನುಜೆ ಗಂಗಾಂಬಿಕೆಯ ವಿವಾಹಂ ಮಾಡಿ ಅವರಿಂ ಕಳುಹಿಸಿಕೊಂಡು ಬಸವೇಶ್ವರನು ಸಂಗಮೇಶ್ವರಕ್ಕೆ ಬರೆ ಬಲದೇವ ಮಂತ್ರಿ ಶಿವಲೋಕಕ್ಕೈದೆ, ಬಿಜ್ಜಳನು ಆಳೋಚಿಸಿ ಬಸವೇಶ್ವರನಂ ಕಲ್ಯಾಣಕ್ಕೆ ಕರಿಸಿ ಇದಿರ್ಗೊಂಡು ಬಂದು ಓಲಗಸಾಲೆಯಲ್ಲಿ ಸುಖಗೋಷ್ಠಿಯಲ್ಲಿರೆ ಶಿವನಿರ್ಮಿತದ ಲಿಪಿಯು ಶಾಸನದ ಓಲೆ ಬರೆ ಬಿಜ್ಜಳ ತರಿಸಿ ಓದಿ ನೋಡಿ ಆರಿಗೂ ತಿಳಿಯದಿರಲು ಬಸವಣ್ಣನ ಕೈಯ್ಯಲು ಕೊಡೆ, ಶಿವಶರಣೆಂದು ಓದಿ ನೋಡಿ ಮೆಟ್ಟಿ ತೆಗಿಸಿದ ಐವತ್ತಾರು ಕೋಟಿ ವಸ್ತುವನೆಂದು ದಂಡೇಶಗೆ ಪಟ್ಟವಂ ಕಟ್ಟಿ, ಬಳಿಕ ಬಿಜ್ಜಳ ತಮ್ಮ ತಂದೆತಾಯಿ ಸಾವಲ್ಲಿ ನಮ್ಮ ತಮ್ಮ ಕರ್ಣದೇವನ ಸಿದ್ಧ ದಣ್ಣಾಯಕರ ಸ್ತ್ರೀ ಪದ್ಮಗಂಧಿಯು ಸಾಕಿದಳು. ಆಕೆಯ ಸುತೆಯು ನೀಲಲೋಚನೆಯಮ್ಮನು ನಮ್ಮ ತಂಗಿ ಎಂದು ಬಸವೇಶ್ವರಂಗೆ ವಿವಾಹವ ಮಾಡಿ ಸಾಮ್ರಾಜ್ಯಂಗೆಯ್ಯುತ್ತಿರಲು ಇತ್ತ ಬಸವೇಶ್ವರನು ಪಂಚಪರುಷಮೂರ್ತಿಯಾಗಿ ಶಿವಭಕ್ತ ಮಾಹೇಶ್ವರರಿಗೆ ನಿರ್ವಂಚಕತ್ವದಿಂ ದಾಸೋಹವ ಮಾಡುವ ಪರಿಕ್ರಮವೆಂತೆಂದೊಡೆ, ಬೆರಳುಗಳ ಹಡೆದೆನೆಂದು ದುರುಳತನದಲ್ಲಿದ್ದಡೆ ಹರ ಶಾ ಕಳುಹನೆ, ಬಸವಣ್ಣನ ನೋಡಲೆಂದು ಮುತ್ತಿನ ರಂಗ ಓಲೆಯು ನೇಮ ಉಂಟೆಂದಡೆ ಮನಸ್ಪೃಷ್ಟಿ ಹಸ್ತ ಪರುಷವಾಗಿ ನೋಡಿದರೆ ಜೋಳ ತೊಗರಿ ಅವರೆ ಮುತ್ತು ಮಾಣಿಕವಾಗವೆ, ಬಂದಿ ಹಿಡಿಯು ಬಂದಲ್ಲಿ ಬದನೆ ಲಿಂಗ

ವಾಗದೆ, ಭಕ್ತನೆ ಕುಲಜನೆಂದಡೆ ರುಧಿರ ಹಾಲಾಗದೆ, ವಿಷಧರಂಗೆ ವಿಷವಮೃತವಾಗದೆ, ಪರಮಾರ್ಥವ ನೋಡಿಹೆನೆಂದಲಗ ಕಳುಹಿದಡೆ ಭಕ್ತಿ ಮುಂತಾಗಿ ಬಾರನೆ ಪ್ರಭುದೇವರು ಇದು ಕಾರಣ ಕೂಡಲ ಚನ್ನ ಸಂಗಾ ನಿಮ್ಮದಾಗಿ ತನುವ ಬಸವಣ್ಣಗಿತ್ತೆ.

ದಾಮೋದರನೆಂಬ ವಿಪ್ರನ ಮಗ ಭೀಮರಥಿಯಲ್ಲಿ ಮುಳುಗಿ ಸಾಯಲು ಬಸವಣ್ಣ ನೂಕಿದನೆಂದು ಹೇಳಲು ಆಗ ವಿಪ್ರರು ಹೊಡಿ ಬಡಿಯೆಂದು ಬೆನ್ನಟ್ಟಿ ಬರಲು ಮುಂದೆ ಕೃಷ್ಣವೇಣಿ ಎಂಬ ನದೆ ಬಸ ವಣ್ಣಂಗೆ ದಾರಿಯ ಕೊಡಲು ವಿಪ್ರರು ಹರಿಗೋಲಿನಿಂದ ಬರಲು ಅವ ರಿಗೆ ಜನಾರ್ದನನ ಮಗು ಕೃಷ್ಣ ನೂಕಿದನೆಂದು ಸಂಗಮೇಶ್ವರನ ಕೆಯ್ಯ ಸಾಕ್ಷಿಯ ನುಡಿಸಲು ಆಗ ವಿಪ್ರರು ಬಸವಣ್ಣಂಗೆ ನಮಸ್ಕರಿಸಿ ಹೋದರು.

ಕನ್ನದ ಚಾಮಯ್ಯನು ಬಿಜ್ಜಳನ ಮನೆಯ ಕನ್ನವಿಕ್ಕಿ ಬಸವೇಶ್ವರನು ಕನ್ನದ ಮೆಣ್ಣ ಚಿನ್ನವ ಮಾಡಿ ಕೊಟ್ಟನು.

ಬಿಜ್ಜಳನು ಪೆಟ್ಟಿಗೆಯ ಧನವ ಬಂಗಾರವ ಮಾಡೆಂದು ಚಿನ್ನಗಾ ಯಕದ ಬೊಮ್ಮಣ್ಣಂಗೆ ಕೊಡೆ ಜಂಗಮಕ್ಕೀಯಲು ಬಿಜ್ಜಳ ಕೋಪಿಸೆ ಬಸವೇಶ್ವರನಿಂದ ವಾಕ್ಪರುಷವ ಪಡೆದು ಮುನ್ನಿನಂತೆ ಕೊಟ್ಟರು.

ಶ್ರವದೊಡನೆ ಕಿಚ್ಚ ಹಾಯ್ವಳು ಬಸವೇಶ್ವರಗೆ ವಂದಿಸಿ ಮುತ್ತೈದೆ ಯಾಗೆನೆ ಪ್ರಾಣವ ಕೊಟ್ಟರು.

ಒಬ್ಬ ಜಂಗಮ ಕಂಡುಗ ಮುತ್ತಿನ ರಂಗ ಓಲೆಯ ನೇಮವನೆ ಜೋಳದ ರಾಶಿಯ ನೋಡಿ ಬಸವೇಶ್ವರನು ಮುತ್ತ ಮಾಡಿಕೊಟ್ಟರು.

ಒಬ್ಬ ಜಂಗಮಕ್ಕೆ ಬಿತ್ತಿಯ ಪಲಸಿನ ಫಲವ ಮಾಡಿ ಬಸವೇಶ್ವರನು ಕೊಟ್ಟರು.

ಬಸವೇಶ್ವರನು ಶಿವನಾಗಮಯ್ಯನ ಬೆರಳಲಿ ಅಮೃತವ ಕರೆದರು.

ಬಸವಣ್ಣನ ಬಳಿಗೆ ಬಂದು ಸರ್ವೇಶನು ಹಾಲನೇಮ ನಮಗೆನೆ ಗೊಡ್ಡ ಹಸುವ ಕರೆದು ಕೊಟ್ಟರು.

ಕಲ್ಯಾಣದಲ್ಲಿ ಕಪಿಲ ಮುನಿಯು ಕಪಿಲೇಶ್ವರ ಲಿಂಗಕ್ಕೆ ಸಾವಿರ ದಾರು ನೂರು ಖಂಡುಗ ಹಾಲಿನಲ್ಲಿ ಅಭಿಷೇಕವ ಮಾಡಲು ಹರಿದು ಬೀದಿಯಲ್ಲಿ ಕೆಸರಾಗಿರಲು ಆಗ ಕಾರಿಕೆ ಎಂಬ ಗೊಲ್ಲಿತಿ ಮಜ್ಜಿಗೆಯ ಕೊಡನ ಹೊತ್ತುಕೊಂಡು ಹೋಗುತ್ತ ಆ ಕೆಸರಲ್ಲಿ ಜಾರಿ ಬೀಳುವಾಗ

ಬಸವಣ್ಣಾ ಎನಲು ಇತ್ತ ಬಿಜ್ಜಳನ ಸಭೆಯಲ್ಲಿ ಬಸವೇಶ್ವರನು ಕೈಯ್ಯ
ನೀಡಲು ಆಗ ಬಿಜ್ಜಳ ನಗುತ ಬಸವಣ್ಣಾ ಕೈಯ್ಯ ನೀಡಿ ಏನು ಹಿಡಿದೆ
ಎನಲು ಗೊಲ್ಲಿತಿಯ ಹಿಡಿದೆವೆನಲು ಅದಕ್ಕೆ ಬಿಜ್ಜಳ ಈ ದೃಷ್ಟವ
ನೋಡಬೇಕೆಂದು ಸಾವಿರ ನೀರ ಹೆಣ್ಣುಮಕ್ಕಳ ಮೇಲೆ ಹೊರಿಸಿ ನೀವು
ಬಸವಣ್ಣಾ ಎಂದು ಕೊಡಗಳ ಬಿಸಾಡಿ ಎನಲು ಹಾಗೆ ಅವರು ಬಸ
ವಣ್ಣಾ ಎಂದು ಕೊಡಗಳ ಬಿಸುಟರು. ಅಷ್ಟು ಕೊಡಗಳನು ಅಂತರ
ದಲ್ಲಿ ನಿಲಿಸಲು ಆ ಮಹಿಮೆಯ ಕಂಡು ಪಾದಗಾಣಿಕೆಯ ಮಾಡಿ
ಶರಣೆಂದನು.

ಬಸವಣ್ಣನು ಬೇವಿನ ಕುಸುಮವ ಭಾವಲಿಂಗಕ್ಕರ್ಪಿಸಿದೆವೆನೆ,
ಇಲ್ಲ ಎಂದು ಅರಸು ನುಡಿಯೆ, ಎಲ್ಲ ಲಿಂಗದಲ್ಲಿಯೂ ತೋರಿದವು.

ಬಿಜ್ಜಳನು ಬಸವೇಶ್ವರಂಗೆ ಕೇತಕೀ ಪುಷ್ಪವ ಕೊಡೆ ಲಿಂಗಕ್ಕೆ
ಅರ್ಪಿಸಿ ಹಾಸ್ಯವ ಮಾಡೆ, ಎಲ್ಲ ಲಿಂಗದ ಮಸ್ತಕದ ಮೇಲೆ ತೋರಿದರು.

---

## ೫ನೆಯ ವಚನದ ಕಥೆ. (೨-೪)

### ಕಕ್ಕಯ್ಯ.

ಕಕ್ಕಯ್ಯಗಳ ಪುಣ್ಯ ಸ್ತ್ರೀಯಳು ಹೊರಬಾಗಿಲಲ್ಲಿ ನಿಂದಿರಲು ಅಕ್ಕ
ರಿಂದೆ ಮಿಗೆ ಮೀರಿ ಬಸವೇಶ್ವರನ ಕಾಣುತ್ತ ಇಕ್ಕಿದಳು ಮುಡಿಯ
ಶರಣಾರ್ಥಿ ಎಂದು ಎರಡು ಕರಂಗಳಂ ಮುಗಿದು ಕಿಂಕುರ್ವಾಣ
ಭಯಭಕ್ತಿಯಿಂದ ಮಕ್ಕಳಲ್ಲಿ ಪ್ರಸಾದವನು ಕೈಕೊಳ್ಳ ಬನ್ನಿ ಎಂದು
ಬಿನ್ನೈಸಿದಳು ಬಸವೇಶ್ವರ ದೇವರಿಗೆ. ಆ ಬಸವೇಶ್ವರ ದೇವರು ಲೆಕ್ಕಿ
ಸದೆ ಅಡಿ ಇಟ್ಟು ಮುಂದಕ್ಕೆ ಒಲ್ಲದೆ ಹೋದರೆಂದು ತಮ್ಮ ಮನವು
ಲಿಂಗದಲ್ಲಿ ಕಂದಿ ಕುಂದಿ ಕುದಿದು ಕೋಟಲೆಗೊಂಡು, ಪ್ರಸಾದ
ವಾಕ್ಯವು ಬೇಸರವಾಯಿತ್ತೆಂದು ಕಕ್ಕಯ್ಯಗಳಿಗೆ ನಿರೂಪಿಸಿದಳು. ಪಾವನ
ಸ್ವರೂಪಿಯು ಆ ಪ್ರಸಾದ ವಾಕ್ಯಮಂ ಕೇಳಿ ವಿಸ್ಮಯಂ ಬಟ್ಟು ಹರ
ಹರಾ ಶಿವಶಿವಾ ನಾವು ಬಸವರಾಜದೇವರ ಪಾದ ಚರಣಕ್ಕೆ ಸರಿಯ
ಪ್ಪೆವೆ ಎಂದು ಕೋಪಿಸಿ, ಝುಂಕಿಸಿ ನುಡಿದರು ತಮ್ಮ ಸ್ತ್ರೀಯಳಿಗೆ.
ಆ ಬಿಜ್ಜಳನ ಓಲಗದಿಂದ ಬಸವೇಶ್ವರದೇವರು ತಮ್ಮ ಮಂದಿರಕ್ಕೆ
ಬಂದು ತಮ್ಮ ಮನೋಮೂರ್ತಿ ಲಿಂಗದಲ್ಲಿ ತಿಳಿದು ನೋಡಿ ಮರ

ಹೆಂಬ ಮರುಳು ಮಾಯೆಯ ಕಡೆಗೆ ನೂಂಕಿಸಿ ಅರುಹು ಹೀನ ಕುರು
ಹಿನ ತ್ರಿವಿಧ ಸುಧಾಕರನ ಶೇಖರನ ಬೆಳಗಿನೊಳು ಕಂಡನು ಪ್ರಸಾದದ
ಘನ ಮಹಾತ್ಮೆಯ. ಆ ಕಕ್ಕಯ್ಯಗಳ ತೊತ್ತಿನ ತೊತ್ತಿನ ಪಡಿದೊತ್ತಿನ
ಮಗ ನಾನೆಂದು ಹನ್ನೆರಡು ವರುಷ ಬಾಗಿಲ ಕಾಯ್ದು ಕಕ್ಕಯ್ಯಗಳಲ್ಲಿ
ಆ ಬಸವೇಶ್ವರ ದೇವರು ತಮ್ಮ ಕುಲವೆಂದು ಪಿಪೀಲಿಕವ ಮಾಡಿ ಆ
ಕಕ್ಕಯ್ಯಗಳ ಮನೆಯಲ್ಲಿ ಬೀಸರವಾದ ಪ್ರಸಾದವನು ಕಟ್ಟಿಕೊಂಡು
ಬರಲಿಕ್ಕೆ ಸಕ್ಕರೆಯ ನೀಡಿಕೊಂಡು ಬಂದು ತಮ್ಮ ಬಸವೇ
ಶ್ವರ ದೇವರು ಆ ಪ್ರಸಾದವನು ಮಿಕ್ಕ ಮೀರಿ ಅಕ್ಕನಾಗಮ್ಮ ಸಲಿಸಿ
ಚಿಕ್ಕದಣ್ಣಾಯಕರ ಪಡೆದಳು. ಮಿಕ್ಕಿನ ಚುಕ್ಕಿನ ಹುಳು ಮಾನವರ
ಕುಲವೆತ್ತ, ಪ್ರಸಾದದ ಕಲೆ ಎತ್ತ? ಇದ ನೀವೆ ಬಲ್ಲಿರಿ ನಿಮ್ಮಾಣೆ
ನಿಮ್ಮ ಪ್ರಮಥರಾಣೆ ಬಸವ ಪ್ರಿಯ ಕೂಡಲ ಚನ್ನಸಂಗಮದೇವಾ.

---

## ೨೫ನೆಯ ವಚನದ ಕಥೆ. (೫-೧೯)

### ಚಂದ್ರ

ದಕ್ಷನು ತನ್ನ ೨೭ ಹೆಣ್ಣುಮಕ್ಕಳ ಚಂದ್ರನಿಗೆ ಮದುವೆಯ
ಮಾಡಿ ಚಂದ್ರನು ಎಲ್ಲರನು ಬಿಟ್ಟು ರೋಹಿಣಿಯಲ್ಲಿಯೇ ನೇಹ ಬಲಿದಿರೆ
ಎಲ್ಲ ಸ್ತ್ರೀಯರು ದುಃಖವ ಮಾಡಿ ದಕ್ಷನು ಕೇಳಿ ಕಲಾಹೀನನಾಗೆಂದು
ಶಪಿಸಿ ಶಿವನ ಸ್ತುತಿಸೆ ಕಲೆಗಳು ಪೆರ್ಚದವು. ಆ ಕಲೆಯನೊಂದ
ಶಿವನು ಧರಿಸಿದನು. ಚಂದ್ರಂಗೆ ವರವಿತ್ತನು. ಕಲೆಯ ಧರಿಸಿದ ದಿನ
ಅಮಾವಾಸ್ಯೆ ತಿಥಿಯಾಯಿತ್ತು. ಆ ಚಂದ್ರನು ಸಮುದ್ರಕ್ಕೆ ಮಗನಾದ
ಕಾರಣ ಆ ಚಂದ್ರನ ಕಲೆ ಕೃಷ್ಣಪಕ್ಷಗಳಲ್ಲಿ ಹೆಚ್ಚಿದೊಡೆ ಹೆಚ್ಚುವುದು,
ಕುಂದಿದೊಡೆ ಕುಂದುವುದು.

### ರಾಹು ಕೇತು.

ಪೌಲಸ್ತ್ಯ ಬ್ರಹ್ಮನ ಸತಿಯರುಂ ದಿತಿ ಅದಿತಿ ಅವರಿಗೆ ಹುಟ್ಟಿದ
ದೇವ ದಾನವರಿಗೆ ನಾರದ ದಾಯಾದಿ ವಿಷಯವ ಹುಟ್ಟಿಸಲು ಆ ಕದನದಿಂ
ಇತ್ತಂಡಕ್ಕು ಮಥನವಾಗಲು, ಆ ಸಮಯದಲ್ಲಿ ನಾರಾಯಣನು ಈರ್ವ
ರಿಗು ಮಧ್ಯಸ್ತನಾಗಿ ಐವತ್ತು ಕೋಟಿ ಯೋಜನದೊಂದು ನಡುವೆ ಹೊರೆ
ಯುಳ್ಳ ಜಾಳಗಿಂಡಿಯ ನಿರ್ಮಿಸಿ ಒಂದು ಭಾಗದಲ್ಲಿ ಅಮೃತವ ತುಂಬಿ

ಒಂದು ಭಾಗದಲ್ಲಿ ಸುರೆಯು ತುಂಬಿ ಒಂದು ಭಾಗದಿ ದೇವತೆಗಳ ತಂಡ ಮತ್ತೊಂದು ಭಾಗದಿ ರಕ್ಕಸರ ತಂಡವ ಕುಳ್ಳಿರಿಸಿ ಒಂದೇ ಗಿಂಡಿಯಿಂದಿತ್ತಂಡಕ್ಕೂ ಆಹಾರವ ಕೊಡುವ ಸಮಯದಲ್ಲಿ ಓರ್ವ ಸರ್ಪಾಕಾರದ ಮುರನೆಂಬ ರಕ್ಕಸನು ಕಳಂಕಿನಿಂದೆ ದೇವತೆಗಳ ಮಧ್ಯದಲ್ಲಿ ಕುಳಿತು ಅಮೃತವ ಸೇವಿಸಲು ಆ ಸಮಯದಲ್ಲಿ ದೇವತೆಗಳ ಸಂಬಂಧವಾದ ಚಂದ್ರ ಸೂರ್ಯರು ವಿಷ್ಣುವಿಗೆ ದೂರಲು ಆ ವಿಷ್ಣು ಚಕ್ರದಿಂದಡಲು ಶಿರವರಿಯೆ ಆ ಅಮೃತದ ಸಾಮರ್ಥ್ಯದಿಂದ ಅವರು ನಿತ್ಯತ್ವವ ತಾಳಿ ತಮ್ಮ ಆಹಾರ ಗಂಟಕರಾದ ಚಂದ್ರಸೂರ್ಯಗಳನೆ ಆಹಾರವ ಕಾಂಬೆವೆಂದು ಈಶ್ವರ ನಿಂದೆ ವರವಂ ಪಡೆಯಲು ಸರ್ವೇಶ್ವರನು ಅವರಿಗೆ ವರುಷಕ್ಕೆ ಒಂದು ವೇಳೆ ನಿಮ್ಮ ಹಗೆಯ ತೀರಿಸಿಕೊಳ್ಳೆಂದು ಆಜ್ಞಾಪಿಸಿಲು ಅದೇ ಮರೆಯಾದಿಯಲ್ಲಿ ಸೂರ್ಯಂಗೆ ಶರೀರ ಸಂಬಂಧವಾದ ಕೇತು ಚಂದ್ರಂಗೆ ಶರೀರ ಸಂಬಂಧವಾದ ರಾಹು ಗ್ರಹಿಸುವದು. ಅದು ಕಾರಣದಿಂ "ಚಂದ್ರಂಗೆ ರಾಹು ಅಡ್ಡ ಬಂದರೆ ಅಂಬುಧಿ ಬೊಬ್ಬಿಟ್ಟಿತ್ತೆ".

### ಅಗಸ್ತ್ಯ.

ಅಗಸ್ತ್ಯನ ಶಿಷ್ಯರು ಕಮಂಡಲವ ತೊಳೆಯುತ್ತಿರೆ ನದಿ ನುಂಗಲು ಒಕ್ಕುಡಿತೆ ಮಾಡೆ ಸುರರು ನುತಿಸೆ ಉಗುಳಿದನು. ಭಸ್ಮದ ಮಹಾತ್ಮೆಯಿಂ ಶರಧಿಯ ನಿರ್ಮಿಸಿದನು. ಅಗಸ್ತ್ಯನ ಶಿಷ್ಯರು ನಿಂವಡೆ ಸೇತುವಾಯಿತ್ತು. ಸಗರನ ಮಗ ಅಜಗರ ಅವನಿಂದ ಅಂಶುಮಾನ್. ಅವನಿಂ ಕಲ್ಪಧರನು ಅವನಿಂದಿಳಿಂಪ ಅವನಿಂ ಭಗೀರಥ ಅವರ ವಂಶದವರ ಕಪಿಲಮುನಿ ಸುಟ್ಟ. ಚಿತ್ರವರ್ಮ ಕುದುರೆಯ ತಂದು ಭಗೀರಥ ದೇವರ ಕುರಿತು ತಪಸ್ಸು ಮಾಡಿ ಗಂಗೆಯ ತರಲು ಜಾಹ್ನು ಮುನಿಯಿಂ ಹಾಗೆ ಅವರಿಂದ ಪಡೆದ.

---

## ೫೭ ನೇಯ ವಚನದ ಕಥೆ. (೯-೫೧)

### ಗುಪ್ತ ಮಂಚಣ್ಣ

ಸಮುದ್ರದೊಳಗಣ ಸಿಂಪಿನಂತೆಂಬ ವಚನ. ನೀ ಹುಟ್ಟಿಸಿದಲ್ಲಿ ಹುಟ್ಟಿ ಎಂಬ ವಚನ ೫೭ ನೆಯ ವಚನಕ್ಕೆ ಗುಪ್ತ ಮಂಚಣ್ಣಗಳಕಥೆ. ಗುಪ್ತ. ಮಂಚಣ್ಣನೆಂಬ ಶರಣನು ಮಣ್ಣಿನಲ್ಲಿ ಚಿನ್ನ, ಕಾಷ್ಠದಲ್ಲಿ ಅಗ್ನಿ ಹುಟ್ಟು

ವಂತೆ ದಾಮೋದರನೆಂಬ ವೈಷ್ಣವಂಗೆ ಹುಟ್ಟಿ ಅರಗಿನ ಮುದ್ರೆಯನೊತ್ತು ವಂತೆ ಹಣೆಯಲ್ಲಿ ವೈಷ್ಣವ ಮುದ್ರೆಯನೊತ್ತಿಕೊಂಡು ಆ ಕುಲದ ಹೆಣ್ಣ ಮದು ವೆಯಾಗಿ ಬಳಿಕ ಬಿಜ್ಜಳನ ಮಂತ್ರಿಯಾಗಿ ಸತಿ ಪತಿಗಳು ವೀರಶೈವ ರಾಗಿ ಗುಪ್ತದಲ್ಲಿ ಜಂಗಮುವ ಪೂಜಿಸುತ್ತ ಸಭೆಗೆ ಬರುವಾಗ ಲಿಂಗವ ಅಮುಳೋಕ್ಯವ ಮಾಡಿ ಮುಟ್ಟೆಯನಿಟ್ಟುಕೊಂಡು ಕಿವಿಯಲ್ಲಿ ತೊಳಚಿ ಕೊರಳಲ್ಲಿ ತಾವರೆಯ ಮಣಿಗಳ ಧರಿಸಿ ಕೊಂಡೆಯುವ ಯೇಳುತೆ ಇರುತೆ ಒಂದು ದಿನ ಲಿಂಗಪೂಜೆಯ ಮಾಡುವಾಗ ಕುಮುಂಜನ ಹಾಲು ಮಡ್ಡಿಗುಗ್ಗುಳ ಮಹಿಸಾಕ್ಷಿ ಮೊದಲಾದ ದಶಾಂಗ ಧೂಪವ ಲಿಂಗಕ್ಕೆ ಅರ್ಪಿಸಲು ಧೂಪದ ಪರಿಮಳ ಬರಲು ಆ ನೆರಮನೆಯ ವಿಪ್ರ ಗವಾಕ್ಷಿಯ ಲ್ಲಿ ಕಂಡು ಬಸವಣ್ಣ ಈ ಮಂಚಣ್ಣ ವೈಷ್ಣವನಲ್ಲ, ಶಿವಭಕ್ತನೆನಲು, ಅದ ಕೇಳಿ ಬಸವಣ್ಣ ಚನ್ನಬಸವಣ್ಣ ಸೊಡ್ಡಳ ಬಾಚರಸಯ್ಯ ಮೊದ ಲಾದವರು ಮನೆಗೆ ಬಂದು ಶರಣಾರ್ಥಿ ಮಂಚಣ್ಣಾ ಎಂದು ಕದವ ತಗೆಯಿಸಿಕೊಂಡು ಒಳಯಿಂಕೆ ಹೋಗಲು ಅವರ ಬಂಧುಗಳು ಕಂಡು ಬಸ ವಣ್ಣನು ಮಂಚಣ್ಣನ ಕೊಲ್ಲುವದಕ್ಕೆ ಬಂದರೆಂದ ಬಿಜ್ಜಳಗೆ ಹೇಳಲು ಆ ವೈಷ್ಣವರ ಮಗನ ಗೊಡವೆ ನಿಮಗೇನೆನಲು ಬಸವಣ್ಣನೆಂದನು, ಕೆಸ ರಲ್ಲಿ ತಾವರೆ ಹುಟ್ಟಿದರೆ ಅದರ ಮಗನೆ? ಮುತ್ತು ಚಿಪ್ಪಿನಲ್ಲಿ ಹುಟ್ಟಿದರೆ ಅದರ ಮಗನೆ? ಇವರು ವೈಷ್ಣವರಲ್ಲ, ನಮ್ಮ ಶಿವಭಕ್ತರೆಂದು ಬಂದೆವೆಂದು ನುಡಿಯಲು ಆಗ ತಮ್ಮ ವೇಷ ಪ್ರಕಟವಾಯಿತ್ತೆಂದು ಸತಿಪತಿಗಳೈಕ್ಯ ವಾಗಲು ಬಿಜ್ಜಳನೆಂದನು, ನೋಡಿದಿರೆ ಬಸವಣ್ಣನು ಮಂಚಣ್ಣನ ಕೊಂದ, ಹೇಳಿಯಾಳೆಂದು ಸತಿಯನು ಕೊಂದರು, ಲಿಂಗವ ಕಟ್ಟಲೊಲ್ಲೆನೆಂದರೆ ಕೊಲ್ಲಬಹುದೆ? ಅವರ ಕೆಯ್ಯ ಹೆಣನ ಹೊರಿಸಿ ಅವರುನುಂ ಕೊಲ್ಲೆನಲು ಆಗ ಬಸವಣ್ಣನು ಇಬ್ಬರ ಪ್ರಾಣವ ಪಡೆಯಲು ಬಿಜ್ಜಳ ಆ ಮಹಿಮೆಯ ಕಂಡು ಕೈಮುಗಿದನು

---

## ೬೫ನೆಯ ವಚನದ ಕಥೆ. (೧೦-೫೯)

### ಅರ್ಜುನ.

ಪಂಚಾದಶ ಕಿರಾತಸ್ಯ ಪದ್ಮಪುರಾಣದಲ್ಲಿ ವಿಷ್ಣು ಅರ್ಜುನಂಗೆ ಹೇಳಿದ. ಇಂದ್ರಕೀಲ ಪರ್ವತದಲ್ಲಿ ಅರ್ಜುನನು ಶಿವಧ್ಯಾನದಲ್ಲಿ ತಪವ ಮಾಡುವಾಗ ಮೂರು ದಿನಕೊಮ್ಮೆ ಫಲಾಹಾರವ ಕೊಂಡು ತಿಂಗಳಿದ್ದನು.

ಆರು ದಿನಕೊಮ್ಮೆ ಫಲಾಹಾರವ ಕೊಂಡು ಎರಡು ತಿಂಗಳಿದ್ದನು. ತಿಂಗಳಿಗೆ ಎರಡು ವೇಳೆ ಕಂದಮೂಲಾಹಾರವ ಕೊಂಡು ಮೂರು ತಿಂಗಳಿದ್ದನು. ತರಗೆಲೆಯ ಮೆದ್ದು ನಾಲ್ಕು ತಿಂಗಳಿದ್ದ ಬಳಿಕ ಗಾಳಿಯ ಹಾರದಲ್ಲಿ ತಪವ ಮಾಡುವಾಗ ತಪಜ್ವಾಲೆಗೆ ಮುನಿಗಳ ಜಡೆಗಳು ಕೆದರಿ ಕೆಯ್ಯ ಜಪಸರ ಸಡಿಲಿ ಕಮಂಡಲವದಿರಿ ಅಂಗದ ವಿಭೂತಿ ಕದಡಿ ಹೆದರಿ ಮುನಿಗಳೆಲ್ಲ ಕೈಲಾಸಕ್ಕೆ ಹೋಗಿ ಶಿವನ ಕಂಡು ನಮಸ್ಕರಿಸಲು ನೀವು ಬಂದ ಕಾರ್ಯವ ಹೇಳಿಎನಲು ಆ ಮಾತಿಗೆ ಮುನಿಗಳು ಒಬ್ಬನ ತಪದಿಂದ ನಮ್ಮ ವನದ ಭೂಮಿ ಕಾದುದು ತರು ಗುಲ್ಮ ಒಣಗಿದವು. ನಮ್ಮ ತಪ ಕೆಟ್ಟವು. ಆತ ರಾಯನೋ ರಾವುತನೋ? ಅಂಬಿನ ಬತ್ತಳಿಕೆ ಬಿಲ್ಲ ಆಯುಧ ಬೆರಳುದ್ದದ ಜಡೆ ಈ ಪ್ರಕಾರದ ತಪಸಿಯೈದಾನೆ. ಆವನ ಎಬ್ಬಿಸಿ ನಮ್ಮಾಶ್ರಮವ ಕೊಡಿಸಿ ಎನಲು, ಒಳ್ಳಿತೆಂದು ಮುನಿಗಳ ಕಳುಹಿ ಆ ಮೇಲೆ ಶಿವನು ಹಸರಂಗಿಯ ತೊಟ್ಟು ಹಸುರ ಚಲ್ಲಣವನುಟ್ಟು ಟೊಂಕಕೆ ನವಿಲುಗರೆಯ ಕಟ್ಟಿ ತಲೆಗೆ ತಳಿರ ಟೊಪ್ಪಿಗೆಯ ಧರಿಸಿ ಬಿಲ್ಲು ಬಾಣಂಗಳ ತೆಗೆದುಕೊಂಡು ನಡೆವಾಗ ಗುಹ ಗಣಪ, ನಂದೀಶ, ವೀರಭದ್ರ ಮೊದಲಾದ ಗಣಂಗಳು ಕಿರಾತ ವೇಷವ ಧರಿಸಿದರು. ಬಳಿಕ ಗಿರಿಜಾದೇವಿಯರ ಕೂಡೆ ಶಾಕಿನಿ ಡಾಕಿನಿ ಮೊದಲಾದವರು ಕಿರಾತಿಯರಾದರು. ಆ ಮೇಲೆ ಬೇಂಟೆಯ ಮುಸ್ತೈದೆ ಬಿಲ್ಲು ಬಡಿಕೋಲು ಸಂಕೊಲೆ ಇಕ್ಕಿದ ವೇಧ ಶ್ವಾನಗಳು ಕೋಲು ಬಲೆ ದಡಿಬಲೆ ಸಿಡಿಬಲೆ ಕೋಲು ಕಣ್ಣಿಯ ಹೆಬ್ಬಲೆ ಹಕ್ಕಿಯ ಹಿಡಿವ ಅಂಟಿನ ಗಣೆಗಳು ಮೊದಲಾದವ ತಕೊಂಡು ಶಬರರು ಶಿವನೊಡನೆ ಬೇಂಟೆಯನಾಡುವಾಗ ಆನೆಗಳು ಕಾಡ ಹಂದಿಗಳು ಮೊದಲಾದವು ಬಲೆಯಲ್ಲಿ ಬೀಳಲು, ಅಲ್ಲಿಂದ ಇಂದ್ರಕೀಲ ಪರ್ವತಕ್ಕೆ ಬರಲು ಅಲ್ಲಿ ಮೂಕದಾನವ ಸೂಕರ ರೂಪ ಧರಿಸಿಕೊಂಡು ಬೇಂಟೆಗಾರರ ಪಡೆಯ ಹೋಗಲು ಆಗ ಹಿಡಿ ಕೊಲ್ಲು ಎಂಬ ಧ್ವನಿಯಾಗಲು ಇದೇ ಸಮಯವೆಂದು ಶಿವನು ಬಿಲ್ಲು ಹೂಡಿ ಸೂಕರನಾಗಿರ್ದ ಮೂಕದಾನವನ ಎಸೆಯಲು ನಟ್ಟ ಬಾಣದಿಂದ ಸಹಿತವಾಗಿ ಓಡಿ ಹೋಗಿ ಮುನಿಗಳ ನಡುವೆ ಗರ್ಜಿಸಲು ಆ ಮುನಿಗಳು ಶಿವಶಿವಾ ಎನಲು ಆ ಧ್ವನಿಗೇಳಿ ಅರ್ಜುನ ಎದ್ದೆಸೆಯಲು, ಆ ಹಂದಿ ಸತ್ತು ಬೀಳಲು, ಆಗ ಶಿವನು ಬಂದು ನಮ್ಮ ಬೇಂಟೆಯ ಹಂದಿ ನಮಗೆ ಕೊಡು ಎನಲು, ಆಗ ಅರ್ಜುನ

ನಮ್ಮ ಬಾಣದಿಂದ ಬಿದ್ದುದ ಕೊಡೆನೆನಲು, ಆಗ ಶಿವನು ನೀ ತಪಸಿ ನಿನಗೆ ಬಿಲ್ಲು ಬಾಣ ಖಡ್ಗವೇತಕೆನಲು, ಆ ಮಾತಿಗೆ ಬಿಲ್ಲು ಬಾಣ ಖಡ್ಗದಿಂದ ಶಿವನು ತಪವ ಮಾಡಲಿಲ್ಲವೆ ಅಂತಾತನ ಶಿಷ್ಯ ನಾನು ಇದಕೇನು, ತಪ್ಪು? ಶಿವನೇ ಅಡ್ಡ ಬಂದರೂ ನನ್ನ ಪಂಥವ ಬಿಡೆನೆಂದು ಎಸೆಯಲು ಆ ಬಾಣಗಳು ಶಿವನ ಬೆನ್ನ ಹಿಂದೆ ಬೀಳಲು ಮತ್ತೆ ಎಸೆಯಲು ಮಂಜು ಮುಸುಕಿದರೆ ಪರ್ವತವಂಜುವದೆ, ಕಾಳಕೂಟವ ನೊಣ ಸೇವಿಸುವದೆ, ವಡಬಾಗ್ನಿ ಮಂಜಿಗೆ ನೊಂದುವುದೇ, ತಾವರೆಯ ನೂಲಿಗೆ ಆನೆ ನಿಂತೀತೆ, ಹಾಗೆ ಅರ್ಜುನನ ಬಾಣಕೆ ಶಿವ ತೊಲಗಿಯಾನೆ ಎಂದು ಎಲ್ಲರು ಅಚ್ಚರಿವಡಲು ಬಳಿಕ ಶಿವನೆಚ್ಚ ಬಾಣಗಳ ಅರ್ಜುನ ತನ್ನ ಬಾಣಂಗಳಿಂದ ಕತ್ತರಿಸಲು ಆ ಮೇಲೆ ಬಾಣ ತೀರಲು ಬಿಲ್ಲಿನಲ್ಲಿ ಖಡ್ಗದಲ್ಲಿ ಹೊಯ್ದನು. ಆಗ ಸೆಳೆದುಕೊಳಲು ಮರಳಿಂದ ಕಲ್ಲುಗಳಂದಿಟ್ಟನು. ಆ ಶಿವನು ಅಂಬಿನಿಂದ ಕತ್ತರಿಸಿ ಮರಳು ತಪ್ಪಿಸಿ ಆಯುಧವಿದ್ದರೆ ತಕ್ಕೋ ಎನಲು ಅರ್ಜುನ ಮುಷ್ಟಿಯಿಂದ ಹೊಯ್ದಾಡಲು ಬಳಿಕ ಶಿವನು ಅರ್ಜುನನ ಪಾದದಲ್ಲಿ ಮೆಟ್ಟಲು ಮೂಗಿನಲ್ಲಿ ರಕ್ತ ಸುರಿಯಲು ಆಗ ಇವ ಬೇಡನಾದರೆ ನನಗಶಕ್ಯನಾದಾನೆ ಎಂದು ಮಳಲ ಲಿಂಗವ ಮಾಡಿ ಕಾಡಮಲ್ಲಿಗೆಯಿಂದರ್ಚಿಸಿ ತ್ರ್ಯಂಬಿಕ ಗಿರಿಜಾರಮಣ ಭಕ್ತಕುಟುಂಬಿ ಎಂದು ನುತಿಸಿ ಈ ಶಬರನ ಗೆಲುವುದಕ್ಕೆ ಶಕ್ತಿಯ ಕೊಡು ಎಂದು ಲಿಂಗವ ನೋಡಲು ಇಲ್ಲಿ ಪೂಜಿಸಿದ ಪುಷ್ಪ ಆ ಕಿರಾತನ ಮಂಡೆಯಲ್ಲಿರಲು ಕಂಡು ಶಿವನೆಂದಡ್ಡ ಬೀಳಲು ಶಿವನು ರೂಪು ದೋರೆ, ಮೆಚ್ಚಿದೆ ಬೇಡು ಎನಲು, ಎಲ್ಲರ ಜಯಿಸುವಂತಹ ಬಾಣವ ದಯಪಾಲಿಸು ಎನಲು ಪಾಶುಪತಾಸ್ತ್ರವ ಕೊಡಲು ಆದ ಅರ್ಜುನನು ತೆಗೆದುಕೊಂಡು ಕೌರವರ ಜಯಿಸಿದನು.

### ಕಾಮ.

ಪಂಪಾ ಕ್ಷೇತ್ರದಲ್ಲಿ ಶಿವನು ಯೋಗದಲ್ಲಿರುವಾಗ ದೇವತೆಗಳು ತಾರಕನ ಭಯಕ್ಕೆ ಅಂಜಿ ಮೇರುವಿನ ತಪ್ಪಲಲ್ಲಿದ್ದು ಶಿವನ ಯೋಗವ ಕೆಡಿಸಿ ದೇವಿಯರ ಮದುವೆಯಾಗುವಂತೆ ಮಾಡಿ ಬಾರೆಂದು ಕಾಮನ ಕಳುಹಲು ಆಗ ಹೋಗಿ ಪಂಚ ಬಾಣದಿಂದ ಎಸೆಯಲು ನೊಸಲಕಣ್ಣಿನಿಂದುರುಹಿ ಆ ಬೂದಿಯ ಮೇಲೆ ತಾಂಡವನಾಡಿದನು.

### ಶಿವರಾತ್ರಿಯ ಸಂಕಣ್ಣ.

ವೀರಕೊಂಕಣದ ಭದ್ರಾಪುರದಲ್ಲಿ ಶಂಕರನೆಂಬ ಕಿರಾತನಿಪ್ಪನು. ಆವ ಬೇಂಟೆಯನಾಡಿಕೊಂಡು ಬದುಕುತಿರಲು ಒಂದು ದಿನ ಸಂಜೆಯಲ್ಲಿ ಬೇಂಟೆಗೆ ಹೋಗುವಾಗ ಇದಿರಾಗಿ ಹುಲಿ ಬರಲು ಕಂಡು ಮರನ ಏರಿದನು. ಇಳಿದರೆ ಹಿಡಿದುಕೊಂದೀತೆಂದು ಮರನ ಮುಂಡದಲ್ಲಿ ಕುಳಿತಿರಲು ಆಗ ಹುಲಿ ಹೋಯಿತೋ ಇಲ್ಲವೋ ಎಂದು ನೋಡುವುದಕ್ಕೆ ಕಣ್ಣಿಗೆ ಮರೆಯಾದ ಸೊಪ್ಪ ಮುರಿದು ಹಾಕುತಿರಲು ಬೆಳಗಾಯಿತ್ತು. ಹುಲಿ ಹೋಯಿತ್ತು ತಾನು ಬಿಲುಪತ್ರೆಯ ಮರದಿಂದಿಳಿದು ಮನೆಗೆ ಹೋಗುವೆನೆಂಬಪ್ಪರೊಳಗೆ ಅಲ್ಲಿದ್ದ ಲಿಂಗದೊಳಗಿಂದ ಶಿವನು ಬಂದು ಕೈಲಾಸಕ್ಕೆ ನಡೆ ಎನಲು ನಾ ಮಾಡಿದ ಪುಣ್ಯವೇನೆನಲು ಎಲೆ ಭಕ್ತ ನಿನ್ನ ಕಂಕಳೊಳಗಣ ತಿತ್ತಿಯ ನೀರು ಎನಗೆ ರುದ್ರಾಭಿಷೇಕವಾಯಿತ್ತು. ನೀನು ಹಾಕಿದ ಸೊಪ್ಪು ಎನಗೆ ಪತ್ರೆಯ ಪೂಜೆಯಾಯಿತ್ತು. ನೀನು ಅಂಜಿ ನಿದ್ರೆಯ ಮಾಡಿದುದೆ ಜಾಗ್ರವಾಯಿತ್ತು. ನಿನಗೆ ಊಟವಿಲ್ಲದುದೆ ಉಪವಾಸವಾಯಿತ್ತು ಈ ರೀತಿಯಲ್ಲಿ ನಿನಗೆ ಶಿವರಾತ್ರಿಯ ಫಲ ಘಟಿಸಿತೆಂದು ಶಿವರಾತ್ರಿಯ ಸಂಕಣ್ಣಗಳೆಂಬ ಪೆಸರ ಕೊಟ್ಟು ಪುಷ್ಪಕದಲ್ಲಿ ಕುಳ್ಳಿರಿಸಿ ಕೈಲಾಸಕ್ಕೆ ಒಯ್ದರು.

---

## ೭೬ನೆಯ ವಚನದ ಕಥೆ. (೧೦-೭೦)

### ಮೊರಟದ ಬಂಕಿದೇವ.

ಮೊರಟದ ಬಂಕಿದೇವಗಳು ಶಿವಭಕ್ತಿಯಲ್ಲಿರುತಿರೆ ಒಂದು ದಿನ ಶಿವನು ಜಂಗಮರೂಪಿನಲ್ಲಿ ಅವರ ಮನವ ನೋಡುವುದಕ್ಕೆ ಅರ್ಧ ರಾತ್ರಿಯಲ್ಲಿ ಅವರ ಮನೆಯ ಮುಂದೆ ನಿಂದಿರಲು ಆಗ ಭಕ್ತಯ್ಯ ನಮಸ್ಕರಿಸಿ ಏನು ಕಾರಣ ಗಮನಿಸಿದಿರಿ ಎನಲು ಎಲೆ ಭಕ್ತಯ್ಯ ನಮಗೆ ಬರಡಾಕಳ ಹಾಲು ಕೊರಡಿನಲ್ಲಿ ಚಿಗುವ ಪತ್ರೆಯ ನೇಮವೆನಲು, ಹಾಗೆ ಆಗಲಿ, ಎಂದು ಗೊಡ್ಡಾಕಳ ತಂದು ಹಾಲ ಕರೆದು ಆ ಗೂಟದಲ್ಲಿ ಬಿಲ್ವಪತ್ರೆಯ ಚಿಗುರಿಸಿ ಕೊಯಿತಂದು ಆ ಚರಮೂರ್ತಿಗೆ ಕೊಡಲು ಶಿವಪೂಜೆಯ ನೇಮವ ಮಾಡಿ ಆಗ ಮೆಚ್ಚಿದೆವು ಬೇಡು ಎನಲು, ಇನ್ನು ಶಿವಭಕ್ತಿಯನಾಚರಿಸಿ ಆ ಮೇಲೆ ಕೈಲಾಸಕ್ಕೆ ಬಂದೆವೆಂದು ಹೇಳಿದರು.

### ಕಬ್ಬಿಲರು.

ಕಬ್ಬಿಲರು ಶಿವಪ್ರಸಾದವು ನಮಗೆ ಸಲ್ಲದೆ ಎಂದು ಬಸವೇಶ್ವರನ ಕೇಳೆ ಶಿವಪ್ರಸಾದದ ವಿಷವ ಕೊಡಲು ಕೊಳ್ಳದಿರಲು ವಿಷವ ತ್ರಿಪುರಾಂತಕಲಿಂಗಕ್ಕರ್ಪಿಸಿ ಅಮೃತವ ಮಾಡಿ ಶಿವಭಕ್ತರೆಲ್ಲ ಅರ್ಪಿಸಿದರು.

### ಸಿದ್ಧಿಸೆಟ್ಟಿ.

ಸಂಗಯ್ಯನಿಂದ ಸರ್ಪನ ತರಿಸಿ ಕಂಕಣವಾಗೆ ಸಿದ್ಧಿಸೆಟ್ಟಿಗೆ ಕೊಟ್ಟ ಹೊನ್ನ ತಂದು ದಾಸೋಹವ ಮಾಡುತ್ತಿರೆ ಬಿಜ್ಜಳನು ಬಸವಣ್ಣನ ಕರಿಸಿ ಕಂಕಣವ ತರಿಸೆ ಮುದ್ರಿದೆಗೆಯೆ ಸರ್ಪ ಬರೆ ಹೆದರಿ ನುತಿಸೆ ಕಂಕಣವ ಮಾಡಿ ಸಿದ್ಧಿಸೆಟ್ಟಿಗೆ ಕೊಟ್ಟರು.

---

## ೭೩ ನೆಯ ವಚನದ ಕಥೆ. (೧೨.೧)

### ಚಂಡಗಣೇಶ್ವರ.

ದ್ರಾವಿಡ ದೇಶದಲ್ಲಿ ಒಬ್ಬ ವಿಪ್ರನು ದುರಾಚಾರದಲ್ಲಿರುತ್ತ ಒಂದು ದಿನ ವಿಪ್ರರ ಅಗ್ರಹಾರಕ್ಕೆ ಹೋಗಿ ಒಂದು ಮನೆಯಲ್ಲಿ ಕಳವಿಗೆ ಹೋಗಲು ಮನೆಯವರು ಕಂಡು ಗುದಿಗೆಯಲ್ಲಿ ಬಡಿಯಲು ಸತ್ತನು. ಅವನ ಕಾಲಿಗೆ ಬಳಿ ಕಟ್ಟಿ ಎಳಿಸಿ ಹಾಕಲು ಆಗ ಒಂದು ಶ್ವಾನ ಬೂದಿಯಲ್ಲಿ ಮಲಗಿದ್ದು ಬಂದು ಅವನ ಹಣೆಯಲ್ಲಿ ಒಂದು ಎದೆಯಲ್ಲಿ ಒಂದು ಕಾಲಿರಿಸಿ ಕಡಿವುತ್ತಿರಲು ಆಗ ಶಿವದೂತರು ಬಂದು ಪುಷ್ಪಕದಲ್ಲಿ ಕುಳ್ಳಿರಿಸಿ ಕೈಲಾಸಕ್ಕೆ ಒಯ್ಯಲು ಶಿವನು ಎದ್ದು ಕುಳ್ಳಿರಿಸಿಕೊಂಡು ಚಂಡಗಣೇಶ್ವರನೆಂದು ಹೆಸರು ಕರೆಯಲು ಸುಖದಲ್ಲಿದ್ದನು.

---

## ೭೫ ನೆಯ ವಚನದ ಕಥೆ. (೧೨.೧)

### ಕಲಾವತಿ

ಕಾಶೀರಾಜನ ಮಗಳು ಕಲಾವತಿಯು ಮಧುರೆಯ ದಾಸಾರ್ಹರಾಯ ಮದುವೆಯಾಗಿ ಕರಕೊಂಡು ಹೋಗಿ ಏಕಾಂತದಲ್ಲಿರಲು ಆಕೆ ಪರಿಮಳ ಮೊದಲಾದುಪಚಾರವ ಮಾಡಿ ಗಂಡನ ಬಿಟ್ಟು ಬೇರೆ ಮಲಗಲು ಆಗ

# ಮಹಾನುಭವ ಪ್ರಕಾಶಿಕೆ.

ಹಾಗಲವಾಡಿ ಸಿದ್ಧರಾಮಪ್ಪ ನಾಯಕರು

ರಚಿಸಿದ್ದು.

ಸಂಗ್ರಾಹಕ

ಎಚ್. ಆರ್. ಮಹಾಂತಯ್ಯ ಬಿ. ಎ. (ಆನರ್ಸ್)

ಹೊನ್ನುಡಿಕೆ ಜಿ॥ ತುಮಕೂರು.

೧೯೩೪

# ಮುನ್ನುಡಿ.



ಈ ಗ್ರಂಥವು ಮಹತ್ವದ್ದಿದ್ದು ಅದರ ಕರ್ತೃವಿನ ವಿಚಾರವನ್ನು ವಿವೇಚಿಸುವುದು ಅವಶ್ಯಕವಾಗಿದೆ. ಗ್ರಂಥದ ಆದಿಯಲ್ಲಿ "ಹಾಗಲವಾಡಿ ಸಿದ್ಧರಾಮಪ್ಪ ನಾಯಕರು ನಿರೂಪಿಸಿದ ಮಹಾನುಭವ ಪ್ರಕಾಶಿಕೆ ಬರೆವುದಕ್ಕೆ ಶುಭಮಸ್ತು" ಎಂದಿದೆ. ಗ್ರಂಥಾಂತ್ಯದಲ್ಲಾದರೂ, "ಇದನ್ನು ಅನಾದಿಭಕ್ತನಾದ ಸರ್ವಾಚಾರಸಂಪನ್ನನಾದ ಶತೇಕೋತ್ತರ ಸ್ಥಲಾನುಭವ ಗರ್ಭೀಕೃತ ಷಟ್ಸ್ಥಲ ಜ್ಞಾನಾರೂಢನಾದ, ಶಿವಾಗಮೋಕ್ತ ಶ್ರೀವೀರ ಶೈವಾಚಾರವೇ ಶೀಲವಾಗುಳ್ಳ, ಶೀಲವಂತ ಮುರಿಗೆಪ್ಪನೆಂಬ ಶಿವಶರಣಂಗೆ, ಅತ್ಯಂತ ಕೃಪಾಕಟಾಕ್ಷದಿಂ ಶಿವಸಮಯ ವಾಂಛಲ್ಯದಿಂದಾ ಸದ್ಭಕ್ತನ ಮೇಲೆ ಅತ್ಯಂತ ಕೃಪೆಯಿಟ್ಟು, ನಿರಘ, ನಿರ್ಮಲ, ನಿರ್ಭೇದ್ಯ, ನಿರುಪಮ, ನಿರ್ನಿಂದ್ಯ, ನಿರ್ಗಣಿತ, ನಿರಂಜನಲಿಂಗವೆನಿಸುವ ಸಿದ್ಧಲಿಂಗೇಶನು ನಿರೂಪಿಸಿದ ಮಹಾನುಭವ ಪ್ರಕಾಶಿಕೆಯಂ; ತತ್ಪ್ರಸಾದ ಬಲದಿಂದರಿದು, ಅವಧರಿಸಿ, ಅವಿರಳಾನಂದದಿಂ ಶಿವಗಣ ಚಕ್ರಕ್ಕೆ ಬಿನ್ನವಿಸಿ ಕೃತಕೃತ್ಯನಾದ, ಶಿವಭಕ್ತರ ದಾಸನಾದ, 'ನಿಜಲೀಲಾ ವಿನೋದದಿಂ ಸಿದ್ಧಿಯಾದ ಅನ್ವರ್ಥ ನಾಮವನುಳ್ಳ ಸಿದ್ಧರಾಮೇಶ್ವರ' ನೆಂಬ ಪ್ರಾಣಲಿಂಗ ಪ್ರಸಾದಿಯಾದ ಸಿದ್ಧರಾಮನಯ್ಯ ನಾನು, ಶ್ರೀಗುರುಸಿದ್ಧಲಿಂಗೇಶ್ವರ ಪ್ರಭುವೇ" ಎಂದಿದೆ ಗ್ರಂಥದ ಆದಿ ಮತ್ತು ಅಂತ್ಯವನ್ನು ಪರಿಶೀಲಿಸಿದಲ್ಲಿ ಹಾಗಲವಾಡಿಯ ವೀರಶೈವ ರಾಜಮನೆತನಕ್ಕೆ ಸೇರಿದ ಸಿದ್ಧರಾಮಪ್ಪ ನಾಯಕನೆಂಬುವರಿಂದ ಈ ಗ್ರಂಥವು ರಚಿಸಲ್ಪಟ್ಟಿದೆಯೆಂದು ವ್ಯಕ್ತವಾಗುತ್ತದೆ.

ಹಾಗಲವಾಡಿ ವೀರಶೈವರಾಜಮನೆತನದ ವಂಶಾವಳಿಯ ಮೂಲವು ಇನ್ನೂ ಸಿಕ್ಕಿಲ್ಲ. ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಶಿವಾನುಭವದ ಸಂ. ೭ ಸಂಚಿಕೆ ೪ ಪುಟಗಳು ೨೫೦—೨೬೨ ರಲ್ಲಿ "ಹಾಗಲವಾಡಿ ಅರಸುಗಳ ವೃತ್ತಾಂತ" ವನ್ನು ಪ್ರಕಟಿಸಿದ್ದಾರೆ. ಆ ವೃತ್ತಾಂತದಲ್ಲಿ ಸಿದ್ಧರಾಮಪ್ಪನಾಯಕನೆಂಬ ಹೆಸರು ಕಾಣಬರುವುದಿಲ್ಲ. ಆದರೆ ೧೭೨೫ ರಿಂದ ೧೭೪೬ ರ ವರೆಗೆ ಆಳಿದ ಮುದಿಯಪ್ಪನಾಯಕನ ಚರಿತ್ರೆ

ಯನ್ನು ಓದುವುದರಿಂದ ಇತ್ತ ಸ್ವಲ್ಪ ಬೆಳಕು ಬೀಳುತ್ತದೆ. ರಾ॥ ಸಾ॥ ಹಳಕಟ್ಟಿಯವರ ಲೇಖನದಿಂದ ಈ ಭಾಗವನ್ನು ಉದ್ಧರಿಸಿ ಬರೆದಿದೆ.

ಮುದಿಯಪ್ಪನಾಯಕ (೧೭೨೫—೧೭೪೬):— ಚನ್ನಬಸವಪ್ಪನಾಯಕ (೧೭೦೪-೧೭೨೫) ನ ತರುವಾಯ ಅವನ ಮಗ ಮುದಿಯಪ್ಪನಾಯಕನು ಪಟ್ಟವನ್ನೇರಿ ರಾಜ್ಯವಾಳತೊಡಗಿದನು. ಈ ಮುದಿಯಪ್ಪನಾಯಕನು ಅತ್ಯಂತ ಧರ್ಮಿಷ್ಠನಾಗಿದ್ದನು ಇವನು ಬಹಳ ಜಮೀನು ಧರ್ಮಾರ್ಥದಾನಕೊಟ್ಟನು. ಬನಾರಸದಲ್ಲಿ ಒಂದು ಧರ್ಮಛತ್ರವನ್ನು ಕಟ್ಟಿಸಿದನು. ಆತನು ಮುದ್ದುವೀರಸ್ವಾಮಿಗಳೆಂಬವರ ಕಡೆಯಿಂದ ಉಪದೇಶವನ್ನು ಹೊಂದಿ, ಯಾವಾಗಲೂ ಧರ್ಮಕಾರ್ಯಗಳಲ್ಲಿ ಆಸಕ್ತನಾಗಿದ್ದನು. 'ಅವನು ಅತ್ಯಂತ ವಿದ್ವಾಂಸನಾಗಿದ್ದು ಒಂದು ಗ್ರಂಥವನ್ನು ಬರೆದಿರುವನು.' ಅವನು ೨೧ ವರ್ಷ ೫ ತಿಂಗಳು ರಾಜ್ಯವಾಳಿ ವಿಭವ ಸಂವತ್ಸರದಲ್ಲಿ ತನ್ನ ಹಿರಿಯುಮಗನಿಗೆ ಪಟ್ಟಕಟ್ಟಿ ರಾಜ್ಯತ್ಯಾಗವನ್ನು ಮಾಡಿದನು; ಮತ್ತು ಸಾಯುವ ವರೆಗೆ ಧರ್ಮಕಾರ್ಯಗಳಲ್ಲಿ ನಿರತನಾಗಿದ್ದನು."

ಮತ್ತು ತಮ್ಮ ಲೇಖನದ ಉಪಸಂಹಾರದಲ್ಲಿ ಶ್ರೀಮಾನ್ ಹಳಕಟ್ಟಿಯವರು ಹೀಗೆ ಅಂದಿರುವರು. "೧೮ ನೇ ಶತಮಾನದ ಆರಂಭದಲ್ಲಿ ಆಳಿದ ಮುದಿಯಪ್ಪನಾಯಕನು ಗ್ರಂಥಕಾರನಾಗಿಹೋಗಿರುವನು; ಅವನು ಯಾವ ಗ್ರಂಥವನ್ನು ಬರೆದನೋ ಎಂಬುದು ನಮಗೆ ತಿಳಿಯದು. ಈ ಅರಸನು ಕಡೆಗೆ ಉಪದೇಶವನ್ನು ಹೊಂದಿ, ರಾಜ್ಯಪರಿತ್ಯಾಗಮಾಡಿ ಧರ್ಮಕಾರ್ಯಗಳಲ್ಲಿ ಆಸಕ್ತನಾಗಿ ಕಡೆವರೆಗೆ ಉಳಿದನು" ಇಲ್ಲಿ ಉಕ್ತವಾಗಿರುವ ಅಜ್ಞಾತ ಗ್ರಂಥವು ಈ "ಮಹಾನುಭವ ಪ್ರಕಾಶಿಕೆ" ಯೇ ಆಗಿರಬಹುದೆಂದು ಊಹಿಸಲು ಅವಕಾಶವಿದೆ. ಯಾಕೆಂದರೆ, ಇದು ಷಟ್ಸ್ಥಲಾತ್ಮಕ ಶಿವಾನುಭವಗ್ರಂಥ; ಗ್ರಂಥಕರ್ತೃವು ಶ್ರೀ ಮುದ್ದುವೀರಸ್ವಾಮಿಗಳೆಂಬುವರಿಂದ ಉಪದಿಷ್ಟರೂ ಬಹಳ ವಿದ್ವಾಂಸರೂ ಆಗಿದ್ದರೆಂಬುದು ಇದನ್ನು ಬಲಪಡಿಸುತ್ತದೆ.

ಆದರೆ ಗ್ರಂಥಕರ್ತೃವಿನ ನಿಜವಾದ ಹೆಸರಿನ ಬಗ್ಗೆ ಸಂಶಯ ನಿರಸನವಾದಂತಾಗಲಿಲ್ಲ. ಗ್ರಂಥದಲ್ಲಿ ಸಿದ್ಧರಾಮಪ್ಪ ನಾಯಕನೆಂದು ಇದೆ; ವಂಶಾವಳಿಯಲ್ಲಿ ಮುದಿಯಪ್ಪ ನಾಯಕನೆಂದಿದೆ. ಈ ಇಬ್ಬರೂ ಒಬ್ಬನೇ ಆಗಿರಬೇಕೆಂದು ನನ್ನ ಅಭಿಮತ. ಹೇಗೆಂದರೆ:—

ಹಾಗಲವಾಡಿ ಅರಸುಗಳ ಮೂಲ ಪುರುಷನು ಯರಿಮಾದಿ ನಾಯಕನು (೧೪೭೮—೧೫೦೮). ಈತನ ಮಗ ನೆಲ್ಲೂರು ನಾಯಕ (೧೫೦೮ ೧೫೪೪) ನ ಮಗ ಭೈರವ ನಾಯಕ (೧೫೪೪—೧೫೭೮) ನ ವೃತ್ತಾಂತ ಈ ರೀತಿ ಇದೆಃ— ಈತನ ಆಳಿಕೆಯಲ್ಲಿ ಒಬ್ಬ ವ್ಯಾಪಾರಿ-ಪ್ರವಾಸಿಯು ಭಕ್ತಿಯಿಂದ ರಾಮೇಶ್ವರ ಮೂರ್ತಿಗೆ ದೇವಾಲಯವೊಂದನ್ನು ಈತನ ರಾಜ್ಯದಲ್ಲಿ ಕಟ್ಟಿಸಿದನು. ಆ ರಾಮೇಶ್ವರ ಮೂರ್ತಿಯ ಮಹಾತ್ಮ್ಯವನ್ನು ರಾಜನು ಕೇಳಿ, ಮಕ್ಕಳಿಲ್ಲದ ತನಗೆ ಆ ದೇವರು ಮಕ್ಕಳನ್ನ ದಯಪಾಲಿಸಿದರೆ ತಾನು ಭಕ್ತಿಯಿಂದ ನಡೆದುಕೊಳ್ಳುವೆನೆಂದು ಅರಿಕೆ ಮಾಡಿಕೊಂಡನು. ಆ ಕಾಲಕ್ಕೆ ರಾಮೇಶ್ವರನು ಸಿದ್ಧೇಶ್ವರ ಸ್ವಾಮಿಗಳೆಂಬ ಓರ್ವ ಜಂಗಮ ರೂಪವನ್ನು ಧರಿಸಿ ಬಂದು, ಒಬ್ಬ ಗೊಲ್ಲನ ಕೈಗೆ ತನ್ನ ಬಾಯಲ್ಲಿಯ ತಾಂಬೂಲವನ್ನು ಕೊಟ್ಟು ಅದನ್ನು ಅರಸಿಯು ಭಕ್ತಿಯಿಂದ ಸೇವಿಸಿದರೆ ತೀವ್ರವಾಗಿ ಪುತ್ರವತಿಯಾಗುವಳೆಂದು ತಿಳಿಸಿದನು. ಅದೇ ಪ್ರಕಾರ ನಡೆದು ರಾಣಿಯು ಗರ್ಭಿಣಿಯಾದಳು. ರಾಜನು ಎಷ್ಟು ಹುಡುಕಿದರೂ ಸ್ವಾಮಿಗಳು ಸಿಕ್ಕಲಿಲ್ಲವಾಗಿ, ರಾಮೇಶ್ವರನೇ ತನ್ನನ್ನುದ್ಧರಿಸಲು ಸಿದ್ಧೇಶ್ವರ ರೂಪದಿಂದ ಬಂದಿದ್ದನೆಂದು ಭಾವಿಸಿ, ಹುಟ್ಟಿದ ತನ್ನ ಮಗನಿಗೆ ಲಿಂಗಧಾರಣೆಯಂ ಮಾಡಿಸಿ ವೃದ್ಧ ಸ್ವಾಮಿಗಳ ಜ್ಞಾಪಕಾರ್ಥವಾಗಿ "ಮುದಿಯಪ್ಪ" ನಾಯಕನೆಂದು ಹೆಸರಿಟ್ಟನು. ಈ ಹೆಸರಾದರೂ ತನ್ನ ಇಷ್ಟ ದೈವನಾದ ಸಿದ್ಧರಾಮೇಶ್ವರ (ಸಿದ್ಧೇಶ್ವರ ರಾಮೇಶ್ವರ) ನ ಸಂಜ್ಞಾ ನಾಮವಿರುತ್ತದೆ. ಆದುದರಿಂದ ಈ ಎರಡೂ ಪರ್ಯಾಯ ನಾಮಗಳಾಗಿ ಉಪಯೋಗಿಸಲ್ಪಟ್ಟವೆಯೆಂದು ಗ್ರಹಿಸಬಹುದು.

ಆದರೆ ಹಾಗಲವಾಡಿ ಚರಿತ್ರೆಯಲ್ಲಿ ಮುದಿಯಪ್ಪ ನಾಯಕನೆಂಬ ಹೆಸರಿನಿಂದ ಇಬ್ಬರು ದೊರೆತನ ಮಾಡಿದ್ದಾರೆ. ಮೇಲೆ ಉದಾಹರಿಸಿದ ಮುದಿಯಪ್ಪನಾಯಕನೊಬ್ಬ; ಈ ಮುದಿಯಪ್ಪ ನಾಯಕನ ಮಗ ಇಮ್ಮಡಿ ಭೈರಪ್ಪ ನಾಯಕ ಆವನ ಮಗ ಚನ್ನಬಸಪ್ಪ, ಅವನ ಮಗ ರಾಮಪ್ಪ ನಾಯಕ, ಅವನ ಮಗ ಚನ್ನಬಸಪ್ಪನಾಯಕ; ಆತನ ಮಗ ಎರಡನೇ ಮುದಿಯಪ್ಪ ನಾಯಕ. ಈ ಎರಡನೇ ಮುದಿಯಪ್ಪ ನಾಯಕನೇ (ಮೊದಲನೆ ಮುದಿಯಪ್ಪ ನಾಯಕನಲ್ಲ) ನಮ್ಮ ಗ್ರಂಥ ಕರ್ತೃವೆಂದು ನಿರ್ಧರಿಸಲು ಆಧಾರವಿದೆ. ಮೊದಲನೇ ಮುದಿಯಪ್ಪ ನಾಯಕನು ಲಿಂಗ

ಧಾರಿಯಾಗಿದ್ದರೂ ಕೂಡ, ಗುರುಪುತ್ರನೂ ಶಿವಾನುಭವಿಯೂ ಆಗಿದ್ದಂತೆ ಕಂಡುಬರುವುದಿಲ್ಲ; ಲೌಕಿಕದಲ್ಲಿ ಜಾಣನಿದ್ದು ರಾಜ್ಯವನ್ನೇನೋ ವಿಸ್ತರಿಸಿದನು. ಎರಡನೇ ಮುದಿಯಪ್ಪ ನಾಯಕನೇ ಉಪದಿಷ್ಟನೂ ಶಿವಾನುಭವಿಯೂ ವಿದ್ವಾಂಸನೂ ಗ್ರಂಥಕಾರನೂ ಆಗಿದ್ದನು. ಆದುದರಿಂದ ೧೭೨೫ ರಿಂದ ೧೭೪೬ ರ ವರೆಗೆ ರಾಜ್ಯವಾಳಿದಂತೆ ವಂಶಾವಳಿಯಲ್ಲಿ ಕಂಡು ಬರುವ ಎರಡನೆಯ ಮುದಿಯಪ್ಪ ನಾಯಕನೇ ಗ್ರಂಥದಲ್ಲಿ ಕಂಡು ಬರುವ ಸಿದ್ಧರಾಮಪ್ಪ ನಾಯಕನೆಂದು ಸಿದ್ಧಾಂತ ಮಾಡಬಹುದಾಗಿದೆ.

ಈ ಪುಸ್ತಕವನ್ನು ನನ್ನ ತೀರ್ಥರೂಪರಲ್ಲಿದ್ದ ಸ್ಫುಟಾಕ್ಷರದ ಓಲೆಗರಿ ವಹಿಯೊಂದರಿಂದ ಪ್ರತಿ ಮಾಡಿ, ಹಸ್ತಸ್ಖಾಲಿತ್ಯಾದಿ ದೋಷಗಳನ್ನು ಯಥಾಮತಿ ತಿದ್ದಿದ್ದೇನೆ. ಈ ಗ್ರಂಥದಲ್ಲಿ ಕಂಡು ಬರುವ ವಿಷಯುವೇನೂ ಅಪೂರ್ವವಲ್ಲದಿದ್ದರೂ, ವೀರಶೈವ ರಾಜಮುನೆತನವೊಂದನ್ನಲಂಕರಿಸಿದ ಈ ಗ್ರಂಥಕರ್ತೃವು ತಿಳಿಗನ್ನಡದಲ್ಲಿ ವಚನ ರೂಪದಲ್ಲಿ ನಿರೂಪಿಸಿದ್ದಾನೆ. ಶಿವಾನುಭವಿಗಳಿಗೆ ಇದರಿಂದ ಲೇಶ ಮಾತ್ರವಾದರೂ ಪ್ರಯೋಜನವಾದರೆ ಪ್ರಕಾಶಕನು ಧನ್ಯನಾದನೆಂದು ತಿಳಿಯುತ್ತಾನೆ.

ಇದನ್ನು "ಶಿವಾನುಭವ" ದಲ್ಲಿ ಪ್ರಕಟಿಸಲು ಅವಕಾಶ ಕೊಟ್ಟಿದ್ದಕ್ಕಾಗಿ, ಸಂಪಾದಕರಾದ ರಾವಸಾಹೇಬ ಫ. ಗು. ಹಳಕಟ್ಟಿಯವರನ್ನು ವಂದಿಸುತ್ತೇನೆ.

ಭಾವ ಸಂ. ಚೈತ್ರ ಶು. ೧. | ಇತಿ ಶಿವಾನುಭವಿಗಳ ಪಾದಸೇಕ,
ಹೊನ್ನುಡಿಕೆ. | **ಎಚ್. ಆರ್. ಮಹಾಂತಯ್ಯ.**

# ಮಹಾನುಭವ ಪ್ರಕಾಶಿಕೆ.

ಶ್ರೀಗುರುಬಸವಲಿಂಗಾಯನಮಃ

॥ ಓಂ॥

ಹಾಗಲವಾಡಿ ಸಿದ್ಧರಾಮಪ್ಪನಾಯಕರು ನಿರೂಪಿಸಿದ ಮಹಾನುಭವ ಪ್ರಕಾಶಿಕೆಗೆ ಶುಭಮಸ್ತು

ವಚನಃ— ಶ್ರೀಮತ್ಸಚ್ಚಿದಾನಂದ ನಿತ್ಯಪರಿಪೂರ್ಣ ಲಕ್ಷಣಲಕ್ಷಿತ ಅವಿರಳಪರಂಜ್ಯೋತಿ ಸ್ವರೂಪನಾದ, ಶ್ರೀಗುರುದೇವನ ಕೃಪಾಪ್ರಸಾದಮಂ ಪಡೆದು, ದೀಕ್ಷಾತ್ರಯಯುಕ್ತನಾಗಿ, ಆಣವಾದಿ ಮಲತ್ರಯಂಗಳಂ ಕಳೆದು, ತ್ರಿವಿಧ ಲಿಂಗಂಗಳ ಅರ್ಚನೆ ಅನುಸಂಧಾನ ಅಖಂಡಿತದೈಕ್ಯತ್ವವನುಳ್ಳ ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ, ಷಟ್ಸ್ಥಲ ಜ್ಞಾನೈಶ್ವರ್ಯ ಸಂಪನ್ನರಾಗಿ ಲೋಕಪಾವನಾರ್ಥದಿಂ ಪರಶಿವ ಲೀಲಾ ವಿಗ್ರಹಗಳಾಗಿ ಸಂಚರಿಪ ಸದ್ಭಕ್ತ ಮಹೇಶ್ವರರ ಶ್ರೀಪಾದಪದ್ಮದ ರೇಣುವಂ ಶಿರದೋಳ್ ಪೊತ್ತು, ಪೂರ್ವ ಪುರಾತನರಿಂದುಕ್ತಮಾದ ನವಚಕ್ರ ವಚನಂಗಳ ಅಭಿಪ್ರಾಯಮಂ ತಾತ್ಪರ್ಯಮಾತ್ರದಿಂ ವಿಸ್ತರಿಸುತಿರ್ಪೆನ ದೆಂತೆಂದೊಡೆ?

ಮೊದಲು ತಮ್ಮ ತಮ್ಮ ತೊಂಭತ್ತಾರು ಅಂಗುಲದ ಪ್ರಮಾಣದ ದೇಹಕ್ಕೆ ಗುದದಿಂದೆರಡಂಗುಲದಮೇಲೆ, ಲಿಂಗಸ್ಥಾನದಿಂದ ಎರಡಂಗು ಲದ ಕೆಳಗೆ ಒಂದು ಅಂಗುಲ ಪ್ರಮಾಣಕ್ಕೆ ತತ್ತಿಯೋಪಾದಿಯಲ್ಲಿ ಕರ ಗಿದ ಕುಂದಣದ ಕಾಂತಿಯನುಳ್ಳ ಸ್ಥಲವೇ ದೇಹಮಧ್ಯವೆನಿಸುವುದು. ಆ ದೇಹಮಧ್ಯವೇ ಆಧಾರಚಕ್ರವೆನಿಸುವುದು. ಆ ಚಕ್ರವ ಪೃಥ್ವಿಯೆಂಬ ಮಹಾಭೂತವಾಶ್ರಯಿಸಿರ್ಪುದು. ಆ ಚಕ್ರವು ಚೌಮೂಲೆಯಾಗಿ ನಾಲ್ಕು ದಳವನುಳ್ಳದು. ಆ ನಾಲ್ಕು ದಳಗಳಲ್ಲಿ ವ, ಶ, ಷ, ಸ, ಎಂಬ ನಾಲ್ಕು ಅಕ್ಷರವಿರ್ಪುವು. ಆ ಚಕ್ರದ ಕರ್ಣಿಕಾಮಧ್ಯದಲ್ಲಿರ್ಪ ನ ಕಾರವೆಂಬ ಬೀಜಾಕ್ಷರವೇ ಸದ್ಯೋಜಾತ ಸಂಜ್ಞಿತವಾದ ಆಚಾರಲಿಂಗವೆನಿಸುವುದು. ಆ ಲಿಂಗದ ನಿಜಾಂಗರೂಪಾದಾತನೇ ಭಕ್ತನು. ಆ ಭಕ್ತನು ಸುಚಿತ್ತ

ವೆಂಬ ಹಸ್ತದಿಂದ, ಘ್ರಾಣಮುಖದಿಂದೊದಗಿದ ಗಂಧವೆಂಬ ಪದಾರ್ಥ ವನ್ನು ಶ್ರದ್ಧಾ ಭಕ್ತಿಯಿಂದ ಸಮರ್ಪಿಸಿ ಆ ಲಿಂಗದಿಂದ ಸದ್ವಾಸನ ಪ್ರಸಾದವನ್ನು ಪಡೆದು ಆ ಲಿಂಗಸಹವಾಗಿ ಭೋಗಿಸಿ ಮಹಾಲಿಂಗಸ್ವ ರೂಪವಾದ ಪ್ರಣವದ ತಾರಕಾಕೃತಿಯೆಂಬ ಆಚಾರಲಿಂಗದಲ್ಲಿ ಕ್ರಿಯಾ ಶಕ್ತಿ ಸಹವಾಗಿ ತಾನಡಗಿರ್ಪನೆಂಬುದೇ ಆಧಾರಚಕ್ರ ತಾತ್ಪರ್ಯಮಕ್ಕುಂ.

ಮತ್ತವಾ ಆಧಾರಚಕ್ರದಮೇಲೆ ನಾಲ್ಕಂಗುಲದ ಪ್ರಮಾಣದ ಸ್ಥಳವೇ ಲಿಂಗಸ್ಥಲವೆಂದೂ, ಗುಹ್ಯಸ್ಥಲವೆಂದೂ ಪರ್ಯಾಯನಾಮಂಗ ಳುಳ್ಳದು. ಈ ಸ್ಥಲವು ಕಾಮುರ್ಕಾಕಾರವಾಗಿರ್ಪುದು. ಅದೇ ಸ್ವಾಧಿ ಷ್ಠಾನಚಕ್ರವೆನಿಸುವುದು. ಅದನ್ನು ಅಪ್ಪು ಎಂಬ ಮಹಾಭೂತವಾಶ್ರಯಿ ಸಿರ್ಪುದು. ಆ ಚಕ್ರವು ಶುಭ್ರವರ್ಣವನುಳ್ಳದು; ಆರುದಳಂಗಳನುಳ್ಳದು; ಆ ದಳಂಗಳಲ್ಲಿ ಬ, ಭ, ಮ, ಯ, ರ, ಲ, ಎಂಬಾರು ಪ್ರಣಮಂಗಳಿ ರ್ಪುವು. ಆ ಚಕ್ರದ ಕರ್ಣಿಕಾಮಧ್ಯದಲ್ಲಿರ್ಪ ವಾಮದೇವ ಸಂಜ್ಞಿತ ವಾದ ಮ ಕಾರವೆಂಬ ಬೀಜಾಕ್ಷರವೇ ಗುರುಲಿಂಗವೆನಿಸುವುದು. ಆ ಲಿಂಗದ ನಿಜಾಂಗ ರೂಪವಾದವನೆ ಮಹೇಶ್ವರನು. ಆತನು ನಿಷ್ಠೆಯೆಂಬ ಭಕ್ತಿವಿಡಿದು, ಸುಬುದ್ಧಿಯೆಂಬ ಹಸ್ತದಿಂದ, ಜಿಹ್ವೆಯೆಂಬ ಮುಖದಿಂದು ದಿಸಿದ ರಸವೆಂಬ ಪದಾರ್ಥವನ್ನು ಆ ಲಿಂಗಕ್ಕೆ ಸಮರ್ಪಿಸಿ ಚಿದಮೃತವೆಂಬ ಪ್ರಸಾದಮಂ ಪಡೆದು ಆ ಲಿಂಗ ಸಹವಾಗಿ ಭೋಗಿಸಿ, ಆ ಮಹಾಲಿಂಗ ಸ್ವರೂಪವಾದ ಪ್ರಣವದ ದಂಡಕಾಕೃತಿ ಎಂಬ ಗುರುಲಿಂಗದಲ್ಲಿ ಜ್ಞಾನ ಶಕ್ತಿ ಸಹಿತವಾಗಿ ತಾನಡಗಿರ್ಪನೆಂಬುದೇ ಸ್ವಾಧಿಷ್ಠಾನ ಚಕ್ರ ತಾತ್ಪರ್ಯ ಮಕ್ಕುಂ ॥೨॥

ಮೊದಲು ಹೇಳಿದ ಆಧಾರ ಚಕ್ರದಿಂ ಮೇಲೆ ಒಂಭತ್ತು ಅಂಗುಲ ದಲ್ಲಿ ನಾಲ್ಕು ಅಂಗುಲದ ವಿಶಾಲವಾಗಿ ನಾಡಿಕಂದವಿಹುದು. ಆ ನಾಡಿ ಕಂದದ ಎರಡಂಗುಲದ ಕೆಳಗೆ ಕುಂಡಲಿಸ್ಥಾನವಿಹುದು. ಅಲ್ಲಿಹ ಜೀ ವನೆಂಬ ಕುಂಡಲಿ ಸರ್ಪನು ಅಷ್ಟಪ್ರಕೃತಿರೂಪದಿಂ ಸಪ್ತಕುಟಿಲಾಕೃತಿ ಯಾಗಿ, ಆ ನಾಡಿಕಂದದ ಸುಷುಮ್ನೆಯೆಂಬ ನಾಡಿದ್ವಾರಮಂ ಮುಚ್ಚಿ ಮರಸಿ ಅಜ್ಞಾನ ಮೂರ್ಚಿತ (?) ವಾಗಿರ್ಪುದು. ಅದು ಅಧೋ ಕುಂಡಲಿಯೆನಿಸುವುದು. ಮತ್ತವಾ ನಾಡಿಕಂದದಿಂ ಎಪ್ಪತ್ತೆರಡು ಸಾವಿರ ನಾಡಿಗಳು ಪಾದಪಾಣಿ ಬಲೆಯ ನೇಣಿನಂತೆ, ಮೇಲು, ಕೆಳಗು, ಎಡ, ಬಲ, ಮುಂತಾದ ಸಮಸ್ತ ದಿಕ್ಕುಗಳಿಗೂ ಐದಿ ಮನಃ ಪ್ರಾಣಾದಿ ದಶ